೭೬ನೇ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನ, ಗದಗ

# ಸುಭಾಷಿತ ಮಂಜರಿ




ಕನ್ನಡ ಸಾಹಿತ್ಯ ಪರಿಷತ್ತು

ಪಂಪಮಹಾಕವಿ ರಸ್ತೆ, ಚಾಮರಾಜಪೇಟೆ

ಬೆಂಗಳೂರು-೫೬೦ ೦೧೮

೭೬ನೇ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನ, ಗದಗ

# ಸುಭಾಷಿತ ಮಂಜರೀ

ಸಂಪಾದಿತ




**ಕನ್ನಡ ಸಾಹಿತ್ಯ ಪರಿಷತ್ತು**

ಪಂಪಮಹಾಕವಿ ರಸ್ತೆ, ಚಾಮರಾಜಪೇಟೆ

ಬೆಂಗಳೂರು- ೫೬೦೦೧೮

**SUBHASHITA MANJARI** A Collection of Maxims from various Sanskrit works and their translation in Kannada, Edited and Published by : **Kannada Sahitya Parishat**
Pampa Mahakavi Road, Chamarajapet, Bangalore - 560018
Pages : 544 + xvii Price : Rs.200=00 : **2010**

ಮುದ್ರಣದ ವರ್ಷ : ೨೦೧೦

ಪ್ರತಿಗಳು : ೧೦೦೦

ಬೆಲೆ : ಎರಡುನೂರು ರೂಪಾಯಿಗಳು



## ಪ್ರಕಟಣಾ ಸಮಿತಿ

ಅಧ್ಯಕ್ಷರು – ಡಾ. ನಲ್ಲೂರು ಪ್ರಸಾದ್. ಆರ್.ಕೆ.

ಸಂಚಾಲಕರು – ಶ್ರೀ ಎಚ್.ಕೆ. ಮಳಲಿಗೌಡ

ಸದಸ್ಯರು

ಶ್ರೀ ಟಿ.ಎಸ್.ದಕ್ಷಿಣಾಮೂರ್ತಿ
ಡಾ. ಗಿರಡ್ಡಿ ಗೋವಿಂದರಾಜ
ಪ್ರೊ. ಎಸ್.ಜಿ.ಸಿದ್ಧರಾಮಯ್ಯ
ಶ್ರೀ ಬಿ.ಆರ್.ಪೊಲೀಸ್ ಪಾಟೀಲ
ಶ್ರೀ ಮಾನಸ
ಶ್ರೀ ಪ್ರದೀಪ್‌ಕುಮಾರ ಕಲ್ಕೂರ
ಶ್ರೀ ಪುಂಡಲೀಕ ಹಾಲಂಬಿ
ಡಾ. ಎಚ್. ಜಯಮ್ಮ ಕರಿಯಣ್ಣ
ಶ್ರೀ ಕುಂ.ವೀರಭದ್ರಪ್ಪ
ಶ್ರೀ ವಿಷ್ಣು ನಾಯ್ಕ
ಡಾ. ಬೈರಮಂಗಲ ರಾಮೇಗೌಡ

ಸಮ್ಮೇಳನಾಧ್ಯಕ್ಷರು – ಡಾ. ಎಲ್. ಬಸವರಾಜು
೭೫ನೇ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನ

ನಿರ್ದೇಶಕರು – ಶ್ರೀ ಮನು ಬಳಿಗಾರ್
ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ

ಮುಖಪುಟ ವಿನ್ಯಾಸ : ಶ್ರೀ ಮೋನಪ್ಪ

ಮುದ್ರಣ : ಬಿ.ಎಂ.ಶ್ರೀ ಅಚ್ಚುಕೂಟ ಆಫ್‌ಸೆಟ್ ಕನ್ನಡ ಸಾಹಿತ್ಯ ಪರಿಷತ್ತು
ಪಂಪಮಹಾಕವಿ ರಸ್ತೆ, ಚಾಮರಾಜಪೇಟೆ, ಬೆಂಗಳೂರು – ೧೮

# ಅಧ್ಯಕ್ಷರ ನುಡಿ

ಕನ್ನಡ ಸಾಹಿತ್ಯ ಪರಿಷತ್ತಿನಿಂದ ಮರುಮುದ್ರಣಗೊಳ್ಳುತ್ತಿರುವ ಮತ್ತು ಹೊಸದಾಗಿ ಮುದ್ರಿತವಾಗುತ್ತಿರುವ ವಿವಿಧ ಪ್ರಕಾರಗಳ ಪುಸ್ತಕಗಳನ್ನು ಸಹೃದಯರು ಮೆಚ್ಚಿ ಸ್ವೀಕರಿಸಲು ಯೋಗ್ಯವಾಗುವಂತೆ ಆಕರ್ಷಕ ವಿನ್ಯಾಸಗಳಲ್ಲಿ ಸಿದ್ಧಪಡಿಸಿದ ಮೇಲೆ ಅವುಗಳ ಮಾರಾಟದ ಪ್ರಮಾಣ ಹೆಚ್ಚುತ್ತಿರುವುದನ್ನು ಕಂಡು ನನಗೆ ಮಹದಾನಂದವಾಗಿದೆ. ಓದುಗರು ಬಯಸುವ ಪುಸ್ತಕಗಳನ್ನು ಅವರ ಕೈಗೆ ತಲುಪುವಂತೆ ಮಾಡುವುದೇ ಪುಸ್ತಕೋದ್ಯಮದ ಪ್ರಾಥಮಿಕ ಆಶಯ. ಈ ಉದ್ಯಮವನ್ನು ಅತ್ಯಂತ ಗಂಭೀರವಾಗಿ ಪರಿಗಣಿಸಿ, ಕಾಲಕಾಲಕ್ಕೆ ಬದಲಾಗುತ್ತಿರುವ ಓದುಗರ ಅಭಿರುಚಿಗೆ ಸ್ಪಂದಿಸುತ್ತ, ಆ ಕ್ಷೇತ್ರದಲ್ಲಿ ಬಹು ವೇಗವಾಗಿ ಸಾಗುತ್ತಿರುವ ಪ್ರಕಾಶಕರ ನಡುವೆ ಕನ್ನಡ ಸರಸ್ವತಿಯ ಆರಾಧನೆ ಮಾಡುತ್ತಿದ್ದೇನೆಂದು ಭಾವಿಸಿ ಕನ್ನಡ ಸಾಹಿತ್ಯ ಪರಿಷತ್ತು ತಣ್ಣಗೆ, ನಿರುಮ್ಮಳವಾಗಿ ಇರುವ ಕಾಲ ಮುಗಿದುಹೋಯಿತು. ಹೊಸಕಾಲದ ಅಗತ್ಯಕ್ಕೆ ಅನುಗುಣವಾಗಿ ಬದಲಾಗುವುದರಲ್ಲೇ ಸಾಹಿತ್ಯ ಪರಿಷತ್ತಿನ ಜೀವಂತಿಕೆಯಿದೆಯೆಂದು ಬಲವಾಗಿ ನಂಬಿ ನಡೆಯುತ್ತಿರುವವನು ನಾನು. ಕನ್ನಡದಲ್ಲಿ ಇತ್ತೀಚೆಗೆ ಬರುತ್ತಿರುವ ವೈವಿಧ್ಯಮಯ ಪುಸ್ತಕಗಳನ್ನು ನೋಡಿದರೆ ಮೊದಲು ಅವುಗಳನ್ನು ಕಣ್ಣಿಗೊತ್ತಿಕೊಂಡು, ಮೃದುವಾಗಿ ಮೈದಡವಿ, ಸ್ವಲ್ಪ ಹತ್ತಿರದಿಂದಲೂ ನಂತರ ದೂರದಿಂದಲೂ ನೋಡಿ ಪುಳಕಗೊಂಡು ಪುಟ ತಿರುವಬೇಕೆನ್ನಿಸುತ್ತದೆ. ಪಂಚೇಂದ್ರಿಯಗಳಲ್ಲಿ ನಾಲಗೆಯೊಂದನ್ನು ಹೊರತುಪಡಿಸಿ ಉಳಿದವುಗಳೆಲ್ಲ ತಣಿಯದ ದಿವ್ಯಸುಖವನ್ನು ಖಂಡಿತ ಅನುಭವಿಸುತ್ತವೆ. ಪುಸ್ತಕಪ್ರೇಮಿಗಳು ಯಾರೂ ಈ ಭವಸುಖನಿಮಜ್ಜನದಿಂದ ಬಿಡಿಸಿಕೊಳ್ಳಲಾರರು.

ಲೇಖಕ–ಮಾರಾಟಗಾರ–ಓದುಗರಿಗೆ ವಿಭಿನ್ನ ರೀತಿಯ ಸುಖವುಣ್ಣಿಸುವ ಪೈಪೋಟಿಯಲ್ಲಿ ಪುಸ್ತಕೋದ್ಯಮ ಮುಳುಗಿಹೋಗಿರುವಾಗ ಪರಿಷತ್ತು ತಟಸ್ಥ ತಲ್ಲೀನತೆಯಲ್ಲಿರುವುದು ಸಾಧ್ಯವೇ ಇಲ್ಲ. ಗತವೈಭವದ ಸಾಕ್ಷಿಯಾಗಿ ಉಳಿದಿರುವ, ಆದರೆ ಇವತ್ತಿನ ಅಭಿರುಚಿಗೆ ಸಲ್ಲದಂಥ ಮುಖಪುಟ, ವರ್ಣಸಂಯೋಜನೆ, ಚಿತ್ರ ವಿನ್ಯಾಸ, ಒಳಗಿನ ಕಾಗದಗಳನ್ನು ಸಂಪೂರ್ಣ ಬದಲಾಯಿಸಿ ಚಂದಗಾಣಿಸಿದರೆ ಮಾತ್ರ ಓದುಗರು ಹತ್ತಿರ ಬರುತ್ತಾರೆ, ಕೈಯಿಂದ ಎತ್ತಿ ನೋಡುತ್ತಾರೆ, ಕೊಳ್ಳುವ ಮನಸ್ಸು ಮಾಡುತ್ತಾರೆ, ಮನೆಯ ಕಪಾಟುಗಳನ್ನು ಪುಸ್ತಕಗಳಿಂದ ಅಲಂಕರಿಸುತ್ತಾರೆ. ಪುಸ್ತಕವೊಂದರ ಪುಟ ಪುಟಗಳಲ್ಲಿ ಪ್ರತಿಭೆ–ಪಾಂಡಿತ್ಯಗಳ ವಿದ್ಯುತ್ ಪ್ರವಾಹ ಹರಿದು ಓದುಗರನ್ನು ರಸರೋಮಾಂಚನಗೊಳಿಸುವುದು ಎಷ್ಟು ಮುಖ್ಯವೋ ನಮಗೆ ಬೇಕಾದ್ದು ಅದರಲ್ಲೇನೋ ಇದೆ ಎನ್ನುವ ಸೂಚನೆ ಪುಸ್ತಕದತ್ತ ನೋಟ ಹಾಯಿಸುತ್ತಿದ್ದಂತೆ ಸಿಗುವುದೂ ಅಷ್ಟೇ ಮುಖ್ಯ. ಆಧುನಿಕ ಮುದ್ರಣ ತಂತ್ರಜ್ಞಾನದ ಸಾಧ್ಯತೆಗಳನ್ನು ಸಮರ್ಪಕವಾಗಿ ಅಳವಡಿಸಿಕೊಳ್ಳುವುದರಿಂದಲೂ ಯಶಸ್ಸಿನ ಹೆದ್ದಾರಿ ನಿರ್ಮಾಣವಾಗುತ್ತದೆಂಬ ಮಾತೂ ಸತ್ಯವೇ. ಇಷ್ಟೆಲ್ಲಾ ಚಿಂತನ–ಮಂಥನ, ಪರೀಕ್ಷೆ–ಪ್ರಯೋಗ, ಅವಲೋಕನ–ಪರಾಮರ್ಶನಗಳ ಪರಿಣಾಮವಾಗಿಯೇ ವರ್ತಮಾನದ ಪುಸ್ತಕ ಪ್ರಕಟಣೆಯ ತುರುಸಿನಲ್ಲಿ ಕನ್ನಡ ಸಾಹಿತ್ಯ ಪರಿಷತ್ತು ಆತ್ಮವಿಶ್ವಾಸದ ಮತ್ತು ಹೆಮ್ಮೆಯ ಹೆಜ್ಜೆಗಳನ್ನು ಇಡಲು ಸಾಧ್ಯವಾಗಿದೆ. ಬೆಂಗಳೂರು ಮತ್ತು ಹೊರಗೆ ನಡೆಯುತ್ತಿರುವ ಪುಸ್ತಕ ಮೇಳ–ಪುಸ್ತಕ ಪ್ರದರ್ಶನಗಳಲ್ಲಿ ಜಯಭೇರಿ ಬಾರಿಸಲು ಸಾಧ್ಯವಾಗಿದೆ. ೨೦೦೯ರ ಕನ್ನಡ ರಾಜ್ಯೋತ್ಸವದ ನೆನಪಿಗೆ ಏರ್ಪಡಿಸಿದ್ದ ಪುಸ್ತಕ ಪ್ರದರ್ಶನ ಮತ್ತು ಮಾರಾಟದಲ್ಲಿ ದಾಖಲೆಯ ವಹಿವಾಟು ನಡೆಸಲು ಸಾಧ್ಯವಾಗಿದೆ. ಕನ್ನಡ ಸಾಹಿತ್ಯ ಪರಿಷತ್ತಿನ ಜಿಲ್ಲಾ ಮತ್ತು ತಾಲ್ಲೂಕು ಘಟಕಗಳು ಸಮ್ಮೇಳನಗಳ ಸಂದರ್ಭದಲ್ಲಿ ಭರವಸೆಯಿಂದ ಪುಸ್ತಕಗಳನ್ನು ಹೊರತರಲು ಸಾಧ್ಯವಾಗಿದೆ. ಇದನ್ನೆಲ್ಲ ಸಾಧ್ಯವಾಗಿಸುವುದಕ್ಕೆ ಕಾರಣರಾದ ಕನ್ನಡ ಪುಸ್ತಕಪ್ರೇಮಿಗಳನ್ನು ಅಭಿನಂದಿಸಬೇಕಾಗಿದೆ.

೨೦೧೦ ಫೆಬ್ರವರಿ ೧೯ ರಿಂದ ೨೧ ರವರೆಗೆ ಮೂರು ದಿನಗಳ ಕಾಲ ಗದಗದಲ್ಲಿ ನಡೆಯಲಿರುವ ೭೬ನೆಯ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ನೆನಪಿಗಾಗಿ ೭೬ ಕೃತಿಗಳನ್ನು ಕನ್ನಡ ಸಾಹಿತ್ಯ ಪರಿಷತ್ತು ಪ್ರಕಟಿಸುತ್ತಿದೆ. ಕನ್ನಡ ಸಾಹಿತ್ಯದ ಎಲ್ಲ ಪ್ರಕಾರಗಳನ್ನೂ ಒಳಗೊಳ್ಳಲಿರುವ ಈ ಪುಸ್ತಕಗಳ ಆಯ್ಕೆಗೆ ಅವುಗಳ ಗುಣಮಟ್ಟವೇ ಮೂಲ ಬಂಡವಾಳವಾಗಿದೆ. ಪರಿಷತ್ತು ತಮ್ಮ ಒಂದು ಪುಸ್ತಕವನ್ನು ಪ್ರಕಟಿಸಬೇಕೆಂಬ ಅಭಿಲಾಷೆಯನ್ನು ವ್ಯಕ್ತಪಡಿಸಿ ನಾಡಿನ ಮೂಲೆಮೂಲೆಗಳಿಂದ ಲೇಖಕರು ಪತ್ರ ಬರೆದು ವಿನಂತಿ ಮಾಡಿಕೊಳ್ಳುತ್ತಾರೆ. ಅನೇಕರು ಹಸ್ತಪ್ರತಿಗಳನ್ನೇ ಕಳುಹಿಸಿಕೊಡುತ್ತಾರೆ. ಜಿಲ್ಲಾಧ್ಯಕ್ಷರುಗಳ ಮೂಲಕ ಒತ್ತಾಯ ತರುತ್ತಾರೆ. ಅಂಥ ಮನವಿಗಳು ವರ್ಷವೊಂದರಲ್ಲಿ ಸಾವಿರವನ್ನೂ ಮೀರುತ್ತವೆ. ಹಾಗೆ ಎಲ್ಲ ಪುಸ್ತಕಗಳನ್ನೂ ಮರುಮಾತಿಲ್ಲದೆ ಪ್ರಕಟಿಸುವುದು ಪರಿಷತ್ತಿಗೆ ಸಾಧ್ಯವೂ ಇಲ್ಲ, ಅದು ಸಾಧುವೂ ಅಲ್ಲ. ಪುಸ್ತಕದ ಶಕ್ತಿ–ಯೋಗ್ಯತೆಗಳನ್ನು ಜರಡಿಯಾಡಿ ಅಂತಿಮ ನಿರ್ಧಾರವನ್ನು ತೆಗೆದುಕೊಳ್ಳುವ ಪರಿಶೀಲನಾ ಸಮಿತಿಯ ಅಗ್ನಿದಿವ್ಯವನ್ನು ಎದುರಿಸಿಯೇ ಕೃತಿ ಪ್ರಕಟಗೊಳ್ಳಬೇಕಾಗುತ್ತದೆ. ಈ ಬಾರಿಯ ಅಕ್ಷರಜಾತ್ರೆಯನ್ನು ಅರ್ಥಪೂರ್ಣವಾಗಿ ಸಿಂಗರಿಸುವುದಕ್ಕಾಗಿಯೇ ಸಜ್ಜುಗೊಂಡಿರುವ ಈ ಪುಸ್ತಕಗಳು ಪ್ರೀತಿಸುವ ಸಹೃದಯರ ಮಡಿಲನ್ನು ಸೇರಲಿ, ಅವರ ಜ್ಞಾನಭಂಡಾರವನ್ನು ವಿಸ್ತರಿಸಲಿ, ಅವರನ್ನು ರಸಾನಂದದಲ್ಲಿ ಮುಳುಗಿಸಲಿ ಎಂದು ಹಾರೈಸುತ್ತೇನೆ. ಓದುಗರ ರಚನಾತ್ಮಕ ಸಲಹೆ ಮತ್ತು ಪ್ರತಿಕ್ರಿಯೆಗಳಿಗೆ ಸದಾ ಸ್ವಾಗತವಿದೆ.

ಡಾ. ನಲ್ಲೂರು ಪ್ರಸಾದ್. ಆರ್.ಕೆ.
ಅಧ್ಯಕ್ಷರು

# ಪ್ರಸ್ತಾವನೆ

೧೯೧೫ರಲ್ಲಿ ಸ್ಥಾಪಿತವಾದ ಕನ್ನಡ ಸಾಹಿತ್ಯ ಪರಿಷತ್ತು ಕಾಲಾನುಕ್ರಮದಲ್ಲಿ ಅನೇಕ ವಿದ್ವತ್ಪೂರ್ಣ ಗ್ರಂಥಗಳನ್ನು ಪ್ರಕಟಿಸಿ, ಕನ್ನಡಿಗರ ಮನ್ನಣೆಗೆ ಪಾತ್ರವಾಗಿದೆ. ೧೯೭೦ರಲ್ಲಿ ಪರಿಷತ್ತು ರೂಪಿಸಿದ ತ್ರೈವಾರ್ಷಿಕ ಯೋಜನೆಯ ಪ್ರಕಾರ, ಮೂರು ವರ್ಷಗಳ ಅವಧಿಯಲ್ಲಿ ಒಂದು ನೂರು ಪುಸ್ತಕಗಳನ್ನು ಪ್ರಕಟಿಸುವ ನಿರ್ಧಾರವನ್ನು ಅದು ಕೈಕೊಂಡಿತು. ಅದರಂತೆ ೧೯೭೧ರಿಂದ ೭೪ರವರೆಗಿನ ಮೂರು ವರ್ಷದ ಅವಧಿಯಲ್ಲಿ ಶಾಸ್ತ್ರ, ಸಾಹಿತ್ಯ, ಕಲೆ, ವಿಜ್ಞಾನ ಇತ್ಯಾದಿ ವಿಷಯಗಳಿಗೆ ಸಂಬಂಧಪಟ್ಟಂತೆ ಒಂದು ನೂರು ಪುಸ್ತಕಗಳನ್ನು ಹೊರತರಲಾಯಿತು. ಈ ಗ್ರಂಥಗಳು ವಿಷಯವೈವಿಧ್ಯದಿಂದ ಕೂಡಿವೆ; ಪುಸ್ತಕಗಳ ಬೆಲೆ ಸಾಮಾನ್ಯರ ಕೈಗೆ ಎಟಕುವಂತಿದೆ; ವಿದ್ವಾಂಸರ ಮತ್ತು ಜನಸಾಮಾನ್ಯರ ಮೆಚ್ಚುಗೆಗೆ ಪಾತ್ರವಾಗಿವೆ.

ತ್ರೈವಾರ್ಷಿಕ ಯೋಜನೆಯನ್ನು ಯಶಸ್ವಿಯಾಗಿ ಕಾರ್ಯಗತ ಮಾಡಿದ ಕನ್ನಡ ಸಾಹಿತ್ಯ ಪರಿಷತ್ತು ಕನ್ನಡ ನಾಡು, ನುಡಿ ಮತ್ತು ಸಂಸ್ಕೃತಿಯ ಪುರೋಭಿವೃದ್ಧಿಗಾಗಿ ಈಗ ಪಂಚವಾರ್ಷಿಕ ಯೋಜನೆಯನ್ನು ರೂಪಿಸಿ, ಈ ಯೋಜನೆಗೆ ಸಾರ್ವಜನಿಕರ ಮತ್ತು ಸರ್ಕಾರದ ಪ್ರೋತ್ಸಾಹವನ್ನೂ ಬೆಂಬಲವನ್ನೂ ಪಡೆದಿದೆ. ೧೯೭೪ರಲ್ಲಿ ಆರಂಭಿಸಲಾದ ಪಂಚವಾರ್ಷಿಕ ಯೋಜನೆಯ ಪ್ರಕಾರ, ೫ ವರ್ಷಗಳ ಅವಧಿಯಲ್ಲಿ ಒಂದನೂರುಐವತ್ತು ಪುಸ್ತಕಗಳನ್ನು ಹೊರತರಬೇಕಾಗಿದೆ. ಕೆಲವು ಪ್ರಾಚೀನ ಗ್ರಂಥಗಳನ್ನು ಕನ್ನಡಕ್ಕೆ ಅನುವಾದಿಸಿ ಮೂಲಪಾಠದೊಡನೆ ಪ್ರಕಟಿಸುವುದು, ಕೆಲವು ಅಮೂಲ್ಯ ಗ್ರಂಥಗಳ ಪುನರ್ಮುದ್ರಣ, ಭಾಷಾಂತರ ಕೃತಿಗಳ ಮುದ್ರಣ, ಜನಸಾಮಾನ್ಯರಿಗಾಗಿ ಶಾಸ್ತ್ರ, ಸಾಹಿತ್ಯ ಕಲೆ, ವಿಜ್ಞಾನ, ಜನಪದ ಸಾಹಿತ್ಯ ಮೊದಲಾದ ನಾನಾ ವಿಷಯಗಳನ್ನು ಕುರಿತ ಗ್ರಂಥಗಳ ಪ್ರಕಟಣೆ–ಇವು ಪರಿಷತ್ತಿನ ಪಂಚವಾರ್ಷಿಕ ಯೋಜನೆಯ ಪ್ರಕಟಣೆಯ ಉದ್ದೇಶಗಳಲ್ಲಿ ಅಡಕವಾಗಿವೆ. ಅಲ್ಲದೆ ಸಂಗೀತ, ಚಿತ್ರಕಲೆ, ಗಮಕ ಮುಂತಾದ ವಿಷಯಗಳನ್ನು ಸಾಮಾನ್ಯರಿಗೆ ಪರಿಚಯ ಮಾಡಿಕೊಡುವ ಪುಸ್ತಕಗಳನ್ನೂ ವಿಜ್ಞಾನದ ವಿವಿಧ ಅಂಶಗಳನ್ನು ವಿವರಿಸುವ ಜನಪ್ರಿಯ ಹೊತ್ತಿಗೆಗಳನ್ನೂ ಪ್ರಕಟಿಸಲಾಗುವುದು. ಮಕ್ಕಳ ಸಾಹಿತ್ಯ, ಮಹಿಳೆಯರಿಗೆ ಉಪಯುಕ್ತವಾದ ಗ್ರಂಥಗಳು – ಇವುಗಳ ಪ್ರಕಟಣೆಯೂ ಈ ಉದ್ದೇಶದ ಅಂಗವಾಗಿದೆ. ಕನ್ನಡ ಬಾರದವರು ಕನ್ನಡ ಕಲಿಯಲು ಸಹಾಯಕವಾಗಬಹುದಾದ ಸ್ವಯಂಬೋಧಿನಿಗಳೂ ಈ ಯೋಜನೆಯಲ್ಲಿ ಸೇರಿಕೊಂಡಿವೆ.

ಕನ್ನಡ ಜನತೆಗೆ ಉತ್ತಮ ಸಾಹಿತ್ಯವನ್ನು ಸುಲಭ ಬೆಲೆಯಲ್ಲಿ ಒದಗಿಸಬೇಕೆಂಬ ಪರಿಷತ್ತಿನ ಆಶಯವನ್ನು ಗಮನಿಸಿ, ಕರ್ನಾಟಕ ರಾಜ್ಯ ಸರ್ಕಾರ ಪರಿಷತ್ತಿಗೆ ಆರ್ಥಿಕ

ಸಹಾವನ್ನು ನೀಡಲು ಮುಂದೆ ಬಂದಿರುವುದರಿಂದ, ಪರಿಷತ್ತಿನ ಪ್ರಕಟಣ ಕಾರ್ಯಕ್ಕೆ ವಿಶೇಷ ಪ್ರೋತ್ಸಾಹ ದೊರೆತಂತಾಗಿದೆ. ಅದೇ ರೀತಿ ನಾಡಿನ ವಿದ್ವಾಂಸರು ಪರಿಷತ್ತಿನ ಮೇಲೆ ಅಭಿಮಾನವಿಟ್ಟು, ಪರಿಷತ್ತಿನ ಪ್ರಕಟನ ಕಾರ್ಯದಲ್ಲಿ ಆಸಕ್ತಿವಹಿಸಿ, ಎಲ್ಲ ರೀತಿಯಿಂದಲೂ ತಮ್ಮ ಸಹಕಾರ ನೀಡುತ್ತಿದ್ದಾರೆ. ಪರಿಷತ್ತಿನ ಗ್ರಂಥ ಪ್ರಕಟಣಾ ಸಮಿತಿಯ ಪ್ರಧಾನ ಸಂಪಾದಕರಾದ ಡಾ|| ರಂ. ಶ್ರೀ. ಮುಗಳಿಯವರೂ ಇತರ ಸದಸ್ಯರೂ ತುಂಬ ಉತ್ಸಾಹದಿಂದ ಕಾರ್ಯ ನಿರ್ವಹಿಸುತ್ತಿದ್ದಾರೆ. ಈ ಎಲ್ಲ ಮಹನೀಯರ ಪ್ರೋತ್ಸಾಹ ಮತ್ತು ಬೆಂಬಲದಿಂದ ಕನ್ನಡ ಸಾಹಿತ್ಯ ಪರಿಷತ್ತು ತನ್ನ ಪಂಚವಾರ್ಷಿಕ ಯೋಜನೆಯ ಅವಧಿಯಲ್ಲಿ ಮೇಲಿನ ಉದ್ದೇಶಗಳನ್ನು ಪೂರೈಸುತ್ತದೆಂಬ ನಂಬಿಕೆ ನನಗಿದೆ. ಈ ಕಾರ್ಯದಲ್ಲಿ ಸಹಕಾರ ನೀಡುತ್ತಿರುವ ಈ ಎಲ್ಲ ಮಹನೀಯರಿಗೂ, ರಾಜ್ಯ ಸರ್ಕಾರಕ್ಕೂ ಪರಿಷತ್ತು ಆಭಾರಿಯಾಗಿದೆ.

ಪರಿಷತ್ತಿನ ಪ್ರಕಟಣೆಗಳ ಲಾಭವನ್ನು ಎಲ್ಲ ಕನ್ನಡಿಗರೂ ಪಡೆದು ನಾಡು ನುಡಿಯ ಸೇವೆಯಲ್ಲಿ ಭಾಗಿಗಳಾಗಬೇಕೆಂದು ಈ ಮೂಲಕ ಪ್ರಾರ್ಥಿಸುತ್ತೇನೆ.

**ದೇಶಹಳ್ಳಿ ಜಿ. ನಾರಾಯಣ**
ಅಧ್ಯಕ್ಷ
ಕನ್ನಡ ಸಾಹಿತ್ಯ ಪರಿಷತ್ತು

ಬೆಂಗಳೂರು
೧೬-೨-೧೯೭೭

# ಮುನ್ನುಡಿ

ಕನ್ನಡ ಸಾಹಿತ್ಯ ಪರಿಷತ್ತಿನ ಯೋಜನೆಗಳಲ್ಲಿ ಅನೇಕ ಮುಖ್ಯವಾದ ಕಾರ್ಯಕ್ರಮ ಗಳಿವೆ. ಅವುಗಳಲ್ಲಿ ಪ್ರಕಟಣೆಗಳು ಒಂದು ಮಹತ್ವದ ಭಾಗ. ಪರಿಷತ್ತು ಕೈಗೊಂಡಿರುವ ಪ್ರಕಟಣಾಕಾರ್ಯದಲ್ಲಿ ಇದುವರೆಗೆ ಪ್ರಕಟವಾಗದೆ ಇರುವ ಕನ್ನಡದ ಹಳಗನ್ನಡ ಕಾವ್ಯಗಳ ಅನುವಾದ (ಮೂಲ ಪಾಠದೊಡನೆ) ಸಾಹಿತ್ಯ, ವಿಮರ್ಶೆ, ಸಂಶೋಧನೆ ಮೊದಲಾದ ಸಾಹಿತ್ಯ ವಿಷಯಕ ಗ್ರಂಥಗಳು ಮತ್ತು ಸರ್ವಜನೋಪಯುಕ್ತವಾದ ಇತರ ವಿಷಯಗಳನ್ನು ಕುರಿತು ಪುಸ್ತಕಗಳು ಮೊದಲಾದುವೆಲ್ಲ ಸೇರಿವೆ. ಎಂದರೆ ಈ ಪ್ರಕಟನಾ ಕಾರ್ಯದ ಉದ್ದೇಶ ಉಪಯುಕ್ತ ಪುಸ್ತಕಗಳು ಪ್ರಕಟವಾಗಿ ಸುಲಭ ಬೆಲೆಗೆ ಸಾಮಾನ್ಯ ಓದುಗರ ಕೈಗೆ ದೊರಕಬೇಕು ಎಂಬುದು. ಈ ದಿಸೆಯಲ್ಲಿ ಕೈಗೊಂಡ ಒಂದು ಹೊಸ ಪ್ರಕಟಣೆ 'ಸುಭಾಷಿತಮಂಜರೀ'. ಸಾಮಾನ್ಯವಾಗಿ ಭಾರತೀಯ ಭಾಷೆಗಳಿಗೆ ಸಂಸ್ಕೃತ ಮಾತೃಸ್ವರೂಪ ದಂತೆ. ಆ ಭಾಷಾ ಸಾಹಿತ್ಯದಲ್ಲಿ ಅಡಗಿರುವ ಯೋಚನಾ ಸಂಪತ್ತು, ಸಾಂಸ್ಕೃತಿಕ ಸಂಪತ್ತು, ಅನುಭವ ಸಂಪತ್ತು ಅಗಣಿತವಾದದ್ದು. ಅವುಗಳನ್ನೇ ಆರಿಸಿ ಸಂಸ್ಕೃತದಲ್ಲೇ ಅನೇಕ 'ಸುಭಾಷಿತ' ಸಂಗ್ರಹಗಳು ಪ್ರಕಟವಾಗಿವೆ. ಕೆಲವರು ಸುಭಾಷಿತಗಳನ್ನೇ ರಚಿಸಿದವರುಂಟು. ಇವರುಗಳಲ್ಲಿ ಭರ್ತೃಹರಿಯಂತೂ ತುಂಬಾ ಪ್ರಸಿದ್ಧನಾದವನು. ಇವರೆಲ್ಲರ ಲೋಕೋಕ್ತಿ ಗಳನ್ನು ಮೂಲ ಶ್ಲೋಕಗಳಲ್ಲಿ ಕೊಟ್ಟು ಅವುಗಳ ಅನುವಾದವನ್ನೂ ಕೊಟ್ಟು ಕನ್ನಡಿಗರ ಉಪಯೋಗಕ್ಕೆ ಒದಗಿಸಬೇಕೆಂದು ಪರಿಷತ್ತು ಆಲೋಚಿಸಿತು.

ಹಲವರು ಸಂಸ್ಕೃತ ವಿದ್ವಾಂಸರ ಸಭೆಯೊಂದನ್ನು ಸೇರಿಸಿ ಅವರುಗಳ ಅಭಿಪ್ರಾಯ ಸೂಚನೆಗಳನ್ನು ಪಡೆದು ಈ ಪ್ರಕಟಣೆಯ ರೂಪರೇಖೆಯೊಂದನ್ನು ನಿಷ್ಕರ್ಷಿಸಲಾಯಿತು. ಅನಂತರ ಸಂಪಾದಕ ಮಂಡಲಿಯೊಂದನ್ನು ರಚಿಸಿ ಅವರು ವಿಪುಲವಾದ ಸಂಸ್ಕೃತ ಸಾಹಿತ್ಯಾರ್ಣವದಿಂದ ಆಣಿಮುತ್ತುಗಳನ್ನು ಆರಿಸಿ ಕನ್ನಡ ಅನುವಾದದೊಡನೆ ಸಂಕಲನವೊಂದನ್ನು ಸಿದ್ಧಪಡಿಸಬೇಕೆಂದೂ ಅದನ್ನು ಪರಿಷತ್ತು ಪ್ರಕಟಿಸಬೇಕೆಂದೂ ನಿಶ್ಚಯಿಸಲಾಯಿತು. ವಿದ್ವಾನ್ ಎನ್. ರಂಗನಾಥಶರ್ಮ, ಡಾ|| ಕೆ. ಎಸ್. ನಾಗರಾಜನ್, ವಿದ್ವಾನ್ ಶ್ರೀ ಸಿ. ಅನಂತಾಚಾರ್ ಮತ್ತು ಡಾ|| ಎನ್. ಎಸ್. ಅನಂತರಂಗಾಚಾರ್ ಅವರು ಸಂಪಾದಕ ಮಂಡಲಿ ಸದಸ್ಯರು. ಡಾ|| ಅನಂತರಂಗಚಾರ್ ಮಂಡಲಿಯ ಅಧ್ಯಕ್ಷರೂ, ಪ್ರಧಾನ ಸಂಪಾದಕರೂ ಆಗಿ ಈ ಕೆಲಸವನ್ನು ಮಾಡಿಕೊಟ್ಟಿದ್ದಾರೆ.

ಸುಭಾಷಿತಮಂಜರೀ ಎಲ್ಲರಿಗೂ ಅಗತ್ಯವಾಗಿ ಬೇಕಾದ ಒಂದು ಸುಧಾಸೂಕ್ತಿಗಳ ಸಂಕಲನ. ಇದರ ಅವಶ್ಯಕತೆಯನ್ನು ಸರ್ಕಾರಕ್ಕೆ ಮನದಟ್ಟು ಮಾಡಿಕೊಟ್ಟು ಈ ಗ್ರಂಥ ಸಾರ್ವಜನಿಕರ ಕೈಗೆ ಸುಲಭ ಬೆಲೆಗೆ ದೊರೆಯಬೇಕೆಂದು ಅವರನ್ನು ಕೇಳಿಕೊಂಡಾಗ ಪುಸ್ತಕವನ್ನು ಕಡಿಮೆ ಬೆಲೆಗೆ ಇಡಲು ಸಹಾಯವಾಗುವಂತೆ ಕರ್ನಾಟಕ ಸರ್ಕಾರದವರು ಹಣದ ಸಹಾಯ ಮಾಡಿದ್ದಾರೆ.

ಕನ್ನಡ ಅನುವಾದ ಗ್ರಂಥಗಳಂತೆಯೇ ಇದಕ್ಕೂ ಕೂಡ ಅದರ ಮೂಲಬೆಲೆಯ ಅರ್ಧಬೆಲೆಯನ್ನೇ ಇಡಲಾಗಿದೆ.

ಸುಭಾಷಿತ ಶ್ಲೋಕಗಳನ್ನು ಆರಿಸಿ, ಸಂಗ್ರಹಿಸಿ, ಅನುವಾದಿಸಿ ವಿಷಯಕ್ರಮದಲ್ಲಿ ಜೋಡಿಸಿ ಸಿದ್ಧಪಡಿಸಿಕೊಟ್ಟ ಅನುವಾದಕರಿಗೆ, ಸಂಪಾದಕ ಮಂಡಲಿಗೆ, ಪುಸ್ತಕ ಶುದ್ಧವಾಗಿ ಅಚ್ಚಾಗುವುದಕ್ಕೆ ತುಂಬ ಎಚ್ಚರವಹಿಸಿ ಕರಡು ತಿದ್ದಿ, ಶ್ಲೋಕಾನುಕ್ರಮಣಿಕೆಯನ್ನು ಸಿದ್ಧಗೊಳಿಸಿ, ಅತ್ಯಂತ ಶ್ರಮಕೈಗೊಂಡು ಸಹಾಯಮಾಡಿದ ಪಂಡಿತ ಶ್ರೀ ಸಿ. ಅನಂತಾಚಾರ್ಯರಿಗೆ, ಪುಸ್ತಕವನ್ನು ಅತ್ಯಂತ ಉತ್ಸಾಹದಿಂದ, ಎಚ್ಚರಿಕೆಯಿಂದ ಅಂದವಾಗಿ ಅಚ್ಚುಮಾಡಿಕೊಟ್ಟ ಪ್ರಭಾ ಮುದ್ರಣಾಲಯದ ಶ್ರೀ ಡಿ. ಎಸ್. ಕೃಷ್ಣಾಚಾರ್ ಅವರಿಗೆ, ಪುಸ್ತಕ ಬೆಲೆಯನ್ನು ಕಡಿಮೆ ಮಾಡಲು ಧನ ಸಹಾಯ ಮಾಡಿದ ಕರ್ನಾಟಕ ಸರ್ಕಾರಕ್ಕೂ ನಮ್ಮ ಹಾರ್ದಿಕ ವಂದನೆಗಳು ಸಲ್ಲುತ್ತವೆ.

**ರಂ. ಶ್ರೀ. ಮುಗಳಿ**
ಪ್ರಧಾನ ಸಂಪಾದಕರು
ಗ್ರಂಥ ಪ್ರಕಟಣ ಸಲಹಾ ಸಮಿತಿ

ಬೆಂಗಳೂರು
೧೨-೪-೧೯೭೭

# ಸುಭಾಷಿತಗಳು

ಕನ್ನಡದಲ್ಲಿ ಗಾದೆಗಳಿರುವಂತೆ ಸಂಸ್ಕೃತದಲ್ಲಿ ಸುಭಾಷಿತಗಳಿವೆ. ಸುಭಾಷಿತ ಎಂದರೆ ಒಳ್ಳೆಯ ನುಡಿ ಎಂದರ್ಥ. ಒಂದು ವಿಷಯವನ್ನು ಕುರಿತು ಬಹಳ ಪರಿಣಾಮಕಾರಕವಾದ ರೀತಿಯಲ್ಲಿ ಹೇಳಿರುವ ಮಾತು ಸುಭಾಷಿತವೆನಿಸುತ್ತದೆ. ಈ ನುಡಿಗಳ ಹಿನ್ನೆಲೆಯಲ್ಲಿ ಅಪಾರವಾದ ಅನುಭವ, ಅರಿವು ಮತ್ತು ಚಿಕಿತ್ಸಕ ದೃಷ್ಟಿ ಇದೆ. ಜೀವನದ ಸಿಹಿ-ಕಹಿಗಳನ್ನೂ ಗುಣಾವಗುಣಗಳನ್ನೂ, ಧ್ಯೇಯ ಆದರ್ಶಗಳನ್ನೂ ಮಾರ್ಮಿಕವಾದ ರೀತಿಯಲ್ಲಿ ಇವು ತಿಳಿಸಿಕೊಡುತ್ತವೆ. ಸುಭಾಷಿತಗಳು ಜೀವನದಷ್ಟೇ ವಿಸ್ತಾರವಾಗಿವೆ, ವಿವಿಧವಾಗಿದೆ. ಇವುಗಳಲ್ಲಿ ನೀತಿ, ಧರ್ಮ, ವಿವೇಕ, ಅಣಕ, ಶೃಂಗಾರ, ವೈರಾಗ್ಯ, ಹಾಸ್ಯ ಮೊದಲಾದವೆಲ್ಲ ಇವೆ. ಜೀವನದ ಮೌಲ್ಯವನ್ನು ಸೂಚಿಸಿಕೊಡುವ ಇವು ಮುಂದಿನ ಜನಾಂಗಕ್ಕೆ ದಾರಿತೋರುವ ದಾರಿದೀಪಗಳಾಗಿವೆ.

ಬಹಳ ಹಿಂದಿನ ಕಾಲದಿಂದಲೂ ನಮ್ಮ ಜನ ಸುಭಾಷಿತಗಳನ್ನು ಮೆಚ್ಚಿಕೊಂಡು ಅವುಗಳ ಜಾಣ್ಮೆ, ಪ್ರತಿಭೆ ಮತ್ತು ಚಾತುರ್ಯಕ್ಕೆ ಮಾರುಹೋಗಿದ್ದಾರೆ. ಅವುಗಳ ವ್ಯಂಗ್ಯೋಕ್ತಿ ಹಾಗೂ ಅನ್ಯೋಕ್ತಿಗಳ ಸೊಗಸನ್ನು ಅನುಭವಿಸಿ ಮೆಲುಕುಹಾಕಿದ್ದಾರೆ. ಒಳ್ಳೆಯ ಸೂಕ್ತಿಗಳ ಸಂಗ್ರಹಗಳನ್ನೂ ಮಾಡಿ ಜನರ ಗಮನಕ್ಕೆ ತಂದಿದ್ದಾರೆ. ಶಾರ್ಙ್ಗಧರ ಪದ್ಧತಿ, ಸುಭಾಷಿತಾವಳಿ, ಕವೀಂದ್ರವಚನ ಸಮುಚ್ಚಯ, ಸೂಕ್ತಿಮುಕ್ತಾವಳೀ, ಸುಭಾಷಿತಸುಧಾನಿಧಿ ಮೊದಲಾದವು ಇಂಥ ಸುಭಾಷಿತ ಸಂಗ್ರಹಗಳು.

ಸುಭಾಷಿತಗಳಲ್ಲಿ ಪ್ರಸ್ತುತವಾಗಿರುವ ವಿಷಯ ಸಾರ್ವಕಾಲಿಕವಾದುದು. ಎಲ್ಲ ದೇಶದ ಎಲ್ಲ ಜನರಿಗೂ ಅದು ಅನ್ವಯಿಸುತ್ತದೆ. ಅವು ಮಾನವ ಜೀವನದ ವ್ಯವಹಾರಗಳಿಗೂ ನಿತ್ಯಸತ್ಯಗಳಿಗೂ ಸಂಬಂಧಿಸಿರುವುದು ಇದಕ್ಕೆ ಕಾರಣ. ಇವು ನಮ್ಮ ಸಂಸ್ಕೃತಿಯ ಪ್ರತೀಕವಾಗಿವೆ ಎಂದೇ ಹೇಳಬಹುದು. ಇವುಗಳು ಹಳೆಯವು ಎಂಬ ಮಾತೇ ಇಲ್ಲ.

ಕನ್ನಡ ಸಾಹಿತ್ಯ ಪರಿಷತ್ತಿನ ವಜ್ರಮಹೋತ್ಸವದ ಸಂದರ್ಭದಲ್ಲಿ ಸಂಸ್ಕೃತ ಸುಭಾಷಿತಗಳ ಸಂಗ್ರಹವೊಂದನ್ನು ಕನ್ನಡಾನುವಾದದೊಡನೆ ಪ್ರಕಟಿಸಿ ಕನ್ನಡ ಜನತೆಗೆ ಸಮರ್ಪಿಸುವ ಆಶಯವನ್ನು ಪರಿಷದಧ್ಯಕ್ಷರಾದ ಶ್ರೀಮಾನ್ ಜಿ. ನಾರಾಯಣ ಅವರು ವ್ಯಕ್ತಪಡಿಸಿ ಕನ್ನಡ ಸಂಸ್ಕೃತಗಳ ಸುಮಧುರ ಬಾಂಧವ್ಯವನ್ನು ಬೆಳೆಸಿದ್ದಾರೆ. ಈ ಕಾರ್ಯವನ್ನು ಕನ್ನಡ ಸಾಹಿತ್ಯ ಪರಿಷತ್ತು ನಮಗೆ ವಹಿಸಿದುದಕ್ಕೆ ನಾವು ಪರಿಷತ್ತಿಗೂ, ವಿಶೇಷವಾಗಿ ಅಧ್ಯಕ್ಷರಿಗೂ ಕೃತಜ್ಞರಾಗಿದ್ದೇವೆ.

ಈ ಸಂಪಾದಕಮಂಡಲಿ ಸುಭಾಷಿತಗಳನ್ನು ಆರಿಸುವಾಗ ಕೇವಲ ನೀತಿಪ್ರಧಾನ ವಾದವುಗಳನ್ನೇ ಆರಿಸಬೇಕೆಂದೂ ಸಂಸ್ಕೃತದ ಕಾವ್ಯ, ನಾಟಕಗಳು, ರಾಮಾಯಣ, ಮಹಾಭಾರತ, ಭಾಗವತ, ಧರ್ಮಶಾಸ್ತ್ರಗಳು, ಪಂಚತಂತ್ರ, ಹಿತೋಪದೇಶ, ಮೊದಲಾದ ಎಲ್ಲಾ ಬಗೆಯ ಗ್ರಂಥಗಳಿಂದ ಈ ಸಂಗ್ರಹವನ್ನು ಮಾಡಬೇಕೆಂದೂ ನಿಶ್ಚಯಿಸಿ ಅದೇ ರೀತಿ ಆಯಾ ಮೂಲಗ್ರಂಥಗಳನ್ನು ಶೋಧಿಸಿ ಸುಭಾಷಿತಗಳನ್ನು ಆರಿಸಿದೆ. ಪ್ರಾಯಃ ಎಲ್ಲ ಶ್ಲೋಕಗಳಿಗೂ ಆಕರವನ್ನು ತಪ್ಪದೆ ಕೊಟ್ಟಿದೆ. ಕೆಲವು ಸುಪ್ರಸಿದ್ಧವಾದ ಶ್ಲೋಕಗಳು ಕೈಬಿಟ್ಟು ಹೋಗಬಹುದೆಂಬ ಉದ್ದೇಶದಿಂದ ಆಕರಗಳು ದೊರೆಯದಿದ್ದರೂ ಅವುಗಳನ್ನು ಸೇರಿಸಲಾಗಿದೆ.

ಈ ಶ್ಲೋಕಗಳಿಗೆ ಕನ್ನಡದಲ್ಲಿ ಅನುವಾದವನ್ನು ಕೊಡುವಾಗ ಮುಖ್ಯವಾಗಿ ಅವುಗಳ ಭಾವ ಅಥವಾ ತಾತ್ಪರ್ಯವನ್ನೂ ಮನಸ್ಸಿನಲ್ಲಿಟ್ಟುಕೊಂಡು ಸಾಧ್ಯವಾದಷ್ಟು ಸುಲಭವಾಗಿ ಅರ್ಥಗ್ರಹಣವಾಗುವಂತೆ ಬರೆದಿದೆ. ಕೇವಲ ಭಾಷಾಂತರ ಕ್ರಮವನ್ನೇ ಅನುಸರಿಸಿಲ್ಲ. ಈ ಸುಭಾಷಿತಗಳನ್ನು ವ್ಯಾಪಕವಾದ ರೀತಿಯಲ್ಲಿ ಹಲವಾರು ಪ್ರಮುಖ ವಿಭಾಗಗಳಲ್ಲಿ ಜೋಡಿಸಲಾಗಿದೆ. ತನಗೆ ದೊರೆತ ಕಾಲಾವಕಾಶದಲ್ಲಿ ಸುಭಾಷಿತಗಳ ಸಂಗ್ರಹ ಮತ್ತು ಅನುವಾದಗಳು ಹೆಚ್ಚು ಉಪಯುಕ್ತವಾಗಿರುವಂತೆ ಸಂಪಾದಕಮಂಡಲಿ ಪ್ರಯತ್ನಿಸಿದೆ. ಉಪಯುಕ್ತವಾದ ಎರಡುಸಹಸ್ರ ಸುಭಾಷಿತಗಳು ಈ ಸಂಗ್ರಹದಲ್ಲಿವೆ.

ಈ ಸಂಗ್ರಹವನ್ನು ತರುವುದರಲ್ಲಿ ಒಮ್ಮನಸ್ಸಿನಿಂದ ಶ್ರಮಿಸಿದ ಸಂಪಾದಕ ಮಂಡಲಿಗೂ, ಈ ಕಾರ್ಯವನ್ನು ನಮಗೆ ವಹಿಸಿಕೊಟ್ಟು ನಮ್ಮ ಅಲ್ಪ ಸೇವೆಗೆ ಅವಕಾಶ ಮಾಡಿಕೊಟ್ಟ ಕನ್ನಡ ಸಾಹಿತ್ಯ ಪರಿಷತ್ತಿನ ಮಾನ್ಯ ಅಧ್ಯಕ್ಷರಾದ ಶ್ರೀ ಜಿ. ನಾರಾಯಣ ಅವರಿಗೂ, ಮೊದಲಿಂದಲೂ ನಮಗೆ ತಮ್ಮ ಸಹಕಾರ ನೀಡಿ ಈ ಕಾರ್ಯವನ್ನು ಸುಗಮಗೊಳಿಸಿದ ಪರಿಷತ್ತಿನ ಕಾರ್ಯಾಲಯದವರಿಗೂ, ಇದನ್ನು ಚೆನ್ನಾಗಿ ಮುದ್ರಿಸಿದ ಪ್ರಭಾಪ್ರೆಸ್ಸಿನವರಿಗೂ ನಮ್ಮ ಅನಂತ ವಂದನೆಗಳು ಸಲ್ಲುತ್ತವೆ. ನಮ್ಮ ನಾಡಬಾಂಧವರು ಈ ಪ್ರಯತ್ನವನ್ನು ಸ್ವಾಗತಿಸುವರೆಂದು ನಂಬಿದ್ದೇವೆ.

ಬೆಂಗಳೂರು
೨-೪-೧೯೭೭

**ಎನ್. ಎಸ್. ಅನಂತರಂಗಾಚಾರ್**
ಸಂಪಾದಕಮಂಡಲಿ ಪರವಾಗಿ

# ವಿಷಯಸೂಚೀ

# ಸುಭಾಷಿತಮಂಜರೀ

## ೧. ಸುಭಾಷಿತಪ್ರಶಂಸೆ

**ಧರ್ಮೋ ಯಶೋ ನಯೋ ದಾಕ್ಷ್ಯಂ ಮನೋಹಾರಿ ಸುಭಾಷಿತಂ ।**
**ಇತ್ಯಾದಿಗುಣರತ್ನಾನಾಂ ಸಂಗ್ರಹೀ ನಾವಸೀದತಿ ॥ ೧**

—ಸುಭಾಷಿತರತ್ನ ಭಾಂಡಾಗಾರ

ಧರ್ಮ, ಯಶಸ್ಸು, ನೀತಿ, ದಾಕ್ಷಿಣ್ಯ ಹಾಗೆಯೇ ಮನೋಹರವಾದ ಸುಭಾಷಿತ- ಇವೇ ಮೊದಲಾದ ಗುಣರತ್ನಗಳನ್ನು ಶೇಖರಿಸುವವನು ಯಾವಾಗಲೂ ದುಃಖಕ್ಕೊಳಗಾಗುವುದಿಲ್ಲ.

**ಖಿನ್ನಂ ಚಾಪಿ ಸುಭಾಷಿತೇನ ರಮತೇ ಸ್ವೀಯಂ ಮನಃ ಸರ್ವದಾ**
**ಶ್ರುತ್ವಾನ್ಯಸ್ಯ ಸುಭಾಷಿತಂ ಖಲು ಮನಃ ಶ್ರೋತುಂ ಪುನರ್ವಾಂಛತಿ ।**
**ಅಜ್ಞಾನ್ ಜ್ಞಾನವತೋಽಪ್ಯನೇನ ಹಿ ವಶೀಕರ್ತುಂ ಸಮರ್ಥೋ ಭವೇತ್**
**ಕರ್ತವ್ಯೋ ಹಿ ಸುಭಾಷಿತಸ್ಯ ಮನುಜೈರಾವಶ್ಯಕಃ ಸಂಗ್ರಹಃ ॥ ೨**

—ಸುಭಾಷಿತರತ್ನ ಭಾಂಡಾಗಾರ

ದುಃಖದಿಂದ ಕೂಡಿದ್ದರೂ ಮನಸ್ಸು ಸುಭಾಷಿತವನ್ನು ಕೇಳಿ ನಲಿಯುತ್ತದೆ. ಬೇರೆಯವರು ಹೇಳಿದ ಸಭಾಷಿತವನ್ನು ಕೇಳಿ ಮತ್ತೆ ಕೇಳಬೇಕೆಂದು ಹಂಬಲಿಸುತ್ತದೆ. ಮೂರ್ಖರನ್ನೂ ಪಂಡಿತರನ್ನೂ ಸುಭಾಷಿತಗಳಿಂದ ವಶಪಡಿಸಿಕೊಳ್ಳುವುದು ಸಾಧ್ಯ. ಆದುದರಿಂದ ಮಾನವರು ಹೇಗಾದರೂ ಸಂಭಾಷಿತದ ಸಂಗ್ರಹವನ್ನು ಮಾಡಲೇಬೇಕು.

**ದ್ರಾಕ್ಷಾ ಮ್ಲಾನಮುಖೀ ಜಾತಾ ಶರ್ಕರಾ ಚಾಶ್ಮತಾಂ ಗತಾ ।**
**ಸುಭಾಷಿತರಸಸ್ಯಾಗ್ರೇ ಸುಧಾ ಭೀತಾ ದಿವಂ ಗತಾ ॥ ೩**

—ಸುಭಾಷಿತರತ್ನ ಭಾಂಡಾಗಾರ

ಸುಭಾಷಿತದ ರುಚಿಯ ಮುಂದೆ ದ್ರಾಕ್ಷಿಯು ಬಾಡಿತು. ಸಕ್ಕರೆ ಕಲ್ಲಾಯಿತು. ಅಮೃತವು ಹೆದರಿ ಸ್ವರ್ಗಕ್ಕೆ ಹೊರಟುಹೋಯಿತು!

**ನಾಯಂ ಪ್ರಯಾತಿ ವಿಕೃತಿಂ ವಿರಸೋ ನ ಯಃ ಸ್ಯಾತ್**
**ನ ಕ್ಷೀಯತೇ ಬಹು ಜನೈರ್ನಿತರಾಂ ನಿಪೀತಃ ।**
**ಜಾಡ್ಯಂ ನಿಹಂತಿ ರುಚಿಮೇತಿ ಕರೋತಿ ತೃಪ್ತಿಂ**
**ನೂನಂ ಸುಭಾಷಿತರಸೋಽನ್ಯರಸಾತಿಶಾಯೀ ॥ ೪**

—ಸುಭಾಷಿತರತ್ನ ಭಾಂಡಾಗಾರ

ಪಾನಕ, ಹಾಲು ಮೊದಲಾದ ಪಾನೀಯಗಳು ಕೆಟ್ಟುಹೋಗುವುದುಂಟು, ಬೇಸರವುಂಟುಮಾಡಬಹುದು. ಕಡಿಮೆಯಾಗುತ್ತವೆ. ಆದರೆ ಸುಭಾಷಿತದ ರಸವು ಎಂದಿಗೂ ಕೆಡುವುದಿಲ್ಲ. ರುಚಿ ಕೆಡುವುದಿಲ್ಲ. ಅನೇಕರು ಹೆಚ್ಚು ಹೆಚ್ಚಾಗಿ ಕುಡಿದರೂ ಕಡಿಮೆಯಾಗುವುದಿಲ್ಲ. ಅಲ್ಲದೆ ಲವಲವಿಕೆಯನ್ನುಂಟುಮಾಡುತ್ತದೆ. ರುಚಿಯುಂಟು ಮಾಡುತ್ತದೆ. ತೃಪ್ತಿಯನ್ನುಂಟುಮಾಡುತ್ತದೆ. ಹೀಗೆ ಸುಭಾಷಿತ ರಸವು ಎಲ್ಲ ರಸಗಳನ್ನೂ ಮೀರಿಸುತ್ತದೆ.

**ಪೃಥಿವ್ಯಾಂ ತ್ರೀಣಿ ರತ್ನಾನಿ ಜಲಮನ್ನಂ ಸುಭಾಷಿತಂ ।**
**ಮೂಢೈಃ ಪಾಷಾಣಖಂಡೇಷು ರತ್ನಸಂಜ್ಞಾ ವಿಧೀಯತೇ ॥** ೫

—ಸುಭಾಷಿತರತ್ನ ಭಾಂಡಾಗಾರ

ಭೂಮಿಯಲ್ಲಿ ಸರ್ವಶ್ರೇಷ್ಠವಾದ ವಸ್ತುಗಳು ಕೇವಲ ಮೂರೇ ಇವೆ. ಜಲ, ಆಹಾರ ಮತ್ತು ಒಳ್ಳೆಯ ಮಾತು. ಆದರೆ ಮೂರ್ಖರು ಕಲ್ಲಿನ ಚೂರುಗಳನ್ನು ರತ್ನ ಅಥವಾ ಶ್ರೇಷ್ಠ ವಸ್ತು ಎಂದು ಕರೆಯುವುದು ವಿಷಾದಕರ.

**ಭಾಷಾಸು ಮುಖ್ಯಾ ಮಧುರಾ ದಿವ್ಯಾ ಗೀರ್ವಾಣಭಾರತೀ ।**
**ತಸ್ಮಾದ್ಧಿ ಕಾವ್ಯಂ ಮಧುರಂ ತಸ್ಮಾದಪಿ ಸುಭಾಷಿತಂ ॥** ೬

—ಸುಭಾಷಿತರತ್ನ ಭಾಂಡಾಗಾರ

ಭಾಷೆಗಳಲ್ಲಿ ಮುಖ್ಯವೂ ಮಧುರವೂ ದಿವ್ಯವೂ ಆದುದು ಸಂಸ್ಕೃತ ಭಾಷೆ. ಅದರಿಂದ ಆ ಭಾಷೆಯ ಕಾವ್ಯ ಮಧುರ. ಅದಕ್ಕಿಂತಲೂ ಸುಭಾಷಿತ ಮಧುರ.

**ಸಂಸದಿ ತದೇವ ಭೂಷಣಮುಪಕಾರಕಮವಸರೇ ಧನಂ ಮುಖ್ಯಂ ।**
**ಸೂಕ್ತಂ ದಧತಿ ಸುವರ್ಣಂ ಕಲ್ಯಾಣಮನರ್ಘಮಿಹ ಧನ್ಯಾಃ ॥** ೭

—ಸುಭಾಷಿತರತ್ನ ಭಾಂಡಾಗಾರ

ಸಭೆಯಲ್ಲಿ ಹೇಳಲು ಸುಭಾಷಿತ ಅಲಂಕಾರದಂತೆ ಮೆಚ್ಚಿಗೆಯನ್ನು ಪಡೆಯುತ್ತದೆ. ಸಮಯದಲ್ಲಿ ಇದು ಹಣದಂತೆ ಉಪಕಾರ ಮಾಡುತ್ತದೆ. ಮಂಗಳಕರವಾದ, ಚಿನ್ನದಂತೆ ಬೆಲೆಬಾಳುವ ಸುಭಾಷಿತವನ್ನು ತಿಳಿದವರೇ ಧನ್ಯರು.

**ಸಂಸಾರಕಟುವೃಕ್ಷಸ್ಯ ದ್ವೇ ಫಲೇ ಹ್ಯಮೃತೋಪಮೇ ।**
**ಸುಭಾಷಿತರಸಾಸ್ವಾದಃ ಸಂಗತಿಃ ಸುಜನೇ ಜನೇ ॥** ೮

—ಸುಭಾಷಿತರತ್ನ ಭಾಂಡಾಗಾರ

ಸಂಸಾರ ಅಥವಾ ಜೀವನ ಒಂದು ಕಹಿಯಾದ ಮರ. ಆದರೆ ಅದರಲ್ಲಿಯೂ ಅಮೃತದಂತಹ ಎರಡು ಹಣ್ಣುಗಳಿವೆ. ಸುಭಾಷಿತವನ್ನು ಅಥವಾ ಒಳ್ಳೆಯ ಮಾತುಗಳನ್ನು ಸವಿಯುವುದು ಮತ್ತು ಸಜ್ಜನರೊಡನೆ ಸೇರುವುದು.

**ಸುಭಾಷಿತರಸಾಸ್ವಾದಬದ್ಧರೋಮಾಂಚಕಂಚುಕಾಃ ।**
**ವಿನಾಪಿ ಕಾಮಿನೀಸಂಗಂ ಕವಯಃ ಸುಖಮಾಸತೇ ॥ ೯**

—ಸುಭಾಷಿತರತ್ನ ಭಾಂಡಾಗಾರ

ಸುಭಾಷಿತಗಳ ರಸಾನುಭವದಿಂದುಂಟಾದ ರೋಮಾಂಚಕದ ಕವಚವನ್ನುಳ್ಳ ಕವಿಗಳು ಕಾಮಿನಿಯ ಸಂಗವಿಲ್ಲದೆಯೇ ಸುಖವನ್ನನುಭವಿಸುತ್ತಾರೆ.

**ಸುಭಾಷಿತೇನ ಗೀತೇನ ಯುವತೀನಾಂ ಚ ಲೀಲಯಾ ।**
**ಮನೋ ನ ಭಿದ್ಯತೇ ಯಸ್ಯ ಸ ಯೋಗೀ ಹ್ಯಥವಾ ಪಶುಃ ॥ ೧೦**

—ಸುಭಾಷಿತರತ್ನ ಭಾಂಡಾಗಾರ

ಸುಭಾಷಿತ, ಗೀತ, ಯುವತಿಯರ ವಿಲಾಸ-ಇವುಗಳಿಂದ ಯಾರ ಮನಸ್ಸು ಸೂರೆ ಹೋಗುವುದಿಲ್ಲವೋ ಅವನು ಯೋಗಿ ಅಥವಾ ಪಶು.

**ಸುಭಾಷಿತೈಃ ಪ್ರೀತಿರನುನ್ನತಿಃ ಶ್ರಿಯಾ**
**ಪರಾರ್ಥನಿಷ್ಪತ್ತಿಪಟೀಯಸೀ ಕ್ರಿಯಾ ।**
**ಗುಣೇಷ್ವತೃಪ್ತಿರ್ಗುಣವತ್ಸು ಚಾದರಃ**
**ನಿಗೂಢಮೇತಚ್ಚರಿತಂ ಮಹಾತ್ಮನಾಮ್ ॥ ೧೧**

—ಸುಭಾಷಿತರತ್ನ ಭಾಂಡಾಗಾರ

ಒಳ್ಳೆಯ ಮಾತುಗಳಿಂದ ಸಂತೋಷ, ಹಣವಿದ್ದರೂ ಗರ್ವಪಡದಿರುವುದು, ಇತರರಿಗೆ ಸಹಾಯ ಮಾಡುವ ಸಾಮರ್ಥ್ಯ, ಗುಣಗಳಲ್ಲಿ ಆಸೆ, ಗುಣವುಳ್ಳವರಲ್ಲಿ ಆದರ— ಇವು ಮಹಾತ್ಮರ ನಡತೆ.



## ೨. ಕವಿಕಾವ್ಯಪ್ರಶಂಸೆ

**ಅನೌಚಿತ್ಯಾದೃತೇ ನಾನ್ಯದ್ರಸಭಂಗಸ್ಯ ಕಾರಣಂ ।**
**ಪ್ರಸಿದ್ಧೌಚಿತ್ಯಬಂಧಸ್ತು ರಸಸ್ಯೋಪನಿಷತ್ ಪರಾ ॥** ೧

—ಧ್ವನ್ಯಾಲೋಕ-೩

ಅನೌಚಿತ್ಯವನ್ನು ಬಿಟ್ಟರೆ, ರಸಭಂಗವಾಗಲು ಇನ್ನೊಂದು ಕಾರಣವಿಲ್ಲ. ಪ್ರಸಿದ್ಧವಾದ ಔಚಿತ್ಯದ ರಚನೆಯೇ ರಸಸಿದ್ಧಿಯ ಒಳಗುಟ್ಟು.

**ಅಪಾರೇ ಕಾವ್ಯಸಂಸಾರೇ ಕವಿರೇಕಃ ಪ್ರಜಾಪತಿಃ ।**
**ಯಥಾಸ್ಮೈ ರೋಚತೇ ವಿಶ್ವಂ ತಥೇದಂ ಪರಿವರ್ತತೇ ॥** ೨

—ಧ್ವನ್ಯಾಲೋಕ-೩

ಅಪಾರವಾದ ಕಾವ್ಯಜಗತ್ತಿನಲ್ಲಿ ಕವಿಯೊಬ್ಬನೇ ಸೃಷ್ಟಿಕರ್ತನಾದ ಬ್ರಹ್ಮ. ಅವನಿಗೆ ಹೇಗೆ ರುಚಿಸುವುದೋ ಹಾಗೆ ಈ ವಿಶ್ವವು ಪರಿವರ್ತನೆಗೊಳ್ಳುತ್ತದೆ.

**ಅಪಿ ಮುದಮುಪಯಾಂತೋ ವಾಗ್ವಿಲಾಸೈಃ ಸ್ವಕೀಯೈಃ**
**ಪರಭಣಿತಿಷು ತೋಷಂ ಯಾಂತಿ ಸಂತಃ ಕಿಯಂತಃ ।**
**ನಿಜಘನಮಕರಂದಸ್ಯಂದಪೂರ್ಣಾಲವಾಲಃ**
**ಕಲಶಸಲಿಲಸೇಕಂ ನೇಹತೇ ಕಿಂ ರಸಾಲಃ ॥** ೩

—ಪ್ರಸನ್ನರಾಘವ

ತಮ್ಮ ಚತುರವಾದ ಕವಿತೆಯಿಂದ ಸಂತೋಷಪಟ್ಟರೂ ಬೇರೆಯವರ ಕವಿತೆಗಳನ್ನೂ ಓದಿ ಸಂತೋಷಪಡುವ ಉದಾರ ಮನಸ್ಸಿನ ಪ್ರಾಜ್ಞರು ಇದ್ದೇ ಇದ್ದಾರೆ. ತನ್ನ ಹೂಗಳ ಮಕರಂದದಿಂದ ಪಾತಿಯು ತುಂಬಿದ್ದರೂ ಬಿಂದಿಗೆಯಿಂದ ಸುರಿದ ನೀರನ್ನು ಮಾವು ಬಯಸುವುದಿಲ್ಲವೇ?

**ಅಪಿ ಪ್ರಭೂತಂ ವಿದುಷಾಂ ಮತಿಭ್ಯಃ**
**ಮಹಾಖನಿಭ್ಯಃ ಖಲು ಕಾವ್ಯರತ್ನಂ ।**
**ಸಭಾಸು ಸಂಚಾರಿತಮುತ್ತಮಾನಾಂ**
**ಅನರ್ಘತಾಮಂಚತಿ ಮಂಜುತಾಂ ಚ ॥** ೪

—ಅನ್ಯೋಕ್ತಿಸ್ತಬಕ-೩

ದೊಡ್ಡ ಗಣಿಗಳಿಂದ ರತ್ನವು ಹೊರಕ್ಕೆ ಬರುವಂತೆ, ವಿದ್ವಾಂಸರ ಪ್ರತಿಭೆಯಿಂದ ರಸಪೂರ್ಣವಾದ ಕಾವ್ಯವು ಹುಟ್ಟಿದರೂ ಸಹ, ರಸಿಕರ ಸಭೆಯಲ್ಲಿ ಮೆರೆದಾಗ ಆ ಕಾವ್ಯಕ್ಕೆ ಬೆಲೆ ಹೆಚ್ಚುತ್ತದೆ ಅಲ್ಲದೆ ಮತ್ತಷ್ಟು ಸುಂದರವೂ ಆಗುತ್ತದೆ.

**ಅವಯಃ ಕೇವಲಕವಯಃ ಕೇವಲಧೀರಾಸ್ತು ಕೇವಲಂ ಕೀರಾಃ ।**
**ಕವಯಃ ಪಂಡಿತಕವಯಃ ತಾನವಮಂತಾ ತು ಕೇವಲಂ ಗವಯಃ ॥ ೫**
(ಅಜ್ಞಾತ)

ಕೇವಲ ಕವಿತೆಯನ್ನು ಬಲ್ಲೆನೆನ್ನುವರು ಕುರಿಗಳು. ಸುಮ್ಮನೇ ಓದಿ ಪಂಡಿತರಾದವರು ಗಿಣಿಗಳು. ವಿಷಯವನ್ನರಿತ ಕವಿಗಳೇ ನಿಜವಾದ ಕವಿಗಳು. ಅವರನ್ನು ಅವಮಾನ ಗೊಳಿಸುವವನು ಕೇವಲ ಮೃಗ.

**ಅಂತಃಸಾರವಿಹೀನಾಃ ಪ್ರತಿಭಾನವಿಶೇಷಕೃತಪರಿಷ್ಕಾರಾಃ ।**
**ದಧತೀಹ ಕಾವ್ಯಭೇದಾಃ ಕೃತ್ರಿಮಮಣಿವತ್ ಪ್ರಕರ್ಷಮಾಪಾತಾತ್ ॥೬**
—ಆರ್ಯಾಸಪ್ತಶತಿ-೬೮

ಬುದ್ಧಿವಿಶೇಷದಿಂದ ರಚಿಸಿದ ಕೆಲವು ಕಾವ್ಯಗಳು ಅಂತಃಸಾರವಿಲ್ಲದೆ ಇರುತ್ತವೆ. ಅವು ಮೇಲೆ ಹೊಳೆಯುವಂತೆ ಮಾಡಿರುವ ಕೃತ್ರಿಮಮಣಿಗಳಂತೆ, ಮೇಲ್ನೋಟಕ್ಕೆ ಉತ್ತಮ ವಾಗಿ ತೋರುತ್ತವೆ.

**ಅವಕ್ತಾಪಿ ಸ್ವಯಂ ಲೋಕಃ ಕಾಮಂ ಕಾವ್ಯ ಪರೀಕ್ಷಕಃ ।**
**ರಸಪಾಕಾನಭಿಜ್ಞೋಽಪಿ ಭೋಕ್ತಾ ವೇತ್ತಿ ನ ಕಿಂ ರಸಮ್ ॥ ೭**
—ಯಶಸ್ತಿಲಕ, ೧-೨೯

ತಾನು ಕವಿಯಲ್ಲದಿದ್ದರೂ ಮನುಷ್ಯನು ವಿಶೇಷವಾಗಿ ಕಾವ್ಯಪರೀಕ್ಷಕನಾಗಿರಲು ಸಾಧ್ಯ. ರುಚಿಕರವಾದ ಅಡಿಗೆಯನ್ನು ಮಾಡಲು ಬರದಿದ್ದರೂ, ಊಟಮಾಡತಕ್ಕವನು ಅಡಿಗೆಯ ರುಚಿಯನ್ನು ಅರಿಯುವುದಿಲ್ಲವೆ?

**ಇತರಪಾಪಫಲಾನಿ ಯಥೇಚ್ಛಯಾ**
**ವಿಲಿಖಿತಾನಿ ಸಹೇ ಚತುರಾನನ ।**
**ಅರಸಿಕೇಷು ಕವಿತ್ವನಿವೇದನಂ**
**ಶಿರಸಿ ಮಾ ಲಿಖ ಮಾ ಲಿಖ ಮಾ ಲಿಖ ॥ ೮**
—ಸಮಯೋಚಿತಪದ್ಯಮಾಲಿಕಾ

ಹೇ ಬ್ರಹ್ಮದೇವ, ಇತರ ಯಾವ ಪಾಪಫಲಗಳನ್ನಾದರೂ ನನ್ನ ಹಣೆಯಲ್ಲಿ ಬರೆ, ಸಹಿಸುತ್ತೇನೆ. ಆದರೆ ಅರಸಿಕ ಜನರಲ್ಲಿ ಕವಿತ್ವಶಕ್ತಿಯನ್ನು ಮತ್ತು ಅವರಿಗೆ ಓದಿ ಹೇಳುವ ಸಂದರ್ಭವನ್ನು ಮಾತ್ರ ನನ್ನ ಶಿರಸ್ಸಿನಲ್ಲಿ ಬರೆಯಬೇಡ, ಬರೆಯಬೇಡ, ಬರೆಯ ಬೇಡ!

ಉಪೇಯುಷಾಮಪಿ ದಿವಂ ಸನ್ನಿಬಂಧವಿಧಾಯಿನಾಂ ।
ಆಸ್ತ ಏವ ನಿರಾತಂಕಂ ಕಾಂತಂ ಕಾವ್ಯಮಯಂ ವಪುಃ ॥ ೯

—ಲೋಚನ-೧

ಉತ್ತಮ ಕಾವ್ಯಗಳನ್ನು ರಚಿಸಿದವರು ಸ್ವರ್ಗವನ್ನಡರಿದರೂ, ಅವರ ಸುಂದರವಾದ ಕಾವ್ಯಮಯ ಶರೀರವು ನಿರಾತಂಕವಾಗಿ ಇಲ್ಲಿ ಇದ್ದೇ ಇರುತ್ತದೆ.

ಕಮಲಿನಿ ! ಮಲಿನೀಕರೋಷಿ ಚೇತಃ
ಕಿಮಿತಿ ಬಕೈರವಹೇಲಿತಾನಭಿಜ್ಞೈಃ ।
ಪರಿಣತಮಕರಂದಮಾರ್ಮಿಕಾಸ್ತೇ
ಜಗತಿ ಭವಂತು ಚಿರಾಯುಷೋ ಮಿಲಿಂದಾಃ ॥ ೧೦

—ಭಾಮಿನೀವಿಲಾಸ

ಎಲೈ ತಾವರೆಗೊಳವೇ! ಮೂರ್ಖರಾದ ಕೊಕ್ಕರೆಗಳು ಅವಮಾನ ಮಾಡಿದುವೆಂದು ನೀನೇಕೆ ಮನಸ್ಸನ್ನು ಕೆಡಿಸಿಕೊಳ್ಳುತ್ತೀಯೆ? ಮಕರಂದದ ರುಚಿಯನ್ನು ಬಲ್ಲ ಹೊಗಳುವ ದುಂಬಿಗಳು ಪ್ರಪಂಚದಲ್ಲಿ ಚಿರಕಾಲ ಇಲ್ಲವೇ ! ಮೂರ್ಖರು ಅವಮಾನಗೊಳಿಸಿದರೂ, ಹೊಗಳುವ ರಸಿಕರು ಎಲ್ಲ ಕಾಲದಲ್ಲಿಯೂ ಇದ್ದೇ ಇರುತ್ತಾರೆ.

ಕವಿಃ ಕರೋತಿ ಕಾವ್ಯಾನಿ ರಸಂ ಜಾನಾತಿ ಪಂಡಿತಃ ।
ತರುಃ ಸೃಜತಿ ಪುಷ್ಪಾಣಿ ಮರುದ್ವಹತಿ ಸೌರಭಂ ॥ ೧೧

—ಅಭಿನವಪಾಠಾವಲೀ

ಕವಿಯು ಕಾವ್ಯಗಳನ್ನು ರಚಿಸುತ್ತಾನೆ ; ರಸವನ್ನು ಪಂಡಿತನು ತಿಳಿಯುತ್ತಾನೆ. ಮರವು ಹೂಗಳನ್ನು ಬಿಡುತ್ತದೆ ; ಗಾಳಿ ಸುವಾಸನೆಯನ್ನು ಒಯ್ಯುತ್ತದೆ.

ಕಾವ್ಯಂ ಸುಧಾ ರಸಜ್ಞಾನಾಂ ಕಾಮಿನಾಂ ಕಾಮಿನೀ ಸುಧಾ ।
ಧನಂ ಸುಧಾ ಸಲೋಭಾನಾಂ ಶಾಂತಿಃ ಸಂನ್ಯಾಸಿನಾಂ ಸುಧಾ ॥ ೧೨

—ರಸಗಂಗಾಧರ

ರಸಜ್ಞರಿಗೆ ಕಾವ್ಯ ಅಮೃತ. ಕಾಮಿಗಳಿಗೆ ಕಾಮಿನಿ ಅಮೃತ. ಜಿಪುಣರಿಗೆ ಹಣ ಅಮೃತ. ಸಂನ್ಯಾಸಿಗಳಿಗೆ ಶಾಂತಿ ಅಮೃತ.

ಕಾವ್ಯಂ ಯಶಸೇಽರ್ಥಕೃತೇ ವ್ಯವಹಾರವಿದೇ ಶಿವೇತರಕ್ಷತಯೇ ।
ಸದ್ಯಃ ಪರನಿರ್ವೃತಯೇ ಕಾಂತಾಸಂಮಿತತಯೋಪದೇಶಯುಜೇ ॥ ೧೩

—ಕಾವ್ಯಪ್ರಕಾಶ-೨

ಕಾವ್ಯದ ಪ್ರಯೋಜನಗಳಿವು:- ಕೀರ್ತಿ, ಧನ, ವ್ಯವಹಾರಜ್ಞಾನ, ಅಮಂಗಳ ಪರಿಹಾರ, ಒಡನೆಯೇ ಆಗುವ ಪರಮಾನಂದ ಮತ್ತು ಪ್ರಿಯಳಾದ ಕಾಂತೆಯು ಮನವೊಲಿಸಿ ಹೇಳಿದ ಉಪದೇಶ.

ಕ್ಷಾಂತಿಶ್ಚೇತ್ಕವಚೇನ ಕಿಂ ಕಿಮರಿಭಿಃ ರೋಗೋಽಸ್ತಿ ಚೇದ್ದೇಹಿನಾಂ
ಜ್ಞಾತಿಶ್ಚೇದನಲೇನ ಕಿಂ ಯದಿ ಸುಹೃದ್ ದಿವ್ಯೌಷಧೈಃ ಕಿಂ ಫಲಮ್ ।
ಕಿಂ ಸರ್ಪೈರ್ಯದಿ ದುರ್ಜನಾಃ ಕಿಮು ಧನೈರ್ವಿದ್ಯಾನವದ್ಯಾ ಯದಿ
ವ್ರೀಡಾ ಚೇತ್ಕಿಮು ಭೂಷಣೈಃ ಸುಕವಿತಾ ಯದ್ಯಸ್ತಿ ರಾಜ್ಯೇನ ಕಿಮ್ ॥೧೪

—ನೀತಿಶತಕ-೧೯

ಮನುಷ್ಯರಿಗೆ ಕ್ಷಮಾಗುಣವಿದ್ದರೆ ಕವಚವೇತಕ್ಕೆ? ರೋಗವಿದ್ದರೆ ಶತ್ರುಗಳೇಕೆ? ದಾಯಾದಿಯಿದ್ದರೆ ಬೆಂಕಿಯೇಕೆ ಬೇಕು ? ಸ್ನೇಹಿತನಿದ್ದರೆ ದಿವ್ಯೌಷಧಗಳಿಂದೇನು ಫಲ? ದುರ್ಜನರಿದ್ದರೆ ಹಾವುಗಳೇಕೆ? ಪರಿಶುದ್ಧವಾದ ವಿದ್ಯೆಯಿದ್ದರೆ ಹಣವೇಕೆ ? ಲಜ್ಜೆ ಇದ್ದರೆ ಒಡವೆಗಳೇಕೆ ? ಒಳ್ಳೆಯ ಕವಿತೆಯಿದ್ದರೆ ರಾಜ್ಯವೇಕೆ ?

ಖ್ಯಾತಾ ನರಾಧಿಪತಯಃ ಕವಿಸಂಶ್ರಯೇಣ
ರಾಜಾಶ್ರಯೇಣ ಚ ಗತಾಃ ಕವಯಃ ಪ್ರಸಿದ್ಧಿಂ ।
ರಾಜ್ಞಾ ಸಮೋಽಸ್ತಿ ನ ಕವೇಃ ಪರಮೋಪಕಾರೀ
ರಾಜ್ಞೋ ನ ಚಾಸ್ತಿ ಕವಿನಾ ಸದೃಶಃ ಸಹಾಯಃ ॥ ೧೫

—ಸುಭಾಷಿತಸುಧಾನಿಧಿ

ಕವಿಗಳು ಆಶ್ರಯಿಸಿದುದರಿಂದ ರಾಜರುಗಳು ಪ್ರಖ್ಯಾತರಾದರು. ರಾಜನನ್ನಾಶ್ರಯಿಸುವುದರಿಂದ ಕವಿಗಳು ಪ್ರಸಿದ್ಧಿಯನ್ನು ಪಡೆದರು. ರಾಜನಿಗೆ ಸಮನಾದ ಉಪಕಾರಿ ಕವಿಗೆ ಮತ್ತೊಬ್ಬನಿಲ್ಲ. ಕವಿಗೆ ಸಮಾನವಾಗಿ ರಾಜನಿಗೆ ಸಹಾಯ ಮಾಡುವ ಮತ್ತೊಬ್ಬನು ಇಲ್ಲ.

ಗದ್ಯಾನುಬಂಧರಸಮಿಶ್ರಿತಪದ್ಯಸೂಕ್ತಿಃ
ಹೃದ್ಯಾ ಹಿ ವಾದ್ಯಕಲಯಾ ಕಲಿತೇವ ಗೀತಿಃ ।
ತಸ್ಮಾದ್ದಧಾತು ಕವಿಮಾರ್ಗಜುಷಾಂ ಸುಖಾಯ
ಚಂಪೂಪ್ರಬಂಧರಚನಾಂ ರಸನಾ ಮದೀಯಾ ॥ ೧೬

—ಚಂಪೂರಾಮಾಯಣ, ಬಾಲಕಾಂಡ-೩

ಗದ್ಯರಚನೆಯೊಡನೆ ಸೇರಿದ ಪದ್ಯಸೂಕ್ತಿಯು ಪಕ್ಕವಾದ್ಯಗಳ ಕಲೆಯಿಂದ ಸೇರಿದ ಸಂಗೀತದಂತೆ ಹೃದಯಂಗಮವಾಗಿರುತ್ತದೆ. ಆದುದರಿಂದ ನನ್ನ ನಾಲಿಗೆಯು, ಕವಿಗಳ ಶೈಲಿಗಳಲ್ಲಿ ಆನಂದ ಹೊಂದುವವರ ಸುಖಕ್ಕೆ ಚಂಪೂ ಕಾವ್ಯದ ರಚನೆಯನ್ನು ನೀಡಲಿ.

ಗೀತೀ ಶೀಘ್ರೀ ಶಿರಃಕಂಪೀ ಯಥಾಲಿಖಿತಪಾಠಕಃ ।
ಅನರ್ಥಜ್ಞೋಽಲ್ಪಕಂಠಶ್ಚ ಷಡೇತೇ ಪಾಠಕಾಧಮಾಃ ॥ ೧೭

—ಪಾಣಿನೀಯಶಿಕ್ಷಾ-೩೨

ಓದುವಾಗ ಅನಾವಶ್ಯಕವಾಗಿ ಎಳೆದು ರಾಗಹಾಕತಕ್ಕವನು, ಬಹಳ ವೇಗವಾಗಿ ಉಚ್ಚಾರಣೆ ಮಾಡುವವನು, ತಲೆಯಲ್ಲಾಡಿಸುವವನು, ತಪ್ಪಾಗಿ ಬರೆದದ್ದನ್ನು ತಿದ್ದಿಕೊಳ್ಳದೆ ಬರೆದಿರುವಂತೆ ಓದುವವನು, ಅರ್ಥವನ್ನರಿಯದವನು, ಸಣ್ಣ ಧ್ವನಿಯಿಂದ ಓದತಕ್ಕವನು-ಈ ಆರು ಜನರು ಪಾಠಕಾಧಮರು.

ಜಗತಿ ನರಜನ್ಮ ತಸ್ಮಿನ್ ವೈದುಷ್ಯಂ ತತ್ರ ಸತ್ಕವಿತಾ ।
ಕವಿತಾಯಾಂ ಪರಿಣಾಮೋ ದುಷ್ಪ್ರಾಪಃ ಪುಣ್ಯಹೀನೇನ ॥ ೧೮

—ರಸಗಂಗಾಧರ

ಜಗತ್ತಿನಲ್ಲಿ ಮನುಷ್ಯಜನ್ಮ ದುರ್ಲಭ. ಅದರಲ್ಲಿಯೂ ಪಾಂಡಿತ್ಯ, ಅದರಲ್ಲಿ ಉತ್ತಮ ಕವಿತಾಶಕ್ತಿ, ಕವಿತೆಯಲ್ಲಿಯೂ ಪರಿಣತಿ-ಇವು ಪುಣ್ಯಹೀನನಿಗೆ ದೊರೆಯುವುದಿಲ್ಲ.

ಜಯಂತಿ ತೇ ಸುಕೃತಿನೋ ರಸಸಿದ್ಧಾಃ ಕವೀಶ್ವರಾಃ ।
ನಾಸ್ತಿ ಯೇಷಾಂ ಯಶಃಕಾಯೇ ಜರಾಮರಣಜಂ ಭಯಮ್ ॥ ೧೯

—ನೀತಿಶತಕ-೨೨

ಯಾವ ಕವೀಶ್ವರರ (ವೈದ್ಯಶ್ರೇಷ್ಠರ) ಯಶಶ್ಶರೀರದಲ್ಲಿ ಮುಪ್ಪು ಸಾವುಗಳ ಭಯವಿಲ್ಲವೋ ಅಂಥ ರಸಸಿದ್ಧರು (ಶೃಂಗಾರಾದಿ ನವರಸಗಳಲ್ಲಿ ಅಥವಾ ರಸಶಾಸ್ತ್ರದಲ್ಲಿ) ಪುಣ್ಯವಂತರು ಮತ್ತು ಜಯಶಾಲಿಗಳು.

ತೈರೇವ ಕುಸುಮೈಃ ಪೂರ್ವಮಸಕೃತ್ಕೃತಶೇಖರಾಃ ।
ಅಪೂರ್ವರಚನೇ ದಾಮ್ನಿ ದಧತ್ಯೇವ ಕುತೂಹಲಮ್ ॥ ೨೦

—ನ್ಯಾಯಮಂಜರೀ, ೧-೯

ಒಂದೇ ಬಗೆಯ ಹೂಗಳನ್ನು ಅನೇಕ ಸಲ ಮುಡಿದುಕೊಂಡವರೂ ಸಹ, ಆ ಹೂಗಳನ್ನು ಹೊಸ ರೀತಿ ಪೋಣಿಸಿದ ದಂಡೆಯ ವಿಚಾರದಲ್ಲಿ ಕುತೂಹಲವುಳ್ಳವರಾಗಿಯೇ ಇರುತ್ತಾರೆ.

ದ್ವೇ ವರ್ತ್ಮನೀ ಗಿರೋ ದೇವ್ಯಾಃ ಶಾಸ್ತ್ರಂ ಚ ಕವಿಕರ್ಮ ಚ ।
ಪ್ರಜ್ಞೋಪಜ್ಞಂ ತಯೋರಾದ್ಯಂ ಪ್ರತಿಭೋದ್ಭವಮಂತಿಮಮ್ ॥ ೨೧

—ಕವಿಕಂಠಾಭರಣ

ವಾಗ್ದೇವಿಯ ಮಾರ್ಗಗಳು ಎರಡು. ಒಂದು ಶಾಸ್ತ್ರ ; ಇನ್ನೊಂದು ಕಾವ್ಯ. ಮೊದಲನೆಯದು ಬುದ್ಧಿಸಾಮರ್ಥ್ಯದಿಂದ ಹುಟ್ಟುತ್ತದೆ. ಎರಡನೆಯದು ಪ್ರತಿಭೆಯಿಂದಾಗುತ್ತದೆ.

ನಾಕವಿತ್ವಮಧರ್ಮಾಯ ಮೃತಯೇ ದಂಡನಾಯ ವಾ ।
ಕುಕವಿತ್ವಂ ಪುನಸ್ಸಾಕ್ಷಾತ್ ಮೃತಿಮಾಹುರ್ಮನೀಷಿಣಃ ॥ ೨೨

—ಭಾಮಹ

ಕವಿತ್ವ ಮಾಡದೆ ಇರುವುದು ಅಧರ್ಮಕ್ಕಾಗಲೀ, ಸಾವಿಗಾಗಲೀ, ದಂಡನೆಗಾಗಲೀ ಕಾರಣವಾಗುವುದಿಲ್ಲ. ಆದರೆ ಕೆಟ್ಟ ಕವಿತ್ವವಾದರೋ ನೇರವಾಗಿ ಮರಣವೆಂದೇ ತಿಳಿದವರು ಹೇಳುತ್ತಾರೆ.

ನಿದ್ರಾಂ ವಿದೂರಯಸಿ ಶಾಸ್ತ್ರರಸಂ ರುಣತ್ಸಿ
ಸರ್ವೇಂದ್ರಿಯಾರ್ಥಮಸಮರ್ಥವಿಧಿಂ ವಿಧತ್ಸೇ ।
ಚೇತಶ್ಚ ವಿಭ್ರಮಯಸೇ ಕವಿತೇ ಪಿಶಾಚಿ
ಲೋಕಸ್ತಥಾಪಿ ಸುಕೃತೀ ತ್ವದನುಗ್ರಹೇಣ ॥ ೨೩

—ಯಶಸ್ತಿಲಕ, ೧-೪೧

ಎಲೈ ಕವಿತೆ, ನನ್ನ ನಿದ್ರೆಯನ್ನು ದೂರಮಾಡುವೆ. ಶಾಸ್ತ್ರಾಭಿರುಚಿಯನ್ನು ತಡೆಗಟ್ಟುವೆ. ಸಮಸ್ತ ಇಂದ್ರಿಯಗಳೂ ಕೆಲಸ ಮಾಡದಂತೆ ಅವನ್ನು ಅಸಮರ್ಥವಾಗಿ ಮಾಡುತ್ತಿರುವೆ. ಬುದ್ಧಿಯು ಭ್ರಮೆಗೊಳ್ಳುವಂತೆ ತಾಕಲಾಡಿಸುವೆ. ಎಲೆ ಪಿಶಾಚಿ! ಆದರೂ ನಿನ್ನ ಅನುಗ್ರಹದಿಂದ ಲೋಕವು ಧನ್ಯವಾಗಿದೆ!

ನಿಯತಿಕೃತನಿಯಮರಹಿತಾಂ ಹ್ಲಾದೈಕಮಯೀಮನನ್ಯಪರತಂತ್ರಾಂ ।
ನವರಸರುಚಿರಾಂ ನಿರ್ಮಿತಿಮಾದಧತೀ ಭಾರತೀ ಕವೇರ್ಜಯತಿ ॥೨೪

—ಕಾವ್ಯಪ್ರಕಾಶ-೧

ಕವಿಯ ಕಾವ್ಯ ನಿಸರ್ಗಕೃತವಾದ ನಿಯಮಕ್ಕೆ ಒಳಗಾಗಿರುವುದಿಲ್ಲ. ಅದು ಕೇವಲ ಆನಂದಸ್ವರೂಪವಾದುದು. ಅನ್ಯಾಧೀನವಲ್ಲ. ನವರಸಗಳಿಂದ ಮನೋಹರವಾದುದು. ಇಂಥ ಕಾವ್ಯವನ್ನು ನಿರ್ಮಿಸುವ ಕವಿಯ ವಾಣಿ ಜಯಶೀಲೆ.

(ಬ್ರಹ್ಮನ ಸೃಷ್ಟಿಗಿಂತ ಕಾವ್ಯಸೃಷ್ಟಿ ಹೆಚ್ಚಿನದು. ಬ್ರಹ್ಮಸೃಷ್ಟಿ ನಿಸರ್ಗನಿಯಮಕ್ಕೆ ಒಳಪಟ್ಟಿದೆ. ದುಃಖವೂ ಅದರಲ್ಲಿದೆ. ಪರಮಾಣುವೇ ಮೊದಲಾದ ಸಲಕರಣೆಗಳು ಬೇಕಾಗಿರುವುದರಿಂದ ಅನ್ಯಾಧೀನ. ಬ್ರಹ್ಮಸೃಷ್ಟಿಯಲ್ಲಿ ಆರು ರಸಗಳು ಮಾತ್ರ.)

ನೀಲತಯಾ ಪಿಕಕಾಕಂ ಹಂಸಬಕಂ ಸಿತತಯಾ ಸಮಂ ಯೇಷಾಂ ।
ಕಿಂಚಿದ್ಗುಣಸಾಜಾತ್ಯೋಪಹತಮತಿಭ್ಯೋ ನಮಸ್ತೇಷಾಮ್ ॥ ೨೫

—ಆರ್ಯಾಸಪ್ತಶತಿ-೫೭೨

ಕಪ್ಪಾಗಿರುವುದರಿಂದ ಕೋಗಿಲೆ-ಕಾಗೆಗಳೂ, ಬೆಳ್ಳಗಿರುವುದರಿಂದ ಹಂಸ-ಕೊಕ್ಕರೆಗಳೂ ಯಾರಿಗೆ ಸಮವೆನಿಸುತ್ತವೋ, ಸ್ವಲ್ಪಗುಣದ ಸಾಮ್ಯದಿಂದ ಬುದ್ಧಿಗೆಟ್ಟಿರುವ ಅವರಿಗೆ ನಮಸ್ಕಾರ !

**ಪ್ರಜ್ಞಾ ನವನವೋಲ್ಲೇಖಶಾಲಿನೀ ಪ್ರತಿಭಾ ಮತಾ ।**
**ತದನುಪ್ರಾಣನಾಜೀವದ್ವರ್ಣನಾನಿಪುಣಃ ಕವಿಃ ॥ ೨೬**

—ಭಟ್ಟತೌತ

ಹೊಸಹೊಸದಾಗಿ ಉಲ್ಲೇಖಿಸುವ ಸಾಮರ್ಥ್ಯವುಳ್ಳ ಪ್ರಜ್ಞಾಶಕ್ತಿಗೆ ಪ್ರತಿಭೆಯೆಂದು ಹೆಸರು. ಆ ಪ್ರತಿಭೆಯನ್ನವಲಂಬಿಸಿ ಜೀವಂತವಾದ ವರ್ಣನೆಯನ್ನು ಮಾಡುವುದರಲ್ಲಿ ನೈಪುಣ್ಯವಿರತಕ್ಕನು ಕವಿ.

**ಪ್ರಾಚೇತಸವ್ಯಾಸಪರಾಶರಾದ್ಯಾಃ**
**ಪ್ರಾಂಚಃ ಕವೀಂದ್ರಾ ಜಗದಂಚಿತಾಸ್ತೇ ।**
**ಗೋಷ್ಠೀ ನವೀನಾಪಿ ಮಹಾಕವೀನಾಂ**
**ಪೂಜ್ಯಾ ಗುಣಜ್ಞೈರ್ಭುವನೋಪಕರ್ತ್ರೀ ॥ ೨೭**

—ವಿಶ್ವಗುಣಾದರ್ಶ-೫೪೯

ವಾಲ್ಮೀಕಿ, ವ್ಯಾಸ, ಪರಾಶರ ಮೊದಲಾದ ಪುರಾತನ ಕವೀಂದ್ರರು ಜಗತ್ತಿನಲ್ಲಿ ಪರಮ ಪೂಜ್ಯರು. ಹಾಗೆಯೇ ನವೀನ ಮಹಾಕವಿಗಳೂ (ಕಾಳಿದಾಸಾದಿಗಳೂ) ಸಹ ಗುಣಜ್ಞರಿಂದ ಪೂಜ್ಯರಾಗಿ ಪ್ರಪಂಚಕ್ಕೇ ಉಪಕಾರಮಾಡತಕ್ಕವರಾಗಿರುತ್ತಾರೆ.

**ಬೋದ್ಧಾರೋ ಮತ್ಸರಗ್ರಸ್ತಾಃ ಪ್ರಭವಃ ಸ್ಮಯದೂಷಿತಾಃ ।**
**ಅಬೋಧೋಪಹತಾಶ್ಚಾನ್ಯೇ ಜೀರ್ಣಮಂಗೇ ಸುಭಾಷಿತಮ್ ॥ ೨೮**

—ನೀತಿಶತಕ-೨

ಜ್ಞಾನಿಗಳು ಅಸೂಯೆಯಿಂದ ತುಂಬಿದ್ದಾರೆ ; ರಾಜರು ಗರ್ವದಿಂದ ಕಲುಷಿತ ರಾಗಿದ್ದಾರೆ ; ಉಳಿದವರು ತಿಳಿವಳಿಕೆಯಿಲ್ಲದವರಾಗಿದ್ದಾರೆ. ಆದುದರಿಂದ ಸುಭಾಷಿತವು ತಾನು ಹುಟ್ಟಿದ ಮನಸ್ಸಿನಲ್ಲೇ ಲಯ ಹೊಂದಿತು!

**ಮಾಧುರ್ಯಮಕ್ಷರವ್ಯಕ್ತಿಃ ಪದಚ್ಛೇದಸ್ತು ಸುಸ್ವರಃ ।**
**ಧೈರ್ಯಂ ಲಯಸಮರ್ಥಂ ಚ ಷಡೇತೇ ಪಾಠಕಾಗುಣಾಃ ॥ ೨೯**

—ಪಾಣಿನೀಯಶಿಕ್ಷಾ-೩೩

ಇಂಪು, ಅಕ್ಷರಸ್ಫುಟತೆ, ಪದಚ್ಛೇದ, ಸರಿಯಾದ ಸ್ವರ, ಧೈರ್ಯ, ಲಯಯುಕ್ತವಾಗಿ ಹೇಳುವುದು-ಇವು ಆರು ಪಾಠಕನ ಒಳ್ಳೆಯ ಗುಣಗಳು.

**ಯಸ್ತುಷ್ಟೇ ತುಷ್ಟಿಮಾಯಾತಿ ಶೋಕೇ ಶೋಕಮುಪೈತಿ ಚ ।**
**ದೈನ್ಯೇ ದೀನತ್ವಮಭ್ಯೇತಿ ಸ ನಾಟ್ಯೇ ಪ್ರೇಕ್ಷಕಃ ಸ್ಮೃತಃ ॥ ೩೦**

—ನಾಟ್ಯಶಾಸ್ತ್ರ, ೨೭-೫೫

ನಾಟ್ಯಕಾಲದಲ್ಲಿ ನಟವರ್ಗಕ್ಕೆ ಸಂತೋಷವಾದಾಗ ಯಾರಿಗೆ ಸಂತೋಷ ವಾಗುವುದೋ, ಶೋಕವಾದಾಗ ಶೋಕವಾಗುವುದೋ, ನಟವರ್ಗವು ದೀನವಾದಾಗ ಯಾವನು ದೀನನಾಗುವನೋ ಅವನು ಪ್ರೇಕ್ಷಕನೆನಿಸಿಕೊಳ್ಳುತ್ತಾನೆ.

**ರಮಣೀಯಃ ಸ ಹಿ ಪುರುಷೋ ರಮಣೀ ಯತ್ರೈವ ರಜ್ಯತಿ ವಿದಗ್ಧಾ ।**
**ಶ್ಲೋಕಃ ಸ ಏವ ಸುಭಗಶ್ಚಿತ್ತಂ ಸಕ್ತಂ ಹಿ ಯತ್ರ ರಸಿಕಸ್ಯ ॥ ೩೧**

– ವಿಶ್ವಗುಣಾದರ್ಶ–೩೧೭

ಯಾವ ಪುರುಷನಲ್ಲಿ ಚದುರೆಯಾದ ರಮಣಿ ಅನುರಕ್ತಳಾಗಿರುವಳೋ ಅವನೇ ಸುಂದರನಾದ ಪುರುಷ. ಯಾವ ಶ್ಲೋಕದಲ್ಲಿ ರಸಿಕನ ಮನಸ್ಸು ನೆಡುತ್ತದೋ ಅದೇ ಶ್ಲೋಕವೇ ಸುಂದರವಾದುದು.

**ವಾಲ್ಮೀಕಿಗೀತರಘುಪುಂಗವಕೀರ್ತಿಲೇಶೈಃ**
**ತೃಪ್ತಿಂ ಕರೋಮಿ ಕಥಮಪ್ಯಧುನಾ ಬುಧಾನಮ್ ।**
**ಗಂಗಾಜಲೈರ್ಭುವಿ ಭಗೀರಥಯತ್ನಲಬ್ಧೈಃ**
**ಕಿಂ ತರ್ಪಣಂ ನ ವಿದಧಾತಿ ಜನಃ ಪಿತೃಣಾಮ್ ॥ ೩೨**

–ಚಂಪೂರಾಮಾಯಣ, ಬಾಲಕಾಂಡ–೪

ವಾಲ್ಮೀಕಿಯು ಹಾಡಿರುವ ಶ್ರೀರಾಮನ ಕೀರ್ತಿಯ ಒಂದಂಶದಿಂದ ನಾನೂ ಸಹ ಹೇಗಾದರೂ ಪಂಡಿತರನ್ನು ತೃಪ್ತಿಪಡಿಸುತ್ತೇನೆ. ಭಗೀರಥನ ಪ್ರಯತ್ನದಿಂದ ಭೂಮಿಗೆ ಬಂದ ಗಂಗೋದಕದಿಂದ ಜನರು ಪಿತೃಗಳ ತರ್ಪಣವನ್ನು ಮಾಡುವುದಿಲ್ಲವೆ?

**ವ್ಯಾಘ್ರೀ ಯಥಾ ಹರೇತ್ ಪುತ್ರಾನ್ ದಂಷ್ಟ್ರಾಭ್ಯಾಂ ನ ಚ ಪೀಡಯೇತ್ ।**
**ಭೀತಾ ಪತನಭೇದಾಭ್ಯಾಂ ತದ್ವದ್ವರ್ಣಾನ್ ಪ್ರಯೋಜಯೇತ್ ॥ ೩೩**

– ಪಾಣಿನೀಯಶಿಕ್ಷಾ–೨೫

ಹೆಣ್ಣುಹುಲಿ ತನ್ನ ಮರಿಗಳನ್ನು ಕಚ್ಚಿಕೊಂಡು ಒಯ್ಯುತ್ತದೆ. ಆದರೆ ಅವುಗಳನ್ನು ಹಲ್ಲುಗಳಿಂದ ಪೀಡಿಸುವುದಿಲ್ಲ. ಮರಿಗಳು ಕೆಳಗೆ ಬೀಳಬಾರದು, ಅವುಗಳಿಗೆ ಗಾಯವಾಗಲೂ ಬಾರದು ಎಂಬ ಹೆದರಿಕೆಯಿಂದ ಹೇಗೆ ಹಿಡಿದುಕೊಂಡಿರುವುದೋ ಹಾಗೆ ಅಕ್ಷರಗಳನ್ನು ಉಚ್ಚರಿಸಬೇಕು. (ಅಕ್ಷರಗಳನ್ನು ಸ್ಫುಟವಾಗಿ ಉಚ್ಚರಿಸಬೇಕು. ಕರ್ಕಶವಾಗಿ ಕೊರೆಯುವಂತೆ ಉಚ್ಚರಿಸಬಾರದು.)

**ಶಾಸ್ತ್ರೇಷು ದುರ್ಗ್ರಹೋಽಪ್ಯರ್ಥಃ ಸ್ವದತೇ ಕವಿಸೂಕ್ತಿಷು ।**
**ದೃಶ್ಯಂ ಕರಗತಂ ರತ್ನಂ ದಾರುಣಂ ಫಣಿಮೂರ್ಧನಿ ॥ ೩೪**

– ಸಭಾರಂಜನಶತಕ–೧೪

ಶಾಸ್ತ್ರಗಳಲ್ಲಿ ತಿಳಿಯಲು ಕಠಿಣವಾದ ವಿಷಯವು ಕವಿಸೂಕ್ತಿಗಳಲ್ಲಿ ಬಂದಾಗ ಹಿತಕರವಾಗಿ ರುಚಿಸುತ್ತದೆ. ಕೈಯಲ್ಲಿರುವ ರತ್ನ ನೋಡಲು ಸುಂದರವಾಗಿರುತ್ತದೆ. ಅದೇ ಹಾವಿನ ಹೆಡೆಯಲ್ಲಿದ್ದಾಗ ಭೀಕರವಾಗಿರುತ್ತದೆ.

**ಶಾಸ್ತ್ರೋಪಸ್ಕೃತಶಬ್ದಸುಂದರಗಿರಃ ಶಿಷ್ಯ ಪ್ರದೇಯಾಗಮಾಃ**
**ವಿಖ್ಯಾತಾಃ ಕವಯೋ ವಸಂತಿ ವಿಷಯೇ ಯಸ್ಯ ಪ್ರಭೋರ್ನಿರ್ಧನಾಃ ।**
**ತಜ್ಜಾಡ್ಯಂ ವಸುಧಾಧಿಪಸ್ಯ ಕವಯೋ ಹ್ಯರ್ಥಂ ವಿನಾಪೀಶ್ವರಾಃ**
**ಕುತ್ಸ್ಯಾಃ ಸ್ಯುಃ ಕುಪರೀಕ್ಷಕಾ ನ ಮಣಯೋ ಯೈರರ್ಘತಃ ಪಾತಿತಾಃ ॥೩೫**

—ನೀತಿಶತಕ-೧೩

ಶಾಸ್ತ್ರಜ್ಞಾನದಿಂದ ಸುಸಂಸ್ಕೃತವಾದ ಶಬ್ದಗಳಿಂದ ಕೂಡಿದ ಸುಂದರವಾದ ಮಾತುಗಳುಳ್ಳವರೂ, ಶಿಷ್ಯರುಗಳಿಗೆ ಕೊಡಲರ್ಹವಾದ ವಿದ್ಯೆಯುಳ್ಳವರೂ, ಪ್ರಸಿದ್ಧಿ ಹೊಂದಿದ ಕವಿಗಳೂ, ಬಡವರಾಗಿ ಯಾರ ರಾಜ್ಯದಲ್ಲಿದ್ದಾರೋ, ಅದು ಆ ರಾಜನಿಗೇ ಕಳಂಕ. ಏಕೆಂದರೆ, ಹಣವಿಲ್ಲದಿದ್ದರೂ ಕವಿಗಳು ಪಾಂಡಿತ್ಯವೆಂಬ ಐಶ್ವರ್ಯದಿಂದ ಕೂಡಿರುತ್ತಾರೆ. ರತ್ನಗಳಿಗೆ, ಬಹಳ ಕಡಿಮೆ ಬೆಲೆ ಕಟ್ಟಿದರೆ, ನಿಂದೆಗೆ ಗುರಿಯಾಗತಕ್ಕವರು ರತ್ನಪರೀಕ್ಷಕರೇ ವಿನಹ ರತ್ನಗಳಲ್ಲ.

**ಶೀಲಂ ಪ್ರತಿವ್ರತಾಯಾಂ ರೂಪಂ ವೇಶ್ಯಾಸು ಸಂಸ್ಸೃತೌ ವಿದ್ಯಾ ।**
**ಸಂನ್ಯಾಸಿಷು ವೈರಾಗ್ಯಂ ಕಾವ್ಯೇ ಸಾರಶ್ಚಮತ್ಕಾರಃ ॥** ೩೬

—ಆರ್ಯಾಸಪ್ತಶತಿ-೭೧

ಪತಿವ್ರತೆಯಲ್ಲಿ ಶೀಲ, ವೇಶ್ಯೆಯರಲ್ಲಿ ರೂಪ, ಜಗತ್ತಿನಲ್ಲಿ ವಿದ್ಯೆ, ಸಂನ್ಯಾಸಿಗಳಲ್ಲಿ ವೈರಾಗ್ಯ-ಇವು ಸಾರಭೂತವಾದವು. ಕಾವ್ಯದಲ್ಲಿ ರಸಿಕರ ಆನಂದವೇ ಸಾರ.

**ಶೀಲಭಾರವತೀ ಕಾಂತಾ ಪುಷ್ಪಭಾರವತೀ ಲತಾ ।**
**ಅರ್ಥಭಾರವತೀ ವಾಣೀ ಭಜತೇ ಕಾಮಪಿ ಶ್ರೀಯಮ್ ॥** ೩೭

—ರಸಗಂಗಾಧರ

ಸುಶೀಲೆಯಾದ ಕಾಂತೆ, ಹೂಗಳಿಂದ ಬಳುಕುವ ಬಳ್ಳಿ, ಅರ್ಥಪುಷ್ಟವಾದ ವಾಣಿ-ಇವು ಒಂದು ಅಪೂರ್ವ ಶೋಭೆಯನ್ನು ಪಡೆಯುತ್ತವೆ.

**ಸಾಹಿತ್ಯವಿದ್ಯಾಹೀನಾನಾಂ ಸರ್ವಶಾಸ್ತ್ರವಿದಾಮಪಿ ।**
**ಸಮಾಜಂ ಪರಿಪಶ್ಯಂತಿ ಸಮಜಂ ಬುದ್ಧಿಶಾಲಿನಃ ॥** ೩೮

—ಸಭಾರಂಜನಶತಕ-೧೬

ಸರ್ವಶಾಸ್ತ್ರಗಳನ್ನು ಬಲ್ಲವರಾದರೂ ಸಾಹಿತ್ಯಜ್ಞಾನವಿಲ್ಲದಿದ್ದರೆ ಅವರ ಸಮಾಜವನ್ನು ಸಮಜ (ಪಶುಗಳ ಸಮುದಾಯ) ಎಂದು ಬುದ್ಧಿಶಾಲಿಗಳು ತಿಳಿಯುತ್ತಾರೆ!

**ಸ್ವಾದುಕಾವ್ಯರಸೋನ್ಮಿಶ್ರಂ ವಾಕ್ಯಾರ್ಥಮುಪಭುಂಜತೇ ।**
**ಪ್ರಥಮಾಲೀಢಮಧವಃ ಪಿಬಂತಿ ಕಟುಭೇಷಜಮ್ ॥** ೩೯

—ಕಾವ್ಯಪ್ರದೀಪ

ರಸವತ್ತಾಗಿ ಮನಸ್ಸಿಗೆ ಹಿಡಿಯುವಂತೆ ವರ್ಣಿಸಿದ ವಾಕ್ಯಾರ್ಥವನ್ನು ಜನರು ಸ್ವೀಕರಿಸುತ್ತಾರೆ. ಮೊದಲು ಜೇನನ್ನು ಸವಿದವರು ಕಹಿಯಾದ ಔಷಧವನ್ನು ಕುಡಿಯುತ್ತಾರೆ.



# ೩. ಸಂಸಾರ

**ಅರ್ಥಾಗಮೋ ನಿತ್ಯಮರೋಗಿತಾ ಚ**
**ಪ್ರಿಯಾ ಚ ಭಾರ್ಯಾ ಪ್ರಿಯವಾದಿನೀ ಚ ।**
**ವಶ್ಯಶ್ಚ ಪುತ್ರೋಽರ್ಥಕರೀ ಚ ವಿದ್ಯಾ**
**ಷಡ್ ಜೀವಲೋಕಸ್ಯ ಸುಖಾನಿ ರಾಜನ್ ॥** ೧

– ಮಹಾಭಾರತ, ಉದ್ಯೋಗ, ೩೩–೮೨

ಧನಪ್ರಾಪ್ತಿ, ಆರೋಗ್ಯ, ಪ್ರಿಯಳೂ, ಪ್ರಿಯಂವದೆಯೂ ಆದ ಹೆಂಡತಿ, ವಿನೀತನಾದ ಮಗ, ಧನಾರ್ಜನೆಗೆ ಉಪಯುಕ್ತವಾದ ವಿದ್ಯೆ–ಇವು ಆರು ಜನತೆಗೆ ಸುಖಕರವಾದವು.

**ಅದತ್ತೇತ್ಯಾಗತಾ ಲಜ್ಜಾ ದತ್ತೇತಿ ವ್ಯಥಿತಂ ಮನಃ ।**
**ಧರ್ಮಸ್ನೇಹಾಂತರೇ ನ್ಯಸ್ತಾಃ ದುಃಖಿತಾಃ ಖಲು ಮಾತರಃ ॥** ೨

–ಪ್ರತಿಜ್ಞಾಯೌಗಂಧರಾಯಣ, ೨–೭

ಬೆಳೆದ ಹೆಣ್ಣುಮಗಳಿಗೆ ಮದುವೆಯಾಗಲಿಲ್ಲವೆಂದರೆ ತಾಯಿಗೆ ನಾಚಿಕೆಯಾಗುತ್ತದೆ. ಮದುವೆಯಾದರೆ ಮಗಳ ಅಗಲಿಕೆಯಿಂದ ತಾಯಿಯ ಮನಸ್ಸು ನೋಯುತ್ತದೆ. ಹೀಗಾಗಿ ಒಂದು ಕಡೆ ಕರ್ತವ್ಯ, ಇನ್ನೊಂದು ಕಡೆ ಪ್ರೀತಿ, ಇವೆರಡರ ನಡುವೆ ಸಿಕ್ಕಿಕೊಂಡ ತಾಯಿಯರ ಮನಸ್ಸು ದುಃಖಿಸುತ್ತದೆ.

**ಅನಿಚ್ಛಂತೋಽಪಿ ವಿನಯಂ ವಿದ್ಯಾಭ್ಯಾಸೇನ ಬಾಲಕಾಃ ।**
**ಭೇಷಜೇನೇವ ನೈರುಜ್ಯಂ ಪ್ರಾಪಣೀಯಾಃ ಪ್ರಯತ್ನತಃ ॥** ೩

–ಹರಿಹರ ಸುಭಾಷಿತ, ೨–೩೯

ಔಷಧವನ್ನು ಕೊಟ್ಟು ರೋಗವನ್ನು ಪರಿಹರಿಸುವಂತೆ, ಬಾಲಕರು ಇಚ್ಛಿಸದಿದ್ದರೂ ಅವರಿಗೆ ಪ್ರಯತ್ನಪೂರ್ವಕ ವಿದ್ಯಾಭ್ಯಾಸವನ್ನು ಮಾಡಿಸಿ ನಯನೀತಿಗಳನ್ನು ಕಲಿಸಿಕೊಡಬೇಕು.

**ಅನುಕೂಲಾಂ ವಿಮಲಾಂಗೀಂ ಕುಲಜಾಂ ಕುಶಲಾಂ ಸುಶೀಲಸಂಪನ್ನಾಂ ।**
**ಪಂಚಲಕಾರಾಂ ಭಾರ್ಯಾಂ ಪುರುಷಃ ಪುಣ್ಯೋದಯಾಲ್ಲಭತೇ ॥** ೪

–ತ್ರಿಶತೀವ್ಯಾಖ್ಯಾ–ವೈರಾಗ್ಯ–೨೦

ಅನುಕೂಲೆಯೂ ವಿಮಲಾಂಗಿಯೂ ಉತ್ತಮ ಕುಲಜಾತಳೂ ಕುಶಲಬುದ್ಧಿಯುಳ್ಳವಳೂ ಶೀಲವತಿಯೂ ಆದ ಐದು 'ಲ' ಕಾಲವಿರುವ ಹೆಂಡತಿ ಪುರುಷನ ಪುಣ್ಯದಿಂದ ಲಭಿಸುತ್ತಾಳೆ.

**ಅಪ್ರಾರ್ಥಿತಾನಿ ದುಃಖಾನಿ ಯಥೈವಾಯಾಂತಿ ದೇಹಿನಾಂ ।**
**ಸುಖಾನ್ಯಪಿ ತಥಾ ಮನ್ಯೇ ದೈನ್ಯಮತ್ರಾತಿರಿಚ್ಯತೇ ॥** ೫

– ಸುಭಾಷಿತಸುಧಾನಿಧಿ

ಬಯಸದೆ ಇದ್ದರೂ ದುಃಖಗಳು ಹೇಗೆ ಮನುಷ್ಯರಿಗೆ ಬಂದು ಸೇರುತ್ತವೋ ಸುಖಗಳೂ ಹಾಗೆಯೇ ಎಂದು ನಾನು ತಿಳಿಯುತ್ತೇನೆ. ದುಃಖದಲ್ಲಿ ದೈನ್ಯ ಒಂದು ಅಧಿಕ.

**ಅಸಂತುಷ್ಟಾ ದ್ವಿಜಾ ನಷ್ಟಾಃ ಸಂತುಷ್ಟಶ್ಚ ಮಹೀಪತಿಃ ।**
**ಸಲಜ್ಜಾ ಗಣಿಕಾ ನಷ್ಟಾ ನಿರ್ಲಜ್ಜಾ ಚ ಕುಲಾಂಗನಾ ॥** ೬

–ಸಮಯೋಚಿತಪದ್ಯಮಾಲಿಕಾ

ತೃಪ್ತಿಯಿಲ್ಲದ ವಿಪ್ರರು ನಾಶವಾಗುತ್ತಾರೆ. ತೃಪ್ತಿಯಿರುವ ರಾಜನು ನಾಶವಾಗುತ್ತಾನೆ. ನಾಚಿಕೆಪಡುವ ಸೂಳೆ ಕೆಡುತ್ತಾಳೆ. ನಾಚಿಕೆಯಿಲ್ಲದ ಕುಲಸ್ತ್ರೀ ಕೆಡುತ್ತಾಳೆ.

**ಅಸಂತುಷ್ಟೋಽಸಕೃಲ್ಲೋಕಾನಾಪ್ನೋತ್ಯಪಿ ಸುರೇಶ್ವರಃ ।**
**ಅಕಿಂಚನೋಽಪಿ ಸಂತುಷ್ಟಃ ಶೇತೇ ಸರ್ವಾಂಗವಿಜ್ವರಃ ॥** ೭

–ಭಾಗವತ, ೧೦–೫೨–೩೨

ದೇವತೆಗಳಿಗೆ ಒಡೆಯನಾದರೂ ಕೂಡ ಅತೃಪ್ತನಾದರೆ ಅನೇಕ ಜನ್ಮಗಳನ್ನು ಪಡೆಯಬೇಕಾಗುತ್ತದೆ. ಬಡವನಾದರೂ ಕೂಡ ತೃಪ್ತನಾದರೆ, ಎಲ್ಲಾ ವಿಧದಲ್ಲಿಯೂ ಪ್ರಶಾಂತತೆಯಿಂದ ಇರುತ್ತಾನೆ.

**ಅಹಂಮಮಾಭಿಮಾನೋತ್ಥೈಃ ಕಾಮಲೋಭಾದಿಭಿರ್ಮಲೈಃ ।**
**ವೀತಃ ಯದಾ ಮನಃ ಶುದ್ಧಮದುಃಖಮಸುಖಂ ಸಮಮ್ ॥** ೮

–ಭಾಗವತ, ೩–೨೫–೧೬

ನಾನು, ನನ್ನದು ಎಂಬ ಅಭಿಮಾನದಿಂದುಂಟಾದ ಕಾಮ, ದುರಾಸೆ, ಮೊದಲಾದ ಕೊಳೆಗಳಿಂದ ಮನಸ್ಸು ಯಾವಾಗ ಬಿಡಲ್ಪಟ್ಟು ಶುದ್ಧವಾಗುತ್ತದೋ ಆಗ ಸುಖವಾಗಲೀ, ದುಃಖವಾಗಲೀ, ಸಮವೆನಿಸುತ್ತದೆ.

**ಆದಿತ್ಯಸ್ಯ ಗತಾಗತೈರಹರಹಃ ಸಂಕ್ಷೀಯತೇ ಜೀವಿತಂ**
**ವ್ಯಾಪರೈರ್ಬಹುಕಾರ್ಯಭಾರಗುರುಭಿಃ ಕಾಲೋ ನ ವಿಜ್ಞಾಯತೇ ।**
**ದೃಷ್ಟ್ವಾ ಜನ್ಮಜರಾವಿಪತ್ತಿಮರಣಂ ತ್ರಾಸಶ್ಚ ನೋತ್ಪದ್ಯತೇ**
**ಪೀತ್ವಾ ಮೋಹಮಯೀಂ ಪ್ರಮಾದಮದಿರಾಮುನ್ಮತ್ತಭೂತಂ ಜಗತ್ ॥**

೯

– ವೈರಾಗ್ಯಶತಕ–೭

ಸೂರ್ಯನ ಚಲನವಲನಗಳಿಂದ ಪ್ರತಿದಿನವೂ ಬಾಳು ಕ್ಷಯಿಸುತ್ತದೆ. ನಾನಾ ವಿಧವಾದ ಜವಾಬ್ದಾರಿಗಳಿಂದ ಭಾರವಾದ ಕೆಲಸಗಳಿಂದ ಕಾಲವು ತಿಳಿಯುವುದಿಲ್ಲ. ಹುಟ್ಟು, ಮುಪ್ಪು, ಕಷ್ಟ, ಸಾವುಗಳನ್ನು ನೋಡಿ ಭಯವೂ ಉಂಟಾಗುವುದಿಲ್ಲ. ಮೋಹಮಯವಾದ ಪ್ರಮಾದವೆಂಬ ಹೆಂಡವನ್ನು ಕುಡಿದು ಈ ಪ್ರಪಂಚವು ಹುಚ್ಚಾಗಿದೆ.

**ಆಯುರ್ವರ್ಷಶತಂ ನೃಣಾಂ ಪರಿಮಿತಂ ರಾತ್ರೌತದರ್ಧಂ ಗತಂ**
**ತಸ್ಯಾರ್ಧಸ್ಯ ಪರಸ್ಯ ಚಾರ್ಧಮಪರಂ ಬಾಲತ್ವವೃದ್ಧತ್ವಯೋಃ ।**
**ಶೇಷಂ ವ್ಯಾಧಿವಿಯೋಗದುಃಖಭರಿತಂ ಸೇವಾದಿಭಿರ್ನೀಯತೇ**
**ಜೀವೇ ವಾರಿತರಂಗಚಂಚಲತರೇ ಸೌಖ್ಯಂ ಕುತಃ ಪ್ರಾಣಿನಾಮ್ ॥ ೧೦**

—ವೈರಾಗ್ಯಶತಕ-೧೦೬

ಮನುಷ್ಯರ ಆಯುಸ್ಸಿನ ಪರಿಮಿತಿ ಒಂದು ನೂರು ವರ್ಷಗಳು. ಅದರಲ್ಲಿ ಅರ್ಧಭಾಗವು ರಾತ್ರಿಯಲ್ಲಿ ಕಳೆದುಹೋಗುತ್ತದೆ. ಉಳಿದ ಅರ್ಧದಲ್ಲಿ ಅರ್ಧಬಾಲ್ಯದಲ್ಲಿಯೂ ಮುಪ್ಪಿನಲ್ಲಿಯೂ ಹೋಗುತ್ತದೆ. ಇನ್ನುಳಿದುದು ರೋಗ, ವಿರಹ, ದುಃಖ, ಸೇವೆ ಮೊದಲಾದುವುಗಳಿಂದ ಹೋಗುತ್ತದೆ. ನೀರಿನ ಅಲೆಗಳಿಗಿಂತಲೂ ಹೆಚ್ಚು ಚಂಚಲವಾದ ಈ ಬಾಳಿನಲ್ಲಿ ಪ್ರಾಣಿಗಳಿಗೆ ಸುಖವೆಲ್ಲಿಯದು?

**ಆರೋಗ್ಯಮಾನೃಣ್ಯಮವಿಪ್ರವಾಸಃ**
**ಸದ್ಭಿರ್ಮನುಷ್ಯೈಃ ಸಹ ಸಂಪ್ರಯೋಗಃ ।**
**ಸ್ವಪ್ರತ್ಯಯಾ ವೃತ್ತಿರಭೀತವಾಸಃ**
**ಷಡ್ ಜೀವಲೋಕಸ್ಯ ಸುಖಾನಿ ರಾಜನ್ ॥ ೧೧**

—ಮಹಾಭಾರತ, ಉದ್ಯೋಗ. ೩೩-೮೯

ಆರೋಗ್ಯ, ಸಾಲವಿಲ್ಲದಿರುವುದು, ಪ್ರವಾಸಮಾಡದಿರುವುದು, ಸಜ್ಜನರ ಸಹವಾಸ, ಸ್ವತಂತ್ರವಾದ ಜೀವನೋಪಾಯ, ನಿರ್ಭಯಸ್ಥಳದಲ್ಲಿ ವಾಸ-ಈ ಆರೂ, ಜನರಿಗೆ ಸುಖಕರವಾದವು.

**ಇಂದ್ರಿಯೈರ್ವಿಷಯಾಕೃಷ್ಟೈರಾಕ್ಷಿಪ್ತಂ ಧ್ಯಾಯತಾಂ ಮನಃ ।**
**ಚೇತನಾಂ ಹರತೇ ಬುದ್ಧೇಃ ಸ್ತಂಬಸ್ತೋಯಮಿವ ಹ್ರದಾತ್ ॥ ೧೨**

—ಭಾಗವತ, ೪-೨೨-೩೦

ವಿಷಯಸುಖಗಳ ಆಕರ್ಷಣೆಗೊಳಪಟ್ಟ ಇಂದ್ರಿಯಗಳಿಂದ ಧ್ಯಾನಮಾಡುವವರ ಮನಸ್ಸು ಚಂಚಲವಾಗುತ್ತದೆ. ಮತ್ತು ಮಡುವಿನಿಂದ ನೀರನ್ನು ಜೊಂಡುಹುಲ್ಲು ಹೀರುವಂತೆ ಬುದ್ಧಿಯ ಚೈತನ್ಯಶಕ್ತಿಯನ್ನು ಅಪಹರಿಸುತ್ತದೆ.

ಈರ್ಷ್ಯೀ ಘೃಣೀ ತ್ವಸಂತುಷ್ಟಃ ಕ್ರೋಧನೋ ನಿತ್ಯಶಂಕಿತಃ ।
ಪರಭಾಗ್ಯೋಪಜೀವೀ ಚ ಷಡೇತೇ ದುಃಖಭಾಗಿನಃ ॥ ೧೩

—ಹಿತೋಪದೇಶ, ಮಿತ್ರಲಾಭ-೧೯

ಅಸೂಯಾಳು, ಕನಿಕರತೋರುವವನು, ಸಂತುಷ್ಟಿ ಇಲ್ಲದವನು, ಕೋಪಿಷ್ಠನು, ಯಾವಾಗಲೂ ಸಂದೇಹಪಡುವವನು, ಇನ್ನೊಬ್ಬರ ಐಶ್ವರ್ಯದಮೇಲೆ ಬದುಕುವವನು-ಈ ಆರು ಜನರೂ ದುಃಖಭಾಗಿಗಳು.

ಏಕೋ ರಸಃ ಕರುಣ ಏವ ನಿಮಿತ್ತಭೇದಾತ್
ಭಿನ್ನಃ ಪೃಥಕ್ ಪೃಥಗಿವಾಶ್ರಯತೇ ವಿವರ್ತಾನ್ ।
ಆವರ್ತಬುದ್ಬುದತರಂಗಮಯಾನ್ ವಿಕಾರಾನ್
ಅಂಭೋ ಯಥಾ ಸಲಿಲಮೇವ ಹಿ ತತ್ಸಮಸ್ತಮ್ ॥ ೧೪

—ಉತ್ತರರಾಮಚರಿತ, ೩-೪೭

ಕರುಣವೆಂಬ ಒಂದೇ ರಸವು ಬೇರೆ ಬೇರೆ ಕಾರಣಗಳಿಂದ ಬೇರೆ ಬೇರೆ ರೂಪವಾಗಿ ಕಾಣುತ್ತದೆ. ಒಂದೇ ನೀರು ಸುಳಿಯಾಗಿಯೂ, ನೀರ್ಗುಳ್ಳೆಗಳಾಗಿಯೂ, ಅಲೆಗಳಾಗಿಯೂ ಕಾಣುತ್ತದೆ. ಅದೆಲ್ಲವೂ ನೀರೇ ಅಲ್ಲವೇ.

ಕ್ವಚಿದ್ವಿದ್ವದ್ಗೋಷ್ಠೀ ಕ್ವಚಿದಪಿ ಸುರಾಮತ್ತಕಲಹಃ
ಕ್ವಚಿದ್ವೀಣಾನಾದಃ ಕ್ವಚಿದಪಿ ಚ ಹಾಹೇತಿ ರುದಿತಂ ।
ಕ್ವಚಿದ್ರಮ್ಯಾ ರಾಮಾ ಕ್ವಚಿದಪಿ ಜರಾಜರ್ಜರತನುಃ
ನ ಜಾನೇ ಸಂಸಾರಃ ಕಿಮಮೃತಮಯಃ ಕಿಂ ವಿಷಮಯಃ ॥ ೧೫

—ಸುಭಾಷಿತರತ್ನ ಭಾಂಡಾಗಾರ

ಒಂದು ಕಡೆ ವಿದ್ವಾಂಸರ ಗೋಷ್ಠಿ. ಇನ್ನೊಂದು ಕಡೆ ಹೆಂಡಕುಡುಕರ ಜಗಳ. ಒಂದೆಡೆ ವೀಣಾನಾದ. ಇನ್ನೊಂದೆಡೆ ಹಾಹಾ ಎಂದು ರೋದನ. ಒಂದು ಕಡೆ ಸುಂದರಿಯಾದ ತರುಣಿ. ಇನ್ನೊಂದು ಕಡೆ ಮುಪ್ಪಿನಿಂದ ಸೊರಗಿದ ಮುದುಕಿ. ಈ ಸಂಸಾರ ಅಮೃತಮಯವೋ, ವಿಷಮಯವೋ-ಕಾಣೆನು.

ಕ್ಷಣಂ ಬಾಲೋ ಭೂತ್ವಾ ಕ್ಷಣಮಪಿ ಚ ಯುವಾ ಕಾಮರಸಿಕಃ
ಕ್ಷಣಂ ವಿತ್ತೈರ್ಹೀನಃ ಕ್ಷಣಮಪಿ ಚ ಸಂಪೂರ್ಣವಿಭವಃ ।
ಜರಾಜೀರ್ಣೈರಂಗೈರ್ನಟ ಇವ ವಲೀಮಂಡಿತತನುಃ
ನರಃ ಸಂಸಾರಾಂತೇ ವಿಶತಿ ಯಮಧಾನೀಯವನಿಕಾಮ್ ॥ ೧೬

—ವೈರಾಗ್ಯಶತಕ, ೧೧೪

ಒಂದು ಸ್ವಲ್ಪಕಾಲ ಹುಡುಗನಾಗಿ, ಆಮೇಲೆ ಸ್ವಲ್ಪಕಾಲ ಯುವಕನಾಗಿ ಕಾಮಗಳನ್ನು ಅನುಭವಿಸಿ, ಅನಂತರ ಸ್ವಲ್ಪದಿನಗಳು ಹಣವಿಲ್ಲದೆಯೂ, ಸ್ವಲ್ಪದಿನಗಳು ಸಂಪೂರ್ಣ

ಧನಿಕನಾಗಿ, ಮುಪ್ಪಿನಿಂದ ಸೊರಗಿದ ಸುಕ್ಕುಹಿಡಿದ ದೇಹವುಳ್ಳವನಾಗಿ, ರಂಗಸ್ಥಲದ ಮೇಲೆ ಬರುವ ನಟನಂತೆ ಮನುಷ್ಯನು ಸಂಸಾರದ ಕೊನೆಯಲ್ಲಿ ಯಮಪುರಿಯ ತೆರೆಯೊಳಗೆ ಮರೆಯಾಗುತ್ತಾನೆ.

**ಕ್ಷಾಂತಂ ನ ಕ್ಷಮಯಾ ಗೃಹೋಚಿತಸುಖಂ ತ್ಯಕ್ತಂ ನ ಸಂತೋಷತಃ**
**ಸೋಢಾ ದುಸ್ಸಹಶೀತವಾತತಪನಕ್ಲೇಶಾ ನ ತಪ್ತಂ ತಪಃ ।**
**ಧ್ಯಾತಂ ವಿತ್ತಮಹರ್ನಿಶಂ ನಿಯಮಿತಪ್ರಾಣೈರ್ನ ಶಂಭೋಃ ಪದಂ**
**ತತ್ತತ್ಕರ್ಮ ಕೃತಂ ಯದೇವ ಮುನಿಭಿಸ್ತೈಸ್ತೈಃ ಫಲೈರ್ವಂಚಿತಾಃ ॥ ೧೭**

–ವೈರಾಗ್ಯಶತಕ, ೧೩

ಗ್ರಹಸ್ಥಾಶ್ರಮದ ಸುಖವನ್ನು ಸಹಿಸಲೂ ಇಲ್ಲ. ಬೇಡವೆಂದು ಸಂತೋಷದಿಂದ ಬಿಡಲೂ ಇಲ್ಲ. ಸಹಿಸಲು ಅಸದಳವಾದ ಚಳಿ, ಗಾಳಿ, ಬಿಸಿಲು ಮೊದಲಾದ ಕ್ಲೇಶಗಳನ್ನು ಸಹಿಸಿದ್ದಾಯಿತು. ಆದರೆ ತಪಸ್ಸನ್ನು ಮಾಡಲಿಲ್ಲ. ಹಗಲೂ ರಾತ್ರಿ ಹಣವನ್ನು ಧ್ಯಾನಿಸಿದ್ದಾಯಿತು. ದೇವರನ್ನು ಧ್ಯಾನಿಸಲಿಲ್ಲ. ಋಷಿಗಳು ಯಾವ ಯಾವ ಕ್ಲೇಶಗಳನ್ನು ಸಹಿಸಿದರೋ ಅದೆಲ್ಲವನ್ನೂ ಅನುಭವಿಸಿದ್ದಾಯಿತು. ಆದರೆ ಋಷಿಗಳಿಗೆ ಸಿಕ್ಕ ಫಲ ನಮಗಿಲ್ಲದೇ ಹೋಯಿತು.

**ಕ್ಷುತ್ತೃಷ್ಣೋಪಶಮಃ ತದ್ವತ್ ಶೀತಾದ್ಯುಪಶಮಂ ಸುಖಂ ।**
**ಮನ್ಯತೇ ಬಾಲಬುದ್ಧಿತ್ವಾತ್ ದುಃಖಮೇವ ಹಿ ತತ್ಪುನಃ ॥ ೧೮**

–ವಿಷ್ಣುಪುರಾಣ, ೧–೧೭–೬೧

ಹಸಿವು ಬಾಯಾರಿಕೆಗಳ ಉಪಶಮ ಮತ್ತು ಚಳಿ ಮೊದಲಾದವುಗಳ ಉಪಶಮ ಇವನ್ನೇ ಬುದ್ಧಿಯಿಲ್ಲದವರು ಸುಖವೆಂದು ಭಾವಿಸುತ್ತಾರೆ. ಅವುಗಳೂ ಸಹ ದುಃಖವೇ!

**ಕೋ ಗೃಹೇಷು ಪುಮಾನ್ ಸಕ್ತಮಾತ್ಮಾನಮಜಿತೇಂದ್ರಿಯಃ ।**
**ಸ್ನೇಹಪಾಶೈರ್ದೃಢೈರ್ಬದ್ಧಮುತ್ಸಹೇತ ವಿಮೋಚಿತುಮ್ ॥ ೧೯**

– ಭಾಗವತ, ೭–೬–೯

ಇಂದ್ರಿಯಗಳನ್ನು ಗೆಲ್ಲದೇ ಇರುವ ಯಾವ ಮನುಷ್ಯನು ತಾನೇ ಸಂಸಾರದಲ್ಲಿ ಆಸಕ್ತಿಯಿಂದ ಕೂಡಿ ಸ್ನೇಹಪಾಶಗಳಿಂದ ಕಟ್ಟಲ್ಪಟ್ಟಿರುವ ತನ್ನನ್ನು ಬಿಡಿಸಲು ಶಕ್ತನಾದಾನು?

**ಗೃಹೇ ವಾಸಃ ಸುಖಾರ್ಥೋ ಹಿ ಪತ್ನೀಮೂಲಂ ಚ ತತ್ಸುಖಮ್ ।**
**ಅನುಕೂಲಕಲತ್ರಸ್ಯ ಸ್ವರ್ಗಸ್ತೇನ ನ ಸಂಶಯಃ ।**
**ಪ್ರತಿಕೂಲಕಲತ್ರಸ್ಯ ನರಕೋ ನಾತ್ರ ಸಂಶಯಃ ॥ ೨೦**

– ದಕ್ಷ

ಮನೆಯಲ್ಲಿ ವಾಸವಾಡುವುದು ಸುಖಕ್ಕಾಗಿಯಷ್ಟೆ. ಆ ಸುಖ ಪತ್ನೀಮೂಲಕವಾದದ್ದು. ಹೆಂಡತಿ ಅನುಕೂಲಳಾಗಿದ್ದರೆ ಅದರಿಂದ ಸ್ವರ್ಗವೇ. ಹೆಂಡತಿ ಪ್ರತಿಕೂಲಳಾಗಿದ್ದರೆ ನರಕವೇ. ಇದರಲ್ಲಿ ಸಂದೇಹವಿಲ್ಲ.

ಚತ್ವಾರಿ ತೇ ತಾತ ಗೃಹೇ ವಸಂತು
ಶ್ರಿಯಾಭಿಜುಷ್ಟಸ್ಯ ಗೃಹಸ್ಥಧರ್ಮೇ ।
ವೃದ್ಧೋ ಜ್ಞಾತಿರವಸನ್ನಃ ಕುಲೀನಃ
ಸದಾ ದರಿದ್ರೋ ಭಗಿನೀ ಚಾನಪತ್ಯಾ ॥ ೨೧

—ಮಹಾಭಾರತ, ಉದ್ಯೋಗ. ೩೩-೭೦

ಅಯ್ಯಾ, ಗೃಹಸ್ಥಧರ್ಮದಲ್ಲಿ ಶೋಭಿಸುತ್ತಿರುವ ನಿನ್ನ ಮನೆಯಲ್ಲಿ ಈ ನಾಲ್ವರು ವಾಸವಾಗಿರಲಿ-ಮುದುಕನಾದ ಜ್ಞಾತಿ, ಕಷ್ಟಕ್ಕೆ ಸಿಕ್ಕಿರುವ ಉತ್ತಮ ವಂಶದವ, ಸದಾ ದರಿದ್ರ, ಸಂತತಿ ಇಲ್ಲದ ಸೋದರಿ.

ಜನ್ಮೇದಂ ವಂಧ್ಯತಾಂ ನೀತಂ ಭವಭೋಗೋಪಲಿಪ್ಸಯಾ ।
ಕಾಚಮೂಲ್ಯೇನ ವಿಕ್ರೀತೋ ಹಂತ ಚಿಂತಾಮಣಿರ್ಮಯಾ ॥ ೨೨

—ಶಾಂತಿಶತಕ,೧೨

ಸಂಸಾರದ ಸುಖಭೋಗಗಳಲ್ಲಿ ಆಸಕ್ತಿಯಿಂದ ಈ ಜನ್ಮವು ವ್ಯರ್ಥವಾಯಿತು. ಚಿಂತಾಮಣಿಯನ್ನು ಗಾಜಿನ ಬೆಲೆಗೆ ಮಾರಿದಂತಾಯಿತು.

ತದಾ ರಮ್ಯಾಣ್ಯರಮ್ಯಾಣಿ ಪ್ರಿಯಾಃ ಶಲ್ಯಂ ತದಾಸವಃ ।
ತದೈಕಾಕೀ ಸ ಬಂಧುಃ ಸನ್ನಿಷ್ಟೇನ ರಹಿತೋ ಯದಾ ॥ ೨೩

—ಕಿರಾತಾರ್ಜುನೀಯ, ೧೧-೨೮

ನಮಗೆ ಬೇಕಾದ ವಸ್ತುವಿಲ್ಲದಿದ್ದರೆ, ಸುಂದರವಾದ ವಸ್ತುವೂ ವಿಕಾರವಾಗಿ ಕಾಣಿಸುತ್ತದೆ. ಪ್ರಿಯವಾದ ಪ್ರಾಣವೂ ಮುಳ್ಳಿನಂತೆ ಯಾತನೆ ಕೊಡುತ್ತದೆ. ನೆಂಟರಿದ್ದರೂ ಒಂಟಿಗನ ಹಾಗೆ ಬೇಸರವಾಗುತ್ತದೆ.

ತಸ್ಮಾತ್ ದುಃಖಾತ್ಮಕಂ ನಾಸ್ತಿ ನ ಚ ಕಿಂಚಿತ್ಸುಖಾತ್ಮಕಂ ।
ಮನಸಃ ಪರಿಣಾಮೋಽಯಂ ಸುಖದುಃಖಾದಿಲಕ್ಷಣಃ ॥ ೨೪

—ವಿಷ್ಣುಪುರಾಣ, ೨-೬-೪೭

ಯಾವುದೂ ದುಃಖಕ್ಕಾಗಲೀ ಸುಖಕ್ಕಾಗಲೀ ಕಾರಣವಲ್ಲ. ಸುಖದುಃಖಗಳು ಮನಸ್ಸಿನ ಪರಿಣಾಮವನ್ನವಲಂಬಿಸಿವೆ.

ತಾಪತ್ರಯೇಣಾಭಿಹತಂ ಯದೇತದಖಿಲಂ ಜಗತ್ ।
ತದಾ ಶೋಚ್ಯೇಷು ಭೂತೇಷು ದ್ವೇಷಂ ಪ್ರಾಜ್ಞಃ ಕರೋತಿ ಕಃ ॥ ೨೫

—ವಿಷ್ಣುಪುರಾಣ. ೧-೧೭-೮೦

ಇಡೀ ಜಗತ್ತು ನಾನಾ ಬಗೆಯ ದುಃಖಗಳಿಂದ ತುಂಬಿದೆ. ಎಲ್ಲ ಪ್ರಾಣಿಗಳೂ ಶೋಚನೀಯ ಸ್ಥಿತಿಯಲ್ಲಿವೆ. ಹೀಗಿರುವಾಗ ತಿಳಿದವನು ಯಾವನು ತಾನೇ ಅವುಗಳನ್ನು ಮತ್ತೆ ದ್ವೇಷಿಸುತ್ತಾನೆ ?

ತೃಷಾ ಶುಷ್ಯತ್ಯಾಸ್ಯೇ ಪಿಬತಿ ಸಲಿಲಂ ಸ್ವಾದು ಸುರಭಿ
ಕ್ಷುಧಾರ್ತಃ ಸನ್ ಶಾಲೀನ್ ಕವಲಯತಿ ಶಾಕಾದಿವಳಿತಾನ್ ।
ಪ್ರದೀಪ್ತೇ ರಾಗಾಗ್ನೌ ಸುದೃಢತರಮಾಶ್ಲಿಷ್ಯತಿ ವಧೂಂ
ಪ್ರತೀಕಾರಂ ವ್ಯಾಧೇಃ ಸುಖಮಿತಿ ವಿಪರ್ಯಸ್ಯತಿ ಜನಃ ॥೨೬

—ವೈರಾಗ್ಯಶತಕ-೯೧

ಮನುಷ್ಯನು ಬಾಯಾರಿಕೆಯಿಂದ ಬಾಯೊಣಗಲಾಗಿ ಸುವಾಸನೆಯಿಂದ ಕೂಡಿದ ಸಿಹಿಯಾದ ನೀರನ್ನು ಕುಡಿಯುತ್ತಾನೆ. ಹಸಿವಿನಿಂದ ಪೀಡಿತನಾಗಿ ತರಕಾರಿಗಳಿಂದ ಕೂಡಿದ ಅನ್ನವನ್ನು ತಿನ್ನುತ್ತಾನೆ. ಕಾಮದ ಬೆಂಕಿಯು ಜ್ವಲಿಸಲಾಗಿ ಪ್ರಿಯಳನ್ನು ಬಿಗಿದಪ್ಪುತ್ತಾನೆ. ಹೀಗೆ ರೋಗದ ಪ್ರತೀಕಾರವನ್ನೇ ಸುಖವೆಂದು ತಪ್ಪಾಗಿ ತಿಳಿದುಕೊಂಡಿದ್ದಾನೆ.

ದಲತಿ ಹೃದಯಂ ಶೋಕೋದ್ವೇಗಾದ್ದ್ವಿಧಾ ನ ತು ಭಿದ್ಯತೇ
ವಹತಿ ವಿಕಲಃ ಕಾಯೋ ಮೋಹಂ ನ ಮುಂಚತಿ ಚೇತನಾಂ ।
ಜ್ವಲಯತಿ ತನೂಮಂತರ್ದಾಹಃ ಕರೋತಿ ನ ಭಸ್ಮಸಾತ್
ಪ್ರಹರತಿ ವಿಧಿರ್ಮರ್ಮಚ್ಛೇದೀ ನ ಕೃಂತತಿ ಜೀವಿತಮ್ ॥ ೨೭

—ಉತ್ತರರಾಮಚರಿತ, ೩-೩೧

ದುಃಖದ ಉದ್ರೇಕವು ಹೃದಯವನ್ನು ಇಬ್ಭಾಗಮಾಡುತ್ತದೆ, ತುಂಡರಿಸುವುದಿಲ್ಲ. ಶರೀರವು ಬಲಹೀನವಾಗಿ ಮೂರ್ಛೆಯನ್ನು ಹೊಂದುತ್ತದೆ, ಪ್ರಾಣ ಬಿಡುವುದಿಲ್ಲ. ಒಳಗಿನ ತಾಪವು ಉರಿಯನ್ನುಂಟುಮಾಡುತ್ತದೆ, ಬೂದಿ ಮಾಡುವುದಿಲ್ಲ. ದುರ್ವಿಧಿಯು ಮರ್ಮವನ್ನು ಸೀಳಿ ನೋಯಿಸುತ್ತಾನೆ, ಸಾಯಿಸುವುದಿಲ್ಲ.

ದುಃಖಮೂಲಂ ಹಿ ಸಂಸಾರಃ ಸ ಯಸ್ಯಾಸ್ತಿ ಸ ದುಃಖಿತಃ ।
ತಸ್ಯ ತ್ಯಾಗಃ ಕೃತೋ ಯೇನ ಸ ಸುಖೀ ನಾಪರಃ ಕ್ವಚಿತ್ ॥೨೮

—ಗರುಡಪುರಾಣ, ೧೬-೪೬

ಸಂಸಾರವು ದುಃಖದಿಂದ ತುಂಬಿದೆ. ಸಂಸಾರವುಳ್ಳವನು ದುಃಖಿತ. ಅದನ್ನು ಬಿಟ್ಟವನು ಸುಖಿ. ಬೇರೆ ಯಾರೂ ಸುಖವನ್ನು ಪಡೆಯಲಾರ.

ದುಃಖೇ ದುಃಖಾಧಿಕಾನ್ಪಶ್ಯೇತ್ ಸುಖೇ ಪಶ್ಯೇತ್ಸುಖಾಧಿಕಾನ್ ।
ಆತ್ಮಾನಂ ಶೋಕಹರ್ಷಾಭ್ಯಾಂ ಶತ್ರುಭ್ಯಾಮಿವ ನಾರ್ಪಯೇತ್ ॥ ೨೯

—ಸುಭಾಷಿತಸುಧಾನಿಧಿ

ದುಃಖ ಬಂದಾಗ ತನಗಿಂತ ಹೆಚ್ಚು ದುಃಖಕ್ಕೊಳಗಾದವರನ್ನು ಕಾಣಬೇಕು. ಹಾಗೆಯೇ ಸುಖದಲ್ಲಿ ಇನ್ನೂ ಹೆಚ್ಚು ಸುಖಿಗಳನ್ನು ನೋಡಬೇಕು. ದುಃಖ ಮತ್ತು ಸಂತೋಷಗಳಿಗೆ ತನ್ನನ್ನು ಶತ್ರುಗಳಿಗೆ ಹೇಗೋ ಹಾಗೆ ಒಪ್ಪಿಸಬಾರದು.

**ಧರ್ಮಾರ್ಥಕಾಮಾಃ ಸಮಮೇವ ಸೇವ್ಯಾ**
**ಯೋ ಹ್ಯೇಕಭಕ್ತಃ ಸ ನರೋ ಜಘನ್ಯಃ ।**
**ತಯೋಸ್ತು ದಾಕ್ಷ್ಯಂ ಪ್ರವದಂತಿ ಮಧ್ಯಂ**
**ಸ ಉತ್ತಮೋ ಯೋಽಭಿರತಸ್ತ್ರಿವರ್ಗೇ ॥ ೩೦**

—ಮಹಾಭಾರತ, ಶಾಂತಿ. ಪರ್ವ–೧೬೨-೪೦

ಧರ್ಮ, ಅರ್ಥ, ಕಾಮ-ಇವು ಮೂರನ್ನೂ ಸಮವಾಗಿ ಸೇವಿಸಬೇಕು. ಇವುಗಳಲ್ಲಿ ಒಂದನ್ನು ಮಾತ್ರ ಸೇವಿಸತಕ್ಕವನು ಕನಿಷ್ಠದರ್ಜೆಯವನು. ಯಾವುದಾದರೂ ಎರಡರಲ್ಲಿ ಆಸಕ್ತನಾದವನು ಮಧ್ಯಮ. ಮೂರರಲ್ಲಿಯೂ ಆಸಕ್ತನಾದವನು ಶ್ರೇಷ್ಠ.

**ನ ಕಿಂಚಿದಪಿ ಕುರ್ವಾಣಃ ಸೌಖ್ಯೈರ್ದುಃಖಾನ್ಯಪೋಹತಿ ।**
**ತತ್ತಸ್ಯ ಕಿಮಪಿ ದ್ರವ್ಯಂ ಯೋ ಹಿ ಯಸ್ಯ ಪ್ರಿಯೋ ಜನಃ ॥ ೩೧**

—ಉತ್ತರರಾಮಚರಿತ, ೨-೧೯

ಯಾರು ಯಾರ ಪ್ರೀತಿಗೆ ಪಾತ್ರರೋ ಅವರು ಏನನ್ನೂ ಮಾಡದೇ ಇದ್ದರೂ ಕೇವಲ ಸಾಮೀಪ್ಯದಿಂದಲೇ ದುಃಖವನ್ನು ಹೋಗಲಾಡಿಸುತ್ತಾರೆ. ಅದೇ ಪ್ರೀತಿಯಲ್ಲಿರುವ ಮಹತ್ತರವಾದ ಗುಣ.

**ನ ಕೇನಚಿದ್ಯಾಚಿತವ್ಯಃ ಕಶ್ಚಿತ್ ಕಿಂಚಿದನಾಪದಿ ।**
**ಇತಿ ವ್ಯವಸ್ಥಾ ಭೂತಾನಾಂ ಪುರಸ್ತಾನ್ಮನುನಾ ಕೃತಾ ॥ ೩೨**

—ಮಹಾಭಾರತ, ಶಾಂತಿ. ೮೮-೧೬

ಆಪತ್ತು ಬಾರದಾಗ ಯಾವನೂ ಯಾರನ್ನೂ ಯಾಚಿಸಬಾರದು. ಇದು ಹಿಂದೆ ಮನು ಮಾಡಿರುವ ವ್ಯವಸ್ಥೆ

**ನ ಗೃಹಂ ಗೃಹಮಿತ್ಯಾಹುರ್ಗೃಹಿಣೀ ಗೃಹಮುಚ್ಯತೇ ।**
**ಗೃಹಂ ತು ಗೃಹಿಣೀಹೀನಮರಣ್ಯಸದೃಶಂ ಭವೇತ್ ॥ ೩೩**

—ಮಹಾಭಾರತ, ಶಾಂತಿ, ೧೪೪-೬

ಒಂದು ಕಟ್ಟಡವನ್ನು ಗೃಹವೆಂದು ಬಲ್ಲವರು ಹೇಳುವುದಿಲ್ಲ. ಗೃಹಿಣಿಯು ಗೃಹವೆನಿಸುತ್ತಾಳೆ. ಗೃಹಿಣಿಯಿಲ್ಲದ ಮನೆ ಅರಣ್ಯಕ್ಕೆ ಸದೃಶವಾದದ್ದು.

**ನ ತಾದೃಗ್ಜಾಯತೇ ಸೌಖ್ಯಮಪಿ ಸ್ವರ್ಗೇ ಶರೀರಿಣಾಂ ।**
**ದಾರಿದ್ರ್ಯೇಽಪಿ ಹಿ ಯಾದೃಕ್ ಸ್ಯಾತ್ಸ್ವದೇಶೇ ಸ್ವಪುರೇ ಗೃಹೇ ॥ ೩೪**

—ಪಂಚತಂತ್ರ, ಕಾಕೋಲೂಕೀಯ-೯೦

ಬಡತನದಲ್ಲಿದ್ದಾಗ್ಯೂ ಸಹ ಎಂಥ ಸುಖವು ತನ್ನ ದೇಶದಲ್ಲಿ ಅದರಲ್ಲಿಯೂ ತನ್ನ ಊರಿನಲ್ಲಿ ತನ್ನ ಮನೆಯಲ್ಲಿ ಉಂಟಾಗುವುದೋ, ಅಂಥ ಸುಖ ಮನುಷ್ಯರಿಗೆ ಸ್ವರ್ಗದಲ್ಲಿಯೂ ಉಂಟಾಗುವುದಿಲ್ಲ.

ತೃಷಾ ಶುಷ್ಯತ್ಯಾಸ್ಯೇ ಪಿಬತಿ ಸಲಿಲಂ ಸ್ವಾದು ಸುರಭಿ
ಕ್ಷುಧಾರ್ತಃ ಸನ್ ಶಾಲೀನ್ ಕವಲಯತಿ ಶಾಕಾದಿವಳಿತಾನ್ ।
ಪ್ರದೀಪ್ತೇ ರಾಗಾಗ್ನೌ ಸುದೃಢತರಮಾಶ್ಲಿಷ್ಯತಿ ವಧೂಂ
ಪ್ರತೀಕಾರಂ ವ್ಯಾಧೇಃ ಸುಖಮಿತಿ ವಿಪರ್ಯಸ್ಯತಿ ಜನಃ ॥೨೬

—ವೈರಾಗ್ಯಶತಕ-೯೧

ಮನುಷ್ಯನು ಬಾಯಾರಿಕೆಯಿಂದ ಬಾಯೊಣಗಲಾಗಿ ಸುವಾಸನೆಯಿಂದ ಕೂಡಿದ ಸಿಹಿಯಾದ ನೀರನ್ನು ಕುಡಿಯುತ್ತಾನೆ. ಹಸಿವಿನಿಂದ ಪೀಡಿತನಾಗಿ ತರಕಾರಿಗಳಿಂದ ಕೂಡಿದ ಅನ್ನವನ್ನು ತಿನ್ನುತ್ತಾನೆ. ಕಾಮದ ಬೆಂಕಿಯು ಜ್ವಲಿಸಲಾಗಿ ಪ್ರಿಯಳನ್ನು ಬಿಗಿದಪ್ಪುತ್ತಾನೆ. ಹೀಗೆ ರೋಗದ ಪ್ರತೀಕಾರವನ್ನೇ ಸುಖವೆಂದು ತಪ್ಪಾಗಿ ತಿಳಿದುಕೊಂಡಿದ್ದಾನೆ.

ದಲತಿ ಹೃದಯಂ ಶೋಕೋದ್ವೇಗಾದ್ದ್ವಿಧಾ ನ ತು ಭಿದ್ಯತೇ
ವಹತಿ ವಿಕಲಃ ಕಾಯೋ ಮೋಹಂ ನ ಮುಂಚತಿ ಚೇತನಾಂ ।
ಜ್ವಲಯತಿ ತನೂಮಂತರ್ದಾಹಃ ಕರೋತಿ ನ ಭಸ್ಮಸಾತ್
ಪ್ರಹರತಿ ವಿಧಿರ್ಮರ್ಮಚ್ಛೇದೀ ನ ಕೃಂತತಿ ಜೀವಿತಮ್ ॥ ೨೭

—ಉತ್ತರರಾಮಚರಿತ, ೩-೩೧

ದುಃಖದ ಉದ್ರೇಕವು ಹೃದಯವನ್ನು ಇಬ್ಭಾಗಮಾಡುತ್ತದೆ, ತುಂಡರಿಸುವುದಿಲ್ಲ. ಶರೀರವು ಬಲಹೀನವಾಗಿ ಮೂರ್ಛೆಯನ್ನು ಹೊಂದುತ್ತದೆ, ಪ್ರಾಣ ಬಿಡುವುದಿಲ್ಲ. ಒಳಗಿನ ತಾಪವು ಉರಿಯನ್ನುಂಟುಮಾಡುತ್ತದೆ, ಬೂದಿ ಮಾಡುವುದಿಲ್ಲ. ದುರ್ವಿಧಿಯು ಮರ್ಮವನ್ನು ಸೀಳಿ ನೋಯಿಸುತ್ತಾನೆ, ಸಾಯಿಸುವುದಿಲ್ಲ.

ದುಃಖಮೂಲಂ ಹಿ ಸಂಸಾರಃ ಸ ಯಸ್ಯಾಸ್ತಿ ಸ ದುಃಖಿತಃ ।
ತಸ್ಯ ತ್ಯಾಗಃ ಕೃತೋ ಯೇನ ಸ ಸುಖೀ ನಾಪರಃ ಕ್ವಚಿತ್ ॥೨೮

—ಗರುಡಪುರಾಣ, ೧೬-೪೬

ಸಂಸಾರವು ದುಃಖದಿಂದ ತುಂಬಿದೆ. ಸಂಸಾರವುಳ್ಳವನು ದುಃಖಿತ. ಅದನ್ನು ಬಿಟ್ಟವನು ಸುಖಿ. ಬೇರೆ ಯಾರೂ ಸುಖವನ್ನು ಪಡೆಯಲಾರ.

ದುಃಖೇ ದುಃಖಾಧಿಕಾನ್ಪಶ್ಯೇತ್ ಸುಖೇ ಪಶ್ಯೇತ್ಸುಖಾಧಿಕಾನ್ ।
ಆತ್ಮಾನಂ ಶೋಕಹರ್ಷಾಭ್ಯಾಂ ಶತ್ರುಭ್ಯಾಮಿವ ನಾರ್ಪಯೇತ್ ॥ ೨೯

—ಸುಭಾಷಿತಸುಧಾನಿಧಿ

ದುಃಖ ಬಂದಾಗ ತನಗಿಂತ ಹೆಚ್ಚು ದುಃಖಕ್ಕೊಳಗಾದವರನ್ನು ಕಾಣಬೇಕು. ಹಾಗೆಯೇ ಸುಖದಲ್ಲಿ ಇನ್ನೂ ಹೆಚ್ಚು ಸುಖಿಗಳನ್ನು ನೋಡಬೇಕು. ದುಃಖ ಮತ್ತು ಸಂತೋಷಗಳಿಗೆ ತನ್ನನ್ನು ಶತ್ರುಗಳಿಗೆ ಹೇಗೋ ಹಾಗೆ ಒಪ್ಪಿಸಬಾರದು.

**ಧರ್ಮಾರ್ಥಕಾಮಾಃ ಸಮಮೇವ ಸೇವ್ಯಾ**
**ಯೋ ಹ್ಯೇಕಭಕ್ತಃ ಸ ನರೋ ಜಘನ್ಯಃ ।**
**ತಯೋಸ್ತು ದಾಕ್ಷ್ಯಂ ಪ್ರವದಂತಿ ಮಧ್ಯಂ**
**ಸ ಉತ್ತಮೋ ಯೋಽಭಿರತಸ್ತ್ರಿವರ್ಗೇ ॥ ೩೦**

—ಮಹಾಭಾರತ, ಶಾಂತಿ. ಪರ್ವ–೧೬೨-೪೦

ಧರ್ಮ, ಅರ್ಥ, ಕಾಮ-ಇವು ಮೂರನ್ನೂ ಸಮವಾಗಿ ಸೇವಿಸಬೇಕು. ಇವುಗಳಲ್ಲಿ ಒಂದನ್ನು ಮಾತ್ರ ಸೇವಿಸತಕ್ಕವನು ಕನಿಷ್ಠದರ್ಜೆಯವನು. ಯಾವುದಾದರೂ ಎರಡರಲ್ಲಿ ಆಸಕ್ತನಾದವನು ಮಧ್ಯಮ. ಮೂರರಲ್ಲಿಯೂ ಆಸಕ್ತನಾದವನು ಶ್ರೇಷ್ಠ.

**ನ ಕಿಂಚಿದಪಿ ಕುರ್ವಾಣಃ ಸೌಖ್ಯೈರ್ದುಃಖಾನ್ಯಪೋಹತಿ ।**
**ತತ್ತಸ್ಯ ಕಿಮಪಿ ದ್ರವ್ಯಂ ಯೋ ಹಿ ಯಸ್ಯ ಪ್ರಿಯೋ ಜನಃ ॥ ೩೧**

—ಉತ್ತರರಾಮಚರಿತ, ೨-೧೯

ಯಾರು ಯಾರ ಪ್ರೀತಿಗೆ ಪಾತ್ರರೋ ಅವರು ಏನನ್ನೂ ಮಾಡದೇ ಇದ್ದರೂ ಕೇವಲ ಸಾಮೀಪ್ಯದಿಂದಲೇ ದುಃಖವನ್ನು ಹೋಗಲಾಡಿಸುತ್ತಾರೆ. ಅದೇ ಪ್ರೀತಿಯಲ್ಲಿರುವ ಮಹತ್ತರವಾದ ಗುಣ.

**ನ ಕೇನಚಿದ್ಯಾಚಿತವ್ಯಃ ಕಶ್ಚಿತ್ ಕಿಂಚಿದನಾಪದಿ ।**
**ಇತಿ ವ್ಯವಸ್ಥಾ ಭೂತಾನಾಂ ಪುರಸ್ತಾನ್ಮನುನಾ ಕೃತಾ ॥ ೩೨**

—ಮಹಾಭಾರತ, ಶಾಂತಿ. ೮೮-೧೬

ಆಪತ್ತು ಬಾರದಾಗ ಯಾವನೂ ಯಾರನ್ನೂ ಯಾಚಿಸಬಾರದು. ಇದು ಹಿಂದೆ ಮನು ಮಾಡಿರುವ ವ್ಯವಸ್ಥೆ

**ನ ಗೃಹಂ ಗೃಹಮಿತ್ಯಾಹುರ್ಗೃಹಿಣೀ ಗೃಹಮುಚ್ಯತೇ ।**
**ಗೃಹಂ ತು ಗೃಹಿಣೀಹೀನಮರಣ್ಯಸದೃಶಂ ಭವೇತ್ ॥ ೩೩**

—ಮಹಾಭಾರತ, ಶಾಂತಿ, ೧೪೪-೬

ಒಂದು ಕಟ್ಟಡವನ್ನು ಗೃಹವೆಂದು ಬಲ್ಲವರು ಹೇಳುವುದಿಲ್ಲ. ಗೃಹಿಣಿಯು ಗೃಹವೆನಿಸುತ್ತಾಳೆ. ಗೃಹಿಣಿಯಿಲ್ಲದ ಮನೆ ಅರಣ್ಯಕ್ಕೆ ಸದೃಶವಾದದ್ದು.

**ನ ತಾದೃಗ್ಜಾಯತೇ ಸೌಖ್ಯಮಪಿ ಸ್ವರ್ಗೇ ಶರೀರಿಣಾಂ ।**
**ದಾರಿದ್ರ್ಯೇಽಪಿ ಹಿ ಯಾದೃಕ್ ಸ್ಯಾತ್ಸ್ವದೇಶೇ ಸ್ವಪುರೇ ಗೃಹೇ ॥ ೩೪**

—ಪಂಚತಂತ್ರ, ಕಾಕೋಲೂಕೀಯ-೯೦

ಬಡತನದಲ್ಲಿದ್ದಾಗ್ಯೂ ಸಹ ಎಂಥ ಸುಖವು ತನ್ನ ದೇಶದಲ್ಲಿ ಅದರಲ್ಲಿಯೂ ತನ್ನ ಊರಿನಲ್ಲಿ ತನ್ನ ಮನೆಯಲ್ಲಿ ಉಂಟಾಗುವುದೋ, ಅಂಥ ಸುಖ ಮನುಷ್ಯರಿಗೆ ಸ್ವರ್ಗದಲ್ಲಿಯೂ ಉಂಟಾಗುವುದಿಲ್ಲ.

ನ ಪೃಥಗ್ಜನವಚ್ಛುಚೋ ವಶಂ
ವಶಿನಾಮುತ್ತಮ ಗಂತುಮರ್ಹಸಿ ।
ದ್ರುಮಸಾನುಮತಾಂ ಕಿಮಂತರಂ
ಯದಿ ವಾಯೌ ದ್ವಿತಯೇಽಪಿ ತೇ ಚಲಾಃ ॥ ೩೫

—ರಘುವಂಶ, ೮-೯೦

ಸಾಮಾನ್ಯಜನರಂತೆ ಧೀರರೂ ಸಹ ದುಃಖಕ್ಕೆ ಒಳಗಾದರೆ ಇಬ್ಬರಿಗೂ ವ್ಯತ್ಯಾಸವೇ ಇಲ್ಲದಂತಾಗುತ್ತದೆ. ಬಿರುಗಾಳಿಯು ಬೀಸಿದಾಗ ಮರಗಳು ಅಲ್ಲಾಡುತ್ತವೆ. ಬೆಟ್ಟಗಳು ಅಲುಗುವುದಿಲ್ಲ. ಇಲ್ಲವಾದರೆ ಇವೆರಡಕ್ಕೆ ಏನು ವ್ಯತ್ಯಾಸ ?

ನಾದೌ ಕಿಂಚಿದ್ಭವತಿ ನಿಯತಂ ಯಚ್ಚ ಪಶ್ಚಾನ್ನ ಕಿಂಚಿತ್
ಮಧ್ಯೇಽಕಸ್ಮಾತ್ ಸಪದಿ ಘಟಯನ್ ಸೌಖ್ಯದೌಃಸ್ಥ್ಯಾನುರೋಧಂ ।
ನಿಃಶೀರ್ಷಾಂಘ್ರಿರ್ನಟ ಇವ ಮುಹುಃ ಕೋಽಪಿ ಜಂತುರ್ನಟಿತ್ವಾ
ನೋ ಜಾನೀಮೋ ಭವಜವನಿಕಾಂತರ್ಹಿತಃ ಕ್ವ ಪ್ರಯಾತಿ ॥ ೩೬

—ರಾಜತರಂಗಿಣೀ

ಜೀವನದಲ್ಲಿ ಮೊದಲು ಆಮೇಲೆ ಏನೂ ಇಲ್ಲ. ನಡುವೆ ಇದ್ದಕ್ಕಿದ್ದಹಾಗೆ ಸುಖ ದುಃಖಗಳನ್ನುಂಟುಮಾಡುತ್ತದೆ. ತಲೆ ಕಾಲು ಇಲ್ಲದ ಪ್ರಾಣಿಯೊಂದು 'ನಟನ ಹಾಗೆ ನಟಿಸಿ, ಸಂಸಾರವೆಂಬ ನಾಟಕದ ಪರದೆಯ ಹಿಂದೆ ಎಲ್ಲಿಗೆ ಹೋಗುತ್ತದೋ ಗೊತ್ತಿಲ್ಲ!

ನಾಹಂ ಮಮೇತಿ ಭಾವೋಽಯಂ ಪುರುಷೇ ವ್ಯವಧೀಯತೇ ।
ಯಾವದ್ಬುದ್ಧಿಮನೋಽಕ್ಷಾರ್ಥಗುಣವ್ಯೂಹೋ ಹ್ಯನಾದಿಮಾನ್ ॥ ೩೭

—ಭಾಗವತ, ೪-೩೯-೭೦

ಎಲ್ಲಿಯವರೆಗೂ ಬುದ್ಧಿ, ಮನಸ್ಸು, ಇಂದ್ರಿಯಗಳು, ವಿಷಯ, ಗುಣಗಳ ಸಮೂಹವು ಮೊದಲಿಲ್ಲದೆ ಇರುತ್ತದೆಯೋ, ಅಲ್ಲಿಯವರೆಗೂ ನಾನು, ನನ್ನದು, ಎಂಬ ಭಾವನೆ ಮನುಷ್ಯನಲ್ಲಿ ಮರೆಮಾಡಲಾಗುವುದಿಲ್ಲ.

ನಿವೃತ್ತಾ ಭೋಗೇಚ್ಛಾ ಪುರುಷಬಹುಮಾನೋ ವಿಗಲಿತಃ
ಸಮಾನಾಸ್ಸ್ವರ್ಯಾತಾಸ್ಸಪದಿ ಸುಹೃದೋ ಜೀವಿತಸಮಾಃ ।
ಶನೈರ್ಯಷ್ಟ್ಯುತ್ಥಾನಂ ಘನತಿಮಿರರುದ್ಧೇ ಚ ನಯನೇ
ಅಹೋ ಧೃಷ್ಟಃ ಕಾಯಸ್ತದಪಿ ಮರಣಾಪಾಯಚಕಿತಃ ॥ ೩೮

—ವೈರಾಗ್ಯಶತಕ-೯

ಸುಖಗಳನ್ನನುಭವಿಸುವ ಆಸೆ ನಿಂತಿದೆ. ಗಂಡಸೆಂಬ ಗೌರವವು ಹೋಯಿತು. ಪ್ರಾಣಸ್ನೇಹಿತರೆಲ್ಲಾ ಸ್ವರ್ಗಸ್ಥರಾದರು. ಕೋಲು ಹಿಡಿದುಕೊಂಡು ಏಳುವ ಸ್ಥಿತಿ ಬಂದಿದೆ. ಎರಡು ಕಣ್ಣುಗಳೂ ದಟ್ಟವಾದ ಕತ್ತಲಿನಿಂದ ಕೂಡಿವೆ. ಆದರೂ ಈ ಮೊಂಡು ಶರೀರ ಸಾವಿನ ಹೆದರಿಕೆಯಿಂದ ತಲ್ಲಣಿಸುತ್ತಿದೆಯಲ್ಲಾ ಎಂಬುದೇ ಸಂಕಟಕರ.

ನೃದೇಹಮಾದ್ಯಂ ಸುಲಭಂ ಸುದುರ್ಲಭಂ
ಪ್ಲವಂ ಸುಕಲ್ಪಂ ಗುರುಕರ್ಣಧಾರಮ್ ।
ಯದಾನುಕೂಲೇನ ನಭಸ್ವತೇರಿತಂ
ಪುಮಾನ್ ಭವಾಬ್ಧಿಂ ನ ತರೇತ್ ಸ ಆತ್ಮಹಾ ॥ ೩೯

—ಭಾಗವತ, ೧೧-೨೦ ೧೭

ಮನುಷ್ಯದೇಹ ಹೊಂದುವುದು ಬಹಳ ಕಷ್ಟ. ಅದೇ ಒಳ್ಳೆಯ ದೋಣಿ. ಅದಕ್ಕೆ ಗುರುವೇ ಅಂಬಿಗ. (ಪರಮಾತ್ಮನೆಂಬ) ಅನುಕೂಲವಾದ ಗಾಳಿಯಿಂದ ನಡೆಸಲ್ಪಡುತ್ತಿರುವಾಗ ಮನುಷ್ಯನು ಸಂಸಾರಸಾಗರವನ್ನು ದಾಟದೇ ಇದ್ದರೆ ಅವನು ತನ್ನನ್ನೇ ಕೊಲೆ ಮಾಡಿ ಕೊಂಡಂತೆ.

ಪರಿವರ್ತಿನಿ ಸಂಸಾರೇ ಮೃತಃ ಕೋ ವಾ ನ ಜಾಯತೇ ।
ಸ ಜಾತೋ ಯೇನ ಜಾತೇನ ಯಾತಿ ವಂಶಃ ಸಮುನ್ನತಿಮ್ ॥ ೪೦

—ನೀತಿಶತಕ-೩೦

ಬದಲಾಯಿಸುತ್ತಿರುವ ಈ ಸಂಸಾರದಲ್ಲಿ ಸತ್ತವನು ಯಾರುತಾನೇ ಮತ್ತೆ ಹುಟ್ಟುವುದಿಲ್ಲ? ಯಾರ ಹುಟ್ಟಿನಿಂದ ವಂಶವು ಉನ್ನತಿಯನ್ನು ಪಡೆಯುತ್ತದೆಯೋ ಅವನ ಹುಟ್ಟೇ ಸಾರ್ಥಕವಾದುದು.

ಪರಿತುಷ್ಯೇತ್ತತಸ್ತಾತ ತಾವನ್ಮಾತ್ರೇಣ ಪೂರುಷಃ ।
ದೈವೋಪಸಾದಿತಂ ಯಾವದ್ವೀಕ್ಷ್ಯೇಶ್ವರಗತಿಂ ಬುಧಃ ॥ ೪೧

— ಭಾಗವತ, ೪-೮-೨೯

ವಿವೇಕಿಯಾದ ಮನುಷ್ಯನು ಈಶ್ವರಗತಿಯನ್ನು ಅರ್ಥಮಾಡಿಕೊಂಡು ದೈವದಿಂದ ಬಂದದ್ದರಿಂದಲೇ ತೃಪ್ತಿಯನ್ನು ಹೊಂದಬೇಕು.

ಪ್ರಭಾತೇ ಮಲಮೂತ್ರಾಭ್ಯಾಂ ಕ್ಷುತ್ತೃಡ್ಭ್ಯಾಂ ಮಧ್ಯಗೇ ರವೌ ।
ರಾತ್ರೌ ಮದನನಿದ್ರಾಭ್ಯಾಂ ಬಾಧ್ಯಂತೇ ಮೂಢಮಾನವಾಃ ॥ ೪೨

—ಗರುಡಪುರಾಣ, ೧೬-೫೪

ಬೆಳಗ್ಗೆ ಮಲಮೂತ್ರಗಳಿಂದಲೂ, ಮಧ್ಯಾಹ್ನ ಹಸಿವು ಬಾಯಾರಿಕೆಗಳಿಂದಲೂ, ರಾತ್ರಿ ಕಾಮ ಮತ್ತು ನಿದ್ರೆಗಳಿಂದಲೂ ಮೂರ್ಖರಾದ ಮಾನವರು ಹಿಂಸೆಪಡುತ್ತಾರೆ.

ಪ್ರಾಪ್ತವ್ಯಮರ್ಥಂ ಲಭತೇ ಮನುಷ್ಯೋ
ದೇವೋಽಪಿ ತಂ ಲಂಘಯಿತುಂ ನ ಶಕ್ತಃ ।
ತಸ್ಮಾನ್ನ ಶೋಚಾಮಿ ನ ವಿಸ್ಮಯೋ ಮೇ
ಯದಸ್ಮದೀಯಂ ನ ಹಿ ತತ್ ಪರೇಷಾಮ್ ॥ ೪೩

—ಅಭಿನವಪಾಠಾವಲೀ

ದೊರಬೇಕಾದ್ದು ಮನುಷ್ಯನಿಗೆ ದೊರಕಿಯೇ ತೀರುತ್ತದೆ. ದೇವರೂ ಅದನ್ನು ತಪ್ಪಿಸಲು ಅಶಕ್ತ. ಆದ್ದರಿಂದ ನನಗೆ ಶೋಕವೂ ಇಲ್ಲ, ವಿಸ್ಮಯವೂ ಇಲ್ಲ. ಯಾವುದು ನಮ್ಮದೋ ಅದು ಎಂದಿಗೂ ಪರರ ಸ್ವತ್ತಾಗದು.

ಪಿತಾ ರತ್ನಕರೋ ಯಸ್ಯ ಲಕ್ಷ್ಮೀರ್ಯಸ್ಯ ಸಹೋದರೀ ।
ಶಂಖೋ ರೋದಿತಿ ಭಿಕ್ಷಾರ್ಥೀ ನಾದತ್ತಮುಪತಿಷ್ಠತೇ ॥ ೪೪

—ಸಮಯೋಚಿತಪದ್ಯಮಾಲಿಕಾ

ಶಂಖದ ತಂದೆ ರತ್ನಾಕರನಾದ ಸಮುದ್ರ. ಲಕ್ಷ್ಮೀದೇವಿಯೇ ಸಹೋದರಿ. ಆದರೂ ಶಂಖವು ಭಿಕ್ಷೆಗಾಗಿ ಅಳುತ್ತದೆ! ದಾನ ಮಾಡದಿದ್ದುದು ಎಂದಿಗೂ ತನಗೆ ದೊರೆಯುವುದಿಲ್ಲ.

ಪುರಾ ಸರಸಿ ಮಾನಸೇ ವಿಕಚಸಾರಸಾಳಿಸ್ಖಲತ್
ಪರಾಗಸುರಭೀಕೃತೇ ಪಯಸಿ ಯಸ್ಯ ಯಾತಂ ವಯಃ ।
ಸ ಪಲ್ವ ಲಜಲೇಽಧುನಾ ಮಿಲದನೇಕಭೇಕಾಕುಲೇ
ಮರಾಳಕುಲನಾಯಕಃ ಕಥಯ ರೇ ಕಥಂ ವರ್ತತಾಮ್ ॥ ೪೫

—ಭಾಮಿನೀವಿಲಾಸ, ೧-೨

ಹಂಸವು ಹಿಂದೆ ಮಾನಸ ಸರೋವರದಲ್ಲಿ ಅನೇಕ ತಾವರೆಗಳಿಂದ ಬೀಳುತ್ತಿರುವ ಪರಾಗದಿಂದ ಸುಗಂಧವಾದ ನೀರಿನಲ್ಲಿ ತನ್ನ ವಯಸ್ಸನ್ನು ಕಳೆಯಿತು. ಅದೇ ಹಂಸವು ಈಗ ಕಪ್ಪೆಗಳಿಂದ ಕೂಡಿದ ಕೊಳಕಾದ ನೀರಿನಲ್ಲಿ ಹೇಗೆ ಇರಲು ಸಾಧ್ಯ? (ರಸಿಕರ ನಡುವೆ ಕಾಲ ಕಳೆಯುತ್ತಿದ್ದ ಪಂಡಿತನು ಮೂರ್ಖರ ಮಧ್ಯೆ ಇರುವುದು ಹೇಗೆ?)

ಪೂರೋತ್ಪೀಡೇ ತಟಾಕಸ್ಯ ಪರೀವಾಹಃ ಪ್ರತಿಕ್ರಿಯಾ ।
ಶೋಕಕ್ಷೋಭೇ ಚ ಹೃದಯಂ ಪ್ರಲಾಪೈರವಧಾರ್ಯತೇ ॥ ೪೬

—ಉತ್ತರರಾಮಚರಿತ, ೩-೨೯

ಕೆರೆಗೆ ಮಿತಿಮೀರಿದ ಪ್ರವಾಹ ಬಂದರೆ ಕೋಡಿಯಲ್ಲಿ ಹೆಚ್ಚಿನ ನೀರು ಹರಿದು ಹೋಗಿ ಕೆರೆಯನ್ನು ಕಾಪಾಡುತ್ತದೆ. ಅದೇ ರೀತಿ ತುಂಬ ದುಃಖವಾದರೆ ಅಳುವುದರ ಮೂಲಕ ಹೃದಯ ಹಗುರವಾಗುತ್ತದೆ.

ಪುಂಸೋಽಯಂ ಸಂಸೃತೇರ್ಹೇತುರಸಂತೋಷೋಽರ್ಥಕಾಮಯೋಃ।
ಯದೃಚ್ಛಯೋಪಪನ್ನೇನ ಸಂತೋಷೋ ಮುಕ್ತಯೇ ಸ್ಮೃತಃ ॥ ೪೭

—ಭಾಗವತ, ೮-೧೯-೨೫

ಅರ್ಥ, ಕಾಮಗಳೆರಡರಲ್ಲಿಯೂ ಮನುಷ್ಯನಿಗಿರುವ ಅತೃಪ್ತಿಯೇ ಈ ಸಂಸಾರಕ್ಕೆ ಕಾರಣ. ಅಕಸ್ಮಾತ್ತಾಗಿ ಬಂದ ಅರ್ಥಕಾಮಗಳಿಂದ ಉಂಟಾಗುವ ತೃಪ್ತಿಯೇ ಮೋಕ್ಷಕ್ಕೆ ಕಾರಣವಾಗುತ್ತದೆ.

**ಬಾಲಃ ಪುತ್ರೋ ನೀತಿವಾಕ್ಯೋಪಚಾರೈಃ**
**ಕಾರ್ಯೇ ಕಾರ್ಯೇ ಯತ್ನತಃ ಶಿಕ್ಷಣೀಯಃ ।**
**ಲೇಖಾ ಲಗ್ನಾ ಯಾಽಮಪಾತ್ರೇ ವಿಚಿತ್ರಾ**
**ನಾಸೌ ನಾಶಂ ಪಾಕಕಾಲೇಽಪಿ ಯಾತಿ ॥** ೪೮

—ನೀತಿಧನದ-೧೦

ಬಾಲಕನಾಗಿದ್ದಾಗಲೇ ಪುತ್ರನಿಗೆ ನೀತಿಯನ್ನು ಹೇಳಿ ಪ್ರತಿಯೊಂದು ಕಾರ್ಯ ದಲ್ಲಿಯೂ ಶಿಕ್ಷಣವನ್ನು ಕೊಡಬೇಕು. ಹಸಿಯ ಗಡಿಗೆಯಲ್ಲಿ ರಚಿಸಿದ ವಿಚಿತ್ರವಾದ ರೇಖೆಗಳು ಗಡಿಗೆಯನ್ನು ಸುಟ್ಟಾಗಲೂ ಅಳಿಸದೆ ಇರುತ್ತವೆ.

**ಬಾಲ್ಯೇ ಕ್ರೀಡನಕಾಸಕ್ತಾ ಯೌವನೇ ವಿಷಯೋನ್ಮುಖಾಃ ।**
**ಅಜ್ಞಾ ನಯಂತ್ಯಶಕ್ತ್ಯಾ ಚ ವಾರ್ಧಕ್ಯಂ ಸಮುಪಸ್ಥಿತಂ ॥** ೪೯

—ವಿಷ್ಣುಪುರಾಣ, ೧-೧೭-೭೫

ಮೂರ್ಖರು ಬಾಲ್ಯವನ್ನು ಆಟದಲ್ಲಿಯೂ, ತಾರುಣ್ಯವನ್ನು ವಿಷಯ ಸುಖಗಳಲ್ಲಿಯೂ, ಮುದಿತನವನ್ನು ಶಕ್ತಿಯಿಲ್ಲವೆಂದೂ ಕಳೆಯುತ್ತಾರೆ.

**ಭಾರಸ್ಯೋದ್ವಹನಾರ್ಥಂ ಚ ರಥಾಕ್ಷೋಽಭ್ಯಜ್ಯತೇ ಯಥಾ ।**
**ಭೋಜನಂ ಪ್ರಾಣಯಾತ್ರಾರ್ಥಂ ತದ್ವದ್ವಿದ್ವಾನ್ನಿಷೇವತೇ ॥** ೫೦

—ಸೌಂದರನಂದ, ೧೪-೧೨

ಭಾರವನ್ನೆಳೆಯಲು ಅನುಕೂಲವಾಗಲೆಂದು ರಥದ ಅಚ್ಚಿಗೆ ಎಣ್ಣೆಯನ್ನು ಹಾಕುವಂತೆ, ವಿದ್ವಾಂಸನು ಪ್ರಾಣಯಾತ್ರೆ ಸಾಗಲೆಂದು ಭೋಜನವನ್ನು ಮಾಡುತ್ತಾನೆ.

**ಮಾನಸಂ ಶಮಯೇತ್ತಸ್ಮಾತ್ ಜ್ಞಾನೇನಾಗ್ನಿಮಿವಾಂಬುನಾ ।**
**ಪ್ರಶಾಂತೇ ಮಾನಸೇ ಹ್ಯಸ್ಯ ಶಾರೀರಮುಪಶಾಮ್ಯತಿ ॥** ೫೧

—ಮಹಾಭಾರತ, ಅರಣ್ಯ. ೨-೨೬

ನೀರಿಂದ ಬೆಂಕಿಯನ್ನು ಆರಿಸುವಂತೆ, ಜ್ಞಾನದಿಂದ ಮಾನಸದುಃಖವನ್ನು ಶಾಂತಗೊಳಿಸಬೇಕು. ಮಾನಸದುಃಖವು ಶಾಂತವಾದರೆ, ದೇಹವೂ ಸ್ವಸ್ಥವಾಗುವುದು.

**ಮಾನಸೇನ ಹಿ ದುಃಖೇನ ಶರೀರಮುಪತಪ್ಯತೇ ।**
**ಅಯಃಪಿಂಡೇನ ತಪ್ತೇನ ಕುಂಭಸಂಸ್ಥಮಿವೋದಕಮ್ ॥** ೫೨

—ಮಹಾಭಾರತ, ಅರಣ್ಯ. ೨-೨೫

ಮಾನಸದುಃಖದಿಂದ ಶರೀರಕ್ಕೆ ಪೀಡೆಯಾಗಿತ್ತದೆ-ಕಬ್ಬಿಣವು ಕಾದರೆ ಆ ಪಾತ್ರೆಯಲ್ಲಿರುವ ನೀರು ಬಿಸಿಯಾದಂತೆ.

**ಮಾನುಷ್ಯಂ ನಾವಮಾಸಾದ್ಯ ತರ ದುಃಖಮಹಾನದೀಂ ।**
**ಮೂಢ ಕಾಲೋ ನ ನಿದ್ರಾಯಾಃ ಇಯಂ ನೌರ್ದುರ್ಲಭಾ ಪುನಃ॥೫೩**

—ಬೋಧಿಚರ್ಯಾವತಾರ-೨೫೦

ಮನುಷ್ಯಶರೀರವೆಂಬ ದೋಣಿಯನ್ನು ಪಡೆದು ದುಃಖವೆಂಬ ದೊಡ್ಡ ನದಿಯನ್ನು ದಾಟು. ಮೂರ್ಖ! ಇದು ನಿದ್ರೆಗೆ ಸಮಯವಲ್ಲ. ಈ ದೋಣಿಯು ಮತ್ತೆ ಸಿಕ್ಕುವುದಿಲ್ಲ.

**ಯದೃಚ್ಛಯೋಪಪನ್ನೇನ ಸಂತುಷ್ಟೋ ವರ್ತತೇ ಸುಖಮ್**
**ನಾಸಂತುಷ್ಟಸ್ತ್ರಿಭಿರ್ಲೋಕೈರಜಿತಾತ್ಮೋಪಸಾದಿತೈಃ ॥ ೫೪**

—ಭಾಗವತ, ೮-೧೯-೨೪

ಅಕಸ್ಮಾತ್ತಾಗಿ ಬಂದ ಹಣದಿಂದ ತೃಪ್ತಿಹೊಂದಿದವನು ಸುಖವಾಗಿರುತ್ತಾನೆ. ಮನಸ್ಸನ್ನು ಗೆಲ್ಲದವನು ಮೂರು ಲೋಕಗಳು ತನ್ನವಾದರೂ ಅತೃಪ್ತನಾಗಿ ಸುಖಿಯಾಗಲಾರನು.

**ಯದೃಚ್ಛಾಲಾಭತುಷ್ಟಸ್ಯ ತೇಜೋ ವಿಪ್ರಸ್ಯ ವರ್ಧತೇ ।**
**ತತ್ಪ್ರಶಾಮ್ಯತ್ಯಸಂತೋಷಾದಂಭಸೇವಾಶುಶುಕ್ಷಣಿಃ ॥ ೫೫**

—ಭಾಗವತ, ೮-೧೯-೨೬

ಅಕಸ್ಮಾತ್ತಾಗಿ ಬಂದ ಲಾಭದಿಂದ ತೃಪ್ತನಾದ ಬ್ರಾಹ್ಮಣನ ತೇಜಸ್ಸು ಬೆಳೆಯುತ್ತದೆ. ಅತೃಪ್ತಿಯಿದ್ದರೆ ಆ ತೇಜಸ್ಸು, ನೀರಿನಿಂದ ಬೆಂಕಿಯ ಶಾಂತವಾದಂತೆ ಶಾಂತವಾಗುತ್ತದೆ.

**ಯದ್ವಕ್ತ್ರಂ ಮುಹುರೀಕ್ಷಸೇ ನ ಧನಿನಾಂ ಬ್ರೂಷೇ ನ ಚಾಟೂನ್ ಮೃಷಾ**
**ನೈಷಾಂ ಗರ್ವವಚಃ ಶೃಣೋಷಿ ನ ಚ ತಾನ್ ಪ್ರತ್ಯಾಶಯಾ ಧಾವಸಿ ।**
**ಕಾಲೇ ಬಾಲತೃಣಾನಿ ಖಾದಸಿ ಪರಂ ನಿದ್ರಾಸಿ ನಿದ್ರಾಗಮೇ**
**ತನ್ಮೇ ಬ್ರೂಹಿ ಕುರಂಗ ಕುತ್ರ ಭವತಾ ಕಿಂ ನಾಮ ತಪ್ತಂ ತಪಃ ॥ ೫೬**

—ಕುವಲಯಾನಂದ

ಎಲೈ ಜಿಂಕೆ, ನೀನು ಯಾವ ಶ್ರೀಮಂತರ ಮುಖವನ್ನು ಮತ್ತೆ ಮತ್ತೆ ನೋಡುವುದಿಲ್ಲ; ಅವರೆದುರಿಗೆ ಸುಳ್ಳು ಸುಳ್ಳಾಗಿ ಮುಖಸ್ತುತಿ ಮಾಡುವುದಿಲ್ಲ ; ಅವರ ಗರ್ವದ ಮಾತುಗಳನ್ನು ಕೇಳುವುದಿಲ್ಲ ; ಆಸೆಯಿಂದ ಶ್ರೀಮಂತರ ಬಳಿಗೆ ಓಡುವುದಿಲ್ಲ ; ಆದರೂ ಕಾಲಕ್ಕೆ ಸರಿಯಾಗಿ ಎಳೆಯ ಹುಲ್ಲನ್ನು ತಿನ್ನುತ್ತೀಯೆ. ನಿದ್ರೆ ಬಂದಾಗ ಮಲಗುತ್ತೀಯೆ. ಇದು ಹೇಗಾಯಿತು? ಎಲ್ಲಿ ಯಾವ ತಪಸ್ಸನ್ನು ಆಚರಿಸಿದೆ? ನನಗೂ ಹೇಳಿಕೊಡು.

**ಯದಾ ನ ಕುರುತೇ ಭಾವಂ ಸರ್ವಭೂತೇಷು ಪಾಪಕಂ ।**
**ಸಮದೃಷ್ಟೇಃ ಸದಾ ಪುಂಸಃ ಸರ್ವಾಸ್ಸುಖಮಯಾ ದಿಶಃ ॥ ೫೭**

—ವಿಷ್ಣುಪುರಾಣ, ೪-೧೦-೨೫

ಎಲ್ಲ ಪ್ರಾಣಿಗಳಲ್ಲಿ ಕೆಟ್ಟಬುದ್ಧಿಯಿಲ್ಲದ ಸಮದೃಷ್ಟಿಯುಳ್ಳ ಮಾನವನಿಗೆ ಎಲ್ಲ ದಿಕ್ಕುಗಳೂ ಸುಖದಿಂದ ತುಂಬಿರುತ್ತವೆ.

**ಯದೇವೋಪನತಂ ದುಃಖಾತ್ ಸುಖಂ ತದ್ರಸವತ್ತರಂ ।**
**ನಿರ್ವಾಣಾಯ ತರುಚ್ಛಾಯಾ ತಪ್ತಸ್ಯ ಹಿ ವಿಶೇಷತಃ ॥ ೫೮**

—ವಿಕ್ರಮೋರ್ವಶೀಯ, ೩-೨೧

ಕಷ್ಟವನ್ನನುಭವಿಸಿದಮೇಲೆ ಬರುವ ಸುಖವು ಬಹಳ ರುಚಿಯಾಗಿರುತ್ತದೆ. ಬಿಸಿಲಿನಲ್ಲಿ ನಡೆದು ಬಳಲಿದ ದಾರಿಗನಿಗೆ ಮರದ ನೆರಳು ಹೆಚ್ಚು ತಂಪನ್ನು ನೀಡುತ್ತದೆ.

**ಯತ್ರೋತ್ಸಾಹಸಮಾರಂಭೋ ಯತ್ರಾಲಸ್ಯವಿಹೀನತಾ ।**
**ನಯವಿಕ್ರಮಸಂಯೋಗಸ್ತತ್ರ ಶ್ರೀರಚಲಾ ಧ್ರುವಮ್ ॥ ೫೯**

—ಪಂಚತಂತ್ರ, ಮಿತ್ರಸಂಪ್ರಾಪ್ತಿ-೧೪೬

ಎಲ್ಲಿ ಉತ್ಸಾಹದಿಂದ ಪ್ರಯತ್ನ ನಡೆಯುವುದೋ, ಎಲ್ಲಿ ಸೋಮಾರಿತನ ವಿರುವುದಿಲ್ಲವೋ ಎಲ್ಲಿ ನೀತಿ ಮತ್ತು ಪರಾಕ್ರಮಗಳು ಜೊತೆಗೂಡಿರುತ್ತವೆಯೋ ಅಲ್ಲಿ ನಿಜವಾಗಿಯೂ ಸಂಪತ್ತು ಸ್ಥಿರವಾಗಿರುತ್ತದೆ.

**ಯಥಾ ಹಿ ಪುರುಷೋ ಭಾರಂ ಶಿರಸಾ ಗುರುಮುದ್ವಹನ್ ।**
**ತಂ ಸ್ಕಂಧೇನ ಸ ಆಧತ್ತೇ ತಥಾ ಸರ್ವಾಃ ಪ್ರತಿಕ್ರಿಯಾಃ ॥ ೬೦**

—ಭಾಗವತ-೪-೨೯-೩೩

ಪುರುಷನು ಬಹಳ ಭಾರವನ್ನು ತಲೆಯಲ್ಲಿ ಹೊತ್ತು ಸಾಕಾದಾಗ ಅದನ್ನು ಹೆಗಲಿಗೆ ಸರಿಸುತ್ತಾನೆ. ಹಾಗೆಯೇ ದುಃಖದ ಎಲ್ಲ ಪ್ರತೀಕಾರಗಳು. (ದುಃಖಗಳು ಇದ್ದೇ ಇರುತ್ತವೆ. ತಾತ್ಕಾಲಿಕವಾಗಿ ಉಪಶಮನವೆನಿಸುತ್ತದೆ).

**ಯಥೈವ ಪುಷ್ಪಂ ಪ್ರಥಮೇ ವಿಕಾಸೇ ।**
**ಸಮೇತ್ಯ ಪಾತುಂ ಮಧುಪಾಃ ಪತಂತಿ ।**
**ಏವಂ ಮನುಷ್ಯಸ್ಯ ವಿಪತ್ತಿಕಾಲೇ ।**
**ಛಿದ್ರೇಷ್ವನರ್ಥಾ ಬಹುಳೀಭವಂತಿ ॥ ೬೧**

—ಮೃಚ್ಛಕಟಿಕ, ೯-೨೯

ಮೊದಲು ಹೂ ಅರಳಿದಾಗ ದುಂಬಿಗಳು ಮಕರಂದವನ್ನು ಕುಡಿಯಲು ಒಟ್ಟಾಗಿ ಬಂದು ಬೀಳುತ್ತವೆ. ಅದೇ ರೀತಿ ಮನುಷ್ಯನಿಗೆ ಆಪತ್ತು ಒದಗಿದಾಗ, ಅವಕಾಶವಾಯಿತೆಂದು ಒಂದಾದಮೇಲೊಂದರಂತೆ ಕಷ್ಟಗಳು ಬರುತ್ತವೆ.

**ಯಸ್ಯ ಕ್ಷೇತ್ರಂ ನದೀತೀರೇ ಭಾರ್ಯಾ ಚ ಪರಸಂಗತಾ ।**
**ಸಸರ್ಪೇ ಚ ಗೃಹೇ ವಾಸಃ ಕಥಂ ಸ್ಯಾತ್ತಸ್ಯ ನಿರ್ವೃತಿಃ ॥ ೬೨**

—ಪಂಚತಂತ್ರ-ಮಿತ್ರಭೇದ-೨೨೯

ಯಾರ ಜಮೀನು ನದಿಯ ದಡದಲ್ಲಿದೆಯೋ, ಯಾರ ಹೆಂಡತಿ ಮತ್ತೊಬ್ಬನನ್ನು ಸೇರಿದ್ದಾಳೋ, ಯಾರು ಹಾವಿರುವ ಮನೆಯಲ್ಲಿ ವಾಸಮಾಡುತ್ತಾನೋ ಅಂಥವನಿಗೆ ಸಂತೋಷ ಹೇಗಿದ್ದೀತು?

**ಯಸ್ಯ ಭಾರ್ಯಾ ಗೃಹೇ ನಾಸ್ತಿ ಸಾಧ್ವೀ ಚ ಪ್ರಿಯವಾದಿನೀ ।**
**ಅರಣ್ಯಂ ತೇನ ಗಂತವ್ಯಂ ಯಥಾರಣ್ಯಂ ತಥಾಗೃಹಮ್ ॥ ೬೩**

—ಮಹಾಭಾರತ, ಶಾಂತಿ. ೧೪೪-೧೭

ಸಾಧ್ವಿಯೂ ಪ್ರಿಯವಾದಿನಿಯೂ ಆದ ಮಡದಿ ಯಾವನಿಗಿಲ್ಲವೋ ಅವನು ಕಾಡಿಗೆ ಹೋಗುವುದು ಲೇಸು. ಅವನಿಗೆ ಮನೆ ಕಾಡು ಒಂದೇ.

**ಯಃ ಸ್ವಧರ್ಮೇಣ ಮಾಂ ನಿತ್ಯಂ ನಿರಾಶೀಃಶ್ರದ್ಧಯಾನ್ವಿತಃ ॥**
**ಭಜತೇ ಶನಕೈಸ್ತಸ್ಯ ಮನೋರಾಜನ್ ಪ್ರಸೀದತಿ ॥ ೬೪**

—ಭಾಗವತ, ೪-೨೦-೯

ಯಾರು ತನ್ನ ಧರ್ಮದಲ್ಲಿ ನಿರತನಾಗಿ ಶ್ರದ್ಧೆಯಿಂದ ಕೂಡಿ ನನ್ನನ್ನು (ಪರಮಾತ್ಮನನ್ನು) ಯಾವಾಗಲೂ, ಆಶೆಗಳಿಲ್ಲದವನಾಗಿ ಭಜಿಸುತ್ತಾನೋ, ಎಲೈ ರಾಜನೇ, ಅವನ ಮನಸ್ಸು ಕ್ರಮವಾಗಿ ಪ್ರಸನ್ನವಾಗುತ್ತದೆ.

**ಯಸ್ಯ ಯದ್ ದೈವವಿಹಿತಂ ಸ ತೇನ ಸುಖದುಃಖಯೋಃ ।**
**ಆತ್ಮಾನಂ ತೋಷಯನ್ ದೇಹೀ ತಮಸಃ ಪಾರಮೃಚ್ಛತಿ ॥ ೬೫**

—ಭಾಗವತ, ೪-೮-೩೩

ಯಾರಿಗೆ ಯಾವುದು ದೈವದಿಂದ ಬಂದಿದೆಯೋ ಅದರಿಂದ ಅವನು ಸುಖದುಃಖಗಳಲ್ಲಿ ತನ್ನನ್ನು ಸಂತೋಷಪಡಿಸುತ್ತಾ ಕತ್ತಲನ್ನು (ಅಜ್ಞಾನವನ್ನು) ದಾಟುತ್ತಾನೆ.

**ಯಸ್ಮಿನ್ ಮನೋ ಲಬ್ಧಪದಂ ಯದೇತ-**
**ಚ್ಛನೈಃ ಶನೈರ್ಮುಂಚತಿ ಕರ್ಮರೇಣೂನ್ ।**
**ಸತ್ತ್ವೇನ ವೃದ್ಧೇನ ರಜಸ್ತಮಶ್ಚ**
**ವಿಧೂಯ ನಿರ್ವಾಣಮುಪೈತ್ಯನಿಂಧನಮ್ ॥ ೬೬**

—ಭಾಗವತ, ೧೧-೯-೧೨

ಪರಮಾತ್ಮನ ಚಿಂತೆಯಲ್ಲಿ ಲೀನವಾಗಿರುವ ಮನಸ್ಸು ಮೆಲ್ಲಮೆಲ್ಲಗೆ ಕರ್ಮವೆಂಬ ಧೂಳಿನ ಕಣಗಳನ್ನು ಬಿಡುತ್ತದೆ. ವೃದ್ಧಿಹೊಂದಿದ ಸತ್ತ್ವಗುಣದಿಂದ ರಜೋಗುಣ ತಮೋಗುಣಗಳನ್ನು ತಳ್ಳಿ, ಶಾಶ್ವತಾನಂದವನ್ನು ಕೊಡುವ ಮುಕ್ತಿಯನ್ನು ಹೊಂದುತ್ತದೆ.

**ಯಶ್ಚ ಮೂಢತಮೋ ಲೋಕೇ ಯಶ್ಚ ಬುದ್ಧೇಃ ಪರಂ ಗತಃ ।**
**ತಾವುಭೌ ಸುಖಮೇಧೇತೇ ಕ್ಲಿಶ್ಯತ್ಯಂತರಿತೋ ಜನಃ ॥ ೬೭**

—ಭಾಗವತ, ೩-೭-೧೭

ಈ ಲೋಕದಲ್ಲಿ ಯಾರು ಅತ್ಯಂತ ಮೂರ್ಖರೋ ಮತ್ತು ಯಾರು ಬುದ್ಧಿಯ ಮೇರೆಯನ್ನು ಮೀರಿರುವರೋ ಅವರಿಬ್ಬರೂ ಸುಖವನ್ನು ಪಡೆಯುತ್ತಾರೆ. ಆದರೆ ಇವರಿಬ್ಬರ ನಡುವೆ ಇರುವ ಜನರೇ ದುಃಖರನ್ನನುಭವಿಸುತ್ತಾರೆ.

**ಯಾವತಃ ಕುರುತೇ ಜಂತುಃ ಸಂಬಂಧಾನ್ ಮನಸಃ ಪ್ರಿಯಾನ್ ।**
**ತಾವಂತೋಽಸ್ಯ ನಿಖನ್ಯಂತೇ ಹೃದಯೇ ಶೋಕಶಂಕವಃ ॥ ೬೮**

—ವಿಷ್ಣುಪುರಾಣ, ೧-೧೭-೬೬

ಮನುಷ್ಯನು ತನ್ನ ಮನಸ್ಸಿಗೆ ಪ್ರಿಯವಾದ ಸಂಬಂಧಗಳನ್ನು ಹೆಚ್ಚಿಸಿಕೊಂಡಷ್ಟೂ ತನ್ನ ಹೃದಯದಲ್ಲಿ ದುಃಖದ ಮೊಳೆಗಳನ್ನು ಹೆಚ್ಚಿಸಿಕೊಳ್ಳುತ್ತಾನೆ.

**ಯಾವದಸ್ಖಲಿತಂ ತಾವತ್ಸುಖಂ ಯಾತಿ ಸಮೇ ಪಥಿ ।**
**ಸ್ಖಲಿತೇ ಚ ಸಮುತ್ಪನ್ನೇ ವಿಷಮಂ ಚ ಪದೇ ಪದೇ ॥ ೬೯**

—ಪಂಚತಂತ್ರ, ಮಿತ್ರಸಂಪ್ರಾಪ್ತಿ-೧೮೭

ಎಲ್ಲಿಯವರೆಗೆ ಒಮ್ಮೆಯೂ ಎಡವುದಿಲ್ಲವೋ ಅಲ್ಲಿಯವರೆಗೆ ಸುಖವಾಗಿ ಸಮವಾದ ಹಾದಿಯಲ್ಲಿ ನಡೆಯುತ್ತಾನೆ. ಒಮ್ಮೆ ಎಡವಿದಾಗ ಮುಂದೆ ಹೆಜ್ಜೆಹೆಜ್ಜೆಗೂ ಹಾದಿ ವಿಷಮ ವಾಗುತ್ತದೆ.

**ಯಾವನ್ನ ಯೌವನಪ್ರಾಪ್ತಃ ಶಿಕ್ಷ್ಯತೇ ತಾವದಾತ್ಮಜಃ ।**
**ವ್ಯತೀತಕಾಲೇ ಕೇದಾರೇ ಕರ್ಷಣೈಃ ಕಿಂ ಕರಿಷ್ಯತೇ ॥ ೭೦**

—ಹರಿಹರಸುಭಾಷಿತ, ೨-೫೪

ಮಗನಿಗೆ ಯೌವನ ಬರುವುದರೊಳಗೆ ಶಿಕ್ಷಣವನ್ನು ಕೊಡಬೇಕು. ಕಾಲ ಮೀರಿದ ಮೇಲೆ ಗದ್ದೆಯನ್ನು ಉತ್ತರೆ ಏನಾದೀತು ?

**ರತ್ನೋದಾರಚತುಃಸಮುದ್ರರಶನಾಂ ಭುಕ್ತ್ವಾ ಭುವಂ ಕೌರವಃ**
**ಭಗ್ನೋರುಃ ಪತಿತಃ ಸ ನಿಷ್ಪರಿಜನೋ ಜೀವನ್ ವೃಕೈರ್ಭಕ್ಷಿತಃ ।**
**ಗೋಪೈರ್ವಿಶ್ವಜಯೀ ಜಿತಃ ಸ ವಿಜಯಃ ಕಕ್ಷ್ಯೈಃ ಕ್ಷಿತಾ ವೃಷ್ಣಯಃ**
**ತಸ್ಮಾತ್ ಸರ್ವಮಿದಂ ವಿಚಾರ್ಯ ಸುಚಿರಂ ಶಾಂತ್ಯೈ**
**ಮನೋ ದೀಯತಾಮ್ ॥ ೭೧**

—ಭಾರತಮಂಜರೀ, ಸಮಾಪ್ತಿಪದ್ಯ-೩

ರತ್ನಖಚಿತವಾದ ನಾಲ್ಕು ಸಮುದ್ರಗಳೇ ಡಾಬಾಗಿದ್ದ ಭೂಮಿಯನ್ನು ಪಾಲಿಸಿ, ದುರ್ಯೋಧನನು ತೊಡೆಮುರಿದು ಬಿದ್ದನು. ಪರಿವಾರವಿಲ್ಲದೆ ಏಕಾಕಿಯಾಗಿ, ಬದುಕಿರುವಾಗಲೇ ತೋಳಗಳಿಂದ ಭಕ್ಷಿತನಾದನು. ವಿಶ್ವವಿಜಯಿಯಾದ ಅರ್ಜುನನು

ದನಕಾಯುವವರಿಂದ ಪರಾಜಿತನಾದನು. ಜೊಂಡು ಹುಲ್ಲಿನ ಹುರಿಗಳಿಂದ ಯಾದವರು ನಶಿಸಿದರು. ಆದ್ದರಿಂದ ಇದೆಲ್ಲವನ್ನೂ ದೀರ್ಘವಾಗಿ ಪರ್ಯಾಲೋಚಿಸಿ ಶಾಂತಿಗೆ ಮನಸ್ಸನ್ನು ತೊಡಗಿಸಬೇಕು.

ರಾತ್ರಿಃ ಸೈವ ಪುನಃ ಸ ಏವ ದಿವಸೋ ಮತ್ವಾ ಮುಧಾ ಜಂತವೋ
ಧಾವಂತ್ಯುದ್ಯಮಿನಸ್ತಥೈವ ನಿಭೃತಪ್ರಾರಬ್ಧತತ್ತತ್ಕ್ರಿಯಾಃ ।
ವ್ಯಾಪಾರೈಃ ಪುನರುಕ್ತಭುಕ್ತವಿಷಯೈರೇವಂವಿಧೇನಾಮುನಾ
ಸಂಸಾರೇಣ ಕದರ್ಥಿತಾಃ ಕಥಮಹೋ ಮೋಹಾನ್ನ ಲಜ್ಜಾಮಹೇ ॥೭೨

—ವೈರಾಗ್ಯ ಶತಕ-೭೬

ಅದೇ ರಾತ್ರಿ, ಅದೇ ಹಗಲು ಮತ್ತೆ ಮತ್ತೆ ಬಂದಿದೆ ಎಂದು ತಿಳಿದೂ ಪ್ರಾಣಿಗಳು ತಮ್ಮ ತಮ್ಮ ಆಯಾ ಉದ್ಯಮಗಳಲ್ಲಿ ತೊಡಗಿ, ಇತರರಿಗೆ ತಿಳಿಯದಂತೆ ತಾವು ಆರಂಭಿಸಿದ ಆಯಾ ಕಾರ್ಯಗಳನ್ನು ಮುಂದುವರಿಸಿ, ಹಿಂದೆ ಅನುಭವಿಸಿದ ಅದೇ ವಿಷಯಗಳ ಸುಖಕ್ಕಾಗಿ ವ್ಯರ್ಥವಾಗಿ ಧಾವಿಸುತ್ತಾರೆ. ಈ ಬಿಧವಾದ ಸಂಸಾರ ನಿರರ್ಥಕವಾದುದು. ಆದರೂ ಅಜ್ಞಾನದ ಕಾರಣ ನಾಚಿಕೆ ಪಡುವುದಿಲ್ಲವಲ್ಲಾ! ಏನಾಶ್ಚರ್ಯ!

ಲಾಲಯೇದ್ಬಾಲಕಂ ತಾವದ್ಯಾವದತ್ರ ವಿಮುಗ್ಧತಾ ।
ರಾಜಾ ಪ್ರಜಾಸ್ವಿವ ಪ್ರೀತಿಂ ಪಶ್ಚಾತ್ ಪ್ರಚ್ಛಾದಯೇತ್ ಪಿತಾ ॥ ೭೩

—ಹರಿಹರ ಸುಭಾಷಿತ, ೨-೪೧

ಮಗನು ಚಿಕ್ಕವನಾಗಿರುವಾಗ ತಂದೆ ಅವನನ್ನು ಮುದ್ದಿಸಬೇಕು. ಆಮೇಲೆ ಪ್ರೀತಿಯನ್ನು ಮನಸ್ಸಿನಲ್ಲಿಯೇ ಇರಿಸಿಕೊಳ್ಳಬೇಕು. ರಾಜನು ಪ್ರಜೆಗಳಲ್ಲಿನ ಪ್ರೀತಿಯನ್ನು ಹೊರಗೆ ತೋರಿಸದೆ ಅಡಗಿಸಿಕೊಂಡಂತೆ ಇರಬೇಕು.

ಲೋಹದಾರುಮಯೈಃ ಪಾಶೈಃ ಪುಮಾನ್ ಬದ್ಧೋ ವಿಮುಚ್ಯತೇ ।
ಪುತ್ರದಾರಮಯೈಃ ಪಾಶೈಃ ಮುಚ್ಯತೇ ನ ಕದಾಚನ ॥ ೭೪

—ಗರುಡಪುರಾಣ, ೧೬-೪೮

ಲೋಹ, ಮರ ಇವುಗಳಿಂದಾದ ಬಂಧನಗಳಿಂದ ಒಂದು ವೇಳೆ ಮಾನವನು ಬಿಡಿಸಿಕೊಳ್ಳಬಹುದು. ಆದರೆ ಮಕ್ಕಳು ಹೆಂಡತಿ ಎಂಬ ಪಾಶಗಳಿಂದ ಎಂದಿಗೂ ಬಿಡಿಸಿಕೊಳ್ಳಲಾರನು.

ವಯಮಿಹ ಪರಿತುಷ್ಟಾ ವಲ್ಕಲೈಸ್ತ್ವಂ ದುಕೂಲೈಃ
ಸಮ ಇಹ ಪರಿತೋಷೋ ನಿರ್ವಿಶೇಷೋ ವಿಶೇಷಃ ।
ಸ ತು ಭವತಿ ದರಿದ್ರೋ ಯಸ್ಯ ತೃಷ್ಣಾ ವಿಶಾಲಾ
ಮನಸಿ ಚ ಪರಿತುಷ್ಟೇ ಕೋಽರ್ಥವಾನ್ ಕೋ ದರಿದ್ರಃ ॥ ೭೫

—ವೈರಾಗ್ಯ ಶತಕ-೪೯

ನಾವು ಇಲ್ಲಿ ನಾರುಬಟ್ಟೆಗಳನ್ನುಟ್ಟು ಸಂತೋಷದಿಂದಿದ್ದೇವೆ. ಹಾಗೆಯೇ ನೀವು ರೇಷ್ಮೆಬಟ್ಟೆಗಳಿಂದ ತೃಪ್ತರು. ಇಬ್ಬರೂ ಸಮಾನವಾಗಿ ಸಂತೋಷದಿಂದಿದ್ದೇವೆ. ಆಸೆ ಹೆಚ್ಚಾದರೆ ಬಡವ, ಮನಸ್ಸು ತೃಪ್ತಿಯಿಂದಿದ್ದರೆ ಬಡವನಾರು, ಸಿರಿವಂತನಾರು?

**ವಿಭೂಷಣಾಯ ಮಹತೇ ತೃಷ್ಣಾತಿಮಿರಹಾರಿಣೇ ।**
**ನಮಃ ಸಂತೋಷರತ್ನಾಯ ಸೇವಾವಿಷವಿನಾಶಿನೇ ॥ ೭೬**

—ಸೇವ್ಯಸೇವಕೋಪದೇಶ

ಮಹತ್ತರವಾದ ಅಲಂಕಾರವೂ, ಆಸೆಯೆಂಬ ಕತ್ತಲೆಯನ್ನು ಹೋಗಲಾಡಿಸತಕ್ಕದ್ದೂ, ಸೇವಾವಿಷವನ್ನು ನಾಶಮಾಡತಕ್ಕದ್ದೂ ಆದ ಸಂತೋಷವೆಂಬ ರತ್ನಕ್ಕೆ ನಮಸ್ಕಾರ.

**ವಿನಯಂತು ಸುತಾನ್ ಸಂತಃ ಸ್ವಸಂಪಾದ್ಯಾಃ ಪುನರ್ಗುಣಾಃ ।**
**ಸರ್ವಂ ಕೃಷಾಣಾಃ ಕುರ್ವಂತು ಬೀಜಂ ಸೂತೇಽಂಕುರಂ ಸ್ವತಃ॥೭೭**

—ಹರಿಹರಸುಭಾಷಿತ,- ೨-೫೫

ಸಜ್ಜನರು ತಮ್ಮ ಮಕ್ಕಳಿಗೆ ಶಿಕ್ಷಣವನ್ನೀಯುವುದು ಕರ್ತವ್ಯ. ಸದ್ಗುಣಗಳು ಮಾತ್ರ ಮಕ್ಕಳೇ ಸಂಪಾದಿಸಿಕೊಳ್ಳತಕ್ಕವು. ರೈತರು ಉಳಿದೆಲ್ಲ ಕೆಲಸವನ್ನೂ ಮಾಡುತ್ತಾರೆ. ಆದರೆ ಮೊಳೆಯುವುದು ಬೀಜಕ್ಕೆ ಸೇರಿದ್ದು.

**ವೃಷ್ಟಿಂ ಹೃಷ್ಟಶಿಖಂಡಿತಾಂಡವಭೃತಃ ಕಾಲೇ ಕಿರಂತ್ವಂಬುದಾಃ**
**ಕುರ್ವಂತಃ ಪ್ರತಿರೂಢಸಂತತಹರಿತ್ಸಸ್ಯೋತ್ತರೀಯಾಂ ಕ್ಷಿತಿಂ ।**
**ಚಿನ್ವಾನಾಃ ಸುಕೃತಾನಿ ವೀತವಿಪದೋ ನಿರ್ಮತ್ಸರೈಃ ಮಾನಸೈಃ**
**ಮೋದಂತಾಂ ಘನಬದ್ಧಬಾಂಧವಸುಹೃದ್ಗೋಷ್ಠೀಪ್ರಮೋದಾಃ ಪ್ರಜಾಃ ॥ ೭೮**

—ನಾಗಾನಂದ, ೫-೪೦

ಸಕಾಲದಲ್ಲಿ ಮೋಡಗಳು ಸಂತೋಷದಿಂದ ನವಿಲುಗಳನ್ನು ಕುಣಿಯುವಂತೆ ಮಾಡುತ್ತಾ ಮಳೆ ಸುರಿಸಲಿ. ಇದರಿಂದ ಭೂಮಿಯು ಒತ್ತಾಗಿ ಬೆಳೆದ ಹಸುರಿನಿಂದ ಮುಚ್ಚಿ ಸುಂದರವಾಗಿ ಕಾಣಿಸಲಿ. ಜನಗಳು ಕಷ್ಟಕಾರ್ಪಣ್ಯಗಳಿಲ್ಲದೆ, ಅಸೂಯೆಯಿಲ್ಲದೆ ಒಳ್ಳೆಯ ಕೆಲಸಗಳನ್ನು ಮಾಡುತ್ತಾ ನೆಂಟರು ಗೆಳೆಯರೊಡನೆ ಆನಂದವಾಗಿ ಕಾಲ ಕಳೆಯಲಿ.

**ಶನೈಃಶನೈರ್ವಿನೀಯಂತೇ ತರ್ಜನೈಸ್ತೋಷಣೈರಪಿ ।**
**ನವಾ ಇವಾಶ್ವಾಃ ಕುಶಲೈರ್ಬಾಲಾಶ್ಚಪಲಚೇತಸಃ ॥ ೭೯**

—ಹರಿಹರಸುಭಾಷಿತ, ೨-೪೦

ಹೊಸ ಕುದುರೆಗಳನ್ನು ಪಳಗಿಸುವಂತೆ, ಚಪಲರಾದ ಬಾಲಕರನ್ನು ಕೆಲವು ವೇಳೆ ಮುದ್ದಿಸುವುದು ಕೆಲವು ವೇಳೆ ಸಂತೋಷಗೊಳಿಸುವುದು- ಈ ಕ್ರಮದಿಂದ ಬುದ್ಧಿಶಾಲಿಗಳು ಪಳಗಿಸಬೇಕು.

**ಶರದಂಬುಧರಚ್ಛಾಯಾಗತ್ವರ್ಯೋ ಯೌವನಶ್ರಿಯಃ ।**
**ಆಪಾತರಮ್ಯಾ ವಿಷಯಾಃ ಪರ್ಯಂತಪರಿತಾಪಿನಃ ॥ ೮೦**

—ಕಿರಾತಾರ್ಜುನೀಯ, ೧೧-೧೨

ತಾರುಣ್ಯದ ಶೋಭೆಯು ಶರತ್ಕಾಲದ ಮೋಡಗಳ ನೆರಳಿನಂತೆ ಶಾಶ್ವತವಲ್ಲ. ವಿಷಯ ಸುಖಗಳು ಮೇಲೆ ನೋಡುವುದಕ್ಕೆ ಸುಂದರವಾಗಿದ್ದರೂ ಕೊನೆಗೆ ದುಃಖವನ್ನು ಕೊಡುತ್ತವೆ.

**ಶಿಶೋಃ ಕ್ರೀಡನಕೈರ್ವೇಶ್ಮ ಕಲಾಲಾಪೈರಪಿ ಶ್ರುತಿಃ ।**
**ವಪುರಂಗರಜೋಭಿಶ್ಚೇನ್ನಾಕುಲಂ ಜಗದಾಕುಲಮ್ ॥ ೮೧**

—ಹರಿಹರಸುಭಾಷಿತ, ೨-೩೫

ಮಗುವಿನ ಆಟದ ಸಾಮಾನುಗಳಿಂದ ಮನೆಯೂ, ಅದರ ಮುದ್ದುಮಾತುಗಳಿಂದ ಕಿವಿಯೂ, ಮಗುವಿನ ಮೈಗೆ ಹತ್ತಿದ ಧೂಳಿನಿಂದ ದೇಹವೂ ವ್ಯಾಪ್ತವಾಗದಿದ್ದರೆ ಜಗತ್ತು ನೀರಸವಾಗಿ ವ್ಯಾಕುಲಗೊಳ್ಳುವುದು.

**ಶಿಶೌ ಪ್ರವಿಶತಃ ಪ್ರಾಯಃ ಪ್ರತಿವೇಶಿಗುಣಾಗುಣೌ ।**
**ಗಂಧೋಽನ್ಯಸಂನಿಧೇರೇವ ಸಂಕ್ರಾಮತಿ ಸಮೀರಣೇ ॥ ೮೨**

—ಹರಿಹರಸುಭಾಷಿತ, ೨-೫೧

ಮಗುವಿನಲ್ಲಿ ನೆರಮನೆಯವರ ಸದ್ಗುಣಗಳೂ ದುರ್ಗುಣಗಳೂ ಸಾಮಾನ್ಯವಾಗಿ ಸೇರಿಕೊಳ್ಳುತ್ತವೆ, ಗಾಳಿಯಲ್ಲಿ ಇನ್ನೊಂದು ವಸ್ತುವಿನ ವಾಸನೆ ಸೇರಿಕೊಳ್ಳುವಂತೆ.

**ಶೋಕಸ್ಥಾನಸಹಸ್ರಾಣಿ ಹರ್ಷ ಸ್ಥಾನಶತಾನಿ ಚ ।**
**ದಿವಸೇ ದಿವಸೇ ಮೂಢಮಾವಿಶಂತಿ ನ ಪಂಡಿತಮ್ ॥ ೮೩**

—ಮಹಾಭಾರತ, ಶಾಂತಿ. ೨೫-೨೦

ಪ್ರತಿದಿನವೂ ಸಾವಿರಾರು ದುಃಖಗಳೂ, ನೂರಾರು ಸಂತೋಷಗಳೂ ಮೂರ್ಖನಿಗೆ ಬರುತ್ತವೆ, ಪಂಡಿತನಿಗಲ್ಲ.

**ಸಂತಾನವಾಹೀನ್ಯಪಿ ಮಾನುಷಾಣಾಂ**
**ದುಃಖಾನಿ ಸಂಬಂಧಿವಿಯೋಗಜಾನಿ ।**
**ದೃಷ್ಟೇ ಜನೇ ಪ್ರೇಯಸಿ ದುಃಸಹಾನಿ**
**ಸ್ರೋತಃ ಸಹಸ್ರೈರಿವ ಸಂಪ್ಲವಂತೇ ॥ ೮೪**

—ಉತ್ತರರಾಮಚರಿತ, ೪-೮

ಹತ್ತಿರದ ನೆಂಟರ ಅಗಲಿಕೆಯಿಂದ ಉಂಟಾದ ದುಃಖವು, ಪ್ರೀತಿಪಾತ್ರರಾದ ಜನರನ್ನು ಕಂಡಾಗ ಮತ್ತಷ್ಟು ಹೆಚ್ಚಿ ಸಾವಿರ ಪ್ರವಾಹಗಳಾಗಿ ಅಡ್ಡಿಯಿಲ್ಲದೆ ಹರಿಯುತ್ತವೆ.

**ಸಂತುಷ್ಟೋ ಭಾರ್ಯಯಾ ಭರ್ತಾ ಭರ್ತ್ರಾ ಭಾರ್ಯಾ ತಥೈವ ಚ ।**
**ಯಸ್ಮಿನ್ನೇವ ಕುಲೇ ನಿತ್ಯಂ ಕಲ್ಯಾಣಂ ತತ್ರ ವೈ ಧ್ರುವಮ್ ॥ ೮೫**

—ಮನುಸ್ಮೃತಿ, ೩-೬೦

ಯಾವ ಕುಟುಂಬದಲ್ಲಿ ಗಂಡನಿಂದ ಹೆಂಡತಿಯೂ, ಹೆಂಡತಿಯಿಂದ ಗಂಡನೂ ತೃಪ್ತರಾಗಿ ಆನಂದವನ್ನು ಪಡೆಯುತ್ತಾರೆಯೋ, ಅಲ್ಲಿ ಯಾವಾಗಲೂ ಮಂಗಳವುಂಟಾಗುತ್ತದೆ.

**ಸಂತುಷ್ಟಸ್ಯ ನಿರೀಹಸ್ಯ ಸ್ವಾತ್ಮಾರಾಮಸ್ಯ ಯತ್ಸುಖಂ ।**
**ಕುತಸ್ತತ್ ಕಾಮಲೋಭೇನ ಧಾವತೋಽರ್ಥೇಹಯಾ ದಿಶಃ ॥ ೮೬**

—ಭಾಗವತ, ೭-೧೫-೧೬

ಸಂತೋಷದಿಂದ ಕೂಡಿದವನಿಗೆ, ಆಸೆಯಿಲ್ಲದವನಿಗೆ, ಆತ್ಮಾನಂದವನ್ನು ಹೊಂದಿದವನಿಗೆ ಯಾವ ಸುಖವುಂಟೋ ಅದು ಕಾಮದಾಸೆಯಿಂದ, ಹಣದಾಸೆಯಿಂದ ದಿಕ್ಕು ದಿಕ್ಕುಗಳಿಗೋಡುವವನಿಗೆ ಎಲ್ಲಿಂದ ಬರಬೇಕು?

**ಸಂತೋಷಂ ಪರಮಾಸ್ಥಾಯ ಸುಖಾರ್ಥೀ ಸಂಯತೋ ಭವೇತ್ ।**
**ಸಂತೋಷಮೂಲಂ ಹಿ ಸುಖಂ ದುಃಖಮೂಲಂ ವಿಪರ್ಯಯಃ ॥೮೭**

—ಮನುಸ್ಮೃತಿ, ೩-೧೨

ಹೆಚ್ಚು ತೃಪ್ತಿಯಿಂದ ಸುಖವನ್ನು ಪಡೆಯಲು ಶಿಸ್ತಿನಿಂದಿರಬೇಕು. ಸುಖವು ತೃಪ್ತಿಯಿಂದಾಗುತ್ತದೆ. ಅತೃಪ್ತಿಯೇ ದುಃಖಕ್ಕೆ ಮೂಲ.

**ಸಂತೋಷಾಮೃತತೃಪ್ತಾನಾಂ ಯತ್ಸುಖಂ ಶಾಂತಚೇತಸಾಂ ।**
**ಕುತಸ್ತದ್ಧನಲುಬ್ಧಾನಾಮಿತಶ್ಚೇತಶ್ಚ ಧಾವತಾಮ್ ॥ ೮೮**

—ಹಿತೋಪದೇಶ, ಮಿತ್ರಲಾಭ-೧೧೦

ಸಂತೋಷವೆಂಬ ಅಮೃತದ ಪಾನದಿಂದ ತೃಪ್ತರಾದವರೂ ಶಾಂತವಾದ ಮನಸ್ಸುಳ್ಳವರೂ ಆದವರಿಗೆ ಯಾವ ಸುಖವಿದೆಯೋ, ಅದು ಹಣದ ಆಸೆಗೊಳಗಾಗಿ ಇತ್ತಲತ್ತ ಓಡುವವರಿಗೆ ಹೇಗೆ ಲಭಿಸೀತು?

**ಸರ್ಪಾಃ ಪಿಬಂತಿ ಪವನಂ ನ ಚ ದುರ್ಬಲಾಸ್ತೇ**
**ಶುಷ್ಕೈಸ್ತೃಣೈರ್ವನಗಜಾ ಬಲಿನೋ ಭವಂತಿ ।**
**ಕಂದೈಃ ಫಲೈರ್ಮುನಿವರಾ ಗಮಯಂತಿ ಕಾಲಂ**
**ಸಂತೋಷ ಏವ ಪುರುಷಸ್ಯ ಪರಂ ನಿಧಾನಮ್ ॥ ೮೯**

—ಪಂಚತಂತ್ರ, ಮಿತ್ರಸಂಪ್ರಾಪ್ತಿ-೧೫೯

ಶರದಂಬುಧರಚ್ಛಾಯಾಗತ್ವರ್ಯೋ ಯೌವನಶ್ರಿಯಃ ।
ಆಪಾತರಮ್ಯಾ ವಿಷಯಾಃ ಪರ್ಯಂತಪರಿತಾಪಿನಃ ॥ ೮೦

—ಕಿರಾತಾರ್ಜುನೀಯ, ೧೧-೧೨

ತಾರುಣ್ಯದ ಶೋಭೆಯು ಶರತ್ಕಾಲದ ಮೋಡಗಳ ನೆರಳಿನಂತೆ ಶಾಶ್ವತವಲ್ಲ. ವಿಷಯ ಸುಖಗಳು ಮೇಲೆ ನೋಡುವುದಕ್ಕೆ ಸುಂದರವಾಗಿದ್ದರೂ ಕೊನೆಗೆ ದುಃಖವನ್ನು ಕೊಡುತ್ತವೆ.

ಶಿಶೋಃ ಕ್ರೀಡನಕೈರ್ವೇಶ್ಮ ಕಲಾಲಾಪೈರಪಿ ಶ್ರುತಿಃ ।
ವಪುರಂಗರಜೋಭಿಶ್ಚೇನ್ನಾಕುಲಂ ಜಗದಾಕುಲಮ್ ॥ ೮೧

—ಹರಿಹರಸುಭಾಷಿತ, ೨-೩೫

ಮಗುವಿನ ಆಟದ ಸಾಮಾನುಗಳಿಂದ ಮನೆಯೂ, ಅದರ ಮುದ್ದುಮಾತುಗಳಿಂದ ಕಿವಿಯೂ, ಮಗುವಿನ ಮೈಗೆ ಹತ್ತಿದ ಧೂಳಿನಿಂದ ದೇಹವೂ ವ್ಯಾಪ್ತವಾಗದಿದ್ದರೆ ಜಗತ್ತು ನೀರಸವಾಗಿ ವ್ಯಾಕುಲಗೊಳ್ಳುವುದು.

ಶಿಶೌ ಪ್ರವಿಶತಃ ಪ್ರಾಯಃ ಪ್ರತಿವೇಶಿಗುಣಾಗುಣೌ ।
ಗಂಧೋಽನ್ಯಸಂನಿಧೇರೇವ ಸಂಕ್ರಾಮತಿ ಸಮೀರಣೇ ॥ ೮೨

—ಹರಿಹರಸುಭಾಷಿತ, ೨-೫೧

ಮಗುವಿನಲ್ಲಿ ನೆರಮನೆಯವರ ಸದ್ಗುಣಗಳೂ ದುರ್ಗುಣಗಳೂ ಸಾಮಾನ್ಯವಾಗಿ ಸೇರಿಕೊಳ್ಳುತ್ತವೆ, ಗಾಳಿಯಲ್ಲಿ ಇನ್ನೊಂದು ವಸ್ತುವಿನ ವಾಸನೆ ಸೇರಿಕೊಳ್ಳುವಂತೆ.

ಶೋಕಸ್ಥಾನಸಹಸ್ರಾಣಿ ಹರ್ಷ ಸ್ಥಾನಶತಾನಿ ಚ ।
ದಿವಸೇ ದಿವಸೇ ಮೂಢಮಾವಿಶಂತಿ ನ ಪಂಡಿತಮ್ ॥ ೮೩

—ಮಹಾಭಾರತ, ಶಾಂತಿ. ೨೫-೨೦

ಪ್ರತಿದಿನವೂ ಸಾವಿರಾರು ದುಃಖಗಳೂ, ನೂರಾರು ಸಂತೋಷಗಳೂ ಮೂರ್ಖನಿಗೆ ಬರುತ್ತವೆ, ಪಂಡಿತನಿಗಲ್ಲ.

ಸಂತಾನವಾಹೀನ್ಯಪಿ ಮಾನುಷಾಣಾಂ
ದುಃಖಾನಿ ಸಂಬಂಧಿವಿಯೋಗಜಾನಿ ।
ದೃಷ್ಟೇ ಜನೇ ಪ್ರೇಯಸಿ ದುಃಸಹಾನಿ
ಸ್ರೋತಃ ಸಹಸ್ರೈರಿವ ಸಂಪ್ಲವಂತೇ ॥ ೮೪

—ಉತ್ತರರಾಮಚರಿತ, ೪-೮

ಹತ್ತಿರದ ನೆಂಟರ ಅಗಲಿಕೆಯಿಂದ ಉಂಟಾದ ದುಃಖವು, ಪ್ರೀತಿಪಾತ್ರರಾದ ಜನರನ್ನು ಕಂಡಾಗ ಮತ್ತಷ್ಟು ಹೆಚ್ಚಿ ಸಾವಿರ ಪ್ರವಾಹಗಳಾಗಿ ಅಡ್ಡಿಯಿಲ್ಲದೆ ಹರಿಯುತ್ತವೆ.

**ಸಂತುಷ್ಟೋ ಭಾರ್ಯಯಾ ಭರ್ತಾ ಭರ್ತ್ರಾ ಭಾರ್ಯಾ ತಥೈವ ಚ ।**
**ಯಸ್ಮಿನ್ನೇವ ಕುಲೇ ನಿತ್ಯಂ ಕಲ್ಯಾಣಂ ತತ್ರ ವೈ ಧ್ರುವಮ್ ॥ ೮೫**

—ಮನುಸ್ಮೃತಿ, ೩-೬೦

ಯಾವ ಕುಟುಂಬದಲ್ಲಿ ಗಂಡನಿಂದ ಹೆಂಡತಿಯೂ, ಹೆಂಡತಿಯಿಂದ ಗಂಡನೂ ತೃಪ್ತರಾಗಿ ಆನಂದವನ್ನು ಪಡೆಯುತ್ತಾರೆಯೋ, ಅಲ್ಲಿ ಯಾವಾಗಲೂ ಮಂಗಳವುಂಟಾಗುತ್ತದೆ.

**ಸಂತುಷ್ಟಸ್ಯ ನಿರೀಹಸ್ಯ ಸ್ವಾತ್ಮಾರಾಮಸ್ಯ ಯತ್ಸುಖಂ ।**
**ಕುತಸ್ತತ್ ಕಾಮಲೋಭೇನ ಧಾವತೋಽರ್ಥೇಹಯಾ ದಿಶಃ ॥ ೮೬**

—ಭಾಗವತ, ೭-೧೫-೧೬

ಸಂತೋಷದಿಂದ ಕೂಡಿದವನಿಗೆ, ಆಸೆಯಿಲ್ಲದವನಿಗೆ, ಆತ್ಮಾನಂದವನ್ನು ಹೊಂದಿದವನಿಗೆ ಯಾವ ಸುಖವುಂಟೋ ಅದು ಕಾಮದಾಸೆಯಿಂದ, ಹಣದಾಸೆಯಿಂದ ದಿಕ್ಕು ದಿಕ್ಕುಗಳಿಗೋಡುವವನಿಗೆ ಎಲ್ಲಿಂದ ಬರಬೇಕು?

**ಸಂತೋಷಂ ಪರಮಾಸ್ಥಾಯ ಸುಖಾರ್ಥೀ ಸಂಯತೋ ಭವೇತ್ ।**
**ಸಂತೋಷಮೂಲಂ ಹಿ ಸುಖಂ ದುಃಖಮೂಲಂ ವಿಪರ್ಯಯಃ ॥೮೭**

—ಮನುಸ್ಮೃತಿ, ೩-೧೨

ಹೆಚ್ಚು ತೃಪ್ತಿಯಿಂದ ಸುಖವನ್ನು ಪಡೆಯಲು ಶಿಸ್ತಿನಿಂದಿರಬೇಕು. ಸುಖವು ತೃಪ್ತಿಯಿಂದಾಗುತ್ತದೆ. ಅತೃಪ್ತಿಯೇ ದುಃಖಕ್ಕೆ ಮೂಲ.

**ಸಂತೋಷಾಮೃತತೃಪ್ತಾನಾಂ ಯತ್ಸುಖಂ ಶಾಂತಚೇತಸಾಂ ।**
**ಕುತಸ್ತದ್ಧನಲುಬ್ಧಾನಾಮಿತಶ್ಚೇತಶ್ಚ ಧಾವತಾಮ್ ॥ ೮೮**

—ಹಿತೋಪದೇಶ, ಮಿತ್ರಲಾಭ-೧೧೦

ಸಂತೋಷವೆಂಬ ಅಮೃತದ ಪಾನದಿಂದ ತೃಪ್ತರಾದವರೂ ಶಾಂತವಾದ ಮನಸ್ಸುಳ್ಳವರೂ ಆದವರಿಗೆ ಯಾವ ಸುಖವಿದೆಯೋ, ಅದು ಹಣದ ಆಸೆಗೋಳಗಾಗಿ ಇತ್ತಲತ್ತ ಓಡುವವರಿಗೆ ಹೇಗೆ ಲಭಿಸೀತು?

**ಸರ್ಪಾಃ ಪಿಬಂತಿ ಪವನಂ ನ ಚ ದುರ್ಬಲಾಸ್ತೇ**
**ಶುಷ್ಕೈಸ್ತೃಣೈರ್ವನಗಜಾ ಬಲಿನೋ ಭವಂತಿ ।**
**ಕಂದೈಃ ಫಲೈರ್ಮುನಿವರಾ ಗಮಯಂತಿ ಕಾಲಂ**
**ಸಂತೋಷ ಏವ ಪುರುಷಸ್ಯ ಪರಂ ನಿಧಾನಮ್ ॥ ೮೯**

—ಪಂಚತಂತ್ರ, ಮಿತ್ರಸಂಪ್ರಾಪ್ತಿ-೧೫೯

ಹಾವುಗಳು ಗಾಳಿಯನ್ನು ಕುಡಿಯುತ್ತವೆ. ಅವು ದುರ್ಬಲವಾಗಿಲ್ಲ. ಕಾಡಾನೆಗಳು ಒಣಹುಲ್ಲಿನಿಂದ ಬಲಯುತವಾಗಿ ಆಗುತ್ತವೆ. ಮುನಿಶ್ರೇಷ್ಠರು ಗೆಡ್ಡೆಗೆಣಸುಗಳಿಂದಲೂ ಹಣ್ಣುಗಳಿಂದಲೂ ಕಾಲ ತಳ್ಳುತ್ತಾರೆ. ಪುರುಷನಿಗೆ ಸಂತೋಷವೇ ಮುಖ್ಯವಾದ ಕಾರಣ.

**ಸರ್ವಂ ಪರವಶಂ ದುಃಖಂ ಸರ್ವಮಾತ್ಮವಶಂ ಸುಖಂ ।**
**ಏತದ್ವಿದ್ಯಾತ್ಸಮಾಸೇನ ಲಕ್ಷಣಂ ಸುಖದುಃಖಯೋಃ ॥** ೬೦

—ಮನುಸ್ಮೃತಿ, ೪-೧೬೦

ಬೇರೆಯವರ ಸಹಾಯದಿಂದ ಆಗಬೇಕಾದುದೆಲ್ಲವೂ ದುಃಖ, ತನ್ನಿಂದಲೇ ಆಗುವುದಾದರೆ ಸುಖ. ಇದೇ ಸುಖದುಃಖಗಳ ಸಂಕ್ಷಿಪ್ತ ಸ್ವರೂಪ.

**ಸರ್ವಾಃ ಸಂಪತ್ತಯಸ್ತಸ್ಯ ಸಂತುಷ್ಟಂ ಯಸ್ಯ ಮಾನಸಂ ।**
**ಉಪಾನದ್ಗೂಢಪಾದಸ್ಯ ನನು ಚರ್ಮಾವೃತೇವ ಭೂಃ ॥** ೬೧

—ಹಿತೋಪದೇಶ, ಮಿತ್ರಲಾಭ ೧೦೯

ಯಾರ ಮನಸ್ಸು ತೃಪ್ತಿಯನ್ನು ಹೊಂದಿರುತ್ತದೋ ಅವನಿಗೆ ಎಲ್ಲ ಸಂಪತ್ತುಗಳೂ ಉಂಟು. ಪಾದರಕ್ಷೆಗಳನ್ನು ತೊಟ್ಟವನ ಪಾಲಿಗೆ ನೆಲಕ್ಕೆಲ್ಲಾ ಚರ್ಮ ಹಾಸಿದಂತೆ ತಾನೇ!

**ಸ್ತ್ರಿಯೋ ನ ಪುಂಸಾಮುದಯಸ್ಯ ಸಾಧನಂ**
**ತ ಏವ ತದ್ಧಾಮವಿಭೂತಿಹೇತವಃ ।**
**ತಡಿದ್ವಿಯುಕ್ತೋऽಪಿ ಘನಃ ಪ್ರಜೃಂಭತೇ**
**ವಿನಾ ನ ಮೇಘಂ ವಿಲಸಂತಿ ವಿದ್ಯುತಃ ॥** ೬೨

—ಜಾನಕೀಹರಣ, ೯-೫

ಹೆಂಗಸರು ಗಂಡಸರ ಏಳಿಗೆಗೆ ಕಾರಣರಲ್ಲ. ಗಂಡಸರೇ ಹೆಂಗಸರ ಕಾಂತಿ ವಿಕಾಸಕ್ಕೆ ಸಂಪತ್ತಿಗೆ ಕಾರಣರು. ಮಿಂಚಿಲ್ಲದಿದ್ದರೂ ಮೋಡವು ಮೆರೆಯಬಲ್ಲದು. ಆದರೆ ಮೋಡವಿಲ್ಲದೆ ಮಿಂಚು ಹೊಳೆಯಲಾರದು.

**ಸುಖಮಾಪತಿತಂ ಸೇವೇದ್ದುಃಖಮಾಪತಿತಂ ಸಹೇತ್ ।**
**ಚಕ್ರವತ್ಪರಿವರ್ತಂತೇ ದುಃಖಾನಿ ಚ ಸುಖಾನಿ ಚ ॥** ೬೩

—ಹಿತೋಪದೇಶ, ಮಿತ್ರಲಾಭ-೧೩೪

ಬಂದ ಸುಖವನ್ನು ಸೇವಿಸಬೇಕು. ಹಾಗೆಯೇ ಒದಗಿದ ದುಃಖವನ್ನು ಸಹಿಸಿಕೊಳ್ಳಬೇಕು. ದುಃಖಗಳೂ ಸುಖಗಳೂ ಚಕ್ರದೋಪಾದಿಯಲ್ಲಿ ಒಂದರ ಮೇಲೊಂದ ರಂತೆ ಸುತ್ತುತ್ತಿರುತ್ತವೆ.

**ಸೂನುಃ ಸಚ್ಚರಿತಃ ಸತೀ ಪ್ರಿಯತಮಾ ಸ್ವಾಮೀ ಪ್ರಸಾದೋನ್ಮುಖಃ**
**ಸ್ನಿಗ್ಧಂ ಮಿತ್ರಮವಂಚಕಃ ಪರಿಜನೋ ನಿಃಕ್ಲೇಶಲೇಶಂ ಮನಃ ।**
**ಆಕಾರೋ ರುಚಿರಃ ಸ್ಥಿರಶ್ಚ ವಿಭವೋ ವಿದ್ಯಾವದಾತಂ ಮುಖಂ**
**ತುಷ್ಟೇ ವಿಷ್ಟಪಹಾರಿಣೀಷ್ಟದಹರೌ ಸಂಪ್ರಾಪ್ಯತೇ ದೇಹಿನಾ ॥ ೯೪**

—ನೀತಿಶತಕ,-೨೩

ಒಳ್ಳೆಯ ನಡತೆಯುಳ್ಳ ಮಗ, ಪತಿವ್ರತೆಯಾದ ಹೆಂಡತಿ, ಅನುಗ್ರಹ ಮಾಡುವ ಮನಸ್ಸುಳ್ಳ ಯಜಮಾನ, ಪ್ರೀತಿಯುಳ್ಳ ಸ್ನೇಹಿತ, ಮೋಸ ಮಾಡದ ಸೇವಕರು, ಕಷ್ಟದ ಲೇಶವೂ ಇಲ್ಲದ ಮನಸ್ಸು, ಸುಂದರವಾದ ಆಕಾರ, ಸ್ಥಿರವಾದ ಐಶ್ವರ್ಯ, ವಿದ್ಯೆಯಿಂದ ಪರಿಶುದ್ಧವಾದ ಮುಖ ಇವೆಲ್ಲಾ ಜಗದ್ರಕ್ಷಕನಾದ, ಇಷ್ಟಾರ್ಥಗಳನ್ನೆಲ್ಲಾ ಕೊಡುವ ಶ್ರೀಹರಿಯು ಸಂತುಷ್ಟನಾದರೆ ಮನುಷ್ಯನಿಗೆ ಲಭಿಸುತ್ತದೆ.

**ಸ್ನೇಹಮೂಲಾನಿ ದುಃಖಾನಿ ಸ್ನೇಹಜಾನಿ ಭಯಾನಿ ಚ ।**
**ಶೋಕಹರ್ಷೌ ತಥಾऽಯಾಸಃ ಸರ್ವಂ ಸ್ನೇಹಾತ್ ಪ್ರವರ್ತತೇ ॥ ೯೫**

—ಮಹಾಭಾರತ, ಅರಣ್ಯ. ೨-೨೮

ದುಃಖ, ಭಯ, ವ್ಯಥೆ, ಹರ್ಷ, ಆಯಾಸ-ಇವೆಲ್ಲವೂ ಆಯಾ ವಸ್ತುವಿನಲ್ಲಿ ಇಟ್ಟಿರುವ ಸ್ನೇಹದಿಂದ ಸಂಭವಿಸುತ್ತವೆ. ಮಾನಸವಿಕಾರವೆಲ್ಲವೂ ಸ್ನೇಹದಿಂದ ಹುಟ್ಟುತ್ತವೆ.

**ಹಿತಾಹಿತಂ ನ ಜಾನಂತೋ ನಿತ್ಯಮುನ್ಮಾರ್ಗಗಾಮಿನಃ ।**
**ಕುಕ್ಷಿಪೂರಣನಿಷ್ಠಾ ಯೇ ತೇ ನರಾ ನಾರಕಾಃ ಸ್ಥಿರಾಃ ॥ ೯೬**

—ಗರುಡಪುರಾಣ, ೧೬-೫೨

ತನಗೆ ಯವುದು ಒಳ್ಳೆಯದು ಕೆಟ್ಟದೆಂದರಿಯದೆ, ಯಾವಾಗಲೂ ಕೆಟ್ಟದಾರಿ ತುಳಿಯುತ್ತಾ ಹೊಟ್ಟೆ ತುಂಬಿಸುವುದೇ ಮುಖ್ಯವೆಂದೆಣಿಸುವ ಜನ ಯಾವಾಗಲೂ ದುಃಖ ವನ್ನನುಭವಿಸುತ್ತಾರೆ.



## ೪. ಸಿರಿತನ-ಬಡತನ

**ಅಪುತ್ರಸ್ಯ ಗೃಹಂ ಶೂನ್ಯಂ ಸನ್ಮಿತ್ರರಹಿತಸ್ಯ ಚ ।**
**ಮೂರ್ಖಸ್ಯ ಹೃದಯಂ ಶೂನ್ಯಂ ಸರ್ವಶೂನ್ಯಾ ದರಿದ್ರತಾ ॥ ೧**

—ಹಿತೋಪದೇಶ, ಮಿತ್ರಲಾಭ-೯೬

ಪುತ್ರನಿಲ್ಲದವನ ಮನೆ ಶೂನ್ಯ ; ಸಜ್ಜನನಾದ ಮಿತ್ರನಿಲ್ಲದವನ ಮನೆಯೂ ಶೂನ್ಯ; ಮೂರ್ಖನ ಹೃದಯ ಶೂನ್ಯ ; ಆದರೆ ಬಡತನ ಸರ್ವಶೂನ್ಯ.

**ಅಭಿಮಾನಧನಸ್ಯ ಗತ್ವರೈಃ**
**ಅಸುಭಿಃ ಸ್ಥಾಸ್ನು ಯಶಶ್ಚಿಚೀಷತಃ ।**
**ಅಚಿರಾಂಶುವಿಲಾಸಚಂಚಲಾ**
**ನನು ಲಕ್ಷ್ಮೀಃ ಫಲಮಾನುಷಂಗಿಕಮ್ ॥ ೨**

—ಕಿರಾತಾರ್ಜುನೀಯ, ೨-೧೯

ಅಭಿಮಾನಶಾಲಿಯು, ಕ್ಷಣಿಕವಾದ ಪ್ರಾಣಗಳಿಂದ ಸ್ಥಿರವಾದ ಕೀರ್ತಿಯನ್ನು ಗಳಿಸಲು ಯತ್ನಿಸಿದಾಗ, ಮಿಂಚಿನಂತೆ ಚಂಚಲವಾದ ರಾಜ್ಯಲಕ್ಷ್ಮಿಯೆಂಬ ಫಲವು ಕೇವಲ ಪ್ರಾಸಂಗಿಕ.

**ಅದತ್ತದಾನಾಚ್ಚ ಭವೇದ್ದರಿದ್ರಃ**
**ದರಿದ್ರಭಾವಾಚ್ಚ ಕರೋತಿ ಪಾಪಂ ।**
**ಪಾಪಪ್ರಭಾವಾನ್ನರಕೇ ಪ್ರಯಾತಿ**
**ಪುನರ್ದರಿದ್ರಃ ಪುನರೇವ ಪಾಪೀ ॥ ೩**

—ಗರುಡಪುರಾಣ, ೫-೫೫

ದಾನ ಮಾಡದೆ ಬಡವನಾಗುತ್ತಾನೆ. ಬಡತನದಿಂದ ಪಾಪಗಳನ್ನು ಮಾಡುತ್ತಾನೆ. ಪಾಪದಿಂದ ನರಕವುಂಟಾಗುತ್ತದೆ. ಮತ್ತೆ ಬಡತನ ಮತ್ತೆ ಪಾಪ ಹೀಗೆ ಮುಂದುವರಿಯುತ್ತದೆ.

**ಅರ್ಥಾನಾಮನನುಷ್ಠಾತಾ ಕಾಮಚಾರೀ ವಿಕತ್ಥನಃ ।**
**ಅಪಿ ಸರ್ವಾಂ ಮಹೀಂ ಲಬ್ಧ್ವಾ ಕ್ಷಿಪ್ರಮೇವ ವಿನಶ್ಯತಿ ॥ ೪**

—ಸುಭಾಷಿತಸುಧಾನಿಧಿ, ಪು. ೭೨

ಪ್ರಯೋಜನವುಳ್ಳ ಕೆಲಸಮಾಡದೆ, ಮನಬಂದಂತೆ ನಡೆದು, ವ್ಯರ್ಥವಾಗಿ ಹೆಮ್ಮೆಕೊಚ್ಚಿಕೊಳ್ಳುವವನು ಈ ಭೂಮಿಯನ್ನೆಲ್ಲಾ ಪಡೆದರೂ ಬೇಗನೆ ನಾಶವಾಗುತ್ತಾನೆ.

**ಅರ್ಥಾರ್ಥೀ ಯಾನಿ ಕಷ್ಟಾನಿ ಮೂಢೋಽಯಂ ಸಹತೇ ಜನಃ ।**
**ಶತಾಂಶೇನಾಪಿ ಮೋಕ್ಷಾರ್ಥೀ ತಾನಿ ಚೇನ್ಮೋಕ್ಷಮಾಪ್ನುಯಾತ್ ॥ ೫**

—ಪಂಚತಂತ್ರ, ಮಿತ್ರಸಂಪ್ರಾಪ್ತಿ-೧೨೫

ಅವಿವೇಕಿಗಳಾದ ಈ ಜನರು ಹಣದ ಸಂಪಾದನೆಗಾಗಿ ಯಾವ ಯಾವ ಕಷ್ಟಗಳನ್ನು ಸಹಿಸುತ್ತಾರೆಯೋ, ಅದರ ನೂರರಲ್ಲಿ ಒಂದು ಪಾಲನ್ನು ಸಹಿಸಿದರೂ ಸಹ ಮೋಕ್ಷವನ್ನು ಬಯಸುವವನು ಮುಕ್ತಿ ಪಡೆದಾನು!

**ಅರ್ಥಾನಾಮರ್ಜನೇ ದುಃಖಮರ್ಜಿತಾನಾಂ ಚ ರಕ್ಷಣೇ ।**
**ಆಯೇ ದುಃಖಂ ವ್ಯಯೇ ದುಃಖಂ ಧಿಗರ್ಥಾಃ ಕಷ್ಟಸಂಶ್ರಯಾಃ ॥ ೬**

—ಪಂಚತಂತ್ರ, ಮಿತ್ರಭೇದ-೧೭೪

ಹಣದ ಸಂಪಾದನೆಯಲ್ಲಿ ದುಃಖ ; ಸಂಪಾದಿಸಿದುದರ ರಕ್ಷಣೆಯಲ್ಲಿಯೂ ದುಃಖವೇ. ಆದಾಯದಲ್ಲಿ ದುಃಖ, ವೆಚ್ಚದಲ್ಲಿ ದುಃಖ. ಕಷ್ಟಗಳಿಂದ ಕೂಡಿರುವ ಐಶ್ವರ್ಯಕ್ಕೆ ಧಿಕ್ಕಾರವಿರಲಿ.

**ಅರ್ಥೇನ ಹಿ ವಿಯುಕ್ತಸ್ಯ ಪುರುಷಸ್ಯಾಲ್ಪತೇಜಸಃ ।**
**ವ್ಯುಚ್ಛಿದ್ಯಂತೇ ಕ್ರಿಯಾಃ ಸರ್ವಾ ಗ್ರೀಷ್ಮೇ ಕುಸರಿತೋ ಯಥಾ ॥ ೭**

—ರಾಮಾಯಣ, ಯುದ್ಧ ೮೩-೩೩

ಧನಹೀನನಾಗಿ ನಿಸ್ತೇಜಸ್ಕನಾಗಿರುವ ಪುರುಷನ ಎಲ್ಲ ಕಾರ್ಯಗಳೂ, ಬೇಸಿಗೆಯಲ್ಲಿ ಹಳ್ಳಗಳು ಇಂಗಿಹೋಗುವಂತೆ, ತಾವಾಗಿಯೇ ನಶಿಸುತ್ತವೆ.

**ಅಲಬ್ಧಮೀಹೇದ್ಧರ್ಮೇಣ ಲಬ್ಧಂ ಯತ್ನೇನ ಪಾಲಯೇತ್ ।**
**ಪಾಲಿತಂ ವರ್ಧಯೇನ್ನಿತ್ಯಂ ವೃದ್ಧಂ ಪಾತ್ರೇಷು ನಿಕ್ಷಿಪೇತ್ ॥ ೮**

—ಯಾಜ್ಞವಲ್ಕ್ಯ, ೧-೩೧೭

ಧರ್ಮದಿಂದ ಹೊಸದನ್ನು ಸಂಪಾದಿಸಬೇಕು. ಸಂಪಾದಿಸಿದ್ದನ್ನು ಪ್ರಯತ್ನದಿಂದ ರಕ್ಷಿಸಬೇಕು. ರಕ್ಷಿಸಿದ್ದನ್ನು ನ್ಯಾಯರೀತಿಯಲ್ಲಿ ಹೆಚ್ಚಿಸಬೇಕು. ಹಾಗೆ ಹೆಚ್ಚಿದ್ದನ್ನು ಯೋಗ್ಯರಿಗೆ ಹಂಚಬೇಕು.

**ಅಶನಾದಿಂದ್ರಿಯಾಣೀವ ಸ್ಯುಃ ಕಾರ್ಯಾಣ್ಯಖಿಲಾನ್ಯಪಿ ।**
**ಏತಸ್ಮಾತ್ಕಾರಣಾದ್ವಿತ್ತಂ ಸರ್ವಸಾಧನಮುಚ್ಯತೇ ॥ ೯**

—ಪಂಚತಂತ್ರ, ಮಿತ್ರಭೇದ-೮

ಆಹಾರ ಸೇವನೆಯಿಂದ ಇಂದ್ರಿಯಗಳು ಹೇಗೋ, ಹಾಗೆ ಎಲ್ಲ ಕೆಲಸಗಳೂ ಹಣದಿಂದ ನಡೆಯುತ್ತಿವೆ. ಈ ಕಾರಣದಿಂದಲೇ ಹಣ ಎಲ್ಲ ಕೆಲಸಗಳಿಗೂ ಸಾಧನವೆಂದು ಹೇಳುತ್ತಾರೆ.

ಆಪದರ್ಥಂ ಧನಂ ರಕ್ಷೇದ್ದಾರಾನ್ರಕ್ಷೇದ್ಧನೈರಪಿ ।
ಆತ್ಮಾನಂ ಸತತಂ ರಕ್ಷೇದ್ದಾರೈರಪಿ ಧನೈರಪಿ ॥ ೧೦

—ಹಿತೋಪದೇಶ, ಮಿತ್ರಲಾಭ-೧೩೧

ಕಷ್ಟಕ್ಕಾಗಲೆಂದು ಹಣವನ್ನು ಕಾಪಾಡಬೇಕು. ಹಣದಿಂದ ಹೆಂಡತಿಯನ್ನು ರಕ್ಷಿಸಬೇಕು. ಹಣ, ಹೆಂಡತಿ ಇವುಗಳೆಲ್ಲವುಗಳಿಂದ ತನ್ನನ್ನು ಕಾಪಾಡಿಕೊಳ್ಳಬೇಕು.

ಆಪದ್ಗತಂ ಹಸಸಿ ಕಿಂ ದ್ರವಿಣಾಂಧ ಮೂಢ
ಲಕ್ಷ್ಮೀಃ ಸ್ಥಿರಾ ನ ಭವತೀತಿ ಕಿಮತ್ರ ಚಿತ್ರಂ ।
ಕಿಂ ತ್ವಂ ನ ಪಶ್ಯಸಿ ಘಟೀರ್ಜಲಯಂತ್ರ ಚಕ್ರೇ
ರಿಕ್ತಾ ಭವಂತಿ ಭರಿತಾ ಭರಿತಾಶ್ಚ ರಿಕ್ತಾಃ ॥ ೧೧

—ಪ್ರಬಂಧಚಿಂತಾಮಣಿ

ಹಣದಿಂದ ಕುರುಡನಾದ ಮೂರ್ಖನೇ! ಕಷ್ಟದಲ್ಲಿರುವವರನ್ನು ಕಂಡು ಏಕೆ ನಗುವೆ! ಸಂಪತ್ತು ಯಾರಿಗೂ ಸ್ಥಿರವಲ್ಲ. ಇದರಲ್ಲಿ ಆಶ್ಚರ್ಯವೂ ಇಲ್ಲ. ನೀರಿನ ರಾಟೆಯಲ್ಲಿ ಘಟಗಳು ತುಂಬುತ್ತವೆ ಮತ್ತು ಬರಿದಾಗುತ್ತವೆ. ಇದನ್ನು ನೀನು ನೋಡಿಲ್ಲವೆ?

ಆರಭೇತ್ಯೆವ ಕರ್ಮಾಣಿ ಶ್ರಾಂತಃ ಶ್ರಾಂತಃ ಪುನಃ ಪುನಃ ।
ಕರ್ಮಾಣ್ಯಾರಭಮಾಣಂ ಹಿ ಪುರುಷಂ ಶ್ರೀರ್ನಿಷೇವತೇ ॥ ೧೨

—ಮನುಸ್ಮೃತಿ, ೯-೩೦೦

ವಿಶ್ರಾಂತಿಯನ್ನು ಪಡೆದು ಮತ್ತೆ ಮತ್ತೆ ಮಹಾಕಾರ್ಯಗಳನ್ನು ಆರಂಭಿಸಬೇಕು. ಉತ್ತಮ ಕೆಲಸಗಳನ್ನು ಮಾಡುವ ಪುರುಷನಿಗೆ ಲಕ್ಷ್ಮಿಯು ಒಲಿಯುತ್ತಾಳೆ.

ಇಹ ಲೋಕೇಽಪಿ ಧನಿನಾಂ ಪರೋಽಪಿ ಸ್ವಜನಾಯತೇ ।
ಸ್ವಜನೋಽಪಿ ದರಿದ್ರಾಣಾಂ ಸರ್ವದಾ ದುರ್ಜನಾಯತೇ ॥ ೧೩

—ಪಂಚತಂತ್ರ, ಮಿತ್ರಭೇದ-

ಈ ಲೋಕದಲ್ಲಿ ಐಶ್ವರ್ಯವಂತರಿಗೆ ಶತ್ರುವೂ ಸ್ವಜನನಾಗುತ್ತಾನೆ. ಬಡವರಿಗಾದರೋ ಸ್ವಂತ ಜನರೂ ಸಹ ಎಂದೆಂದೂ ಕೆಟ್ಟವರಾಗುತ್ತಾರೆ.

ಉಕ್ಷಾ ರಥೋ ಭೂಷಣಮಸ್ಥಿಮಾಲಾ
ಭಸ್ಮಾಂಗರಾಗೋ ಗಜಚರ್ಮವಾಸಃ ।
ಏಕಾಲಯಸ್ಥೇಽಪಿ ಧನಾಧಿನಾಥೇ
ಸಖ್ಯೌ ದಶೇಯಂ ತ್ರಿಪುರಾಂತಕಸ್ಯ ॥ ೧೪

—ಅನರ್ಘರಾಘವ, ೨-೭

ತ್ರಿಪುರಗಳನ್ನು ಪರಾಕ್ರಮದಿಂದ ಸುಟ್ಟ ಶಂಭುವಿಗೆ ಎಂತಹ ದುರ್ಗತಿ! ಎತ್ತು ವಾಹನ, ಮೂಳೆಗಳ ಮಾಲಿಕೆಯು ಅಲಂಕಾರ, ಬೂದಿಯು ಶರೀರಕ್ಕೆ ಲೇಪನ, ಆನೆಯ ಚರ್ಮ ಬಟ್ಟೆ. ಸ್ನೇಹಿತನೂ ಹಣಕ್ಕೆ ಒಡೆಯನೂ ಆದ ಕುಬೇರನೊಡನೆ ಒಂದೇ ಸ್ಥಳದಲ್ಲೇ ಇದ್ದುಕೊಂಡೂ ಈ ದುಃಸ್ಥಿತಿ ತಪ್ಪಿಲ್ಲ.

**ಏಕೋ ಹಿ ದೋಷೋ ಗುಣಸನ್ನಿಪಾತೇ**
**ನಿಮಜ್ಜತೀಂದೋರಿವ ಯೋ ಬಭಾಷೇ ।**
**ತೇನಾಪಿ ನೂನಂ ಕವಿನಾ ನ ದೃಷ್ಟಂ**
**ದಾರಿದ್ರ್ಯಮೇಕಂ ಗುಣರಾಶಿಹಾರಿ ॥** ೧೫

—ಶೃಂಗಾರಪ್ರಕಾಶ, ಸುಭಾಷಿತಸುಧಾನಿಧಿ

ಒಂದೇ ಒಂದು ದೋಷ, ಗುಣಗಳ ಸಮೂಹದಲ್ಲಿ ಚಂದ್ರನಲ್ಲಿ ಕಳಂಕದಂತೆ ಮುಳುಗಿಹೋಗುವುದು ಎಂದು ಯಾವನು ಹೇಳಿದನೋ ಆ ಕವಿಗೆ ದಾರಿದ್ರ್ಯದೋಷ ಒಂದೇ ಗುಣರಾಶಿಯನ್ನು ನಾಶಮಾಡುತ್ತದೆ ಎಂಬುದು ಖಂಡಿತ ತಿಳಿದಿಲ್ಲ.

**ಕ್ವ ಚಿರಾಯ ಪರಿಗ್ರಹಃ ಶ್ರಿಯಾಂ**
**ಕ್ವ ಚ ದುಷ್ಟೇಂದ್ರಿಯವಾಜಿವಶ್ಯತಾ ।**
**ಶರದಭ್ರಚಲಾಶ್ಚಲೇಂದ್ರಿಯೈಃ**
**ಅಸುರಕ್ಷಾ ಹಿ ಬಹುಚ್ಛಲಾಃ ಶ್ರಿಯಃ ॥** ೧೬

—ಕಿರಾತಾರ್ಜುನೀಯ ೨-೩೯

ಬಹುಕಾಲ ರಾಜ್ಯಲಕ್ಷ್ಮಿಯನ್ನಾಗಲಿ ದೊಡ್ಡಸಂಪತ್ತನ್ನಾಗಲಿ ಇಟ್ಟುಕೊಳ್ಳುವುದು ವಿರಳ. ಕೆಟ್ಟ ಇಂದ್ರಿಯಗಳೆಂಬ ಕುದುರೆಗಳನ್ನು ಹತೋಟಿಯಲ್ಲಿಟ್ಟುಕೊಳ್ಳುವುದೂ ಕಷ್ಟ. ಶರತ್ಕಾಲದ ಮೋಡಗಳಂತೆ ಚಂಚಲವಾದ, ಬಹುರೀತಿಯಲ್ಲಿ ಮೋಸಗೊಳಿಸುವ ಸಂಪತ್ತನ್ನು ಇಂದ್ರಿಯ ನಿಗ್ರಹವಿಲ್ಲದವನು ರಕ್ಷಿಸಲಾರರು.

**ಕಿಂ ಧನೇನ ಕರಿಷ್ಯಂತಿ ದೇಹಿನೋ ಭಂಗುರಾಶಯಾಃ ।**
**ಯದರ್ಥಂ ಧನಮಿಚ್ಛಂತಿ ತಚ್ಛರೀರಮಶಾಶ್ವತಮ್ ॥** ೧೭

—ಸುಭಾಷಿತಸುಧಾನಿಧಿ

ನಾಶವಾಗುವ ಆಶೆಗಳನ್ನುಳ್ಳ ಜೀವಿಗಳು ಹಣದಿಂದ ಏನು ತಾನೇ ಮಾಡಿಯಾರು? ಯಾವುದಕ್ಕಾಗಿ ಹಣವನ್ನು ಬಯಸುವರೋ ಆ ಶರೀರವೇ ನಶ್ವರವಾದುದು!

**ಗತವಯಸಾಮಪಿ ಪುಂಸಾಂ ಯೇಷಾಮರ್ಥಾ ಭವಂತಿ ತೇ ತರುಣಾಃ ।**
**ಅರ್ಥೇನ ತು ಯೇ ಹೀನಾಃ ವೃದ್ಧಾಸ್ತೇ ಯೌವನೇಽಪಿ ಸ್ಯುಃ ॥** ೧೮

—ಪಂಚತಂತ್ರ, ಮಿತ್ರಭೇದ-೧೦

ಯಾರಿಗೆ ಐಶ್ವರ್ಯವಿದೆಯೋ ಅಂಥವರು ಮುದುಕರಾದರೂ ತರುಣರೇ. ಯಾರಿಗೆ ಹಣವಿಲ್ಲವೋ ಅವರು ಯೌವನದಲ್ಲಿದ್ದರೂ ವೃದ್ಧರೇ ಸರಿ.

**ಗೃಹಾಂತಾ ದ್ರವ್ಯಸಂಘಾತಾ ದ್ರವ್ಯಾಂತಾ ಚ ತಥಾ ಮತಿಃ ।**
**ಅರ್ಥಾಶ್ಚಾತ್ಮೋಪಭೋಗಾಂತಾ ಭವಿಷ್ಯಂತಿ ಕಲೌ ಯುಗೇ ॥ ೧೯**

—ವಿಷ್ಣುಪುರಾಣ, ೬-೧-೨೦

ಹಣವನ್ನು ಸಂಪಾದಿಸುವುದು ಒಳ್ಳೆಯ ಮನೆಯನ್ನು ಕಟ್ಟುವುದಕ್ಕಾಗಿ. ಬುದ್ಧಿಶಕ್ತಿಯು ಹಣವನ್ನು ಸಂಪಾದಿಸುವುದರಲ್ಲಿ ಮುಗಿಯುತ್ತದೆ. ಹಣವು ವಿಲಾಸಜೀವನಕ್ಕಾಗಿ, ಕಲಿಯುಗದಲ್ಲಿ ಹೀಗೆ ಆಗುವುದು.

**ಜಾತಿರ್ಯಾತು ರಸಾತಲಂ ಗುಣಗಣಸ್ತಸ್ಯಾಪ್ಯಧೋ ಗಚ್ಛತಾತ್**
**ಶೀಲಂ ಶೈಲತಟಾತ್ಪತತ್ವಭಿಜನಃ ಸಂದಹ್ಯತಾಂ ವಹ್ನಿನಾ ।**
**ಶೌರ್ಯೇ ವೈರಿಣಿ ವಜ್ರಮಾಶು ನಿಪತತ್ವರ್ಥೋಽಸ್ತು ನಃ ಕೇವಲಂ**
**ಯೇನೈಕೇನ ವಿನಾ ಗುಣಾಸ್ತೃಣಲವಪ್ರಾಯಾಃ ಸಮಸ್ತಾ ಇಮೇ॥೨೦**

—ನೀತಿಶತಕ-೩೭

ಜಾತಿಯು ಪಾತಾಳಕ್ಕೆ ಹೋಗಲಿ, ಗುಣಗಳು ಅದಕ್ಕಿಂತ ಕೆಳಕ್ಕೆ ಹೋಗಲಿ, ನಡತೆಯು ಬೆಟ್ಟದಂಚಿನಿಂದ ಬೀಳಲಿ, ವಂಶಕ್ಕೆ ಬೆಂಕಿ ಬೀಳಲಿ, ಶತ್ರುವಿನಂತಿರುವ ಶೌರ್ಯದ ಮೇಲೆ ಬೇಗನೆ ಸಿಡಿಲು ಬೀಳಲಿ. ಹಣವಿಲ್ಲದಿದ್ದರೆ ಎಲ್ಲ ಗುಣಗಳೂ ಹುಲ್ಲುಕಡ್ಡಿಗೆ ಸಮ. ಹಣ ಮಾತ್ರ ನಮಗಿರಲಿ!

**ತಾನೀಂದ್ರಿಯಾಣಿ ಸಕಲಾನಿ ತದೇವ ಕರ್ಮ**
**ಸಾ ಬುದ್ಧಿರಪ್ರತಿಹತಾ ವಚನಂ ತದೇವ ।**
**ಅರ್ಥೋಷ್ಮಣಾ ವಿರಹಿತಃ ಪುರುಷಃ ಸ ಏವ**
**ತ್ವನ್ಯಃ ಕ್ಷಣೇನ ಭವತೀತಿ ವಿಚಿತ್ರಮೇತತ್ ॥ ೨೧**

—ನೀತಿಶತಕ-೩೮

ಎಲ್ಲಾ ಇಂದ್ರಿಯಗಳೂ ಅವೇ; ಅದೇ ಕೆಲಸ; ಅಕುಂಠಿತವಾದ ಬುದ್ಧಿಯೂ ಅದೇ ; ಮಾತೂ ಅದೇ ; ಮನುಷ್ಯನೂ ಅವನೇ. ಹಣವಿಲ್ಲದಾಗ ಇದ್ದ ಮನುಷ್ಯ ಅವನೇ. ಆದರೆ ಹಣದ ಬಿಸಿ ತಾಕಿದೊಡನೆ ಒಂದು ಕ್ಷಣದಲ್ಲಿ ಅವನು ಬೇರೆಯವನಾಗಿ ಬಿಡುತ್ತಾನಲ್ಲ, ಇದೇ ಅಚ್ಚರಿ!

**ತೀಕ್ಷ್ಣಾದುದ್ವಿಜತೇ ಮೃದೌ ಪರಿಭವತ್ರಾಸಾನ್ನ ಸಂತಿಷ್ಠತೇ**
**ಮೂರ್ಖಂ ದ್ವೇಷ್ಟಿ ನ ಗಚ್ಛತಿ ಪ್ರಣಯಿತಾಮತ್ಯಂತ ವಿದ್ವತ್ಸ್ವಪಿ ।**
**ಶೂರೇಭ್ಯೋಽಪ್ಯಧಿಕಂ ಬಿಭೇತ್ಯುಪಹಸತ್ಯೇಕಾಂತಭೀರೂನಹೋ**
**ಶ್ರೀರ್ಲಬ್ಧಪ್ರಸರೇವ ವೇಶವನಿತಾ ದುಃಖೋಪಚರ್ಯಾ ಭೃಶಮ್॥೨೨**

—ಮುದ್ರಾರಾಕ್ಷಸ, ೩-೫

ರಾಜ್ಯಲಕ್ಷ್ಮಿಯು ಕ್ರೂರನಾದವನನ್ನು ಕಂಡು ಬೇಸರಪಡುತ್ತಾಳೆ. ಮೆತ್ತನೆಯವನು ಸೋಲಬಹುದೆಂದು ಹೆದರಿ ಅವನಲ್ಲಿ ಬಹಳ ಕಾಲ ಇರುವುದಿಲ್ಲ. ಮೂರ್ಖನನ್ನು ದ್ವೇಷಿಸುತ್ತಾಳೆ. ಬಹಳ ವಿದ್ವಾಂಸರಲ್ಲಿಯೂ ಪ್ರೀತಿಯನ್ನು ತೋರುವುದಿಲ್ಲ. ಪರಾಕ್ರಮಿಗಳನ್ನು ಕಂಡು ಹೆದರುತ್ತಾಳೆ. ಹೇಡಿಗಳನ್ನು ಅಣಕಿಸುತ್ತಾಳೆ. ಪ್ರಚಾರವನ್ನು ಪಡೆದು ಪ್ರಗಲ್ಭೆಯಾದ ವೇಶ್ಯಾಸ್ತ್ರೀಯಂತೆ ರಾಜ್ಯಲಕ್ಷ್ಮಿಯನ್ನು ಇಟ್ಟುಕೊಳ್ಳುವುದು ಕಷ್ಟ.

**ದರಿದ್ರಾನ್ಭರ ಕೌಂತೇಯ ಮಾ ಪ್ರಯಚ್ಛೇಶ್ವರೇ ಧನಂ ।**
**ವ್ಯಾಧಿತಸ್ಯೌಷಧಂ ಪಥ್ಯಂ ನೀರುಜಸ್ಯ ಕಿಮೌಷಧೈಃ ॥** ೨೩

—ಹಿತೋಪದೇಶ, ಮಿತ್ರಲಾಭ-೧೧

ಕುಂತೀಪುತ್ರನಾದ ಧರ್ಮರಾಯನೇ, ಬಡವರನ್ನು ಕಾಪಾಡು. ಶ್ರೀಮಂತನಿಗೆ ಹಣ ಕೊಡಬೇಡ. ರೋಗವಿರುವವನಿಗೆ ಔಷಧ ಹಿತವಾದದ್ದು. ರೋಗವಿಲ್ಲದವನಿಗೇಕೆ ಔಷಧ?

**ದಾನಂ ಭೋಗೋ ನಾಶಸ್ತಿಸ್ರೋ ಗತಯೋ ಭವಂತಿ ವಿತ್ತಸ್ಯ ।**
**ಯೋ ನ ದದಾತಿ ನ ಭುಂಕ್ತೇ ತಸ್ಯ ತೃತೀಯಾ ಗತಿರ್ಭವತಿ ॥** ೨೪

—ನೀತಿಶತಕ-೪೧

ದಾನ, ಭೋಗ, ನಾಶ ಎಂದು ಹಣಕ್ಕಿರುವ ಗತಿಗಳು ಮೂರು. ಯಾವನು ದಾನ ಮಾಡುವುದಿಲ್ಲವೋ ತಾನೂ ಭೋಗಿಸುವುದಿಲ್ಲವೋ ಅವನ ಹಣಕ್ಕೆ ಮೂರನೆಯ ಗತಿ, ಅಂದರೆ ನಾಶವುಂಟಾಗುತ್ತದೆ.

**ದಾರಿದ್ರ್ಯ! ಶೋಚಾಮಿ ಭವಂತಮೇವಂ**
**ಅಸ್ಮಚ್ಛರೀರೇ ಸುಹೃದಿತ್ಯುಷಿತ್ವಾ ।**
**ವಿಪನ್ನದೇಹೇ ಮಯಿ ಮಂದಭಾಗ್ಯೇ**
**ಮಮೇತಿ ಚಿಂತಾ ಕ್ವ ಗಮಿಷ್ಯಸಿ ತ್ವಮ್ ॥** ೨೫

—ಮೃಚ್ಛಕಟಿಕ, ೧-೩೮

ಎಲೈ ಬಡತನವೇ! ನಮ್ಮ ಶರೀರದಲ್ಲಿ ಗೆಳೆಯನಂತೆ ಬಹಳ ಕಾಲ ಇದ್ದು, ನಾನು ಸತ್ತಮೇಲೆ 'ನಿನಗೆ ಆಶ್ರಯ ಕೊಡುವವರಾರು? ಎಲ್ಲಿಗೆ ಹೋಗುವೆಯೋ' ಎಂದು ನನಗೆ ತೀವ್ರ ಚಿಂತೆಯಾಗಿದೆ!

**ದಾರಿದ್ರ್ಯಾತ್ ಪುರುಷಸ್ಯ ಬಾಂಧವಜನೋ ವಾಕ್ಯೇ ನ ಸಂತಿಷ್ಠತೇ**
**ಸತ್ತ್ವಂ ಹಾಸ್ಯಮುಪೈತಿ ಶೀಲಶಶಿನಃ ಕಾಂತಿಃ ಪರಿಮ್ಲಾಯತೇ ।**
**ನಿರ್ವೈರಾ ವಿಮುಖೀಭವಂತಿ ಸುಹೃದಃ ಸ್ಫೀತಾ ಭವಂತ್ಯಾಪದಃ**
**ಪಾಪಂ ಕರ್ಮ ಚ ಯತ್ ಪರೈರಪಿಕೃತಂ ತತ್ತಸ್ಯಸಂಭಾವ್ಯತೇ ॥**೨೬

—ಚಾರುದತ್ತ, ೧-೬

ಬಡವನ ಮಾತಿಗೆ ನೆಂಟರು ಬೆಲೆಕೊಡುವುದಿಲ್ಲ. ಅವನ ಶಕ್ತಿ ಧೈರ್ಯಗಳು ಹಾಸ್ಯಕ್ಕೆ ಗುರಿಯಾಗುತ್ತವೆ. ಚಂದ್ರನ ಕಾಂತಿಯು ಹಗಲಿನಲ್ಲಿ ಬಾಡುವಂತೆ ಅವನ ಒಳ್ಳೆಯತನವು ಮಸುಕಾಗುತ್ತದೆ. ಹಗೆತನಕ್ಕೆ ಕಾರಣವಿಲ್ಲದಿದ್ದರೂ ಮಿತ್ರರು ದೂರವಾಗುತ್ತಾರೆ. ಕಷ್ಟಗಳು ಹೆಚ್ಚುತ್ತವೆ. ಬೇರೆಯವರು ಮಾಡಿದ ಪಾಪ ಕೆಲಸಗಳಿಗೂ ಇವನೇ ಹೊಣೆಯಾಗುತ್ತಾನೆ.

**ದಾರಿದ್ರ್ಯಾದ್ಧ್ರಿಯಮೇತಿ ಹ್ರೀಪರಿಗತಃ ಪ್ರಭ್ರಶ್ಯತೇ ತೇಜಸಃ**
**ನಿಸ್ತೇಜಾಃ ಪರಿಭೂಯತೇ ಪರಿಭವಾನ್ನಿರ್ವೇದಮಾಪದ್ಯತೇ ।**
**ನಿರ್ವಿಣ್ಣಃ ಶುಚಮೇತಿ ಶೋಕಪಿಹಿತೋ ಬುದ್ಧ್ಯಾ ಪರಿತ್ಯಜ್ಯತೇ**
**ನಿರ್ಬುದ್ಧಿಃ ಕ್ಷಯಮೇತ್ಯಹೋ ವಿಧನತಾ ಸರ್ವಾಪದಾಮಾಸ್ಪದಮ್॥೨೭**

—ಮೃಚ್ಛಕಟಿಕ, ೧-೧೪

ಬಡತನದಿಂದ ನಾಚಿಕೆ, ನಾಚಿಕೆಯಿಂದ ಎದೆಗೆಡುತ್ತಾನೆ. ಅದರಿಂದ ಅಪಮಾನ, ಅಪಮಾನದಿಂದ ಯಾವ ಕೆಲಸ ಮಾಡಲಾಗದೆ ಬೇಸರ, ಬೇಸರಿಕೆಯಿಂದ ದುಃಖ. ದುಃಖದಿಂದ ಯೋಚನೆ ಮಾಡುವ ಶಕ್ತಿ ಕುಂದುತ್ತದೆ. ಇದರಿಂದ ಹಾಳಾಗುತ್ತಾನೆ. ಆದುದರಿಂದ ಬಡತನವು ಎಲ್ಲಾ ಬಗೆಯ ಕಷ್ಟಗಳಿಗೂ ಮೂಲ.

**ಧರ್ಮಾಯ ಯಶಸೇಽರ್ಥಾಯ ಕಾಮಾಯ ಸ್ವಜನಾಯ ಚ ।**
**ಪಂಚಧಾ ವಿಭಜನ್ ವಿತ್ತಮಿಹಾಮುತ್ರ ಚ ಮೋದತೇ ॥ ೨೮**

—ಭಾಗವತ, ೮-೧೯-೩೭

ಮನುಷ್ಯನು ತನ್ನ ಹಣವನ್ನು ಧರ್ಮಕ್ಕೆ, ಕೀರ್ತಿಗೆ, ಅರ್ಥಕ್ಕೆ, ಕಾಮಕ್ಕೆ ಮತ್ತು ಸ್ವಜನರಿಗೆ, ಹೀಗೆ ಐದು ವಿಧದಲ್ಲಿ ಖರ್ಚುಮಾಡತಕ್ಕವನು ಈ ಲೋಕದಲ್ಲಿಯೂ ಪರಲೋಕದಲ್ಲಿಯೂ ಸುಖಪಡುತ್ತಾನೆ.

**ನ ದೇಯಂ ನೋಪಭೋಗ್ಯಂ ಚ ಲುಬ್ಧೈರ್ಯದ್ ದುಃಖಸಂಚಿತಂ ।**
**ಭುಂಕ್ತೇ ತದಪಿ ತಚ್ಚಾನ್ಯೋ ಮಧುಹೇವಾರ್ಥವಿನ್ಮಧು ॥ ೨೯**

—ಭಾಗವತ, ೧೧-೮-೧೫

ಜಿಪುಣನು ದುಃಖದಿಂದ ಕೂಡಿಟ್ಟ ಹಣ ಕೊಡುವುದಕ್ಕೂ ಆಗದು; ಅನುಭವಿಸುವುದಕ್ಕೂ ಆಗದು. ಜೇನು ಕೀಳುವವನು ಜೇನುತುಪ್ಪವನ್ನು ಹೇಗೋ ಹಾಗೆ ಬೇರೊಬ್ಬನು ಆ ಹಣವನ್ನು ಅನುಭವಿಸುತ್ತಾನೆ.

**ನ ನರಸ್ಯ ನರೋ ದಾಸಃ ಕಿಂ ತು ದ್ರವ್ಯಸ್ಯ ಭೂಪತೇಃ ।**
**ಗೌರವಂ ಲಾಘವಂ ವಾಪಿ ಧನಾಧನನಿಬಂಧನಮ್ ॥ ೩೦**

—ಹಿತೋಪದೇಶ, ವಿಗ್ರಹ-೭೬

ಮನುಷ್ಯನು ಮನುಷ್ಯನಿಗೆ ದಾಸನಲ್ಲ. ರಾಜನ ಹಣಕ್ಕೆ ಮನುಷ್ಯನು ದಾಸ. ಧನನಿಮಿತ್ತವಾಗಿ ಗೌರವ, ಧನವಿಲ್ಲದಿದ್ದರೆ ಹಗುರತನ.

ನ ವಿತ್ತಂ ದರ್ಶಯೇತ್ಪ್ರಾಜ್ಞಃ ಕಸ್ಯಚಿತ್ಸ್ವಲ್ಪಮಪ್ಯಹೋ ।
ಮುನೇರಪಿ ಯತಸ್ತಸ್ಯ ದ ನಾಚ್ಚಲತೇ ಮನಃ ॥ ೩೧

—ಪಂಚತಂತ್ರ, ಮಿತ್ರಭೇದ-೪೩೩

ತಿಳಿದವನು ಯಾರಿಗೂ ಸ್ವಲ್ಪ ಹಣವನ್ನಾದರೂ ತೋರಿಸಬಾರದು. ಜೋಕೆ! ಏಕೆಂದರೆ ಅದನ್ನು ನೋಡುವುದರಿಂದಲೇ ಮುನಿಯ ಮನಸ್ಸೂ ಸಹ ಚಂಚಲವಾಗುತ್ತದೆ!

ನಶ್ಯತಿ ವಿಪುಲಮತೇರಪಿ ಬುದ್ಧಿಃ ಪುರುಷಸ್ಯ ಮಂದವಿಭವಸ್ಯ ।
ಘೃತಲವಣತೈಲತಂಡುಲವಸ್ತ್ರೇಂಧನಚಿಂತಯಾ ಸತತಮ್ ॥ ೩೨

—ಪಂಚತಂತ್ರ, ಅಪರೀಕ್ಷಿತಕಾರಕ-೫

ಬಡವನ ಬುದ್ಧಿ ಎಷ್ಟೇ ವಿಶಾಲವಾಗಿ ತೀಕ್ಷ್ಣವಾಗಿದ್ದರೂ, ಯಾವಾಗಲೂ ತುಪ್ಪ, ಉಪ್ಪು, ಎಣ್ಣೆ, ಅಕ್ಕಿ, ಬಟ್ಟೆ, ಸೌದೆ ಇವುಗಳ ಚಿಂತೆಯ ಕಾರಣ ಕುಗ್ಗುತ್ತದೆ.

ನ್ಯಾಯೇನಾರ್ಜನಮರ್ಥಸ್ಯ ವರ್ಧನಂ ಪಾಲನಂ ತಥಾ ।
ಸತ್ಪಾತ್ರೇ ಪ್ರತಿಪತ್ತಿಶ್ಚ ರಾಜವೃತ್ತಂ ಚತುರ್ವಿಧಮ್ ॥ ೩೩

—ಸುಭಾಷಿತಸುಧಾನಿಧಿ

ರಾಜನ ನಡತೆ ನಾಲ್ಕು ಬಗೆಯಾಗಿದೆ-ನ್ಯಾಯವಾದ ಮಾರ್ಗದಲ್ಲಿ ಹಣ ಸಂಪಾದಿಸುವುದು, ಬೆಳೆಸುವುದು, ಕಾಪಾಡುವುದು ಮತ್ತು ಹಾಗೆಯೇ ಅರ್ಹರಾದವರಲ್ಲಿ ಕೊಡುವುದು.

ನಾಂತರಜ್ಞಾಃ ಶ್ರಿಯೋ ಜಾತು ಪ್ರಿಯೈರಾಸಾಂ ನ ಭೂಯತೇ ।
ಆಸಕ್ತಾಸ್ತಾಸ್ವಮೀ ಮೂಢಾಃ ವಾಮಶೀಲಾ ಹಿ ಜಂತವಃ ॥ ೩೪

—ಕಿರಾತಾರ್ಜುನೀಯ, ೧೧-೨೪

ಸಂಪತ್ತು ನೀಚ ಮತ್ತು ಉತ್ತಮ ಎಂಬ ಅಂತರವನ್ನು ತಿಳಿಯದೆ ಎಲ್ಲರನ್ನೂ ಸೇರುತ್ತದೆ. ಯಾರೂ ಸಂಪತ್ತಿಗೆ ಪ್ರಿಯರಾಗಿ ಬಹಳಕಾಲ ಇರುವುದು ಸಾಧ್ಯವಿಲ್ಲ. ಆದರೂ ಮೂರ್ಖರು ಸಂಪತ್ತನ್ನು ಗಳಿಸುವುದರಲ್ಲಿ ಆಸಕ್ತರಾಗಿರುತ್ತಾರೆ. ಏಕೆಂದರೆ, ಜನರ ಸ್ವಭಾವವೇ ವಕ್ರ.

ನಿವಾಸಶ್ಚಿಂತಾಯಾಃ ಪರಪರಿಭವೋ ವೈರಮಪರಂ
ಜುಗುಪ್ಸಾ ಮಿತ್ರಾಣಾಂ ಸ್ವಜನಜನವಿದ್ವೇಷಕರಣಂ ।
ವನಂ ಗಂತುಂ ಬುದ್ಧಿರ್ಭವತಿ ಚ ಕಲತ್ರಾತ್ ಪರಿಭವಃ
ಹೃದಿಸ್ಥಃ ಶೋಕಾಗ್ನಿಃ ನ ಚ ದಹತಿ ಸಂತಾಪಯತಿ ಚ ॥೩೫

—ಮೃಚ್ಛಕಟಿಕ, ೧-೧೫

ಬಡತನವು ಚಿಂತೆಗೆ ತೌರೂರು. ಇತರರಿಂದ ಅಪಮಾನ, ಮತ್ತೊಂದು ರೀತಿಯ ಹಗೆತನ. ಗೆಳೆಯರಿಗೆ ಬೇಸರಿಕೆಯನ್ನುಂಟುಮಾಡುತ್ತದೆ. ನೆಂಟರೂ, ಬೇರೆಯವರೂ ದೂರ ವಾಗುತ್ತಾರೆ. ಕಾಡಿಗೆ ಹೋಗೋಣವೆನಿಸುತ್ತದೆ. ಹೆಂಡತಿಯೂ ಕೀಳಾಗಿ ಕಾಣುತ್ತಾಳೆ. ಹೃದಯದಲ್ಲಿ ಅಗ್ನಿಯಂತೆ ಶೋಕವು ಉರಿಯುತ್ತಿದ್ದರೂ ಸುಡುವುದಿಲ್ಲ, ಬೇಯಿಸುತ್ತದೆ!

**ಪಕ್ಷವಿಕಲಶ್ಚ ಪಕ್ಷೀ ಶುಷ್ಕಶ್ಚ ತರುಃ ಸರಶ್ಚ ಜಲಹೀನಂ ।**
**ಸರ್ಪಶ್ಚೋದ್ಧೃತದಂಷ್ಟ್ರಃ ತುಲ್ಯಂ ಲೋಕೇ ದರಿದ್ರಶ್ಚ ॥ ೩೬**

—ಮೃಚ್ಛಕಟಿಕ, ೫-೪೧

ರೆಕ್ಕೆಗಳಿಲ್ಲದ ಹಕ್ಕಿ, ಒಣಗಿದ ಮರ, ನೀರಿಲ್ಲದ ಸರೋವರ, ಹಲ್ಲು ಕಿತ್ತ ಹಾವು, ಬಡವ-ಎಲ್ಲರೂ ಒಂದೇ.

**ಪರಸ್ಪರವಿರೋಧಿನ್ಯೋರೇಕಸಂಶ್ರಯದುರ್ಲಭಂ ।**
**ಸಂಗತಂ ಶ್ರೀಸರಸ್ವತ್ಯೋರ್ಭೂತಯೇಽಸ್ತು ಸದಾ ಸತಾಮ್ ॥ ೩೭**

—ವಿಕ್ರಮೋರ್ವಶೀಯ, ೫-೨೪

ಲಕ್ಷ್ಮಿಯೂ ಸರಸ್ವತಿಯೂ ಒಂದು ಕಡೆ ಇರುವುದು ವಿರಳ. ಅವರಿಬ್ಬರೂ ವಿರೋಧವಿಲ್ಲದೆ ಯಾವಾಗಲೂ ಪಂಡಿತರಲ್ಲಿರಲಿ ಎಂದು ಆಶಿಸುತ್ತೇನೆ.

**ಪರಿಮಿತಮಪಿ ಭಾರಂ ವೋಢುಮಪ್ರೌಢಿಭಾಜಃ**
**ಶಮಯಿತುಮುಪತಾಪಂ ಪ್ರಾಣಿನಾಮಕ್ಷಮಸ್ಯ ।**
**ಅಹಹ ಗುಣವಿಶೇಷಾಲಿಂಗಿತಸ್ಯಾಪಿ ನೂನಂ**
**ನಭಸ ಇವ ಮಹತ್ತ್ವಂ ನಿಷ್ಫಲಂ ನಿರ್ಧನಸ್ಯ ॥ ೩೮**

—ಅನ್ಯೋಕ್ತಿಸ್ತಬಕ-೬೨

ದರಿದ್ರನು ಸಾಮಾನ್ಯ ಖರ್ಚನ್ನೂ ನಿರ್ವಹಿಸಲಾರ. ಯಾವ ಪ್ರಾಣಿಗಳ ತೊಂದರೆ ಯನ್ನೂ ಹೋಗಲಾಡಿಸಲಾರ. ಬಡವನಲ್ಲಿ ಎಷ್ಟು ಒಳ್ಳೆಗುಣಗಳಿದ್ದರೂ, ಆಕಾಶದ ಉವ ಮಹತ್ತ್ವದಂತೆ, ಸಂಪೂರ್ಣವಾಗಿ ವ್ಯರ್ಥ.

**ಪರಿವರ್ತಿನಿ ಸಂಸಾರೇ ಮೃತಃ ಕೋ ವಾ ನ ಜಾಯತೇ ।**
**ಜಾತಸ್ತು ಗಣ್ಯತೇ ಸೋಽತ್ರ ಯಃ ಸ್ಫುರೇಚ್ಚ ಶ್ರಿಯಾಧಿಕಃ ॥ ೩೯**

—ಪಂಚತಂತ್ರ, ಮಿತ್ರಭೇದ-೨೮

ಬದಲಾಗುತ್ತಿರುವ ಈ ಸಂಸಾರದಲ್ಲಿ ಸತ್ತವನು ಯಾವನು ತಾನೇ ಹುಟ್ಟುವುದಿಲ್ಲ? ಆದರೆ ಯಾವಾತನು ಸಂಪತ್ತಿನಿಂದ (ಕಾಂತಿಯಿಂದ) ಹೆಚ್ಚಾಗಿ ಬೆಳಗುವನೋ ಅವನೀಗ (ಸಾರ್ಥಕವಾಗಿ) ಹುಟ್ಟಿದವನೆಂದು ಎಣಿಸಲ್ಪಡುತ್ತಾನೆ.

ಪ್ರಾಯೇಣ ಶ್ರೀಮತಾಂ ಲೋಕೇ ಭೋಕ್ತುಂ ಶಕ್ತಿ ರ್ನವಿದ್ಯತೇ ।
ಕಾಷ್ಠಾನ್ಯಪಿ ಹಿ ಜೀರ್ಯಂತಿ ದರಿದ್ರಾಣಾಂ ಚ ಸರ್ವಶಃ ॥ ೪೦

—ಮಹಾಭಾರತ, ಶಾಂತಿ. ೨೮-೨೯

ಸಾಮಾನ್ಯವಾಗಿ ಶ್ರೀಮಂತರಿಗೆ ಊಟಮಾಡಿ ಜೀರ್ಣಿಸಿಕೊಳ್ಳುವ ಶಕ್ತಿ ಇರುವುದಿಲ್ಲ. ಕಟ್ಟಿಗೆಗಳೂ ಸಹ ಬಡವರಿಗೆ ಜೀರ್ಣವಾಗುತ್ತವೆ.

ಪುಣ್ಯಸಂಚಯಸಂಪ್ರಾಪ್ತಾಮಧಿಗಮ್ಯ ನೃಪಶ್ರಿಯಂ ।
ವಂಚಯೇದ್ಯಃ ಸುಹೃದ್ಬಂಧೂನ್ ಸ ಭವೇದ್ವಿಫಲಶ್ರಮಃ ॥ ೪೧

—ದೂತವಾಕ್ಯ, ೧-೨೪

ರಾಜ್ಯಲಕ್ಷ್ಮಿಯು ಯಾರಿಗೂ ಸುಲಭವಾಗಿ ಸಿಕ್ಕುವುದಿಲ್ಲ. ಅದನ್ನು ಪಡೆಯುವವನು ಬಹಳ ಪುಣ್ಯ ಮಾಡಿರಬೇಕು. ರಾಜ್ಯವನ್ನು ಪಡೆದಮೇಲೆ ಯಾರು ಹಿತೈಷಿಗಳನ್ನೂ ನೆಂಟರನ್ನೂ ಮೋಸಗೋಳಿಸುತ್ತಾನೆಯೋ ಅವನಿಗೆ ಒಳ್ಳೆಯದಾಗುವುದಿಲ್ಲ.

ಪೂಜ್ಯತೇ ಯದಪೂಜ್ಯೋಽಪಿ ಯದಗಮ್ಯೋಽಪಿ ಗಮ್ಯತೇ ।
ವಂದ್ಯತೇ ಯದವಂದ್ಯೋಽಪಿ ಸ ಪ್ರಭಾವೋ ಧನಸ್ಯ ಚ ॥ ೪೨

—ಪಂಚತಂತ್ರ, ಮಿತ್ರಭೇದ-೭

ಪೂಜೆಗೆ ಅನರ್ಹನಾದವನನ್ನು ಪೂಜೆ ಮಾಡಿದರೆ, ಯಾರಲ್ಲಿಗೆ ಹೋಗಬಾರದೋ ಅವನಲ್ಲಿಗೆ ಹೋದರೆ, ಯಾರಿಗೆ ನಮಿಸಬಾರದೋ ಅವನಿಗೆ ನಮಿಸಿದರೆ ಅದಕ್ಕೆ ಹಣದ ಪ್ರಭಾವ ಕಾರಣ.

ಮೂಲಂ ದೋಷಸ್ಯ ಹಿಂಸಾದೇರರ್ಥಕಾಮೌ ಸ್ಮ ಮಾ ಪುಷಃ ।
ತೌ ಹಿ ತತ್ತ್ವಾವಬೋಧಸ್ಯ ದುರುಚ್ಛೇದಾವುಪಪ್ಲವೌ ॥ ೪೩

—ಕಿರಾತಾರ್ಜುನೀಯ, ೧೧-೨೦

ಅರ್ಥ ಅಂದರೆ ಹಣ, ಕಾಮ ಅಂದರೆ ಸುಖ. ಇವೆರಡು ಹಿಂಸೆ, ಸುಳ್ಳು, ಕಳ್ಳತನ ಮೊದಲಾದ ದೋಷಗಳಿಗೆ ಮೂಲ. ಅದನ್ನು ಹೆಚ್ಚಿಸಬಾರದು. ತತ್ತ್ವವನ್ನು ತಿಳಿಯುವುದಕ್ಕೆ ಇವೆರಡು ದೊಡ್ಡ ವಿಘ್ನಗಳು.

ಯಥಾ ಮಧು ಸಮಾಧತ್ತೇ ರಕ್ಷನ್ ಪುಷ್ಪಾಣಿ ಷಟ್ಪದಃ ।
ತದ್ವದರ್ಥಾನ್ ಮನುಷ್ಯೇಭ್ಯಃ ಆದದ್ಯಾದವಿಹಿಂಸಯಾ ॥ ೪೪

—ಸುಭಾಷಿತಸುಧಾನಿಧಿ-೮೫

ದುಂಬಿಯು ಹೂಗಳನ್ನು ಕಾಪಾಡುತ್ತಾ ಹೇಗೆ ಮಕರಂದವನ್ನು ಹೀರಿ ಕೊಳ್ಳುತ್ತದೆಯೋ ಹಾಗೆಯೇ ಹಿಂಸೆ ಮಾಡದೆ ಮನುಷ್ಯರಿಂದ ಹಣವನ್ನು ಸಂಗ್ರಹಿಸಬೇಕು.

**ಯದುತ್ಸಾಹೀ ಸದಾ ಮರ್ತ್ಯಃ ಪರಾಭವತಿ ಯಜ್ಜನಾನ್ ।**
**ಯದುದ್ಧತಂ ವದೇದ್ವಾಕ್ಯಂ ತತ್ಸರ್ವಂ ವಿತ್ತಜಂ ಬಲಮ್ ॥ ೪೫**

—ಪಂಚತಂತ್ರ, ಮಿತ್ರಸಂಪ್ರಾಪ್ತಿ-೮೯

ಮನುಷ್ಯನು ಯಾವಾಗಲೂ ಉತ್ಸಾಹಯುತನಾಗಿರುವುದು, ಇತರ ಜನಗಳನ್ನು ಅಪಮಾನಗೊಳಿಸುವುದು ಮತ್ತು ಉದ್ಧತನಾಗಿ ಮಾತನಾಡುವುದು-ಇವೆಲ್ಲಾ ಹಣದಿಂದ ಬಂದ ಬಲ.

**ಯಸ್ಯಾರ್ಥಾಸ್ತಸ್ಯ ಮಿತ್ರಾಣಿ ಯಸ್ಯಾರ್ಥಾಸ್ತಸ್ಯ ಬಾಂಧವಾಃ ।**
**ಯಸ್ಯಾರ್ಥಾಃ ಸ ಪುಮಾನ್ ಲೋಕೇ ಯಸ್ಯಾರ್ಥಾಃ ಸ ಚ ಪಂಡಿತಃ ॥**

—ಮಹಾಭಾರತ, ಶಾಂತಿ. ೮-೧೯

ಯಾವನ ಬಳಿ ಹಣವಿದೆಯೋ ಅವನಿಗೆ ಮಿತ್ರರಿರುತ್ತಾರೆ. ಅವನಿಗೆ ಬಂಧುಗಳೂ ಒದಗುತ್ತಾರೆ. ಹಣವಿರತಕ್ಕವನೇ ಈ ಲೋಕದಲ್ಲಿ ಗಂಡಸು. ಅವನೇ ಪಂಡಿತ.

**ಯಸ್ಯಾಸ್ತಿ ವಿತ್ತಂ ಸ ನರಃ ಕುಲೀನಃ**
**ಸ ಪಂಡಿತಃ ಸ ಶ್ರುತವಾನ್ ಗುಣಜ್ಞಃ ।**
**ಸ ಏವ ವಕ್ತಾ ಸ ಚ ದರ್ಶನೀಯಃ**
**ಸರ್ವೇ ಗುಣಾಃ ಕಾಂಚನಮಾಶ್ರಯಂತಿ ॥ ೪೭**

—ನೀತಿಶತಕ-೩೯

ಯಾರಿಗೆ ಹಣವುಂಟೋ ಅವನೇ ಸತ್ಕುಲಪ್ರಸೂತನು ; ಅವನೇ ಪಂಡಿತನು; ಅವನೇ ಶಾಸ್ತ್ರಜ್ಞನು ; ಗುಣಗಳನ್ನು ಅರಿಯುವವನು ; ಅವನೇ ಸುಂದರನು. ಆದುದರಿಂದ ಎಲ್ಲಾ ಗುಣಗಳೂ ಹಣವನ್ನೇ ಆಶ್ರಯಿಸುವುವು.

**ಯಾತ್ರಾಮಾತ್ರಪ್ರಸಿದ್ಧ್ಯರ್ಥಂ ಸ್ವೈಃ ಕರ್ಮಭಿರಗರ್ಹಿತೈಃ ।**
**ಅಕ್ಲೇಶೇನ ಶರೀರಸ್ಯ ಕುರ್ವೀತ ಧನಸಂಚಯಮ್ ॥ ೪೮**

—ಮನುಸ್ಮೃತಿ, ೩-

ನಿಂದನೀಯವಲ್ಲದ ತನ್ನ ಕೆಲಸಗಳಿಂದ, ಶರೀರಕ್ಕೆ ಹೆಚ್ಚು ಶ್ರಮವಿಲ್ಲದೆ ನಿತ್ಯ ಜೀವನವನ್ನು ನಡೆಸಲು ಬೇಕಾದಷ್ಟು ಹಣವನ್ನು ಸಂಗ್ರಹಿಸಬೇಕು.

**ಯೇ ಯೇ ಗುಣಿನೋ ಯೇ ಯೇ ಚ ತ್ಯಾಗಿನೋ ಯೇ ವಿದಗ್ಧಜನಾಃ ।**
**ದಾರಿದ್ರ್ಯೇ ವಿಚಕ್ಷಣ ತೇಷಾಂ ತ್ವಂ ಸಾನುರಾಗಮಸಿ ॥ ೪೯**

—ಹಾಲನ ಸಪ್ತಶತೀ, ೭-೫೭

ಎಲೈ ಬಡತನ! ನೀನು ಬಹಳ ಚತುರ. ಒಳ್ಳೆಯ ಗುಣವುಳ್ಳವರನ್ನೂ, ತ್ಯಾಗಿಗಳನ್ನೂ, ಪಂಡಿತರನ್ನೂ ಆರಿಸಿಕೊಂಡು ಅವರಲ್ಲಿ ಪ್ರೀತಿಯನ್ನು ತೋರಿಸುತ್ತೀಯೆ!

ರಾಜ್ಯಸ್ಯ ಭೂಮೇರ್ವಿತ್ತಸ್ಯ ಸ್ತ್ರಿಯಾ ಮಾನಸ್ಯ ತೇಜಸಃ ।
ಮಾನಿನೋಽನ್ಯಸ್ಯ ವಾ ಹೇತೋಃ ಶ್ರೀಮದಾಂಧಾಃ ಕ್ಷಿಪಂತಿ ಹಿ ॥

—ಭಾಗವತ, ೧೦-೫೪-೪೧

ರಾಜ್ಯಕ್ಕಾಗಿ, ಭೂಮಿಗಾಗಿ, ಹಣಕ್ಕಾಗಿ, ಹೆಂಗಸಿಗಾಗಿ, ಮಾನಕ್ಕಾಗಿ, ತೇಜಸ್ಸಿಗಾಗಿ, ಅಥವಾ ಬೇರೆ ಯಾವ ಕಾರಣಕ್ಕಾದರೂ, ಸಂಪತ್ತಿನ ಕೊಬ್ಬಿನಿಂದ ಕುರುಡಾಗಿರುವವರು ಮಾನವಂತರನ್ನು ತಿರಸ್ಕರಿಸುತ್ತಾರೆ.

ಲಜ್ಜಂತೇ ಬಾಂಧವಾಸ್ತೇನ ಸಂಬಂಧಂ ಗೋಪಯಂತಿ ಚ ।
ಮಿತ್ರಾಣ್ಯಮಿತ್ರತಾಂ ಯಾಂತಿ ಯಸ್ಯ ನ ಸ್ಯುಃ ಕಪರ್ದಕಾಃ ॥ ೫೧

—ಪಂಚತಂತ್ರ, ಮಿತ್ರಸಂಪ್ರಾಪ್ತಿ-೧೦೫

ಯಾರಲ್ಲಿ ಕವಡೆಗಳಿಲ್ಲವೋ (ಹಣವಿಲ್ಲವೋ) ಅವನ ಬಂಧುಗಳು ಅವನ ನೆಂಟಸ್ತನಕ್ಕಾಗಿ ಲಜ್ಜಿಸುತ್ತಾರೆ; ಅವನ ಬಂಧುತ್ವವನ್ನು ಅವರು ಮರೆಸುತ್ತಾರೆ. ಅಂಥವನ ಸ್ನೇಹಿತರೂ ಸಹ ಸ್ನೇಹವಿಲ್ಲದವರಾಗುತ್ತಾರೆ.

ಲಜ್ಜಾ ಸ್ನೇಹಃ ಸ್ವರಮಧುರತಾ ಬುದ್ಧಯೋ ಯೌವನಶ್ರೀಃ
ಕಾಂತಾಸಂಗಃ ಸ್ವಜನಸಮತಾ ದುಃಖಹಾನಿರ್ವಿಲಾಸಃ ।
ಧರ್ಮಃ ಶಾಸ್ತ್ರಂ ಸುರಗುರುಮತಿಃ ಶೌಚಮಾಚಾರಚಿಂತಾ
ಪೂರ್ಣೇ ಸರ್ವೇ ಜಠರಪಿಠರೇ ಪ್ರಾಣಿನಾಂ ಸಂಭವಂತಿ ॥೫೨

—ಪಂಚತಂತ್ರ, ಅಪರೀಕ್ಷಿತಕಾರಕ-೯೧

ನಾಚಿಕೆ, ಸ್ನೇಹ, ಮಧುರವಾದ ಸ್ವರ, ಬುದ್ಧಿ, ಯೌವನದ ಕಾಂತಿ, ಸ್ತ್ರೀ ಸಹವಾಸ, ಸ್ವಜನರಲ್ಲಿ ಸಮತ್ವಬುದ್ಧಿ, ದುಃಖವಿಲ್ಲದಿರುವಿಕೆ, ಬೆಡಗು, ಧರ್ಮ, ಶಾಸ್ತ್ರ, ಬೃಹಸ್ಪತಿಯ ಬುದ್ಧಿಕುಶಲತೆ, ಶುಚಿತ್ವ, ನಡೆವಳಿಕೆಯ ಚಿಂತೆ-ಇವುಗಳೆಲ್ಲಾ ಜೀವಿಗಳಿಗೆ ಹೊಟ್ಟೆ ತುಂಬಿದ್ದರೆ ಮಾತ್ರ ಉಂಟಾಗುತ್ತವೆ.

ವನಾನಿ ದಹತೋ ವಹ್ನೇಃ ಸಖಾ ಭವತಿ ಮಾರುತಃ ।
ಸ ಏವ ದೀಪನಾಶಾಯ ಕೃಶೇ ಕಸ್ಯಾಸ್ತಿ ಸೌಹೃದಮ್ ॥ ೫೩

—ಪಂಚತಂತ್ರ, ಕಾಕೋಲೂಕೀಯ-೫೭

ಕಾಡುಗಳನ್ನು ದಹಿಸುವ ಕಿಚ್ಚಿಗೆ ಗಾಳಿಯು ಸ್ನೇಹಿತನಾಗುತ್ತಾನೆ. ಆ ಗಾಳಿಯೇ ದೀಪವನ್ನಾರಿಸುತ್ತಾನೆ. ಬಡವರಲ್ಲಿ ಯಾರಿಗೆ ತಾನೇ ಸ್ನೇಹವಿರುತ್ತದೆ?

ವರಂ ವನಂ ವ್ಯಾಘ್ರಗಜಾದಿಸೇವಿತಂ
ಜನೇನ ಹೀನಂ ಬಹುಕಂಟಕಾವೃತಂ ।
ತೃಣಾನಿ ಶಯ್ಯಾ ಪರಿಧಾನವಲ್ಕಲಂ
ನ ಬಂಧುಮಧ್ಯೇ ಧನಹೀನಜೀವಿತಮ್ ॥ ೫೪

—ಪಂಚತಂತ್ರ, ಅಪರೀಕ್ಷಿತಕಾರಕ-೨೭

ಹುಲಿ, ಆನೆ ಇವುಗಳಿಂದ ಕೂಡಿರುವುದೂ, ಜನರಿಲ್ಲದುದೂ, ಬಹಳ ಹೆಚ್ಚಾದ ಮುಳ್ಳುಗಳಿಂದ ತುಂಬಿರುವುದೂ, ಹುಲ್ಲೇ ಹಾಸುಗೆಯಾದುದೂ, ನಾರುಬಟ್ಟೆಯೇ ಉಡುಗೆಯಾದುದೂ ಆದ ಕಾಡಾದರೂ ವಾಸಿ ; ಬಂಧುಗಳ ಮಧ್ಯೆ ಹಣವಿಲ್ಲದ ಬಾಳು ಸಲ್ಲದು.

ವ್ಯಾಪಾರಾಂತರಮುತ್ಸೃಜ್ಯ ವೀಕ್ಷಮಾಣೋ ವಧೂಮುಖಂ ।
ಯೋ ಗೃಹೇಷ್ವೇವ ನಿದ್ರಾತಿ ದರಿದ್ರಾತಿ ಸ ದುರ್ಮತಿಃ ॥ ೫೫

ಯಾರು ಹಣಸಂಪಾದನೆಗೋಸ್ಕರ ಬೇರೆ ಉದ್ಯೋಗಗಳನ್ನು ಮಾಡದೆ ಮನೆಯಲ್ಲಿ ಹೆಂಡತಿಯ ಮುಖವನ್ನು ನೋಡುತ್ತಾ ನಿದ್ರೆ ಮಾಡುತ್ತಾನೋ, ಆ ದುರ್ಬುದ್ಧಿಯು ಬಡತನದಲ್ಲಿ ತೊಳಲಬೇಕಾಗುತ್ತದೆ.

ವಿತ್ತೇನ ಹೀನಂ ಪುರುಷಂ ತ್ಯಜಂತಿ
ದಾರಾಶ್ಚ ಪುತ್ರಾಶ್ಚ ಸಹೋದರಾಶ್ಚ ।
ತಂ ವಿತ್ತವಂತಂ ಪುನರೇವ ಯಾಂತಿ
ವಿತ್ತಂ ಹಿ ಲೋಕೇ ಪುರುಷಸ್ಯ ಬಂಧುಃ ॥ ೫೬

—ಸುಭಾಷಿತಸುಧಾನಿಧಿ

ಹಣವಿಲ್ಲದ ಮನುಷ್ಯನನ್ನು ಹೆಂಡತಿ, ಮಕ್ಕಳು ಮತ್ತು ಸೋದರರು ಕೈಬಿಡುತ್ತಾರೆ. ಹಣವನ್ನು ಪಡೆದಾಗ ಅವನನ್ನು ಮತ್ತೆ ಅವರು ಸೇರುತ್ತಾರೆ. ಲೋಕದಲ್ಲಿ ಮನುಷ್ಯನಿಗೆ ಹಣವೇ ನಿಜವಾಗಿ ಬಂಧು.

ವಿಪದೋಽಭಿಭವಂತ್ಯವಿಕ್ರಮಂ
ರಹಯತ್ಯಾಪದುಪೇತಮಾಯತಿಃ ।
ನಿಯತಾ ಲಘುತಾ ನಿರಾಯತೇಃ
ಅಗರೀಯಾನ್ ನ ಪದಂ ನೃಪಶ್ರಿಯಃ ॥ ೫೭

—ಕಿರಾತಾರ್ಜುನೀಯ, ೨-೧೪

ಶಕ್ತಿಯಿಲ್ಲದವನು ಕಷ್ಟಗಳಿಗೊಳಗಾಗುತ್ತಾನೆ. ಕಷ್ಟಗಳಲ್ಲಿ ಸಿಕ್ಕಿಕೊಂಡವನಿಗೆ ಏಳಿಗೆಯು ಆಗುವುದಿಲ್ಲ. ಏಳಿಗೆ ಇಲ್ಲದವನ್ನನ್ನು ಎಲ್ಲರೂ ತುಚ್ಛವಾಗಿ ಕಾಣುತ್ತಾರೆ. ತುಚ್ಛನಾದವನು ಅರಸುತನಕ್ಕೆ ಯೋಗ್ಯನಲ್ಲ.

ಶೀಲಂ ಶೌಚಂ ಕ್ಷಾಂತಿರ್ದಾಕ್ಷಿಣ್ಯಂ ಮಧುರತಾ ಕುಲೇ ಜನ್ಮ ।
ನ ವಿರಾಜಂತಿ ಹಿ ಸರ್ವೇ ವಿತ್ತೈರ್ಹೀನಸ್ಯ ಪುರುಷಸ್ಯ ॥ ೫೮

—ಪಂಚತಂತ್ರ, ಅಪರೀಕ್ಷಿತಕಾರಕ-೭

ಹಣವಿಲ್ಲದ ಮನುಷ್ಯನ ನಡತೆ, ಪರಿಶುದ್ಧತೆ, ಕ್ಷಮಾಗುಣ, ದಾಕ್ಷಿಣ್ಯ, ಸವಿನಡೆ ಮತ್ತು ಉತ್ತಮಕುಲದಲ್ಲಿ ಜನ್ಮ-ಇವೆಲ್ಲವೂ ಪ್ರಕಾಶಿಸುವುದಿಲ್ಲ.

**ಶೂನ್ಯಮಪುತ್ರಸ್ಯ ಗೃಹಂ ಚಿರಶೂನ್ಯಂ ನಾಸ್ತಿ ಯಸ್ಯ ಸನ್ಮಿತ್ರಂ ।**
**ಮೂರ್ಖಸ್ಯ ದಿಶಃ ಶೂನ್ಯಾಃ ಸರ್ವಂ ಶೂನ್ಯಂ ದರಿದ್ರಸ್ಯ ॥ ೪೯**

—ಮೃಚ್ಛಕಟಿಕ, ೧-೮

ಮಕ್ಕಳಿಲ್ಲದವನ ಮನೆಯು ಬೇಸರ ತರುತ್ತದೆ. ಒಳ್ಳೆಯ ಮಿತ್ರರಿಲ್ಲದ ಜೀವನ ಯಾವಾಗಲೂ ಸಂತೋಷ ಶೂನ್ಯ. ಮೂರ್ಖನಿಗೆ ಎಲ್ಲ ದಿಕ್ಕುಗಳೂ ಬರಿದಾಗಿ ಕಾಣುತ್ತವೆ. ಬಡವನಿಗೆ ಜಗತ್ತೇ ಶೂನ್ಯ,

**ಸತ್ಯಂ ನ ಮೇ ವಿಭವನಾಶಕೃತಾಽಸ್ತಿ ಚಿಂತಾ**
**ಭಾಗ್ಯಕ್ರಮೇಣ ಹಿ ಧನಾನಿ ಭವಂತಿ ಯಾಂತಿ ।**
**ಏತತ್ತು ಮಾಂ ದಹತಿ ನಷ್ಟಧನಾಶ್ರಯಸ್ಯ**
**ಯತ್ಸೌಹೃದಾದಪಿ ಜನಾಃ ಶಿಥಿಲೀಭವಂತಿ । ೬೦**

—ಮೃಚ್ಛಕಟಿಕ, ೧-೧೩

ಹಣವು ಕಳೆದುಹೋಯಿತಲ್ಲಾ ಎಂಬ ಚಿಂತೆ ನನಗೆ ಸತ್ಯವಾಗಿಯೂ ಇಲ್ಲ. ಅದೃಷ್ಟವಿದ್ದರೆ ಹಣ ಬರುತ್ತದೆ. ಇಲ್ಲವಾದರೆ ಇಲ್ಲ. ಆದರೆ ಹಣವಿಲ್ಲದೆ ಇರುವಾಗ ಮಿತ್ರರೂ ಸಹ ದೂರವಾಗುತ್ತಾರೆಂಬುದು ನನಗೆ ಸುಡುವಷ್ಟು ನೋವನ್ನುಂಟು ಮಾಡುತ್ತದೆ.

**ಸಂತೋಽಪಿ ನ ಹಿ ರಾಜಂತೇ ದರಿದ್ರಸ್ಯೇತರೇ ಗುಣಾಃ ।**
**ಆದಿತ್ಯ ಇವ ಭೂತಾನಾಂ ಶ್ರೀರ್ಗುಣಾನಾಂ ಪ್ರಕಾಶಿನೀ ॥ ೬೧**

—ಪಂಚತಂತ್ರ, ಮಿತ್ರಸಂಪ್ರಾಪ್ತಿ-೯೪

ಬಡವರಲ್ಲಿ ಇತರ ಗುಣಗಳಿದ್ದಾಗ್ಯೂ ಅವು ಪ್ರಕಾಶಕ್ಕೆ ಬರುವುದಿಲ್ಲ. ಸೂರ್ಯನು ಪದಾರ್ಥಗಳನ್ನೆಲ್ಲಾ ಬೆಳಗುವಂತೆ ಐಶ್ವರ್ಯವು ಗುಣಗಳನ್ನೆಲ್ಲಾ ಪ್ರಕಾಶಪಡಿಸುತ್ತದೆ.

**ಸಂಪದೋ ಹಿ ಮನುಷ್ಯಾಣಾಂ ಗಂಧರ್ವನಗರೋಪಮಾಃ ।**
**ದೃಶ್ಯಮಾನಾಃ ಕ್ಷಣೇನೈವ ಭವಂತಿ ನ ಭವಂತಿ ಚ ॥ ೬೨**

—ಸುಭಾಷಿತಸುಧಾನಿಧಿ-೧೬೨

ಮನುಷ್ಯರ ಐಶ್ವರ್ಯವೆಂಬುದು ಗಂಧರ್ವನಗರಕ್ಕೆ ಸಮಾನ. ಅದು ಕಾಣಿಸುತ್ತಾ ಇರುವಂತೆಯೇ ಕ್ಷಣಮಾತ್ರದಲ್ಲಿ ಇರುತ್ತದೆ. ಮತ್ತೊಂದು ಕ್ಷಣದಲ್ಲಿ ಇಲ್ಲವಾಗುತ್ತದೆ.

**ಸರ್ವೇಷಾಮೇವ ಶೌಚಾನಾಂ ಅರ್ಥಶೌಚಂ ಪರಂ ಸ್ಮೃತಂ ।**
**ಯೋಽರ್ಥೇ ಶುಚಿರ್ಹಿ ಸ ಶುಚಿರ್ನಮೃದ್ವಾರಿ ಶುಚಿಃ ಶುಚಿಃ ॥ ೬೩**

-ಮನುಸ್ಮೃತಿ, ೫-೧೦೬

ಎಲ್ಲ ಬಗೆಯ ಶುದ್ಧಿಗಳಿಗಿಂತಲೂ "ಅರ್ಥಶೌಚ" ಶ್ರೇಷ್ಠ. ಅಂದರೆ ಹಣಕಾಸಿನ ವ್ಯವಹಾರದಲ್ಲಿ ಪ್ರಾಮಾಣಿಕನಾಗಿರುವುದು. ಯಾರು ಹಣಕಾಸಿನಲ್ಲಿ ಶುಚಿಯಾಗಿಲ್ಲವೋ ಅವನು ನಿತ್ಯ ಸ್ನಾನ ಮಾಡಿದರೂ ಶುಚಿಯಲ್ಲ.

**ಸುಖಂ ಹಿ ದುಃಖಾನ್ಯನುಭೂಯ ಶೋಭತೇ**
**ಯಥಾಂಧಕಾರಾದಿವ ದೀಪದರ್ಶನಂ ।**
**ಸುಖಾತ್ತು ಯೋ ಯಾತಿ ದಶಾಂ ದರಿದ್ರತಾಂ**
**ಸ್ಥಿತಃ ಶರೀರೇಣ ಮೃತಃ ಸ ಜೀವತಿ ॥** ೬೪

—ಚಾರುದತ್ತ, ೧-೩

ಕಷ್ಟಗಳನ್ನನುಭವಿಸಿದ ಮೇಲೆ ಸುಖವು ಚೆನ್ನಾಗಿರುತ್ತದೆ, ಕತ್ತಲೆಯಿಂದ ಬೆಳಕಿಗೆ ಬಂದಂತೆ. ಆದರೆ ಯಾರು ಸುಖಜೀವನದಿಂದ ಬಡತನದಲ್ಲಿ ಕಾಲಿಡುತ್ತಾರೆಯೋ ಅವರು ಶರೀರದಿಂದ ಬದುಕಿದ್ದರೂ ಸತ್ತಂತೆಯೇ ಸರಿ.

**ಹಂತುರ್ಬಂಧುಜನಾನ್ ಧನಾರ್ಥಮನಘಾನ್ ಗಂತುಃ ಪರಸ್ತ್ರೀಶತಂ**
**ರಂತುರ್ಜಂತುವಿಹಿಂಸಕೈಃ ಸಹ ಜನ್ಯೈಃ ಸಂತುಷ್ಯತೋ ವಂಚನೈಃ ।**
**ವಕ್ತುಸ್ತೀಕ್ಷ್ಣಮಯುಕ್ತಮೇವ ವಚನಂ ಪಕ್ತುರ್ಮಿತಂ ಚೌದನಂ**
**ನಿತ್ಯಂ ನೃತ್ಯಸಿ ಮಂದಿರೇಷು ಕಮಲೇ ಕ್ವತ್ಯಂ ತವೈತನ್ಮತಮ್ ॥**೬೫

—ವಿಶ್ವಗುಣಾದರ್ಶ-೪೨೧

ಎಲೈ ಲಕ್ಷ್ಮಿ! ಹಣಕೋಸ್ಕರ ಪಾಪರಹಿತರಾದ ಬಂಧುಗಳನ್ನು ಕೊಲೆಮಾಡುವವನ, ನೂರಾರು ಪರಸ್ತ್ರೀಯರನ್ನು ಅನುಭವಿಸುವವನ, ಪ್ರಾಣಿಹಿಂಸಾಪರರಾದ ಜನರೊಡನೆ ರಮಿಸುವವನ, ಮೋಸಗಳಿಂದ ಸಂತೋಷಪಡುವವನ, ಅಯೋಗ್ಯ ಮಾತುಗಳನ್ನಾಡುವವನ, ತನ್ನ ಹೊಟ್ಟೆಯನ್ನು ಮಾತ್ರ ಹೊರೆದುಕೊಳ್ಳುವವನ ಮನೆಗಳಲ್ಲಿ ನೀನು ಕುಣಿಯುತ್ತೀಯೆ. ಈ ನಿನ್ನ ಮತ ಎಲ್ಲಿಯದು?

**ಹೀನಜನ್ಮಾಪ್ಯಭಿಜನಂ ಜರಾಜೀರ್ಣೋऽಪಿ ಯೌವನಂ ।**
**ಮೂರ್ಖೋऽಪಿ ಪ್ರತಿಭೋದ್ಭೇದಂ ಧನೇನ ಲಭತೇ ನರಃ ॥** ೬೬

ಭಾರತಮಂಜರೀ, ಉದ್ಯೋಗ. ೨೬೫

ಹಣವೊಂದಿದ್ದರೆ ದುಷ್ಕುಲೀನನೂ ಕುಲೀನನೆನಿಸುತ್ತಾನೆ. ಹಣ್ಣುಹಣ್ಣು ಮುದುಕನಿಗೂ ಯೌವನ ಬರುತ್ತದೆ. ಮೂರ್ಖನಿಗೂ ಪ್ರತಿಭೋನ್ಮೇಷವಾಗುತ್ತದೆ.

**ಜ್ಞಾನವೃದ್ಧಾ ವಯೋವೃದ್ಧಾಃ ಶೀಲವೃದ್ಧಾಶ್ಚ ಮೇ ನರಾಃ ।**
**ಸರ್ವೇ ತೇ ಧನವೃದ್ಧಸ್ಯ ದ್ವಾರಿ ತಿಷ್ಠಂತಿ ಕಿಂಕರಾಃ ॥** ೬೭

ಸುಭಾಷಿತಸುಧಾನಿಧಿ, ಪು. ೧೩೫

ಯಾರುಯಾರು ಜ್ಞಾನದಿಂದ ಹಿರಿಯರೋ, ವಯಸ್ಸಿನಿಂದ ಹಿರಿಯರೋ, ಅಥವಾ ನಡತೆಯಿಂದ ಹಿರಿಯರೋ ಅವರೆಲ್ಲರು ಹಣದಿಂದ ಹಿರಿಯರಾದವರ ಮನೆಬಾಗಿಲಲ್ಲಿ ದಾಸರಾಗಿ ನಿಲ್ಲುತ್ತಾರೆ.



## ೫. ಸಜ್ಜನರು - ದುರ್ಜನರು

**ಅಕರುಣತ್ವಮಕಾರಣವಿಗ್ರಹಃ**
**ಪರಧನೇ ಪರಯೋಷಿತಿ ಚ ಸ್ಪೃಹಾ ।**
**ಸ್ವಜನಬಂಧುಜನೇಷ್ವಸಹಿಷ್ಣುತಾ**
**ಪ್ರಕೃತಿಸಿದ್ಧಮಿದಂ ಹಿ ದುರಾತ್ಮನಾಮ್ ॥ ೧**

—ನೀತಿಶತಕ, ೫೦

ದಯೆಯಿಲ್ಲದಿರುವುದು, ಕಾರಣವಿಲ್ಲದೆ ಜಗಳವಾಡುವುದು, ಪರರ ಹಣ ಮತ್ತು ಹೆಂಡತಿಯರನ್ನು ಆಶೆಪಡುವುದು, ಸ್ವಜನರಲ್ಲಿ ಮತ್ತು ಬಂಧುಗಳಲ್ಲಿ ಸಹನೆಯಿಲ್ಲದಿರುವಿಕೆ- ಈ ಗುಣಗಳು ದುರ್ಜನರಿಗೆ ಸ್ವಭಾವಸಿದ್ಧ.

**ಅಕುರ್ವಂತೋಽಪಿ ಪಾಪಾನಿ ಶುಚಯಃ ಪಾಪಸಂಶ್ರಯಾತ್ ।**
**ಪರಪಾಪೈರ್ವಿನಶ್ಯಂತಿ ಮತ್ಸ್ಯಾ ನಾಗಹ್ರದೇ ಯಥಾ ॥ ೨**

—ರಾಮಾಯಣ, ಅರಣ್ಯ ೩೮-೨೬

ಸಜ್ಜನರು ಸ್ವತಃ ಪಾಪಕೃತ್ಯಗಳನ್ನು ಮಾಡದಿದ್ದರೂ ದುಷ್ಟರ ಸಹವಾಸದಿಂದ ಅವರ ಪಾಪಕೃತ್ಯಗಳಿಗೆ ಸಿಕ್ಕಿ ನಾಶಹೊಂದುತ್ತಾರೆ. ಹಾವುಗಳ ಮಡುವಿನಲ್ಲಿರುವ ಮೀನುಗಳು (ಗರುಡನ ಬಾಯಿಗೆ ಸಿಕ್ಕಿದಂತೆ) ಹಾಳಾಗುತ್ತಾರೆ.

**ಅಂಜಲಿಸ್ಥಾನಿ ಪುಷ್ಪಾಣಿ ವಾಸಯಂತಿ ಕರದ್ವಯಂ ।**
**ಅಹೋ ಸುಮನಸಾಂ ಪ್ರೀತಿರ್ವಾಮದಕ್ಷಿಣಯೋಃ ಸಮಾ ॥ ೩**

—ಸುಭಾಷಿತರತ್ನಭಾಂಡಾಗಾರ

ಬೊಗಸೆಯಲ್ಲಿರುವ ಹೂಗಳು ಪಕ್ಷಪಾತವಿಲ್ಲದೆ ಎರಡು ಕೈಗಳನ್ನೂ ಸುವಾಸನೆಗೊಳಿಸುತ್ತವೆ. ಅದೇ ರೀತಿ ಒಳ್ಳೆಯಮನಸ್ಸುಳ್ಳವರು ಭೇದಮಾಡದೆ ಕೆಟ್ಟವರನ್ನೂ ಒಳ್ಳೆಯವರನ್ನೂ ಪ್ರೀತಿಸುತ್ತಾರೆ.

**ಅತಿಮಲಿನೇ ಕರ್ತವ್ಯೇ ಭವತಿ ಖಲಾನಾಮತೀವ ನಿಪುಣಾ ಧೀಃ ।**
**ತಿಮಿರೇ ಹಿ ಕೌಶಿಕಾನಾಂ ರೂಪಂ ಪ್ರತಿಪದ್ಯತೇ ದೃಷ್ಟಿಃ ॥ ೪**

—ವಾಸವದತ್ತಾ

ಅತ್ಯಂತ ಮಲಿನವಾದ ಕಾರ್ಯದ ವಿಷಯದಲ್ಲಿ ದುಷ್ಟರ ಬುದ್ಧಿಗೆ ಜಾಣ್ಮೆಬರುತ್ತದೆ. ಗೂಗೆಗಳ ಕಣ್ಣಿಗೆ ಕತ್ತಲಲ್ಲಿಯೇ ರೂಪವನ್ನು ನೋಡುವ ಶಕ್ತಿ ಇರುತ್ತದೆ.

**ಅರ್ಥಿನಾಮುಪಪನ್ನಾನಾಂ ಪೂರ್ವಂ ಚಾಪ್ಯುಪಕಾರಿಣಾಂ ।**
**ಆಶಾಂ ಸಂಶ್ರುತ್ಯ ಯೋ ಹಂತಿ ಸ ಲೋಕೇ ಪುರುಷಾಧಮಃ ॥ ೫**

—ರಾಮಾಯಣ, ಕಿಷ್ಕಿಂಧಾ. ೩೦-೭೧

ಕಾರ್ಯಾರ್ಥಿಗಳಾಗಿ ಹತ್ತಿರ ಬಂದವರಿಗೂ, ತನಗೆ ಉಪಕಾರ ಮಾಡಿದವರಿಗೂ, ಸಹಾಯಮಾಡುವೆನೆಂದು ಮಾತುಕೊಟ್ಟು ಆಶಾಭಂಗವನ್ನು ಮಾಡತಕ್ಕವನು ಪುರುಷಾಧಮ.

**ಅನಭ್ಯಾಸೇ ವಿಷಂ ಶಾಸ್ತ್ರಂ ಅಜೀರ್ಣೇ ಭೋಜನಂ ವಿಷಂ ।**
**ಮೂರ್ಖಸ್ಯ ಚ ವಿಷಂ ಗೋಷ್ಠೀ ವೃದ್ಧಸ್ಯ ತರುಣೀ ವಿಷಮ್ ॥ ೬**

—ಸಮಯೋಚಿತಪದ್ಯಮಾಲಿಕಾ

ಅಭ್ಯಾಸಮಾಡದಿದ್ದರೆ ಶಾಸ್ತ್ರ ವಿಷ, ಅಜೀರ್ಣವಾದಾಗ ಭೋಜನ ವಿಷ, ಮೂರ್ಖನಿಗೆ ವಿದ್ವತ್ಸಭೆ ವಿಷ, ಅಂದರೆ ಹಿಡಿಸುವುದಿಲ್ಲ. ಮುದುಕನ ಪಾಲಿಗೆ ತರುಣಿ ವಿಷದಂತೆ ದುಃಖವನ್ನುಂಟುಮಾಡುತ್ತಾಳೆ.

**ಅನ್ಯಸ್ಯ ದೋಷಂ ಪಶ್ಯಂತಿ ಸುಸೂಕ್ಷ್ಮಮಪಿ ತತ್ಪರಾಃ ।**
**ಸ್ವನೇತ್ರಮಿವ ನೇಕ್ಷಂತೇ ಸ್ವದೋಷಂ ಮಲಿನಾ ಜನಾಃ ॥ ೭**

—ರಾಮಾಯಣಮಂಜರೀ, ಕಿಷ್ಕಿಂಧಾ ೧೭೬

ಇನ್ನೊಬ್ಬರ ತಪ್ಪು ಚಿಕ್ಕದಾಗಿದ್ದರೂ ದುರ್ಜನರು ತತ್ಪರರಾಗಿ ಗಮನಿಸುತ್ತಾರೆ. ಆದರೆ ತಮ್ಮ ಕಣ್ಣನ್ನು ಹೇಗೆ ತಾವೇ ನೋಡಲಾರರೋ ಹಾಗೆ ತಮ್ಮ ತಪ್ಪು ತಮಗೆ ತಿಳಿಯುವುದೇ ಇಲ್ಲ.

**ಅನುಕುರುತಃ ಖಲಸುಜನಾವಗ್ರಿಮಪಾಶ್ಚಾತ್ಯಭಾಗಯೋಃ ಸೂಚ್ಯಾಃ ।**
**ವಿದಧಾತಿ ರಂಧ್ರಮೇಕಃ ಗುಣವಾನನ್ಯಸ್ತು ಪಿದಧಾತಿ ॥**

—ಸುಭಾಷಿತರತ್ನಭಾಂಡಾಗಾರ, ೪೯-೧೧೨

ದುಷ್ಟರನ್ನು ಸೂಜಿಯ ತುದಿಗೂ ಸಜ್ಜನರನ್ನು ಸೂಜಿಯ ಹಿಂಭಾಗಕ್ಕೂ ಹೋಲಿಸಬಹುದು. ಸೂಜಿಯ ಚೂಪಾದ ತುದಿಯು ರಂಧ್ರವನ್ನು ಮಾಡುವಂತೆ ದುಷ್ಟನು ದೋಷವನ್ನೇ ಉಂಟುಮಾಡುತ್ತಾನೆ. ದಾರದಿಂದ ಕೂಡಿದ ಸೂಜಿಯ ಹಿಂಭಾಗವು ರಂಧ್ರವನ್ನು ಮುಚ್ಚುವಂತೆ ಗುಣವಂತನಾದ ಸಜ್ಜನನು ದೋಷವನ್ನು ಮುಚ್ಚುತ್ತಾನೆ.

**ಅಪರಾಧೋ ನ ಮೇಽಸ್ತೀತಿ ನೈತದ್ವಿಶ್ವಾಸಕಾರಣಂ ।**
**ವಿದ್ಯತೇ ಹಿ ನೃಶಂಸೇಭ್ಯೋ ಭಯಂ ಗುಣವತಾಮಪಿ ॥ ೯**

—ಹಿತೋಪದೇಶ, ಮಿತ್ರಲಾಭ. ೫೬

'ನನ್ನಲ್ಲಿ ಯಾವ ತಪ್ಪೂ ಇಲ್ಲ' ಎಂಬುದೇ ವಿಶ್ವಾಸಕ್ಕೆ ಕಾರಣವಾಗುವುದಿಲ್ಲ. ಗುಣಶಾಲಿಗಳಿಗೂ ಕೂಡ ನಿರ್ದಯರಾದ ದುರ್ಜನರಿಂದ ಭಯವಿದ್ದೇ ಇದೆ.

ಅಪಿ ನಿಪುಣತರಮಧೀತಂ ದುರ್ವಿನಯಾರೂಢಚೇತಸಃ ಪುಂಸಃ ।
ಮಣಿರಿವ ಫಣಿಫಣವರ್ತೀ ಪ್ರಭವತಿ ಶೋಕಾಯ ಲೋಕಾನಾಮ್ ॥ ೧೦
—ಹರಿಹರಸುಭಾಷಿತ, ೩-೧೧

ಚೆನ್ನಾಗಿ ಕಲಿತಿರುವ ಉತ್ತಮವಿದ್ಯೆಯಾದರೂ ದುಷ್ಟನಲ್ಲಿದ್ದರೆ, ಹಾವಿನ ಹೆಡೆಯಲ್ಲಿರುವ ರತ್ನದಂತೆ ಜನರ ಶೋಕಕ್ಕೆ ಕಾರಣವಾಗುತ್ತದೆ.

ಅಮಿತಗುಣೋಽಪಿ ಪದಾರ್ಥೋ ದೋಷೇಣೈಕೇನ ನಿಂದಿತೋ ಭವತಿ ।
ನಿಖಿಲರಸಾಯನರಾಜೋ ದೋಷೇಣೈಕೇನ ಲಶುನ ಇವ ॥ ೧೧
—ರಸಗಂಗಾಧರ

ಬಹಳ ಗುಣವುಳ್ಳ ಪದಾರ್ಥವಾದರೂ ಒಂದು ದೋಷವಿದ್ದರೆ ನಿಂದಿತವಾಗಿ ಬಿಡುತ್ತದೆ, ಔಷಧಗಳಲ್ಲಿ ಶ್ರೇಷ್ಠವೆನಿಸಿದ ಬೆಳ್ಳುಳ್ಳಿ ಒಂದೇ ಒಂದು ದೋಷದಿಂದ (ದುರ್ವಾಸನೆಯಿಂದ) ನಿಂದ್ಯವಾಗಿದೆಯಲ್ಲವೆ!

ಅಮೃತಂ ಕಿರತಿ ಹಿಮಾಂಶುರ್ವಿಷಮೇವ ಫಣೀ ಸಮುದ್ಗಿರತಿ ।
ಗುಣಮೇವ ವಕ್ತಿ ಸಾಧುರ್ದೋಷಮಸಾಧುಃ ಪ್ರಕಾಶಯತಿ ॥ ೧೨
—ಸುಭಾಷಿತರತ್ನಸಮುಚ್ಚಯ

ಚಂದ್ರನು ಅಮೃತಕಿರಣವನ್ನು ಹರಡುತ್ತಾನೆ. ಸರ್ಪವು ವಿಷವನ್ನೇ ಕಾರುತ್ತದೆ. ಹಾಗೆ ಸತ್ಪುರುಷನು ಗುಣವನ್ನೇ ಹೇಳುತ್ತಾನೆ. ದುಷ್ಟನು ದೋಷವನ್ನೇ ಬೆಳಕಿಗೆ ತರುತ್ತಾನೆ.

ಅಶ್ವಃ ಶಸ್ತ್ರಂ ಶಾಸ್ತ್ರಂ ವೀಣಾ ವಾಣೀ ನರಶ್ಚ ನಾರೀ ಚ ।
ಪುರುಷವಿಶೇಷಂ ಪ್ರಾಪ್ಯ ಭವಂತ್ಯಯೋಗ್ಯಾಶ್ಚ ಯೋಗ್ಯಾಶ್ಚ ॥ ೧೩
—ಹಿತೋಪದೇಶ ಸುಹೃದ್ಭೇದ, ೬೭

ಕುದುರೆ, ಶಸ್ತ್ರ, ಶಾಸ್ತ್ರ, ವೀಣೆ, ಮಾತು, ಮನುಷ್ಯ ಮತ್ತು ಹೆಂಗಸು ಇವರು ವಿಶಿಷ್ಟರಾದ ಪುರುಷರನ್ನು ಸೇರಿದಾಗ ಅನುಗುಣವಾಗಿ ಯೋಗ್ಯರಾಗುವುದೂ ಉಂಟು ; ಅಯೋಗ್ಯರಾಗುವುದೂ ಉಂಟು.

ಅಸಂಖ್ಯೈರಪಿ ನಾತ್ಮೀಯೈರಲ್ಪೈರಪಿ ಪರಸ್ಥಿತೈಃ ।
ಗುಣೈಃ ಸಂತಃ ಪ್ರಹೃಷ್ಯಂತಿ ಚಿತ್ರಮೇಷಾಂ ವಿಚೇಷ್ಟಿತಮ್ ॥ ೧೪
—ನ್ಯಾಯಮಂಜರೀ, ೧-೧೫

ತಮ್ಮಲ್ಲಿ ಬೇಕಾದಷ್ಟು ಒಳ್ಳೆಯ ಗುಣಗಳಿದ್ದರೂ, ಬೇರೆಯವರಲ್ಲಿರುವ ಕೆಲವೇ ಗುಣಗಳನ್ನು ತಿಳಿದು ಸತ್ಪುರುಷರು ಆನಂದಿಸುತ್ತಾರೆ. ಇವರ ವರ್ತನೆ ವಿಚಿತ್ರ.

ಅಹಮೇವ ಗುರುಃ ಸುದಾರುಣಾನಾ-
ಮಿತಿ ಹಾಲಾಹಲ ತಾತ ಮಾ ಸ್ಮ ದೃಪ್ಯಃ ।
ನನು ಸಂತಿ ಭವಾದೃಶಾನಿ ಭೂಯೋ
ಭುವನೇऽಸ್ಮಿನ್ ವಚನಾನಿ ದುರ್ಜನಾನಾಮ್ ॥ ೧೫

—ಕುವಲಯಾನಂದ, ೧೫

ಎಲೈ ಹಾಲಾಹಲ ವಿಷವೆ, 'ಕ್ರೂರರಲ್ಲಿ ನಾನೇ ದೊಡ್ಡವನು' ಎಂದು, ಅಹಂಕಾರ ಪಡಬೇಡ. ನಿನ್ನಂತಹ ಕೆಟ್ಟವರ ಮಾತುಗಳು ಲೋಕದಲ್ಲಿ ಬೇಕಾದಷ್ಟಿವೆ!

ಅಹೋ ದುರ್ಜನಸಂಸರ್ಗಾನ್ಮಾನಹಾನಿಃ ಪದೇ ಪದೇ ।
ಪಾವಕೋ ಲೋಹಸಂಗೇನ ಮುದ್ಗರೈರಭಿಹನ್ಯತೇ ॥ ೧೬

—ಸಭಾಷಿತರತ್ನಸಮುಚ್ಚಯ

ದುರ್ಜನಸಹವಾಸದಿಂದ ಹೆಜ್ಜೆಹೆಜ್ಜೆಗೂ ಮಾನಹಾನಿಯಾಗುತ್ತದೆ. ಬೆಂಕಿಯು ಕಬ್ಬಿಣದೊಡನೆ ಸೇರಿದ್ದರಿಂದ ಸುತ್ತಿಗೆಗಳ ಹೊಡೆತವನ್ನು ಅನುಭವಿಸಬೇಕಾಗುತ್ತದೆ.

ಅಹೋ ಖಲಭುಜಂಗಸ್ಯ ವಿಚಿತ್ರೋऽಯಂ ವಧಕ್ರಮಃ ।
ಅನ್ಯಸ್ಯ ದಶತಿ ಶ್ರೋತ್ರಮನ್ಯಃ ಪ್ರಾಣೈರ್ವಿಯುಜ್ಯತೇ ॥ ೧೭

—ಕುವಲಯಾನಂದ

ದುಷ್ಟನೆಂಬ ಸರ್ಪವು ಜನರನ್ನು ಕೊಲ್ಲುವ ರೀತಿ ಅಚ್ಚರಿಗೊಳಿಸುವಂತಹುದು ! ಅದು ಒಬ್ಬನ ಕಿವಿಯನ್ನು ಕಚ್ಚುತ್ತದೆ, ಇನ್ನೊಬ್ಬನು ಸಾಯುತ್ತಾನೆ! (ಚಾಡಿ ಹೇಳಿ ಬೇರೆಯವರಿಗೆ ತೊಂದರೆ ಮಾಡುತ್ತಾನೆ).

ಆತ್ಮಪ್ರಶಂಸಿನಂ ದುಷ್ಟಂ ಧೃಷ್ಟಂ ವಿಪರಿಧಾವಕಂ ।
ಸರ್ವತ್ರೋತ್ಸೃಷ್ಟದಂಡಂ ಚ ಲೋಕಃ ಸತ್ಕುರುತೇ ನರಮ್ ॥ ೧೮

—ರಾಮಾಯಣ, ಯುದ್ಧ, ೨೧-೧೬

ಯಾವನು ತನ್ನನ್ನು ತಾನೇ ಹೊಗಳಿಕೊಳ್ಳುತ್ತ, ಖ್ಯಾತಿಗಾಗಿ ಅಲೆಯುತ್ತ, ಔದ್ಧತ್ಯದಿಂದ ಎಲ್ಲೆಡೆಯೂ ದಂಡಪ್ರಯೋಗವನ್ನು ಮಾಡುತ್ತ, ದೌಷ್ಟ್ಯದಿಂದ ಮೆರೆಯುವನೋ ಅವನನ್ನು ಲೋಕವು ಗೌರವಿಸುತ್ತದೆ!

ಆದೌ ಚಿತ್ತೇ ತತಃ ಕಾಯೇ ಸತಾಂ ಸಂಪದ್ಯತೇ ಜರಾ ।
ಅಸತಾಂ ತು ಪುನಃ ಕಾಯೇ ನೈವ ಚಿತ್ತೇ ಕದಾಚನ ॥ ೧೯

—ಪಂಚತಂತ್ರ, ಮಿತ್ರಭೇದ-೧೭೭

ಸಜ್ಜನರ ವಿಷಯದಲ್ಲಿ ಮೊದಲು ಮನಸ್ಸಿನಲ್ಲಿ ಮತ್ತು ತದನಂತರ ಶರೀರದಲ್ಲಿ ಮುಪ್ಪು ಮೈದೋರುತ್ತದೆ. ಆದರೆ ಇತರರಿಗೆ ಶರೀರದಲ್ಲಿ ಮುಪ್ಪುತೋರಿದರೂ ಚಿತ್ತದಲ್ಲಿ ಎಂದೂ ಮುಪ್ಪುಂಟಾಗುವುದೇ ಇಲ್ಲ.

**ಆಪದ್ಗತಃ ಖಲು ಮಹಾಶಯಚಕ್ರವರ್ತೀ**
**ವಿಸ್ತಾರಯತ್ಯಕೃತಪೂರ್ವಮುದಾರಭಾವಂ ।**
**ಕಾಲಾಗುರುರ್ದಹನಮಧ್ಯಗತಃ ಸಮಂತಾತ್**
**ಲೋಕೋತ್ತರಂ ಪರಿಮಲಂ ಪ್ರಕಟೀಕರೋತಿ ॥ ೨೦**

—ರಸಗಂಗಾಧರ

ಮಹಾಪುರುಷನು ವಿಪತ್ತಿಗೆ ಒಳಗಾದಾಗ ಹಿಂದೆಂದೂ ಕಾಣದ ಉದಾತ್ತಗುಣವನ್ನು ಪ್ರಕಟಿಸುತ್ತಾನೆ. ಧೂಪವು ಬೆಂಕಿಯ ನಡುವೆ ಇದ್ದಾಗ ಲೋಕೋತ್ತರವಾದ ಪರಿಮಳವನ್ನು ಸುತ್ತಲೂ ಹರಡುತ್ತದೆ.

**ಆಬದ್ಧಕೃತ್ರಿಮಸಟಾಜಟಿಲಾಂಸಭಿತ್ತಿಃ**
**ಆರೋಪಿತೋ ಮೃಗಪತೇಃ ಪದವೀಂ ಯದಿ ಶ್ವಾ ।**
**ಮತ್ತೇಭಕುಂಭತಟಪಾಟನಲಂಪಟಸ್ಯ**
**ನಾದಂ ಕರಿಷ್ಯತಿ ಕಥಂ ಹರಿಣಾಧಿಪಸ್ಯ ॥ ೨೧**

—ರಸಗಂಗಾಧರ

ನಾಯಿಗೆ ಕೃತ್ರಿಮವಾದ ಕೇಸರಗಳನ್ನು ಕಟ್ಟಿ ಮೃಗರಾಜರ ಸಿಂಹದ ಪದವಿಗೇರಿಸಿದರೆ ಏನಾದೀತು? ಮದಿಸಿದ ಆನೆಯ ಕುಂಭಸ್ಥಳವನ್ನು ಭೇದಿಸುವ ಸಾಮರ್ಥ್ಯವುಳ್ಳ ಸಿಂಹದ ಗರ್ಜನೆಯನ್ನು ಆ ನಾಯಿ ಮಾಡೀತೇ?

**ಆರಂಭಗುರ್ವೀ ಕ್ಷಯಿಣೀ ಕ್ರಮೇಣ**
**ಲಘ್ವೀ ಪುರಾ ವೃದ್ಧಿಮತೀ ಚ ಪಶ್ಚಾತ್ ।**
**ದಿನಸ್ಯ ಪೂರ್ವಾರ್ಧಪರಾರ್ಧದೃಶ್ಯಾ**
**ಛಾಯೇವ ಮೈತ್ರೀ ಖಲಸಜ್ಜನಾನಾಮ್ ॥ ೨೨**

—ನೀತಿಶತಕ, ೫೯

ದುಷ್ಟರ ಸ್ನೇಹ ಹಗಲಿನ ಮೊದಲನೆಯ ಭಾಗದಲ್ಲಿ ಕಾಣುವ ಪದಾರ್ಥದ ನೆರಳಿನಂತೆ, ಪ್ರಾರಂಭದಲ್ಲಿ ದೊಡ್ಡದಾಗಿಯೂ ಕ್ರಮೇಣ ಕಡಿಮೆಯಾಗತಕ್ಕದಾಗಿಯೂ ಇರುತ್ತದೆ. ಆದರೆ ಸತ್ಪುರುಷರ ಸ್ನೇಹ ಮಧ್ಯಾಹ್ನದಲ್ಲಿ ಕಾಣುವ ಪದಾರ್ಥದ ನೆರಳಿನಂತೆ ಪ್ರಾರಂಭದಲ್ಲಿ ಸಣ್ಣದಾಗಿಯೂ ಕ್ರಮೇಣ ದೊಡ್ಡದಾಗತಕ್ಕದಾಗಿಯೂ ಇರುತ್ತದೆ.

**ಇಕ್ಷೋರಗ್ರಾತ್ ಕ್ರಮಶಃ ಪರ್ವಣಿ ಪರ್ವಣಿ ಯಥಾರಸವಿಶೇಷಃ ।**
**ತದ್ವತ್ಸಜ್ಜನಮೈತ್ರೀ ವಿಪರೀತಾನಾಂ ಚ ವಿಪರೀತಾ ॥ ೨೩**

—ಸುಭಾಷಿತರತ್ನಭಾಂಡಾಗಾರ

ಕಬ್ಬಿನ ಜಲ್ಲೆಯ ತುದಿಯಿಂದ ಗೆಣ್ಣು ಗೆಣ್ಣಿಗೂ ಹೇಗೆ ರುಚಿ ಹೆಚ್ಚುವುದೋ ಹಾಗೇ ಸತ್ಪುರುಷರ ಸ್ನೇಹವು ದಿನಕಳೆದಂತೆಲ್ಲಾ ಮಧುರವಾಗುವುದು. ಆದರೆ ದುರ್ಜನರ ಸ್ನೇಹವು ಇದೇ ರೀತಿ ಕೆಡುತ್ತಾ ಹೋಗುತ್ತದೆ.

ಉತ್ತಮಃ ಕ್ಲೇಶವಿಕ್ಷೋಭಂ ಕ್ಷಮಃ ಸೋಢುಂ ನ ಹೀತರಃ ।
ಮಣಿರೇವ ಮಹಾಶಾಣಘರ್ಷಣಂ ನ ತು ಮೃತ್ಕಣಃ ॥ ೨೪

—ದೃಷ್ಟಾಂತಕಲಿಕಾ, ೧೦

ಕಷ್ಟದಿಂದಾಗುವ ಕ್ಷೋಭೆಯನ್ನು ಉತ್ತಮನು ಸಹಿಸಿಕೊಳ್ಳಬಲ್ಲನು; ಅಲ್ಪನು ಸಹಿಸಲಾರ. ಸಾಣೆಕಲ್ಲಿನ ಘರ್ಷಣೆಯನ್ನು ರತ್ನವು ಸಹಿಸಿಕೊಳ್ಳಬಲ್ಲುದೇ ಹೊರತುಮಣ್ಣಿನ ಕಣ ಸಹಿಸಿಕೊಳ್ಳಲಾರದು.

ಉತ್ತಮಶ್ಚಿಂತಿತಂ ಕುರ್ಯಾತ್ ಪ್ರೋಕ್ತಕಾರೀ ತು ಮಧ್ಯಮಃ ।
ಅಧಮೋಽಶ್ರದ್ಧಯಾ ಕುರ್ಯಾದಕರ್ತೋಚ್ಚರಿತಂ ಪಿತುಃ ॥ ೨೫

—ಭಾಗವತ, ೯-೧೮-೪೪

ತಂದೆಯ ಮನಸ್ಸಿನಲ್ಲಿರುವುದನ್ನರಿತು ಮಾಡತಕ್ಕ ಮಗನು ಉತ್ತಮ. ಹೇಳಿದ್ದನ್ನು ಮಾಡತಕ್ಕವನು ಮಧ್ಯಮ. ಅಶ್ರದ್ಧೆಯಿಂದ ಮಾಡತಕ್ಕವನು ಅಧಮ. ಮಾತನ್ನು ಸರ್ವಥಾ ನಡೆಸದೆ ಇರತಕ್ಕವನು ತಂದೆಯ ಮಲವಿದ್ದಂತೆ.

ಉತ್ತಮಾ ಆತ್ಮನಾ ಖ್ಯಾತಾಃ ಪಿತ್ರಾ ಖ್ಯಾತಾಶ್ಚ ಮಧ್ಯಮಾಃ ।
ಮಾತುಲೇನಾಧಮಾಃ ಖ್ಯಾತಾಃ ಶ್ವಶುರೇಣಾಧಮಾಧಮಾಃ ॥ ೨೬

—ಸಮಯೋಚಿತಪದ್ಯಮಾಲಿಕಾ

ತನ್ನಿಂದ ಸ್ವಯಂ ಖ್ಯಾತಿಗಳಿಸಿದವರು ಉತ್ತಮರು. ತಂದೆಯಿಂದ ಖ್ಯಾತಿಗೆ ಬಂದವರು ಮಧ್ಯಮರು. ಸೋದರಮಾವನಿಂದ ಖ್ಯಾತರಾದವರು ಅಧಮರು. ಹೆಣ್ಣು ಕೊಟ್ಟ ಮಾವನಿಂದ ಖ್ಯಾತಿಗಳಿಸಿದರು ಅಧಮಾಧಮರು!

ಉದ್ಭಾಸಿತಾಖಿಲಖಲಸ್ಯ ವಿಶೃಂಖಲಸ್ಯ
ಪ್ರಾಗ್ಜಾತವಿಸ್ಮೃತನಿಜಾಧಮಕರ್ಮವೃತ್ತೇಃ ।
ದೈವಾದವಾಪ್ತವಿಭವಸ್ಯ ಗುಣದ್ವಿಷೋಽಸ್ಯ
ನೀಚಸ್ಯ ಗೋಚರಗತೈಃ ಸುಖಮಾಪ್ಯತೇ ಕೈಃ ॥ ೨೭

—ನೀತಿಶತಕ, ೫೭

ಎಲ್ಲ ದುರ್ಜನರನ್ನು ಪ್ರಕಾಶಗೊಳಿಸಿರುವವನೂ, ಸ್ವೇಚ್ಛಾವೃತ್ತಿಯವನೂ, ಪೂರ್ವಜನ್ಮದಲ್ಲುಂಟಾಗಿ ಈಗ ವಿಸ್ತಾರವಾಗಿರುವ ಕೆಟ್ಟಕೆಲಸಗಳಲ್ಲಿ ನಿರತನಾದವನೂ, ಅದೃಷ್ಟವಶಾತ್ ಐಶ್ವರ್ಯಹೊಂದಿದವನೂ, ಗುಣದ್ವೇಷಿಯೂ ಆದ ನೀಚನ ಕಣ್ಣಿಗೆ ಬಿದ್ದರೆ, ಯಾರಿಗೆ ತಾನೆ ಸುಖವುಂಟಾಗುತ್ತದೆ?

ಉದೇತಿ ಸವಿತಾ ತಾಮ್ರಸ್ತಾಮ್ರ ಏವಾಸ್ತಮೇತಿ ಚ ।
ಸಂಪತ್ತೌ ಚ ವಿಪತ್ತೌ ಚ ಮಹತಾಮೇಕರೂಪತಾ ॥ ೨೮

—ಕಾವ್ಯಪ್ರಕಾಶ, ೭-೨೪೫, ಪಂಚತಂತ್ರ, ಮಿತ್ರಸಂಪ್ರಾಪ್ತಿ-೭

ಸೂರ್ಯನು ಕೆಂಪಾಗಿ ಹುಟ್ಟುತ್ತಾನೆ. ಕೆಂಪಾಗಿಯೇ ಅಸ್ತಂಗತನಾಗುತ್ತಾನೆ. ಸಂಪತ್ತಿರಲಿ, ವಿಪತ್ತು ಬರಲಿ, ಸುಖವಿರಲಿ, ಕಷ್ಟ ಬರಲಿ ಮಹಾತ್ಮರ ಸ್ವರೂಪ ಒಂದೇ ವಿಧ.

**ಉಪಕಾರಮೇವ ಕುರುತೇ ವಿಪದ್ಗತಃ ಸದ್ಗುಣೋ ನಿತರಾಂ ।**
**ಮೂರ್ಛಾಂ ಗತೋ ಮೃತೋ ವಾ ನಿದರ್ಶನಂ ಪಾರದೋಽತ್ರ ರಸಃ। ೨೯**

—ರಸಗಂಗಾಧರ

ಗುಣಶಾಲಿಯು ಹೆಚ್ಚು ಸಂಕಟದಲ್ಲಿ ಸಿಕ್ಕಿದ್ದರೂ ಉಪಕಾರವನ್ನೇ ಮಾಡುತ್ತಾನೆ. ಮೂರ್ಛೆ ಹೊಂದಲಿ, ಮೃತವಾಗಲಿ, ಹರವಿರಲಿ, ರೂಪಾಂತರ ಹೊಂದಲಿ ಉಪಕಾರಿಯಾದ ಪಾದರಸ ಇದಕ್ಕೆ ನಿದರ್ಶನ. (ಪಾದರಸಭಸ್ಮವು ರೋಗಕ್ಕೆ ಮದ್ದು)

**ಉಪಚರಿತವ್ಯಾಃ ಸಂತಃ ಯದ್ಯಪಿ ಕಥಯಂತಿ ನೈಕಮುಪದೇಶಂ ।**
**ಯಾಸ್ತೇಷಾಂ ಸ್ವೈರಕಥಾಸ್ತಾ ಏವ ಭವಂತಿ ಶಾಸ್ತ್ರಾಣಿ ॥ ೩೦**

—ಸುಭಾಷಿತರತ್ನಭಾಂಡಾಗಾರ

ಯಾವ ಉಪದೇಶವನ್ನು ಹೇಳದಿರುವಾಗಲೂ ಸತ್ಪುರುಷರಿಗೆ ಉಪಚಾರ ಮಾಡುವುದು ಒಳ್ಳೆಯದು. ಅವರು ಸ್ವೇಚ್ಛೆಯಿಂದ ಆಡುವ ಮಾತುಗಳೂ ಶಾಸ್ತ್ರದಷ್ಟು ಅಮೂಲ್ಯವಾಗಿರುತ್ತವೆ.

**ಏಕಃ ಪಾಪಾನಿ ಕುರುತೇ ಫಲಂ ಭುಂಕ್ತೇ ಮಹಾಜನಃ ।**
**ಭೋಕ್ತಾರೋ ವಿಪ್ರಮುಚ್ಯಂತೇ ಕರ್ತಾ ದೋಷೇಣ ಲಿಪ್ಯತೇ ॥ ೩೧**

— ಮಹಾಭಾರತ, ಉದ್ಯೋಗ- ೩೩-೪

ಯಾವನೋ ಒಬ್ಬನು ಪಾಪಕಾರ್ಯಗಳನ್ನು ಮಾಡುತ್ತಾನೆ. ಮಹಾಜನರು ಫಲವನ್ನು ಅನುಭವಿಸುತ್ತಾರೆ. ಫಲಭಾಗಿಗಳು ತಪ್ಪಿಸಿಕೊಳ್ಳುತ್ತಾರೆ. ಪಾಪಮಾಡಿದವನು ಅಪರಾಧಿಯಾಗಿ ಉಳಿಯುತ್ತಾನೆ.

**ಏಕೋ ವಿಶ್ವಸತಾಂ ಹರಾಮ್ಯಪಘೃಣಃ ಪ್ರಾಣಾನಹಂ ಪ್ರಾಣಿನಾಂ**
**ಇತ್ಯೇವಂ ಪರಿಚಿಂತ್ಯ ಮಾತ್ಮಮನಸಿ ವ್ಯಾಧಾನುತಾಪಂ ಕೃಥಾಃ ।**
**ಭೂಪಾನಾಂ ಭವನೇಷು ಕಿಂ ಚ ವಿಮಲಕ್ಷೇತ್ರೇಷು ಗೂಢಾಶಯಾಃ**
**ಸಾಧೂನಾಮರಯೋ ವಸಂತಿ ಕತಿ ನ ತ್ವತ್ತುಲ್ಯಕಕ್ಷಾ ನರಾಃ॥ ೩೨**

—ಭಾಮಿನೀವಿಲಾಸ, ೧-೬೫

"ಅಯ್ಯೋ ಪಾಪ! ನಂಬಿಕೆಯಿಟ್ಟ ಪ್ರಾಣಿಗಳನ್ನು ದಿನವೂ ಕರುಣೆಯಿಲ್ಲದೆ ಕೊಲ್ಲುವೆನಲ್ಲಾ" ಎಂದು ಬೇಡನಿಗೆ ಮನಸ್ಸಿನಲ್ಲಿ ವ್ಯಥೆ. ಆದರೆ ಅರಮನೆಗಳಲ್ಲಿ, ಪುಣ್ಯಕ್ಷೇತ್ರಗಳಲ್ಲಿ, ಮನಸ್ಸಿನಲ್ಲಿಯೇ ಕೆಟ್ಟ ಯೋಚನೆಗಳನ್ನು ಮಾಡಿ ಒಳ್ಳೆಯವರಿಗೆ ಹಿಂಸೆ ಕೊಡುವವರು, ಬೇಡರಿಗೆ ಸಮಾನರಾದ ಕ್ರೂರಿಗಳು ಎಷ್ಟು ಮಂದಿ ಇಲ್ಲ?

**ಏತೇ ಸತ್ಪುರುಷಾಃ ಪರಾರ್ಥಘಟಕಾಃ ಸ್ವಾರ್ಥಂ ಪರಿತ್ಯಜ್ಯ ಯೇ**
**ಸಾಮಾನ್ಯಾಸ್ತು ಪರಾರ್ಥಮುದ್ಯಮಭೃತಃ ಸ್ವಾರ್ಥಾವಿರೋಧೇನ ಯೇ ।**
**ತೇಽಮೀ ಮಾನುಷರಾಕ್ಷಸಾಃ ಪರಹಿತಂ ಸ್ವಾರ್ಥಾಯ ನಿಘ್ನಂತಿ ಯೇ**
**ಯೇ ನಿಘ್ನಂತಿ ನಿರರ್ಥಕಂ ಪರಹಿತಂ ತೇ ಕೇ ನ ಜಾನೀಮಹೇ ।೩೩**

—ನೀತಿಶತಕ-೭೨

ಯಾರು ಸ್ವಾರ್ಥವನ್ನು ಬಿಟ್ಟು ಪರರ ಪ್ರಯೋಜನವನ್ನು ಸಾಧಿಸುತ್ತಾರೋ ಅವರು ಸತ್ಪುರುಷರು. ಯಾರು ಸ್ವಾರ್ಥಕ್ಕೆ ತೊಂದರೆ ಬರದಂತೆ ಪರಾರ್ಥವನ್ನು ಸಾಧಿಸುತ್ತಾರೋ ಅವರು ಸಾಮಾನ್ಯರು. ಯಾರು ಸ್ವಾರ್ಥಕ್ಕೋಸ್ಕರ ಪರರ ಹಿತವನ್ನು ಹಾಳು ಮಾಡುತ್ತಾರೋ ಅವರು ಮಾನುಷರಾಕ್ಷಸರು. ಯಾರು ನಿರರ್ಥಕವಾಗಿ ಪರರ ಹಿತವನ್ನು ಹಾಳು ಮಾಡುವರೋ ಅವರನ್ನು ಏನೆಂದು ಕರೆಯಬೇಕೋ ಗೊತ್ತಿಲ್ಲ.

**ಏಹ್ಯಾಗಚ್ಛ ಸಮಾಶ್ರಯಾಸನಮಿದಂ ಕಸ್ಮಾಚ್ಚಿರಾದ್ದೃಶ್ಯಸೇ**
**ಕಾ ವಾರ್ತಾ ಹ್ಯತಿದುರ್ಬಲೋಽಸಿ ಕುಶಲಂ ಪ್ರೀತೋಽಸ್ಮಿ ತೇ ದರ್ಶನಾತ್।**
**ಏವಂ ಯೇ ಸಮುಪಾಗತಾನ್ಪ್ರಣಯಿನಃ ಪ್ರಹ್ಲಾದಯಂತ್ಯಾದರಾತ್**
**ತೇಷಾಂ ಯುಕ್ತಮಶಂಕಿತೇನ ಮನಸಾ ಹರ್ಮ್ಯಾಣಿ ಗಂತುಂ ಸದಾ ॥ ೩೪**

—ಪಂಚತಂತ್ರ, ಮಿತ್ರಸಂಪ್ರಾಪ್ತಿ-೯೭

"ಬನ್ನಿ ಬನ್ನಿ, ಈ ಆಸನದಲ್ಲಿ ಕುಳಿತಿರಿ, ಬಹಳ ಕಾಲದಿಂದ ಏಕೆ ಕಾಣಲಿಲ್ಲ? ಸಮಾಚಾರವೇನು, ಬಹಳ ದುರ್ಬಲರಾಗಿದ್ದೀರಲ್ಲಾ, ಕುಶಲವೇ, ನಿಮ್ಮನ್ನು ಕಂಡು ಬಹಳ ಸಂತಸವಾಯಿತು" ಹೀಗೆ ಯಾರು ಬಂದ ಮಿತ್ರರನ್ನು ಆದರದಿಂದ ಸಂತೋಷ ಗೊಳಿಸುವರೋ ಅಂಥವರ ಮನೆಗೆ ಯಾವ ಸಂದೇಹವೂ ಇಲ್ಲದ ಮನಸ್ಸಿನಿಂದ ಯಾವಾಗಲೂ ಹೋಗುವುದು ಯುಕ್ತ.

**ಕ್ವಚಿದ್ಭೂಮೌ ಶಯ್ಯಾ ಕ್ವಚಿದಪಿ ಚ ಪರ್ಯಂಕಶಯನಃ**
**ಕ್ವಚಿಚ್ಛಾಕಾಹಾರೀ ಕ್ವಚಿದಪಿ ಚ ಶಾಲ್ಯೋದನರುಚಿಃ ।**
**ಕ್ವಚಿತ್ಕಂಥಾಧಾರೀ ಕ್ವಚಿದಪಿ ಚ ದಿವ್ಯಾಂಬರಧರೋ**
**ಮನಸ್ವೀ ಕಾರ್ಯಾರ್ಥೀ ನ ಗಣಯತಿ ದುಃಖಂ ನ ಚ ಸುಖಮ್ ॥ ೩೫**

—ನೀತಿಶತಕ-೭೯

ಕಾರ್ಯವನ್ನು ಸಾಧಿಸುವ ಧೀರನು ಸುಖದುಃಖಗಳನ್ನೆಣಿಸುವುದಿಲ್ಲ. ಒಮ್ಮೆ ನೆಲದ ಮೇಲೆ ಮಲಗುವನು. ಇನ್ನೊಮ್ಮೆ ಮಂಚದ ಮೇಲೆ. ಒಮ್ಮೆ ಶಾಕಪತ್ರಗಳನ್ನು ತಿಂದುಕೊಂಡಿರುವನು. ಇನ್ನೊಮ್ಮೆ ಮೃಷ್ಟಾನ್ನವನ್ನು ತಿನ್ನುವನು. ಒಮ್ಮೆ ಚಿಂದಿ ಬಟ್ಟೆಯನ್ನುಡುವನು. ಇನ್ನೊಮ್ಮೆ ದಿವ್ಯವಸ್ತ್ರಗಳನ್ನು ಧರಿಸುವನು. ಕಾರ್ಯಮುಗಿಸಬೇಕೆಂಬ ಛಲವುಳ್ಳ ಧೀರನು ದುಃಖವನ್ನಾಗಲೀ, ಸುಖವನ್ನಾಗಲೀ ಲೆಕ್ಕಿಸನು. (ಯಾವುದನ್ನಾದರೂ ಸಹಿಸಿಕೊಳ್ಳುತ್ತಾನೆ).

**ಕಿಂ ಕುಲಂ ವೃತ್ತಹೀನಸ್ಯ ಕರಿಷ್ಯತಿ ದುರಾತ್ಮನಃ ।**
**ಕ್ರಿಮಯಃ ಕಿಂ ನ ಜಾಯಂತೇ ಕುಸುಮೇಷು ಸುಗಂಧಿಷು ॥ ೩೬**

—ಚತುರ್ವರ್ಗ ಚಿಂತಾಮಣಿ, ೩೪೨

ನಡತೆಯಿಲ್ಲದ ಕೆಟ್ಟವನು ಉತ್ತಮಕುಲದಲ್ಲಿ ಹುಟ್ಟಿದರೂ ಪ್ರಯೋಜನವಿಲ್ಲ. ಸುವಾಸನೆಯುಳ್ಳ ಹೂಗಳಲ್ಲಿ ಕ್ರಿಮಿಗಳು ಹುಟ್ಟುವುದಿಲ್ಲವೇ!

**ಕುಸುಮಸ್ತಬಕಸ್ಯೇವ ದ್ವಯೀ ವೃತ್ತಿರ್ಮನಸ್ವಿನಃ ।**
**ಮೂರ್ಧ್ನಿ ವಾ ಸರ್ವಲೋಕಸ್ಯ ಶೀರ್ಯತೇ ವನ ಏವ ವಾ ॥ ೩೭**

—ನೀತಿಶತಕ-೩೧

ಮಾನವಂತನ ಇರುವಿಕೆ ಹೂಗೊಂಚಲಿನಂತೆ ಎರಡು ಪ್ರಕಾರವಾದುದು. ಹೇಗೆಂದರೆ ಎಲ್ಲ ಜನರ ತಲೆಯ ಮೇಲಿರುವುದು ಅಥವಾ ಕಾಡಿನಲ್ಲೇ ನಶಿಸಿಹೋಗುವುದು.

**ಕಾತರಾಃ ಪರದುಃಖೇಷು ನಿಜದುಃಖೇಷ್ವಕಾತರಾಃ ।**
**ಅರ್ಥೇಷ್ವಲೋಭಾ ಯಶಸಿ ಸಲೋಭಾಃ ಸಂತಿ ಸಾಧವಃ ॥ ೩೮**

—ರಸಗಂಗಾಧರ

ಪರರಿಗೆ ದುಃಖ ಬಂದಾಗ ಸಜ್ಜನರು ವ್ಯಾಕುಲರಾಗುತ್ತಾರೆ. ತಮಗೆ ದುಃಖ ಬಂದಾಗ ವ್ಯಾಕುಲರಾಗುವುದಿಲ್ಲ. ಅವರಿಗೆ ಹಣದಲ್ಲಿ ಆಸೆ ಇಲ್ಲ. ಕೀರ್ತಿಯಲ್ಲಿ ಆಸೆ.

**ಕಾಲಾಂತರೇ ಹ್ಯನರ್ಥಾಯ ಗೃಧ್ರೋ ಗೇಹೋಪರಿ ಸ್ಥಿತಃ ।**
**ಖಲೋ ಗೃಹಸಮೀಪಸ್ಥಃ ಸದ್ಯೋಽನರ್ಥಾಯ ದೇಹಿನಾಮ್ ॥ ೩೯**

—ಕಲಿವಿಡಂಬನ, ೭೪

ಮನೆಯ ಮೇಲೆ ಹದ್ದು ಕುಳಿತರೆ ಕಾಲಾಂತರದಲ್ಲಿ ಕೆಡಕು ಸಂಭವಿಸಬಹುದು. ದುಷ್ಟನು ಮನೆಯ ಹತ್ತಿರವಿದ್ದರೆ ಸಾಕು, ಕೂಡಲೇ ಕೆಡಕು ಸಂಭವಿಸುತ್ತದೆ.

**ಕಿಂ ಮಧುನಾ ಕಿಂ ವಿಧುನಾ**
**ಕಿಂ ಸುಧಯಾ ಕಿಂ ವಸುಧಯಾಖಿಲಯಾ ।**
**ಯದಿ ಹೃದಯಹಾರಿಚರಿತಃ**
**ಪುರುಷಃ ಪುನರೇತಿ ನಯನಯೋರಯನಮ್ ॥ ೪೦**

—ಸುಭಾಷಿತರತ್ನಭಾಂಡಾಗಾರ

ಜೇನುತುಪ್ಪ, ಚಂದ್ರ, ಅಮೃತ, ಸಮಸ್ತ ಭೂಮಂಡಲ ಇವುಗಳಿಂದೇನಾದೀತು? ಮನಸ್ಸಿಗೊಪ್ಪುವ ನಡತೆಯಿಂದ ಕೂಡಿದ ಸತ್ಪುರುಷನು ಕಣ್ಣಿಗೆ ಗೋಚರವಾದರೆ ಅದೇ ಎಲ್ಲವೂ.

**ಖಲಃ ಕರೋತಿ ದುರ್ವೃತ್ತಂ ನೂನಂ ಫಲತಿ ಸಾಧುಷು ।**
**ದಶಾನನೋ ಹರೇತ್ಸೀತಾಂ ಬಂಧನಂ ಸ್ಯಾನ್ಮಹೋದಧೇಃ ॥ ೪೧**

ಹಿತೋಪದೇಶ, ವಿಗ್ರಹ-೨೧

ದುಷ್ಟನು ಕೆಟ್ಟ ದಾರಿಯಲ್ಲಿ ನಡೆಯುತ್ತಾನೆ. ಅದರ ಪರಿಣಾಮ ಸಜ್ಜನರ ಮೇಲೆ ನಿಜವಾಗಿ ಆಗುತ್ತದೆ. ಸೀತೆಯನ್ನು ರಾವಣ ಅಪಹರಿಸಿದರೆ ಮಹಾಸಾಗರಕ್ಕೆ ಬಂಧನವಾಯಿತು.

**ಖಲಸಖ್ಯಂ ಪ್ರಾಙ್ಮಧುರಂ ವಯೋಽಂತರಾಲೇ ನಿದಾಘದಿನಮಂತೇ।**
**ಏಕಾದಿಮಧ್ಯಪರಿಣತಿರಮಣೀಯಾ ಸಾಧುಜನಮೈತ್ರೀ ॥ ೪೨**

—ಸಮಯೋಚಿತಪದ್ಯಮಾಲಿಕಾ

ದುರ್ಜನಸಂಗ ಆರಂಭದಲ್ಲಿ ಮಧುರ. ವಯಸ್ಸು ನಡುವೆ ತಾರುಣ್ಯದಲ್ಲಿ ಮಧುರ. ಬೇಸಿಗೆದಿನ ಕಡೆಯಲ್ಲಿ-ಸಂಜೆ ಮಧುರ. ಸಜ್ಜನಸಂಗವು ಆರಂಭ-ನಡುವೆ-ಕಡೆಯಲ್ಲಿಯೂ ಒಂದೇ ರೀತಿ ಮಧುರ.

**ಗಂಗಾ ಪಾಪಂ ಶಶೀ ತಾಪಂ ದೈನ್ಯಂ ಕಲ್ಪತರುಸ್ತಥಾ ।**
**ಪಾಪಂ ತಾಪಂ ಚ ದೈನ್ಯಂ ಚ ಹಂತಿ ಸಂತೋ ಮಹಾಶಯಾಃ ॥ ೪೩**

—ಸುಭಾಷಿತರತ್ನಭಾಂಡಾಗಾರ

ಗಂಗೆಯು ಪಾಪವನ್ನು ಮಾತ್ರ ಹೋಗಲಾಡಿಸುತ್ತದೆ. ಚಂದ್ರನು ಬೇಸಗೆಯ ಬೇಗೆಯನ್ನು ಮಾತ್ರ ಹೋಗಲಾಡಿಸುತ್ತಾನೆ. ಕಲ್ಪವೃಕ್ಷವು ಬಡತನವನ್ನು ಮಾತ್ರ ಹೋಗಲಾಡಿಸುತ್ತದೆ. ಆದರೆ ಉದಾತ್ತವಾದ ಅಭಿಪ್ರಾಯವುಳ್ಳ ಸಂತರು ಪಾಪವನ್ನೂ, ದುಃಖವನ್ನೂ, ಬಡತನವನ್ನೂ ಹೋಗಲಾಡಿಸುತ್ತಾರೆ.

**ಗಿರಯೋ ಗುರವಃ ತೇಭ್ಯೋಽಪ್ಯುರ್ವೀ ಗುರ್ವೀ ತತೋಽಪಿ ಜಗದಂಡಂ ।**
**ತಸ್ಮಾದಪ್ಯತಿಗುರವಃ ಪ್ರಲಯೇಽಪ್ಯಚಲಾ ಮಹಾತ್ಮಾನಃ ॥ ೪೪**

—ಸುಭಾಷಿತರತ್ನಭಾಂಡಾಗಾರ

ಬೆಟ್ಟಗಳು ದೊಡ್ಡವು. ಅವುಗಳಿಗಿಂತಲೂ ಭೂಮಿಯು ದೊಡ್ಡದು. ಆದರೆ ಮಹಾತ್ಮರು ಪ್ರಳಯಕಾಲದಲ್ಲಿಯೂ ಚಂಚಲವಾಗುವುದಿಲ್ಲವಾದುದರಿಂದ ಇವೆಲ್ಲಕ್ಕಿಂತಲೂ ದೊಡ್ಡವರು.

**ಗುಣದೋಷೌ ಬುಧೋ ಗೃಹ್ಣನ್ನಿಂದುಕ್ಷ್ವೇಡಾವಿವೇಶ್ವರಃ ।**
**ಶಿರಸಾ ಶ್ಲಾಘತೇ ಪೂರ್ವಂ ಪರಂ ಕಂಠೇ ನಿಯಚ್ಛತಿ ॥ ೪೫**

—ಕುವಲಯಾನಂದ

ಈಶ್ವರನು ಚಂದ್ರ ಮತ್ತು ವಿಷಗಳನ್ನು ಗ್ರಹಿಸುವಂತೆ, ವಿದ್ವಾಂಸನು ಅನ್ಯರ ಗುಣದೋಷಗಳನ್ನು ಗ್ರಹಿಸುತ್ತಾನೆ. ಅವುಗಳಲ್ಲಿ ಮೊದಲನೆಯದನ್ನು ತಲೆಯಲ್ಲಾಡಿಸಿ ಅಭಿನಂದಿಸುತ್ತಾನೆ. ಎರಡನೆಯದನ್ನು ಕಂಠದಲ್ಲಿಯೇ ತಡೆಹಿಡಿಯುತ್ತಾನೆ.

**ಗುಣವತ್ತರಪಾತ್ರೇಣ ಛಾದ್ಯಂತೇ ಗುಣಿನಾಂ ಗುಣಾಃ ।**
**ರಾತ್ರೌ ದೀಪಶಿಖಾಕಾಂತಿರ್ನ ಭಾನಾವುದಿತೇ ಸತಿ ॥ ೪೬**

—ಪಂಚತಂತ್ರ, ಮಿತ್ರಭೇದ-೩೧೦

ಗುಣವಂತರ ಗುಣಗಳನ್ನು ಇನ್ನೂ ಅಧಿಕ ಗುಣಶಾಲಿಗಳ ನಡೆ ಮರೆಸುತ್ತದೆ. ದೀಪದ ಕುಡಿಯ ಬೆಳಕು ರಾತ್ರಿಯಲ್ಲಿರುವುವೇ ವಿನಾ ಸೂರ್ಯ ಹುಟ್ಟಿದಾಗ ಇರುವುದಿಲ್ಲ.

**ಗುಣವದ್ವಸ್ತುಸಂಸರ್ಗಾದ್ಯಾತಿ ಸ್ವಲ್ಪೋಽಪಿ ಗೌರವಂ ।**
**ಪುಷ್ಪಮಾಲಾನುಷಂಗೇಣ ಸೂತ್ರಂ ಶಿರಸಿ ಧಾರ್ಯತೇ ॥ ೪೭**

—ಚಂದ್ರಾಲೋಕ

ಗುಣವುಳ್ಳ ವಸ್ತುವಿನ ಸಂಗದಿಂದ ಅಲ್ಪನೂ ಸಹ ಗೌರವವನ್ನು ಪಡೆಯುತ್ತಾನೆ. ಹೂಮಾಲೆಯೊಡನೆ ಸೇರಿಕೊಂಡಿದ್ದರಿಂದ ದಾರವು ತಲೆಯಲ್ಲಿ ಧರಿಸಲ್ಪಡುತ್ತದೆ.

**ಗುಣಾನಾಂ ವಾ ವಿಶಾಲಾನಾಂ ಸತ್ಕಾರಾಣಾಂ ಚ ನಿತ್ಯಶಃ ।**
**ಕರ್ತಾರಃ ಸುಲಭಾ ಲೋಕೇ ವಿಜ್ಞಾತಾರಸ್ತು ದುರ್ಲಭಾಃ ॥ ೪೮**

—ಸ್ವಪ್ನವಾಸವದತ್ತ, ೪-೯

ಉದಾತ್ತವಾದ ಗುಣಗಳಿಂದ ಉತ್ತಮರಾದವರನ್ನು ಕಾಣುವುದು ಸುಲಭ. ಒಳ್ಳೆಯ ಸತ್ಕಾರಗಳನ್ನು ಮಾಡುವವರೂ ಈ ಲೋಕದಲ್ಲಿ ಸಿಗುತ್ತಾರೆ. ಆದರೆ ಗುಣಗಳನ್ನೂ ಸತ್ಕಾರಗಳನ್ನೂ ಅರಿತು ಅಭಿನಂದಿಸುವವರು, ಕೃತಜ್ಞತೆ ತೋರುವವರು ವಿರಳ.

**ಗುಣಾನಾಮಂತರಂ ಪ್ರಾಯಸ್ತಜ್ಞೋ ಜಾನಾತಿ ನೇತರಃ ।**
**ಮಾಲತೀಮಲ್ಲಿಕಾಮೋದಂ ಘ್ರಾಣಂ ವೇತ್ತಿ ನ ಲೋಚನಮ್ ॥ ೪೯**

—ದೃಷ್ಟಾಂತಕಲಿಕಾ, ೨೨

ಗುಣಗಳ ಭೇದವನ್ನು ಗುಣಜ್ಞನಾದ ಪಂಡಿತನು ಬಲ್ಲನೇ ಹೊರತು ಬೇರೆಯವನು ತಿಳಿಯಲಾರನು. ಜಾಜಿಹೂ ಮಲ್ಲಿಗೆಹೂಗಳ ಸುಗಂಧಭೇದವನ್ನು ಮೂಗು ಗೊತ್ತು ಮಾಡುತ್ತದೆ, ಕಣ್ಣಲ್ಲ.

**ಗುಣಾಧಿಕಾನ್ಮುದಂ ಲಿಪ್ಸೇದನುಕ್ರೋಶಂ ಗುಣಾಧಮಾತ್ ।**
**ಮೈತ್ರೀಂ ಸಮಾನಾದನ್ವಿಚ್ಛೇನ್ನ ತಾಪೈರಭಿಭೂಯತೇ ॥ ೫೦**

—ಭಾಗವತ, ೪-೮-೩೪

ಗುಣಶಾಲಿಯಿಂದ ಸಂತೋಷವನ್ನು ಗುಣಹೀನನಿಂದ ಕನಿಕರವನ್ನು, ಸಮಾನನಿಂದ ಸ್ನೇಹವನ್ನು ನಿರೀಕ್ಷಿಸಬೇಕು. ಆಗ ಕಷ್ಟಕ್ಕೆ ಸಿಕ್ಕಿಕೊಳ್ಳುವುದಿಲ್ಲ.

ಗುಣೈಃ ಪೂಜಾ ಭವೇತ್ ಪುಂಸಾಂ ನೈಕಸ್ಮಾಜ್ಜಾಯತೇ ಕುಲಾತ್ ।
ಚೂಡಾರತ್ನಂ ಶಶೀ ಶಂಭೋರ್ಯಾನಮುಚ್ಚೈಃಶ್ರವಾ ಹರೇಃ ॥೫೧
೭ ನೀಚಃ ಪರಕಾರ್ಯಂ ವೇತ್ತಿ ನ ಪ್ರಸಾಧಯಿತುಂ ।
ಪಾತಯಿತುಮಸ್ತಿ ಶಕ್ತಿರ್ವಾಯೋರ್ವೃಕ್ಷಂ ನ ಚೋನ್ನಮಿತುಮ್ ॥ ೫೨

—ಪಂಚತಂತ್ರ, ಮಿತ್ರಭೇದ-೩೯೪

ಮತ್ತೊಬ್ಬನ ಕೆಲಸವನ್ನು ಕೆಡಿಸುವುದಕ್ಕೆ ಮಾತ್ರ ನೀಚನಿಗೆ ಗೊತ್ತಾಗುತ್ತದೆಯೇ ವಿನಾ ಅದನ್ನು ಸಾಧಿಸುವುದಕ್ಕಲ್ಲ. ಗಾಳಿಗೆ ಮರವನ್ನುರುಳಿಸಲು ಶಕ್ತಿಯಿದೆ; ಆದರೆ ಎತ್ತಿ ನಿಲ್ಲಿಸುವುದಕ್ಕಲ್ಲ.

ಛಾದಯಿತ್ವಾತ್ಮನೋ ಭಾವಂ ಚರಂತಿ ಶಠಬುದ್ಧಯಃ ।
ಪ್ರಹರಂತಿ ಚ ರಂಧ್ರೇಷು ಸೋಽನರ್ಥಃ ಸುಮಹಾನ್ ಭವೇತ್ ॥ ೫೩

—ತ್ರಿಶತೀವ್ಯಾಖ್ಯಾ, ನೀತಿ ೩೩

ಕಪಟಬುದ್ಧಿಯ ಜನರು ತಮ್ಮ ಅಂತರಂಗವನ್ನು ಬಚ್ಚಿಟ್ಟು ವ್ಯವಹರಿಸುತ್ತಾರೆ. ಸಮಯ ಒದಗಿದಾಗ ವಿಘಾತವನ್ನೇ ತಂದೊಡ್ಡುತ್ತಾರೆ. ಅದು ದೊಡ್ಡ ಅನರ್ಥಕಾರಿ.

ಛಿನ್ನೋಽಪಿ ರೋಹತಿ ತರುಃ ಕ್ಷೀಣೋಽಪ್ಯುಪಚೀಯತೇ ಚಂದ್ರಃ ।
ಇತಿ ವಿಮೃಶಂತಃ ಸಂತಃ ಸಂತಪ್ಯಂತೇ ನ ಲೋಕೇಽಸ್ಮಿನ್ ॥ ೫೪

—ಸುಭಾಷಿತರತ್ನಭಾಂಡಾಗಾರ

ಕತ್ತರಿಸಿದರೂ ಮರವು ಮತ್ತೆ ಚಿಗುರುತ್ತದೆ. ಪೂರ್ತಿ ಕಾಣಿಸದೇ ಹೋದ ಮೇಲೂ ಚಂದ್ರನು ಮತ್ತೆ ಹೆಚ್ಚುತ್ತಾನೆ. ಹೀಗೆ ಏರುಪೇರುಗಳು ಸ್ವಾಭಾವಿಕವೆಂದು ತಿಳಿದು ಸಜ್ಜನರು ಎಂದೂ ದುಃಖಿಸುವುದಿಲ್ಲ.

ಜನನೀಜಠರವ್ಯಾಧಿರ್ಬಂಧೂನಾಮಾಧಿರಪಗುಣಃ ಪುರುಷಃ ।
ಏತತ್ಕೃತೋ ಧರಿತ್ರ್ಯಾ ಭಾರೋ ಹರಿಣಾಪ್ಯನಪನೇಯಃ ॥ ೫೫

—ಹರಿಹರಸುಭಾಷಿತ, ೩-೧೫

ಗುಣಹೀನನಾದ ಮನುಷ್ಯನು ತಾಯಿಯ ಗರ್ಭಕ್ಕೆ ಬಂದ ಒಂದು ವ್ಯಾಧಿ. ಬಂಧುಗಳಿಗೆ ಮನೋರೋಗ, ಅವನಿಂದಾಗುವ ಭೂಭಾರವನ್ನು ವಿಷ್ಣುವೂ ಹೋಗಲಾಡಿಸಲಾರ.

ಜಯಂತಿ ಜಿತಮತ್ಸರಾಃ ಪರಹಿತಾರ್ಥಮಭ್ಯುದ್ಯತಾಃ
ಪರಾಭ್ಯುದಯಸುಸ್ಥಿತಾಃ ಪರವಿಪತ್ತಿಖೇದಾಕುಲಾಃ ।
ಮಹಾಪುರುಷಸತ್ಕಥಾಶ್ರವಣಜಾತಕೌತೂಹಲಾಃ
ಸಮಸ್ತದುರಿತಾರ್ಣವಪ್ರಕಟಸೇತವಃ ಸಾಧವಃ ॥ ೫೬

—ಬುದ್ಧಚರಿತ

ಅಸೂಯೆಯನ್ನು ಗೆದ್ದು ಇತರರ ಸಹಾಯಕ್ಕಾಗಿ ನಡುಕಟ್ಟಿ, ಇತರರ ಏಳಿಗೆಯನ್ನು ಕಂಡು ಸಂತೋಷಪಡುವ, ಇತರರ ದುಃಖದಲ್ಲಿ ಭಾಗವಹಿಸುವ, ಮಹಾತ್ಮರ ಒಳ್ಳೆಯ ಜೀವನಘಟನೆಗಳನ್ನು ಕೇಳಬಯಸುವ, ಸತ್ಪುರುಷರು ಎಲ್ಲಾ ಪಾಪಗಳೆಂಬ ಸಮುದ್ರವನ್ನು ದಾಟಲು ಸೇತುವೆಯ ಹಾಗೆ ಇರುತ್ತಾರೆ.

**ಜಾಡ್ಯಂ ಧಿಯೋ ಹರತಿ ಸಿಂಚತಿ ವಾಚಿ ಸತ್ಯಂ**
**ಮಾನೋನ್ನತಿಂ ದಿಶತಿ ಪಾಪಮಹಾಕರೋತಿ ।**
**ಚೇತಃ ಪ್ರಸಾದಯತಿ ದಿಕ್ಷು ತನೋತಿ ಕೀರ್ತಿಂ**
**ಸತ್ಸಂಗತಿಃ ಕಥಯ ಕಿಂ ನ ಕರೋತಿ ಪುಂಸಾಮ್ ॥ ೫೭**

—ನೀತಿಶತಕ, ೨೧

ಸತ್ಪುರುಷರ ಸಹವಾಸವು ಬುದ್ಧಿಯ ಜಡತ್ವವನ್ನು ಹೋಗಲಾಡಿಸುತ್ತದೆ. ಮಾತಿನಲ್ಲಿ ಸತ್ಯವನ್ನು ಚಿಮುಕಿಸುತ್ತದೆ. ಗೌರವವನ್ನು ಹೆಚ್ಚಿಸುತ್ತದೆ. ಪಾಪವನ್ನು ದೂರ ಮಾಡುತ್ತದೆ. ಮನಸ್ಸನ್ನು ಪ್ರಸನ್ನಗೊಳಿಸುತ್ತದೆ. ಎಲ್ಲ ದಿಕ್ಕುಗಳಲ್ಲಿಯೂ ಕೀರ್ತಿಯನ್ನು ಹರಡುತ್ತದೆ. ಸತ್ಸಹವಾಸವು ಜನರಿಗೆ ಏನುತಾನೆ ಮಾಡುವುದಿಲ್ಲ? ಹೇಳು.

**ಜೀವಂತೋಽಪಿ ಮೃತಾಃ ಪಂಚ ವ್ಯಾಸೇನ ಪರಿಕೀರ್ತಿತಾಃ ।**
**ದರಿದ್ರೋ ವ್ಯಾಧಿತೋ ಮೂರ್ಖಃ ಪ್ರವಾಸೀ ನಿತ್ಯಸೇವಕಃ ॥ ೫೮**

—ಸುಭಾಷಿತರತ್ನಸಮುಚ್ಚಯ

ಬಡವ, ರೋಗಿ, ಮೂರ್ಖ, ಪ್ರವಾಸಿ, ನಿತ್ಯಸೇವಕ-ಈ ಐವರು ಬದುಕಿದ್ದರೂ ಸತ್ತವರೆಂದು ವ್ಯಾಸರು ಹೇಳಿದ್ದಾರೆ.

**ಜೀವನಗ್ರಹಣೇ ನಮ್ರಾಃ ಗೃಹಿತ್ವಾ ಪುನರುನ್ನತಾಃ ।**
**ಕಿಂ ಕನಿಷ್ಠಾಃ ಕಿಮು ಜ್ಯೇಷ್ಠಾಃ ಘಟೀಯಂತ್ರಸ್ಯ ದುರ್ಜನಾಃ ॥ ೫೯**

—ಕುವಲಯಾನಂದ

ದುರ್ಜನರು ಜೀವನವೃತ್ತಿಗೆ ಬರುವಾಗ ನಮ್ರರಾಗಿರುತ್ತಾರೆ. ಅದು ಕೈಗೂಡಿದ ಮೇಲೆ ಸೆಟೆದು ನಿಲ್ಲುತ್ತಾರೆ, ಯಾತಗಳಿದ್ದಂತೆ. ಯಾತಗಳೂ ಸಹ, (ಜೀವನಗ್ರಹಣೇ) ನೀರನ್ನು ಎತ್ತಿಕೊಳ್ಳುವಾಗ ನಮ್ರವಾಗಿ ತಗ್ಗಿ ಬರುತ್ತವೆ, ಆಮೇಲೆ ಮೇಲಕ್ಕೇರುತ್ತವೆ. ಆದ್ದರಿಂದ ದುರ್ಜನರು ಯಾತಗಳ ತಮ್ಮಂದಿರೋ ಅಥವಾ ಅಣ್ಣಂದಿರೋ!

**ತಕ್ಷಕಸ್ಯ ವಿಷಂ ದಂತೇ ಮಕ್ಷಿಕಾಯಾಶ್ಚ ಮಸ್ತಕೇ ।**
**ವೃಶ್ಚಿಕಸ್ಯ ವಿಷಂ ಪುಚ್ಛೇ ಸರ್ವಾಂಗೇ ದುರ್ಜನಸ್ಯ ತತ್ ॥ ೬೦**

—ಸಮಯೋಚಿತಪದ್ಯಮಾಲಿಕ

ತಕ್ಷಕನಿಗೆ ವಿಷವು ಹಲ್ಲಿನಲ್ಲಿರುತ್ತದೆ, ನೊಣಕ್ಕೆ ತಲೆಯಲ್ಲಿರುತ್ತದೆ, ಚೇಳಿಗೆ ಬಾಲದಲ್ಲಿರುತ್ತದೆ. ದುಷ್ಟನ ಸರ್ವಾಂಗಗಳಲ್ಲಿಯೂ ವಿಷವಿರುತ್ತದೆ.

**ತುಲ್ಯೈವ ರೂಪರಚನಾ ಗಣನಾಪಿ ಧಾತು-**
**ಮಧ್ಯೇ ಸಮೈವ ಸಮತಾ ಘಟತೇ ತಥಾಪಿ ।**
**ಹೇಮ್ನಾ ಸಮಂ ನ ದಹನೇ ಪ್ರವಿಶಾರಕೂಟ**
**ವ್ಯಕ್ತೀ ಭವಿಷ್ಯತಿ ಯತೋ ಭವತೋ ವಿಶೇಷಃ ॥** ೬೧

—ಅನ್ಯಾಪದೇಶಶತಕ-೭೮

ಎಲೈ ಹಿತ್ತಾಳೆಯೆ, ನಿನ್ನ ರೂಪವು ನೋಡಲು ಚಿನ್ನದಂತಿದೆ. ಲೋಹದ ಮಧ್ಯದಲ್ಲಿ ನಿನಗೂ ಗಣನೆಯುಂಟು. ಆದರೆ ಚಿನ್ನದ ಜೊತೆಗೆ ನೀನೂ ಸತ್ತ್ವಪರೀಕ್ಷೆಗಾಗಿ ಬೆಂಕಿಯಲ್ಲಿ ಬೀಳಬೇಡ. ಏಕೆಂದರೆ, ಬೆಂಕಿಯಲ್ಲಿ ನಿನ್ನ ಸ್ವರೂಪವಿಶೇಷವು ಗೊತ್ತಾಗಿಬಿಡುತ್ತದೆ!

**ತೃಣಾನಿ ಭೂಮಿರುದಕಂ ವಾಕ್ಚತುರ್ಥೀ ಚ ಸೂನೃತಾ ।**
**ಏತಾನ್ಯಪಿ ಸತಾಂ ಗೇಹೇ ನೋಚ್ಛಿದ್ಯಂತೇ ಕದಾಚನ ॥** ೬೨

—ಮಹಾಭಾರತ, ಉದ್ಯೋಗ. ೩೬-೩೪

ಸಜ್ಜನರ ಮನೆಗಳಲ್ಲಿ ಹುಲ್ಲು, ನೆಲ, ನೀರು, ಒಳ್ಳೆಯ ಮಾತು-ಇವು ನಾಲ್ಕೂ ಎಂದೂ ತಪ್ಪುವುದಿಲ್ಲ.

**ತೃಣಾನಿ ನೋನ್ಮೂಲಯತಿ ಪ್ರಭಂಜನೋ**
**ಮೃದೂನಿ ನೀಚೈಃ ಪ್ರಣತಾನಿ ಸರ್ವತಃ ।**
**ಸಮುಚ್ಛ್ರಿತಾನೇವ ತರೂನ್ ಪ್ರಬಾಧತೇ**
**ಮಹಾನ್ ಮಹತ್ಯೇವ ಕರೋತಿ ವಿಕ್ರಮಮ್ ॥** ೬೩

—ಹಿತೋಪದೇಶ, ಸುಹೃದ್ಭೇದ-೭೮

ಬಹಳ ಮೃದುವಾಗಿದ್ದು ಎಲ್ಲೆಲ್ಲಿಯೂ ಕೆಳಕ್ಕೆ ತಲೆಬಾಗಿರುವ ಹುಲ್ಲುಗಳನ್ನು ಬಿರುಗಾಳಿ ಕಿತ್ತೊಗೆಯುವುದಿಲ್ಲ. ಆದರೆ ಅದು ಉನ್ನತವಾಗಿ ಬೆಳೆದಿರುವ ಮರಗಳನ್ನೇ ಬಾಧಿಸುತ್ತದೆ. ದೊಡ್ಡವರು ದೊಡ್ಡವರಲ್ಲಿಯೇ ತಮ್ಮ ಪರಾಕ್ರಮವನ್ನು ತೋರುತ್ತಾರೆ.

**ತೃಷ್ಣಾಂ ಛಿಂಧಿ ಭಜ ಕ್ಷಮಾಂ ಜಹಿ ಮದಂ ಪಾಪೇ ರತಿಂ ಮಾ ಕೃಥಾಃ**
**ಸತ್ಯಂ ಬ್ರೂಹ್ಯನುಯಾಹಿ ಸಾಧುಪದವೀಂ ಸೇವಸ್ವ ವಿದ್ವಜ್ಜನಾನ್ ।**
**ಮಾನ್ಯಾನ್ಮಾನಯ ವಿದ್ವಿಷೋಽಪ್ಯನುನಯ ಪ್ರಖ್ಯಾಪಯ ಸ್ವಾನ್ ಗುಣಾನ್**

**ಕೀರ್ತಿಂ ಪಾಲಯ ದುಃಖಿತೇ ಕುರು ದಯಾಮೇತತ್ಸತಾಂ ಲಕ್ಷಣಮ್ ॥ ೬೪**

—ನೀತಿಶತಕ-೭೫

ಆಶೆಯನ್ನು ಕತ್ತರಿಸು, ಕ್ಷಮೆಯನ್ನು ಹೊಂದು, ಮದವನ್ನು ಕೊಲ್ಲು, ಪಾಪದಲ್ಲಿ ಮನಸ್ಸಿಡಬೇಡ, ಸತ್ಯವನ್ನು ಹೇಳು, ಸಾಧುಮಾರ್ಗವನ್ನನುಸರಿಸು, ವಿದ್ವಾಂಸರನ್ನು ಸೇವಿಸು, ಮಾನ್ಯರನ್ನು ಗೌರವಿಸು, ಶತ್ರುಗಳನ್ನು ಸಮಾಧಾನಗೊಳಿಸು, ನಿನ್ನ ಗುಣಗಳನ್ನು ಪ್ರಕಟಿಸು, ಕೀರ್ತಿಯನ್ನು ಕಾಪಾಡಿಕೋ, ನೊಂದವರಿಗೆ ದಯೆತೋರಿಸು. ಇದೇ ಸತ್ಪುರುಷರ ಲಕ್ಷಣ.

**ದೀನಗೋಚರದಯಾಪರಿಹೀನಂ**
**ಯಸ್ಯ ಮಾನಸಮತೀವ ಕಠೋರಂ ।**
**ತೇನ ಭೂಮಿರತಿಭಾರವತೀಯಂ**
**ನ ದ್ರುಮೈರ್ನ ಗಿರಿಭಿರ್ನ ಸಮುದ್ರೈಃ ॥ ೬೫**

—ಆಶ್ಚರ್ಯಚೂಡಾಮಣಿ ವ್ಯಾಖ್ಯಾ

ದೀನರ ವಿಷಯದಲ್ಲಿ ದಯೆಯಿಲ್ಲದೆ ಯಾರ ಮನಸ್ಸು ಕಠೋರವಾಗಿರುತ್ತದೆಯೋ, ಅವನಿಂದ ಈ ಭೂಮಿಗೆ ಭಾರವಾಗಿದೆ; ಮರಗಳಿಂದಲ್ಲ, ಬೆಟ್ಟಗಳಿಂದಲ್ಲ, ಸಮುದ್ರಗಳಿಂದಲೂ ಅಲ್ಲ.

**ದೀನಾನಾಂ ಕಲ್ಪವೃಕ್ಷಃ ಸ್ವಗುಣಫಲನತಃ ಸಜ್ಜನಾನಾಂ ಕುಟುಂಬೀ**
**ಆದರ್ಶಃ ಶಿಕ್ಷಿತಾನಾಂ ಸುಚರಿತನಿಕಷಃ ಶೀಲವೇಲಾಸಮುದ್ರಃ ।**
**ಸತ್ಕರ್ತಾ ನಾವಮಂತಾ ಪುರುಷಗುಣನಿಧಿರ್ದಕ್ಷಿಣೋದಾರಸತ್ವಃ**
**ಹ್ಯೇಕಃ ಶ್ಲಾಘ್ಯಃ ಸ ಜೀವತ್ಯಧಿಕಗುಣತಯಾ ಚೋಚ್ಛ್ವಸಂತೀವ ಚಾನ್ಯೇ॥೬೬**

—ಮೃಚ್ಛಕಟಿಕ, ೧-೪೮

ಬಡವರಿಗೆ ಕಲ್ಪವೃಕ್ಷದಂತೆ ಸಹಾಯಮಾಡುವವನು, ತನ್ನ ಒಳ್ಳೆಯ ಗುಣಗಳೆಂಬ ಹಣ್ಣಿನ ಭಾರದಿಂದ ಬಾಗಿದವನು, ಸಜ್ಜನದಿಂದ ಕುಟುಂಬವುಳ್ಳವನು, ವಿದ್ಯಾವಂತರಿಗೆ ಮಾದರಿ, ಒಳ್ಳೆಯ ನಡತೆಗೆ ಒರೆಗಲ್ಲು, ಒಳ್ಳೆಯತನಕ್ಕೆ ಸಮುದ್ರ, ಎಲ್ಲರನ್ನೂ ಸತ್ಕರಿಸುವವನು, ಯಾರನ್ನೂ ಅಪಮಾನಗೊಳಿಸದವನು, ಒಳ್ಳೆಯ ಪುರುಷನಲ್ಲಿರಬೇಕಾದ ಎಲ್ಲ ಗುಣಗಳನ್ನೂ ಹೊಂದಿದವನು, ದಾಕ್ಷಿಣ್ಯ ಔದಾರ್ಯದಿಂದ ಕೂಡಿದ ಮನುಷ್ಯನೊಬ್ಬನು ಮಾತ್ರ ನಿಜವಾದ ಬದುಕನ್ನು ಬದುಕುತ್ತಾನೆ; ಉಳಿದವರು ಕೇವಲ ಉಸಿರಾಡುತ್ತಾರೆ.

**ದುರ್ಜನಂ ಪ್ರಥಮಂ ವಂದೇ ಸಜ್ಜನಂ ತದನಂತರಂ ।**
**ಮುಖಪ್ರಕ್ಷಾಲನಾತ್ ಪೂರ್ವಂ ಗುದಪ್ರಕ್ಷಾಲನಂ ಯಥಾ ॥ ೬೭**

—ಸಮಯೋಚಿತಪದ್ಯಮಾಲಿಕಾ

ದುಷ್ಟನನ್ನು ಮೊದಲು ವಂದಿಸುತ್ತೇನೆ, ಆಮೇಲೆ ಸತ್ಪುರುಷರನ್ನು ; ಮುಖ ತೊಳೆಯುವುದಕ್ಕೆ ಮೊದಲು ಗುದವನ್ನು ತೊಳೆದಂತೆ.

**ದುರ್ಜನಃ ಪರಿಹರ್ತವ್ಯೋ ವಿದ್ಯಯಾಲಂಕೃತೋಽಪಿ ಸನ್ ।**
**ಮಣಿನಾ ಭೂಷಿತಃ ಸರ್ಪಃ ಕಿಮಸೌ ನ ಭಯಂಕರಃ ॥ ೬೮**

—ನೀತಿಶತಕ-೫೧

ವಿದ್ಯೆಯಿಂದ ಅಲಂಕರಿಸಲ್ಪಟ್ಟಿದ್ದರೂ ದುರ್ಜನನಾದವನನ್ನು ಬಿಟ್ಟುಬಿಡಬೇಕು. ರತ್ನದಿಂದ ಅಲಂಕೃತವಾದ ಮಾತ್ರಕ್ಕೆ ಹಾವು ಭಯಂಕರವಲ್ಲವೇ?

**ದುರ್ಜನಸ್ಯ ಶ್ವಪುಚ್ಛಸ್ಯ ವ್ಯಾಲಸ್ಯೋಷ್ಟ್ರಗಲಸ್ಯ ಚ ।**
**ನ ಮಂತ್ರೈರೌಷಧೈರ್ವಾಪಿ ಋಜುತಾ ಜಾತು ಜಾಯತೇ ॥ ೬೯**

—ರಾಮಾಯಣಮಂಜರೀ, ಯುದ್ಧ, ೩೬೩

ದುರ್ಜನ, ನಾಯಿಬಾಲ, ಹಾವು, ಒಂಟೆಯ ಕುತ್ತಿಗೆ - ಇವನ್ನು ಮಂತ್ರಗಳಿಂದಾಗಲಿ, ಔಷಧಗಳಿಂದಾಗಲಿ, ನೆಟ್ಟಗೆ ಮಾಡಲು ಎಂದಿಗೂ ಸಾಧ್ಯವಿಲ್ಲ!

**ದುರ್ಜನೈರುಚ್ಯಮಾನಾನಿ ಸಸ್ಮಿತಾನಿ ಪ್ರಿಯಾಣ್ಯಪಿ ।**
**ಅಕಾಲಕುಸುಮಾನೀವ ಭಯಂ ಸಂಜನಯಂತಿ ಮೇ । ೭೦**

—ಹಿತೋಪದೇಶ, ವಿಗ್ರಹ-೨೩

ಕೆಟ್ಟವರು ಹೇಳುವ ಮಾತುಗಳು ನಗುವಿನಿಂದ ಕೂಡಿ ಪ್ರಿಯವಾಗಿದ್ದರೂ ಕಾಲವಲ್ಲದ ಕಾಲದಲ್ಲಿ ಅರಳಿದ ಹೂಗಳಂತೆ ನನಗೆ ಭಯವನ್ನುಂಟುಮಾಡುತ್ತವೆ.

**ದೂರೀಕರೋತಿ ಕುಮತಿಂ ವಿಮಲೀಕರೋತಿ**
**ಚೇತಶ್ಚಿರಂತನಮಘಂ ಚುಲುಕೀಕರೋತಿ ।**
**ಭೂತೇಷು ಕಿಂಚ ಕರುಣಾಂ ಬಹುಲೀಕರೋತಿ**
**ಸಂಗಃ ಸತಾಂ ಕಿಮು ನ ಮಂಗಲಮಾತನೋತಿ ॥ ೭೧**

—ರಸಗಂಗಾಧರ

ಸತ್ಸಂಗವು ಬುದ್ಧಿಯ ಕಾಲುಷ್ಯವನ್ನು ಹೋಗಲಾಡಿಸುತ್ತದೆ. ಚಿತ್ತವನ್ನು ಶುದ್ಧಿಗೊಳಿಸುತ್ತದೆ, ದೀರ್ಘಕಾಲದ ಪಾಪವನ್ನು ನಾಶಗೊಳಿಸುತ್ತದೆ, ಅಲ್ಲದೆ ಪ್ರಾಣಿಗಳ ವಿಷಯದಲ್ಲಿ ಕಾರುಣ್ಯವನ್ನು ಹೆಚ್ಚಿಸುತ್ತದೆ, ಸತ್ಸಂಗವು ಯಾವ ಮಂಗಳವನ್ನು ತಾನೆ ಮಾಡದಿರುವುದು?

**ಧರ್ಮಃ ಪ್ರವ್ರಜಿತಸ್ತಪಃ ಪ್ರಚಲಿತಂ ಸತ್ಯಂ ಚ ದೂರೇ ಗತಂ**

ಪೃಥ್ವೀ ಮಂದಫಲಾ ನರಾಃ ಕಪಟಿನಶ್ಚಿತ್ತಂ ಚ ಶಾಠ್ಯೋರ್ಜಿತಂ ।
ರಾಜಾನೋಽರ್ಥಪರಾ ನ ರಕ್ಷಣಪರಾಃ ಪುತ್ರಾಃ ಪಿತುರ್ದ್ವೇಷಿಣಃ
ಸಾಧುಃ ಸೀದತಿ ದುರ್ಜನಃ ಪ್ರಭವತಿ ಪ್ರಾಪ್ತೇ ಕಲೌ ದುರ್ಯುಗೇ ॥೭೨

—ಸುಭಾಷಿತರತ್ನಭಾಂಡಾಗಾರ

ಕೆಟ್ಟದಾದ ಕಲಿಯುಗವು ಬರಲು ಧರ್ಮವು ಹಾಳಾಯಿತು. ತಪಸ್ಸು ಹೊರಟು ಹೋಯಿತು, ಸತ್ಯವು ಮೂಲೆ ಸೇರಿತು. ಭೂಮಿಯು ಫಲವನ್ನು ಸರಿಯಾಗಿ ಕೊಡುತ್ತಿಲ್ಲ. ಜನರು ಕಪಟಿಗಳು. ಮನಸ್ಸು ಮೋಸವನ್ನೇ ಆಲೋಚಿಸುತ್ತಿದೆ, ಅರಸರು ಹಣದಾಸೆ ಯುಳ್ಳವರೇ ಹೊರತು ಕಾಪಾಡುವುದಿಲ್ಲ, ಮಕ್ಕಳು ತಂದೆಯನ್ನು ಅಲಕ್ಷ್ಯ ಮಾಡುತ್ತಾರೆ, ಒಳ್ಳೆಯವರು ಹಾಳಾಗಿ ಕೆಟ್ಟವರು ತಲೆಯೆತ್ತುತ್ತಾರೆ.

ಧನಿನೋಽಪಿ ನಿರುನ್ಮಾದಾಃ ಯುವಾನೋಽಪಿ ನ ಚಂಚಲಾಃ ।
ಪ್ರಭವೋಽಪ್ಯಪ್ರಮತ್ತಾಸ್ತೇ ಮಹಾಮಹಿಮಶಾಲಿನಃ ॥ ೭೩

—ಸುಭಾಷಿತರತ್ನಭಾಂಡಾಗಾರ

ಸತ್ಪುರುಷರು ಹೆಚ್ಚು ಮಹಿಮೆಯುಳ್ಳವರು. ಶ್ರೀಮಂತರಾಗಿದ್ದರೂ ಅವರಿಗೆ ಮದವಿಲ್ಲ, ತಾರುಣ್ಯದಲ್ಲಿಯೂ ಅವರು ಚಪಲರಲ್ಲ. ಅಧಿಕಾರಿಗಳಾಗಿದ್ದರೂ ಎಚ್ಚರ ತಪ್ಪುವುದಿಲ್ಲ.

ಧಿಕ್ ಧಿಕ್ ಸಜ್ಜನಮೈತ್ರೀ ದುರ್ಜನಸಂಸರ್ಗ ಏವ ನೋ ಭವತು ।
ಸಜ್ಜನವಿಯೋಗಕಾಲೇ ಭವಂತಿ ತೀವ್ರಾಣಿ ದುಃಖಾನಿ ॥ ೭೪

—ಸುಭಾಷಿತಸುಧಾನಿಧಿ

ಸಜ್ಜನರ ಸ್ನೇಹಕ್ಕೆ ಧಿಕ್ಕಾರ! ಧಿಕ್ಕಾರ! ನಮಗೆ ದುರ್ಜನರ ಸಹವಾಸವೇ ಆಗಲಿ. ಏಕೆಂದರೆ, ಸಜ್ಜನರ ಅಗಲಿಕೆಯ ಸಮಯದಲ್ಲಿ ಬಹಳ ತೀವ್ರವಾದ ದುಃಖವುಂಟಾಗುತ್ತದೆ.

ನ ಕುರ್ಯಾತ್ ಕರ್ಹಿಚಿತ್ಸಂಗಂ ತಮಸ್ತೀವ್ರಂ ತಿತೀರಿಷುಃ ।
ಧರ್ಮಾರ್ಥಕಾಮಮೋಕ್ಷಾಣಾಂ ಯದತ್ಯಂತವಿಘಾತಕಮ್ ॥ ೭೫

—ಭಾಗವತ, ೪-೨೨-೩೪

ದಟ್ಟವಾದ ಕತ್ತಲೆಯನ್ನು (ಅಜ್ಞಾನವನ್ನು) ದಾಟಲಿಚ್ಛಿಸುವವನು ಯಾವ ವಸ್ತುವಿನಲ್ಲಿಯೂ ವ್ಯಾಮೋಹವನ್ನಿಡಬಾರದು. ಏಕೆಂದರೆ, ವ್ಯಾಮೋಹವೇ ಮಾನವನ ಪುರುಷಾರ್ಥಗಳಾದ ಧರ್ಮ, ಅರ್ಥ, ಕಾಮ, ಮೋಕ್ಷಗಳನ್ನು ನಾಶಮಾಡುತ್ತದೆ.

ನನ್ವಾಶ್ರಯಸ್ಥಿತಿರಿಯಂ ತವ ಕಾಲಕೂಟ
ಕೇನೋತ್ತರೋತ್ತರವಿಶಿಷ್ಟಪದೋಪದಿಷ್ಟಾ ।
ಪ್ರಾಗರ್ಣವಸ್ಯ ಹೃದಯೇ ವೃಷಲಕ್ಷ್ಮಣೋಽಥ

**ಕಂಠೇಽಧುನಾ ವಸಸಿ ವಾಚಿ ಪುನಃ ಖಲಾನಾಮ್ ॥ ೭೬**

—ಭಲ್ಲಟಶತಕ-೫

ಎಲೈ ಕಾಲಕೂಟವಿಷವೇ! ನೀನು ಮೆಟ್ಟಿಲುಮೆಟ್ಟಿಲಾಗಿ ಹೆಚ್ಚು ಉತ್ತಮವಾದ ನೆಲೆಯನ್ನಾರಿಸಿಕೊಂಡಿದ್ದೀಯೆ! ನಿನಗೆ ಇದನ್ನು ಹೇಳಿಕೊಟ್ಟವರಾರು? ಮೊದಲು ನೀನು ಸಮುದ್ರದ ನಡುವೆ ಇದ್ದೆ. ಆಮೇಲೆ ಈಶ್ವರನ ಕಂಠವನ್ನು ಸೇರಿದೆ. ಈಗ ದುಷ್ಟರ ಮಾತಿನಲ್ಲಿರುವೆ!

**ನಮ್ರತ್ವೇನೋನ್ನಮಂತಃ ಪರಗುಣಕಥನೈಃ**
**ಸ್ವಾನ್ ಗುಣಾನ್ ಖ್ಯಾಪಯಂತಃ**
**ಸ್ವಾರ್ಥಾನ್ ಸಂಪಾದಯಂತೋ ವಿತತಪೃಥುತರಾ-**
**ರಂಭಯತ್ನಾಃ ಪರಾರ್ಥೇ ।**
**ಕ್ಷಾಂತ್ಯೈವಾಕ್ಷೇಪರೂಕ್ಷಾಕ್ಷರಮುಖರಮುಖಾನ್**
**ದುರ್ಮುಖಾನ್ ದೂಷಯಂತಃ**
**ಸಂತಃ ಸಾಶ್ಚರ್ಯಚರ್ಯಾ ಜಗತಿ ಬಹುಮತಾಃ**
**ಕಸ್ಯ ನಾಭ್ಯರ್ಚನೀಯಾಃ ॥ ೭೭**

—ನೀತಿಶತಕ-೬೮

ನಮ್ರತೆಯಿಂದ ಉನ್ನತಿಹೊಂದುತ್ತಾ, ಪರರ ಗುಣಗಳ ವರ್ಣನೆಗಳಿಂದ ತಮ್ಮ ಗುಣಗಳನ್ನು ಪ್ರಕಾಶಪಡಿಸುತ್ತಾ, ಪರರಿಗಾಗಿ ವಿಶೇಷವಾಗಿ ಪ್ರಯತ್ನಮಾಡುವುದರಿಂದಲೇ ಸ್ವಪ್ರಯೋಜನಗಳನ್ನು ಪಡೆದು, ಆಕ್ಷೇಪಣೆಗಳಿಂದ ಕ್ರೂರವಾದ ಮಾತುಗಳನ್ನಾಡುವ ಕೆಟ್ಟಬಾಯಿಯ ಜನರನ್ನು ಕ್ಷಮೆಯಿಂದಲೇ ದೂಷಿಸುತ್ತಾ, ಈ ರೀತಿ ಆಶ್ಚರ್ಯವನ್ನುಂಟು ಮಾಡುವ ಚರ್ಯೆಯುಳ್ಳ ಸತ್ಪುರುಷರು ಈ ಲೋಕದಲ್ಲಿ ಯಾರಿಗೆ ತಾನೇ ಪೂಜ್ಯರಲ್ಲ?

**ನ ವ್ಯಾಪ್ತಿರೇಷಾ ಗುಣಿನೋ ಗುಣವಾನ್ ಜಾಯತೇ ಧ್ರುವಂ ।**
**ಚಂದನೋಽನಲಸಂದಗ್ಧೋ ನ ಭಸ್ಮ ಸುರಭಿ ಕ್ವಚಿತ್ ॥ ೭೮**

—ದೃಷ್ಟಾಂತಕಲಿಕಾ-೪೧

ಗುಣಶಾಲಿಯಿಂದ ಗುಣಶಾಲಿಯೇ ಹುಟ್ಟುವನೆಂಬ ನಿಯಮವೇನೂ ಇಲ್ಲ. ದಗ್ಧವಾದ ಶ್ರೀಗಂಧದಿಂದ ಹುಟ್ಟುವ ಬೂದಿ ಸುಗಂಧಿಯಾಗಿರುವುದಿಲ್ಲ.

**ನಾಗ್ನಿರ್ನಾನ್ಯಾನಿ ಶಸ್ತ್ರಾಣಿ ನ ನಃ ಪಾಶಾ ಭಯಾವಹಾಃ ।**
**ಘೋರಾಃ ಸ್ವಾರ್ಥಪ್ರಯುಕ್ತಾಸ್ತು ಜ್ಞಾತಯೋ ನೋ ಭಯಾವಹಾಃ॥೭೯**

—ರಾಮಾಯಣ, ಯುದ್ಧ ೧೬-೭

ನಮಗೆ ಬೆಂಕಿಯಿಂದಾಗಲಿ ಆಯುಧಗಳಿಂದಾಗಲಿ ಭಯವಿಲ್ಲ. ಈ ಹಗ್ಗಗಳಿಗೂ-

ಬಲೆಗಳಿಗೂ ನಾವು ಹೆದರುವುದಿಲ್ಲ. ಕ್ರೂರರೂ ಸ್ವಾರ್ಥಿಗಳೂ ಆದ ಈ ದಾಯಾದಿ ಗಳಿದ್ದಾರಲ್ಲ- ಪಳಗಿಸಿದ ಆನೆಗಳು, ಅವುಗಳಿಗೆ ನಾವು ಹೆದರಬೇಕಾಗಿದೆ! (ಕಾಡಾನೆಗಳು ಹೇಳಿಕೊಳ್ಳುವ ಮಾತು).

**ನಾಲೋಕಃ ಕ್ರಿಯತೇ ಸೂರ್ಯೇ ಭೂಃ ಪ್ರತೀಪಂ ನ ಧಾರ್ಯತೇ ।**
**ನಹಿ ಪ್ರತ್ಯುಪಕಾರಾಣಾಮಪೇಕ್ಷಾ ಸತ್ಸು ವಿದ್ಯತೇ ॥ ೮೦**

—ಸುಭಾಷಿತರತ್ನ ಭಾಂಡಾಗಾರ

ಸೂರ್ಯನು ಬೆಳಕನ್ನು ಕೊಡುತ್ತಾನೆ. ಅವನನ್ನು ತೋರಿಸಲು ಬೆಳಕು ಬೇಡ. ಭೂಮಿಯು ಎಲ್ಲರನ್ನೂ ಧರಿಸುತ್ತದೆ. ಅದನ್ನು ಯಾರೂ ಹೊತ್ತಿಲ್ಲ. ಹಾಗೆಯೇ ಸತ್ಪುರುಷರು ಪ್ರತ್ಯುಪಕಾರ ಬಯಸುವುದಿಲ್ಲ.

**ನಿಂದಂತು ನೀತಿನಿಪುಣಾ ಯದಿ ವಾ ಸ್ತುವಂತು**
**ಲಕ್ಷ್ಮೀಃ ಸಮಾವಿಶತು ಗಚ್ಛತು ವಾ ಯಥೇಷ್ಟಮ್ ।**
**ಅದ್ಯೈವ ವಾ ಮರಣಮಸ್ತು ಯುಗಾಂತರೇ ವಾ**
**ನ್ಯಾಯ್ಯಾತ್ಪಥಃ ಪ್ರವಿಚಲಂತಿ ಪದಂ ನ ಧೀರಾಃ ॥ ೮೧**

—ನೀತಿಶತಕ-೮೧

ನೀತಿನಿಪುಣರು ನಿಂದಿಸಲಿ ಹೊಗಳಲಿ; ಸಂಪತ್ತು ಬರಲಿ ಅಥವಾ ಹೊರಟು ಹೋಗಲಿ, ಸಾವು ಈಗಲೇ ಬರಲಿ ಅಥವಾ ಕಾಲಾಂತರದಲ್ಲಾಗಲಿ ಉಂಟಾಗಲಿ ; ಧೀರರು ನ್ಯಾಯಮಾರ್ಗವನ್ನು ಬಿಟ್ಟು ಸ್ವಲ್ಪವೂ ಕದಲುವುದಿಲ್ಲ.

**ನಿಷ್ಣಾತೋಽಪಿ ಚ ವೇದಾಂತೇ ಸಾಧುತ್ವಂ ನೈತಿ ದುರ್ಜನಃ ।**
**ಚಿರಂ ಜಲನಿಧೌ ಮಗ್ನಃ ಮೈನಾಕ ಇವ ಮಾರ್ದವಮ್ ॥ ೮೨**

—ಭಾಮಿನೀವಿಲಾಸ, ೧-೮೨

ಎಷ್ಟೇ ವೇದಾಂತಶಾಸ್ತ್ರದಲ್ಲಿ ನಿಪುಣನಾಗಿದ್ದರೂ ಕೆಟ್ಟ ಸ್ವಭಾವವುಳ್ಳವನು ಒಳ್ಳೆಯವನಾಗುವುದಿಲ್ಲ. ಬಹಳ ಕಾಲ ಸಮುದ್ರದಲ್ಲಿ ಮುಳುಗಿದ್ದರೂ ಮೈನಾಕಪರ್ವತ ಮೆತ್ತಗಾಗಿಲ್ಲ.

**ನೂನಂ ದುಗ್ಧಾಬ್ಧಿಮಂಥೋತ್ಥಾವಿಮೌ ಸುಜನದುರ್ಜನೌ ।**
**ಕಿಂತ್ವಿಂದೋಃ ಸೋದರಃ ಪೂರ್ವಃ ಕಾಲಕೂಟಸ್ಯ ಚೇತರಃ ॥ ೮೩**

—ಸುಭಾಷಿತರತ್ನಭಾಂಡಾಗಾರ

ಒಳ್ಳೆಯವರು, ಕೆಟ್ಟವರು ಇವರಿಬ್ಬರೂ ಕ್ಷೀರಸಮುದ್ರವನ್ನು ಕಡೆಯುವಾಗ ಹುಟ್ಟಿದವರೇ ಹೌದು. ಆದರೆ ಸಜ್ಜನರು ಚಂದ್ರನ ಸೋದರರು. ಕೆಟ್ಟವರು ಕಾಲಕೂಟ ವಿಷಕ್ಕೆ ಸೋದರರು !

**ಪರಚ್ಛಿದ್ರೇಷು ಹೃದಯಂ ಪರವಾರ್ತಾಸು ಚ ಶ್ರವಃ ।**
**ಪರಮರ್ಮಣಿ ವಾಚಂ ಚ ಖಲಾನಾಮಸೃಜದ್ವಿಧಿಃ ॥ ೮೪**

—ಕಲಿವಿಡಂಬನ, ೯೮

ಇನ್ನೊಬ್ಬರ ದೋಷವನ್ನು ಹುಡುಕುವುರಲ್ಲಿ ಮನಸ್ಸು, ಇನ್ನೊಬ್ಬರ ಸುದ್ದಿಯನ್ನು ಕೇಳುವುದರಲ್ಲಿ ಕಿವಿ, ಇನ್ನೊಬ್ಬರಿಗೆ ಮರ್ಮಭೇದಕವಾಗುವ ಮಾತು - ಈ ಮೂರನ್ನು ದುರ್ಜನರಿಗಾಗಿ ಬ್ರಹ್ಮನು ಸೃಷ್ಟಿಸಿದ್ದಾನೆ.

**ಪರಪರಿತಾಪನಕುತುಕೀ ಗಣಯತಿ ನಾತ್ಮೀಯಮಪಿ ತಾಪಂ ।**
**ಪರಹತಿಹೇತೋಃ ಪಿಶುನಃ ಸಂದಂಶ ಇವ ಸ್ವಪೀಡನಂ ಸಹತೇ ॥ ೮೫**

—ಹರಿಹರಸುಭಾಷಿತ, ೩-೧೮

ಇನ್ನೊಬ್ಬರಿಗೆ ಪೀಡೆ ಕೊಡತಕ್ಕ ಸ್ವಭಾವದವನು ತನಗಾಗುವ ತೊಂದರೆಯನ್ನು ಎಣಿಸುವುದಿಲ್ಲ. ಇನ್ನೊಬ್ಬರಿಗೆ ಹಿಂಸೆಯಾಗಲೆಂದಿರುವ ದುಷ್ಟನು, ಇಕ್ಕಳದಂತೆ ತನಗಾಗುವ ಹಿಂಸೆಯನ್ನು ಸಹಿಸಿಕೊಳ್ಳುತ್ತಾನೆ.

**ಪರವಿತ್ತವಿಮುಖಮಂತಃ ಪರದಾರನಿರೀಕ್ಷಣಾಕ್ಷಮಂ ಚಕ್ಷುಃ ।**
**ಹರಿಪರಿಚಿತಸ್ಯ ಪುಂಸಃ ಪರದೂಷಣದೂರವಾಸಿನೀ ರಸನಾ ॥ ೮೬**

—ಹರಿಹರಸುಭಾಷಿತ, ೩-೩೭

ಹರಿಭಕ್ತನ ಮನಸ್ಸು ಪರರ ಸ್ವತ್ತನ್ನು ಆಶಿಸುವುದಿಲ್ಲ. ಕಣ್ಣು ಪರಸ್ತ್ರೀಯರನ್ನು ನೋಡಲು ಸಮರ್ಥವಾಗಿರುವುದಿಲ್ಲ. ನಾಲಗೆ ಪರನಿಂದೆಯಿಂದ ದೂರವಾಗಿರುತ್ತದೆ.

**ಪರವಿತ್ತಜಿಹೀರ್ಷಯಾ ಪ್ರವೃತ್ತಃ ಪಿಶುನಸ್ತು ಸ್ವಯಮೇವ ನಾಶಮೇತಿ ।**
**ಸುಲಭಃ ಶಲಭಸ್ಯ ಕಿಂ ನ ದಾಹಃ ಪೃಥುದೀಪಗ್ರಸನಾಯ ಜೃಂಭಿತಸ್ಯ ॥೮೭**

—ವಿಶ್ವಗುಣಾದರ್ಶ, ४೧೦

ಇತರರ ಸ್ವತ್ತನ್ನು ಅಪಹರಿಸುವ ಇಚ್ಛೆಯುಳ್ಳ ಚಾಡಿಕೋರನು ತಾನಾಗಿಯೆ ಹಾಳಾಗುತ್ತಾನೆ. ದೊಡ್ಡದೀಪವನ್ನು ನುಂಗಲು ಹೊರಟ ಪತಂಗದ ಹುಳು ಸುಟ್ಟು ಹೋಗದೆ ಇದ್ದೀತೆ?

**ಪರೀಕ್ಷ್ಯ ದುರ್ಜನಾನ್ ರಾಜಾ ಸ್ವರಾಷ್ಟ್ರಾತ್ ವಿಪ್ರವಾಸಯೇತ್ ।**
**ಕ್ಷೋಭಯಿಷ್ಯಂತಿ ತೇ ರಾಷ್ಟ್ರಂ ಸನೃಪಂ ಸಮವಸ್ಥಿತಾಃ । ೮೮**

—ಸುಭಾಷಿತಸುಧಾನಿಧಿ

ರಾಜನು ಕೆಟ್ಟವರನ್ನು ಪರೀಕ್ಷಿಸಿ ತನ್ನ ದೇಶದಿಂದ ಹೊರದೂಡಬೇಕು. ಹಾಗಿಲ್ಲದಿದ್ದರೆ ಅಲ್ಲಿಯೇ ಚೆನ್ನಾಗಿ ನೆಲಸಿದ ಅವರು ರಾಜನನ್ನೂ ರಾಷ್ಟ್ರವನ್ನೂ ಕ್ಷೋಭೆಗೊಳಪಡಿಸುತ್ತಾರೆ.

**ಪರೋಕ್ಷೇ ಕಾರ್ಯಹಂತಾರಂ ಪ್ರತ್ಯಕ್ಷೇ ಪ್ರಿಯವಾದಿನಂ ।**
**ವರ್ಜಯೇತ್ತಾದೃಶಂ ಮಿತ್ರಂ ವಿಷಕುಂಭಂ ಪಯೋಮುಖಮ್ ॥ ೮೯**
—ಪ್ರಬಂಧಚಿಂತಾಮಣಿ

ಎದುರಿಗೆ ಒಳ್ಳೆಯ ಮಾತನ್ನಾಡುತ್ತಾ, ಮರೆಯಲ್ಲಿ ಕೆಲಸ ಕೆಡಿಸುವ ಮಿತ್ರನು ಮೇಲೆ ಹಾಲಿರುವ ಒಳಗೆ ವಿಷವಿರುವ ಮಡಕೆಯಂತೆ ನಂಬಿಕೆಗೆ ಅರ್ಹನಲ್ಲ.

**ಪರೋಪಕಾರಾಯ ಫಲಂತಿ ವೃಕ್ಷಾಃ**
**ಪರೋಪಕಾರಾಯ ವಹಂತಿ ನದ್ಯಃ ।**
**ಪರೋಪಕಾರಾಯ ದುಹಂತಿ ಗಾವಃ**
**ಪರೋಪಕಾರಾರ್ಥಮಿದಂ ಶರೀರಮ್ ॥ ೯೦**
—ತ್ರಿಶತೀವ್ಯಾಖ್ಯಾನೀತಿ-೭೧

ಪರೋಪಕಾರಕ್ಕಾಗಿ ಮರಗಳು ಹಣ್ಣು ಕೊಡುತ್ತವೆ. ಹೊಳೆಗಳು ಹರಿಯುತ್ತವೆ. ಹಸುಗಳು ಹಾಲನ್ನು ಕೊಡುತ್ತವೆ. ಈ ದೇಹವಿರುವುದು ಪರೋಪಕ್ಕಾರಕ್ಕಾಗಿ.

**ಪ್ರಥಮವಯಸಿ ಪೀತಂ ತೋಯಮಲ್ಪಂ ಸ್ಮರಂತಃ**
**ಶಿರಸಿ ನಿಹಿತಭಾರಾ ನಾರಿಕೇಲಾ ನರಾಣಾಂ ।**
**ದದತಿ ಜಲಮನಲ್ಪಾಸ್ವಾದಮಾಜೀವಿತಾಂತಂ**
**ನ ಹಿ ಕೃತಮುಪಕಾರಂ ಸಾಧವೋ ವಿಸ್ಮರಂತಿ ॥ ೯೧**
—ಸುಭಾಷಿತರತ್ನಾಭಾಂಡಾಗಾರ

ಚಿಕ್ಕ ವಯಸ್ಸಿನಲ್ಲಿ ಕುಡಿದ ಸ್ವಲ್ಪ ನೀರನ್ನು ನೆನೆದು, ತೆಂಗಿನಮರಗಳು ತಲೆಯಲ್ಲಿ ಭಾರ ಹೊತ್ತು ಬದುಕಿರುವವರೆಗೂ ಬಹಳ ರುಚಿಯಾದ ಎಳನೀರನ್ನು ನೀಡುತ್ತವೆ. ಮಾಡಿದ ಉಪಕಾರವನ್ನು ಒಳ್ಳೆಯವರು ಎಂದೂ ಮರೆಯುವುದಿಲ್ಲ.

**ಪಾಂಡಿತ್ಯಂ ಯನ್ಮದಾಂಧಾನಾಂ ಪರೋತ್ಕರ್ಷವಿನಾಶನಂ ।**
**ಮಾತ್ಸರ್ಯಪಾಂಸುಪೂರೇಣ ಮಾತಂಗಸ್ನಾನಮೇವ ತತ್ ॥ ೯೨**
—ಚತುರ್ವರ್ಗಸಂಗ್ರಹ, ೧-೬

ಇನ್ನೊಬ್ಬರ ಶ್ರೇಷ್ಠತೆಯನ್ನು ನಾಶಗೊಳಿಸುವ ಮದಾಂಧರ ಪಾಂಡಿತ್ಯವು ಹೊಟ್ಟೆ ಕಿಚ್ಚೆಂಬ ಧೂಳಿನಿಂದ ಮುಚ್ಚಿರುತ್ತವೆ. ಅವರ ಪಾಂಡಿತ್ಯವು ಆನೆಯ ಸ್ನಾನದಂತೆ ವ್ಯರ್ಥ.

**ಪ್ರಾಣಾಘಾತಾನ್ನಿವೃತ್ತಿಃ ಪರಧನಹರಣೇ ಸಂಯಮಃ ಸತ್ಯವಾಕ್ಯಂ**
**ಕಾಲೇ ಶಕ್ತ್ಯಾ ಪ್ರದಾನಂ ಯುವತಿಜನಕಥಾಮೂಕಭಾವಃ ಪರೇಷಾಮ್ ।**

**ತೃಷ್ಣಾಸ್ರೋತೋವಿಭಂಗೋ ಗುರುಷು ಚ ವಿನಯಃ**
**ಸರ್ವಭೂತಾನುಕಂಪಾ ।**
**ಸಾಮಾನ್ಯಃ ಸರ್ವಶಾಸ್ತ್ರೇಷ್ವನುಪಹತವಿಧಿಃ**
**ಶ್ರೇಯಸಾಮೇಷ ಪಂಥಾಃ ॥ ೯೩**

—ನೀತಿಶತಕ-೨೪

ಪ್ರಾಣಹತ್ಯೆಯನ್ನು ಮಾಡದಿರುವುದು, ಪರರ ಹಣವನ್ನು ತೆಗೆದುಕೊಳ್ಳುವ ವಿಚಾರದಲ್ಲಿ ಮನಸ್ಸನ್ನು ಬಿಗಿಹಿಡಿಯುವುದು, ಸತ್ಯವನ್ನೇ ನುಡಿಯುವುದು, ಸಕಾಲದಲ್ಲಿ ಶಕ್ತಿಗನುಸಾರವಾಗಿ ದಾನಮಾಡುವುದು, ಇತರರ ಹೆಂಗಸರ ವಿಷಯದಲ್ಲಿ ಸುಮ್ಮನಿರುವುದು, ಆಸೆಯ ಪ್ರವಾಹವನ್ನು ತಡೆದುಕೊಳ್ಳುವುದು, ಗುರುಹಿರಿಯರಲ್ಲಿ ವಿನಯ, ಎಲ್ಲಾ ಪ್ರಾಣಿಗಳಲ್ಲಿಯೂ ದಯೆ - ಇದೇ ಎಲ್ಲಾ ಶಾಸ್ತ್ರಗಳಲ್ಲೂ ತಡೆಯಿಲ್ಲದೆ ವಿಹಿತವಾದ ಸರ್ವಸಾಮಾನ್ಯವಾದ, ಶ್ರೇಯಸ್ಸನ್ನು ಪಡೆಯುವ ದಾರಿ.

**ಪಿಶುನಪ್ರಣಯೀ ಪುರುಷೋ ಯದಿ ನ ವಿನಶ್ಯತ್ಯವಶ್ಯಮೇತಿ ಭಯಂ ।**
**ಯದಿ ಸಂನಿಹಿತಂ ದಹನೋ ನ ದಹತಿ ಸಂತಾಪಯತ್ಯೇವ ॥ ೯೪**

—ಹರಿಹರಸುಭಾಷಿತ, ೩-೧೭

ದುರ್ಜನರ ಸ್ನೇಹವನ್ನು ಬೆಳೆಸಿದ ಮನುಷ್ಯನು ಒಂದುವೇಳೆ ನಾಶವಾಗದಿದ್ದರೂ ಸಂಕಟದಲ್ಲಾದರೂ ಸಿಕ್ಕಿಕೊಳ್ಳುತ್ತಾನೆ. ಹತ್ತಿರದಲ್ಲಿದ್ದವರನ್ನು ಬೆಂಕಿ ಸುಡದಿದ್ದರೂ ಕಾಯಿಸುತ್ತದೆ ಅಂದರೆ ನೋಯಿಸುತ್ತದೆ.

**ಪೇಶಲಮಪಿ ಖಲವಚನಂ ದಹತಿತರಾಂ ಮಾನಸಂ ಸುತತ್ತ್ವವಿದಾಂ ।**
**ಪರುಷಮಪಿ ಸುಜನವಾಕ್ಯಂ ಮಲಯಜರಸವತ್ ಪ್ರಮೋದಯತಿ ॥ ೯೫**

—ಕಾವ್ಯಪ್ರಕಾಶ-೧೦-೪೮೭

ದುರ್ಜನರ ಮಾತು ಮೃದುವಾಗಿದ್ದರೂ ತತ್ತ್ವಜ್ಞರ ಮನಸ್ಸನ್ನು ಅತಿಯಾಗಿ ಸುಡುತ್ತದೆ. ಸಜ್ಜನರ ಮಾತು ನಿಷ್ಠುರವಾಗಿದ್ದರೂ ಚಂದನರಸದಂತೆ ಆನಂದಗೊಳಿಸುತ್ತದೆ.

**ಪೋತೋ ದುಸ್ತರವಾರಿರಾಶಿತರಣೇ ದೀಪೋಽಂಧಕಾರಾಗಮೇ**
**ನಿರ್ವಾತೇ ವ್ಯಜನಂ ಮದಾಂಧಕರಿಣೋ ದರ್ಪೋಪಶಾಂತ್ಯೈ ಸೃಣಿಃ ।**
**ಇತ್ಥಂ ತದ್ಭುವಿ ನಾಸ್ತಿ ಯಸ್ಯ ವಿಧಿನಾ ನೋಪಾಯಚಿಂತಾ ಕೃತಾ**
**ಮನ್ಯೇ ದುರ್ಜನಚಿತ್ತವೃತ್ತಿಹರಣೇ ಧಾತಾಪಿ ಭಗ್ನೋದ್ಯಮಃ ॥ ೯೬**

—ಹಿತೋಪದೇಶ, ಸುಹೃದ್ಭೇದ-೧೫೧

ದಾಟಲಸಾಧ್ಯವಾದ ಸಮುದ್ರವನ್ನು ದಾಟಲು ನಾವೆಯುಂಟು ; ಕತ್ತಲೆ ಬಂದಾಗ ದೀಪವಿದೆ ; ಗಾಳಿ ಇಲ್ಲದಿದ್ದಾಗ ಬೀಸಣಿಗೆ ; ಮದ್ದಾನೆಯ ದರ್ಪವನ್ನು ಅಡಗಿಸುವುದಕ್ಕೆ ಅಂಕುಶ ಉಂಟು. ಲೋಕದಲ್ಲಿ ಎಲ್ಲದಕ್ಕೂ ಬ್ರಹ್ಮನು ಪರಿಹಾರವನ್ನುಂಟುಮಾಡಿದ್ದಾನೆ.

ಆದರೆ ದುಷ್ಟನ ಚಿತ್ತವೃತ್ತಿಯನ್ನು ಕಳೆಯುವುದರಲ್ಲಿ ಹೀಗೆ ಯಾವ ಉಪಾಯದ ಯೋಚನೆಯನ್ನೂ ಮಾಡಿರುವುದಿಲ್ಲ. ಈ ಪ್ರಯತ್ನದಲ್ಲಿ ಬ್ರಹ್ಮನೂ ಸೋತಿರಬೇಕು!

**ಭವಂತಿ ನಮ್ರಾಸ್ತರವಃ ಫಲಾಗಮೈಃ**
**ನವಾಂಬುಭಿರ್ದೂರವಿಲಂಬಿನೋ ಘನಾಃ ।**
**ಅನುದ್ಧತಾಃ ಸತ್ಪುರುಷಾಃ ಸಮೃದ್ಧಿಭಿಃ**
**ಸ್ವಭಾವ ಏವೈಷ ಪರೋಪಕಾರಿಣಾಮ್ ॥ ೯೭**

—ಅಭಿಜ್ಞಾನಶಾಕುಂತಲ, ೫-೧೨

ಮರಗಳು ಹಣ್ಣುಗಳ ಭಾರದಿಂದ ಬಗ್ಗುತ್ತವೆ. ನೀರು ತುಂಬಿದ ಮುಗಿಲುಗಳು ದೂರದ ಆಕಾಶದಲ್ಲಿ ಕೆಳಮಟ್ಟದಲ್ಲಿ ತೇಲುತ್ತವೆ. ಉತ್ತಮರು ಬೇಕಾದಷ್ಟು ಐಶ್ವರ್ಯವಿರಲಿ, ಅಹಂಕಾರಪಡುವುದಿಲ್ಲ. ಪರೋಪಕಾರಿಗಳು ಇರುವ ರೀತಿಯೇ ಇದು.

**ಭೂತಾನಾಂ ದೇವಚರಿತಂ ದುಃಖಾಯ ಚ ಸುಖಾಯ ಚ ।**
**ಸುಖಾಯೈವ ಹಿ ಸಾಧೂನಾಂ ತ್ವಾದೃಶಾಮಚ್ಯುತಾತ್ಮನಾಮ್ ॥ ೯೮**

—ಭಾಗವತ, ೧೧-೨-೫

ಪ್ರಾಣಿಗಳಿಗೆ ಈ ಲೋಕದಲ್ಲಿ ದೇವತೆಗಳು ದುಃಖವನ್ನು ಮತ್ತು ಸುಖವನ್ನೂ ಕೊಡುತ್ತಾರೆ. ಆದರೆ ಪರಮಾತ್ಮನ ಭಕ್ತರಾದ ಸಾಧುಗಳು ಮಾತ್ರ ಎಲ್ಲರಿಗೂ ಸುಖವನ್ನೇ ಕೊಡುತ್ತಾರೆ.

**ಮಂತ್ರಬಲೇನ ಭುಜಂಗಾ ಮುಗ್ಧಕುರಂಗಾಶ್ಚ ಕೂಟಯಂತ್ರೇಣ ।**
**ಸ್ಥಲಜಾಲೇನ ವಿಹಂಗಾ ಗೃಹ್ಯಂತೇ ಮಾನವಾಶ್ಚ ದಂಭೇನ ॥ ೯೯**

—ಕಲಾವಿಲಾಸ, ೧-೪೪

ಮಂತ್ರಬಲದಿಂದ ಸರ್ಪಗಳೂ, ಬೋನಿನಲ್ಲಿ ಅರಿಯದ ಜಿಂಕೆಗಳೂ, ನೆಲದ ಬಲೆಯಿಂದ ಹಕ್ಕಿಗಳೂ ಹಿಡಿಯಲ್ಪಟ್ಟು ವಶವಾಗುತ್ತವೆ. ಆದರೆ ದಂಭದಿಂದ ಮನುಷ್ಯರು ವಶವಾಗುತ್ತಾರೆ.

**ಮನಸಿ ವಚಸಿ ಕಾಯೇ ಪುಣ್ಯಪೀಯೂಷಪೂರ್ಣಾಃ**
**ತ್ರಿಭುವನಮುಪಕಾರಶ್ರೇಣಿಭಿಃ ಪ್ರೀಣಯಂತಃ ।**
**ಪರಗುಣಪರಮಾಣೂನ್ ಪರ್ವತೀಕೃತ್ಯ ನಿತ್ಯಂ**
**ನಿಜಹೃದಿ ವಿಕಸಂತಃ ಸಂತಿ ಸಂತಃ ಕಿಯಂತಃ ॥ ೧೦೦**

—ನೀತಿಶತಕ-೭೬

ಮನಸ್ಸಿನಲ್ಲೂ, ಮಾತಿನಲ್ಲೂ, ಶರೀರದಲ್ಲೂ ಪುಣ್ಯವೆಂಬ ಅಮೃತದಿಂದ ಪರಿಪೂರ್ಣರಾಗಿ, ತಮ್ಮ ನಾನಾ ಬಗೆಯ ಉಪಕಾರಗಳಿಂದ ಮೂರು ಲೋಕಗಳನ್ನೂ ಸಂತೋಷಪಡಿಸುತ್ತಾ, ಇತರರ ಅತ್ಯಲ್ಪ ಗುಣಗಳನ್ನೂ ಬೆಟ್ಟದಷ್ಟು ಮಾಡಿ ತಮ್ಮ ಹೃದಯದಲ್ಲಿ ಹಿಗ್ಗುತ್ತಿರುವ ಸತ್ಪುರುಷರು ಎಷ್ಟು ಜನರಿದ್ದಾರು?

**ಮಲಿನೋ ಹಿ ಯಥಾದರ್ಶೋ ರೂಪಾಲೋಕಸ್ಯ ನ ಕ್ಷಮಃ ।**
**ತಥಾಽವಿಪಕ್ವಕರಣ ಆತ್ಮಜ್ಞಾನಸ್ಯ ನ ಕ್ಷಮಃ ॥ ೧೦೧**

—ಯಾಜ್ಞವಲ್ಕ್ಯ, ೪-೧೪೧

ಕೊಳೆಯಾದ ಕನ್ನಡಿಯಲ್ಲಿ ರೂಪವನ್ನು ನೋಡಿಕೊಳ್ಳಲು ಆಗುವುದಿಲ್ಲ. ಹಾಗೆಯೇ ಮನಸ್ಸು ಪಕ್ವವಾಗದಿದ್ದರೆ ಆತ್ಮಜ್ಞಾನವುಂಟಾಗುವುದಿಲ್ಲ.

**ಮಿತ್ರದ್ರೋಹೀ ಕೃತಘ್ನಶ್ಚ ಯಶ್ಚ ವಿಶ್ವಾಸಘಾತಕಃ ।**
**ತೇ ನರಾ ನರಕಂ ಯಾಂತಿ ಯಾವಚ್ಚಂದ್ರದಿವಾಕರೌ ॥ ೧೦೨**

—ಪಂಚತಂತ್ರ, ಮಿತ್ರಭೇದ, ೪೫೩

ಸ್ನೇಹಿತನಿಗೆ ದ್ರೋಹಬಗೆದವನು, ಮಾಡಿದ ಉಪಕಾರದ ಸ್ಮರಣೆ ಇಲ್ಲದವನು ಮತ್ತು ನಂಬಿದವರಿಗೆ ಮೋಸ ಮಾಡಿದವನು-ಈ ಎಲ್ಲ ಮನುಷ್ಯರೂ ಸೂರ್ಯಚಂದ್ರ ರಿರುವವರೆಗೂ ನರಕದಲ್ಲಿ ಬೀಳುತ್ತಾರೆ.

**ಮುಖಂ ಪದ್ಮದಲಾಕಾರಂ ವಾಣೀ ಚಂದನಶೀತಲಾ ।**
**ಹೃದಯಂ ಕರ್ತರೀತುಲ್ಯಂ ತ್ರಿವಿಧಂ ಧೂರ್ತಲಕ್ಷಣಮ್ ॥ ೧೦೩**

—ಸಮಯೋಚಿತಪದ್ಯಮಾಲಿಕಾ

ಮುಖವು ಪದ್ಮದಳದಂತೆ ಸೊಗಸು, ಮಾತು ಚಂದನದಂತೆ ತಂಪು, ಹೃದಯವು ಕತ್ತರಿ ಇದ್ದಂತೆ - ಹೀಗೆ ಧೂರ್ತರ ಲಕ್ಷಣ ಮೂರು ಬಗೆ.

**ಮೂರ್ಖಾಣಾಂ ಪಂಡಿತಾ ದ್ವೇಷ್ಯಾ ದರಿದ್ರಾಣಾಂ ಮಹಾಧನಾಃ ।**
**ಅಧಾರ್ಮಿಕಾಣಾಂ ಧರ್ಮಿಷ್ಠಾ ವಿರೂಪಾಣಾಂ ಸುರೂಪಿಣಃ ॥ ೧೦೪**

—ಮಹಾಭಾರತ, ಶಾಂತಿ. ೧೧೧-೬೨

ಮೂರ್ಖರಿಗೆ ಪಂಡಿತರು ಶತ್ರುಗಳು. ದರಿದ್ರರಿಗೆ ಧನಿಕರೂ, ಪಾಪಿಗಳಿಗೆ ಧಾರ್ಮಿಕರೂ, ಕುರುಪಿಗಳಿಗೆ ಸುರೂಪಿಗಳೂ ಶತ್ರುಗಳು.

**ಮೃದ್ಘಟ ಇವ ಸುಖಭೇದ್ಯೋ**
**ದುಃಸಂಧಾನಶ್ಚ ದುರ್ಜನೋ ಭವತಿ ।**
**ಸುಜನಸ್ತು ಕನಕಘಟ ಇವ**
**ದುರ್ಭೇದ್ಯಶ್ಚಾಶು ಸಂಧೇಯಃ ॥ ೧೦೫**

—ತ್ರಿಶತೀವ್ಯಾಖ್ಯಾ, ನೀತಿ-೩೩

ದುಷ್ಟನು ಮಣ್ಣಿನ ಗಡಿಗೆಯಿದ್ದಂತೆ. ಅವನನ್ನು ಭೇದಿಸುವುದು ಸುಲಭ. ಸ್ನೇಹದ ಬೆಸುಗೆಯೂ ಅಸಾಧ್ಯ. ಸತ್ಪುರುಷನು ಚಿನ್ನದ ಕಲಶವಿದ್ದಂತೆ. ಭೇದಿಸುವುದು ಕಷ್ಟ, ಒಂದು ವೇಳೆಹಾಗಾದರೂ ಸ್ನೇಹದ ಬೆಸುಗೆ ಸುಲಭ.

**ಮೋಹಂ ರುಣದ್ಧಿ ವಿಮಲೀಕುರುತೇ ಚ ಬುದ್ಧಿಂ**
**ಸೂತೇ ಚ ಸಂಸ್ಕೃತಪದವ್ಯವಹಾರಶಕ್ತಿಮ್ ।**
**ಶಾಸ್ತ್ರಾಂತರಾಭ್ಯಸನಯೋಗ್ಯತಯಾ ಯುನಕ್ತಿ**
**ತರ್ಕಶ್ರಮೋ ನ ತನುತೇ ಕಿಮಿಹೋಪಕಾರಮ್ ॥ ೧೦೬**

—ವಿಶ್ವಗುಣಾದರ್ಶ ೫೫೬

ತರ್ಕಶಾಸ್ತ್ರದ ಅಭ್ಯಾಸವು ಬುದ್ಧಿಭ್ರಮವನ್ನು ನಾಶಮಾಡುತ್ತದೆ, ಬುದ್ಧಿಯನ್ನು ನಿರ್ಮಲಗೊಳಿಸುತ್ತದೆ, ಸಂಸ್ಕೃತಪದಗಳಲ್ಲಿ ವ್ಯವಹರಿಸುವ ಸಾಮರ್ಥ್ಯವನ್ನು ಕೊಡುತ್ತದೆ. ಇತರ ಶಾಸ್ತ್ರಗಳ ಅಭ್ಯಾಸಕ್ಕೆ ಯೋಗ್ಯತೆಯನ್ನು ಕಲ್ಪಿಸುತ್ತದೆ. ಆದುದರಿಂದ ಈ ಲೋಕದಲ್ಲಿ ತರ್ಕಶಾಸ್ತ್ರದ ಪರಿಶ್ರಮ ಯಾವ ಉಪಕಾರವನ್ನು ಮಾಡುವುದಿಲ್ಲ?

**ಯಜ್ಜೀವ್ಯತೇ ಕ್ಷಣಮಪಿ ಪ್ರಥಿತಂ ಮನುಷ್ಯೈಃ**
**ವಿಜ್ಞಾನಶೌರ್ಯವಿಭವಾರ್ಯಗುಣೈಃ ಸಮೇತಂ ।**
**ತನ್ನಾಮ ಜೀವಿತಮಿಹ ಪ್ರವದಂತಿ ತಜ್ಜ್ಞಾಃ**
**ಕಾಕೋಽಪಿ ಜೀವತಿ ಚಿರಾಯ ಬಲಿಂ ಚ ಭುಂಕ್ತೇ ॥ ೧೦೭**

—ಪಂಚತಂತ್ರ, ಮಿತ್ರಭೇದ-೨೪

ಜ್ಞಾನ, ಪರಾಕ್ರಮ, ವೈಭವ ಮೊದಲಾದ ಸದ್ಗುಣಗಳಿಂದ ಕೂಡಿ ಮನುಷ್ಯರು ಪ್ರಖ್ಯಾತರಾಗಿ ಒಂದು ಕ್ಷಣ ಬದುಕಿದರೂ ಅದು ನಿಜವಾದ ಜೀವನ ಎಂದು ತಿಳಿದವರು ಹೇಳುತ್ತಾರೆ. ಕಾಗೆಯೂ ಸಹ ಬಹಳ ಕಾಲ ಬದುಕಿರುತ್ತೆ; ಇತರರು ಇಟ್ಟ ಅನ್ನವನ್ನು ತಿನ್ನುತ್ತದೆ.

**ಯಥಾ ಚಿತ್ತಂ ತಥಾ ವಾಚಃ ಯಥಾ ವಾಚಸ್ತಥಾ ಕ್ರಿಯಾಃ ।**
**ಚಿತ್ತೇ ವಾಚಿ ಕ್ರಿಯಾಯಾಂ ಚ ಸಾಧೂನಾಮೇಕರೂಪತಾ ॥ ೧೦೮**

—ಸುಭಾಷಿತರತ್ನಭಾಂಡಾಗಾರ

ಮನಸ್ಸಿನಂತೆ ಮಾತು, ಮಾತಿನಂತೆ ಕ್ರಿಯೆ. ಮನಸ್ಸು, ಮಾತು, ಕ್ರಿಯೆಗಳಲ್ಲಿ ಸತ್ಪುರುಷರು ಒಂದೇ ಬಗೆಯಾಗಿರುತ್ತಾರೆ.

**ಯದಮೀ ದಶಂತಿ ದಶನಾ ರಸನಾ ತತ್ಸ್ವಾದಮನುಭವತಿ ।**
**ಪ್ರಕೃತಿರಿಯಂ ವಿಮಲಾನಾಂ ಕ್ಲಿಶ್ಯಂತಿ ಯದನ್ಯಕಾರ್ಯೇಷು ॥೧೦೯**

—ಸುಭಾಷಿತರತ್ನಭಾಂಡಾಗಾರ

ಹಲ್ಲುಗಳು ಯಾವುದನ್ನು ಅಗಿಯುತ್ತವೆಯೋ ಅವುಗಳ ರುಚಿಯನ್ನು ನಾಲಿಗೆ ಅನುಭವಿಸುತ್ತದೆ! ಸತ್ಪುರುಷರು ಸ್ವಾಭಾವಿಕವಾಗಿ ಬೇರೆಯವರ ಹಿತಕ್ಕಾಗಿ ಕಷ್ಟ ಪಡುತ್ತಾರೆ.

**ಯದ್ಯದಾಚರತಿ ಶ್ರೇಯಾನ್ ಇತರಸ್ತತ್ತದೀಹತೇ ।**
**ಸ ಯತ್ಪ್ರಮಾಣಂ ಕುರುತೇ ಲೋಕಸ್ತದನುವರ್ತತೇ ॥** ೧೧೦

—ಭಾಗವತ, ೬-೨-೪

ಈ ಜಗತ್ತಿನಲ್ಲಿ ಉತ್ತಮನಾದ ಮನುಷ್ಯನು ಯಾವುಯಾವುದನ್ನು ಮಾಡುತ್ತಾನೋ, ಬೇರೆಯವನೂ ಅದನ್ನು ಮಾಡಲು ಆಶಿಸುತ್ತಾನೆ. ಅವನು ಯಾವುದನ್ನು ಪ್ರಮಾಣವೆಂದು ಭಾವಿಸಿ ಮಾಡುತ್ತಾನೋ ಲೋಕವು ಅದನ್ನನುಸರಿಸುತ್ತದೆ.

**ಯದಿ ಸಂತಿ ಗುಣಾಃ ಪುಂಸಾಂ ವಿಕಸಂತ್ಯೇವ ತೇ ಸ್ವಯಂ ।**
**ನ ಹಿ ಕಸ್ತೂರಿಕಾಮೋದಃ ಶಪಥೇನ ವಿಭಾವ್ಯತೇ ॥** ೧೧೧

—ಕುವಲಯಾನಂದ

ಜನರಲ್ಲಿ ಸದ್ಗುಣಗಳಿದ್ದರೆ ಅವು ತಾವಾಗಿಯೇ ಪ್ರಕಾಶಕ್ಕೆ ಬರುತ್ತವೆ. ಕಸ್ತೂರಿಯ ಸುಗಂಧವನ್ನು ಯಾರೂ ಬಲಾತ್ಕಾರಮಾಡಿ ಹೊರಗೆಡಹುವುದಿಲ್ಲ.

**ಯಶ್ಚ ನಿಂಬಂ ಪರಶುನಾ ಯಶ್ಚೈನಂ ಮಧುಸರ್ಪಿಷಾ ।**
**ಯಶ್ಚೈನಂ ಗಂಧಮಾಲ್ಯಾದ್ಯೈಃ ಸರ್ವತ್ರ ಕಟುರೇವ ಸಃ ॥** ೧೧೨

—ಕುವಲಯಾನಂದ

ಬೇವಿನ ಗಿಡವನ್ನು ಯಾವನು ಕೊಡಲಿಯಿಂದ ಕಡಿಯುವನೋ, ಜೇನು, ತುಪ್ಪಗಳಿಂದ ಎರೆಯುವನೋ, ಗಂಧಮಾಲ್ಯಗಳಿಂದ ಪೂಜಿಸುವನೋ ಅವರೆಲ್ಲರಿಗೂ ಅದು ಕಹಿಯಾಗಿಯೇ ಇರುತ್ತದೆ.

**ಯೇ ಚ ಮೂಢತಮಾ ಲೋಕೇ ಯೇ ಚ ಬುದ್ಧೇಃ ಪರಂ ಗತಾಃ ।**
**ತ ಏವ ಸುಖಮೇಧಂತೇ ಮಧ್ಯಮಃ ಕ್ಲಿಶ್ಯತೇ ಜನಃ ॥** ೧೧೩

—ಮಹಾಭಾರತ, ಶಾಂತಿ, ೨೫-೨೮

ಯಾರು ಈ ಲೋಕದಲ್ಲಿ ಅತ್ಯಂತ ಮೂಢರೋ, ಯಾರು ಅತ್ಯಂತ ಬುದ್ಧಿಶಾಲಿಗಳೋ ಅವರು ಸುಖವಾಗಿರುತ್ತಾರೆ ; ಮಧ್ಯಮದರ್ಜೆಯವನು ಕಷ್ಟಪಡುತ್ತಾನೆ.

**ಲಿಂಪತೀವ ತಮೋಽಂಗಾನಿ ವರ್ಷತೀವಾಂಜನಂ ನಭಃ ।**
**ಅಸತ್ಪುರುಷಸೇವೇವ ದೃಷ್ಟಿರ್ನಿಷ್ಫಲತಾಂ ಗತಾ ॥** ೧೧೪

—ಚಾರುದತ್ತ, ೧-೧೯

ಕಾರ್ಗತ್ತಲು ಅಂಗಗಳನ್ನು ಬಳಿದಂತಿದೆ. ಆಕಾಶವು ಕಾಡಿಗೆಯನ್ನು ದಟ್ಟವಾಗಿ ಸುರಿಸುತ್ತಿರುವಂತೆ ಇದೆ. ನೀಚರಿಗೆ ಮಾಡಿದ ಸೇವೆಯು ವ್ಯರ್ಥವಾಗುವಂತೆ ಕಣ್ಣು ಕತ್ತಲೆಯಲ್ಲಿ ವ್ಯರ್ಥವಾಗಿದೆ.

**ಲೋಭಶ್ಚೇದಗುಣೇನ ಕಿಂ ಪಿಶುನತಾ ಯದ್ಯಸ್ತಿ ಕಿಂ ಪಾತಕೈಃ**
**ಸತ್ಯಂ ಚೇತ್ತಪಸಾ ಚ ಕಿಂ ಶುಚಿ ಮನೋ ಯದ್ಯಸ್ತಿ ತೀರ್ಥೇನ ಕಿಂ ।**
**ಸೌಜನ್ಯಂ ಯದಿ ಕಿಂ ನಿಜೈಃ ಸುಮಹಿಮಾ ಯದ್ಯಸ್ತಿ ಕಿಂ ಮಂಡನೈಃ**
**ಸದ್ವಿದ್ಯಾ ಯದಿ ಕಿಂ ಧನೈರಪಯಶೋ ಯದ್ಯಸ್ತಿ ಕಿಂ ಮೃತ್ಯುನಾ ॥ ೧೧೫**

—ನೀತಿಶತಕ-೫೩

ದುರಾಸೆಯಿದ್ದ ಮೇಲೆ ಇತರ ದುರ್ಗುಣಗಳೇಕೆ? ಚಾಡಿಕೋರತನವಿದ್ದರೆ ಪಾತಕ ಗಳೇಕೆ? ಸತ್ಯವಿದ್ದಮೇಲೆ ತಪಸ್ಸು ಏತಕ್ಕೆ? ನಿಷ್ಕಲ್ಮಷವಾದ ಮನಸ್ಸಿದ್ದಮೇಲೆ ತೀರ್ಥಯಾತ್ರೆ ಏತಕ್ಕೆ? ಸೌಜನ್ಯವಿದ್ದಮೇಲೆ ಸ್ವಜನರೇತಕ್ಕೆ? ನಿಜವಾದ ಮಹಿಮೆಯಿದ್ದ ಮೇಲೆ ಒಡವೆಗಳೇಕೆ? ಒಳ್ಳೆಯ ವಿದ್ಯೆಯಿದ್ದಮೇಲೆ ಹಣ ಏತಕ್ಕೆ? ಅಪಕೀರ್ತಿಯಿದ್ದ ಮೇಲೆ ಮೃತ್ಯು ಏತಕ್ಕೆ?

**ವಚನೈರಸತಾಂ ಮಹೀಯಸೋ ನ ಖಲು ವ್ಯೇತಿ ಗುರುತ್ವಮುದ್ಧತೈಃ ।**
**ಕಿಮಪೈತಿ ರಜೋಭಿರೌರ್ವರೈಃ ಅವಕೀರ್ಣಸ್ಯ ಮಣೇರ್ಮಹಾರ್ಘತಾ॥ ೧೧೬**

—ಶಿಶುಪಾಲವಧ, ೧೬-೨೭

ಕೆಟ್ಟವರು ಆಡಿದ ಗರ್ವದ ಮಾತುಗಳಿಂದ ದೊಡ್ಡವರ ದೊಡ್ಡತನವು ಕಡಿಮೆ ಯಾಗುವುದಿಲ್ಲ. ಮಣ್ಣಿನಿಂದ ಮುಚ್ಚಲ್ಪಟ್ಟ ಮಾತ್ರಕ್ಕೆ ರತ್ನದ ಬೆಲೆ ಕಡಮೆಯಾಗುವುದಿಲ್ಲ.

**ವರ್ಜನೀಯೋ ಮತಿಮತಾ ದುರ್ಜನಃ ಸಖ್ಯವೈರಯೋಃ ।**
**ಶ್ವಾ ಭವತ್ಯುಪಘಾತಾಯ ಲಿಹನ್ನಪಿ ದಶನ್ನಪಿ ॥ ೧೧೭**

—ಸುಭಾಷಿತಸುಧಾನಿಧಿ

ಬುದ್ಧಿವಂತನಾದವನು ಸ್ನೇಹ ಮತ್ತು ದ್ವೇಷಗಳೆರಡಕ್ಕೂ ದುರ್ಜನನನ್ನು ದೂರ ಮಾಡಬೇಕು. ನಾಯಿ ನೆಕ್ಕಿದರೂ ಅಷ್ಟೆ, ಕಚ್ಚಿದರೂ ಅಷ್ಟೆ, ಅಪಘಾತವೇ ಆಗುವುದು.

**ವಜ್ರಾದಪಿ ಕಠೋರಾಣಿ ಮೃದೂನಿ ಕುಸುಮಾದಪಿ ।**
**ಲೋಕೋತ್ತರಾಣಾಂ ಚೇತಾಂಸಿ ಕೋ ಹಿ ವಿಜ್ಞಾತುಮರ್ಹತಿ ॥ ೧೧೮**

—ಉತ್ತರರಾಮಚರಿತ, ೨-೭

ಬಹಳ ಶ್ರೇಷ್ಠರಾದವರ ಮನಸ್ಸು ಕೆಲವು ವೇಳೆ ವಜ್ರಕ್ಕಿಂತಲೂ ಗಡಸು, ಹಲವು ವೇಳೆ ಹೂವಿಗಿಂತಲೂ ಮೃದು. ಅವರ ಮನಸ್ಸನ್ನು ಅರಿಯುವುದು ಬಹಳ ಕಷ್ಟ.

**ವರಮಂಧಗುಹಾಹಿತ್ವಂ ಶಿಲಾಂತಃಕೀಟತಾ ವರಂ ।**
**ವರಂ ಮರೌ ಪಂಗುಮೃಗೋ ನ ಗ್ರಾಮ್ಯಜನಸಂಗಮಃ ॥ ೧೧೯**

—ಯೋಗವಾಸಿಷ್ಠ, ೬-೨೦

**ಯದ್ಯದಾಚರತಿ ಶ್ರೇಯಾನ್ ಇತರಸ್ತತ್ತದೀಹತೇ ।**
**ಸ ಯತ್ಪ್ರಮಾಣಂ ಕುರುತೇ ಲೋಕಸ್ತದನುವರ್ತತೇ ॥ ೧೧೦**

—ಭಾಗವತ, ೬-೨-೪

ಈ ಜಗತ್ತಿನಲ್ಲಿ ಉತ್ತಮನಾದ ಮನುಷ್ಯನು ಯಾವುಯಾವುದನ್ನು ಮಾಡುತ್ತಾನೋ, ಬೇರೆಯವನೂ ಅದನ್ನು ಮಾಡಲು ಆಶಿಸುತ್ತಾನೆ. ಅವನು ಯಾವುದನ್ನು ಪ್ರಮಾಣವೆಂದು ಭಾವಿಸಿ ಮಾಡುತ್ತಾನೋ ಲೋಕವು ಅದನ್ನನುಸರಿಸುತ್ತದೆ.

**ಯದಿ ಸಂತಿ ಗುಣಾಃ ಪುಂಸಾಂ ವಿಕಸಂತ್ಯೇವ ತೇ ಸ್ವಯಂ ।**
**ನ ಹಿ ಕಸ್ತೂರಿಕಾಮೋದಃ ಶಪಥೇನ ವಿಭಾವ್ಯತೇ ॥ ೧೧೧**

—ಕುವಲಯಾನಂದ

ಜನರಲ್ಲಿ ಸದ್ಗುಣಗಳಿದ್ದರೆ ಅವು ತಾವಾಗಿಯೇ ಪ್ರಕಾಶಕ್ಕೆ ಬರುತ್ತವೆ. ಕಸ್ತೂರಿಯ ಸುಗಂಧವನ್ನು ಯಾರೂ ಬಲಾತ್ಕಾರಮಾಡಿ ಹೊರಗೆಡಹುವುದಿಲ್ಲ.

**ಯಶ್ಚ ನಿಂಬಂ ಪರಶುನಾ ಯಶ್ಚೈನಂ ಮಧುಸರ್ಪಿಷಾ ।**
**ಯಶ್ಚೈನಂ ಗಂಧಮಾಲ್ಯಾದ್ಯೈಃ ಸರ್ವತ್ರ ಕಟುರೇವ ಸಃ ॥ ೧೧೨**

—ಕುವಲಯಾನಂದ

ಬೇವಿನ ಗಿಡವನ್ನು ಯಾವನು ಕೊಡಲಿಯಿಂದ ಕಡಿಯುವನೋ, ಜೇನು, ತುಪ್ಪಗಳಿಂದ ಎರೆಯುವನೋ, ಗಂಧಮಾಲ್ಯಗಳಿಂದ ಪೂಜಿಸುವನೋ ಅವರೆಲ್ಲರಿಗೂ ಅದು ಕಹಿಯಾಗಿಯೇ ಇರುತ್ತದೆ.

**ಯೇ ಚ ಮೂಢತಮಾ ಲೋಕೇ ಯೇ ಚ ಬುದ್ಧೇಃ ಪರಂ ಗತಾಃ ।**
**ತ ಏವ ಸುಖಮೇಧಂತೇ ಮಧ್ಯಮಃ ಕ್ಲಿಶ್ಯತೇ ಜನಃ ॥ ೧೧೩**

—ಮಹಾಭಾರತ, ಶಾಂತಿ, ೨೫-೨೮

ಯಾರು ಈ ಲೋಕದಲ್ಲಿ ಅತ್ಯಂತ ಮೂಢರೋ, ಯಾರು ಅತ್ಯಂತ ಬುದ್ಧಿಶಾಲಿಗಳೋ ಅವರು ಸುಖವಾಗಿರುತ್ತಾರೆ ; ಮಧ್ಯಮದರ್ಜೆಯವನು ಕಷ್ಟಪಡುತ್ತಾನೆ.

**ಲಿಂಪತೀವ ತಮೋಽಂಗಾನಿ ವರ್ಷತೀವಾಂಜನಂ ನಭಃ ।**
**ಅಸತ್ಪುರುಷಸೇವೇವ ದೃಷ್ಟಿರ್ನಿಷ್ಫಲತಾಂ ಗತಾ ॥ ೧೧೪**

—ಚಾರುದತ್ತ, ೧-೧೯

ಕಾರ್ಗತ್ತಲು ಅಂಗಗಳನ್ನು ಬಳಿದಂತಿದೆ. ಆಕಾಶವು ಕಾಡಿಗೆಯನ್ನು ದಟ್ಟವಾಗಿ ಸುರಿಸುತ್ತಿರುವಂತೆ ಇದೆ. ನೀಚರಿಗೆ ಮಾಡಿದ ಸೇವೆಯು ವ್ಯರ್ಥವಾಗುವಂತೆ ಕಣ್ಣು ಕತ್ತಲೆಯಲ್ಲಿ ವ್ಯರ್ಥವಾಗಿದೆ.

ಲೋಭಶ್ಚೇದಗುಣೇನ ಕಿಂ ಪಿಶುನತಾ ಯದ್ಯಸ್ತಿ ಕಿಂ ಪಾತಕೈಃ
ಸತ್ಯಂ ಚೇತ್ತಪಸಾ ಚ ಕಿಂ ಶುಚಿ ಮನೋ ಯದ್ಯಸ್ತಿ ತೀರ್ಥೇನ ಕಿಂ ।
ಸೌಜನ್ಯಂ ಯದಿ ಕಿಂ ನಿಜೈಃ ಸುಮಹಿಮಾ ಯದ್ಯಸ್ತಿ ಕಿಂ ಮಂಡನೈಃ
ಸದ್ವಿದ್ಯಾ ಯದಿ ಕಿಂ ಧನೈರಪಯಶೋ ಯದ್ಯಸ್ತಿ ಕಿಂ ಮೃತ್ಯುನಾ ॥ ೧೧೫

—ನೀತಿಶತಕ-೫೩

ದುರಾಸೆಯಿದ್ದ ಮೇಲೆ ಇತರ ದುರ್ಗುಣಗಳೇಕೆ? ಚಾಡಿಕೋರತನವಿದ್ದರೆ ಪಾತಕಗಳೇಕೆ? ಸತ್ಯವಿದ್ದಮೇಲೆ ತಪಸ್ಸು ಏತಕ್ಕೆ? ನಿಷ್ಕಲ್ಮಷವಾದ ಮನಸ್ಸಿದ್ದಮೇಲೆ ತೀರ್ಥಯಾತ್ರೆ ಏತಕ್ಕೆ? ಸೌಜನ್ಯವಿದ್ದಮೇಲೆ ಸ್ವಜನರೇತಕ್ಕೆ? ನಿಜವಾದ ಮಹಿಮೆಯಿದ್ದ ಮೇಲೆ ಒಡವೆಗಳೇಕೆ? ಒಳ್ಳೆಯ ವಿದ್ಯೆಯಿದ್ದಮೇಲೆ ಹಣ ಏತಕ್ಕೆ? ಅಪಕೀರ್ತಿಯಿದ್ದ ಮೇಲೆ ಮೃತ್ಯು ಏತಕ್ಕೆ?

ವಚನೈರಸತಾಂ ಮಹೀಯಸೋ ನ ಖಲು ವ್ಯೇತಿ ಗುರುತ್ವಮುದ್ಧತೈಃ ।
ಕಿಮಪೈತಿ ರಜೋಭಿರೌರ್ವರೈಃ ಅವಕೀರ್ಣಸ್ಯ ಮಣೇರ್ಮಹಾರ್ಘತಾ ॥ ೧೧೬

—ಶಿಶುಪಾಲವಧ, ೧೬-೨೭

ಕೆಟ್ಟವರು ಆಡಿದ ಗರ್ವದ ಮಾತುಗಳಿಂದ ದೊಡ್ಡವರ ದೊಡ್ಡತನವು ಕಡಿಮೆಯಾಗುವುದಿಲ್ಲ. ಮಣ್ಣಿನಿಂದ ಮುಚ್ಚಲ್ಪಟ್ಟ ಮಾತ್ರಕ್ಕೆ ರತ್ನದ ಬೆಲೆ ಕಡಮೆಯಾಗುವುದಿಲ್ಲ.

ವರ್ಜನೀಯೋ ಮತಿಮತಾ ದುರ್ಜನಃ ಸಖ್ಯವೈರಯೋಃ ।
ಶ್ವಾ ಭವತ್ಯುಪಘಾತಾಯ ಲಿಹನ್ನಪಿ ದಶನ್ನಪಿ ॥ ೧೧೭

—ಸುಭಾಷಿತಸುಧಾನಿಧಿ

ಬುದ್ಧಿವಂತನಾದವನು ಸ್ನೇಹ ಮತ್ತು ದ್ವೇಷಗಳೆರಡಕ್ಕೂ ದುರ್ಜನನನ್ನು ದೂರ ಮಾಡಬೇಕು. ನಾಯಿ ನೆಕ್ಕಿದರೂ ಅಷ್ಟೆ, ಕಚ್ಚಿದರೂ ಅಷ್ಟೆ, ಅಪಘಾತವೇ ಆಗುವುದು.

ವಜ್ರಾದಪಿ ಕಠೋರಾಣಿ ಮೃದೂನಿ ಕುಸುಮಾದಪಿ ।
ಲೋಕೋತ್ತರಾಣಾಂ ಚೇತಾಂಸಿ ಕೋ ಹಿ ವಿಜ್ಞಾತುಮರ್ಹತಿ ॥ ೧೧೮

—ಉತ್ತರರಾಮಚರಿತ, ೨-೭

ಬಹಳ ಶ್ರೇಷ್ಠರಾದವರ ಮನಸ್ಸು ಕೆಲವು ವೇಳೆ ವಜ್ರಕ್ಕಿಂತಲೂ ಗಡಸು, ಹಲವು ವೇಳೆ ಹೂವಿಗಿಂತಲೂ ಮೃದು. ಅವರ ಮನಸ್ಸನ್ನು ಅರಿಯುವುದು ಬಹಳ ಕಷ್ಟ.

ವರಮಂಧಗುಹಾಹಿತ್ವಂ ಶಿಲಾಂತಃಕೀಟತಾ ವರಂ ।
ವರಂ ಮರೌ ಪಂಗುಮೃಗೋ ನ ಗ್ರಾಮ್ಯಜನಸಂಗಮಃ ॥ ೧೧೯

—ಯೋಗವಾಸಿಷ್ಠ, ೬-೨೦

ಕಗ್ಗತ್ತಲೆಯ ಗುಹೆಯಲ್ಲಿ ಹಾವಾಗಿರುವುದು ಉತ್ತಮ, ಕಲ್ಲಿನ ನಡುವೆ ಹುಳುವಾಗಿರುವುದು ಉತ್ತಮ, ಮರಳ್ಗಾಡಿನಲ್ಲಿ ಕುಂಟುಮೃಗವಾಗಿರುವುದೂ ಉತ್ತಮ. ಆದರೆ ಕೀಳ್ಮಟ್ಟದ ಜನರ ಸಹವಾಸ ಮಾತ್ರ ಉತ್ತಮವಲ್ಲ.

**ವ್ಯಸನೇಽನುದ್ವಿಗ್ನಾಃ ವಿಭವೇಽಗರ್ವಿತಾ ಭಯೇ ಧೀರಾಃ ।**
**ಭವಂತ್ಯಭಿನ್ನಸ್ವಭಾವಾಃ ಸಮೇಷು ವಿಷಮೇಷು ಸತ್ಪುರುಷಾಃ ॥ ೧೨೦**

—ಹಾಲನ ಸಪ್ತಶತೀ, ೪-೮೦

ಸಂಕಟದಲ್ಲಿ ಬೇಸರಪಡುವುದಿಲ್ಲ, ಹಣವಿದ್ದರೆ ಗರ್ವಪಡುವುದಿಲ್ಲ, ಭಯದಲ್ಲಿ ಧೈರ್ಯ. ಹೀಗೆ ಸಜ್ಜನರು ಕಷ್ಟಸುಖಗಳಲ್ಲಿ ಒಂದೇ ಸ್ವಭಾವದಿಂದಿರುತ್ತಾರೆ.

**ವ್ರತನಿಯಮೈರ್ಬಕದಂಭಃ ಸಂವೃತಿನಿಯಮೈಶ್ಚ ಕೂರ್ಮಜೋ ದಂಭಃ ।**
**ನಿಭೃತಗತಿನಿನಯನನಿಯಮೈರ್ಘೋರೋ ಮಾರ್ಜಾರಜೋ ದಂಭಃ ॥ ೧೨೧**

—ಕಲಾವಿಲಾಸ, ೪೮

ಡಂಭಾಚಾರದವನು ವ್ರತನಿಯಮಗಳಿಂದ ತೋರಿಸುವ ದಂಭಕ್ಕೆ ಬಕದಂಭ ಎಂದು ಹೆಸರು. ಅದು ಬೇಡ, ಇದು ಬೇಡ ಎಂದು ಹಿಂಜರಿಯುವ ದಂಭಕ್ಕೆ ಕೂರ್ಮದಂಭವೆಂದು ಹೆಸರು. ಮೆಲ್ಲಗೆ ನಡೆಯುವುದು, ಕಣ್ಣನ್ನು ಅತ್ತಿತ್ತ ಚಲಿಸದೆ ಇರುವುದು- ಇತ್ಯಾದಿ ನಿಯಮಗಳಿಂದ ತೋರಿಸುವ ದಂಭಕ್ಕೆ ಘೋರವಾದ ಮಾರ್ಜಾಲದಂಭವೆಂದು ಹೆಸರು.

**ವಾಂಛಾ ಸಜ್ಜನಸಂಗತೌ ಪರಗುಣೇ ಪ್ರೀತಿರ್ಗುರೌ ನಮ್ರತಾ**
**ವಿದ್ಯಾಯಾಂ ವ್ಯಸನಂ ಸ್ವಯೋಷಿತಿ ರತಿರ್ಲೋಕಪವಾದಾದ್ಭಯಮ್ ।**
**ಭಕ್ತಿಃ ಶೂಲಿನಿ ಶಕ್ತಿರಾತ್ಮದಮನೇ ಸಂಸರ್ಗಮುಕ್ತಿಃ ಖಲೈಃ**
**ಏತೇ ಯೇಷು ವಸಂತಿ ನಿರ್ಮಲಗುಣಾಸ್ತೇಭ್ಯೋ ಮಹದ್ಭ್ಯೋನಮಃ ॥೧೨೨**

—ನೀತಿಶತಕ, ೭೯

ಸಜ್ಜನರ ಸಹವಾಸದಲ್ಲಿ ಆಸೆ, ಪರರ ಗುಣಗಳಲ್ಲಿ ಪ್ರೀತಿ, ಗುರುವಿನಲ್ಲಿ ವಿಧೇಯತೆ, ವಿದ್ಯೆಯಲ್ಲಿ ಆಸಕ್ತಿ, ತನ್ನ ಹೆಂಡತಿಯಲ್ಲಿ ಸುಖಪಡುವಿಕೆ, ಲೋಕಾಪವಾದದೆಸೆಯಿಂದ ಹೆದರಿಕೆ, ಶಿವನಲ್ಲಿ ಭಕ್ತಿ, ಮನಸ್ಸನ್ನು ನಿಗ್ರಹಿಸುವುದರಲ್ಲಿ ಶಕ್ತಿ, ದುರ್ಜನರೊಡನೆ ಸಹವಾಸ ತ್ಯಾಗ-ಈ ನಿರ್ಮಲಗುಣಗಳು ಯಾರಲ್ಲಿವೆಯೋ ಆ ಮಹಾತ್ಮರಿಗೆ ನಮಸ್ಕಾರ.

**ವಿತ್ತೇ ತ್ಯಾಗಃ ಕ್ಷಮಾ ಶಕ್ತೌ ದುಃಖೇ ದೈನ್ಯವಿಹೀನತಾ ।**
**ನಿರ್ದಂಭತಾ ಸದಾಚಾರೇ ಸ್ವಭಾವೋಽಯಂ ಮಹಾತ್ಮನಾಮ್ ॥ ೧೨೩**

—ಸುಭಾಷಿತರತ್ನಭಾಂಡಾಗಾರ

ಹಣವಿದ್ದರೆ ತ್ಯಾಗ ಮಾಡುವುದು, ಶಕ್ತಿಯಿದ್ದರೂ ತಾಳ್ಮೆಯಿಂದಿರುವುದು, ದುಃಖವಿದ್ದರೂ ಬೇಡುವುದಿಲ್ಲ, ಒಳ್ಳೆಯ ಆಚಾರವಿದ್ದರೂ ಜಂಭವಿಲ್ಲ-ಇದೇ ಮಹಾತ್ಮರ ಸ್ವಭಾವ.

**ವಿಪದಿ ಧೈರ್ಯಮಥಾಭ್ಯುದಯೇ ಕ್ಷಮಾ**
**ಸದಸಿ ವಾಕ್ಪಟುತಾ ಯುಧಿ ವಿಕ್ರಮಃ ।**
**ಯಶಸಿ ಚಾಭಿರುಚಿರ್ವ್ಯಸನಂ ಶ್ರುತೌ**
**ಪ್ರಕೃತಿಸಿದ್ಧಮಿದಂ ಹಿ ಮಹಾತ್ಮನಾಮ್ ।। ೧೨೪**

—ನೀತಿಶತಕ, ೬೧

ಕಷ್ಟದಲ್ಲಿ ಧೈರ್ಯವೂ, ಏಳಿಗೆಯಲ್ಲಿ ಕ್ಷಮಾಗುಣವೂ, ಸಭೆಯಲ್ಲಿ ವಾಕ್ಪಟುತ್ವವೂ, ಕೀರ್ತಿಯಲ್ಲಿ ಅಭಿರುಚಿಯೂ, ವಿದ್ಯೆಯಲ್ಲಿ ಆಸಕ್ತಿಯೂ-ಈ ಗುಣಗಳು ಮಹಾತ್ಮರಿಗೆ ಸ್ವಭಾವಸಿದ್ಧವಾದವು.

**ವಿಪ್ರಿಯಮಪ್ಯಾಕರ್ಣ್ಯ ಬ್ರೂತೇ ಪ್ರಿಯಮೇವ ಸರ್ವದಾ ಸುಜನಃ ।**
**ಕ್ಷಾರಂ ಪಿಬತಿ ಪಯೋಧೇಃ ವರ್ಷತ್ಯಂಭೋಧರೋ ಮಧುರಮಂಭಃ ।। ೧೨೫**

—ಸುಭಾಷಿತರತ್ನಭಾಂಡಾಗಾರ

ಕೆಟ್ಟಮಾತುಗಳನ್ನು ಕೇಳಿದರೂ ಸಹ ಸಜ್ಜನರು ಒಳ್ಳೆಯಮಾತನ್ನೇ ಯಾವಾಗಲೂ ಆಡುತ್ತಾರೆ. ಸಮುದ್ರದ ಉಪ್ಪುನೀರನ್ನು ಕುಡಿದ ಮೋಡಗಳು ಸಿಹಿಯಾದ ನೀರನ್ನು ಸುರಿಸುತ್ತವೆ.

**ಶರದಿ ನ ವರ್ಷತಿ ಗರ್ಜತಿ ವರ್ಷಾಸು ವರ್ಷತಿ ನಿಃಸ್ವನೋ ಮೇಘಃ ।**
**ನೀಚೋ ವದತಿ ಕುರುತೇ ನ ವದತಿ ಸುಜನಃ ಕರೋತ್ಯೇವ ।। ೧೨೬**

—ಸುಭಾಷಿತರತ್ನಭಾಂಡಾಗಾರ

ಶರದೃತುವಿನ ಮೋಡಗಳು ಗುಡುಗುತ್ತವೆ, ಮಳೆ ಸುರಿಸುವುದಿಲ್ಲ. ಮಳೆಗಾಲದಲ್ಲಿ ಶಬ್ದಮಾಡದೆ ಮಳೆ ಸುರಿಸುತ್ತವೆ. ಅದೇ ರೀತಿ ನೀಚನು ಮಾತನಾಡುತ್ತಾನೆ, ನಡೆದು ಕೊಳ್ಳುವುದಿಲ್ಲ. ಸತ್ಪುರುಷನು ಮಾತನಾಡದೆ ಕಾರ್ಯ ಮಾಡುತ್ತಾನೆ.

**ಶಶೀ ದಿವಸಧೂಸರೋ ಗಳಿತಯೌವನಾ ಕಾಮಿನೀ**
**ಸರೋ ವಿಗತವಾರಿಜಂ ಮುಖಮನಕ್ಷರಂ ಸ್ವಾಕೃತೇಃ ।**
**ಪ್ರಭುರ್ಧನಪರಾಯಣಃ ಸತತದುರ್ಗತಃ ಸಜ್ಜನೋ**
**ನೃಪಾಂಗಣಗತಃ ಖಲೋ ಮನಸಿ ಸಪ್ತ ಶಲ್ಯಾನಿ ಮೇ ।। ೧೨೭**

—ನೀತಿಶತಕ-೫೪

ಹಗಲಿನಲ್ಲಿ ಕಾಂತಿಹೀನನಾದ ಚಂದ್ರ, ಯೌವನ ಕಳೆದುಹೋದ ಹೆಂಗಸು, ಕಮಲಗಳಿಲ್ಲದ್ದ ಸರೋವರ, ಒಳ್ಳೆಯ ಸುಂದರನಾದವನ ವಿದ್ಯೆಯಿಲ್ಲದ ಮುಖ, ಧನಪರಾಯಣನಾದ ಯಜಮಾನ, ಯಾವಾಗಲೂ ಬಡವನಾದ ಸತ್ಪುರುಷ, ರಾಜಾಶ್ರಯ ಪಡೆದ ದುರ್ಜನ-ಈ ಏಳು ನನ್ನ ಮನಸ್ಸಿನಲ್ಲಿರುವ ನೋವುಗಳು.

**ಸಜ್ಜನಸ್ಯ ಹೃದಯಂ ನವನೀತಂ ಯದ್ವದಂತಿ ಕವಯಸ್ತದಲೀಕಂ ।**
**ಅನ್ಯದೇಹವಿಲಸತ್ಪರಿತಾಪಾತ್ ಸಜ್ಜನೋ ದ್ರವತಿ ನೋ ನವನೀತಮ್॥೧೨೮**

—ಸುಭಾಷಿತರತ್ನಭಾಂಡಾಗಾರ

ಕವಿಗಳು ಸತ್ಪುರುಷರ ಹೃದಯವನ್ನು ಬೆಣ್ಣೆಯೆಂದು ವರ್ಣಿಸುತ್ತಾರೆ. ಇದು ಸುಳ್ಳು. ಬೇರೆಯವರ ಕಷ್ಟವನ್ನು ಕಂಡು ಸಜ್ಜನರು ಕರಗುತ್ತಾರೆ. ಆದರೆ ಬೆಣ್ಣೆಯು ಕರುಗುವುದಿಲ್ಲ!

**ಸತ್ಸಂಗಶ್ಚ ವಿವೇಕಶ್ಚ ನಿರ್ಮಲಂ ನಯನದ್ವಯಂ ।**
**ಯಸ್ಯ ನಾಸ್ತಿ ನರಃ ಸೋಽಂಧಃ ಕಥಂ ನ ಸ್ಯಾದಮಾರ್ಗಗಃ ॥ ೧೨೯**

—ಗರುಡಪುರಾಣ, ೧೬-೫೭

ಒಳ್ಳೆಯವರೊಡನೆ ಸೇರುವುದು, ವಿವೇಕ ಇವೆರಡು ಸ್ವಚ್ಛವಾದ ಎರಡು ಕಣ್ಣುಗಳಂತೆ. ಇವುಗಳಿಲ್ಲದವನು ಕುರುಡ. ಅಂತಹವನು ಕೆಟ್ಟದಾರಿ ತುಳಿದರೆ ಆಶ್ಚರ್ಯವೇನು?

**ಸರ್ಪಾಣಾಂ ಚ ಖಲಾನಾಂ ಚ ಪರದ್ರವ್ಯಾಪಹಾರಿಣಾಂ ।**
**ಅಭಿಪ್ರಾಯಾ ನ ಸಿಧ್ಯಂತಿ ತೇನೇದಂ ವರ್ತತೇ ಜಗತ್ ॥ ೧೩೦**

—ಪಂಚತಂತ್ರ, ಮಿತ್ರಭೇದ-೧೬೯

ಹಾವುಗಳು, ದುಷ್ಟರು, ಮತ್ತೊಬ್ಬರ ಒಡವೆಯನ್ನಪಹರಿಸುವವರು, ಇವರ ಅಭಿಪ್ರಾಯಗಳು ಫಲಿಸುವುದಿಲ್ಲ. ಆದುದರಿಂದಲೇ ಈ ಪ್ರಪಂಚ ಇನ್ನೂ ಉಳಿದಿದೆ.

**ಸ್ಮರಂತಿ ಸುಕೃತಾನ್ಯೇವ ನ ವೈರಾಣಿ ಕೃತಾನ್ಯಪಿ ।**
**ಸಂತಃ ಪರಾರ್ಥಂ ಕುರ್ವಾಣಾ ನಾವೇಕ್ಷಂತೇ ಪ್ರತಿಕ್ರಿಯಾಮ್ ॥ ೧೩೧**

—ಮಹಾಭಾರತ, ಸಭಾ. ೭೩-೭

ಸಜ್ಜನರು ಒಳ್ಳೆಯದನ್ನು ಮಾತ್ರ ಸ್ಮರಿಸಿಕೊಳ್ಳುತ್ತಾರೆ. ಕೆಟ್ಟದನ್ನು ಮಾಡಿದ್ದರೂ ನೆನಪಿಗೆ ತಂದುಕೊಳ್ಳುವುದಿಲ್ಲ. ಅವರು ಪರೋಪಕಾರಕ್ಕಾಗಿ ಕೆಲಸ ಮಾಡುವರೇ ಹೊರತು, ಪ್ರತ್ಯುಪಕಾರವನ್ನು ಬಯಸುವುದಿಲ್ಲ.

**ಸ್ವಭಾವಂ ನೈವ ಮುಂಚಂತಿ ಸಂತಃ ಸಂಸರ್ಗತೋಽಸತಾಂ ।**
**ನ ತ್ಯಜಂತಿ ರುತಂ ಮಂಜು ಕಾಕಸಂಸರ್ಗತಃ ಪಿಕಾಃ ॥ ೧೩೨**

—ಸುಭಾಷಿತರತ್ನಸಮುಚ್ಚಯ

ಸಜ್ಜನರು ದುಷ್ಟರ ಸಹವಾಸದಲ್ಲಿದ್ದರೂ ತಮ್ಮ ಸ್ವಭಾವವನ್ನು ಬಿಡುವುದಿಲ್ಲ. ಕಾಗೆಗಳ ಜೊತೆ ಇದ್ದರೂ ಕೋಗಿಲೆಗಳು ಇಂಪಾದ ಧ್ವನಿಯನ್ನು ತ್ಯಜಿಸುವುದಿಲ್ಲ.

**ಸಂಗಃ ಸರ್ವಾತ್ಮನಾ ತ್ಯಾಜ್ಯಃ ಸಚೇತ್ತ್ಯಕ್ತುಂ ನ ಶಕ್ಯತೇ ।**
**ಸ ಸದ್ಭಿಃ ಸಹ ಕರ್ತವ್ಯಃ ಸತಾಂ ಸಂಗೋ ಹಿ ಭೇಷಜಮ್ ॥ ೧೩೩**

—ಹಿತೋಪದೇಶ, ಸಂಧಿ-೯೩

ಸಂಗವನ್ನು ಪೂರ್ಣವಾಗಿ ತ್ಯಜಿಸಬೇಕು. ಹಾಗೆ ತ್ಯಜಿಸುವುದಕ್ಕೆ ಶಕ್ಯವಾಗದೇ ಹೋದರೆ ಸಜ್ಜನರ ಜೊತೆಗೆ ಸೇರಬೇಕು. ಸಜ್ಜನರ ಸಹವಾಸವೇ ಔಷಧವಷ್ಟೆ.

**ಸಂತ ಏವ ಸತಾಂ ನಿತ್ಯಮಾಪತ್ತರಣಹೇತವಃ ।**
**ಗಜಾನಾಂ ಪಂಕಮಗ್ನಾನಾಂ ಗಜಾ ಏವ ಧುರಂಧರಾಃ ॥ ೧೩೪**

—ಹಿತೋಪದೇಶ, ಮಿತ್ರಲಾಭ-೧೫೦

ಸಜ್ಜರನ್ನು ಕಷ್ಟಗಳಿಂದ ಪಾರುಮಾಡಲು ಕಾರಣರಾದವರು ಸಜ್ಜನರೇ. ಕೆಸರಿನಲ್ಲಿ ಸಿಕ್ಕಿಹಾಕಿಕೊಂಡ ಆನೆಗಳನ್ನು ಮೇಲೆಳೆಯಬಲ್ಲವು ಆನೆಗಳೇ ತಾನೇ ?

**ಸಂತಃ ಸಚ್ಚರಿತೋದಯವ್ಯಸನಿನಃ ಪ್ರಾದುರ್ಭವದ್ಯಂತ್ರಣಾಃ**
**ಸರ್ವತ್ರೈವ ಜನಾಪವಾದಚಕಿತಾ ಜೀವಂತಿ ದುಃಖಂ ಸದಾ ।**
**ಅವ್ಯುತ್ಪನ್ನಮತಿಃ ಕೃತೇನ ನ ಸತಾ ನೈವಾಸತಾ ವ್ಯಾಕುಲೋ**
**ಯುಕ್ತಾಯುಕ್ತವಿವೇಕಶೂನ್ಯಹೃದಯೋ ಧನ್ಯೋ ಜನಃ ಪ್ರಾಕೃತಃ ॥ ೧೩೫**

—ಕುವಲಯಾನಂದ

ಸಜ್ಜನರು ತಮ್ಮ ಸಚ್ಚಾರಿತ್ರವು ಪ್ರಕಾಶವಾಗಿರಲೆಂದು ಚಿಂತಿಸುತ್ತ ಇರುತ್ತಾರೆ. ಅವರು ನಿಯಮಕ್ಕೆ ಬದ್ಧರಾಗಿರುತ್ತಾರೆ. ಜನಾಪವಾದ ಬಂದೀತೆಂದು ಎಲ್ಲೆಡೆಯೂ ಹೆದರುತ್ತ, ಸದಾ ದುಃಖದಿಂದ ಜೀವಿಸುತ್ತಾರೆ. ಮೂರ್ಖನು, ತಾನು ಮಾಡಿದ್ದು ಸರಿಯೇ ತಪ್ಪೇ ಎಂಬ ವಿಚಾರವೇ ಇಲ್ಲದೆ ನಿಶ್ಚಿಂತನಾಗಿರುತ್ತಾನೆ. ಯುಕ್ತಾಯುಕ್ತಗಳ ಜ್ಞಾನವಿಲ್ಲದೆ ಅವಿವೇಕಿಯಾಗಿರುವ ಆ ಮೂಢನೇ ಧನ್ಯ!

**ಸಂಪತ್ತಿಃ ಕಿಂಪಚಾನಾನಾಂ ಸಂಪ್ರಾಪ್ತಾ ಕಾಪಥೇನ ಯಾ ।**
**ನರಕಾನುಭವೋದರ್ಕಾ ನ ಸಾ ಲಕ್ಷ್ಮ್ಯಾಃ ಕೃಪಾಫಲಮ್ ॥ ೧೩೬**

—ವಿಶ್ವಗುಣಾದರ್ಶ-೪೨೪

ಜಿಪುಣರಿಗೆ ದುರ್ಮಾರ್ಗದಿಂದ ಬಂದ ಐಶ್ವರ್ಯವು ಮುಂದೆ ನರಕವನ್ನು ಕೊಡುತ್ತದೆ. ಆ ಐಶ್ವರ್ಯವು ಲಕ್ಷ್ಮಿಯ ಕೃಪಾಫಲವಲ್ಲ.

**ಸಂಪತ್ಸು ಮಹತಾಂ ಚಿತ್ತಂ ಭವತ್ಯುತ್ಪಲಕೋಮಲಮ್ ।**
**ಆಪತ್ಸು ಚ ಮಹಾಶೈಲಶಿಲಾಸಂಘಾತಕರ್ಕಶಮ್ ॥ ೧೩೭**

—ನೀತಿಶತಕ-೬೪

ಮಹಾತ್ಮರ ಮನಸ್ಸು ಐಶ್ವರ್ಯ ಬಂದಾಗ ಕನ್ನೈದಿಲೆಯಂತೆ ಮೃದುವಾಗಿರುತ್ತದೆ. ಕಷ್ಟಗಳು ಬಂದಾಗ ದೊಡ್ಡ ಬೆಟ್ಟದಮೇಲಿರುವ ಕಲ್ಲುಗಳ ರಾಶಿಯಂತೆ ಕಠಿಣವಾಗಿರುತ್ತದೆ.

**ಸಂಪತ್ತೌ ಕರ್ಕಶಂ ಚಿತ್ತಂ ಖಲಸ್ಯಾಪದಿ ಕೋಮಲಂ ।**
**ಶೀತಲಂ ಕಠಿನಂ ಪ್ರಾಯಸ್ತಪ್ತಂ ಮೃದು ಭವತ್ಯಯಃ ॥ ೧೩೮**

—ದೃಷ್ಟಾಂತಕಲಿಕಾ-೭೯

ಕೆಟ್ಟವನ ಮನಸ್ಸು ಸಂಪತ್ತಿದ್ದಾಗ ಕರ್ಕಶ, ಆಪತ್ತು ಬಂದಾಗ ಕೋಮಲ. ತಣ್ಣಗಿರುವಾಗ ಕಬ್ಬಿಣ ಕಠೋರ, ಬಿಸಿಯಾದಾಗ ಮೃದು.

**ಸಂಯತಂ ಕೋಮಲಂ ಚಿತ್ತಂ ಸಾಧೋರಾಪದಿ ಕರ್ಕಶಂ ।**
**ಸುಕುಮಾರಂ ಮಧೌ ಪತ್ರಂ ತರೋಃ ಸ್ಯಾತ್ ಕಠಿನಂ ಶುಚೌ ॥ ೧೩೯**

—ದೃಷ್ಟಾಂತಕಲಿಕಾ-೩೭

ಸತ್ಪುರುಷನ ಮನಸ್ಸು ಸಹಜ ಕೋಮಲವಾಗಿರುತ್ತದೆ. ಆದರೆ ಆಪತ್ಕಾಲದಲ್ಲಿ ಕಠಿಣವಾಗುತ್ತದೆ. ವಸಂತಕಾಲದಲ್ಲಿ ಸುಕುಮಾರವಾಗಿರುವ ಮರದ ಚಿಗುರೆಲೆ ಬೇಸಿಗೆಯಲ್ಲಿ ಒರಟಾಗುತ್ತದೆ.

**ಸಹಸಿದ್ಧಮಿದಂ ಮಹತಾಂ ಧನೇಷ್ವನಾಸಾಸ ಗುಣೇಷು ಕೃಪಣತ್ವಂ ।**
**ಪರದುಃಖೇ ಕಾತರತಾ ಮಹಚ್ಚ ಧೈರ್ಯಂ ಸ್ವದುಃಖೇಷು ॥ ೧೪೦**

—ಸುಭಾಷಿತರತ್ನಭಾಂಡಾಗಾರ

ಹಣದಲ್ಲಿ ಆಸೆಯಿಲ್ಲ. ಗುಣಗಳನ್ನು ಸಂಗ್ರಹಿಸುವುದರಲ್ಲಿ ಲೋಭ. ಇತರರ ಕಷ್ಟದಲ್ಲಿ ಮರುಕ. ತಮಗೆ ಸಂಕಟ ಬಂದಾಗ ಧೈರ್ಯ-ಈ ಗುಣಗಳು ಮಹಾತ್ಮರಿಗೆ ಸ್ವಾಭಾವಿಕ.

**ಸಾಧೂನಾಂ ದರ್ಶನಂ ಪುಣ್ಯಂ ತೀರ್ಥಭೂತಾ ಹಿ ಸಾಧವಃ ।**
**ತೀರ್ಥಂ ಫಲತಿ ಕಾಲೇನ ಸದ್ಯಃ ಸಾಧುಸಮಾಗಮಃ ॥ ೧೪೧**

—ಸುಭಾಷಿತರತ್ನಸಮುಚ್ಚಯ

ಸಾಧುಜನರ ದರ್ಶನ ಪುಣ್ಯಕರ. ಅವರು ತೀರ್ಥಕ್ಷೇತ್ರವಿದ್ದಂತೆ. ಆದರೆ ತೀರ್ಥಕ್ಷೇತ್ರವು ಕಾಲಾಂತರದಲ್ಲಿ ಫಲವನ್ನು ಕೊಡುತ್ತದೆ. ಸಾಧುಸಮಾಗಮವು ಕೂಡಲೇ ಒಳ್ಳೆಯ ಫಲವನ್ನು ಕೊಡುತ್ತದೆ.

**ಸಾಧೋಃ ಪರುಷಿತಸ್ಯಾಪಿ ಮನೋ ನಾಯಾತಿ ವಿಕ್ರಿಯಾಂ ।**
**ನ ಹಿ ತಾಪಯಿತುಂ ಶಕ್ಯಂ ಸಾಗರಾಂಭಸ್ತೃಣೋಲ್ಕಯಾ ॥** ೧೪೨

—ಹಿತೋಪದೇಶ, ಮಿತ್ರಲಾಭ-೬೩

ಕ್ರೂರವಾದ ಮಾತುಗಳಿಂದ ನೋಯಿಸಲ್ಪಟ್ಟಾಗ್ಗೂ ಸಾಧುವಿನ ಮನಸ್ಸು ವಿಕಾರವನ್ನು ಹೊಂದುವುದಿಲ್ಲ. ಹುಲ್ಲಿನ ದೊಂದೆಯು ಬೆಂಕಿಯಿಂದ ಸಾಗರದ ನೀರನ್ನು ಕಾಯಿಸುವುದಕ್ಕಾಗುವುದಿಲ್ಲವಷ್ಟೇ?

**ಸ್ಥಿರಾ ಶೈಲೀ ಗುಣವತಾಂ ಖಲಬುದ್ಧ್ಯಾ ನ ಬಾಧ್ಯತೇ ।**
**ರತ್ನದೀಪಸ್ಯ ಹಿ ಶಿಖಾ ವಾತ್ಯಯಾಪಿ ನ ನಾಶ್ಯತೇ ॥** ೧೪೩

—ಕುವಲಯಾನಂದ

ಗುಣಶಾಲಿಗಳ ಸ್ಥಿರವಾದ ನಡತೆಯನ್ನು ದುರ್ಜನರ ಬುದ್ಧಿಯು ಕೆಡಿಸಲಾರದು. ರತ್ನದೀಪದ ಕಾಂತಿಯನ್ನು ಬಿರುಗಾಳಿ ಸಹ ನಾಶಗೊಳಿಸಲಾರದು.

**ಸುಜನಾಃ ಪರೋಪಕಾರಂ ಶೂರಾಃ ಶಸ್ತ್ರಂ ಧನಂ ಕೃಪಣಾಃ ।**
**ಕುಲವತ್ಯೋ ಮಂದಾಕ್ಷಂ ಪ್ರಾಣಾತ್ಯಯ ಏವ ಮುಂಚಂತಿ ॥**೧೪೪

—ರಸಗಂಗಾಧರ

ಸತ್ಪುರುಷರು ಪರೋಪಕಾರವನ್ನೂ, ಶೂರರು ಶಸ್ತ್ರವನ್ನೂ, ಜಿಪುಣರು ಧನವನ್ನೂ, ಕುಲಸ್ತ್ರೀಯರು ನಾಚಿಕೆಯನ್ನೂ, ಪ್ರಾಣ ಹೋದಾಗ ಮಾತ್ರ ತ್ಯಜಿಸುತ್ತಾರೆ.

**ಸುಜನೋ ನ ಯಾತಿ ವೈರಂ ಪರಹಿತಬುದ್ಧಿರ್ವಿನಾಶಕಾಲೇಽಪಿ ।**
**ಛೇದೇಽಪಿ ಚಂದನತರುಃ ಸುರಭಯತಿ ಮುಖಂ ಕುಠಾರಸ್ಯ ॥** ೧೪೫

—ಸುಭಾಷಿತಸುಧಾನಿಧಿ

ಇತರರಿಗೆ ಒಳ್ಳೆಯದಾಗಲೆಂದು ಬಯಸುವ ಒಳ್ಳೆಯವನು ನಾಶವೊದಗುವ ಸಮಯದಲ್ಲಿಯೂ ದ್ವೇಷವನ್ನು ಮಾಡುವುದಿಲ್ಲ. ಶ್ರೀಗಂಧದಮರ ಕತ್ತರಿಸಿದಾಗಲೂ ಕೊಡಲಿಯ ಬಾಯನ್ನು ಸುವಾಸನೆಯುಳ್ಳದ್ದನ್ನಾಗಿ ಮಾಡುತ್ತದೆ.

**ಸ್ಪೃಶನ್ನಪಿ ಗಜೋ ಹಂತಿ ಜಿಘ್ರನ್ನಪಿ ಭುಜಂಗಮಃ ।**
**ಹಸನ್ನಪಿ ನೃಪೋ ಹಂತಿ ಮಾನಯನ್ನಪಿ ದುರ್ಜನಃ ॥** ೧೪೬

—ಹಿತೋಪದೇಶ, ವಿಗ್ರಹ-೧೪

ಕೇವಲ ಸ್ಪರ್ಶದಿಂದಲೂ ಆನೆ ಕೊಲ್ಲುತ್ತದೆ. ಸರ್ಪವು ಮೂಸಿ ನೋಡುವುದ ರಿಂದಲೂ, ರಾಜನು ಮಂದಹಾಸ ಬೀರುತ್ತಲೂ, ಕೊಲ್ಲುವರು. ಹಾಗೆಯೇ ದುರ್ಜನ ನಾದವನಿಗೆ ಗೌರವ ತೋರಿದರೂ ಅವನು ಕೊಲ್ಲುವನು.

**ಸ್ನೇಹಚ್ಛೇದೇऽಪಿ ಸಾಧೂನಾಂ ಗುಣೋ ನಾಯಾತಿ ವಿಕ್ರಿಯಾಂ ।**
**ಭಂಗೇऽಪಿ ಹಿ ಮೃಣಾಲಾನಾಂ ಅನುಬಧ್ನಂತಿ ತಂತವಃ ॥ ೧೪೭**

—ಹಿತೋಪದೇಶ, ಮಿತ್ರಲಾಭ-೬೯

ಸಜ್ಜನನೊಡನೆ ಸ್ನೇಹ ಮುರಿದುಹೋದರೂ ಅವರ ಗುಣಗಳು ಯಾವ ಬದಲಾವಣೆಯನ್ನೂ ಹೊಂದುವುದಿಲ್ಲ. ತಾವರೆದಂಟುಗಳು ಮುರಿದರೂ ಒಳಗಿನ ಎಳೆಗಳು ಕೂಡಿಕೊಂಡೇ ಇರುತ್ತವೆ.

**ಹೀಯತೇ ಹಿ ಮತಿಸ್ತಾತ ಹೀನೈಃ ಸಹ ಸಮಾಗಮಾತ್ ।**
**ಸಮೈಶ್ಚ ಸಮತಾಮೇತಿ ವಿಶಿಷ್ಟೈಶ್ಚ ವಿಶಿಷ್ಟತಾಮ್ ॥ ೧೪೮**

—ಹಿತೋಪದೇಶ-೨೭

ತನಗಿಂತ ಹೀನರ ಜೊತೆ ಸಹವಾಸ ಮಾಡಿದರೆ ಬುದ್ಧಿ ಕುಂದುತ್ತದೆ; ತನಗೆ ಸಮರಾದವರೊಡನೆ ಸೇರುವುದರಿಂದ ಸಮವಾಗಿರುತ್ತದೆ. ಆದರೆ ಅಧಿಕರೊಡನೆ ಸೇರುವುದರಿಂದ ಬುದ್ಧಿ ಹೆಚ್ಚುತ್ತದೆ.



## ೬. ಮಿತ್ರ-ಶತ್ರು

**ಅತ ಆತ್ಯಂತಿಕಂ ಕ್ಷೇಮಂ ಪೃಚ್ಛಾಮೋ ಭವತೋಽನಘಾಃ ।**
**ಸಂಸಾರೇಽಸ್ಮಿನ್ ಕ್ಷಣಾರ್ಧೋಽಪಿ ಸತ್ಸಂಗಃ ಶೇವಧಿರ್ನೃಣಾಮ್ ॥ ೧**

—ಭಾಗವತ, ೧೧-೨-೬೦

ಆದುದರಿಂದ ಅತ್ಯಂತ ಕ್ಷೇಮಕರವಾದುದನ್ನು ಕೇಳಿ ತಿಳಿಯಲಪೇಕ್ಷಿಸುತ್ತೇವೆ. ಈ ಸಂಸಾರದಲ್ಲಿ ಸತ್ಪುರುಷರ ಸಹವಾಸವು ಒಂದು ಅರ್ಧಕ್ಷಣವಿದ್ದರೂ ಕೂಡ ಅದು ಮಾನವರಿಗೆ ಒಂದು ನಿಧಿಯಿದ್ದಂತೆ.

**ಅವಜ್ಞೋಪೇಕ್ಷಿತೇ ಪ್ರೇಮ್ಣಿ ಸಂಧಾನಂ ದುಷ್ಕರಂ ಪುನಃ ।**
**ಜತುಲೇಶೇನ ಸಂಶ್ಲೇಷಃ ಕಥಂ ನು ಸ್ಫುಟಿತೇ ಮಣೌ ॥ ೨**

—ರಾಮಾಯಣಮಂಜರೀ, ಕಿಷ್ಕಿಂಧಾ ೧೦೭

ಅವಮಾನದಿಂದ ಉಪೇಕ್ಷಿತವಾದ ಪ್ರೇಮವು ಮತ್ತೆ ಬೆಸುಗೆಯಾಗುವುದು ಕಷ್ಟ. ಒಡೆದ ಮಣಿಯನ್ನು ಅರಗಿನಿಂದ ಕೂಡಿಸಲಾಗುವುದಿಲ್ಲ.

**ಅಸಹಾಯಃ ಸಮರ್ಥೋಽಪಿ ತೇಜಸ್ವೀ ಕಿಂ ಕರಿಷ್ಯತಿ ।**
**ನಿರ್ವಾತೇ ಜ್ವಲಿತೋ ವಹ್ನಿಃ ಸ್ವಯಮೇವ ಪ್ರಶಾಮ್ಯತಿ ॥ ೩**

—ಪಂಚತಂತ್ರ, ಕಾಕೋಲೂಕೀಯ-೫೫

ಸಮರ್ಥನಾಗಿದ್ದರೂ ಒಬ್ಬ ತೇಜಸ್ವಿಯು ಸಹಾಯವಿಲ್ಲದಿದ್ದರೆ ಏನನ್ನು ತಾನೆ ಮಾಡಬಲ್ಲ? ಉರಿಯುವ ಬೆಂಕಿ ಗಾಳಿಯ ಸಹಾಯವಿಲ್ಲದಿದ್ದಾಗ ತಾನಾಗಿಯೇ ಆರಿ ಹೋಗುತ್ತದೆ.

**ಅಸಹಾಯಃ ಪುಮಾನೇಕಃ ಕಾರ್ಯಾಂತಂ ನಾಧಿಗಚ್ಛತಿ ।**
**ತುಷೇಣಾಪಿ ವಿನಿರ್ಮುಕ್ತಸ್ತಂಡುಲೋ ನ ಪ್ರರೋಹತಿ ॥ ೪**

—ಸಮಯೋಚಿತಪದ್ಯಮಾಲಿಕಾ

ಇತರ ಸಹಾಯವಿಲ್ಲದೆ ಮನುಷ್ಯನು ಕಾರ್ಯಸಿದ್ಧಿಯನ್ನು ಪಡೆಯಲಾರ. ಹೊಟ್ಟಿನ ಸಹಾಯವಿಲ್ಲದಿದ್ದರೆ ಬರಿಯ ಅಕ್ಕಿ ಮೊಳೆಯುವುದಿಲ್ಲ.

**ಅಹೋ ನೃಜನ್ಮಾಖಿಲಜನ್ಮಶೋಭನಂ**
**ಕಿಂ ಜನ್ಮಭಿಸ್ತ್ವಪರೈರಪ್ಯಮುಷ್ಮಿನ್ ।**
**ನ ಯದ್ಧೃಷೀಕೇಶಯಶಃಕೃತಾತ್ಮನಾಂ**
**ಮಹಾತ್ಮನಾಂ ವಃ ಪ್ರಚುರಃ ಸಮಾಗಮಃ॥ ೫**

—ಭಾಗವತ-೫-೧೩-೨೧

ಆಹಾ! ಇತರ ಎಲ್ಲ ಜನ್ಮಗಳಿಗಿಂತಲೂ ನರಜನ್ಮ ಅತ್ಯುತ್ತಮವಾದದ್ದು. ನರಜನ್ಮದಲ್ಲಿಯೂ ಪರಮಾತ್ಮನಲ್ಲಿ ನೆಟ್ಟ ಮನಸ್ಸುಳ್ಳ ಮಹಾತ್ಮರೊಡನೆ ಹೆಚ್ಚಿನ ಸಹವಾಸವಾಗದಿದ್ದಲ್ಲಿ, ಆಗಲೂ ನಿಮ್ಮ ಮನುಷ್ಯಜನ್ಮ ವ್ಯರ್ಥವೇ.

**ಆಪತ್ಕಾಲೇ ತು ಸಂಪ್ರಾಪ್ತೇ ಯನ್ಮಿತ್ರಂ ಮಿತ್ರಮೇವ ತತ್ ।**
**ವೃದ್ಧಿಕಾಲೇ ತು ಸಂಪ್ರಾಪ್ತೇ ದುರ್ಜನೋऽಪಿ ಸುಹೃದ್ಭವೇತ್ ೬**

—ಪಂಚತಂತ್ರ, ಮಿತ್ರಸಂಪ್ರಾಪ್ತಿ-೧೧೮

ಕಷ್ಟಕಾಲ ಒದಗಿದಾಗ ಯಾರು ಸ್ನೇಹಿತನಾಗಿರುವರೋ ಅವನೇ ಮಿತ್ರ. ಏಳಿಗೆಯ ಕಾಲ ಬಂದಾಗ ಕೆಟ್ಟವನೂ ಸಹ ಸ್ನೇಹಿತನಾಗುವನು.

**ಆಪನ್ನಾಶಾಯ ವಿಬುಧೈಃ ಕರ್ತವ್ಯಾ ಸುಹೃದೋऽಮಲಾಃ ।**
**ನ ತರತ್ಯಾಪದಂ ಕಶ್ಚಿದ್ಯೋऽತ್ರ ಮಿತ್ರವಿವರ್ಜಿತಃ ॥ ೭**

—ಪಂಚತಂತ್ರ, ಮಿತ್ರಸಂಪ್ರಾಪ್ತಿ-೧೮೧

ತಮ್ಮ ಕಷ್ಟಗಳ ಪರಿಹಾರಕ್ಕಾಗಿ ತಿಳಿದವರು ಒಳ್ಳೆಯ ಸ್ನೇಹಿತರನ್ನು ಮಾಡಿಕೊಳ್ಳಬೇಕು. ಯಾರಿಗೆ ಸ್ನೇಹಿತರೇ ಇಲ್ಲವೋ ಅಂಥವನು ಯಾರೂ ಕಷ್ಟದಿಂದ ಪಾರಾಗಲಾರ.

**ಆಪತ್ಸು ಮಿತ್ರಂ ಜಾನೀಯಾತ್ ಯುದ್ಧೇ ಶೂರಂ ಧನೇ ಶುಚಿಂ ।**
**ಭಾರ್ಯಾಂ ಕ್ಷೀಣೇಷು ವಿತ್ತೇಷು ವ್ಯಸನೇಷು ಚ ಬಾಂಧವಾನ್ ॥ ೮**

—ಹಿತೋಪದೇಶ, ಮಿತ್ರಲಾಭ-೫೪

ಕಷ್ಟದಲ್ಲಿ ಸ್ನೇಹಿತನನ್ನೂ, ಯುದ್ಧದಲ್ಲಿ ಶೂರನನ್ನೂ, ಹಣ ಬಂದಾಗ ಪ್ರಾಮಾಣಿಕನನ್ನೂ, ಬಡತನದಲ್ಲಿ ಹೆಂಡತಿಯನ್ನೂ, ಕಷ್ಟಬಂದಾಗ ಬಂಧುಗಳನ್ನೂ ಪರೀಕ್ಷಿಸಿ ತಿಳಿಯಬೇಕು.

**ಪಕ್ವಂ ಪಕ್ವಮಿವಾರಾಮಾತ್ ಫಲಂ ರಾಜ್ಯಾದವಾಪ್ನುಯಾತ್ ।**
**ಆತ್ಮಚ್ಛೇದಭಯಾದಾಮಂ ವರ್ಜಯೇತ್ಕೋಪಕಾರಕಂ ॥ ೯**

—ಕೌಟಿಲ್ಯ

ತೋಟದಿಂದ ಮಾಗಿದಹಣ್ಣುಗಳನ್ನೇ ಸಂಗ್ರಹಿಸುವಂತೆ ರಾಜ್ಯದಿಂದಲೂ ಉತ್ತಮವಾದುದನ್ನೇ ಆರಿಸಿಕೊಳ್ಳಬೇಕು. ಹಸಿಯದು ತನಗೇ ನಾಶಕಾರಕವಾದುದರಿಂದ ಅದನ್ನು ಬಿಡಬೇಕು.

**ಉತ್ಸವೇ ವ್ಯಸನೇ ಚೈವ ದುರ್ಭಿಕ್ಷೇ ಶತ್ರುನಿಗ್ರಹೇ ।**
**ರಾಜದ್ವಾರೇ ಶ್ಮಶಾನೇ ಚ ಯಸ್ತಿಷ್ಠತಿ ಸ ಬಾಂಧವಃ ॥ ೧೦**

—ಸಮಯೋಚಿತಪದ್ಯಮಾಲಿಕಾ

ಸಂಪತ್ತಿನಲ್ಲಿ, ವಿಪತ್ತಿನಲ್ಲಿ, ಬರಗಾಲದಲ್ಲಿ, ಶತ್ರುವನ್ನು ಗೆಲ್ಲುವ ಪ್ರಸಂಗದಲ್ಲಿ, (ದಂಡನೆಯ ಸಂದರ್ಭ ಬಂದಾಗ) ರಾಜದ್ವಾರದಲ್ಲಿ ಮತ್ತು ಶ್ಮಶಾನದಲ್ಲಿ ಯಾವನು ಜೊತೆಗೆ ಇರುವನೋ ಅವನೇ ನೆಂಟ.

**ಉತ್ತಿಷ್ಠಮಾನಸ್ತು ಪರೋ ನೋಪೇಕ್ಷ್ಯಃ ಪಥ್ಯಮಿಚ್ಛತಾ ।**
**ಸಮೌ ಹಿ ಶಿಷ್ಟೈರಾಮ್ನಾತೌ ವರ್ತ್ಸ್ಯಂತಾವಾಮಯಃ ಸ ಚ ॥ ೧೧**

—ಶಿಶುಪಾಲವಧ, ೨-೧೦

ಹಿತವನ್ನು ಬಯಸುವವನು ಬಲಿಷ್ಠನಾಗುತ್ತಿರುವ ಶತ್ರುವನ್ನು ಉದಾಸೀನ ಮಾಡಬಾರದು. ಹೆಚ್ಚುತ್ತಿರುವ ರೋಗ ಮತ್ತು ಹೆಚ್ಚುತ್ತಿರುವ ಶತ್ರು ಇವರಿಬ್ಬರೂ ಕೆಡಕುಂಟು ಮಾಡುವುದರಲ್ಲಿ ಸಮವೆಂದು ಉತ್ತಮರು ತಿಳಿಯುತ್ತಾರೆ.

**ಉಪಕಾರಾಚ್ಚ ಲೋಕಾನಾಂ ನಿಮಿತ್ತಾನ್ಮೃಗಪಕ್ಷಿಣಾಂ ।**
**ಭಯಾಲ್ಲೋಭಾಚ್ಚ ಮೂರ್ಖಾಣಾಂ ಮೈತ್ರೀ ಸ್ಯಾದ್ದರ್ಶನಾತ್ಸತಾಮ್॥೧೨**

—ಪಂಚತಂತ್ರ, ಮಿತ್ರಸಂಪ್ರಾಪ್ತಿ-೩೭

ಉಪಕಾರ ಮಾಡುವುದರಿಂದ ಸಾಮಾನ್ಯಜನರ ಸ್ನೇಹವಾಗುವುದು. ಪ್ರಾಣಿಗಳ ಮತ್ತು ಪಕ್ಷಿಗಳ ಸ್ನೇಹ ಒಂದು ಕಾರಣದಿಂದ ಆಗುವುದು. ಭಯದಿಂದಾಗಲೀ, ಆಸೆ ಯಿಂದಾಗಲೀ ಮೂರ್ಖರ ಸ್ನೇಹವಾದರೆ, ಸಜ್ಜನರ ಸ್ನೇಹ ದರ್ಶನದಿಂದಲೇ ಆಗುವುದು.

**ಉಪಚಾರಃ ಕರ್ತವ್ಯೋ ಯಾವದನುತ್ಪನ್ನಸೌಹೃದಃ ಪುರುಷಃ ।**
**ಉತ್ಪನ್ನಸೌಹೃದಾನಾಮುಪಚಾರಃ ಕೈತವಂ ಭವತಿ ॥ ೧೩**

—ಭೋಜಪ್ರಬಂಧ

ಸ್ನೇಹ ಉಂಟಾಗುವವರೆಗೆ ಜನರನ್ನು ಉಪಚರಿಸಬೇಕಾಗುತ್ತದೆ. ಸ್ನೇಹ ಉಂಟಾದ ಮೇಲೆ ಮಾಡುವ ಉಪಚಾರ ದಂಬಾಚಾರವಾಗುತ್ತದೆ.

**ಏಕ ಏವ ಸುಹೃದ್ಧರ್ಮೋ ನಿಧನೇಽಪ್ಯನುಯಾತಿ ಯಃ ।**
**ಶರೀರೇಣ ಸಮಂ ನಾಶಂ ಸರ್ವಮನ್ಯದ್ಧಿ ಗಚ್ಛತಿ ॥ ೧೪**

—ಮನುಸ್ಮೃತಿ, ೮-೧೭

ಧರ್ಮ ಒಂದೇ ನಿಜವಾದ ಮಿತ್ರ. ಸಾವಿನಲ್ಲಿಯೂ ಸಹ ಜೊತೆಯಲ್ಲಿರುತ್ತದೆ. ಉಳಿದ ಎಲ್ಲವೂ ಶರೀರದೊಡನೆಯೇ ನಾಶವಾಗುತ್ತವೆ.

**ಕಾರಣಾನ್ಮಿತ್ರತಾಂ ಯಾತಿ ಕಾರಣಾದೇತಿ ಶತ್ರುತಾಂ ।**
**ತಸ್ಮಾನ್ಮಿತ್ರತ್ವಮೇವಾತ್ರ ಯೋಜ್ಯಂ ವೈರಂ ನ ಧೀಮತಾ ॥ ೧೫**

—ಪಂಚತಂತ್ರ, ಮಿತ್ರಸಂಪ್ರಾಪ್ತಿ-೩೪

ಯಾವುದೋ ಕಾರಣದಿಂದಲೇ ಸ್ನೇಹವುಂಟಾಗುತ್ತದೆ. ಅಂಥ ಯಾವುದೋ ಕಾರಣದಿಂದಲೇ ಶತ್ರುತ್ವವುಂಟಾಗುತ್ತದೆ. ಆದುದರಿಂದ ಬುದ್ಧಿವಂತನಾದವನು ಸ್ನೇಹವನ್ನೇ ಇಲ್ಲಿ ಸಾಧಿಸಬೇಕು ; ದ್ವೇಷವನ್ನಲ್ಲ.

**ಕೇನಾಮೃತಮಿದಂ ಸೃಷ್ಟಂ ಮಿತ್ರಮಿತ್ಯಕ್ಷರದ್ವಯಂ ।**
**ಆಪದಾಂ ಚ ಪರಿತ್ರಾಣಂ ಶೋಕಸಂತಾಪಭೇಷಜಮ್ ॥ ೧೬**

—ಪಂಚತಂತ್ರ, ಮಿತ್ರಸಂಪ್ರಾಪ್ತಿ-೬೨

ಅಮೃತಪ್ರಾಯವಾದರೂ, ಕಷ್ಟಗಳಿಂದ ಕಾಪಾಡುವುದೂ, ದುಃಖ ಸಂತಾಪ ಇವುಗಳಿಗೆ ಔಷಧಿಯಾದುದೂ ಆದ 'ಮಿತ್ರ' ಎಂಬ ಈ ಎರಡು ಅಕ್ಷರವನ್ನು ಯಾರು ಸೃಷ್ಟಿಮಾಡಿದರೋ!

**ಜಾತಮಾತ್ರಂ ನ ಯಃ ಶತ್ರುಂ ವ್ಯಾಧಿಂ ಚ ಪ್ರಶಮಂ ನಯೇತ್ ।**
**ಮಹಾಬಲೋಽಪಿ ತೇನೈವ ವೃದ್ಧಿಂ ಪ್ರಾಪ್ಯ ಸ ಹನ್ಯತೇ ॥ ೧೭**

—ಪಂಚತಂತ್ರ, ಮಿತ್ರಭೇದ-೩೯೫

ಯಾರು ಶತ್ರುವನ್ನೂ ರೋಗವನ್ನೂ ಹುಟ್ಟಿದಕೂಡಲೇ ನಾಶಗೊಳಿಸುವುದಿಲ್ಲವೋ ಅಂಥವನು ಎಷ್ಟೇ ಬಲಶಾಲಿಯಾಗಿದ್ದರೂ ವೃದ್ಧಿಹೊಂದಿದ ಅದರಿಂದಲೇ ಕೊಲ್ಲಲ್ಪಡುತ್ತಾನೆ.

**ತ ಏತೇ ಸಾಧವಃ ಸಾಧ್ವಿ ಸರ್ವಸಂಗವಿವರ್ಜಿತಾಃ ।**
**ಸಂಗಸ್ತೇಷ್ವಥ ತೇ ಪ್ರಾರ್ಥ್ಯಃ ಸಂಗದೋಷಹರಾ ಹಿ ತೇ ॥ ೧೮**

—ಭಾಗವತ, ೩-೨೫-೨೪

ಎಲೈ ಸಾಧ್ವಿಯೇ, ಯಾರು ಸಮಸ್ತ ಸಹವಾಸಗಳಿಂದ ಬಿಡಲ್ಪಟ್ಟಿದ್ದಾರೋ ಅವರೇ ಸಾಧುಗಳು. ಅವರಲ್ಲಿಯೇ ಸಹವಾಸವನ್ನು ಬಯಸಬೇಕು. ಏಕೆಂದರೆ, ಅವರೇ ಸಂಗದಿಂದುಂಟಾಗುವ ದೋಷಗಳನ್ನು ನಿರ್ಮೂಲಮಾಡುತ್ತಾರೆ.

**ತೇ ಧನ್ಯಾಸ್ತೇ ವಿವೇಕಜ್ಞಾಸ್ತೇ ಸಭ್ಯಾ ಇಹ ಭೂತಲೇ ।**
**ಆಗಚ್ಛಂತಿ ಗೃಹೇ ಯೇಷಾಂ ಕಾರ್ಯಾರ್ಥಂ ಸುಹೃದೋ ಜನಾಃ ॥೧೯**

—ಪಂಚತಂತ್ರ, ಮಿತ್ರಭೇದ

ತಮ್ಮ ತಮ್ಮ ಕೆಲಸಗಳನ್ನು ಮಾಡಿಸಿಕೊಳ್ಳಲು ಸ್ನೇಹಿತರು ಯಾರ ಮನೆಗೆ ಬರುವರೋ ಅವರೇ ಈ ಲೋಕದಲ್ಲಿ ಧನ್ಯರು, ವಿವೇಕವನ್ನರಿತವರು ಹಾಗೂ ಸಭ್ಯರು.

**ನ ಕಶ್ಚಿತ್ಕಸ್ಯಚಿನ್ಮಿತ್ರಂ ನ ಕಶ್ಚಿತ್ಕಸ್ಯಚಿದ್ರಿಪುಃ ।**
**ಕಾರಣೇನ ಹಿ ಜಾಯಂತೇ ಮಿತ್ರಾಣಿ ರಿಪವಸ್ತಥಾ ॥ ೨೦**

—ಸುಭಾಷಿತರತ್ನಭಾಂಡಾಗಾರ

ಯಾರು ಯಾರಿಗೂ ಸ್ನೇಹಿತನಲ್ಲ, ಶತ್ರುವೂ ಅಲ್ಲ. ಮಿತ್ರರೂ ಹಾಗೂ ಶತ್ರುಗಳೂ ಕೆಲವು ಕಾರಣಗಳಿಂದುಂಟಾಗುತ್ತಾರೆ.

**ನ ಮಾತರಿ ನ ದಾರೇಷು ನ ಸೋದರ್ಯೇ ನ ಚಾತ್ಮನಿ ।**
**ವಿಶ್ವಾಸಸ್ತಾದೃಶಃ ಪುಂಸಾಂ ಯಾದೃಜ್ಮಿತ್ರೇ ಸ್ವಭಾವಜೇ ॥ ೨೧**

—ಹಿತೋಪದೇಶ, ಮಿತ್ರಲಾಭ-೧೬೬

ಸಹಜಸ್ವಭಾವದ ಸ್ನೇಹಿತರಲ್ಲಿ ಮನುಷ್ಯರಿಗೆ ಎಂಥ ವಿಶ್ವಾಸವಿರುವುದೋ ಅಂಥದು ತಾಯಿಯ ವಿಷಯದಲ್ಲಿಲ್ಲ, ಹೆಂಡತಿಯಲ್ಲಿಲ್ಲ, ಸೋದರನಲ್ಲಿಲ್ಲ ಹಾಗೂ ತನ್ನಲ್ಲಿಯೂ ಇಲ್ಲ.

**ನ ಹಿ ಬುದ್ಧಿಗುಣೇನೈವ ಸುಹೃದಾಮರ್ಥದರ್ಶನಂ ।**
**ಕಾರ್ಯಸಿದ್ಧಿಪಥಃ ಸೂಕ್ಷ್ಮಃ ಸ್ನೇಹೇನಾಪ್ಯುಪಲಭ್ಯತೇ ॥ ೨೨**

—ಮಾಲವಿಕಾಗ್ನಿಮಿತ್ರ, ೪-೬

ಕೇವಲ ಬುದ್ಧಿಶಕ್ತಿಯಿಂದಲೇ ಹಿತೈಷಿಗಳು ಹೊಸ ದಾರಿಯನ್ನು ಕಾಣುತ್ತಾರೆಂದು ಹೇಳುವುದಕ್ಕಾಗುವುದಿಲ್ಲ. ನಮ್ಮ ಹೆಚ್ಚು ಪ್ರೀತಿಯೂ ಸಹ ಅನೇಕ ವೇಳೆ ಕಾರ್ಯ ಸಾಧಿಸಲು ಸೂಕ್ಷ್ಮವಾದ ದಾರಿಯನ್ನು ತೋರುತ್ತದೆ.

**ನ ಹೀದೃಶಂ ಸಂವನನಂ ತ್ರಿಷು ಲೋಕೇಷು ವಿದ್ಯತೇ ।**
**ಮೈತ್ರೀ ಚ ಸರ್ವಭೂತೇಷು ದಾನಂ ಚ ಮಧುರಾ ಚ ವಾಕ್ ॥ ೨೩**

—ಸುಭಾಷಿತಸುಧಾನಿಧಿ

ಸಕಲ ಪ್ರಾಣಿಗಳಲ್ಲಿಯೂ ಸ್ನೇಹಭಾವ, ದಾನ, ಮಧುರವಾದ ನುಡಿ-ಇವುಗಳಿಗೆ ಸಮಾನವಾದ ಸಂತೋಷಜನಕ ಉತ್ತಮಗುಣವು ಮೂರುಲೋಕಗಳಲ್ಲಿಯೂ ಇಲ್ಲ.

**ಪಾಪಾನ್ನಿವಾರಯತಿ ಯೋಜಯತೇ ಹಿತಾಯ**
**ಗುಹ್ಯಂ ಚ ಗೂಹತಿ ಗುಣಾನ್ ಪ್ರಕಟೀಕರೋತಿ ।**
**ಆಪದ್ಗತಂ ಚ ನ ಜಹಾತಿ ದದಾತಿ ಕಾಲೇ**
**ಸನ್ಮಿತ್ರಲಕ್ಷಣಮಿದಂ ಪ್ರವದಂತಿ ಸಂತಃ ॥ ೨೪**

—ನೀತಿಶತಕ-೭೦

ಒಳ್ಳೆಯ ಸ್ನೇಹಿತನ ಲಕ್ಷಣ-ಪಾಪದ ಕೆಲಸ ಮಾಡುವುದನ್ನು ತಪ್ಪಿಸುತ್ತಾನೆ, ಒಳ್ಳೆಯ ದಾರಿಯಲ್ಲಿ ನಡೆಸುತ್ತಾನೆ, ಗುಟ್ಟನ್ನು ಬಚ್ಚಿಡುತ್ತಾನೆ, ಗುಣಗಳನ್ನು ಪ್ರಕಟಿಸುತ್ತಾನೆ, ಕಷ್ಟದಲ್ಲಿರುವಾಗ ಬಿಟ್ಟುಹೋಗುವುದಿಲ್ಲ, ಸಮಯದಲ್ಲಿ (ಹಣ ಮುಂತಾದ್ದನ್ನು) ಕೊಡುತ್ತಾನೆ - ಎಂದು ಸತ್ಪುರುಷರು ಹೇಳುತ್ತಾರೆ.

**ಮಜ್ಜಮಾನಮಕಾರ್ಯೇಷು ಪುರುಷಂ ವಿಷಯೇಷು ವೈ ।**
**ನಿವಾರಯತಿ ಯೋ ರಾಜನ್! ಸ ಮಿತ್ರಂ ರಿಪುರನ್ಯಥಾ ॥ ೨೫**

—ಅಭಿಷೇಕ, ೬-೨೨

ಕೆಟ್ಟ ಕೆಲಸಗಳಲ್ಲಿ, ಇಂದ್ರಿಯ ಸುಖಗಳಲ್ಲಿ ಆಸಕ್ತನಾಗುವ ಮನುಷ್ಯನನ್ನು ತಡೆಯುವವನೇ ಮಿತ್ರ. ಇಲ್ಲವಾದರೆ ಅವನು ಶತ್ರು.

**ಮರಣಾಂತಾನಿ ವೈರಾಣಿ ನಿರ್ವೃತ್ತಂ ನಃ ಪ್ರಯೋಜನಮ್ ।**
**ಕ್ರಿಯತಾಮಸ್ಯ ಸಂಸ್ಕಾರೋ ಮಮಾಪ್ಯೇಷ ಯಥಾ ತವ ॥ ೨೬**

—ರಾಮಾಯಣ, ಯುದ್ಧ. ೧೧೨-೨೬

ವೈರವು ಮರಣಪರ್ಯಂತ. ನಮ್ಮ ಉದ್ದೇಶವು ನೆರವೇರಿತು. ಈತನ (ರಾವಣನ) ಉತ್ತರಕ್ರಿಯೆಯನ್ನು ಮಾಡು. ಇವನು (ರಾವಣನು) ನಿನಗೆ ಹೇಗೋ ನನಗೂ ಹಾಗೆಯೇ (ನನಗೂ ಸೋದರನೇ). (ವಿಭೀಷಣನನ್ನು ಕುರಿತು ಶ್ರೀರಾಮನ ನುಡಿ)

**ಮಿತ್ರವಾನ್ ಸಾಧಯತ್ಯರ್ಥಾನ್ ದುಸ್ಸಾಧ್ಯಾನಪಿ ವೈ ಯತಃ ।**
**ತಸ್ಮಾನ್ಮಿತ್ರಾಣಿ ಕುರ್ವೀತ ಸಮಾನಾನ್ಯೇವ ಚಾತ್ಮನಃ ॥ ೨೭**

—ಪಂಚತಂತ್ರ, ಮಿತ್ರಸಂಪ್ರಾಪ್ತಿ, ೨೮

ಸಾಧಿಸಲಸಾಧ್ಯವಾದ ಕೆಲಸಗಳನ್ನು ಸಹ ಸ್ನೇಹಿತನನ್ನು ಹೊಂದಿರುವವನು ಸಾಧಿಸುತ್ತಾನೆ. ಆದುದರಿಂದ ತನಗೆ ಸಮಾನರಾಗಿರುವವರನ್ನೇ ಸ್ನೇಹಿತರನ್ನಾಗಿ ಮಾಡಿಕೊಳ್ಳಬೇಕು.

**ಮೃದೋಃ ಪರಿಭವೋ ನಿತ್ಯಂ ವೈರಂ ತೀಕ್ಷ್ಣಸ್ಯ ನಿತ್ಯಶಃ ।**
**ಉತ್ಸೃಜ್ಯ ತದ್ದ್ವಯಂ ತಸ್ಮಾತ್ ಮಧ್ಯಾಂ ವೃತ್ತಿಂ ಸಮಾಶ್ರಯೇತ್ ॥ ೨೮**

—ಸುಭಾಷಿತರತ್ನಭಾಂಡಾಗಾರ

ಮೆತ್ತಗಿರುವವನು ಯಾವಾಗಲೂ ಅಪಮಾನಕ್ಕೆ ಒಳಗಾಗುತ್ತಾನೆ. ಉಗ್ರನಾಗಿದ್ದರೆ ಯಾವಾಗಲೂ ಹಗೆತನಕ್ಕೆ ಹೆಚ್ಚು. ಆದುದರಿಂದ ಇವೆರಡನ್ನೂ ಬಿಟ್ಟು ಮಧ್ಯರೀತಿಯಲ್ಲಿ ವರ್ತಿಸುವುದು ಒಳ್ಳೆಯದು.

**ಯಥಾ ಶರದಿ ಮೇಘಾನಾಂ ಸಿಂಚತಾಮಪಿ ಗರ್ಜತಾಂ ।**
**ನ ಭವತ್ಯಂಬುಸಂಕ್ಲೇದಸ್ತಥಾಽನಾರ್ಯೇಷು ಸೌಹೃದಮ್ ॥ ೨೯**

—ರಾಮಾಯಣ, ಯುದ್ಧ, ೧೬-೧೪

ಮಳೆಗಾಲದಲ್ಲಿ ಮೋಡಗಳು ಮಳೆ ಸುರಿಸುತ್ತವೆ, ಗರ್ಜಿಸುತ್ತವೆ. ಶರತ್ಕಾಲ ಬಂದಾಗ ನೆಲ ನೆನೆಯುವಷ್ಟು ನೀರನ್ನು ಸುರಿಸುವುದಿಲ್ಲ. ಹಾಗೆ ದುಷ್ಟರ ಸ್ನೇಹವು ಕ್ರಮವಾಗಿ ಕುಗ್ಗಿ ನಶಿಸಿಹೋಗುವುದು.

**ಯಥಾ ಪೂರ್ವಂ ಗಜಃ ಸ್ನಾತ್ವಾ ಗೃಹ್ಯ ಹಸ್ತೇನ ವೈ ರಜಃ ।**
**ದೂಷಯತ್ಯಾತ್ಮನೋ ದೇಹಂ ತಥಾಽನಾರ್ಯೇಷು ಸೌಹೃದಮ್ ॥ ೩೦**

—ರಾಮಾಯಣ, ಯುದ್ಧ ೧೬-೧೨

ಆನೆಯು ಮೊದಲು ಸ್ನಾನಮಾಡಿ ಆಮೇಲೆ ಸೊಂಡಿಲಿನಿಂದ ಧೂಳೆರೆಚಿಕೊಂಡು ತನ್ನ ಮೈಯನ್ನು ಹೇಗೆ ಕೊಳೆಮಾಡಿಕೊಳ್ಳುವುದೋ, ಹಾಗೆ ದುಷ್ಟರು ತಾವಾಗಿಯೇ ಬೆಳೆಸಿಕೊಂಡ ಸ್ನೇಹವನ್ನು ತಾವೇ ಕೆಡಿಸಿಕೊಳ್ಳುತ್ತಾರೆ. (ಆನೆಯ ಮೈಯಂತೆ ಕೊಳೆಯಾಗಿರುವುದೇ ದುಷ್ಟರ ಸ್ವಭಾವ).

**ಯಥಾ ಪುಷ್ಕರಪರ್ಣೇಷು ಪತಿತಾಸ್ತೋಯಬಿಂದವಃ ।**
**ನ ಶ್ಲೇಷಮುಪಗಚ್ಛಂತಿ ತಥಾಽನಾರ್ಯೇಷು ಸೌಹೃದಮ್ ॥ ೩೧**

—ರಾಮಾಯಣ, ಯುದ್ಧ ೧೬-೧೧

ತಾವರೆ ಎಲೆಯಲ್ಲಿ ಬಿದ್ದ ನೀರುಹನಿಗಳು ಹೇಗೆ ಅಂಟಿಕೊಳ್ಳುವುದಿಲ್ಲವೋ ಹಾಗೆ ದುಷ್ಟಜನರಲ್ಲಿಡುವ ಪ್ರೀತಿಯು ಸ್ನೇಹಬಂಧನದಿಂದ ಅಂಟಿಕೊಳ್ಳುವುದಿಲ್ಲ.

**ಯಥಾ ಮಧುಕರಸ್ತರ್ಷಾದ್ರಸಂ ವಿಂದನ್ನ ವಿದ್ಯತೇ ।**
**ತಥಾ ತ್ವಮಪಿ ತತ್ರೈವ ತಥಾಽನಾರ್ಯೇಷು ಸೌಹೃದಮ್ ॥ ೩೨**

—ರಾಮಾಯಣ, ಯುದ್ಧ ೧೬-೧೭

ದುಂಬಿಯು ಆಸೆಯಿಂದ ಬಂದು ಹೂವಿನ ಬಂಡನ್ನು ಸವಿದ ಮೇಲೆ ಅಲ್ಲಿ ನಿಲ್ಲದೆ ಹಾರಿಹೋಗುತ್ತದೆ. ದುಂಬಿಯಂಥವನು ನೀನು! ದುಷ್ಟರಲ್ಲಿ ಸ್ನೇಹವು ನೆಲೆಯಾಗಿ ನಿಲ್ಲದು. (ರಾವಣನು ವಿಭೀಷಣನಿಗೆ ಹೇಳಿದ ಮಾತು).

**ಯದ್ದ್ರವ್ಯಂ ಬಾಂಧವಾನಾಂ ವಾ ಮಿತ್ರಾಣಾಂ ವಾ ಕ್ಷಯೇ ಭವೇತ್ ।**
**ನಾಹಂ ತತ್ ಪ್ರತಿಗೃಹ್ಣೀಯಾಂ ಭಕ್ಷಾನ್ ವಿಷಕೃತಾನಿವ ॥ ೩೩**

—ರಾಮಾಯಣ, ಅಯೋ. ೯೨-೪

ಬಾಂಧವರಾಗಲಿ ಮಿತ್ರರಾಗಲಿ ಹಾಳಾಗುವುದರಿಂದ ದೊರಕುವ ಹಣವನ್ನು ನಾನು ಎಂದಿಗೂ ಮುಟ್ಟಲಾರೆ. ಅದು ವಿಷಮಿಶ್ರಿತವಾದ ಭಕ್ಷ್ಯದಂತೆ ಹೇಯವಾದ್ದೆಂದು ತಿಳಿಯುತ್ತೇನೆ.

**ಯದಿಂದೋರನ್ವೇತಿ ವ್ಯಸನಮುದಯಂ ವಾ ನಿಧಿರಪಾಂ**
**ಉಪಾಧಿಸ್ತತ್ರಾಯಂ ಜಯತಿ ಜನಿಕರ್ತುಃ ಪ್ರಕೃತಿತಾ ।**
**ಅಯಂ ಕಃ ಸಂಬಂಧೋ ಯದನುಹರತೇ ತಸ್ಯ ಕುಮುದಂ**
**ವಿಶುದ್ಧಾಃ ಶುದ್ಧಾನಾಂ ಧ್ರುವಮನಭಿಸಂಧಿಪ್ರಣಯಿನಃ ॥ ೩೪**

—ಅನರ್ಘರಾಘವ, ೧-೫೮

ಚಂದ್ರನು ಪೂರ್ಣವಾಗಿ ಉದಯಿಸಿದಾಗ ಸಮುದ್ರದಲ್ಲಿ ಉಬ್ಬರವಿಳಿತಗಳುಂಟಾಗುತ್ತವೆ. ಉಳಿದಾಗ ಶಾಂತವಾಗಿರುತ್ತದೆ. ಇದಕ್ಕೆ ಚಂದ್ರನ ಹುಟ್ಟಿಗೆ ಕಾರಣವಾದ

ಮಮತೆ ಕಾರಣವಿರಬಹುದು. ಆದರೆ ಏನೂ ಕಾರಣವಿಲ್ಲದೆ ಕನ್ನೈದಿಲೆಯು ಏಕೆ ಚಂದ್ರನನ್ನೇ ಅನುಸರಿಸಿ ಅರಳುತ್ತದೆಯಲ್ಲಾ. ಆದುದರಿಂದ ಶುದ್ಧರಾದ ಮಹಾತ್ಮರು ಮಹಾತ್ಮರಲ್ಲಿ ಕಾರಣವಿಲ್ಲದೆಯೇ ಪ್ರೀತಿಯನ್ನು ಬೆಳೆಸುತ್ತಾರೆ.

**ಯಯೋರೇವ ಸಮಂ ವಿತ್ತಂ ಯಯೋರೇವ ಸಮಂ ಶ್ರುತಂ ।**
**ತಯೋರ್ವಿವಾಹಃ ಸಖ್ಯಂ ಚ ನ ತು ಪುಷ್ಟವಿಪುಷ್ಟಯೋಃ ॥ ೩೫**

—ಮಹಾಭಾರತ, ಆದಿ. ೧೩೦-೧೦

ಯಾರಿಗೆ ಹಣ ಮತ್ತು ವಿದ್ಯೆ ಸಮಾನವಾಗಿದೆಯೋ ಅವರ ನಡುವೆ ಮಾತ್ರ ಮದುವೆಯೂ ಸ್ನೇಹವೂ ಪ್ರಶಸ್ತ. ಹೆಚ್ಚು ಕಡಿಮೆ ಇರತಕ್ಕವರಲ್ಲಿ ಪ್ರಶಸ್ತವಲ್ಲ.

**ಯೇ ಯಾಂತ್ಯಭ್ಯುದಯೇ ಪ್ರೀತಿಂ ನೋಜ್ಝಂತಿ ವ್ಯಸನೇಷು ಚ ।**
**ತೇ ಬಾಂಧವಾಸ್ತೇ ಸುಹೃದೋ ಲೋಕಃ ಸ್ವಾರ್ಥಪರೋಽಪರಃ ॥ ೩೬**

—ಲೋಚನ-೧

ನಮ್ಮ ಅಭ್ಯುದಯಕಾಲದಲ್ಲಿ ಯಾರು ಸಂತೋಷಪಡುವರೋ, ವಿಪತ್ಕಾಲದಲ್ಲಿ ನಮ್ಮನ್ನು ತ್ಯಜಿಸುವುದಿಲ್ಲವೋ ಅವರೇ ಬಂಧುಗಳು, ಅವರೇ ಸ್ನೇಹಿತರು. ಉಳಿದವರು ಸ್ವಾರ್ಥಿಗಳು.

**ರಹಸ್ಯಭೇದೋ ಯಾಚ್ಞಾ ಚ ನೈಷ್ಠುರ್ಯಂ ಚಲಚಿತ್ತತಾ ।**
**ಕ್ರೋಧೋ ನಿಃಸತ್ವತಾ ದ್ಯೂತಮೇತನ್ಮಿತ್ರಸ್ಯ ದೂಷಣಮ್ ॥ ೩೭**

—ಹಿತೋಪದೇಶ, ಮಿತ್ರಲಾಭ-೭೨

ಗುಟ್ಟುರಟ್ಟುಮಾಡುವುದು, ಯಾಚಿಸುವುದು, ನಿಷ್ಠುರನಾಗಿರುವುದು, ಚಂಚಲವಾದ ಮನಸ್ಸು ಹೊಂದಿರುವುದು, ಕ್ರೋಧ, ಸತ್ವಹೀನತೆ, ಜೂಜು-ಇವಿಷ್ಟೂ ಮಿತ್ರನಲ್ಲಿ ದೋಷಗಳು.

**ವ್ಯತಿಷಜತಿ ಪದಾರ್ಥಾನಾಂತರಃ ಕೋಽಪಿ ಹೇತುಃ**
**ನ ಖಲು ಬಹಿರುಪಾಧೀನ್ ಪ್ರೀತಯಃ ಸಂಶ್ರಯಂತೇ ।**
**ವಿಕಸತಿ ಹಿ ಪತಂಗಸ್ಯೋದಯೇ ಪುಂಡರೀಕಂ**
**ದ್ರವತಿ ಚ ಹಿಮರಶ್ಮಾ ಉದ್ಗತೇ ಚಂದ್ರಕಾಂತಃ ॥ ೩೮**

—ಉತ್ತರರಾಮಚರಿತ, ೬-೧೨

ಮಾನವರನ್ನು ಅಥವಾ ಪದಾರ್ಥಗಳನ್ನು ಯಾವುದೋ ಅಜ್ಞಾತ ಕಾರಣವು ಬೆಸೆಯುತ್ತದೆ. ನಮಗೆ ಉಂಟಾಗುವ ಪ್ರೀತಿಗೆ ಹೊರಗಿನ ಕಾರಣಗಳೇ ಮುಖ್ಯವಲ್ಲ.

ಸೂರ್ಯನು ಹುಟ್ಟಿದರೆ ತಾವರೆಯು ಅರಳುತ್ತದೆ. ಚಂದ್ರನು ಕಾಣಿಸಿಕೊಂಡರೆ ಚಂದ್ರಕಾಂತವು ಕರಗುತ್ತದೆ.

**ಶಶಿನಾ ಸಹ ಯಾತಿ ಕೌಮುದೀ ಸಹ ಮೇಘೇನ ತಡಿತ್ಪ್ರಲೀಯತೇ ।**
**ಪ್ರಮದಾಃ ಪತಿವರ್ತ್ಮಗಾ ಇತಿ ಪ್ರತಿಪನ್ನಂ ಹಿ ವಿಚೇತನೈರಪಿ ॥೩೯**

—ಕುಮಾರಸಂಭವ, ೪-೩೩

ಚಂದ್ರನು ಮರೆಯಾದಕೂಡಲೇ ಬೆಳದಿಂಗಳು ಮರೆಯಾಗುತ್ತದೆ. ಮೋಡದೊಡನೆ ಮಿಂಚು ಮಾಯವಾಗುತ್ತದೆ. ಹೀಗೆ ಹೆಂಗಸರು ಗಂಡನ ಮಾರ್ಗವನ್ನೇ ತುಳಿಯುತ್ತಾರೆಂದು ಅಚೇತನಗಳೂ ಸಹ ಆಚರಿಸಿ ತೋರಿಸುತ್ತವೆ.

**ಶುಚಿತ್ವಂ ತ್ಯಾಗಿತಾ ಶೌರ್ಯಂ ಸಮಾನಸುಖದುಃಖತಾ ।**
**ದಾಕ್ಷಿಣ್ಯಂ ಚಾನುರಕ್ತಿಶ್ಚ ಸತ್ಯತಾ ಚ ಸುಹೃದ್ಗುಣಾಃ ॥ ೪೦**

—ಹಿತೋಪದೇಶ, ಮಿತ್ರಲಾಭ-೭೦

ಪರಿಶುದ್ಧತೆ, ತ್ಯಾಗ, ಶೌರ್ಯ, ಸುಃಖದುಃಖಗಳಲ್ಲಿ ಒಂದೇ ರೀತಿ ಇರುವುದು, ದಾಕ್ಷಿಣ್ಯ, ಪ್ರೀತಿ, ಸತ್ಯಶೀಲತೆ-ಇವು ಸುಹೃಜ್ಜನರ ಗುಣಗಳು.

**ಶೋಕಾರ್ತಿಭಯಸಂತ್ರಾಣಂ ಪ್ರೀತಿವಿಶ್ರಂಭಭಾಜನಂ ।**
**ಕೇನ ರತ್ನಮಿದಂ ಸೃಷ್ಟಂ ಮಿತ್ರಮಿತ್ಯಕ್ಷರದ್ವಯಂ ॥ ೪೧**

—ಹಿತೋಪದೇಶ, ಮಿತ್ರಲಾಭ-೧೬೯

ದುಃಖ, ನೋವು ಮತ್ತು ಭಯಗಳಿಂದ ಕಾಪಾಡುವುದೂ, ಪ್ರೀತಿ ಮತ್ತು ನಂಬಿಕೆಗೆ ಪಾತ್ರವಾದುದೂ ಆದ ಎರಡಕ್ಷರದ ಈ 'ಮಿತ್ರ'ವೆಂಬ ರತ್ನವನ್ನು ಸೃಜಿಸಿದವರು ಯಾರು!

**ಸರ್ವಥಾ ಸುಕರಂ ಮಿತ್ರಂ ದುಷ್ಕರಂ ಪರಿಪಾಲನಂ ।**
**ಅನಿತ್ಯತ್ವಾತ್ತು ಚಿತ್ತಾನಾಂ ಮತಿರಲ್ಪೇಽಪಿ ಭಿದ್ಯತೇ ॥ ೪೨**

—ರಾಮಾಯಣ, ಕಿಷ್ಕಿಂಧಾ. ೩೨-೭

ಮಿತ್ರನನ್ನು ಸಂಪಾದಿಸುವುದು ಸುಲಭ. ಹಾಗೆಯೇ ಉಳಿಸಿಕೊಳ್ಳುವುದು ಮಾತ್ರ ಕಷ್ಟ. ಮನಸ್ಸು ಚಂಚಲವಾದ್ದರಿಂದ ಅಲ್ಪಕಾರಣಕ್ಕಾಗಿ ಸ್ನೇಹವು ಕೆಟ್ಟುಹೋಗುತ್ತದೆ.

**ಸ ಸುಹೃದ್ವ್ಯಸನೇ ಯಃ ಸ್ಯಾತ್ಸ ಪುತ್ರೋ ಯಸ್ತು ಭಕ್ತಿಮಾನ್ ।**
**ಸ ಭೃತ್ಯೋ ಯೋ ವಿಧೇಯಜ್ಞಃ ಸಾ ಭಾರ್ಯಾ ಯತ್ರ ನಿರ್ವೃತಿಃ ॥ ೪೩**

—ಪಂಚತಂತ್ರ, ಮಿತ್ರಭೇದ-೩೬೮

ಕಷ್ಟದಲ್ಲಿ ಯಾವನು ಆಗುವನೋ ಅವನೇ ಮಿತ್ರ. ಯಾರು ಭಕ್ತಿಯನ್ನು ಹೊಂದಿದ್ದಾನೆಯೋ ಅವನೇ ಮಗ. ಯಾವನು ವಿಧೇಯತೆಯನ್ನರಿತಿದ್ದಾನೆಯೋ ಅವನೇ ಸೇವಕ. ಸಂತೋಷವುಂಟುಮಾಡುವವಳೇ ಹೆಂಡತಿ.

**ಸ ಸ್ನಿಗ್ಧೋಽಕುಶಲಾನ್ನಿವಾರಯತಿ ಯಸ್ತತ್ಕರ್ಮ ಯನ್ನಿರ್ಮಲಂ**
**ಸಾ ಸ್ತ್ರೀ ಯಾನುವಿಧಾಯಿನೀ ಸ ಮತಿಮಾನ್ ಯಃ ಸದ್ಭಿರಭ್ಯರ್ಚ್ಯತೇ ।**
**ಸಾ ಶ್ರೀರ್ಯಾ ನ ಮದಂ ಕರೋತಿ ಸ ಸುಖೀ ಯಸ್ತೃಷ್ಣಯಾ ಮುಚ್ಯತೇ**
**ತನ್ಮಿತ್ರಂ ಯದಕೃತ್ರಿಮಂ ಸ ಪುರುಷೋ ಯಃ ಖಿದ್ಯತೇ ನೇಂದ್ರಿಯೈಃ ॥ ೪೪**

—ಹಿತೋಪದೇಶ ಸುಹೃದ್ಭೇದ-೧೨೮

ಕೆಟ್ಟಕೆಲಸದಿಂದ ತಪ್ಪಿಸುವವನು ಹಿತೈಷಿ ; ಯಾವುದು ನಿರ್ಮಲವಾದುದೋ ಅದೀಗ ಕೆಲಸ ; ಯಾವಳು ವಿಧೇಯಳಾಗಿರುವಳೋ ಅವಳೇ ಸ್ತ್ರೀ. ಯಾರನ್ನು ಸಜ್ಜನರು ಸತ್ಕರಿಸುವರೋ ಅವನೇ ಬುದ್ಧಿವಂತ ; ಯಾವುದು ಮದವನ್ನುಂಟುಮಾಡುವುದಿಲ್ಲವೋ ಅದೇ ಐಶ್ವರ್ಯ ; ಆಶೆಯಿಂದ ಬಿಡಲ್ಪಟ್ಟವನೀಗ ಸುಖಿ ; ಮೋಸಮಾಡದವನು ಮಿತ್ರ; ಯಾವನು ಇಂದ್ರಿಯಗಳಿಂದ ದುಃಖಕ್ಕೊಳಗಾಗುವುದಿಲ್ಲವೋ ಅವನೇ ಪುರುಷ.

**ಸಾರ್ಥಃ ಪ್ರವಸತೋ ಮಿತ್ರಂ ಭಾರ್ಯಾ ಮಿತ್ರಂ ಗೃಹೇ ಸತಃ ।**
**ಆತುರಸ್ಯ ಭಿಷಜ್ಮಿತ್ರಂ ದಾನಂ ಮಿತ್ರಂ ಮರಿಷ್ಯತಃ ॥ ೪೫**

—ಮಹಾಭಾರತ, ವನ. ೩೧೩-೬೪

ಪ್ರಯಾಣಿಕನಿಗೆ ಜೊತೆಯಲ್ಲಿ ಇರತಕ್ಕವನು ಮಿತ್ರ. ಮನೆಯಲ್ಲಿ ಇರುವವನಿಗೆ ಮಡದಿ ಮಿತ್ರಳು. ರೋಗಿಗೆ ವೈದ್ಯನು ಮಿತ್ರ. ಸಾಯುವವನಿಗೆ ದಾನವು ಮಿತ್ರ.

**ಸುಹೃದಿ ನಿರಂತರಚಿತ್ತೇ ಗುಣವತಿ ಭೃತ್ಯೇಽನುವರ್ತಿನಿ ಕಲತ್ರೇ ।**
**ಸ್ವಾಮಿನಿ ಸೌಹೃದಯುಕ್ತೇ ನಿವೇದ್ಯ ದುಃಖಂ ಸುಖೀ ಭವತಿ ॥ ೪೬**

—ಪಂಚತಂತ್ರ, ಮಿತ್ರಭೇದ-೧೧೦

ಒಂದೇ ರೀತಿಯ ಮನಸ್ಸುಳ್ಳ ಸ್ನೇಹಿತನಲ್ಲಿ, ಗುಣಶಾಲಿಯಾದ ಸೇವಕನಲ್ಲಿ, ತನ್ನನ್ನು ಅನುಸರಿಸುವ ಪತ್ನಿಯಲ್ಲಿ, ಒಳ್ಳೆಯ ಮನಸ್ಸುಳ್ಳ ಒಡೆಯನಲ್ಲಿ ತನ್ನ ದುಃಖವನ್ನು ತೋಡಿಕೊಂಡು ಮನುಷ್ಯನು ಸುಖಿಯಾಗಿರುತ್ತಾನೆ.

**ಸುಹೃದಾಂ ಹಿತಕಾಮಾನಾಂ ಯಃ ಶೃಣೋತಿ ನ ಭಾಷಿತಮ್ ।**
**ವಿಪತ್ಸನ್ನಿಹಿತಾ ತಸ್ಯ ಸ ನರಃ ಶತ್ರುನಂದನಃ ॥ ೪೭**

—ಹಿತೋಪದೇಶ, ಮಿತ್ರಲಾಭ. ೫೫

ಹಿತವನ್ನು ಬಯಸುವವರೂ ಸ್ನೇಹಿತರೂ ಆದವರ ಮಾತನ್ನು ಯಾರು ಕೇಳುವುದಿಲ್ಲವೋ ಅವನಿಗೆ ವಿಪತ್ತು ಸನ್ನಿಹಿತವಾಗಿಯೇ ಇದೆ. ಆ ಮನುಷ್ಯನೀಗ ಶತ್ರುಗಳಿಗೆ ಸಂತೋಷವುಂಟುಮಾಡುವವನು!

ಸಂಗೋ ಯಃ ಸಂಸೃತೇರ್ಹೇತುರಸತ್ಸು ವಿಹಿತೋಧಿಯಾ।
ಸ ಏವ ಸಾಧುಷು ಕೃತೋ ನಿಃಸಂಗತ್ವಾಯ ಕಲ್ಪತೇ ॥ ೪೮
—ಭಾಗವತ, ૩-૨૩-೫೫

ಅಸತ್ಪುರುಷರಲ್ಲಿ ಬುದ್ಧಿಯಿಲ್ಲದೇ ಇಡಲ್ಪಟ್ಟ ಸಹವಾಸವು ಸಂಸಾರಕ್ಕೆ ಕಾರಣವಾಗುತ್ತದೆ. ಅದೇ ಸಹವಾಸವು ಸಜ್ಜನರಲ್ಲಿ ಇಡಲ್ಪಟ್ಟರೆ ನಿಸ್ಸಂಗಕ್ಕೆ ಕಾರಣವಾಗುತ್ತದೆ.

ಸಂತಪ್ತಾಯಸಿ ಸಂಸ್ಥಿ ತಸ್ಯ ಪಯಸೋ ನಾಮಾಪಿ ನ ಜ್ಞಾಯತೇ
ಮುಕ್ತಾಕಾರತಯಾ ತದೇವ ನಳಿನೀಪತ್ರಸ್ಥಿತಂ ರಾಜತೇ ।
ಸ್ವಾತ್ಯಾಂ ಸಾಗರಶುಕ್ತಿಸಂಪುಟಗತಂ ತನೌಕ್ತಿಕಂ ಜಾಯತೇ ।
ಪ್ರಾಯೇಣಾಧಮಮಧ್ಯಮೋತ್ತಮಗುಣಃ ಸಂಸರ್ಗತೋ ಜಾಯತೇ ॥ ೪೯
—ನೀತಿಶತಕ-೯೫

ಚೆನ್ನಾಗಿ ಕಾದ ಕಬ್ಬಿಣದಲ್ಲಿರುವ ನೀರಿನ ಹೆಸರೂ ತಿಳಿಯದಂತೆ ನಾಶವಾಗುತ್ತದೆ. ಅದೇ ತಾವರೆ ಎಲೆಯ ಮೇಲೆ ಇದ್ದಾಗ ಮುತ್ತಿನಂತೆ ಹೊಳೆಯುತ್ತದೆ. ಅದು ಸ್ವಾತೀ ಮಳೆಯಲ್ಲಿ ಸಮುದ್ರದಲ್ಲಿರುವ ಕಪ್ಪೆಚಿಪ್ಪಿನೊಳಗೆ ಬಿದ್ದದ್ದೇ ಆದರೆ ಮುತ್ತೇ ಆಗುತ್ತದೆ. ಆದುದರಿಂದ ಪ್ರಾಯಶಃ ಅಧಮ, ಮಧ್ಯಮ, ಉತ್ತಮಗುಣವು ಸಹವಾಸದಿಂದ ಉಂಟಾಗುತ್ತದೆ.

ಹರಣಂ ಚ ಪರಸ್ವಾನಾಂ ಪರದಾರಾಭಿಮರ್ಶನಂ ।
ಸುಹೃದಶ್ಚ ಪರಿತ್ಯಾಗಸ್ತ್ರಯೋ ದೋಷಾಃ ಕ್ಷಯಾವಹಾಃ ॥ ೫೦
—ಮಹಾಭಾರತ, ಉದ್ಯೋಗ. ૩૩-೬೫

ಅನ್ಯರ ಆಸ್ತಿಯನ್ನಪಹರಿಸುವುದು, ಪರಸ್ತ್ರೀಯರನ್ನು ಕೆಣಕುವುದು, ಸ್ನೇಹಿತರನ್ನು ತ್ಯಜಿಸುವುದು-ಇವು ಮೂರು ಸರ್ವನಾಶಮಾಡತಕ್ಕ ದೋಷಗಳು.



## ೭. ದೈವ-ಪುರುಷಪ್ರಯತ್ನ

**ಅಚೇಷ್ಟಮಾನಮಾಸೀನಂ ಶ್ರೀಃ ಕಂಚಿದುಪತಿಷ್ಠತಿ ।**
**ಕರ್ಮೀ ಕರ್ಮಾಽಪಿ ಕೃತ್ವಾನ್ಯಃ ನ ಪ್ರಾಪ್ಯಮಧಿಗಚ್ಛತಿ ॥ ೧**

ಏನೂ ಕೆಲಸ ಮಾಡದೆ ಇರುವ ಯಾವನೋ ಒಬ್ಬನಿಗೆ ಬೇಕಾದಷ್ಟು ಹಣ ಸಿಗುವುದುಂಟು. ಕಷ್ಟಪಟ್ಟು ಕೆಲಸ ಮಾಡಿದರೂ ಕೆಲವರಿಗೆ ಕುಡಿಯಲು ನೀರು ಸಿಗುವುದಿಲ್ಲ.

**ಅಚೋದ್ಯಮಾನಾನಿ ಯಥಾ ಪುಷ್ಪಾಣಿ ಚ ಫಲಾನಿ ಚ ।**
**ಸ್ವಂ ಕಾಲಂ ನಾತಿವರ್ತಂತೇ ತಥಾ ಕರ್ಮ ಪುರಾ ಕೃತಮ್ ॥ ೨**

—ಮಹಾಭಾರತ, ಶಾಂತಿ. ೧೮೧-೧೨

ಹೂಗಳೂ ಹಣ್ಣುಗಳೂ ಯಾರ ಪ್ರೇರಣೆಯೂ ಇಲ್ಲದೆ ತಮ್ಮ ತಮ್ಮ ಕಾಲವನ್ನು ಮೀರದೆ ಇರುತ್ತವೆ. ಹಾಗೆಯೇ ಪುರಾಕೃತವಾದ ಕರ್ಮವೂ ಸಹ. (ತನ್ನ ಕಾಲ ಬಂದಾಗ ಫಲಿಸುತ್ತದೆ).

**ಅನಾಗತವಿಧಾನಂ ತು ಕರ್ತವ್ಯಂ ಶುಭಮಿಚ್ಛತಾ ।**
**ಆಪದಾಶಂಕಮಾನೇನ ಪುರುಷೇಣ ವಿಪಶ್ಚಿತಾ ॥**

—ರಾಮಾಯಣ, ಅರಣ್ಯ ೨೪-೧೧

ಮುಂದೆ ಅನರ್ಥವು ಸಂಭವಿಸೀತೆಂಬ ಶಂಕೆಯಿದ್ದಾಗ, ಶುಭವನ್ನು ಬಯಸುವ ವಿವೇಕಿಯು ಮೊದಲೇ ಅದಕ್ಕೆ ತಕ್ಕ ಪರಿಹಾರವನ್ನು ಚಿಂತಿಸಬೇಕು.

**ಅನಾರಂಭೋ ಮನುಷ್ಯಾಣಾಂ ಪ್ರಥಮಂ ಬುದ್ಧಿಲಕ್ಷಣಂ ।**
**ಪ್ರಾರಬ್ಧಸ್ಯಾಂತಗಮನಂ ದ್ವಿತೀಯಂ ಬುದ್ಧಿ ಲಕ್ಷಣಮ್ ॥ ೪**

—ಸಮಯೋಚಿತಪದ್ಯಮಾಲಿಕಾ

ಕಾರ್ಯವನ್ನು ಆರಂಭಿಸದಿರುವುದು ಮೊದಲನೆಯ ಬುದ್ಧಿಲಕ್ಷಣ. ಆರಂಭಿಸಿದ ಮೇಲೆ ಅದನ್ನು ತುದಿಮುಟ್ಟಿಸುವುದು ಎರಡನೆಯ ಬುದ್ಧಿಲಕ್ಷಣ.

**ಅನಿರ್ವೇದಂ ಚ ದಾಕ್ಷ್ಯಂ ಚ ಮನಸಶ್ಚಾಪರಾಜಯಂ ।**
**ಕಾರ್ಯಸಿದ್ಧಿಕರಾಣ್ಯಾಹುಃ ತಸ್ಮಾದೇತದ್ ಬ್ರವೀಮ್ಯಹಂ ॥ ೫**

—ರಾಮಾಯಣ, ಕಿಷ್ಕಿಂಧಾ, ೪೯-೬

ಕಾರ್ಯಸಿದ್ಧಿಯಾಗಬೇಕಾದರೆ ಬೇಸರವಿಲ್ಲದ ಉತ್ಸಾಹ, ದಕ್ಷತೆ, ಸೋಲನ್ನೊಪ್ಪಿ ಕೊಳ್ಳದ ಮನೋಭಾವ-ಇವು ಬೇಕೆಂದು ಬಲ್ಲವರು ಹೇಳುತ್ತಾರೆ. ಆದ್ದರಿಂದ

ಈ ಮಾತನ್ನು ನಾನು ಹೇಳುತ್ತಿದ್ದೇನೆ. (ಅಂಗದನು ಸೀತಾನ್ವೇಷಣೆಗಾಗಿ ವಾನರರಿಗೆ ಹೇಳುತ್ತಾನೆ.

**ಅಪತ್ಯಂ ಮೇ ಕಳತ್ರಂ ಮೇ ಧನಂ ಮೇ ಬಾಂಧವಾಶ್ಚ ಮೇ ।**
**ಜಲ್ಪಂತಮಿತಿ ಮರ್ತ್ಯಾಜಂ ಹಂತಿ ಕಾಲವೃಕೋ ಬಲಾತ್ ॥ ೬**

—ಗರುಡಪುರಾಣ, ೧೬-೩೯

ನನ್ನ ಮಕ್ಕಳು, ನನ್ನ ಹೆಂಡತಿ, ನನ್ನ ಹಣ, ನನ್ನ ನೆಂಟರು ಎಂದು ಒದರುತ್ತಿರುವ ಮನುಷ್ಯನೆಂಬ ಮೇಕೆಯನ್ನು ಕಾಲನೆಂಬ ತೋಳವು ಬಲಾತ್ಕಾರವಾಗಿ ಕೊಲ್ಲುತ್ತದೆ.

**ಅಯಮಮೃತನಿಧಾನಂ ನಾಯಕೋಽಪ್ಯೋಷಧೀನಾಂ**
**ಶತಭಿಷಗನುಯಾತಃ ಶಂಭುಮೂರ್ಧ್ನೋಽವತಂಸಃ ।**
**ವಿರಹಯತಿ ನ ಚೈನಂ ರಾಜಯಕ್ಷ್ಮಾ ಶಶಾಂಕಂ**
**ಹತವಿಧಿಪರಿಪಾಕಃ ಕೇನ ವಾ ಲಂಘನೀಯಃ ॥ ೭**

—ನೀತಿಶತಕ, ೯೦

ಈ ಚಂದ್ರ ಅಮೃತದ ನಿಧಿ, ಸಂಜೀವಿನಿಯೇ ಮುಂತಾದ ಓಷಧಿಗಳ ನಾಯಕ, ಶತಭಿಷಕ್ ಎಂಬ ನಕ್ಷತ್ರದಿಂದ (ನೂರಾರು ವೈದ್ಯರುಗಳಿಂದ) ಅನುಸರಿಸಲ್ಪಟ್ಟವನು; ಶಿವನ ತಲೆಯಲ್ಲಿ ಭೂಷಣವಾದವನು ; ಇಷ್ಟಾದರೂ ಇವನಿಗೆ ಕ್ಷಯರೋಗ ತಪ್ಪಲಿಲ್ಲ. ದುರ್ವಿಧಿಯ ಪರಿಣಾಮವನ್ನು ಯಾರು ತಾನೇ ಮೀರಿಯಾರು?

**ಅಯಾಚಿತಃ ಸುಖಂ ದತ್ತೇ ಯಾಚಿತಶ್ಚ ನ ಯಚ್ಛತಿ ।**
**ಸರ್ವಸ್ವಂ ಚಾಪಿ ಹರತೇ ವಿಧಿರುಚ್ಛೃಂಖಲೋ ನೃಣಾಮ್ ॥ ೮**

-ರಸಗಂಗಾಧರ

ಬೇಡದಿದ್ದಾಗ ವಿಧಿಯು ಸುಖವನ್ನು ಕೊಡುತ್ತಾನೆ. ಬೇಡಿದಾಗ ಕೊಡುವುದಿಲ್ಲ. ಅಷ್ಟೇ ಅಲ್ಲ. ಜನರ ಸರ್ವಸ್ವವನ್ನು ಅಪಹರಿಸಿಬಿಡುತ್ತಾನೆ. ವಿಧಿಯು ಯಾವನಿಯಮಕ್ಕೂ ಒಳಪಡದ ಸ್ವೇಚ್ಛಾಚಾರಿ.

**ಅಲಬ್ಧ್ವಾ ನ ವಿಷೀದೇತ ಕಾಲೇ ಕಾಲೇಽಶನಂ ಕ್ವಚಿತ್ ।**
**ಲಬ್ಧ್ವಾ ನ ಹೃಷ್ಯೇದ್ ಧೃತಿಮಾನುಭಯಂ ದೈವತಂತ್ರಿತಮ್ ॥ ೯**

-ಭಾಗವತ, ೧೧-೧೯-೩೩

ಕಾಲಕಾಲಕ್ಕೆ ಆಹಾರ ಪಡೆಯದೇ ಇದ್ದರೂ ಅಥವಾ ಒಮ್ಮೊಮ್ಮೆ ಕಾಲಕಾಲಕ್ಕೆ ಪಡೆದರೂ ಧೀರನಾದವನು ದುಃಖಪಡಲೂಬಾರದು ಸಂತೋಷವನ್ನೂ ಪಡಬಾರದು. ಇವೆರಡೂ ವಿಧಿನಿಯಮದಿಂದಾದುದೇ.

ಅಲಿರನುಸರತಿ ಪರಿಮಲಂ ಲಕ್ಷ್ಮೀರನುಸರತಿ ನಯಗುಣಸಮೃದ್ಧಿಂ ।
ನಿಮ್ನಮನುಸರತಿ ಸಲಿಲಂ ವಿಧಿಲಿಖಿತಂ ಬುದ್ಧಿರನುಸರತಿ ॥ ೧೧೦
-ಸುಭಾಷಿತಸುಧಾನಿಧಿ-೪೪

ದುಂಬಿಯು ಪರಿಮಳವನ್ನನುಸರಿಸುತ್ತದೆ. ಐಶ್ವರ್ಯವು ನೀತಿ, ಗುಣ ಇವುಗಳ ಸಮೃದ್ಧಿಯನ್ನು ಅನುಸರಿಸುತ್ತದೆ. ನೀರು ತಗ್ಗಿನ ಪ್ರದೇಶವನ್ನನ್ನುಸರಿಸುತ್ತದೆ. ಬುದ್ಧಿಯು ವಿಧಿಲಿಖಿತವನ್ನು ಅನುಸರಿಸುತ್ತದೆ.

ಅವಶ್ಯಮೇವ ಭೋಕ್ತವ್ಯಂ ಕೃತಂ ಕರ್ಮ ಶುಭಾಶುಭಂ ।
ನಾಭುಕ್ತಂ ಕ್ಷೀಯತೇ ಕರ್ಮ ಕಲ್ಪಕೋಟಿಶತೈರಪಿ ॥ ೧೧೧
-ಗರುಡಪುರಾಣ, ೫-೫೬

ಮಾಡಿದ ಒಳ್ಳೆಯ ಅಥವಾ ಕೆಟ್ಟ ಕರ್ಮಗಳ ಫಲವನ್ನು ಖಂಡಿತ ಅನುಭವಿಸಬೇಕು. ಎಷ್ಟೇ ಕಾಲಕಳಿದರೂ ಅನುಭವಿಸದೆ ಕರ್ಮ ಕಳೆಯುವುದಿಲ್ಲ.

ಅವಶ್ಯಂಭಾವಿನೋ ಭಾವಾ ಭವಂತಿ ಮಹತಾಮಪಿ ।
ನಗ್ನತ್ವಂ ನೀಲಕಂಠಸ್ಯ ಮಹಾಹಿಶಯನಂ ಹರೇಃ ॥ ೧೧೨
-ಹಿತೋಪದೇಶ, ೧-೧೮

ಮಹಾತ್ಮರಿಗೂ ಸಹ ಅವಶ್ಯವಾಗಿ ಆಗಬೇಕಾದ ಪಾಡುಗಳು ಆಗಿಯೇ ತೀರುತ್ತವೆ. ಪರಮೇಶ್ವರ ದಿಗಂಬರ ; ವಿಷ್ಣು ಶೇಷಶಾಯಿ.

ಅಶ್ವಂ ನೈವ ಗಜಂ ನೈವ ವ್ಯಾಘ್ರಂ ನೈವ ಚ ನೈವ ಚ ।
ಅಜಾಪುತ್ರಂ ಬಲಿಂ ದದ್ಯಾದ್ದೇವೋ ದುರ್ಬಲಘಾತಕಃ ॥ ೧೧೩
-ಸಮಯೋಚಿತಪದ್ಯಮಾಲಿಕಾ

ಕುದುರೆಯನ್ನಲ್ಲ, ಆನೆಯನ್ನಲ್ಲ, ಹುಲಿಯನ್ನಂತೂ ಸರ್ವಥಾ ಅಲ್ಲ, ಮೇಕೆಮರಿಯನ್ನು ಬಲಿಯಾಗಿ ಕೊಡಬೇಕಂತೆ ! ದೇವರೂ ದುರ್ಬಲರನ್ನೇ ಕೊಲ್ಲುತ್ತಾನೆ.

ಅಸಹಾಯಃ ಸಮರ್ಥೋಽಪಿ ನ ಜಾತು ಹಿತಸಿದ್ಧಯೇ ।
ವಹ್ನಿರ್ವಾತವಿಹೀನೋ ಹಿ ಬುಸಸ್ಯಾಪಿ ನ ದೀಪಕಃ ॥ ೧೧೪
-ಯಶಸ್ತಿಲಕ, ೩-೨೨೮

ಸಮರ್ಥನಾದರೂ ಸಹಾಯವಿಲ್ಲದಿದ್ದರೆ, ಆತನು ಹಿತವನ್ನು ಸಾಧಿಸಲಾರ. ಗಾಳಿಯಿಲ್ಲದಿದ್ದರೆ ಬೆಂಕಿ ಹೊಟ್ಟನ್ನು ಸಹ ಸುಟ್ಟುಹಾಕಲಾರದು.

ಅಸಂಭವಂ ಹೇಮಮೃಗಸ್ಯ ಜನ್ಮ
ತಥಾಪಿ ರಾಮೋ ಲುಲುಭೇ ಮೃಗಾಯ ।
ಪ್ರಾಯಃ ಸಮಾಸನ್ನಪರಾಭವಾಣಾಂ
ಧಿಯೋ ವಿಪರ್ಯಸ್ತತರಾ ಭವಂತಿ ॥ ೧೫

-ಮಹಾಭಾರತ, ಸಭಾ. ೭೬-೫

ಸುವರ್ಣಮೃಗದ ಇರುವಿಕೆ ಅಸಂಭವ. ಆದರೂ ಶ್ರೀರಾಮನು ಅಂಥ ಮೃಗಕ್ಕಾಗಿ ಆಶಿಸಿದನು. ಸಾಮಾನ್ಯವಾಗಿ ಯಾರಿಗೆ ವಿಪತ್ತು ಸಮೀಪಿಸಿದೆಯೊ, ಅವರ ಬುದ್ಧಿ ವ್ಯಾಮೋಹಗೊಳ್ಳುತ್ತದೆ.

ಅಹಃ ಸಮುತ್ತೀರ್ಯ ನಿಶಾ ಪ್ರತೀಕ್ಷ್ಯತೇ
ಶುಭೇ ಪ್ರಭಾತೇ ದಿವಸೋಽನುಚಿಂತ್ಯತೇ ।
ಅನಾಗತಾರ್ಥಾನ್ಯಶುಭಾನಿ ಪಶ್ಯತಾಂ
ಗತಂ ಗತಂ ಕಾಲಮವೇಕ್ಷ್ಯ ನಿರ್ವೃತಿಃ ॥ ೧೬

-ಪ್ರತಿಜ್ಞಾಯೌಗಂಧರಾಯಣ, ೩-೨

ಕಷ್ಟವನ್ನನುಭವಿಸುತ್ತಿರುವವರಿಗೆ ಒಂದೊಂದು ಹಗಲೂ ರಾತ್ರಿಯೂ ಭಯವನ್ನುಂಟು ಮಾಡುತ್ತದೆ. ಹಗಲು ಕಳೆಯುತ್ತಿದ್ದಹಾಗೆ ರಾತ್ರಿಯು ಹೇಗಾಗುತ್ತದೆಯೋ ಎಂದು ಯೋಚನೆ. ಬೆಳಗ್ಗೆ ಹಗಲಿನ ಚಿಂತನೆ. ಹೀಗಾಗಿ ಮುಂದೆ ಮುಂದೆ ಕಷ್ಟವನ್ನೇ ಅನುಭವಿಸಬೇಕಾಗಿರುವಾಗ ಕಳೆದ ಕಾಲವನ್ನು ನೆನೆದು ಸ್ವಲ್ಪ ಸಮಾಧಾನವೆನಿಸುತ್ತದೆ.

ಆಧಿವ್ಯಾಧಿಸಮಾಯುಕ್ತಂ ಜೀವಿತಾಶಾಸಮುತ್ಸುಕಂ ।
ಕಾಲೋ ಬಲೀಯಾನಹಿವದಜ್ಞಾತಃ ಪ್ರತಿಪದ್ಯತೇ ॥ ೧೭

-ಗರುಡಪುರಾಣ, ೧-೨೦

ಚಿಂತೆಯಿಂದಲೂ ರೋಗದಿಂದಲೂ ನೊಂದ, ಬದುಕಬೇಕೆಂಬ ಆಸೆಯಿಂದ ತುಂಬಿದವನ ಮೇಲೆ ಬಲಿಷ್ಠವಾದ ಮೃತ್ಯುವು ಹಾವಿನಂತೆ, ತಿಳಿಯದಹಾಗೆ ಮೇಲೆರುಗುತ್ತದೆ.

ಆಧಿವ್ಯಾಧಿಶತೈರ್ಜನಸ್ಯ ವಿವಿಧೈರಾರೋಗ್ಯಮುನ್ಮೂಲ್ಯತೇ
ಲಕ್ಷ್ಮೀರ್ಯತ್ರ ಪತಂತಿ ತತ್ರ ವಿವೃತದ್ವಾರಾ ಇವ ವ್ಯಾಪದಃ ।
ಜಾತಂ ಜಾತಮವಶ್ಯಮಾಶು ವಿವಶಂ ಮೃತ್ಯುಃ ಕರೋತ್ಯಾತ್ಮನಾ
ತತ್ಕಿಂ ನಾಮ ನಿರಂಕುಶೇನ ವಿಧಿನಾ ಯನ್ನಿರ್ಮಿತಂ ಸುಸ್ಥಿತಮ್ ॥೧೮

-ವೈರಾಗ್ಯಶತಕ-೧೪೦

ಬಗೆಬಗೆಯಾದ ಮನೋರೋಗಗಳು ಮತ್ತು ವ್ಯಾಧಿಗಳು ಆರೋಗ್ಯವನ್ನು ನಾಶ ಮಾಡುತ್ತವೆ. ಐಶ್ವರ್ಯವು ಇರುವೆಡೆಯಲ್ಲಿ ಆಪತ್ತುಗಳು ತುಂಬಿರುವುವು. ಹುಟ್ಟಿದುದೆಲ್ಲವನ್ನೂ ಮೃತ್ಯು ಕೊಂಡೊಯ್ಯುವುದು. ನಿರಂಕುಶವಾದ ವಿಧಿ ಮಾಡಿರುವುದು ಯಾವುದು ಸ್ಥಿರವಾಗಿದೆ?

**ಆಯುಃ ಕರ್ಮ ಚ ವಿತ್ತಂ ಚ ವಿದ್ಯಾ ನಿಧನಮೇವ ಚ ।**
**ಪಂಚೈತಾನ್ಯಪಿ ಸೃಜ್ಯಂತೇ ಗರ್ಭಸ್ಥಸ್ಯೈವ ದೇಹಿನಃ ॥** ೧೯

-ಹಿತೋಪದೇಶ, ೧-೧೭

ಮನುಷ್ಯ ಇನ್ನೂ ಗರ್ಭದಲ್ಲಿದ್ದಾಗಲೇ ಅವನ ಆಯಸ್ಸು, ಕೆಲಸ, ಹಣ, ವಿದ್ಯೆ, ಮರಣ ಇವು ಐದೂ ನಿಶ್ಚಯಿಸಲ್ಪಡುತ್ತವೆ.

**ಆರಭಂತೇಽಲ್ಪಮೇವಾಜ್ಞಾಃ ಕಾಮಂ ವ್ಯಗ್ರಾ ಭವಂತಿ ಚ ।**
**ಮಹಾರಂಭಾಃ ಕೃತಧಿಯಃ ತಿಷ್ಠಂತಿ ಚ ನಿರಾಕುಲಾಃ ॥** ೨೦

-ಶಿಶುಪಾಲವಧ, ೨-೭೯

ಸಾಮಾನ್ಯಬುದ್ಧಿಯುಳ್ಳವರು ಚಿಕ್ಕಕೆಲಸವನ್ನೇ ಆರಂಭಿಸಿದ ರೂ ಬಹಳ ಚಿಂತಾಕುಲರಾಗುತ್ತಾರೆ. ತೊಂದರೆಪಡುತ್ತಾರೆ. ಪ್ರಾಜ್ಞರು ದೊಡ್ಡ ದೊಡ್ಡ ಕೆಲಸಗಳನ್ನು ಕೈಗೊಂಡರೂ ಗಾಬರಿಯಿಲ್ಲದೆ ಶಾಂತರಾಗಿರುತ್ತಾರೆ.

**ಇದಂ ಕೃತಮಿದಂ ಕಾರ್ಯಮಿದಮನ್ಯತ್ ಕೃತಾಕೃತಂ ।**
**ಏವಮೀಹಾಸಮಾಯುಕ್ತಂ ಕೃತಾಂತಃ ಕುರುತೇ ವಶೇ ॥** ೨೧

-ಸುಭಾಷಿತಸುಧಾನಿಧಿ

ಇದನ್ನು ಮಾಡಿದ್ದೇನೆ, ಇದನ್ನು ಮಾಡಬೇಕು, ಈ ಮತ್ತೊಂದು ಸ್ವಲ್ಪ ಮಾಡಿದೆ ಸ್ವಲ್ಪ ಇನ್ನೂ ಮಾಡಬೇಕು ಎಂಬ ಆಶೆಯಿಂದ ಕೂಡಿರುವವನನ್ನು ಮೃತ್ಯು ತನ್ನ ವಶಕ್ಕೆ ತೆಗೆದುಕೊಳ್ಳುತ್ತದೆ.

**ಇಹ ಯತ್ ಕ್ರಿಯತೇ ಕರ್ಮ ಪರತ್ರೈವೋಪಭುಜ್ಯತೇ ।**
**ಸಿಕ್ತಮೂಲಸ್ಯ ವೃಕ್ಷಸ್ಯ ಫಲಂ ಶಾಖಾಸು ದೃಶ್ಯತೇ ॥** ೨೨

-ಸುಭಾಷಿತಸುಧಾನಿಧಿ-೩೯

ಇಲ್ಲಿ ಯಾವ ಕರ್ಮ ಮಾಡುವನೋ ಅದನ್ನೇ ಪರಲೋಕದಲ್ಲಿ ಅನುಭವಿಸುವನು. ಮರದ ಬೇರಿಗೆ ನೀರೆರದರೆ ಮರದ ಹಣ್ಣುಗಳು ಕೊಂಬೆಗಳಲ್ಲಿ ಕಾಣಿಸಿಕೊಳ್ಳುತ್ತವೆ.

ಈಶಃ ಕರಸ್ಥೀಕೃತಕಾಂಚನಾದ್ರಿಃ
ಕುಬೇರಮಿತ್ರಂ ರಜತಾಚಲಸ್ಥಃ ।
ತಥಾಪಿ ಭಿಕ್ಷಾಟನಮಸ್ಯ ಜಾತಂ
ವಿಧೌ ಶಿರಃಸ್ಥೇ ಕುಟಿಲೇ ಕುತಃ ಶ್ರೀಃ ॥ ೨೩

-ವಿಶ್ವಗುಣಾದರ್ಶ-೩೨೯

ಈಶ್ವರನ ಕೈಯಲ್ಲಿರುವುದು ಚಿನ್ನದಬೆಟ್ಟ ; ಮಿತ್ರನೋ ಕುಬೇರ ; ಇರುವುದೋ ರಜತಾಚಲದಲ್ಲಿ ; ಇಷ್ಟಾದರೂ ಅವನು ಭಿಕ್ಷೆ ಬೇಡಬೇಕಾಯಿತು ! ಹಣೆಯಬರಹ ವಕ್ರವಾದರೆ ಐಶ್ವರ್ಯವೆಲ್ಲಿಯದು? (ಕುಟಿಲೇ ವಿಧೌ-ವಕ್ರನಾದ ವಿಧಿ, ವಕ್ರನಾದ ಬಾಳಚಂದ್ರ).

ಉತ್ಪತನ್ನಪಿ ಚಾಕಾಶಂ ವಿಶನ್ನಪಿ ರಸಾತಲಂ ।
ಅಟನ್ನಪಿ ಮಹೀಂ ಕೃತ್ಸ್ನಾಂ ನಾದತ್ತಮುಪತಿಷ್ಠತೇ ॥ ೨೪

ಆಗಸಕ್ಕೆ ಹಾರಿದರೂ, ಪಾತಾಳವನ್ನು ಹೊಕ್ಕರೂ, ಇಡೀ ಭೂಮಂಡಲವನ್ನು ಸುತ್ತಿದರೂ ನಾವು ಕೊಡದೆ ಇದ್ದುದು ನಮಗೆ ದೊರೆಯುವುದಿಲ್ಲ.

ಉತ್ಪಲಸ್ಯಾರವಿಂದಸ್ಯ ಮತ್ಸ್ಯಸ್ಯ ಕುಮುದಸ್ಯ ಚ ।
ಏಕಯೋನಿಪ್ರಸೂತಾನಾಂ ತೇಷಾಂ ರೂಪಃ ಪೃಥಕ್ ಪೃಥಕ್ ॥೨೫

-ಸುಭಾಷಿತಸುಧಾನಿಧಿ-೪೪

ಒಂದೇ ನೀರಿನಲ್ಲಿ ಹುಟ್ಟಿದ ನೀಲದಾವರೆ, ಕಮಲ, ಮೀನು, ಬಿಳಿದಾವರೆ ಇವುಗಳ ರೂಪವು ಮಾತ್ರ ಬೇರೆ ಬೇರೆಯಾಗಿಯೇ ಇದೆ.

ಉದ್ಯಮೇನ ಹಿ ಸಿದ್ಧ್ಯಂತಿ ಕಾರ್ಯಾಣಿ ನ ಮನೋರಥೈಃ ।
ನ ಹಿ ಸಿಂಹಸ್ಯ ಸುಪ್ತಸ್ಯ ಪ್ರವಿಶಂತಿ ಮುಖೇ ಮೃಗಾಃ ॥ ೨೬

-ಪಂಚತಂತ್ರ, ಮಿತ್ರಸಂಪ್ರಾಪ್ತಿ-೧೩೮

ಪ್ರಯತ್ನದಿಂದ ಕಾರ್ಯಗಳು ಸಿದ್ಧಿಸುತ್ತವೆಯೇ ವಿನಾ ಬರಿಯ ಬಯಕೆಗಳಿಂದಲ್ಲ. ನಿದ್ರಿಸುತ್ತಿರುವ ಸಿಂಹದ ಬಾಯಲ್ಲಿ ಮೃಗಗಳು ಬಂದು ತಾವಾಗಿ ಪ್ರವೇಶಿಸುವುದಿಲ್ಲ.

ಉದುಂಬರಫಲಾನೀವ ಬ್ರಹ್ಮಾಂಡಾನ್ಯತ್ತಿ ಯಃ ಸದಾ ।
ಸರ್ವಗರ್ವಾಪಹಃ ಕಾಲಸ್ತಸ್ಯ ಕೇ ಮಶಕಾ ವಯಮ್ ॥ ೨೭

-ರಸಗಂಗಾಧರ

ಅತ್ತಿಯಹಣ್ಣುಗಳನ್ನು ಮೆದ್ದಂತೆ ಕಾಲವು ಬ್ರಹ್ಮಾಂಡಗಳನ್ನೇ ತಿಂದುಹಾಕುತ್ತಿದೆ. ಸರ್ವರ ಗರ್ವವನ್ನು ತುಳಿದುಹಾಕುವ ಕಾಲದೆದುರಿಗೆ ನೊರಜುಗಳಂತಿರುವ ನಾವು ಯಾರು?

**ಉದ್ಯೋಗಿನಂ ಪುರುಷಸಿಂಹಮುಪೈತಿ ಲಕ್ಷ್ಮೀ-**
**ರ್ದೈವಂ ಹಿ ದೈವಮಿತಿ ಕಾಪುರುಷಾ ವದಂತಿ ।**
**ದೈವಂ ನಿಹತ್ಯ ಕುರು ಪೌರುಷಮಾತ್ಮಶಕ್ತ್ಯಾ**
**ಯತ್ನೇ ಕೃತೇ ಯದಿ ನ ಸಿದ್ಧ್ಯತಿ ಕುತ್ರ ದೋಷಃ ॥ ೨೮**

-ಹಿತೋಪದೇಶ, ೧-೨೨

ಉದ್ಯೋಗಮಾಡುವ ಪುರುಷಸಿಂಹನನ್ನು ಲಕ್ಷ್ಮಿ ಸೇರುತ್ತಾಳೆ. ಕೈಲಾಗದ ಅಲ್ಪರು ದೈವ, ದೈವ ಎಂದು ಹೇಳುತ್ತಾರೆ. ಆ ದೈವವನ್ನು ಮರ್ದಿಸಿ ನಿನ್ನ ಶಕ್ತಿಗನು ಗುಣವಾಗಿ ಪುರುಷಪ್ರಯತ್ನಮಾಡು. ಯತ್ನಮಾಡಿಯೂ ಒಂದುವೇಳೆ ಸಿದ್ಧಿಸದೆ ಹೋದರೆ ತಪ್ಪೆಲ್ಲಿಯದು?

**ಉಪರ್ಯುಪರಿ ಲೋಕಸ್ಯ ಸರ್ವೋ ಭವಿತುಮಿಚ್ಛತಿ ।**
**ಯತತೇ ಚ ಯಥಾಶಕ್ತಿ ನ ಚ ತದ್ವರ್ತತೇ ತಥಾ ॥ ೨೯**

-ಸುಭಾಷಿತಸುಧಾನಿಧಿ

ಎಲ್ಲರೂ ಲೋಕವನ್ನೇ ಮೀರಿಸಿ ಮೇಲೆಮೇಲಿರಲು ಬಯಸುತ್ತಾರೆ. ತಮ್ಮ ಶಕ್ತಿಗನುಗುಣವಾಗಿ ಪ್ರಯತ್ನಿಸುತ್ತಾರೆ. ಆದರೆ ಮಾತ್ರ ಹಾಗೆ ಆಗುವುದಿಲ್ಲ.

**ಕರ್ತುಮಿಷ್ಟಂ ಅನಿಷ್ಟಂ ವಾ ಕಃ ಪ್ರಭುರ್ವಿಧಿನಾ ವಿನಾ ।**
**ಕರ್ತಾರಮನ್ಯಮಾರೋಪ್ಯ ಲೋಕಸ್ತುಷ್ಯತಿ ಕುಪ್ಯತಿ ॥ ೩೦**

-ಸುಭಾಷಿತಸುಧಾನಿಧಿ

ಇಷ್ಟವಾದದ್ದನ್ನೋ ಅಥವಾ ಇಷ್ಟವಲ್ಲದ್ದನ್ನೋ ಮಾಡಲು ವಿಧಿಯನ್ನುಳಿದು ಯಾರು ತಾನೇ ಸಮರ್ಥರು ? ಮಾಡುವವನು ಇನ್ನೊಬ್ಬನೆಂದು ಆರೋಪಿಸಿ ಜನ ಸಂತೋಷಿಸುತ್ತಾರೆ ಹಾಗೇ ಕೋಪಗೊಳ್ಳುತ್ತಾರೆ.

**ಕಥಂ ಲಂಬಸಟಃ ಸಿಂಹೋ ಮೃಗೇಣ ವಿನಿಪಾತ್ಯತೇ ।**
**ಗಜೋ ವಾ ಸುಮಹಾನ್ಮತ್ತಃ ಶೃಗಾಲೇನ ವಿಹನ್ಯತೇ ॥ ೩೧**

-ಅಭಿಷೇಕನಾಟಕ, ೩-೨೦

ಉದ್ದವಾದ ಕೇಸರಗಳಿಂದ ಭಯಂಕರವಾದ ಸಿಂಹವನ್ನು ಸಾಮಾನ್ಯವಾದ ಜಿಂಕೆಯು ಬೀಳಿಸಬಲ್ಲುದೇ? ಮದಿಸಿದ ದೊಡ್ಡ ಆನೆಯನ್ನು ನರಿಯು ಕೊಲ್ಲುವುದು ಸಾಧ್ಯವೇ?

**ಕರ್ಮಣ್ಯೇವಾಧಿಕಾರಸ್ತೇ ಮಾ ಫಲೇಷು ಕದಾಚನ ।**
**ಮಾ ಕರ್ಮಫಲಹೇತುರ್ಭೂಃ ಮಾ ತೇ ಸಂಗೋಽಸ್ತ್ವಕರ್ಮಣಿ ॥ ೩೨**

-ಭಗವದ್ಗೀತಾ, ೨-೪೭

ಕರ್ತವ್ಯಕರ್ಮದಲ್ಲಿ ನಿನಗೆ ಅಧಿಕಾರವಿದೆ. ಫಲಗಳಲ್ಲಿ ಎಂದಿಗೂ ನಿನಗೆ ಅಧಿಕಾರವಿಲ್ಲ. ಫಲವನ್ನು ಗಳಿಸಬೇಕೆಂದು ಕರ್ಮವನ್ನು ಮಾಡಬೇಡ. ಕರ್ಮವನ್ನು ಮಾಡಬಾರದೆಂಬ ನಿರಾಸಕ್ತಿಯೂ ನಿನಗೆ ಬೇಡ.

**ಕಶ್ಚಿನ್ಮಾಂ ಪ್ರೇರಯತ್ಯೇವಮಿತ್ಯನರ್ಥಕುಕಲ್ಪನೇ ।**
**ಯಃ ಸ್ಥಿತೋ ದೃಷ್ಟಮುತ್ಸೃಜ್ಯ ತ್ಯಾಜ್ಯೋಽಸೌ ದೂರತೋಽಧಮಃ ॥ ೩೩**

-ಯೋಗಾವಾಸಿಷ್ಠ

'ಯಾವುದೋ ದೈವವು ನನ್ನನ್ನು ಪ್ರೇರಿಸುತ್ತಿದೆ' ಎನ್ನುವುದು ಅನರ್ಥಕರವಾದ ಕುತ್ಸಿತಕಲ್ಪನೆ. ದೃಷ್ಟವಾದ ವಿಷಯದಲ್ಲಿ ಪೌರುಷವನ್ನು ತ್ಯಜಿಸಿ ಸುಮ್ಮನಿರತಕ್ಕವನು ಅಧಮ. ಅವನನ್ನು ದೂರದಿಂದಲೇ ತ್ಯಜಿಸಬೇಕು.

**ಕಾತರಾ ಯೇಽಪ್ಯಶಕ್ತಾ ವಾ ನೋತ್ಸಾಹಸ್ತೇಷು ಜಾಯತೇ ।**
**ಪ್ರಾಯೇಣ ಹಿ ನರೇಂದ್ರಶ್ರೀಃ ಸೋತ್ಸಾಹೈರೇವ ಭುಜ್ಯತೇ ॥ ೩೪**

-ಸ್ವಪ್ನವಾಸವದತ್ತ, ೬-೭

ಲೋಕದಲ್ಲಿ ಹೇಡಿಗಳು, ಕೈಲಾಗದವರು, ಲವಲವಿಕೆಯಿಂದ ಕೆಲಸ ಮಾಡಲಾರರು. ಅವರಲ್ಲಿ ಉತ್ಸಾಹವಿರುವುದಿಲ್ಲ. ವಿಶೇಷವಾಗಿ ಉತ್ಸಾಹವಿರುವವರು ಮಾತ್ರ ರಾಜ್ಯಲಕ್ಷ್ಮಿಯನ್ನು ಅನುಭವಿಸಬಲ್ಲರು.

**ಕುಮುದವನಮಪಶ್ರಿ ಶ್ರೀಮದಂಭೋಜಷಂಡಂ**
**ತ್ಯಜತಿ ಮುದಮುಲೂಕಃ ಪ್ರೀತಿಮಾಂಶ್ಚಕ್ರವಾಕಃ ।**
**ಉದಯಮಹಿಮರಶ್ಮಿರ್ಯಾತಿ ಶೀತಾಂಶುರಸ್ತಂ**
**ಹತವಿಧಿಲಸಿತಾನಾಂ ಹೀ ವಿಚಿತ್ರೋ ವಿಪಾಕಃ ॥ ೩೫**

-ಶಿಶುಪಾಲವಧ, ೧೧-೬೪

ಕನ್ನೈದಿಲೆಗಳ ವನವು ಕಾಂತಿಹೀನವಾಗಿದೆ. ತಾವರೆಗಳು ಅರಳಿ ಸುಂದರವಾಗಿ ಕಾಣಿಸುತ್ತಿವೆ. ಗೂಬೆಗಳಿಗೆ ಆನಂದವಿಲ್ಲ. ಚಕ್ರವಾಕಗಳು ನಲಿಯುತ್ತಿವೆ. ಸೂರ್ಯನು ಹುಟ್ಟುತ್ತಿದ್ದಾನೆ. ಚಂದ್ರನು ಮುಳುಗುತ್ತಿದ್ದಾನೆ. ದುರ್ವಿಧಿಯ ಚೇಷ್ಟೆ ವಿಚಿತ್ರವಾದುದು.

**ಗಜಭುಜಂಗಮಯೋರಪಿ ಬಂಧನಂ**
**ಶಶಿದಿವಾಕರಯೋರ್ಗ್ರಹಪೀಡನಮ್ ।**
**ಮತಿಮತಾಂ ಚ ವಿಲೋಕ್ಯ ದರಿದ್ರತಾಂ**
**ವಿಧಿರಹೋ ಬಲವಾನಿತಿ ಮೇ ಮತಿಃ ॥ ೩೬**

-ನೀತಿಶತಕ-೮೮

ಬಲಿಶಾಲಿಯಾದ ಆನೆ, ಕ್ರೂರವಾದ ಸರ್ಪ-ಇವುಗಳನ್ನು ಸೆರೆಹಿಡಿಯಲಾಗುತ್ತದೆ. ಸೂರ್ಯಚಂದ್ರರಿಗೂ ರಾಹುವಿನಿಂದ ಪೀಡೆಯುಂಟು. ಬುದ್ಧಿಶಾಲಿಗಳಿಗೂ ಬಡತನ ವಿರುತ್ತದೆ. ಇದನ್ನು ಪರಿಶೀಲಿಸಿದರೆ, 'ಆಹಾ, ವಿಧಿಯ ಲೀಲೆ ಪ್ರಬಲ' ಎಂದು ನನ್ನ ನಿಶ್ಚಯ.

**ಗುಣವದಗುಣವದ್ವಾ ಕುರ್ವತಾ ಕಾರ್ಯಮಾದೌ**
**ಪರಿಣತಿರವಧಾರ್ಯಾ ಯತ್ನತಃ ಪಂಡಿತೇನ ।**
**ಅತಿರಭಸಕೃತಾನಾಂ ಕರ್ಮಣಾಮಾವಿಪತ್ತೇಃ**
**ಭವತಿ ಹೃದಯದಾಹೀ ಶಲ್ಯತುಲ್ಯೋ ವಿಪಾಕಃ ॥** ೩೭

-ನೀತಿಶತಕ-೯೭

ಕೆಲಸ ಗುಣವುಳ್ಳದ್ದಾಗಲಿ, ಗುಣವಿಲ್ಲದ್ದಾಗಲಿ ಅದನ್ನು ಮಾಡುವ ಮೊದಲು ಪಂಡಿತನಾದವನು ಯತ್ನದಿಂದ ಪರಿಣಾಮವನ್ನು ವಿಮರ್ಶಿಸಿ ತಿಳಿದುಕೊಳ್ಳಬೇಕು. ಬಹಳ ಅವಸರದಲ್ಲಿ ಮಾಡಿದ ಕೆಲಸಗಳ ಫಲವು ಮುಳ್ಳಿನಂತೆ ಸಾಯುವವರೆಗೂ ಹೃದಯವನ್ನು ನೋಯಿಸುತ್ತಿರುತ್ತದೆ.

**ಜಡಾನಾಮವಿವೇಕಾನಾಮಶೂರಾಣಾಮಪಿ ಪ್ರಭೋ ।**
**ಭಾಗ್ಯಭೋಜ್ಯಾನಿ ರಾಜ್ಯಾನಿ ಸಂತ್ಯನೀತಿಮತಾಮಪಿ ॥** ೩೮

-ವಿಷ್ಣುಪುರಾಣ, ೧-೧೯-೪೫

ಸೋಮಾರಿಗಳು, ಅವಿವೇಕಿಗಳು, ಹೇಡಿಗಳು, ನೀತಿಯಿಲ್ಲದವರು ರಾಜ್ಯವನ್ನು ಅದೃಷ್ಟದಿಂದ ಪಡೆದು ಆಳುತ್ತಾರೆ.

**ಜ್ವಲಿತಂ ನ ಹಿರಣ್ಯರೇತಸಂ**
**ಚಯಮಾಸ್ಕಂದತಿ ಭಸ್ಮನಾಂ ಜನಃ ।**
**ಅಭಿಭೂತಿಭಯಾದಸೂನತಃ**
**ಸುಖಮುಜ್ಝಂತಿ ನ ಧಾಮ ಮಾನಿನಃ ॥** ೩೯

-ಕಿರಾತಾರ್ಜುನೀಯ, ೨-೨೦

ಜನರು ಬೂದಿಯನ್ನು ತುಳಿಯುತ್ತಾರೆ. ಆದರೆ ಉರಿಯುತ್ತಿರುವ ಬೆಂಕಿಯ ಹತ್ತಿರವೂ ಹೋಗುವುದಿಲ್ಲ. ಹಾಗೆ ಅಭಿಮಾನಿಗಳು ಅಪಮಾನದ ಹೆದರಿಕೆಯಿಂದ ಪ್ರಾಣಗಳನ್ನಾದರೂ ತೊರೆಯುತ್ತಾರೆ, ತಮ್ಮ ತೇಜಸ್ಸನ್ನು ಬಿಡುವುದಿಲ್ಲ.

**ಜಾನನ್ನಪಿ ನರೋ ದೈವಾತ್ಪ್ರಕರೋತಿ ವಿಗರ್ಹಿತಂ ।**
**ಕರ್ಮ ಕಿಂ ಕಸ್ಯಚಿಲ್ಲೋಕೇ ಗರ್ಹಿತಂ ರೋಚತೇ ಕಥಮ್ ॥** ೪೦

-ಪಂಚತಂತ್ರ, ಲಬ್ಧಪ್ರಣಾಶ-೩೭

ಮನುಷ್ಯನು ತಿಳಿದೂ ತಿಳಿದೂ ಕೆಟ್ಟಕೆಲಸವನ್ನು ವಿಧಿವಶನಾಗಿ ಮಾಡುತ್ತಾನೆ. ಇಲ್ಲದಿದ್ದರೆ ಲೋಕದಲ್ಲಿ ಕೆಟ್ಟಕೆಲಸ ಯಾರಿಗೆ ತಾನೇ ಪ್ರಿಯವಾದೀತು?

**ತದಾತ್ವೇ ನೂತನಂ ಸರ್ವಂ ಆಯತ್ಯಾಂ ಚ ಪುರಾತನಂ ।**
**ನ ದೋಷಾಯೈತದುಭಯಂ ನ ಗುಣಾಯ ಚ ಕಲ್ಪತೇ ॥ ೪೧**

-ಯಾದವಾಭ್ಯುದಯ, ೧-೬

ಪ್ರತಿಯೊಂದೂ ಅದರ ಕಾಲಕ್ಕೆ ಹೊಸದು. ಕಾಲಕಳೆದರೆ ಹಳತು ಆಗುತ್ತದೆ. ಆದುದರಿಂದ ಹೊಸತನವಾಗಲಿ ಹಳೆತನವಾಗಲಿ ಗುಣದೋಷಗಳಿಗೆ ಕಾರಣವಾಗುವುದಿಲ್ಲ.

**ತಪಸ್ಯಂತಃ ಸಂತಃ ಕಿಮಧಿನಿವಸಾಮಃ ಸುರನದೀಂ**
**ಗುಣೋದಾರಾನ್ ದಾರಾನುತಪರಿಚರಾಮಃ ಸವಿನಯಮ್ ।**
**ಪಿಬಾಮಃ ಶಾಸ್ತ್ರೌಘಾನುತ ವಿವಿಧಕಾವ್ಯಾಮೃತರಸಾ-**
**ನ್ನ ವಿದ್ಮಃ ಕಿಂ ಕುರ್ಮಃ ಕತಿಪಯನಿಮೇಷಾಯುಷಿ ಜನೇ॥ ೪೨**

-ವೈರಾಗ್ಯಶತಕ-೭೬

ಮನುಷ್ಯರಿಗೆ ಈ ಲೋಕದಲ್ಲಿ ಕೆಲವೇ ನಿಮಿಷಗಳಾಯುಸ್ಸಿರುವಾಗ ನಾವು ಏನು ಮಾಡಬೇಕೆಂದು ಗೊತ್ತಿಲ್ಲ. ತಪಸ್ಸು ಮಾಡುತ್ತಾ ಗಂಗಾತೀರದಲ್ಲಿ ವಾಸಿಸೋಣವೇ-ಇಲ್ಲದಿದ್ದರೆ, ಗುಣಗಳಿಂದ ಕೂಡಿದ ಪತ್ನಿಯರನ್ನು ಆಶ್ರಯಿಸೋಣವೇ ಅಥವಾ ನಾನಾ ಬಗೆಯ ಕಾವ್ಯರಸಗಳನ್ನು ಕುಡಿಯೋಣವೆ? ಶಾಸ್ತ್ರಸಮೂಹಗಳನ್ನು ಅಧ್ಯಯನ ಮಾಡೋಣವೇ?

**ತಾವತ್ಪ್ರಮೋದತೇ ಸ್ವರ್ಗೇ ಯಾವತ್ಪುಣ್ಯಂ ಸಮಾಪ್ಯತೇ ।**
**ಕ್ಷೀಣಪುಣ್ಯಃ ಪತತ್ಯರ್ವಾಗನಿಚ್ಛನ್ ಕಾಲಚಾಲಿತಃ ॥ ೪೩**

-ಭಾಗವತ, ೧೧-೧೦-೨೬

ಎಲ್ಲಿಯವರೆಗೂ ಮನುಷ್ಯನ ಪುಣ್ಯವು ಇರುತ್ತದೆಯೋ ಅಲ್ಲಿಯವರೆಗೂ ಅವನು ಸ್ವರ್ಗಲೋಕದಲ್ಲಿ ಸಂತೋಷಪಡುತ್ತಾನೆ. ಪುಣ್ಯವು ಮುಗಿದಮೇಲೆ ತನಗಿಷ್ಟವಿಲ್ಲದಿದ್ದರೂ ಕಾಲದಿಂದ ಚಲಿಸಲ್ಪಟ್ಟು ತಲೆಕೆಳಗಾಗಿ ಬೀಳುತ್ತಾನೆ.

**ತಾವತ್ಕೋಕಿಲ ವಿರಸಾನ್ ಯಾಪಯ**
**ದಿವಸಾನ್ ವನಾಂತರೇ ನಿವಸನ್ ।**
**ಯಾವನ್ಮಿಳದಳಿಮಾಲಃ ಕೋಽಪಿ**
**ರಸಾಲಃ ಸಮುಲ್ಲಸತಿ ॥ ೪೪**

-ಭಾಮಿನೀವಿಲಾಸ, ೧-೬

ಎಲೈ ಕೋಗಿಲೆ! ನೀರಸವಾದ ಈ ಕೆಲವು ದಿವಸಗಳನ್ನು ಯಾವುದಾದರೂ ಕಾಡಿನ ಮೂಲೆಯಲ್ಲಿ ಕಳೆ. ಒಂದಲ್ಲೊಂದು ದಿವಸ ಪರಿಮಳದಿಂದ ದುಂಬಿಗಳ ಹಿಂಡನ್ನೇ ಸೆಳೆಯುವ, ಮಾವು ಅರಳುವ ವಸಂತವು ಬಂದೇ ಬರುತ್ತದೆ. ಕಷ್ಟಕಾಲವನ್ನು ಹೇಗಾದರೂ ಕಳೆ. ಆನಂದವನ್ನು ಕೊಡುವ ಸಮಯವು ಜೀವನದಲ್ಲಿ ಬಂದೇ ಬರುತ್ತದೆ.

ತಿಷ್ಠನ್ ಭಾತಿ ಪಿತುಃ ಪುರೋ ಭುವಿ ಯಥಾ ಸಿಂಹಾಸನೇ ಕಿಂ ತಥಾ
ಯತ್ಸಂವಾಹಯತಃ ಸುಖಂ ತು ಚರಣೌ ತಾತಸ್ಯ ಕಿಂ ರಾಜಕಂ ।
ಕಿಂ ಭುಕ್ತೇ ಭುವನತ್ರಯೇ ಧೃತಿರಸೌ ಭುಕ್ತೋಜ್ಝಿತೇ ಯಾ ಗುರೋಃ
ಆಯಾಸಃ ಖಲು ರಾಜ್ಯಮುಜ್ಝಿತಗುರೋಸ್ತೇ ನಾಸ್ತಿ ಕಶ್ಚಿದ್ಗುಣಃ ॥

-ನಾಗಾನಂದ, ೧-೭

ತಂದೆಯ ಮುಂದುಗಡೆ ನಿಂತಿದ್ದರೆ ಶೋಭಿಸುವಂತೆ, ಸಿಂಹಾಸನದಲ್ಲಿ ಕುಳಿತಿದ್ದರೆ ಶೋಭಿಸುವುದಿಲ್ಲ. ತಂದೆಯ ಪಾದಗಳನ್ನು ಒತ್ತುತ್ತಿರುವಾಗ ಉಂಟಾಗುವ ಸುಖವು ರಾಜ್ಯವನ್ನು ಆಳಿದರೆ ಬರುವುದಿಲ್ಲ. ತಂದೆಯು ಊಟಮಾಡಿದಮೇಲೆ ಊಟ ಮಾಡುವುದರಲ್ಲಿರುವ ತೃಪ್ತಿಯು ಮೂರುಲೋಕಗಳನ್ನು ಆಳಿದರೂ ಬರುವುದಿಲ್ಲ. ತಂದೆಯನ್ನು ಬಿಟ್ಟವನಿಗೆ ರಾಜ್ಯವು ಹೊರೆಯೇ ಹೊರತು ಅದರಲ್ಲಿ ಯಾವ ಗುಣವೂ ಇಲ್ಲ.

ತುಷ್ಟೋ ಹಿ ರಾಜಾ ಯದಿ ಸೇವಕೇಭ್ಯೋ
ಭಾಗ್ಯಾತ್ ಪರಂ ನೈವ ದದಾತಿ ಕಿಂಚಿತ್ ।
ಅಹರ್ನಿಶಂ ವರ್ಷತಿ ವಾರಿವಾಹಃ
ತಥಾಪಿ ಪತ್ರತ್ರಿತಯಃ ಪಲಾಶಃ ॥ ೪೬

-ಸಮಯೋಚಿತಪದ್ಯಮಾಲಿಕಾ

ರಾಜನು ಸಂತುಷ್ಟನಾದರೆ ಸೇವಕರಿಗೆ ಅವರ ಭಾಗ್ಯಕ್ಕಿಂತ ಹೆಚ್ಚಿನದೇನನ್ನು ಕೊಡುವುದಿಲ್ಲ. ಮೋಡವು ಹಗಲೂ ರಾತ್ರಿ ಮಳೆಯನ್ನು ಸುರಿಸುತ್ತಲೇ ಇರುತ್ತದೆ, ಆದರೆ ಮುತ್ತುಗದಲ್ಲಿ ಮೂರೇ ಎಲೆಗಳಿರುತ್ತವೆ!

ದಾನೇ ತಪಸಿ ಸತ್ಯೇ ಚ ಯಸ್ಯ ನೋಚ್ಚರಿತಂ ಯಶಃ ।
ವಿದ್ಯಾಯಾಮರ್ಥಲಾಭೇ ವಾ ಮಾತುರುಚ್ಚಾರ ಏವ ಸಃ ॥ ೪೭

-ಮಹಾಭಾರತ, ಉದ್ಯೋಗ. ೧೩೩-೨೩

ದಾನ, ತಪಸ್ಸು, ಸತ್ಯ, ವಿದ್ಯೆ ಅಥವಾ ಧನಸಂಪಾದನೆ-ಇವುಗಳಲ್ಲಿ ಯಾವನ ಕೀರ್ತಿ ಹರಡಿಲ್ಲವೋ ಆತನು ತಾಯಿಯ ಮಲವೇ ಸರಿ.

**ದಾರಿದ್ರ್ಯರೋಗದುಃಖಾನಿ ಬಂಧನವ್ಯಸನಾನಿ ಚ ।**
**ಆತ್ಮಾಪರಾಧವೃಕ್ಷಸ್ಯ ಫಲಾನ್ಯೇತಾನಿ ದೇಹಿನಾಮ್ ॥** ೪೮

-ಪಂಚತಂತ್ರ, ಕಾಕೋಲೂಕೀಯ-೧೫೩

ಜೀವಿಗಳಿಗೆ ಉಂಟಾಗುವ ಬಡತನ, ರೋಗ, ದುಃಖ, ಬಂಧನ ವ್ಯಸನ ಮೊದಲಾದವು ತಾವುತಾವು ಮಾಡಿದ ಅಪರಾಧವೆಂಬ ಮರ ಬಿಟ್ಟ ಹಣ್ಣುಗಳು.

**ದ್ವೀಪಾದನ್ಯಸ್ಮಾದಪಿ ಮಧ್ಯಾದಪಿ**
**ಜಲನಿಧೇರ್ದಿಶೋಽಪ್ಯಂತಾತ್ ।**
**ಆನೀಯ ಝಟಿತಿ ಘಟಯತಿ**
**ವಿಧಿರಭಿಮತಮಭಿಮುಖೀಭೂತಃ ॥** ೪೯

-ರತ್ನಾವಲಿ, ೧-೬

ವಿಧಿಯು ತನಗೆ ಒಪ್ಪಿಗೆಯಾದರೆ ಎಂತಹವರನ್ನೂ ಸಹ ಒಟ್ಟಿಗೆ ಸೇರಿಸುತ್ತದೆ. ಅವರು ಬೇರೆ ದ್ವೀಪದಲ್ಲಿ ಮಹಾಸಮುದ್ರದ ಮಧ್ಯದಲ್ಲಿರಲಿ, ದಿಕ್ಕುಗಳ ಕೊನೆಯಲ್ಲಿರಲಿ ಲೆಕ್ಕಿಸುವುದಿಲ್ಲ.

**ದೇವೈಕಶರಣೇ ಪುಂಸಿ ವೃಥಾ ಕೃಷ್ಯಾದಯಃ ಕ್ರಿಯಾಃ ।**
**ಅಕೃತ್ವಾ ಕಂಚಿದಾರಂಭಮಾಕಾಶಕವಲೋ ಭವೇತ್ ॥** ೫೦

-ಯಶಸ್ತಿಲಕಚಂಪೂ, ೩-೪೮

ಮನುಷ್ಯನು ದೈವವೊಂದನ್ನೇ ಶರಣುಹೋಗುವುದಾದರೆ, ಕೃಷಿ ಮುಂತಾದ ಕೆಲಸಗಳು ವ್ಯರ್ಥವಾದಾವು. ಪ್ರಯತ್ನವನ್ನು ಮಾಡದಿದ್ದಲ್ಲಿ ಅವನು ಆಕಾಶವನ್ನು ತಿನ್ನುತ್ತಿರಬೇಕಾದೀತು!

**ದೈವೇ ಪುರುಷಕಾರೇ ಚ ಕರ್ಮಸಿದ್ಧಿರ್ವ್ಯವಸ್ಥಿತಾ ।**
**ತತ್ರ ದೈವಮಭಿವ್ಯಕ್ತಂ ಪೌರುಷಂ ಪೌರ್ವದೇಹಿಕಮ್ ॥** ೫೧

-ಯಾಜ್ಞವಲ್ಕ್ಯ, ೧-೩೪೯

ಯಾವ ಕೆಲಸವೇ ಆಗಲಿ ಅದೃಷ್ಟದಿಂದಲೂ ಪುರುಷಪ್ರಯತ್ನದಿಂದಲೂ ಫಲಿಸುತ್ತದೆ. ಇದರಲ್ಲಿ ಪೂರ್ವಜನ್ಮದಿಂದ ಆರ್ಜಿತವಾದ ಪುರುಷಶಕ್ತಿಯೇ ದೈವವೆಂದೂ ಅದೃಷ್ಟವೆಂದೂ ಹೇಳಲ್ಪಡುತ್ತದೆ.

**ದೈವೇನ ಪ್ರಭುಣಾ ಸ್ವಯಂ ಜಗತಿ ಯದ್ಯಸ್ಯ ಪ್ರಮಾಣೀಕೃತಂ**
**ತತ್ತಸ್ಯೋಪನಮೇನ್ಮನಾಗಪಿ ಮಹಾನ್ನೈವಾಶ್ರಯಃ ಕಾರಣಮ್ ।**
**ಸರ್ವಾಶಾಪರಿಪೂರಕೇ ಜಲಧರೇ ವರ್ಷತ್ಯಪಿ ಪ್ರತ್ಯಹಂ**
**ಸೂಕ್ಷ್ಮಾ ಏವ ಪತಂತಿ ಚಾತಕಮುಖೇ ದ್ವಿತ್ರಾಃ ಪಯೋಬಿಂದವಃ॥**

-ನೀತಿಶತಕ-೯೧

ಪ್ರಭುವಾದ ದೈವದಿಂದ ಯಾರಿಗೆ ಯಾವುದು ಲಭಿಸಬೇಕೆಂದಿದೆಯೋ ಅದು ಅವನಿಗೆ ಸಿಕ್ಕಲೇಬೇಕು. ದೊಡ್ಡದಾದ ಆಶ್ರಯವು ಕಾರಣವಾಗುವುದೇ ಇಲ್ಲ. ಎಲ್ಲಾ ದಿಕ್ಕುಗಳನ್ನೂ ತುಂಬುವ ಮೋಡವು ನಿತ್ಯವೂ ಮಳೆಸುರಿಸುತ್ತಿದ್ದರೂ ಎರಡೋ ಅಥವಾ ಮೂರೋ ಸಣ್ಣ ಸಣ್ಣ ನೀರಿನ ಹನಿಗಳು ಮಾತ್ರ ಚಾತಕಪಕ್ಷಿಯ ಬಾಯಲ್ಲಿ ಬೀಳುತ್ತವೆ.

**ದೋಷಭೀತೇರನಾರಂಭಃ ಕಾಪುರುಷಸ್ಯ ಲಕ್ಷಣಂ ।**
**ಕೈರಜೀರ್ಣಭಯಾದ್ಭ್ರಾತಃ ಭೋಜನಂ ಪರಿಹೀಯತೇ ॥** ೫೩

-ಹಿತೋಪದೇಶ, ಸುಹೃದ್ಭೇದ-೫೦

ದೋಷಗಳಿಗೆ ಹೆದರಿ ಕೆಲಸವನ್ನಾರಂಭಮಾಡದೇ ಇರುವುದು ಹೀನಪುರುಷನ ಲಕ್ಷಣ. ಅಜೀರ್ಣವಾಗುವುದೆಂಬ ಭಯದಿಂದ ಊಟಮಾಡುವುದನ್ನು ಯಾರೂ ಬಿಡುವುದಿಲ್ಲ.

**ನ ಕಾಲಃ ಕಾಲಮತ್ಯೇತಿ ನ ಕಾಲಃ ಪರಿಹೀಯತೇ ।**
**ಸ್ವಭಾವಂ ಚ ಸಮಾಸಾದ್ಯ ನ ಕಶ್ಚಿದತಿವರ್ತತೇ ॥** ೫೪

-ರಾಮಾಯಣ, ಕಿಷ್ಕಿಂಧಾ, ೨೫-೬

ಕಾಲವು ತನ್ನ ವ್ಯವಸ್ಥೆಯನ್ನು ಎಂದಿಗೂ ಉಲ್ಲಂಘಿಸುವುದಿಲ್ಲ. ಕಾಲಕ್ಕೆ ಹಾನಿಯೆಂಬುದಿಲ್ಲ. ಯಾವನೂ ತನ್ನ ಪ್ರಾರಬ್ಧಕರ್ಮವನ್ನು ಮೀರಿಹೋಗಲಾರನು.

**ನ ಕಾಲೋ ದಂಡಮುದ್ಯಮ್ಯ ಶಿರಃ ಕೃಂತತಿ ಕಸ್ಯಚಿತ್ ।**
**ಕಾಲಸ್ಯ ಬಲಮೇತಾವದ್ ವಿಪರೀತಾರ್ಥದರ್ಶನಮ್ ॥** ೫೫

-ಮಹಾಭಾರತ, ಸಭಾ. ೮೧-೧೧

ಯಮನು ದಂಡಾಯುಧವನ್ನೆತ್ತಿ ಯಾರ ತಲೆಯನ್ನೂ ಕತ್ತರಿಸುವುದಿಲ್ಲ. ಅವನ ಬಲ ಇಷ್ಟೇ-ವಿಷಯವನ್ನು ವಿರುದ್ಧವಾಗಿ ತಿಳಿದುಕೊಳ್ಳುವಂತೆ ಮಾಡುವುದು.

**ನ ಕಾಲಸ್ಯಾಸ್ತಿ ಬಂಧುತ್ವಂ ನ ಹೇತುರ್ನ ಪರಾಕ್ರಮಃ ।**
**ನ ಮಿತ್ರಜ್ಞಾತಿಸಂಬಂಧಃ ಕಾರಣಂ ನಾತ್ಮನೋ ವಶಃ ॥** ೫೬

-ರಾಮಾಯಣ, ಕಿಷ್ಕಿಂಧಾ ೨೫-೭

ಬಂಧುವೆಂಬ ಪಕ್ಷಪಾತ ಕಾಲಕ್ಕೆ ಇಲ್ಲ. ಕಾಲವನ್ನು ತಡೆಯಲು ಯಾವ ಉಪಾಯವೂ ಇಲ್ಲ. ಅದರ ವಿಷಯದಲ್ಲಿ ಪರಾಕ್ರಮವು ನಡೆಯದು. ಮಿತ್ರರ ಅಥವಾ ಬಂಧುಬಳಗಗಳ ಸಹಾಯವು ಕಾಲವನ್ನೆದುರಿಸಲು ನೆರವಾಗದು. ಅದು ನಮಗೆ ವಶವಾಗತಕ್ಕದಲ್ಲ.

ನ ಕಾಲಸ್ಯ ಪ್ರಿಯಃ ಕಶ್ಚಿನ್ನ ದ್ವೇಷ್ಯಃ ಕುರುಸತ್ತಮ ।
ನ ಮಧ್ಯಸ್ಥಃ ಕ್ವಚಿತ್ ಕಾಲಃ ಸರ್ವಂ ಕಾಲಃ ಪ್ರಕರ್ಷತಿ ॥ ೫೭

-ಮಹಾಭಾರತ, ಸ್ತ್ರೀ-೨-೨೩

ಯುಧಿಷ್ಠಿರ, ಕಾಲನಿಗೆ ಪ್ರಿಯನೂ ಇಲ್ಲ ; ವೈರಿಯೂ ಇಲ್ಲ. ಅವನು ಎಂದಿಗೂ ಮಧ್ಯಸ್ಥನೂ ಅಲ್ಲ. ಕಾಲನು ಸರ್ವರನ್ನೂ ಎಳೆದುಕೊಂಡು ಹೋಗುತ್ತಾನೆ.

ನ ಬುದ್ಧಿರ್ಧನಲಾಭಾಯ ನ ಜಾಡ್ಯಮಸಮೃದ್ಧಯೇ ।
ಕರ್ಮಪರ್ಯಾಯವೃತ್ತಾಂತಂ ಪ್ರಾಜ್ಞೋ ಜಾನಾತಿ ನೇತರಃ ॥ ೫೮

-ಸುಭಾಷಿತಸುಧಾನಿಧಿ

ಬುದ್ಧಿ ಹಣದ ಸಂಪಾದನೆಗೆ ಕಾರಣವಾಗುವುದಿಲ್ಲ. ದಡ್ಡತನ ಬಡತನಕ್ಕೆ ಕಾರಣ ವಾಗದು. ಇದೆಲ್ಲವೂ ಅವನ ಕರ್ಮದ ಫಲವಾಗಿರುತ್ತದೆ. ಇದನ್ನು ಬುದ್ಧಿಶಾಲಿಯು ಮಾತ್ರ ಅರ್ಥಮಾಡಿಕೊಳ್ಳುತ್ತಾನೆ, ಬೇರೆಯವನಲ್ಲ.

ನಮಸ್ಯಾಮೋ ದೇವಾನ್ನನು ಹತವಿಧೇಸ್ತೇಽಪಿ ವಶಗಾ
ವಿಧಿರ್ವಂದ್ಯಃ ಸೋಽಪಿ ಪ್ರತಿನಿಯತಕರ್ಮೈಕಫಲದಃ ।
ಫಲಂ ಕರ್ಮಾಯತ್ತಂ ಕಿಮಮರಗಣೈಃ ಕಿಂ ಚ ವಿಧಿನಾ
ನಮಸ್ತತ್ಕರ್ಮಭ್ಯೋ ವಿಧಿರಪಿ ನ ಯೇಭ್ಯಃ ಪ್ರಭವತಿ ॥ ೫೯

-ನೀತಿಶತಕ

ದೇವತೆಗಳನ್ನು ನಮಸ್ಕರಿಸೋಣವೆಂದರೆ, ಅವರೂ ಆ ಹಾಳಾದ ವಿಧಿಗೆ ಅಧೀನರು. ವಿಧಿಯನ್ನೇ ನಮಸ್ಕರಿಸೋಣವೆಂದರೆ ಅವನೂ ಪ್ರತಿಯೊಂದು ಕರ್ಮಕ್ಕೂ ನಿಗದಿಯಾದ ಫಲ ಮಾತ್ರ ಕೊಡುತ್ತಾನೆ. ಆ ಫಲವು ಕರ್ಮಾಧೀನವೆಂದಮೇಲೆ ಆ ದೇವತೆಗಳಿಂದೇನು? ವಿಧಿಯಿಂದ ತಾನೇ ಏನು? ಆದುದರಿಂದ ಯಾವ ಕರ್ಮಗಳಮೇಲೆ ವಿಧಿಗೂ ಅಧಿಕಾರ ವಿಲ್ಲವೋ ಆ ಕರ್ಮಗಳಿಗೆ ನಮಸ್ಕಾರ!

ದೈವೇನ ಪ್ರಭುಣಾ ಸ್ವಯಂ ಜಗತಿ ಯದ್ಯಸ್ಯ ಪ್ರಮಾಣೀಕೃತಂ
ತತ್ತಸ್ಯೋಪನಮೇನ್ಮನಾಗಪಿ ಮಹಾನ್ನೈವಾಶ್ರಯಃ ಕಾರಣಮ್ ।
ಸರ್ವಾಶಾಪರಿಪೂರಕೇ ಜಲಧರೇ ವರ್ಷತ್ಯಪಿ ಪ್ರತ್ಯಹಂ
ಸೂಕ್ಷ್ಮಾ ಏವ ಪತಂತಿ ಚಾತಕಮುಖೇ ದ್ವಿತ್ರಾಃ ಪಯೋಬಿಂದವಃ॥
-ನೀತಿಶತಕ-೯೧

ಪ್ರಭುವಾದ ದೈವದಿಂದ ಯಾರಿಗೆ ಯಾವುದು ಲಭಿಸಬೇಕೆಂದಿದೆಯೋ ಅದು ಅವನಿಗೆ ಸಿಕ್ಕಲೇಬೇಕು. ದೊಡ್ಡದಾದ ಆಶ್ರಯವು ಕಾರಣವಾಗುವುದೇ ಇಲ್ಲ. ಎಲ್ಲಾ ದಿಕ್ಕುಗಳನ್ನೂ ತುಂಬುವ ಮೋಡವು ನಿತ್ಯವೂ ಮಳೆಸುರಿಸುತ್ತಿದ್ದರೂ ಎರಡೋ ಅಥವಾ ಮೂರೋ ಸಣ್ಣ ಸಣ್ಣ ನೀರಿನ ಹನಿಗಳು ಮಾತ್ರ ಚಾತಕಪಕ್ಷಿಯ ಬಾಯಲ್ಲಿ ಬೀಳುತ್ತವೆ.

ದೋಷಭೀತೇರನಾರಂಭಃ ಕಾಪುರೂಷಸ್ಯ ಲಕ್ಷಣಂ ।
ಕೈರಜೀರ್ಣಭಯಾದ್ಭ್ರಾತಃ ಭೋಜನಂ ಪರಿಹೀಯತೇ ॥ ೫೩
-ಹಿತೋಪದೇಶ, ಸುಹೃದ್ಭೇದ-೫೦

ದೋಷಗಳಿಗೆ ಹೆದರಿ ಕೆಲಸವನ್ನಾರಂಭಮಾಡದೇ ಇರುವುದು ಹೀನಪುರುಷನ ಲಕ್ಷಣ. ಅಜೀರ್ಣವಾಗುವುದೆಂಬ ಭಯದಿಂದ ಊಟಮಾಡುವುದನ್ನು ಯಾರೂ ಬಿಡುವುದಿಲ್ಲ.

ನ ಕಾಲಃ ಕಾಲಮತ್ಯೇತಿ ನ ಕಾಲಃ ಪರಿಹೀಯತೇ ।
ಸ್ವಭಾವಂ ಚ ಸಮಾಸಾದ್ಯ ನ ಕಶ್ಚಿದತಿವರ್ತತೇ ॥ ೫೪
-ರಾಮಾಯಣ, ಕಿಷ್ಕಿಂಧಾ, ೨೫-೬

ಕಾಲವು ತನ್ನ ವ್ಯವಸ್ಥೆಯನ್ನು ಎಂದಿಗೂ ಉಲ್ಲಂಘಿಸುವುದಿಲ್ಲ. ಕಾಲಕ್ಕೆ ಹಾನಿಯೆಂಬುದಿಲ್ಲ. ಯಾವನೂ ತನ್ನ ಪ್ರಾರಬ್ಧಕರ್ಮವನ್ನು ಮೀರಿಹೋಗಲಾರನು.

ನ ಕಾಲೋ ದಂಡಮುದ್ಯಮ್ಯ ಶಿರಃ ಕೃಂತತಿ ಕಸ್ಯಚಿತ್ ।
ಕಾಲಸ್ಯ ಬಲಮೇತಾವದ್ ವಿಪರೀತಾರ್ಥದರ್ಶನಮ್ ॥ ೫೫
-ಮಹಾಭಾರತ, ಸಭಾ. ೮೧-೧೧

ಯಮನು ದಂಡಾಯುಧವನ್ನೆತ್ತಿ ಯಾರ ತಲೆಯನ್ನೂ ಕತ್ತರಿಸುವುದಿಲ್ಲ. ಅವನ ಬಲ ಇಷ್ಟ-ವಿಷಯವನ್ನು ವಿರುದ್ಧವಾಗಿ ತಿಳಿದುಕೊಳ್ಳುವಂತೆ ಮಾಡುವುದು.

ನ ಕಾಲಸ್ಯಾಸ್ತಿ ಬಂಧುತ್ವಂ ನ ಹೇತುರ್ನ ಪರಾಕ್ರಮಃ ।
ನ ಮಿತ್ರಜ್ಞಾತಿಸಂಬಂಧಃ ಕಾರಣಂ ನಾತ್ಮನೋ ವಶಃ ॥ ೫೬
-ರಾಮಾಯಣ, ಕಿಷ್ಕಿಂಧಾ ೨೫-೭

ಬಂಧುವೆಂಬ ಪಕ್ಷಪಾತ ಕಾಲಕ್ಕೆ ಇಲ್ಲ. ಕಾಲವನ್ನು ತಡೆಯಲು ಯಾವ ಉಪಾಯವೂ ಇಲ್ಲ. ಅದರ ವಿಷಯದಲ್ಲಿ ಪರಾಕ್ರಮವು ನಡೆಯದು. ಮಿತ್ರರ ಅಥವಾ ಬಂಧುಬಳಗಗಳ ಸಹಾಯವು ಕಾಲವನ್ನೆದುರಿಸಲು ನೆರವಾಗದು. ಅದು ನಮಗೆ ವಶವಾಗತಕ್ಕದಲ್ಲ.

**ನ ಕಾಲಸ್ಯ ಪ್ರಿಯಃ ಕಶ್ಚಿನ್ನ ದ್ವೇಷ್ಯಃ ಕುರುಸತ್ತಮ ।**
**ನ ಮಧ್ಯಸ್ಥಃ ಕ್ವಚಿತ್ ಕಾಲಃ ಸರ್ವಂ ಕಾಲಃ ಪ್ರಕರ್ಷತಿ ॥ ೫೭**

-ಮಹಾಭಾರತ, ಸ್ತ್ರೀ-೨-೨೩

ಯುಧಿಷ್ಠಿರ, ಕಾಲನಿಗೆ ಪ್ರಿಯನೂ ಇಲ್ಲ ; ವೈರಿಯೂ ಇಲ್ಲ. ಅವನು ಎಂದಿಗೂ ಮಧ್ಯಸ್ಥನೂ ಅಲ್ಲ. ಕಾಲನು ಸರ್ವರನ್ನೂ ಎಳೆದುಕೊಂಡು ಹೋಗುತ್ತಾನೆ.

**ನ ಬುದ್ಧಿರ್ಧನಲಾಭಾಯ ನ ಜಾಡ್ಯಮಸಮೃದ್ಧಯೇ ।**
**ಕರ್ಮಪರ್ಯಾಯವೃತ್ತಾಂತಂ ಪ್ರಾಜ್ಞೋ ಜಾನಾತಿ ನೇತರಃ ॥ ೫೮**

-ಸುಭಾಷಿತಸುಧಾನಿಧಿ

ಬುದ್ಧಿ ಹಣದ ಸಂಪಾದನೆಗೆ ಕಾರಣವಾಗುವುದಿಲ್ಲ. ದಡ್ಡತನ ಬಡತನಕ್ಕೆ ಕಾರಣ ವಾಗದು. ಇದೆಲ್ಲವೂ ಅವನ ಕರ್ಮದ ಫಲವಾಗಿರುತ್ತದೆ. ಇದನ್ನು ಬುದ್ಧಿಶಾಲಿಯು ಮಾತ್ರ ಅರ್ಥಮಾಡಿಕೊಳ್ಳುತ್ತಾನೆ, ಬೇರೆಯವನಲ್ಲ.

**ನಮಸ್ಯಾಮೋ ದೇವಾನ್ನನು ಹತವಿಧೇಸ್ತೇಽಪಿ ವಶಗಾ**
**ವಿಧಿರ್ವಂದ್ಯಃ ಸೋಽಪಿ ಪ್ರತಿನಿಯತಕರ್ಮೈಕಫಲದಃ ।**
**ಫಲಂ ಕರ್ಮಾಯತ್ತಂ ಕಿಮಮರಗಣೈಃ ಕಿಂ ಚ ವಿಧಿನಾ**
**ನಮಸ್ತತ್ಕರ್ಮಭ್ಯೋ ವಿಧಿರಪಿ ನ ಯೇಭ್ಯಃ ಪ್ರಭವತಿ ॥ ೫೯**

-ನೀತಿಶತಕ

ದೇವತೆಗಳನ್ನು ನಮಸ್ಕರಿಸೋಣವೆಂದರೆ, ಅವರೂ ಆ ಹಾಳಾದ ವಿಧಿಗೆ ಅಧೀನರು. ವಿಧಿಯನ್ನೇ ನಮಸ್ಕರಿಸೋಣವೆಂದರೆ ಅವನೂ ಪ್ರತಿಯೊಂದು ಕರ್ಮಕ್ಕೂ ನಿಗದಿಯಾದ ಫಲ ಮಾತ್ರ ಕೊಡುತ್ತಾನೆ. ಆ ಫಲವು ಕರ್ಮಾಧೀನವೆಂದಮೇಲೆ ಆ ದೇವತೆಗಳಿಂದೇನು? ವಿಧಿಯಿಂದ ತಾನೇ ಏನು? ಆದುದರಿಂದ ಯಾವ ಕರ್ಮಗಳಮೇಲೆ ವಿಧಿಗೂ ಅಧಿಕಾರ ವಿಲ್ಲವೋ ಆ ಕರ್ಮಗಳಿಗೆ ನಮಸ್ಕಾರ!

**ನವಂ ಶರಾವಂ ಸಲಿಲೈಃ ಸುಪೂರ್ಣಂ**
**ಸುಸಂಸ್ಕೃತಂ ದರ್ಭಕೃತೋತ್ತರೀಯಂ ।**
**ತತ್ತಸ್ಯ ಮಾ ಭೂತ್ ನರಕಂ ಸ ಗಚ್ಛೇತ್**
**ಯೋ ಭರ್ತೃಪಿಂಡಸ್ಯ ಕೃತೇ ನ ಯುಧ್ಯೇತ್ ॥ ೬೦**

-ಪ್ರತಿಜ್ಞಾಯೌಗಂಧರಾಯಣ-೪-೨

ಯಾರು ತನ್ನನ್ನು ಸಲಹಿದ ಸ್ವಾಮಿಗೋಸ್ಕರ ಯುದ್ಧಮಾಡುವುದಿಲ್ಲವೋ ಅವನು ನರಕಕ್ಕೆ ಹೋಗುತ್ತಾನೆ. ಅವನಿಗೆ ಮರಣಾನಂತರ, ದರ್ಭೆಗಳಿಂದ ಮುಚ್ಚಿದ, ಮಂತ್ರಗಳಿಂದ ಪವಿತ್ರವಾದ, ಹೊಸ ನೀರಿನಿಂದ ತುಂಬಿದ ಹೊಸ ಶರಾವ (ಮಣ್ಣಿನ ಪಾತ್ರೆ) ರೂಪವಾದ ತರ್ಪಣವು ಸಿಗದೇ ಹೋಗಲಿ!

**ನ ಶ್ರೀಃ ಕುಲಕ್ರಮಾಯಾತಾ ಸ್ವರೂಪಾಲ್ಲಿಖಿತಾಽಪಿ ವಾ ।**
**ಖಡ್ಗೇನಾಕ್ರಮ್ಯ ಭುಂಜೀತ ವೀರಭೋಗ್ಯಾ ವಸುಂಧರಾ ॥ ೬೧**

-ಪರಾಶರಸ್ಮೃತಿ, ೧-೫೯

ವಂಶಪರಂಪರೆಯಿಂದ ಬಂದದ್ದಾಗಲೀ ಗೋಡೆಯಮೇಲೆ ಬರೆಯಲ್ಪಟ್ಟದ್ದಾಗಲೀ ಸಂಪತ್ತಲ್ಲ. ಪರಾಕ್ರಮದಿಂದ ಸಂಪಾದಿಸಿ ಅನುಭವಿಸಿದ್ದೇ ಲಕ್ಷ್ಮಿ. ಏಕೆಂದರೆ ಸಂಪತ್ತಿನಿಂದ ಕೂಡಿದ ಭೂಮಿಯನ್ನು ವೀರರು ಮಾತ್ರ ಅನುಭವಿಸಬಲ್ಲರು.

**ನ ಸಂಶಯಮನಾರುಹ್ಯ ನರೋ ಭದ್ರಾಣಿ ಪಶ್ಯತಿ ।**
**ಸಂಶಯಂ ಪುನರಾರುಹ್ಯ ಯದಿ ಜೀವತಿ ಪಶ್ಯತಿ ॥ ೬೨**

-ಹಿತೋಪದೇಶ, ಮಿತ್ರಲಾಭ-೬

ಸಂಶಯಾಸ್ಪದವಾದ ಸಾಹಸಕಾರ್ಯವನ್ನು ಮಾಡದೆ ಮನುಷ್ಯನು ಒಳ್ಳೆಯದನ್ನು ಕಾಣುವುದಿಲ್ಲ. ಅಂಥ ಕಾರ್ಯಕ್ಕೆ ಕೈಹಾಕಿದಮೇಲೆ ಕ್ಷೇಮವಾಗಿ ಉಳಿದಲ್ಲಿ ಒಳ್ಳೆಯದನ್ನು ಕಾಣುವನು.

**ನ ಹಿ ಭವತಿಯನ್ನ ಭಾವ್ಯಂ ಭವತಿ ಚ ಭಾವ್ಯಂ ವಿನಾಽಪಿ ಯತ್ನೇನ ।**
**ಕರತಲಗತಮಪಿ ನಶ್ಯತಿ ಯಸ್ಯ ತು ಭವಿತವ್ಯತಾ ನಾಸ್ತಿ ॥ ೬೩**

-ಪಂಚತಂತ್ರ, ಮಿತ್ರಸಂಪ್ರಾಪ್ತಿ-೧೩೧

ಯಾವುದು ಆಗುವುದಿಲ್ಲವೋ ಅದು ಆಗುವುದಿಲ್ಲ. ಯಾವುದು ಆಗಬೇಕೋ ಅದು ಯತ್ನಮಾಡದಿದ್ದರೂ ಆಗುತ್ತದೆ. ಯಾರಿಗೆ ಆಗಬೇಕೆಂಬ ಅದೃಷ್ಟವಿಲ್ಲವೋ ಅವನ ಕೈಯಲ್ಲಿರುವುದೂ ಸಹ ನಾಶವಾಗುತ್ತದೆ.

ನೀಲಕಂಠಂ ಸಮಾಸಾದ್ಯ ವಾಸುಕಿರ್ವಾಯುಭಕ್ಷಣಃ ।
ಪ್ರಾಪ್ಯಾಪಿ ಮಹತಾಂ ಸ್ಥಾನಂ ಫಲಂ ಭಾಗ್ಯಾನುಸಾರಿ ಯತ್ ॥ ೬೪

-ಸುಭಾಷಿತಸುಧಾನಿಧಿ

ಪರಮೇಶ್ವರನನ್ನು ಆಶ್ರಯಿಸಿಯೂ ವಾಸುಕಿ ಗಾಳಿಯನ್ನೇ ಆಹಾರವನ್ನಾಗಿ ಹೊಂದಿದ್ದಾನೆ. ಮಹಾತ್ಮರ ಸ್ಥಾನವನ್ನು ಪಡೆದರೂ ಸಹ ತನ್ನತನ್ನ ಅದೃಷ್ಟಕ್ಕನುಸಾರವಾದ ಫಲವೇ ದೊರಕುವುದು.

ನೈವಾಕೃತಿಃ ಫಲತಿ ನೈವ ಕುಲಂ ನ ಶೀಲಂ
ವಿದ್ಯಾಪಿ ನೈವ ನ ಚ ಯತ್ನಕೃತಾಪಿ ಸೇವಾ ।
ಭಾಗ್ಯಾನಿ ಪೂರ್ವತಪಸಾ ಖಲು ಸಂಚಿತಾನಿ
ಕಾಲೇ ಫಲಂತಿ ಪುರುಷಸ್ಯ ಯಥೈವ ವೃಕ್ಷಾಃ ॥ ೬೫

-ನೀತಿಶತಕ-೯೫

ಆಕಾರವೂ, ಕುಲವೂ, ಶೀಲವೂ, ಪ್ರಯತ್ನಪೂರ್ವಕ ಮಾಡಿದ ಸೇವೆಯೂ, ಫಲಿಸುವುದಿಲ್ಲ. ಹಿಂದಿನ ಜನ್ಮದಲ್ಲಿ ಆಚರಿಸಿದ ತಪಸ್ಸಿನಿಂದ ಸಂಗ್ರಹವಾದ ಭಾಗ್ಯಗಳು ಸಕಾಲದಲ್ಲಿ ವೃಕ್ಷಗಳಂತೆ ಫಲಕೊಡುತ್ತವೆ.

ನೈವಾರ್ಥೇನ ನ ಕಾಮೇನ ವಿಕ್ರಮೇಣ ನ ಚಾಜ್ಞಯಾ ।
ಶಕ್ಯಾ ದೈವಗತಿರ್ಲೋಕೇ ನಿವರ್ತಯಿತುಮುದ್ಯತಾ ॥ ೬೬

-ಸುಭಾಷಿತಸುಧಾನಿಧಿ

ಲೋಕದಲ್ಲಿ ಪ್ರವರ್ತಿಸಲು ತೊಡಗಿರುವ ದೈವಗತಿಯನ್ನು ಹಣದಿಂದಾಗಲೀ, ಕಾಮದಿಂದಾಗಲೀ, ಪರಾಕ್ರಮದಿಂದಾಗಲೀ, ಅಪ್ಪಣೆಯಿಂದಾಗಲೀ ತಪ್ಪಿಸಲು ಸಾಧ್ಯವಿಲ್ಲ.

ಪ್ರತಿಕ್ಷಣಮಯಂ ಕಾಲಃ ಕ್ಷೀಯಮಾಣೋ ನ ಲಕ್ಷ್ಯತೇ ।
ಆಮಕುಂಭ ಇವಾಂಭಃಸ್ಥೋ ವಿಶೀರ್ಣೋ ನ ವಿಭಾವ್ಯತೇ ॥ ೬೭

-ಗರುಡಪುರಾಣ, ೧೬-೩೬

ಪ್ರತಿಕ್ಷಣದಲ್ಲಿಯೂ ಕಾಲವು ಕಳೆಯುತ್ತಿದ್ದರೂ ಗೊತ್ತಾಗುವುದಿಲ್ಲ. ಹಸೀ ಮಡಿಕೆಯು ನೀರಿನಲ್ಲಿ ಕರಗುತ್ತಿದ್ದರೂ ಗೊತ್ತಾಗುವುದಿಲ್ಲ.

ಪಥಿ ಚ್ಯುತಂ ತಿಷ್ಠತಿ ದಿಷ್ಟರಕ್ಷಿತಂ
ಗೃಹೇ ಸ್ಥಿತಂ ತದ್ವಿಹತಂ ವಿನಶ್ಯತಿ ।
ಜೀವತ್ಯನಾಥೋಽಪಿ ತದೀಕ್ಷಿತೋ ವನೇ
ಗೃಹೇಽಪಿ ಗುಪ್ತೋಽಸ್ಯ ಹತೋ ನ ಜೀವತಿ ॥ ೬೮

-ಭಾಗವತ, ೭-೨-೪೦

**ನವಂ ಶರಾವಂ ಸಲಿಲೈಃ ಸುಪೂರ್ಣಂ**
**ಸುಸಂಸ್ಕೃತಂ ದರ್ಭಕೃತೋತ್ತರೀಯಂ ।**
**ತತ್ತಸ್ಯ ಮಾ ಭೂತ್ ನರಕಂ ಸ ಗಚ್ಛೇತ್**
**ಯೋ ಭರ್ತೃಪಿಂಡಸ್ಯ ಕೃತೇ ನ ಯುಧ್ಯೇತ್ ॥ ೬೦**

-ಪ್ರತಿಜ್ಞಾಯೌಗಂಧರಾಯಣ-೪-೨

ಯಾರು ತನ್ನನ್ನು ಸಲಹಿದ ಸ್ವಾಮಿಗೋಸ್ಕರ ಯುದ್ಧಮಾಡುವುದಿಲ್ಲವೋ ಅವನು ನರಕಕ್ಕೆ ಹೋಗುತ್ತಾನೆ. ಅವನಿಗೆ ಮರಣಾನಂತರ, ದರ್ಭೆಗಳಿಂದ ಮುಚ್ಚಿದ, ಮಂತ್ರಗಳಿಂದ ಪವಿತ್ರವಾದ, ಹೊಸ ನೀರಿನಿಂದ ತುಂಬಿದ ಹೊಸ ಶರಾವ (ಮಣ್ಣಿನ ಪಾತ್ರೆ) ರೂಪವಾದ ತರ್ಪಣವು ಸಿಗದೇ ಹೋಗಲಿ!

**ನ ಶ್ರೀಃ ಕುಲಕ್ರಮಾಯಾತಾ ಸ್ವರೂಪಾಲ್ಲಿಖಿತಾಽಪಿ ವಾ ।**
**ಖಡ್ಗೇನಾಕ್ರಮ್ಯ ಭುಂಜೀತ ವೀರಭೋಗ್ಯಾ ವಸುಂಧರಾ ॥ ೬೧**

-ಪರಾಶರಸ್ಮೃತಿ, ೧-೫೯

ವಂಶಪರಂಪರೆಯಿಂದ ಬಂದದ್ದಾಗಲೀ ಗೋಡೆಯಮೇಲೆ ಬರೆಯಲ್ಪಟ್ಟದ್ದಾಗಲೀ ಸಂಪತ್ತಲ್ಲ. ಪರಾಕ್ರಮದಿಂದ ಸಂಪಾದಿಸಿ ಅನುಭವಿಸಿದ್ದೇ ಲಕ್ಷ್ಮಿ. ಏಕೆಂದರೆ ಸಂಪತ್ತಿನಿಂದ ಕೂಡಿದ ಭೂಮಿಯನ್ನು ವೀರರು ಮಾತ್ರ ಅನುಭವಿಸಬಲ್ಲರು.

**ನ ಸಂಶಯಮನಾರುಹ್ಯ ನರೋ ಭದ್ರಾಣಿ ಪಶ್ಯತಿ ।**
**ಸಂಶಯಂ ಪುನರಾರುಹ್ಯ ಯದಿ ಜೀವತಿ ಪಶ್ಯತಿ ॥ ೬೨**

-ಹಿತೋಪದೇಶ, ಮಿತ್ರಲಾಭ-೬

ಸಂಶಯಾಸ್ಪದವಾದ ಸಾಹಸಕಾರ್ಯವನ್ನು ಮಾಡದೆ ಮನುಷ್ಯನು ಒಳ್ಳೆಯದನ್ನು ಕಾಣುವುದಿಲ್ಲ. ಅಂಥ ಕಾರ್ಯಕ್ಕೆ ಕೈಹಾಕಿದಮೇಲೆ ಕ್ಷೇಮವಾಗಿ ಉಳಿದಲ್ಲಿ ಒಳ್ಳೆಯದನ್ನು ಕಾಣುವನು.

**ನ ಹಿ ಭವತಿಯನ್ನ ಭಾವ್ಯಂ ಭವತಿ ಚ ಭಾವ್ಯಂ ವಿನಾಽಪಿ ಯತ್ನೇನ ।**
**ಕರತಲಗತಮಪಿ ನಶ್ಯತಿ ಯಸ್ಯ ತು ಭವಿತವ್ಯತಾ ನಾಸ್ತಿ ॥ ೬೩**

-ಪಂಚತಂತ್ರ, ಮಿತ್ರಸಂಪ್ರಾಪ್ತಿ-೧೩೧

ಯಾವುದು ಆಗುವುದಿಲ್ಲವೋ ಅದು ಆಗುವುದಿಲ್ಲ. ಯಾವುದು ಆಗಬೇಕೋ ಅದು ಯತ್ನಮಾಡದಿದ್ದರೂ ಆಗುತ್ತದೆ. ಯಾರಿಗೆ ಆಗಬೇಕೆಂಬ ಅದೃಷ್ಟವಿಲ್ಲವೋ ಅವನ ಕೈಯಲ್ಲಿರುವುದೂ ಸಹ ನಾಶವಾಗುತ್ತದೆ.

**ನೀಲಕಂಠಂ ಸಮಾಸಾದ್ಯ ವಾಸುಕಿರ್ವಾಯುಭಕ್ಷಣಃ ।**
**ಪ್ರಾಪ್ಯಾಪಿ ಮಹತಾಂ ಸ್ಥಾನಂ ಫಲಂ ಭಾಗ್ಯಾನುಸಾರಿ ಯತ್ ॥೬೪**

-ಸುಭಾಷಿತಸುಧಾನಿಧಿ

ಪರಮೇಶ್ವರನನ್ನು ಆಶ್ರಯಿಸಿಯೂ ವಾಸುಕಿ ಗಾಳಿಯನ್ನೇ ಆಹಾರವನ್ನಾಗಿ ಹೊಂದಿದ್ದಾನೆ. ಮಹಾತ್ಮರ ಸ್ಥಾನವನ್ನು ಪಡೆದರೂ ಸಹ ತನ್ನತನ್ನ ಅದೃಷ್ಟಕ್ಕನುಸಾರವಾದ ಫಲವೇ ದೊರಕುವುದು.

**ನೈವಾಕೃತಿಃ ಫಲತಿ ನೈವ ಕುಲಂ ನ ಶೀಲಂ**
**ವಿದ್ಯಾಪಿ ನೈವ ನ ಚ ಯತ್ನಕೃತಾಪಿ ಸೇವಾ ।**
**ಭಾಗ್ಯಾನಿ ಪೂರ್ವತಪಸಾ ಖಲು ಸಂಚಿತಾನಿ**
**ಕಾಲೇ ಫಲಂತಿ ಪುರುಷಸ್ಯ ಯಥೈವ ವೃಕ್ಷಾಃ ॥ ೬೫**

-ನೀತಿಶತಕ-೯೫

ಆಕಾರವೂ, ಕುಲವೂ, ಶೀಲವೂ, ಪ್ರಯತ್ನಪೂರ್ವಕ ಮಾಡಿದ ಸೇವೆಯೂ, ಫಲಿಸುವುದಿಲ್ಲ. ಹಿಂದಿನ ಜನ್ಮದಲ್ಲಿ ಆಚರಿಸಿದ ತಪಸ್ಸಿನಿಂದ ಸಂಗ್ರಹವಾದ ಭಾಗ್ಯಗಳು ಸಕಾಲದಲ್ಲಿ ವೃಕ್ಷಗಳಂತೆ ಫಲಕೊಡುತ್ತವೆ.

**ನೈವಾರ್ಥೇನ ನ ಕಾಮೇನ ವಿಕ್ರಮೇಣ ನ ಚಾಜ್ಞಯಾ ।**
**ಶಕ್ಯಾ ದೈವಗತಿರ್ಲೋಕೇ ನಿವರ್ತಯಿತುಮುದ್ಯತಾ ॥ ೬೬**

-ಸುಭಾಷಿತಸುಧಾನಿಧಿ

ಲೋಕದಲ್ಲಿ ಪ್ರವರ್ತಿಸಲು ತೊಡಗಿರುವ ದೈವಗತಿಯನ್ನು ಹಣದಿಂದಾಗಲೀ, ಕಾಮದಿಂದಾಗಲೀ, ಪರಾಕ್ರಮದಿಂದಾಗಲೀ, ಅಪ್ಪಣೆಯಿಂದಾಗಲೀ ತಪ್ಪಿಸಲು ಸಾಧ್ಯವಿಲ್ಲ.

**ಪ್ರತಿಕ್ಷಣಮಯಂ ಕಾಲಃ ಕ್ಷೀಯಮಾಣೋ ನ ಲಕ್ಷ್ಯತೇ ।**
**ಆಮಕುಂಭ ಇವಾಂಭಃಸ್ಥೋ ವಿಶೀರ್ಣೋ ನ ವಿಭಾವ್ಯತೇ ॥ ೬೭**

-ಗರುಡಪುರಾಣ, ೧೬-೩೬

ಪ್ರತಿಕ್ಷಣದಲ್ಲಿಯೂ ಕಾಲವು ಕಳೆಯುತ್ತಿದ್ದರೂ ಗೊತ್ತಾಗುವುದಿಲ್ಲ. ಹಸೀ ಮಡಿಕೆಯು ನೀರಿನಲ್ಲಿ ಕರಗುತ್ತಿದ್ದರೂ ಗೊತ್ತಾಗುವುದಿಲ್ಲ.

**ಪಥಿ ಚ್ಯುತಂ ತಿಷ್ಠತಿ ದಿಷ್ಟರಕ್ಷಿತಂ**
**ಗೃಹೇ ಸ್ಥಿತಂ ತದ್ವಿಹತಂ ವಿನಶ್ಯತಿ ।**
**ಜೀವತ್ಯನಾಥೋಽಪಿ ತದೀಕ್ಷಿತೋ ವನೇ**
**ಗೃಹೇಽಪಿ ಗುಪ್ತೋಽಸ್ಯ ಹತೋ ನ ಜೀವತಿ ॥ ೬೮**

-ಭಾಗವತ, ೭-೨-೪೦

ದೈವದ ರಕ್ಷಣೆ ಇದ್ದರೆ ಬೀದಿಯಲ್ಲಿ ಬಿದ್ದದ್ದೂ ಉಳಿಯುತ್ತದೆ. ಅದಿಲ್ಲದಿದ್ದರೆ ಮನೆಯಲ್ಲಿದ್ದರೂ ಹಾಳಾಗುತ್ತದೆ. ಅನಾಥವಾಗಿ ವನದಲ್ಲಿ ಇದ್ದರೂ ದೈವದ ದೃಷ್ಟಿ ಬಿದ್ದರೆ ಬದುಕುತ್ತಾನೆ. ಮನೆಯಲ್ಲಿಟ್ಟು ಕಾಪಾಡಿದರೂ ದೈವಹತನಾದವನು ಬದುಕುವುದಿಲ್ಲ.

ಪರಾಙ್ಮುಖೇಽಪಿ ದೈವೇಽತ್ರ ಕೃತ್ಯಂ ಕಾರ್ಯಂ ವಿಪಶ್ಚಿತಾ ।
ಆತ್ಮದೋಷವಿನಾಶಾಯ ಸ್ವಚಿತ್ತಸ್ತಂಭನಾಯ ಚ ॥ ೬೯

-ಪಂಚತಂತ್ರ, ಮಿತ್ರಭೇದ-೩೯೧

ಅದೃಷ್ಟವು ಪ್ರತಿಕೂಲವಾಗಿದ್ದರೂ ಸಹ ತಿಳಿದವನು ತಾನು ಮಾಡಬೇಕಾದ ಕೆಲಸವನ್ನು, ತನ್ನ ತಪ್ಪನ್ನು ಕಳೆದುಕೊಳ್ಳುವುದಕ್ಕೂ ಹಾಗೆಯೇ ತನ್ನ ಮನಸ್ಸನ್ನು ಸಮಾಧಾನ ಪಡಿಸಿಕೊಳ್ಳುವುದಕ್ಕೂ, ಮಾಡಲೇಬೇಕು.

ಪಲಾಯನೈರ್ನಾಪಯಾತಿ ನಿಶ್ಚಲಾ ಭವಿತವ್ಯತಾ ।
ದೇಹಿನಃ ಪುಚ್ಛಸಂಲೀನಾ ವಹ್ನಿಜ್ವಾಲೇವ ಪಕ್ಷಿಣಃ ॥ ೭೦

-ರಾಜತರಂಗಿಣೀ

ನಡೆಯಲೇಬೇಕಾದ ವಿಧಿಯನ್ನು ಓಡಿದರೂ ತಪ್ಪಿಸಿಕೊಳ್ಳಲಾಗುವುದಿಲ್ಲ. ಹಕ್ಕಿಯ ಬಾಲದಲ್ಲಿ ಬೆಂಕಿಯಿದ್ದರೆ ಎಲ್ಲಿ ಹಾರಿದರೂ ಅದು ಅಪಾಯದಿಂದ ತಪ್ಪಿಸಿಕೊಳ್ಳಲಾರದು.

ಪ್ರಾಕ್ತನಂ ಚೈಹಿಕಂ ಚೇತಿ ದ್ವಿವಿಧಂ ವಿದ್ಧಿ ಪೌರುಷಂ ।
ಪ್ರಾಕ್ತನೋಽದ್ಯತನೇನಾಶು ಪುರುಷಾರ್ಥೇನ ಜೀಯತೇ ॥ ೭೧

–ಯೋಗವಾಸಿಷ್ಠ

ಜನ್ಮಾಂತರದ್ದು, ಈ ಜನ್ಮದ್ದು-ಎಂದು ಪೌರುಷ ಎರಡು ವಿಧ. ಈ ಜನ್ಮದ ಪೌರುಷದಿಂದ ಜನ್ಮಾಂತರದ ಪೌರುಷವನ್ನು ಗೆಲ್ಲಬಹುದು.

ಪಿಬಂತಿ ಮಧು ಪದ್ಮೇಷು ಭೃಂಗಾಃ ಕೇಸರಧೂಸರಾಃ ।
ಹಂಸಾಃ ಶೈವಾಲಮಶ್ನಂತಿ ಧಿಗ್ದೈವಮಸಮಂಜಸಮ್ ॥ ೭೨

-ಸುಭಾಷಿತಸುಧಾನಿಧಿ-೪೪

ಪರಾಗದ ಧೂಳಿನಿಂದ ತುಂಬಿದ ದುಂಬಿಗಳು ಕಮಲದ ಹೂಗಳಲ್ಲಿ ಜೇನನ್ನು ಕುಡಿಯುತ್ತವೆ. ಹಂಸಗಳಾದರೋ ಪಾಚಿಯನ್ನು ತಿನ್ನುತ್ತವೆ. ಸ್ವಲ್ಪವೂ ಸಮಂಜಸವಲ್ಲದ ವಿಧಿಗೆ ಧಿಕ್ಕಾರ.

ಪ್ರಾಪ್ತವ್ಯಮರ್ಥಂ ಲಭತೇ ಮನುಷ್ಯಃ
ದೇವೋಽಪಿ ತಂ ಲಂಘಯಿತುಂ ನ ಶಕ್ತಃ ।
ತಸ್ಮಾನ್ನ ಶೋಚಾಮಿ ನ ವಿಸ್ಮಯೋ ಮೇ
ಯದಸ್ಮದೀಯಂ ನ ಹಿ ತತ್ಪರೇಷಾಮ್ ॥ ೭೩

-ಪಂಚತಂತ್ರ, ಮಿತ್ರಸಂಪ್ರಾಪ್ತಿ-೧೧೨

ಪಡೆಯಬೇಕಾದ ಹಣವನ್ನು ಮನುಷ್ಯನು ಪಡೆಯುತ್ತಾನೆ. ಅದನ್ನು ಮೀರಲು ದೇವರಿಗೂ ಶಕ್ತಿಯಿಲ್ಲ. ಆದುದರಿಂದ ನಾನು ದುಃಖಿಸುವುದೂ ಇಲ್ಲ, ಆಶ್ಚರ್ಯಪಡುವುದೂ ಇಲ್ಲ. ಯಾವುದು ನಮ್ಮದೋ ಅದು ಇತರರದಾಗದು.

ಪೂರ್ವಜನ್ಮಕೃತಂ ಕರ್ಮ ತದ್ದೈವಮಿತಿ ಕಥ್ಯತೇ ।
ತಸ್ಮಾತ್ಪುರುಷಕಾರೇಣ ಯತ್ನಂ ಕುರ್ಯಾದತಂದ್ರಿತಃ ॥ ೭೪

-ಹಿತೋಪದೇಶ, ೧-೨೧

ಪೂರ್ವಜನ್ಮದಲ್ಲಿ ಮಾಡಿದ ಕರ್ಮ ಯಾವುದೋ ಅದನ್ನು ದೈವ (ಅದೃಷ್ಟ)ವೆಂದು ಹೇಳುತ್ತಾರೆ. ಆದುದರಿಂದ ಪಾಲುಮಾರಿಕೆಮಾಡದೆ ಪುರುಷಪ್ರಯತ್ನವನ್ನು ಮಾಡಬೇಕು.

ಪೌಲಸ್ತ್ಯಃ ಕಥಮನ್ಯದಾರಹರಣೇ ದೋಷಂ ನ ವಿಜ್ಞಾತವಾನ್
ರಾಮೇಣಾಪಿ ಕಥಂ ನ ಹೇಮಹರಿಣಸ್ಯಾಸಂಭವೋ ಲಕ್ಷಿತಃ ।
ಅಕ್ಷೈಶ್ಚಾಪಿ ಯುಧಿಷ್ಠಿರೇಣ ಸಹಸಾ ಪ್ರಾಪ್ತೋಹ್ಯನರ್ಥಃ ಕಥಂ
ಪ್ರತ್ಯಾಸನ್ನವಿಪತ್ತಿಮೂಢಮನಸಾಂ ಪ್ರಾಯೋ ಮತಿಃ ಕ್ಷೀಯತೇ ॥ ೭೫

-ಪಂಚತಂತ್ರ, ಮಿತ್ರಸಂಪ್ರಾಪ್ತಿ-೪

ಪುಲಸ್ತ್ಯಬ್ರಹ್ಮನ ಮೊಮ್ಮಗನಾದ ರಾವಣನು ಪರಸ್ತ್ರೀಯರನ್ನು ಅಪಹರಿಸುವುದರಲ್ಲಿ ದೋಷವನ್ನು ಏಕೆ ಕಾಣಲಿಲ್ಲ? ಚಿನ್ನದ ಜಿಂಕೆಯು ಅಸಂಭವವೆಂಬುದನ್ನು ರಾಮನು ಹೇಗೆತಾನೇ ಗಮನಿಸಲಿಲ್ಲ? ಯುಧಿಷ್ಠಿರ ಜೂಜಾಟದಿಂದ ತಟ್ಟನೆ ಹೇಗೆ ಅನರ್ಥಕ್ಕೀಡಾದ? ಸನ್ನಿಹಿತವಾದ ವಿಪತ್ತಿನಿಂದ ಮಂಕಾದ ಮನಸ್ಸುಳ್ಳವರಿಗೆ ಬುದ್ಧಿ ಪ್ರಾಯಃ ಕೆಡುತ್ತದೆ.

ಪಂಚಧಾ ಸಂಭೃತಃ ಕಾಯೋ ಯದಿ ಪಂಚತ್ವಮಾಗತಃ ।
ಕರ್ಮಭಿಃ ಸ್ವಶರೀರೋತ್ಥೈಃ ತತ್ರ ಕಾ ಪರಿದೇವನಾ ॥ ೭೬

-ಕಾತ್ಯಾಯನಸ್ಮೃತಿ, ೨೨-೭

ಐದು ಭೂತಗಳಿಂದ ನಿರ್ಮಿತವಾದ ಶರೀರವು ಪಂಚಭೂತಗಳಲ್ಲಿ ಲೀನವಾಗುತ್ತದೆ. ಇದಕ್ಕೆ ಕರ್ಮ ಕಾರಣ. ಆದುದರಿಂದ ಇದಕ್ಕಾಗಿ ಅಳುವುದರಲ್ಲಿ ಅರ್ಥವಿಲ್ಲ.

ಬ್ರಹ್ಮಾ ಯೇನ ಕುಲಾಲವನ್ನಿಯಮಿತೋ ಬ್ರಹ್ಮಾಂಡಭಾಂಡೋದರೇ
ವಿಷ್ಣುರ್ಯೇನ ದಶಾವತಾರಗಹನೇ ಕ್ಷಿಪ್ತೋ ಮಹಾಸಂಕಟೇ ।
ರುದ್ರೋ ಯೇನ ಕಪಾಲಪಾಣಿಪುಟಕೇ ಭಿಕ್ಷಾಟನಂ ಕಾರಿತಃ
ಸೂರ್ಯೋ ಭ್ರಾಮ್ಯತಿ ನಿತ್ಯಮೇವ ಗಗನೇ ತಸ್ಮೈ ನಮಃ ಕರ್ಮಣೇ॥೭೭

-ನೀತಿಶತಕ-೯೪

ಯಾವ ಕರ್ಮದಿಂದ ಬ್ರಹ್ಮನೂ ಬ್ರಹ್ಮಾಂಡವೆಂಬ ಗುಡಾಣದೊಳಗೆ ಕುಂಬಾರನಂತೆ ನಿಯಮಿಸಲ್ಪಟ್ಟಿದ್ದಾನೋ, ವಿಷ್ಣುವೂ ದಶಾವತಾರಗಳೆಂಬ ತೀವ್ರವಾದ ಮಹಾಸಂಕಟದಲ್ಲಿ ಎಸೆಯಲ್ಪಟ್ಟಿದ್ದಾನೋ, ರುದ್ರನೂ ಕೈಯಲ್ಲಿ ಕಪಾಲಹಿಡಿದು ಭಿಕ್ಷಾಟನೆ ಮಾಡುತ್ತಿದ್ದಾನೋ, ಸೂರ್ಯನೂ ಯಾವಾಗಲೂ ಆಕಾಶದಲ್ಲಿ ಅಲೆಯುತ್ತಿದ್ದಾನೋ ಆ ಕರ್ಮಕ್ಕೆ ನಮಸ್ಕಾರ.

ಬಲಿನಾಂ ದುರ್ಬಲಾನಾಂ ಚ ಹ್ರಸ್ವಾನಾಂ ಮಹತಾಮಪಿ ।
ಜರಾಮೃತ್ಯೂ ಹಿ ಭೂತಾನಾಂ ಖಾದಿತಾರೌ ವೃಕಾವಿವ ॥ ೭೮

-ಸುಭಾಷಿತಸುಧಾನಿಧಿ

ಬಲಿಷ್ಠರಾಗಿರಲಿ ದುರ್ಬಲರಾಗಿರಲಿ, ಚಿಕ್ಕವರಿರಲಿ, ದೊಡ್ಡವರಿರಲಿ ಎಲ್ಲ ಪ್ರಾಣಿಗಳನ್ನು ತೋಳಗಳೋಪಾದಿಯಲ್ಲಿ ಮುಪ್ಪು ಮತ್ತು ಮರಣ ಇವು ನುಂಗಿಹಾಕುತ್ತವೆ.

ಬಾಣಾಧೀನಾ ಕ್ಷತ್ರಿಯಾಣಾಂ ಸಮೃದ್ಧಿಃ
ಪುತ್ರಾಪೇಕ್ಷೀ ವಂಚ್ಯತೇ ಸನ್ನಿಧಾತಾ ।
ವಿಪ್ರೋತ್ಸಂಗೇ ವಿತ್ತಮಾವರ್ಜ್ಯ ಸರ್ವಂ
ರಾಜ್ಞಾ ದೇಯಂ ಚಾಪಮಾತ್ರಂ ಸುತೇಭ್ಯಃ ॥ ೭೯

ಪಂಚರಾತ್ರ, ೧-೨೨

ಕ್ಷತ್ರಿಯರ ಏಳಿಗೆಯು ಪರಾಕ್ರಮವನ್ನವಲಂಬಿಸಿದೆ. ಮಕ್ಕಳಿಗೋಸ್ಕರ ಹಣ ಕೂಡಿಸುವವನು ಮೋಸಹೋಗುತ್ತಾನೆ. ಆದುದರಿಂದ ನಮ್ಮಲ್ಲಿರುವ ಎಲ್ಲ ಹಣವನ್ನೂ ಯೋಗ್ಯರಾದ ವಿಪ್ರರಿಗೆ ಕೊಟ್ಟು ಮಕ್ಕಳಿಗೆ ಅರಸನು ಬಿಲ್ಲನ್ನು ಮಾತ್ರ ಕೊಟ್ಟು ಪರಾಕ್ರಮದಿಂದ ಸಂಪಾದಿಸಿಕೊಳ್ಳಿ ಎಂದು ಹೇಳಬೇಕು.

ಭಾಗ್ಯವೈಷಮ್ಯದೋಷೇಣ ಪುರಾ ದುಶ್ಚರಿತೇನ ಚ ।
ಮಯ್ಯೈತತ್ ಪ್ರಾಪ್ಯತೇ ಸರ್ವಂ ಸ್ವಕೃತಂ ಹ್ಯುಪಭುಜ್ಯತೇ ॥ ೮೦

-ರಾಮಾಯಣ, ಯುದ್ಧ, ೧೧೬-೩೯

ನನ್ನ ದುರ್ಭಾಗ್ಯದಿಂದ, ಹಿಂದಿನ ದುಷ್ಕರ್ಮದಿಂದ ನನಗೆ ಈ ಎಲ್ಲ ಕಷ್ಟವು ಪ್ರಾಪ್ತವಾಯಿತು. ತಾನು ಮಾಡಿದ್ದನ್ನು ತಾನು ಉಣ್ಣಬೇಕಲ್ಲವೆ? (ಸೀತೆಯ ನುಡಿ)

ಭೀಮಂ ವನಂ ಭವತಿ ತಸ್ಯ ಪುರಂ ಪ್ರಧಾನಂ
ಸರ್ವೋ ಜನಃ ಸುಜನತಾಮುಪಯಾತಿ ತಸ್ಯ ।
ಕೃತ್ಸ್ನಾ ಚ ಭೂರ್ಭವತಿ ಸನ್ನಿಧಿರತ್ನಪೂರ್ಣಾ
ಯಸ್ಯಾಸ್ತಿ ಪೂರ್ವಸುಕೃತಂ ವಿಪುಲಂ ನರಸ್ಯ ॥ ೮೧

-ನೀತಿಶತಕ-೧೦೦

ಪೂರ್ವಜನ್ಮಗಳ ಪುಣ್ಯ ಯಾವ ಮನುಷ್ಯನಿಗೆ ವಿಪುಲವಾಗಿದೆಯೋ ಅವನಿಗೆ ಘೋರವಾದ ಕಾಡೇ ಮುಖ್ಯಪಟ್ಟಣವಾಗುತ್ತದೆ. ಎಲ್ಲ ಜನರೂ ಅವನ ಬಗ್ಗೆ ಸೌಜನ್ಯ ತಾಳುತ್ತಾರೆ. ಭೂಮಿಯೆಲ್ಲವೂ ಒಳ್ಳೆಯ ನಿಧಿರತ್ನಗಳಿಂದ ತುಂಬಿಹೋಗುತ್ತದೆ.

ಮನಸಾಪಿ ಯದಸ್ಪೃಷ್ಟಂ ದೂರಾದಪಿ ಯದುಜ್ಝಿತಂ ।
ತದಪ್ಯುಪಾಯೈರ್ವಿವಿಧೈರ್ವಿಧಿರಿಚ್ಛನ್ ಪ್ರಯಚ್ಛತಿ ॥ ೮೨

-ಸುಭಾಷಿತಸುಧಾನಿಧಿ

ಮನಸ್ಸಿನಿಂದಲೂ ಕೂಡ ಯಾವುದನ್ನು ಮುಟ್ಟುವುದಕ್ಕಾಗುವುದಿಲ್ಲವೋ ಬಹಳ ನಿರಾಶೆಯಿಂದ ಯಾವುದು ಬಿಡಲ್ಪಟ್ಟಿದೆಯೋ ಅದನ್ನೂ ಸಹ ಬಗೆ ಬಗೆಯಾದ ಉಪಾಯಗಳಿಂದ ವಿಧಿಯು ಬಯಸಿಕೊಡುತ್ತದೆ.

ಮಸ್ತಕಸ್ಥಾಯಿನಂ ಮೃತ್ಯುಂ ಯದಿ ಪಶ್ಯೇದಯಂ ಜನಃ ।
ಆಹಾರೋಽಪಿ ನ ರೋಚೇತ ಕಿಮುತಾಕಾರ್ಯಕಾರಿಕಾ ॥ ೮೩

-ಸುಭಾಷಿತಸುಧಾನಿಧಿ

ತಲೆಯ ಬಳಿ ಮಲಗಿರುವ ಮೃತ್ಯುವನ್ನು ಈ ಜನ ಕಂಡದ್ದೇ ಆದರೆ ಅವರಿಗೆ ಊಟವೂ ರುಚಿಸಲಾರದು! ಇನ್ನು ದುಷ್ಕಾರ್ಯಗಳನ್ನು ಮಾಡುವ ವಿಚಾರ ಹೇಳಬೇಕಾದುದೇ ಇಲ್ಲ.

ಯತ್ನೇ ಕೃತೇ ಯದಿ ನ ಸಿದ್ಧ್ಯತಿ ಕೋಽತ್ರ ದೋಷಃ
ಕೋ ವಾ ನ ಸಿದ್ಧ್ಯತಿ ಮಮೇತಿ ಕರೋತಿ ಕಾರ್ಯಂ ।
ಯತ್ನೈಃ ಶುಭೈಃ ಪುರುಷತಾ ಭವತೀಹ ನೃಣಾಂ
ದೈವಂ ವಿಧಾನಮನುಗಚ್ಛತಿ ಕಾರ್ಯಸಿದ್ಧಿಃ ॥ ೮೪

-ಅವಿಮಾರಕ, ೩-೧೨

ಚೆನ್ನಾಗಿ ಪ್ರಯತ್ನ ಮಾಡಿದಮೇಲೂ ಕಾರ್ಯಸಿದ್ಧಿಯಾಗದೇ ಇದ್ದರೆ ತಪ್ಪಿಲ್ಲ. ಎಲ್ಲರೂ ಕಾರ್ಯಸಿದ್ಧಿಯಾಗುವುದೆಂಬ ಭಾವನೆಯಿಂದಲೇ ಯತ್ನಿಸುತ್ತಾರೆ. ಕಾರ್ಯವಾಗುವುದಿಲ್ಲವೆಂದು ತಿಳಿದು ಯತ್ನಿಸುವವರುಂಟೇ! ಒಳ್ಳೆಯ ಪ್ರಯತ್ನಗಳಿಂದ

ಮಾನವನು ಪೌರುಷವುಳ್ಳವನೆನಿಸಿಕೊಳ್ಳುತ್ತಾನೆ. ಆದರೆ ಕಾರ್ಯವು ಅದೃಷ್ಟವಿದ್ದರೆ ಸಫಲವಾಗುತ್ತದೆ.

**ಯಥಾ ಛಾಯಾತಪೌ ನಿತ್ಯಂ ಸುಸಂಬದ್ಧೌ ನಿರಂತರಂ ।**
**ತಥಾ ಕರ್ಮ ಚ ಕರ್ತಾ ಚ ಸಂಬದ್ಧೌ ಸರ್ವಜಂತುಷು ॥ ೮೫**

-ಸುಭಾಷಿತಸುಧಾನಿಧಿ

ಹೇಗೆ ಯಾವಾಗಲೂ ನೆರಳು ಬಿಸಿಲುಗಳು ಒಂದರೊಡನೊಂದು ಕೂಡಿಯೇ ಇರುವುವೋ ಹಾಗೆಯೇ ಎಲ್ಲ ಜೀವಿಗಳಲ್ಲಿಯೂ ಕರ್ಮವೂ ಕರ್ಮಮಾಡುವವನೂ ಕೂಡಿಯೇ ಇರುವರು.

**ಯಥಾ ಧೇನುಸಹಸ್ರೇಷು ವತ್ಸೋ ವಿಂದತಿ ಮಾತರಂ ।**
**ತಥಾ ಪುರಾಕೃತಂ ಕರ್ಮ ಕರ್ತಾರಮನುಗಚ್ಛತಿ ॥ ೮೬**

-ಪಂಚತಂತ್ರ, ಮಿತ್ರಸಂಪ್ರಾಪ್ತಿ-೧೩೨

ಸಾವಿರ ಹಸುಗಳ ಗುಂಪಿನಲ್ಲಿ ಹೇಗೆ ಕರು ತನ್ನ ತಾಯಿಯನ್ನೇ ಸೇರುವುದೋ ಹಾಗೆಯೇ ಹಿಂದೆ ಮಾಡಿದ ಕರ್ಮ ಮಾಡಿದವನನ್ನೇ ಅನುಸರಿಸುತ್ತದೆ.

**ಯಥಾ ಪ್ರಯಾಂತಿ ಸಂಯಾಂತಿ ಸ್ರೋತೋವೇಗೇನ ವಾಲುಕಾಃ ।**
**ಸಂಯುಜ್ಯಂತೇ ವಿಯುಜ್ಯಂತೇ ತಥಾ ಕಾಲೇನ ದೇಹಿನಃ ॥ ೮೭**

-ಭಾಗವತ-೬-೧೫-೩

ಪ್ರವಾಹದ ವೇಗದಿಂದ ಮರಳಿನ ರಾಶಿ ಕೊಚ್ಚಿಹೋಗುತ್ತದೆ. ಮತ್ತೆ ಒಂದು ಕಡೆ ಸೇರುತ್ತದೆ. ಹಾಗೆ ಕಾಲಮಹಿಮೆಯಿಂದ ಜನರು ಒಂದೆಡೆ ಸೇರುತ್ತಾರೆ ಮತ್ತೆ ಅಗಲುತ್ತಾರೆ.

**ಯಥಾ ಫಲಾನಾಂ ಪಕ್ವಾನಾಂ ನಾನ್ಯತ್ರ ಪತನಾದ್ಭಯಂ ।**
**ಏವಂ ನರಸ್ಯ ಜಾತಸ್ಯ ನಾನ್ಯತ್ರ ಮರಣಾದ್ಭಯಾತ್ ॥ ೮೮**

-ರಾಮಾಯಣ, ಅಯೋಧ್ಯ, ೧೦೫-೧೭

ಮಾಗಿದ ಹಣ್ಣುಗಳಿಗೆ ಕೆಳಕ್ಕೆ ಬೀಳುವ ಭಯವಿದ್ದೇ ಇರುತ್ತದೆ. ಹಾಗೆ, ಹುಟ್ಟಿದ ಮನುಷ್ಯನಿಗೆ ಸಾಯುವ ಭಯವಿದ್ದೇ ಇರುತ್ತದೆ.

**ಯಥಾ ಬೀಜಂ ವಿನಾ ಕ್ಷೇತ್ರಮುಪ್ತಂ ಭವತಿ ನಿಷ್ಫಲಂ ।**
**ತಥಾ ಪುರುಷಕಾರೇಣ ವಿನಾ ದೈವಂ ನ ಸಿಧ್ಯತಿ ॥ ೮೯**

-ಮಹಾಭಾರತ, ಅನು. ೬-೭.

ಬೀಜವೇ ಇಲ್ಲದೆ ಹೊಲವನ್ನು ಉತ್ತರೆ, ಅದು ನಿಷ್ಫಲವಾಗುತ್ತದೆ. ಹಾಗೆ ಪುರುಷ ಪ್ರಯತ್ನವಿಲ್ಲದಿದ್ದರೆ, ದೈವವು ಫಲವನ್ನೀಯುವುದಿಲ್ಲ.

**ಯಥಾ ಹಿ ಭರತೋ ವರ್ಣೈರ್ವರ್ಣಯತ್ಯಾತ್ಮನಸ್ತನುಂ ।**
**ನಾನಾ ರೂಪಾಣಿ ಕುರ್ವಾಣಸ್ತಥಾತ್ಮಾ ಕರ್ಮಜಾಸ್ತನೂಃ ॥ ೯೦**

-ಯಾಜ್ಞವಲ್ಕ್ಯ, ೪-೧೬೨

ಹೇಗೆ ನಟನು ನಾಟಕದಲ್ಲಿ ಬಣ್ಣಗಳಿಂದ ಅನೇಕ ವೇಷಗಳನ್ನು ಧರಿಸುತ್ತಾನೆಯೋ, ಹಾಗೆ ಆತ್ಮನು ತನ್ನ ಕರ್ಮದಿಂದ ಅನೇಕ ರೂಪಗಳನ್ನು ಪಡೆಯುತ್ತದೆ.

**ಯಥಾ ಹ್ಯೇಕೇನ ಚಕ್ರೇಣ ನ ರಥಸ್ಯ ಗತಿರ್ಭವೇತ್ ।**
**ಏವಂ ಪುರುಷಕಾರೇಣ ವಿನಾ ದೈವಂ ನ ಸಿಧ್ಯತಿ ೯೧**

-ಹಿತೋಪದೇಶ, ೧-೨೦

ಒಂದೇ ಒಂದು ಗಾಲಿಯಿಂದ ಹೇಗೆ ರಥ ಚಲಿಸಲಾರದೋ ಹಾಗೆಯೇ ಪುರುಷ ಪ್ರಯತ್ನವಿಲ್ಲದೆ, ದೈವವು ಸಿದ್ಧಿಸುವುದಿಲ್ಲ.

**ಯದ್ಯದಾಲಿಖತಿ ಮನಃ ಆಶಾವರ್ತಿಕಾಭಿಃ ಹೃದಯಫಲಕೇ ।**
**ತತ್ತದ್ಬಾಲ ಇವ ವಿಧಿರ್ನಿಭೃತಂ ಹಸಿತ್ವಾ ಪ್ರೋಂಛತಿ ॥ ೯೨**

-ಸಪ್ತಶತೀ, ೭-೫೬

ಮನಸ್ಸು ಆಶೆಯೆಂಬ ಬಣ್ಣದ ಕುಂಚದಿಂದ ಹೃದಯಫಲಕದ ಮೇಲೆ ಏನೇನನ್ನು ಬರೆಯುತ್ತದೆಯೋ, ಅದೆಲ್ಲವನ್ನೂ ವಿಧಿಯು ಮಗುವಿನಂತೆ ನಗುತ್ತಾ ಅಳಿಸಿಹಾಕುತ್ತಾನೆ.

**ಯದೇವ ತೀವ್ರಸಂವೇಗಾತ್ ದೃಢಂ ಕರ್ಮ ಕೃತಂ ಪುರಾ ।**
**ತದೇವ ದೈವಶಬ್ದೇನ ಪರ್ಯಾಯೇಣೇಹ ಕಥ್ಯತೇ ॥ ೯೩**

-ಯೋಗವಾಸಿಷ್ಠ

ತೀವ್ರವಾದ ಆಸಕ್ತಿಯಿಂದ ಯಾವ ಕರ್ಮವನ್ನು ನಾವು ಜನ್ಮಾಂತರದಲ್ಲಿ ದೃಢವಾಗಿ ಆಚರಿಸಿರುತ್ತೇವೋ ಅದೇ ಈ ಜನ್ಮದಲ್ಲಿ ದೈವ ಎನಿಸಿಕೊಳ್ಳುತ್ತದೆ. (ದೈವ ಎಂಬುದು ಜನ್ಮಾಂತರದ ನಮ್ಮ ಕರ್ಮವೇ ಹೊರತು ಇನ್ನೊಂದಲ್ಲ.)

**ಯಸ್ಮೈ ದೇವಾಃ ಪ್ರಯಚ್ಛಂತಿ ಪುರುಷಾಯ ಪರಾಭವಮ್ ।**
**ಬುದ್ಧಿಂ ತಸ್ಯಾಪಕರ್ಷಂತಿ ಸೋಽವಾಚೀನಾನಿ ಪಶ್ಯತಿ ॥ ೯೪**

-ಮಹಾಭಾರತ, ಉದ್ಯೋಗ. ೩೪-೮೧

ದೇವತೆಗಳು, ಯಾವ ಮನುಷ್ಯನಿಗೆ ಸೋಲು ಸಂಭವಿಸಲೆಂದು ಇಚ್ಛಿಸುತ್ತಾರೋ, ಅವನ ಬುದ್ಧಿಯನ್ನು ಎಳೆದುಕೊಂಡುಬಿಡುತ್ತಾರೆ. ಆತನು ಎಲ್ಲವನ್ನೂ ತಲೆಕೆಳಗಾಗಿ ನೋಡುತ್ತಾನೆ.

ಯಶ್ಚ ದಿಷ್ಟಪರೋ ಲೋಕೇ ಯಶ್ಚಾಪಿ ಹಠವಾದಿಕಃ ।
ಉಭಾವಪಿ ಶಠಾವೇತೌ ಕರ್ಮಬುದ್ಧಿಃ ಪ್ರಶಸ್ಯತೇ ॥ ೯೫

-ಮಹಾಭಾರತ, ಅರಣ್ಯ. ೩೨-೧೩

ಲೋಕದಲ್ಲಿ ಯಾವನು ದೈವವನ್ನೇ ನಂಬಿರುವನೋ, ಯಾವನು ಪೌರುಷವನ್ನೇ ನಂಬಿ ಹಠವಾದಿಯಾಗಿರುವನೋ ಅವರಿಬ್ಬರೂ ಮೂರ್ಖರೇ ಸರಿ. ಇದು ಕರ್ತವ್ಯವೆಂದು ಕಾರ್ಯತತ್ಪರನಾದವನು ಪ್ರಶಂಸಾರ್ಹ.

ಯೇಷಾಂ ಬಾಹುಬಲಂ ನಾಸ್ತಿ ಯೇಷಾಂ ನಾಸ್ತಿ ಮನೋಬಲಂ ।
ತೇಷಾಂ ಚಂದ್ರಬಲಂ ದೇವ ಕಿಂ ಕುರ್ಯಾದಂಬರಸ್ಥಿತಮ್ ॥ ೯೬

-ಯಶಸ್ತಿಲಕ, ೩-೫೪

ಮಹಾರಾಜ, ಯಾರಿಗೆ ಬಾಹುಬಲವಿಲ್ಲವೋ ಮನೋಬಲವೂ ಇಲ್ಲವೋ ಅವರಿಗೆ ಆಕಾಶದಲ್ಲಿರುವ ಚಂದ್ರನ ಬಲ ಏನು ಮಾಡೀತು?

ಯೋಜನಾನಾಂ ಸಹಸ್ರಂ ತು ಶನೈರ್ಯಾತಿ ಪಿಪೀಲಿಕಾ ।
ಅಗಚ್ಛನ್ವೈನತೇಯೋಽಪಿ ಪದಮೇಕಂ ನ ಗಚ್ಛತಿ ॥ ೯೭

-ಸುಭಾಷಿತಸುಧಾನಿಧಿ

ಮುನ್ನಡೆದುಹೋಗುವ ಇರುವೆ ಮೆಲ್ಲಮೆಲ್ಲಗೆ ಸಾವಿರಯೋಜನೆಗಳನ್ನಾದರೂ ಹೋಗುತ್ತದೆ. ಮುಂದೆ ಸಾಗದಿದ್ದರೆ ಗರುಡನೂ ಸಹ ಒಂದು ಹೆಜ್ಜೆಯನ್ನೂ ಮುಂದಿಡುವುದಿಲ್ಲ.

ಯೋಽಧಿಕಾದ್ಯೋಜನಶತಾತ್ಪಶ್ಯತೀಹಾಮಿಷಂ ಖಗಃ ।
ಸ ಏವ ಪ್ರಾಪ್ತಕಾಲಸ್ತು ಪಾಶಬಂಧಂ ನ ಪಶ್ಯತಿ ॥ ೯೮

ಹಿತೋಪದೇಶ, ಮಿತ್ರಲಾಭ-೩೭

ಯಾವ ಪಕ್ಷಿಯು ನೂರು ಯೋಜನೆಗಳಿಗೂ ಮೀರಿದ ದೂರದಲ್ಲಿರುವ ಆಹಾರವನ್ನು ಕಾಣುತ್ತದೋ ಅದೇ ವಿಧಿಗೊಳಗಾದಾಗ ಬಲೆಗಳ ಬಂಧನವನ್ನು ಕಾಣಲಾರದು.

ಯಂ ಯಮಿಚ್ಛೇದ್ಯಥಾಕಾಮಂ ತಂ ತಮೇವ ತಥಾಪ್ನುಯಾತ್ ।
ಯದಿ ನ ಸ್ಯಾತ್ ಪರಾಧೀನಂ ಪುರುಷಸ್ಯ ಕ್ರಿಯಾಫಲಮ್ ॥ ೯೯

-ಸುಭಾಷಿತಸುಧಾನಿಧಿ

ಮನುಷ್ಯನು ಮಾಡಿದ ಕೆಲಸದ ಫಲ ಪರಾಧೀನವಾಗಿಲ್ಲದೇ ಹೋಗಿದ್ದಿದ್ದರೆ ಮನಬಂದಂತೆ ಏನೇನನ್ನು ಬಯಸುವನೋ ಅದೆಲ್ಲವನ್ನೂ ಪಡೆಯಬಹುದಾಗಿತ್ತು.

**ರಾತ್ರಿರ್ಗಮಿಷ್ಯತಿ ಭವಿಷ್ಯತಿ ಸುಪ್ರಭಾತಂ**
**ಭಾಸ್ವಾನುದೇಷ್ಯತಿ ಹಸಿಷ್ಯತಿ ಪಂಕಜಶ್ರೀಃ ।**
**ಇತ್ಥಂ ವಿಚಿಂತಯತಿ ಕೋಶಗತೇ ದ್ವಿರೇಫೇ**
**ಹಾ ಹಂತ ಹಂತ ನಲಿನೀಂ ಗಜ ಉಜ್ಜಹಾರ ॥ ೧೦೦**

-ಕುವಲಯಾನಂದ

"ರಾತ್ರಿ ಕಳೆಯುವುದು ; ಸುಪ್ರಭಾತವಾಗುವುದು; ಸೂರ್ಯನು ಹುಟ್ಟುವನು ; ಪಂಕಜಲಕ್ಷ್ಮಿ ನಗುವಳು (ತಾವರೆ ಅರಳುವುದು)" ಎಂಬುದಾಗಿ ತಾವರೆಯ ಮೊಗ್ಗಿನಲ್ಲಿ ಸಿಕ್ಕಿಕೊಂಡಿದ್ದ ದುಂಬಿ ಆಲೋಚಿಸುತ್ತಿರಲು, ಅಯ್ಯೊ ಅಯ್ಯೊ! ಆನೆ ತಾವರೆಗಿಡವನ್ನು ಕಿತ್ತೆಸೆಯಿತು.

**ರಾಮೇ ಪ್ರವ್ರಜನಂ ಬಲೇರ್ನಿಯಮನಂ ಪಾಂಡೋಃ ಸುತಾನಾಂ ವನಂ**
**ವೃಷ್ಣೀನಾಂ ನಿಧನಂ ನಲಸ್ಯ ನೃಪತೇ ರಾಜ್ಯಾತ್ಪರಿಭ್ರಂಶನಂ ।**
**ನಾಟ್ಯಾಚಾರ್ಯಕಮರ್ಜುನಸ್ಯ ಪತನಂ ಸಂಚಿಂತ್ಯ ಲಂಕೇಶ್ವರೇ**
**ಸರ್ವಂ ಕಾಲವಶಾಜ್ಜನೋಽತ್ರ ಸಹತೇ ಕಃ ಕಂ ಪರಿತ್ರಾಯತೇ॥೧೦೧**

-ಪಂಚತಂತ್ರ, ಕಾಕೋಲೂಕೀಯ-೨೫೧

ಶ್ರೀರಾಮನ ವನವಾಸ, ಬಲಿಚಕ್ರವರ್ತಿಯ ಪರಾಭವ, ಪಾಂಡವರ ವನಗಮನ, ಯಾದವರ ವಿನಾಶ, ರಾಜನಾದ ನಳನ ದೇಶಭ್ರಷ್ಟತೆ, ಅರ್ಜುನನು ನಾಟ್ಯಾಚಾರ್ಯನಾದುದು, ರಾವಣನ ಮರಣ ಇವುಗಳನ್ನೆಲ್ಲಾ ಯೋಚಿಸಿದರೆ ಇಲ್ಲಿನ ಜನ ಎಲ್ಲವನ್ನೂ ವಿಧಿಗನುಸಾರ ಸಹಿಸಬೇಕಾಗಿದೆ ಎಂದು ತಿಳಿಯುತ್ತದೆ. ಯಾರು ಯಾರನ್ನು ತಾನೇ ಕಾಪಾಡಬಲ್ಲರು?

**ಲಘೀಯಃ ಪ್ರಾಜ್ಯಂ ವಾ ಫಲಮಭಿಮುಖಂ ಯಾತು ಮನಸಾ**
**ನಿರೀಹೇಣ ಸ್ಥಾತುಂ ಕ್ವಚಿದಪಿ ನ ಯುಕ್ತಂ ಮತಿಮತಾ ।**
**ಕುಲಾಲೋ ದಂಡೇನ ಭ್ರಮಯತಿ ನ ಚೇಚ್ಚಕ್ರಮನಿಶಂ**
**ಶರಾವಃ ಕುಂಭೋ ವಾ ನ ಹಿ ಭವತಿ ಸತ್ಯಾಮಪಿ ಮೃದಿ ॥ ೧೦೨**

-ಸುಭಾಷಿತಸುಧಾನಿಧಿ

ಬಹಳ ಅಲ್ಪವೋ ಅಥವಾ ಬಹಳ ಮಹತ್ತಾದುದೋ ಯಾವುದೇ ಆದರೂ ಸರಿಪ್ರಯೋಜನವನ್ನು ಕುರಿತು ಮನಸ್ಸು ಪ್ರವರ್ತಿಸಲಿ. ಬುದ್ಧಿವಂತನಾದವನು ಯಾವ ಆಶೆಯೂ ಇಲ್ಲದೆ ನಿಂತಿರಬೇಕೆಂಬುದು ಯಾವಾಗಲೂ ಯುಕ್ತವಲ್ಲ. ಕುಂಬಾರ ಚಕ್ರವನ್ನು

ಯಾವಾಗಲೂ ಕೋಲಿನಿಂದ ತಿರುಗಿಸದೇ ಇದ್ದರೆ ಮಣ್ಣಿದ್ದರೂ ಸಹ ಮಡಿಕೆಯೂ ಆಗುವುದಿಲ್ಲ ; ತಟ್ಟೆಯೂ ಆಗುವುದಿಲ್ಲವಷ್ಟೇ ?

ವನೇ ರಣೇ ಶತ್ರುಜಲಾಗ್ನಿಮಧ್ಯೇ
ಮಹಾರ್ಣವೇ ಪರ್ವತಮಸ್ತಕೇ ವಾ ।
ಸುಪ್ತಂ ಪ್ರಮತ್ತಂ ವಿಷಮಸ್ಥಿತಂ ವಾ
ರಕ್ಷಂತಿ ಪುಣ್ಯಾನಿ ಪುರಾಕೃತಾನಿ ॥ ೧೦೩

-ನೀತಿಶತಕ-೯೬

ಕಾಡಿನಲ್ಲಿ, ಯುದ್ಧದಲ್ಲಿ, ಶತ್ರು-ನೀರು-ಬೆಂಕಿ ಇವುಗಳ ಮಧ್ಯದಲ್ಲಿ, ದೊಡ್ಡ ಸಮುದ್ರದಲ್ಲಿ ಅಥವಾ ಬೆಟ್ಟದ ತುದಿಯಲ್ಲಿ, ಎಚ್ಚರತಪ್ಪಿದ್ದರೂ, ಮಲಗಿದ್ದರೂ, ಅಪಾಯದಲ್ಲಿದ್ದರೂ, ಮನುಷ್ಯನನ್ನು ಹಿಂದೆ ಮಾಡಿದ ಪುಣ್ಯಗಳು ಕಾಪಾಡುತ್ತವೆ.

ವಾಲೀ ಯಥಾ ವಿನಿಹತಃ ಪ್ರಥಿತಪ್ರತಾಪೋ
ದಗ್ಧಾ ಯದೇಕಕಪಿನಾ ಪ್ರಸಭಂ ಚ ಲಂಕಾ ।
ತೀರ್ಣೋ ಯಥಾ ಜಲನಿಧೀ ರಘುಸೇತುನಾ ಚ
ಮನ್ಯೇ ಯಥಾಭಿಲಷಿತಂ ತು ಫಲಂ ವಿಧಾತುಃ ॥ ೧೦೪

-ಸುಭಾಷಿತಸುಧಾನಿಧಿ

ಬಹಳ ಪರಾಕ್ರಮಶಾಲಿಯೆಂದು ಹೆಸರಾದ ವಾಲಿಯು ಹತನಾದನು. ಕಪಿಯೊಂದು ಲಂಕೆಯನ್ನು ಪೂರ್ಣವಾಗಿ ಸುಟ್ಟುಹಾಕಿತು. ರಾಮ ಸೇತುವಿನಿಂದ ಸಮುದ್ರವನ್ನೇ ದಾಟಿದನು. ಸೃಷ್ಟಿಕರ್ತನು ತನ್ನಿಚ್ಛೆಯಂತೆ ಫಲ ಕೊಡುವನೆಂದು ಇವೆಲ್ಲದರಿಂದ ತಿಳಿಯುತ್ತೇನೆ.

ವಿಜೇತವ್ಯಾ ಲಂಕಾ ಚರಣತರಣೀಯೋ ಜಲನಿಧಿಃ
ವಿಪಕ್ಷಃ ಪೌಲಸ್ತ್ಯೋ ರಣಭುವಿ ಸಹಾಯಾಶ್ಚ ಕಪಯಃ ।
ತಥಾಪ್ಯೇಕೋ ರಾಮಃ ಸಕಲಮವಧೀದ್ರಾಕ್ಷಸಕುಲಂ
ಕ್ರಿಯಾಸಿದ್ಧಿಃ ಸತ್ತ್ವೇ ಭವತಿ ಮಹತಾಂ ನೋಪಕರಣೇ ॥ ೧೦೫

-ಸುಭಾಷಿತರತ್ನಭಾಂಡಾಗಾರ

ಲಂಕೆಯನ್ನು ಗೆಲ್ಲಬೇಕು, ಸಮುದ್ರವನ್ನು ಕಾಲಿಂದ ದಾಟಬೇಕು, ರಾವಣನು ವೈರಿ, ಯುದ್ಧರಂಗದಲ್ಲಿ ಸಹಾಯಮಾಡತಕ್ಕವು ಕಪಿಗಳು, ಆದರೂ ರಾಮನು ಏಕಾಕಿಯಾಗಿ ಸಕಲ ರಾಕ್ಷಸಕುಲವನ್ನೂ ಧ್ವಂಸಮಾಡಿದನು. ಕ್ರಿಯಾಸಿದ್ಧಿ ಮಹಾತ್ಮರಿಗೆ ಸತ್ತ್ವದಲ್ಲಿರುತ್ತದೆ, ಸಲಕರಣೆಗಳಲ್ಲಲ್ಲ.

**ವಿಧಾತೃವಿಹಿತಂ ಮಾರ್ಗಂ ನ ಕಶ್ಚಿದತಿವರ್ತತೇ ।**
**ಕಾಲಮೂಲಮಿದಂ ಸರ್ವಂ ಭಾವಾಭಾವೌ ಸುಖಾಸುಖೇ ॥ ೧೦೬**

-ಮಹಾಭಾರತ, ಆದಿ. ೧-೨೪೭

ದೈವವು ತೋರಿಸಿದ ದಾರಿಯನ್ನು ಯಾವನೂ ಉಲ್ಲಂಘಿಸಲಾರ. ಸಂಪತ್ತು, ಅದರ ನಾಶ, ಸುಖ, ದುಃಖ ಎಲ್ಲವೂ ಕಾಲಕ್ಕೆ ಅಧೀನವಾಗಿದೆ.

**ವಿನಾಶೇ ಬಹವೋ ದೋಷಾ ಜೀವನ್ ಭದ್ರಾಣಿ ಪಶ್ಯತಿ ।**
**ತಸ್ಮಾತ್ ಪ್ರಾಣಾಮ್ ಧರಿಷ್ಯಾಮಿ ಧ್ರುವೋ ಜೀವತಿ ಸಂಗಮಃ ॥**

-ರಾಮಾಯಣ, ಸುಂದರ. ೧೩-೪೮

ಆತ್ಮಹತ್ಯೆಯಲ್ಲಿ ಬಹಳ ದೋಷಗಳುಂಟು. ಬದುಕಿದ್ದರೆ ಒಳ್ಳೆಯದನ್ನು ಕಾಣಬಹುದು. ಆದ್ದರಿಂದ ಆತ್ಮಹತ್ಯೆಮಾಡಿಕೊಳ್ಳದೆ ಬದುಕಿರುತ್ತೇನೆ. ಬದುಕಿದ್ದರೆ ಶ್ರೇಯಃಪ್ರಾಪ್ತಿ ನಿಶ್ಚಿತ. (ಸೀತೆಯನ್ನು ಕಾಣದೆ ವಿಷಣ್ಣನಾದ ಹನುಮಂತನ ಆಲೋಚನೆ).

**ವಿಪಕ್ಷಮಖಿಲೀಕೃತ್ಯ ಪ್ರತಿಷ್ಠಾ ಖಲು ದುರ್ಲಭಾ ।**
**ಅನೀತ್ವಾ ಪಂಕತಾಂ ಧೂಲಿಂ ಉದಕಂ ನಾವತಿಷ್ಠತೇ ॥ ೧೦೮**

-ಶಿಶುಪಾಲವಧ, ೨-೩೪

ಶತ್ರುಗಳನ್ನು ಪೂರ್ತಿಯಾಗಿ ನಾಶಮಾಡದೆ ರಾಜ್ಯವನ್ನು ಸ್ಥಿರವಾಗಿ ಆಳುವುದು ಸಾಧ್ಯವಿಲ್ಲ. ಧೂಳನ್ನು ಕೆಸರಾಗಿ ಮಾಡಿದಮೇಲೆ ನೀರು ಆ ಜಾಗದಲ್ಲಿ ನಿಲ್ಲಲು ಸಾಧ್ಯವಾಗುತ್ತದೆ.

**ವಿಹಾಯ ಪೌರುಷಂ ಯೋ ಹಿ ದೈವಮೇವಾವಲಂಬತೇ ।**
**ಪ್ರಾಸಾದಸಿಂಹವತ್ತಸ್ಯ ಮೂರ್ಧ್ನಿ ತಿಷ್ಠಂತಿ ವಾಯಸಾಃ ॥ ೧೦೯**

-ಯಶಸ್ತಿಲಕಚಂಪೂ, ೩-೫೦

ಯಾವನು ಪುರುಷಪ್ರಯತ್ನವನ್ನು ಬಿಟ್ಟು ದೈವವನ್ನೇ ನಂಬಿಕೊಂಡಿರುವನೋ, ಅವನ ತಲೆಯಮೇಲೆ, ಪ್ರಾಸಾದದ ಸಿಂಹಪ್ರತಿಮೆಯ ಮೇಲೆ ಹೇಗೋ ಹಾಗೆ ಕಾಗೆಗಳು ಕುಳಿತುಕೊಳ್ಳುತ್ತವೆ!

**ವೃದ್ಧಿಂ ಹಾನಿಂ ಸುಖಂ ದುಃಖಂ ಸಚ್ಚಾಸಚ್ಚಾಭಯಂ ಭಯಂ ।**
**ಯೌಗಪದ್ಯೇನ ಭುಂಜಾನಾ ದೃಶ್ಯಂತೇ ಕರ್ಮಸಾಕ್ಷಿಣಃ ॥ ೧೧೦**

-ಸುಭಾಷಿತಸುಧಾನಿಧಿ

ಏಳಿಗೆ, ಹಾನಿ, ಸುಖ, ದುಃಖ, ಒಳ್ಳೆಯದು, ಕೆಟ್ಟದ್ದು, ಅಭಯ ಮತ್ತು ಭಯ ಇವುಗಳನ್ನು ಒಟ್ಟಿಗೆ ಅನುಭವಿಸುತ್ತಾ ಕರ್ಮಕ್ಕೆ ಸಾಕ್ಷಿಗಳಾಗಿರುವವರು ಕಂಡುಬರುತ್ತಾರೆ.

ವ್ಯೋಮ್ನ್ಯೇಕಾಂತವಿಹಾರಿಣೋಽಪಿ ವಿಹಗಾಃ ಸಂಪ್ರಾಪ್ನುವಂತ್ಯಾಪದಂ
ಬಧ್ಯಂತೇ ನಿಪುಣೈರಗಾಧಸಲಿಲಾನ್ಮತ್ಸ್ಯಾಃ ಸಮುದ್ರಾದಪಿ ।
ದುರ್ನೀತಂ ಹಿ ಕಿಮಸ್ತಿ ಕಿಂ ಸುಚರಿತಂ ಕಃ ಸ್ಥಾನಲಾಭೇ ಗುಣಃ
ಕಾಲೋ ಹಿ ವ್ಯಸನಪ್ರಸಾರಿತಕರೋ ಗೃಹ್ಣಾತಿ ದೂರಾದಪಿ ॥ ೧೧೧

ಹಿತೋಪದೇಶ, ಮಿತ್ರಲಾಭ-೩೯

ಆಕಾಶದಲ್ಲಿ ಏಕಾಂತವಾಗಿ ವಿಹರಿಸುವಂಥ ಹಕ್ಕಿಗಳೂ ಸಹ ಆಪತ್ತಿಗೊಳಗಾಗುತ್ತವೆ; ಸಮುದ್ರದ ಆಳವಾದ ನೀರಿನ ಮಧ್ಯದಿಂದಲೂ ಮೀನುಗಳು ನಿಪುಣರಿಂದ ಹಿಡಿಯಲ್ಪಡುತ್ತವೆ. ಇಲ್ಲಿ ದುಶ್ಚರಿತ ಯಾವುದು? ಸುಚರಿತ ಯಾವುದು? ಸ್ಥಾನಪ್ರಾಪ್ತಿಯಿಂದ ತಾನೇ ಏನು ಪ್ರಯೋಜನ? ವಿಧಿಯು ದೂರದಿಂದಲೂ ಕೂಡ ಇಚ್ಛೆಯಂತೆ ಕೈನೀಡಿ ಹಿಡಿದುಕೊಂಡು ಬಿಡುತ್ತದೆ.

ಶ್ವಃಕಾರ್ಯಮದ್ಯ ಕುರ್ವೀತ ಪೂರ್ವಾಹ್ಣೇ ಚಾಪರಾಹ್ಣಿಕಂ ।
ನ ಹಿ ಪ್ರತೀಕ್ಷತೇ ಮೃತ್ಯುಃ ಕೃತಮಸ್ಯ ನ ವಾ ಕೃತಮ್ ॥ ೧೧೨

-ಮಹಾಭಾರತ, ಶಾಂತಿ. ೧೭೫-೧೫

ನಾಳೆ ಮಾಡಬೇಕಾದ ಕೆಲಸವನ್ನು ಈ ದಿನವೇ ಮಾಡಬೇಕು. ಅಪರಾಹ್ಣದಲ್ಲಿ ಮಾಡಬೇಕಾದ್ದನ್ನು ಪೂರ್ವಹ್ಣದಲ್ಲಿ ಮಾಡಬೇಕು. ಏಕೆಂದರೆ, ಈತನು ಕೆಲಸವನ್ನು ಮಾಡಿ ಮುಗಿಸಿದನೇ ಇಲ್ಲವೆ ಎಂದು ಮೃತ್ಯುವು ಕಾಯುವುದಿಲ್ಲ.

ಶಮಯತಿ ಗಜಾನನ್ಯಾನ್ ಗಂಧದ್ವಿಪಃ ಕಲಭೋಽಪಿ ಸನ್
ಪ್ರಭವತಿತರಾಂ ವೇಗೋದಗ್ರಂ ಭುಜಂಗಶಿಶೋರ್ವಿಷಂ ।
ಭುವಮಧಿಪತಿರ್ಬಾಲಾವಸ್ಥೋಽಪ್ಯಲಂ ಪರಿರಕ್ಷಿತುಂ
ನ ಖಲು ವಯಸಾ ಜಾತ್ಯೈವಾಯಂ ಸ್ವಕಾರ್ಯಸಹೋ ಭರಃ ॥ ೧೧೩

-ವಿಕ್ರಮೋರ್ವಶೀಯ, ೫-೧೮

ಸಲಗವು ಕಿರಿದಾದರೂ ಇತರ ಆನೆಗಳನ್ನು ತನ್ನ ಅಧೀನದಲ್ಲಿಟ್ಟುಕೊಳ್ಳುತ್ತದೆ. ಮರಿಯಾಗಿದ್ದರೂ ಹಾವಿನ ವಿಷವು ತೀವ್ರಪರಿಣಾಮುವನ್ನುಂಟುಮಾಡುತ್ತದೆ. ರಾಜವಂಶದವನು ಎಳೆಯನಾಗಿದ್ದರೂ ರಾಜ್ಯವನ್ನಾಳಲು ಸಮರ್ಥನು. ವಯಸ್ಸು ಮುಖ್ಯವಲ್ಲ. ಹುಟ್ಟಿನಿಂದಲೇ ತನ್ನ ಕಾರ್ಯವನ್ನು ನಿರ್ವಹಿಸುವ ಶಕ್ತಿಯುಂಟಾಗುತ್ತದೆ.

ಶಯಾನಂ ಚಾನುಶಯತಿ ತಿಷ್ಠಂತಂ ಚಾನುತಿಷ್ಠತಿ ।
ಅನುಧಾವತಿ ಧಾವಂತಂ ಕರ್ಮ ಪೂರ್ವಕೃತಂ ನರಮ್ ॥ ೧೧೪

-ಸುಭಾಷಿತಸುಧಾನಿಧಿ

ಮನುಷ್ಯನು ಹಿಂದೆ ಮಾಡಿದ ಕರ್ಮ ಅವನು ಮಲಗಿದ್ದಾಗ ತಾನೂ ಮಲಗಿರುತ್ತದೆ. ಎದ್ದು ನಿಂತವನನ್ನು ಅನುಸರಿಸಿ ನಿಲ್ಲುತ್ತದೆ ; ಓಡುವವನ ಬೆನ್ನಟ್ಟಿ ಓಡುತ್ತದೆ.

**ಶಾಸ್ತ್ರತೋ ಗುರುತಶ್ಚೈವ ಸ್ವತಶ್ಚೇತಿ ತ್ರಿಸಿದ್ಧಯಃ ।**
**ಸರ್ವತ್ರ ಪುರುಷಾರ್ಥಸ್ಯ ನ ದೈವಸ್ಯ ಕದಾಚನ ॥** ೧೧೫

-ಯೋಗವಾಸಿಷ್ಠ

ಶಾಸ್ತ್ರದಿಂದ, ಗುರುವಿನಿಂದ, ತನ್ನಿಂದ-ಹೀಗೆ ಕಾರ್ಯಸಿದ್ಧಿಗಳು ಮೂರು ವಿಧ. ಇವೆಲ್ಲವೂ ಪೌರುಷಕ್ಕೆ ಸೇರತಕ್ಕವು. ಎಂದಿಗೂ ದೈವಕ್ಕೆ ಸೇರಿದ್ದಲ್ಲ.

**ಶುಚಿ ಭೂಷಯತಿ ಶ್ರುತಂ ವಪುಃ**
**ಪ್ರಶಮಸ್ತಸ್ಯ ಭವತ್ಯಲಂಕ್ರಿಯಾ ।**
**ಪ್ರಶಮಾಭರಣಂ ಪರಾಕ್ರಮಃ**
**ಸ ನಯಾಪಾದಿತಸಿದ್ಧಿಭೂಷಣಃ ॥** ೧೧೬

-ಕಿರಾತಾರ್ಜುನೀಯ, ೨-೩೨

ಸಂಪ್ರದಾಯಶುದ್ಧವಾದ ಶಾಸ್ತ್ರಜ್ಞಾನವು ಶರೀರವನ್ನು ಅಲಂಕರಿಸುತ್ತದೆ. ಅದಕ್ಕೆ ಶಾಂತಿಯು ಅಲಂಕಾರ. ಸಂದರ್ಭೋಚಿತವಾದ ಪರಾಕ್ರಮವು ಶಾಂತಿಗೆ ಭೂಷಣ. ಆ ಪರಾಕ್ರಮವು ನೀತಿಯಿಂದ ಕಾರ್ಯಸಿದ್ಧಿಯನ್ನು ಪಡೆವುದೇ ಉಚಿತ.

**ಶುಭೇನ ಕರ್ಮಣಾ ಸೌಖ್ಯಂ ದುಃಖಂ ಪಾಪೇನ ಕರ್ಮಣಾ ।**
**ಕೃತಂ ಭವತಿ ಸರ್ವತ್ರ ನಾಕೃತಂ ವಿದ್ಯತೇ ಕ್ವಚಿತ್ ॥** ೧೧೭

-ಮಹಾಭಾರತ, ಸ್ತ್ರೀ. ೨-೩೬

ಪುಣ್ಯಕರ್ಮದಿಂದ ಸೌಖ್ಯ ; ಪಾಪಕರ್ಮದಿಂದ ದುಃಖ. ಎಲ್ಲವೂ ಕರ್ಮದ ಫಲ. ಮಾಡದೆ ಯಾವುದೂ ಘಟಿಸುವುದಿಲ್ಲ.

**ಸತ್ಯಧರ್ಮಾರ್ಯವೃತ್ತೇಷು ಶೌಚೇ ಚೈವಾರಮೇತ್ಸದಾ ।**
**ಶಿಷ್ಯಾಂಶ್ಚ ಶಿಷ್ಯಾದ್ಧರ್ಮೇಣ ವಾಗ್ಬಾಹೂದರಸಂಯತಃ ॥** ೧೧೮

-ಮನುಸ್ಮೃತಿ, ೪-೧೭೫

ಸತ್ಯಮಾರ್ಗದಲ್ಲಿ, ಧರ್ಮಾಚರಣೆಯಲ್ಲಿ, ಶುಚಿಯಾಗಿರಲು ಯಾವಾಗಲೂ ಆಸಕ್ತಿ ಇರಬೇಕು. ಶಿಷ್ಯರನ್ನು ಧರ್ಮದಿಂದ ನಡೆಯುವಂತೆ ಮಾಡಬೇಕು. ಮಾತು, ತೋಳು, ಹೊಟ್ಟೆ ಇವುಗಳನ್ನು ಹತೋಟಿಯಲ್ಲಿಡಬೇಕು.

ಸದಾ ಸಮಸ್ತಭಾವಾನಾಂ ಕಾಲೇ ಸಂಕೋಚಕಾರಿಣಿ ।
ಹ್ಯೋವೃತ್ತಮದ್ಯ ಕಥಿತಂ ಸತ್ಯಂ ನೋ ಮನ್ಯತೇ ಜನಃ ॥ ೧೧೯
-ರಾಮಾಯಣಮಂಜರೀ, ಕಿಷ್ಕಿಂಧಾ. ೪೬೫

ಸಮಸ್ತ ವಸ್ತುಗಳೂ ಕಾಲಾನುಗುಣವಾಗಿ ಸದಾ ಹಿಂದಕ್ಕೆ ಸರಿಯುತ್ತ ಹೋಗುತ್ತವೆ. ನಿನ್ನೆ ನಡೆದುದನ್ನು ಈ ದಿನ ಹೇಳಿದರೂ ಜನರು ಸತ್ಯವೆಂದು ನಂಬುವುದಿಲ್ಲ.

ಸ್ವಧರ್ಮಮನುರುಧ್ಯಂತೇ ನಾತಿಕ್ರಮಮಮರಾತಿಭಿಃ ।
ಪಲಾಯಂತೇ ಕೃತಧ್ವಂಸಾ ನಾಹವಾನ್ಮಾನಶಾಲಿನಃ ॥ ೧೨೦
-ಕಿರಾತಾರ್ಜುನೀಯ, ೧೧-೭೮

ಅಭಿಮಾನಿಗಳು ತಮ್ಮ ಧರ್ಮವನ್ನು ಅನುಸರಿಸುತ್ತಾರೆ. ಶತ್ರುಗಳ ಅತಿಕ್ರಮವನ್ನು ಸಹಿಸಲಾರರು. ಶತ್ರುಗಳಿಂದ ಏಟುತಿಂದು ಓಡಿಹೋಗುವುದು ಎಂದಿಗೂ ಅಭಿಮಾನಿಗಳ ಕೆಲಸವಲ್ಲ.

ಸ್ವಯಂ ಮಹೇಶಃ ಶ್ವಶುರೋ ನಗೇಶಃ
ಸಖಾ ಧನೇಶಸ್ತನಯೋ ಗಣೇಶಃ ।
ತಥಾಪಿ ಭಿಕ್ಷಾಟನಮೇವ ಶಂಭೋಃ
ಬಲೀಯಸೀ ಕೇವಲಮೀಶ್ವರೇಚ್ಛಾ ॥ ೧೨೧
-ಸುಭಾಷಿತರತ್ನಭಾಂಡಾಗಾರ

ತಾನು ಸ್ವಯಂ ಮಹೇಶ್ವರ, ಮಾವ ಪರ್ವತೇಶ್ವರ, ಮಿತ್ರ ಧನೇಶನಾದ ಕುಬೇರ, ಮಗನು ಗಣೇಶ. ಹೀಗಿದ್ದರೂ ಶಂಭುವಿಗೆ ಭಿಕ್ಷಾಟನೆ ಪ್ರಾಪ್ತವಾಯಿತು. ವಿಧಿಯ ಇಚ್ಛೆಯೇ ಪ್ರಬಲವಾದದ್ದು!

ಸರ್ವ ಏವ ಮಹಾಭಾಗ ಮಹತ್ತ್ವಂ ಪ್ರತಿ ಸೋದ್ಯಮಾಃ ।
ತಥಾಽಪಿ ಪುಂಸಾಂ ಭಾಗ್ಯಾನಿ ನೋದ್ಯಮಾ ಭೂತಿಹೇತವಃ ॥೧೨೨
-ವಿಷ್ಣುಪುರಾಣ, ೧-೧೯-೪೪

ಎಲ್ಲರೂ ದೊಡ್ಡವರಾಗಬೇಕೆಂದು ಬಹಳ ಯತ್ನಮಾಡುತ್ತಾರೆ. ಆದರೂ ಅದೃಷ್ಟವುಳ್ಳವರು ಮಾತ್ರ ಸಫಲರಾಗುತ್ತಾರೆ. ಆದುದರಿಂದ ಕೇವಲ ಪ್ರಯತ್ನವು ಏಳಿಗೆಗೆ ಕಾರಣವಲ್ಲ.

ಸರ್ವಂ ಕರ್ಮೇದಮಾಯತ್ತಂ ವಿಧಾನೇ ದೈವಮಾನುಷೇ ।
ತಯೋರ್ದೈವಮಚಿಂತ್ಯಂ ತು ಮಾನುಷೇ ವಿದ್ಯತೇ ಕ್ರಿಯಾ ॥೧೨೩
-ಮನುಸ್ಮೃತಿ, ೭-೨೦೫

ಎಲ್ಲಾ ವಿಧವಾದ ಏರಿಳಿತಗಳು ಅದೃಷ್ಟ ಮತ್ತು ಮನುಷ್ಯಪ್ರಯತ್ನಗಳನ್ನು ಅವಲಂಬಿಸಿವೆ. ಅವುಗಳಲ್ಲಿ ಅದೃಷ್ಟದ ಗತಿಯನ್ನು ಮನುಷ್ಯನು ತಿಳಿಯಲಾರ. ಮಾನುಷ ಯತ್ನವನ್ನು ಹೆಚ್ಚುಕಡಿಮೆ ಮಾಡಿಕೊಳ್ಳಬಹುದು.

**ಸ್ನಿಗ್ಧೇಷ್ವಾಸಜ್ಯಂ ಕರ್ಮ ಯದ್ದುಷ್ಕರಂ ಸ್ಯಾತ್**
**ಯೋ ವಾ ವಿಜ್ಞಾತಾ ಸತ್ಕೃತಾನಾಂ ಗುಣಾನಾಂ ।**
**ಕ್ರೀತಂ ಸಾಮರ್ಥ್ಯಂ ಯಸ್ಯ ತಸ್ಯ ಕ್ರಮೇಣ**
**ದೈವಪ್ರಾಮಾಣ್ಯಾತ್ ಭ್ರಶ್ಯತೇ ವರ್ಧತೇ ವಾ ॥** ೧೨೪

-ಪ್ರತಿಜ್ಞಾಯೌಗಂಧರಾಯಣ, ೧-೩

ಕಷ್ಟವಾದ ಮತ್ತು ಮುಖ್ಯವಾದ ಕೆಲಸವನ್ನು ನಮ್ಮಲ್ಲಿ ಪ್ರೀತಿಯುಳ್ಳವರಿಗೆ ವಹಿಸಬೇಕು. ನಾವು ಮಾಡಿದ ಸತ್ಕಾರಗಳನ್ನು ಮತ್ತು ನಮ್ಮ ಒಳ್ಳೆಯ ಗುಣಗಳನ್ನೂ ಅರಿತು ಕೃತಜ್ಞತೆಯಿಂದ ನಡೆದುಕೊಳ್ಳುವವನಾಗಿರಬೇಕು. ಅಲ್ಲದೆ ಕೇವಲ ಹಣಕ್ಕಾಗಿ ಕೆಲಸ ಮಾಡುವವನಿಗೆ ವಹಿಸಿದರೆ, ಕಾರ್ಯವು ನಡೆಯುವುದೂ ಬಿಡುವುದೂ ಅದೃಷ್ಟವನ್ನು ಅವಲಂಬಿಸುತ್ತದೆ. ಕಾರ್ಯವು ಆಗುವುದೂ ಸಂಶಯ.

**ಸುವರ್ಣಪುಷ್ಪಾಂ ಪೃಥಿವೀಂ ಚಿನ್ವಂತಿ ಪುರುಷಾಸ್ತ್ರಯಃ ।**
**ಶೂರಶ್ಚ ಕೃತವಿದ್ಯಶ್ಚ ಯಶ್ಚ ಜಾನಾತಿ ಸೇವಿತುಮ್ ॥** ೧೨೫

-ಮಹಾಭಾರತ, ಉದ್ಯೋಗ. ೩೫-೭೪

ಶೂರ, ವಿದ್ಯಾವಂತ ಮತ್ತು ಸೇವಾಕಾರ್ಯದಲ್ಲಿ ದಕ್ಷ-ಈ ಮೂವರು ಭೂಮಿಯೆಂಬ ಲತೆಯಿಂದ ಚಿನ್ನದ ಹೂಗಳನ್ನು ಬಿಡಿಸಿಕೊಳುತ್ತಾರೆ.

**ಸಂಪ್ರಾಪ್ತಮವಮಾನಂ ಯಸ್ತೇಜಸಾ ನ ಪ್ರಮಾರ್ಜತಿ ।**
**ಕಸ್ತಸ್ಯ ಪುರುಷಾರ್ಥೋಽಸ್ತಿ ಪುರುಷಸ್ಯಾಲ್ಪತೇಜಸಃ ॥** ೧೨೬

ರಾಮಾಯಣ, ಯುದ್ಧ ೧೧೮-೬

ಪ್ರಾಪ್ತವಾದ ಅವಮಾನವನ್ನು ಯಾವನು ತನ್ನ ತೇಜಸ್ಸಿನಿಂದ ಅಳಿಸಿಹಾಕಲಾರನೋ, ಅಂತಹ ತೇಜೋಹೀನನಿಗೆ ಯಾವ ಪುರುಷಾರ್ಥವು ತಾನೇ ಕೈಗೂಡೀತು ?

**ಸಂಯೋಗೋ ಹಿ ವಿಯೋಗಸ್ಯ ಸಂಸೂಚಯತಿ ಸಂಭವಮ್ ।**
**ಅನತಿಕ್ರಮಣೀಯಸ್ಯ ಜನ್ಮ ಮೃತ್ಯೋರಿವಾಗಮಮ್ ॥** ೧೨೭

-ಹಿತೋಪದೇಶ, ಸಂಧಿ. ೭೭

ಸಮಾಗಮವು ವಿಯೋಗವಾಗುವುದೆಂಬ ಸಂಭವವನ್ನು ಸೂಚಿಸುತ್ತದೆ ; ತಪ್ಪಿಸಿಕೊಳ್ಳಲಾರದ ಸಾವಿನ ಬರುವಿಕೆಯನ್ನು ಹುಟ್ಟು ಸೂಚಿಸುವಂತೆ.

**ಹತೋಽಪಿ ಲಭತೇ ಸ್ವರ್ಗಂ ಜಿತ್ವಾ ತು ಲಭತೇ ಯಶಃ ।**
**ಉಭೇ ಬಹುಮತೇ ಲೋಕೇ ನಾಸ್ತಿ ನಿಷ್ಫಲತಾ ರಣೇ ॥** ೧೨೮

-ಕರ್ಣಭಾರ, ೧-೧೨

ಯುದ್ಧದಲ್ಲಿ ಮಡಿದರೆ, ಸ್ವರ್ಗ, ಗೆದ್ದರೆ ಕೀರ್ತಿಯುಂಟು. ಲೋಕದಲ್ಲಿ ಇವೆರಡೂ ಬೇಕಾದ್ದೇ. ಯುದ್ಧದಲ್ಲಿ ಯಾವುದೂ ವ್ಯರ್ಥವಾಗಲಾರದು.



# ೮. ಸದ್ಗುಣ-ದುರ್ಗುಣ

**ಅಂಕಾಧಿರೋಪಿತಮೃಗಶ್ಚಂದ್ರಮಾ ಮೃಗಲಾಂಛನಃ ।**
**ಕೇಸರೀ ನಿಷ್ಠುರಕ್ಷಿಪ್ತಮೃಗಯೂಥೋ ಮೃಗಾಧಿಪಃ ॥** ೧

-ಶಿಶುಪಾಲವಧ, ೨-೫೩

ಚಂದ್ರನು ಪ್ರೀತಿಯಿಂದ ಜಿಂಕೆಯನ್ನು ತೊಡೆಯಮೇಲೇರಿಸಿಕೊಂಡನು. ಇದರ ಫಲವೇನೆಂದರೆ ಚಂದ್ರನು ಜಿಂಕೆಯ ಗುರುತೆಂಬ ಕಳಂಕವುಳ್ಳವನೆಂದು ಕೆಟ್ಟ ಹೆಸರಾಯಿತು. ಸಿಂಹವು ಅರಣ್ಯದಲ್ಲಿ ಕಠೋರತೆಯಿಂದ ಮೃಗಗಳನ್ನು ಕೊಂದಿತು. ಇದರಿಂದ ಅದಕ್ಕೆ 'ಮೃಗಾಧಿಪ' ಎಂಬ ಕೀರ್ತಿಯು ಬಂತು. ಶೌರ್ಯವು ಕೀರ್ತಿಯನ್ನು ತರುತ್ತದೆ, ಮೆತ್ತನೆಯ ಗುಣವು ಕಳಂಕವನ್ನು ಕೊಡುತ್ತದೆ.

**ಅಕೃತ್ಯಂ ಮನ್ಯತೇ ಕೃತ್ಯಂ ಅಗಮ್ಯಂ ಗಮ್ಯತೇ ಸುಗಂ ।**
**ಅಭಕ್ಷ್ಯಂ ಮನ್ಯತೇ ಭಕ್ಷ್ಯಂ ಸ್ತ್ರೀವಾಕ್ಯಪ್ರೇರಿತೋ ನರಃ ॥** ೨

-ಪಂಚತಂತ್ರ, ಮಿತ್ರಸಂಪ್ರಾಪ್ತಿ-೧೫೧

ಹೆಂಗಸಿನ ಮಾತಿನಿಂದ ಪ್ರೇರಿಸಲ್ಪಟ್ಟವನು ಮಾಡಬಾರದುದನ್ನು ಒಳ್ಳೆಯ ಕೆಲಸವೆಂದೂ, ಎಲ್ಲಿ ಹೋಗಬಾರದೋ ಅಲ್ಲಿ ಹೋಗಬೇಕೆಂದೂ, ತಿನ್ನಬಾರದುದನ್ನು ತಿನ್ನಬೇಕಾದುದೆಂದೂ ತಿಳಿಯುತ್ತಾನೆ.

**ಅಗ್ನಿಹೋತ್ರಂ ತ್ರಯೀತಂತ್ರಂ ತ್ರಿದಂಡಂ ಭಸ್ಮಪುಂಡ್ರಕಂ ।**
**ಪ್ರಜ್ಞಾಪೌರುಷನಿಃಸ್ವಾನಾಂ ಜೀವೋ ಜಲ್ಪತಿ ಜೀವಿಕಾ ॥** ೩

-ನೈಷಧೀಯಚರಿತ, ೧೭-೩೯

ಬುದ್ಧಿ ಮತ್ತು ಪೌರುಷವಿಲ್ಲದವರಿಗೆ ಅಗ್ನಿಹೋತ್ರ, ವೇದಾಭ್ಯಾಸ, ಸನ್ಯಾಸ, ಭಸ್ಮ ಧಾರಣೆ ಇವುಗಳು ಜೀವಿಕೆ ಎಂದು ಬೃಹಸ್ಪತಿಯು ಹೇಳುತ್ತಾನೆ. (ಕಲಿಪುರುಷನ ನುಡಿ)

**ಅಗ್ನೌ ಕ್ರಿಯಾವತಾಂ ದೇವೋ ದಿವಿ ದೇವೋ ಮನೀಷಿಣಾಂ ।**
**ಪ್ರತಿಮಾಸ್ವಲ್ಪಬುದ್ಧೀನಾಂ ಯೋಗಿನಾಂ ಹೃದಯೇ ಹರಿಃ ॥** ೪

-ಬೃಹತ್‌ಪರಾಶರಸ್ಮೃತಿ, ೪-೧೧೯

ಯಜ್ಞಮಾಡುವವರಿಗೆ ಅಗ್ನಿಯಲ್ಲಿ ದೇವರು. ವಿದ್ವಾಂಸರ ದೇವರು ಸ್ವರ್ಗದಲ್ಲಿ. ಸಾಮಾನ್ಯರಿಗೆ ಪ್ರತಿಮೆಗಳಲ್ಲಿ ದೇವರು ಕಾಣಿಸುತ್ತಾನೆ. ಯೋಗಿಗಳು ಹೃದಯದಲ್ಲಿ ಹರಿಯನ್ನು ಕಾಣುತ್ತಾರೆ.

ಅಂಗಂ ಗಲಿತಂ ಪಲಿತಂ ಮುಂಡಂ
ದಶನವಿಹೀನಂ ಜಾತಂ ತುಂಡಂ ।
ವೃದ್ಧೋ ಯಾತಿ ಗೃಹೀತ್ವಾ ದಂಡಂ
ತದಪಿ ನ ಮುಂಚತ್ಯಾಶಾಪಿಂಡಮ್ ॥ ೫

-ಭಜಗೋವಿಂದಸ್ತೋತ್ರ

ದೇಹ ಶಿಥಿಲವಾಯಿತು. ತಲೆ ನರೆಯಿತು. ಬಾಯಲ್ಲಿ ಹಲ್ಲಿಲ್ಲವಾಯಿತು. ಆದರೆ ಮುದುಕನು ದೊಣ್ಣೆಯನ್ನು ಹಿಡಿದು ಹೋಗುತ್ತಾನೆ. ಆಶೆ ಇವನನ್ನು ಇನ್ನೂ ಬಿಡದು!

ಅಘಂ ಸ ಕೇವಲಂ ಭುಂಕ್ತೇ ಯಃ ಪಚತ್ಯಾತ್ಮಕಾರಣಾತ್ ।
ಯಜ್ಞಶಿಷ್ಟಾಶನಂ ಹ್ಯೇತತ್ ಸತಾಮನ್ನಂ ವಿಧೀಯತೇ ॥ ೬

-ಮನುಸ್ಮೃತಿ, ೩-೧೧೮

ಯಾರು ಕೇವಲ ತನಗಾಗಿ ಅಡಿಗೆ ಮಾಡಿ ಉಣ್ಣುತ್ತಾನೆಯೋ, ಅವನು ತನ್ನ ಪಾಪವನ್ನೇ ತಿಂದಂತೆ. ಸತ್ಪುರುಷರಿಗೆ ಅನ್ನ ನೀಡಿದ ಮೇಲೆ ಊಟಮಾಡಿದರೆ ಯಜ್ಞ ಶೇಷವನ್ನು ತಿನ್ನುವುದಕ್ಕೆ ಸಮಾನ.

ಅಚಿರಾದುಪಕರ್ತುರಾಚರೇತ್
ಅಥವಾತ್ಮೌಪಯಿಕೀಮುತ ಕ್ರಿಯಾಂ ।
ಪೃಥುರಿತ್ಥಮಥಾಣುರಸ್ತು ವಾ
ನ ವಿಶೇಷೇ ವಿದುಷಾಮಿಹ ಗ್ರಹಃ ॥ ೭

-ನೈಷಧ, ೨-೧೪

ಉಪಕಾರ ಮಾಡಿದವನಿಗೆ ಕೂಡಲೇ ತನಗೆ ಸಾಧ್ಯವಾದ ರೀತಿಯಲ್ಲಿ ಸಹಾಯ ಮಾಡಬೇಕು. ನಾವು ಮಾಡಿದ ಪ್ರತ್ಯುಪಕಾರ ದೊಡ್ಡದಾಗಿರಬೇಕೆ ಸಣ್ಣದಾಗಿರಬೇಕೆ ಎಂಬ ವಿಷಯದಲ್ಲಿ ವಿದ್ವಾಂಸರಿಗೆ ಹಠವಿಲ್ಲ.

ಅಜಾತಮೃತಮೂರ್ಖೇಭ್ಯೋ ಮೃತಾಜಾತೌ ಸುತೌ ವರಂ ।
ಯತಸ್ತೌ ಸ್ವಲ್ಪದುಃಖಾಯ ಯಾವಜ್ಜೀವಂ ಜಡೋ ದಹೇತ್ ॥ ೮

-ಪಂಚತಂತ್ರ, ಕಥಾಮುಖ-೪

ಹುಟ್ಟದವನು, ಮೃತನಾದವನು ಮತ್ತು ಮೂರ್ಖನಾದವನು ಈ ಮೂವರು ಪುತ್ರರಲ್ಲಿ ಹುಟ್ಟದವನೂ ಮೃತನಾದವನೂ ಶ್ರೇಷ್ಠರು ; ಏಕೆಂದರೆ, ಅವರಿಬ್ಬರಿಂದ ಆಗುವ ದುಃಖ ಕಡಿಮೆ. ಮೂರ್ಖನಾದವನು ಬದುಕಿರುವವರೆಗೂ ದುಃಖ ಕೊಡುತ್ತಾನೆ.

**ಅಜಾನನ್ ಮಾಹಾತ್ಮ್ಯಂ ಪತತು ಶಲಭೋ ದೀಪದಹನೇ**
**ಸ ಮೀನೋಽಪ್ಯಜ್ಞಾನಾದ್ಬಡಿಶಯುತಮಶ್ನಾತು ಪಿಶಿತಮ್ ।**
**ವಿಜಾನಂತೋಽಪ್ಯೇತೇ ವಯಮಿಹ ವಿಪಜ್ಜಾಲಜಟಿಲಾನ್**
**ನ ಮುಂಚಾಮಃ ಕಾಮಾನಹಹ ಗಹನೋ ಮೋಹಮಹಿಮಾ॥೯**

-ವೈರಾಗ್ಯಶತಕ-೨೦

ತಿಳಿಯದೇ ಪತಂಗದ ಹುಳುವು ದೀಪದ ಬೆಂಕಿಯಲ್ಲಿ ಬೀಳಲಿ ; ಹಾಗೆಯೇ ಮೀನೂ ಕೂಡ ಅಜ್ಞಾನದಿಂದ ಬೆಸ್ತರವನ ಗಾಳಕ್ಕೆ ಸಿಕ್ಕಿಸಿದ ಮಾಂಸವನ್ನು ತಿನ್ನಲಿ; ಆದರೆ ಎಲ್ಲವನ್ನೂ ತಿಳಿದ ನಾವು ಕಷ್ಟಪರಂಪರೆಗಳನ್ನು ತರುವ ಆಸೆಗಳನ್ನು ಬಿಡುವುದಿಲ್ಲವಲ್ಲಾ ! ಮೋಹದ ಮಹಿಮೆ ಎಷ್ಟು ಗಹನವಾದುದು!

**ಅಜ್ಞಃ ಸುಖಮಾರಾಧ್ಯಃ ಸುಖತರಮಾರಾಧ್ಯತೇ ವಿಶೇಷಜ್ಞಃ ।**
**ಜ್ಞಾನಲವದುರ್ವಿದಗ್ಧಂ ಬ್ರಹ್ಮಾಪಿ ನರಂ ನ ರಂಜಯತಿ ॥ ೧೦**

-ನೀತಿಶತಕ-೧

ತಿಳುವಳಿಕೆಯಿಲ್ಲದವನನ್ನು ಒಪ್ಪಿಸುವುದು ಸುಲಭ. ಹೆಚ್ಚು ತಿಳಿದವನನ್ನು ಒಪ್ಪಿಸುವುದು ಇನ್ನೂ ಸುಲಭ. ಆದರೆ ಸ್ವಲ್ಪ ತಿಳಿದುಕೊಂಡು ಅಹಂಕಾರಪಡುವ ಮನುಷ್ಯನನ್ನು ಬ್ರಹ್ಮನೂ ಕೂಡ ಒಪ್ಪಿಸಲು ಸಾಧ್ಯವಿಲ್ಲ.

**ಅಜ್ಞೇಭ್ಯೋ ಗ್ರಂಥಿನಃ ಶ್ರೇಷ್ಠಾಃ ಗ್ರಂಥಿಭ್ಯೋ ಧಾರಿಣೋ ವರಾಃ ।**
**ಧಾರಿಭ್ಯೋ ಜ್ಞಾನಿನಃ ಶ್ರೇಷ್ಠಾಃ ಜ್ಞಾನಿಭ್ಯೋ ವ್ಯವಸಾಯಿನಃ ॥ ೧೧**

-ಮನುಸ್ಮೃತಿ, ೧೨-೧೦೩

ಏನೂ ತಿಳಿಯದವರಿಗಿಂತ ಓದಿದವರು ಮೇಲು. ಓದಿದವರಿಗಿಂತ ನೆನಪಿಟ್ಟು ಕೊಂಡಿರುವವರು ಮೇಲು. ನೆನಪುಳ್ಳವರಿಗಿಂತ ವಿಷಯವನ್ನು ಚೆನ್ನಾಗಿ ಅರಿತಿರುವವರು ಮೇಲು. ಅರಿತವರಿಗಿಂತ ಅರಿತು ಕೆಲಸ ಮಾಡುವವರು ಮೇಲು.

**ಅಣುಮಾತ್ರಂ ಮನಸ್ತಸ್ಮಾದಾಶಾ ನಾಮ ಲತೋದ್ಗತಾ ।**
**ತಸ್ಯಾ ನಾಲಮುಪಘ್ನಾಯ ಭುವನಾನಿ ಚತುರ್ದಶ ॥ ೧೨**

-ಆಶ್ಚರ್ಯಚೂಡಾಮಣಿವ್ಯಾಖ್ಯಾ

ಮನಸ್ಸು ಒಂದು ಅಣು. ಅದರಿಂದ ಆಸೆಯೆಂಬ ಬಳ್ಳಿ ಹುಟ್ಟಿದೆ, ಅದು ಹಬ್ಬುವುದಕ್ಕೆ ಹದಿನಾಲ್ಕು ಲೋಕಗಳೂ ಸಾಲವು!

**ಅಂತಕಃ ಪರ್ಯವಸ್ಥಾತಾ ಜನ್ಮಿನಃ ಸಂತತಾಪದಃ ।**
**ಇತಿ ತ್ಯಾಜ್ಯೇ ಭವೇ ಭವ್ಯೋ ಮುಕ್ತಾವುತ್ತಿಷ್ಠತೇ ಜನಃ ॥ ೧೩**

-ಕಿರಾತಾರ್ಜುನೀಯ, ೧೧-೧೩

ಪ್ರಾಣಿಗಳಿಗೆ ಜನ್ಮವೇ ದುಃಖ. ಜೀವನವು ದುಃಖಗಳಿಂದ ತುಂಬಿದೆ. ಅಲ್ಲದೆ ಮೃತ್ಯುವು ಕಾದಿದೆ. ಆದುದರಿಂದ ತತ್ತ್ವಬಲ್ಲವರು ಸಂಸಾರವನ್ನು ಬಿಟ್ಟು ಮುಕ್ತಿಗೋಸ್ಕರ ಯತ್ನ ಮಾಡುತ್ತಾರೆ.

**ಅಂತರೇಣ ವಿಧಿಂ ಮೋಹಾದ್ಯಃ ಕುರ್ಯಾತ್ಸಾಂಪರಾಯಿಕಂ ।**
**ನ ತತ್ಸ್ಯಾದುಪಕಾರಾಯ ಭಸ್ಮನೀವ ಹುತಂ ಹವಿಃ ॥** ೧೪

-ನೈಷ್ಕರ್ಮ್ಯಸಿದ್ಧಿ, ೧-೧೬

ಮಾಡಬೇಕೆಂಬ ವಿಧಿ ಇಲ್ಲದೆ ಅಜ್ಞಾನದಿಂದ ಮಾಡಿದ ಪರಲೋಕಸಾಧಕವಾದ ಕರ್ಮಗಳು ವ್ಯರ್ಥ, ಬೂದಿಯಲ್ಲಿ ಹೋಮ ಮಾಡಿದಹಾಗೆ.

**ಅತಿಮಾತ್ರಭಾಸುರತ್ವಂ ಪುಷ್ಯತಿ ಭಾನೋಃ ಪರಿಗ್ರಹಾದನಿಲಃ ।**
**ಅಧಿಗಚ್ಛತಿ ಮಹಿಮಾನಂ ಚಂದ್ರೋಽಪಿ ನಿಶಾಪರಿಗೃಹೀತಃ ॥** ೧೫

-ಮಾಳವಿಕಾಗ್ನಿಮಿತ್ರ, ೧-೧೩

ಸೂರ್ಯನ ಆಶ್ರಯದಿಂದ ಬೆಂಕಿಯು ಮತ್ತಷ್ಟು ಉಜ್ಜ್ವಲವಾಗುತ್ತದೆ. ಅದೇ ರೀತಿ ರಾತ್ರಿಯ ಆಶ್ರಯದಿಂದ ಚಂದ್ರನು ಚೆನ್ನಾಗಿ ಬೆಳಗುತ್ತಾನೆ.

**ಅತೀತ್ಯ ಬಂಧೂನ್ ಅವಲಂಘ್ಯ ಮಿತ್ರಾ-**
**ಣ್ಯಾಚಾರ್ಯಮಾಗಚ್ಛತಿ ಶಿಷ್ಯದೋಷಃ ।**
**ಬಾಲಂ ಹ್ಯಪತ್ಯಂ ಗುರವೇ ಪ್ರದಾತುಃ**
**ನೈವಾಪರಾಧೋಽಸ್ತಿ ಪಿತುರ್ನ ಮಾತುಃ ॥** ೧೬

-ಪಂಚರಾತ್ರ, ೧-೧೯

ತಾಯಿತಂದೆಗಳು ಚಿಕ್ಕಂದಿನಲ್ಲಿಯೇ ತಮ್ಮ ಮಕ್ಕಳನ್ನು ಗುರುಗಳಿಗೆ ಅರ್ಪಿಸುತ್ತಾರೆ. ಆದುದರಿಂದ ಶಿಷ್ಯನು ಮಾಡಿದ ತಪ್ಪುಗಳಿಗೆ ಆಚಾರ್ಯನೇ ಹೊಣೆಯಾಗುತ್ತಾನೆ. ನೆಂಟರೂ, ಮಿತ್ರರೂ ಅವನ ದೋಷಗಳಿಗೆ ಭಾಗಿಗಳಲ್ಲ. ತಂದೆತಾಯಿಗಳದೂ ತಪ್ಪಿಲ್ಲ.

**ಅತ್ಯುನ್ನತಪದಾರೂಢಃ ಪೂಜ್ಯಾನ್ನೈವಾವಮಾನಯೇತ್ ।**
**ನಹುಷಃ ಶಕ್ರತಾಮೇತ್ಯ ಚ್ಯುತೋಽಗಸ್ತ್ಯಾವಮಾನನಾತ್ ॥** ೧೭

-ಚಾರುಚರ್ಯಾ-೫೭

ಎಂತಹ ಉನ್ನತಪದವಿಯನ್ನು ತಾನು ಪಡೆದಿದ್ದರೂ ಪೂಜ್ಯರನ್ನು ಅವಮಾನ ಗೊಳಿಸಬಾರದು. ನಹುಷನು ದೇವೇಂದ್ರನಾದಾಗ ಅಗಸ್ತ್ಯಮುನಿಗಳನ್ನು ಅವಮಾನಗೊಳಿಸಿ ಪದಭ್ರಷ್ಟನಾದನು.

**ಅರ್ಥವತ್ತ್ವಂ ನ ಚೇಜ್ಜಾತಂ ಮುಖ್ಯೈರ್ಯಸ್ಯ ಪ್ರಯೋಜನೈಃ ।**
**ತಸ್ಯಾನುಷಂಗಿಕೇಷ್ವಾಶಾ ಕುಶಕಾಶಾವಲಂಬಿನೀ ॥** ೧೮

-ತಂತ್ರವಾರ್ತಿಕ, ೧-೩-೧೮

ಯಾವ ಕೆಲಸವು ಮುಖ್ಯವಾದ ಪ್ರಯೋಜನಗಳಿಲ್ಲದೆ ವ್ಯರ್ಥವೆನಿಸುವುದೋ ಅಲ್ಲಿ ತಾನಾಗಿ ಒದಗಿಬರುವ ಫಲವನ್ನು ಹೇಳುವುದು, ಮುಳುಗುತ್ತಿರುವವನು ಹುಲ್ಲುಕಡ್ಡಿಯನ್ನು ಹಿಡಿದಂತಾಗುವುದು.

**ಅಥವಾಭಿನಿವಿಷ್ಟಬುದ್ಧಿಷು**
**ವ್ರಜತಿ ವ್ಯರ್ಥಕತಾಂ ಸುಭಾಷಿತಂ ।**
**ರವಿರಾಗಿಷು ಶೀತರೋಚಿಷಃ**
**ಕರಜಾಲಂ ಕಮಲಾಕರೇಷ್ವಿವ ॥** ೧೯

-ಶಿಶುಪಾಲವಧ, ೧೬-೪೩

ಹಠಮಾರಿಗಳಾದ ಜನರಿಗೆ ಹೇಳಿದ ಬುದ್ಧಿವಾದವು ವ್ಯರ್ಥ. ಸೂರ್ಯನಲ್ಲಿ ಪ್ರೀತಿಯುಳ್ಳ ತಾವರೆಗಳು ಚಂದ್ರನ ಕಿರಣಗಳು ಎಷ್ಟು ತಂಪಾಗಿದ್ದರೂ ಅರಳುವುದಿಲ್ಲ.

**ಅರ್ಥಾ ವೈ ವಾಚಿ ನಿಯತಾಃ ವಾಙ್ಮೂಲಾಃ ವಾಚಿ ಮಿಶ್ರಿತಾಃ ।**
**ಯೋ ವೈ ತಾಂ ಸ್ತೇಯಯೇದ್ವಾಚಂ ಸ ಸರ್ವಸ್ತೇಯಕೃನ್ನರಃ ॥** ೨೦

-ನಾರದಸ್ಮೃತಿ, ೨-೨೦೫

ಅರ್ಥವು ಮಾತಿನಲ್ಲಿ ಇದೆ. ಅರ್ಥಕ್ಕೆ ಮಾತು ಮೂಲ. ಅರ್ಥವು ಮಾತಿನೊಡನೆ ಬೆರೆತಿದೆ. ಯಾರು ಆ ಮಾತನ್ನು ಸುಳ್ಳಾದ ಅರ್ಥಕೊಡುವಂತೆ ಆಡುತ್ತಾನೆಯೋ ಅವನು ಎಲ್ಲಾ ರೀತಿಯ ಕಳ್ಳತನವನ್ನೂ ಮಾಡಿದಹಾಗೆ ಆಗುತ್ತದೆ.

**ಅದತ್ತಾನಾಮುಪಾದಾನಂ ಹಿಂಸಾ ಚೈವಾವಿಧಾನತಃ ।**
**ಪರದಾರೋಪಸೇವಾ ಚ ಶಾರೀರಂ ತ್ರಿವಿಧಂ ಸ್ಮೃತಮ್ ॥** ೨೧

-ಮನುಸ್ಮೃತಿ, ೧೨-೭

ಅನ್ಯಾಯವಾಗಿ ಪರದ್ರವ್ಯವನ್ನು ತೆಗೆದುಕೊಳ್ಳುವುದು, ವಿಧಿ ವಿರುದ್ಧವಾದ ಹಿಂಸೆ, ಪರಸ್ತ್ರೀಯರಲ್ಲಿ ಆಸಕ್ತಿ-ಇವು ಮೂರು ಶರೀರದಿಂದಾಗುವ ಪಾತಕಗಳು.

**ಅದ್ವಾರೇಣ ಚ ನಾತೀಯಾತ್ ಗ್ರಾಮಂ ವಾ ವೇಶ್ಮ ವಾಽಽವೃತಂ ।**
**ರಾತ್ರೌ ಚ ವೃಕ್ಷಮೂಲಾನಿ ದೂರತಃ ಪರಿವರ್ಜಯೇತ್ ॥** ೨೨

-ಮನುಸ್ಮೃತಿ, ೪-೭೩

ಹಳ್ಳಿಯಾಗಲೀ, ಮನೆಯಾಗಲಿ, ಆವರಣದಿಂದ ಕೂಡಿದ್ದರೆ ಬಾಗಿಲು ಇಲ್ಲದ ಸ್ಥಳದಿಂದ ಒಳಕ್ಕೆಹೋಗಬಾರದು. ರಾತ್ರಿಯಲ್ಲಿ ಮರದ ಬುಡಗಳಿಂದ ದೂರವಿರಬೇಕು.

**ಅಧಃಕರೋಷಿ ರತ್ನಾನಿ ಮೂರ್ಧ್ನಾ ಧಾರಯಸೇ ತೃಣಂ ।**
**ದೋಷಸ್ತವೈವ ಪಾಥೋಧೇ ರತ್ನಂ ರತ್ನಂ ತೃಣಂ ತೃಣಮ್ ॥ ೨೩**

-ಅಭಿನವಪಾಠಾವಲೀ-೧

ಎಲೈ ಸಮುದ್ರವೆ, ರತ್ನಗಳನ್ನು ಕೆಳಕ್ಕೆ ತಳ್ಳಿ ಹುಲ್ಲನ್ನು ತಲೆಯ ಮೇಲೆ ಧರಿಸುತ್ತೀಯೆ. ಇದು ನಿನ್ನದೇ ತಪ್ಪು. ರತ್ನ ರತ್ನವೇ, ಹುಲ್ಲು ಹುಲ್ಲೇ.

**ಅಧರ್ಮೇಣೈಧತೇ ತಾವತ್ ತತೋ ಭದ್ರಾಣಿ ಪಶ್ಯತಿ ।**
**ತತಃ ಸಪತ್ನಾನ್ ಜಯತಿ ಸಮೂಲಸ್ತು ವಿನಶ್ಯತಿ ॥ ೨೪**

-ಮನುಸ್ಮೃತಿ, ೪-೧೨೪

ಅಧರ್ಮದಿಂದ ಕೆಲವು ವೇಳೆ ಬಹಳ ಏಳಿಗೆಹೊಂದುತ್ತಾನೆ. ಉತ್ತಮ ಸುಖಗಳನ್ನು ಕಾಣುತ್ತಾನೆ. ತನ್ನ ವಿರೋಧಿಗಳನ್ನೂ ಮೀರಿಸುತ್ತಾನೆ. ಆದರೆ ಬುಡಸಹಿತ ನಾಶವಾಗುವುದು ನಿಜ.

**ಅಧಸ್ತಾನ್ನೋಪದಧ್ಯಾಚ್ಚ ನ ಚೈನಮಭಿಲಂಘಯೇತ್ ।**
**ನ ಚೈನಂ ಪಾದತಃ ಕುರ್ಯಾತ್ ನ ಪ್ರಾಣಾಬಾಧಮಾಚರೇತ್ ॥**

-ಮನುಸ್ಮೃತಿ, ೪-೫೪

ಮಂಚದಕೆಳಗೆ ಬೆಂಕಿ ಇಡಬಾರದು. ಬೆಂಕಿಯನ್ನು ದಾಟಬಾರದು. ಮಲಗಿರುವಾಗ ಕಾಲಿನಕಡೆಗೆ ಬೆಂಕಿ ಇರಬಾರದು. ಯಾವ ರೀತಿಯ ಹಿಂಸೆಯನ್ನೂ ಮಾಡಬಾರದು.

**ಅಧಾರ್ಮಿಕೋ ನರೋ ಯೋ ಹಿ ಯಸ್ಯ ಚಾಪ್ಯನೃತಂ ಧನಂ ।**
**ಹಿಂಸಾರತಶ್ಚ ಯೋ ನಿತ್ಯಂ ನೇಹಾಸೌ ಸುಖಮೇಧತೇ ॥ ೨**

-ಮನುಸ್ಮೃತಿ, ೪-೧೭೦

ಯಾರು ಅಧರ್ಮದಿಂದ ವ್ಯವಹಾರಮಾಡುತ್ತಾನೆಯೋ, ಯಾರು ಸುಳ್ಳಿನಿಂದಲೇ ಹಣವನ್ನು ಗಳಿಸುತ್ತಾನೆಯೋ, ಇತರರಿಗೆ ತೊಂದರೆ ಕೊಡುವ ಈ ಮನುಷ್ಯನು ಜೀವನದಲ್ಲಿ ಸುಖವಾಗಿರಲಾರ.

**ಅಧೋಽಧಃ ಪಶ್ಯತಃ ಕಸ್ಯ ಮಹಿಮಾ ನೋಪಚೀಯತೇ ।**
**ಉಪರ್ಯುಪರಿ ಪಶ್ಯಂತಃ ಸರ್ವ ಏವ ದರಿದ್ರತಿ ॥ ೨೭**

-ಹಿತೋಪದೇಶ, ಸುಹೃದ್ಭೇದ-೨

ತನಗಿಂತ ಕೆಳಕೆಳಗೆ ನೋಡುವ ಯಾವನ ಮಹಿಮೆ ತಾನೇ ಹೆಚ್ಚಾಗುವುದಿಲ್ಲ! ತನಗಿಂತ ಮೇಲಮೇಲೆ ನೋಡುವವರೆಲ್ಲರೂ ದರಿದ್ರರಾಗುತ್ತಾರೆ.

**ಅನಪೇಕ್ಷಿತಮರ್ಯಾದಂ ನಾಸ್ತಿಕಂ ವಿಪ್ರಲುಂಪಕಂ ।**
**ಅರಕ್ಷಿತಾರಮತ್ತಾರಂ ನೃಪಂ ವಿದ್ಯಾದಧೋಗತಿಮ್ ॥ ೨೮**

-ಮನುಸ್ಮೃತಿ, ೮-೩೦೯

ಶಾಸ್ತ್ರವನ್ನು ಮೀರಿನಡೆಯುವ, ದೇವರನ್ನೂ ಪರಲೋಕವನ್ನೂ ನಂಬದಿರುವ, ಅತ್ಯಾಚಾರದಿಂದ ಹಣ ಕಿತ್ತುಕೊಳ್ಳುವ, ಕಾಪಾಡದೇ ಇರುವ, ಸಾರ್ವಜನಿಕ ಹಣವನ್ನು ಸ್ವಾರ್ಥಕ್ಕೆ ವಿನಿಯೋಗಿಸುವ ಅರಸನು ಅಧೋಗತಿಯನ್ನು ಹೊಂದುವನು.

**ಅನಾರ್ಯವೃತ್ತಮಪ್ರಾಜ್ಞಮಸೂಯಕಮಧಾರ್ಮಿಕಂ ।**
**ಅನರ್ಥಾಃ ಕ್ಷಿಪ್ರಮಾಯಾಂತಿ ವಾಗ್ದುಷ್ಟಂ ಕೋಪನಂ ತಥಾ ॥ ೨೯**

-ಸುಭಾಷಿತಸುಧಾನಿಧಿ

ಒಳ್ಳೆಯ ನಡತೆ ಇಲ್ಲದವನಿಗೂ, ತಿಳಿಗೇಡಿಗೂ, ಅಸೂಯೆಪಡುವವನಿಗೂ, ಧಾರ್ಮಿಕನಲ್ಲದವನಿಗೂ, ಕೆಟ್ಟಮಾತಾಡುವವನಿಗೂ ಹಾಗೆಯೇ ಕೋಪಿಷ್ಠನಿಗೂ ಬೇಗ ಅನರ್ಥಗಳುಂಟಾಗುತ್ತವೆ.

**ಅನಾರೋಗ್ಯಮನಾಯುಷ್ಯಮಸ್ವರ್ಗ್ಯಂ ಚಾತಿಭೋಜನಂ ।**
**ಅಪುಣ್ಯಂ ಲೋಕವಿದ್ವಿಷ್ಟಂ ತಸ್ಮಾತ್ತತ್ ಪರಿವರ್ಜಯೇತ್ ॥ ೩೦**

-ಮನುಸ್ಮೃತಿ, ೨-೫೭

ಮಿತಿಮೀರಿ ತಿನ್ನುವುದು ರೋಗಗಳನ್ನುಂಟುಮಾಡುತ್ತದೆ. ಆಯುಸ್ಸನ್ನು ಕಡಿಮೆ ಮಾಡುತ್ತದೆ. ಸುಖವಿಲ್ಲ. ಪಾಪಕರ. ಜನರೂ ತಿಂಡಿಪೋತನೆಂದು ಬೈಯುತ್ತಾರೆ. ಆದುದರಿಂದ ಅತಿಭೋಜನ ಮಾಡಬಾರದು.

**ಅನ್ಯಾಯೇನ ನೃಪೋ ರಾಷ್ಟ್ರಾತ್ ಸ್ವಕೋಶಂ ಯೋಽಭಿವರ್ಧಯೇತ್।**
**ಸೋಽಚಿರಾದ್ವಿಗತಶ್ರೀಕೋ ನಾಶಮೇತಿ ಸಬಾಂಧವಃ ॥ ೩೧**

-ಯಾಜ್ಞವಲ್ಕ್ಯ, ೧-೩೪೦

ಯಾವ ಅರಸನು ಅನ್ಯಾಯದಿಂದ ತನ್ನ ಖಜಾನೆಯನ್ನು ಹೆಚ್ಚಿಸುತ್ತಾನೆಯೋ ಅವನು ತನ್ನ ಪ್ರಭಾವವನ್ನು ಕಳೆದುಕೊಂಡು ಪರಿವಾರದೊಡನೆ ನಾಶವಾಗುತ್ತಾನೆ.

**ಅನಿತ್ಯಂ ಯೌವನಂ ರೂಪಂ ಜೀವಿತಂ ದ್ರವ್ಯಸಂಚಯಃ ।**
**ಆರೋಗ್ಯಂ ಪ್ರಿಯಸಂವಾಸೋ ಗೃಧ್ಯೇದೇಷು ನ ಪಂಡಿತಃ ॥ ೩೨**

-ಮಹಾಭಾರತ, ಸ್ತ್ರೀ. ೨-೨೫

ಯೌವನ, ರೂಪ, ಜೀವಿತ, ಧನಸಂಗ್ರಹ, ಆರೋಗ್ಯ, ಪ್ರಿಯಜನಸಹವಾಸ-ಇವೆಲ್ಲವೂ ಅನಿತ್ಯ. ಪಂಡಿತನು ಇವುಗಳಿಗಾಗಿ ಅತ್ಯಾಸೆ ಪಡತಕ್ಕದ್ದಲ್ಲ.

**ಅಪವಾದಾದಭೀತಸ್ಯ ಸಮಸ್ಯ ಗುಣದೋಷಯೋಃ ।**
**ಅಸದ್ವೃತ್ತೇರಹೋವೃತ್ತಂ ದುರ್ವಿಭಾವಂ ವಿಧೇರಿವ ॥ ೩೩**

-ಕಿರಾತಾರ್ಜುನೀಯ, ೧೧-೫೬

ಜನರು ಏನು ಆಡಿಕೊಳ್ಳುವರೋ ಎಂದು ಹೆದರದೆ, ಶಿಕ್ಷೆಯಾಗಲಿ ಒಳ್ಳೆಯದಾಗಲಿ ಗಮನಿಸದ ದುರಾಚಾರನಾದ ಮನುಷ್ಯನ ನಡತೆಯನ್ನು, ವಿಧಿಯ ಚೇಷ್ಟಿತದಂತೆ ತಿಳಿಯುವುದೇ ಸಾಧ್ಯವಿಲ್ಲ.

**ಅಪಿ ಮೇರುಸಮಂ ಪ್ರಾಜ್ಞಮಪಿ ಶೂರಮಪಿ ಸ್ಥಿರಂ ।**
**ತೃಣೀಕರೋತಿ ತೃಷ್ಣೈಕಾ ನಿಮೇಷೇಣ ನರೋತ್ತಮಮ್ ॥ ೩೪**

-ಯೋಗವಾಸಿಷ್ಠ, ವೈರಾಗ್ಯ. ೧೭-೫೦

ಮನುಷ್ಯನು ಮೇರುಪರ್ವತದಂತೆ ದೊಡ್ಡವನಾಗಿರಲಿ, ಪ್ರಾಜ್ಞನಾಗಿರಲಿ, ಶೂರನಾಗಿರಲಿ, ಸ್ಥಿರಬುದ್ಧಿಯವನಾಗಿರಲಿ-ಆಸೆಯೆಂಬುದೊಂದು ಒಂದು ನಿಮಿಷದಲ್ಲಿ ಅವನನ್ನು ಹುಲ್ಲುಕಡ್ಡಿಗೆ ಸಮನನ್ನಾಗಿ ಮಾಡಿಬಿಡುತ್ತದೆ!

**ಅಪಿ ಪ್ರಯತ್ನಸಂಪನ್ನಂ ಕಾಮೇನೋಪಹತಂ ತಪಃ ।**
**ನ ತುಷ್ಟಯೇ ಮಹೇಶಸ್ಯ ಶ್ವಲೀಢಮಿವ ಪಾಯಸಮ್ ॥ ೩೫**

-ಸರ್ವದರ್ಶನಸಂಗ್ರಹ

ಎಷ್ಟೇ ಪ್ರಯತ್ನದಿಂದ ತಪಸ್ಸು ಮಾಡಿದರೂ, ಕಾಮವಿದ್ದರೆ, ನಾಯಿನೆಕ್ಕಿದ ಪಾಯಸದಂತೆ, ಮಹೇಶನು ಸಂತುಷ್ಟನಾಗಲಾರ.

**ಅರಾವಪ್ಯುಚಿತಂ ಕಾರ್ಯಮಾತಿಥ್ಯಂ ಗೃಹಮಾಗತೇ ।**
**ಛೇತ್ತುಃ ಪಾರ್ಶ್ವಗತಾಂ ಛಾಯಾಂ ನೋಪಸಂಹರತಿ ದ್ರುಮಃ ॥ ೩೬**

-ಹಿತೋಪದೇಶ, ಮಿತ್ರಲಾಭ-೪೪

ಮನೆಗೆ ಬಂದ ಶತ್ರುವಿಗೂ ಸಹ ಆತಿಥ್ಯಮಾಡುವುದು ಒಳ್ಳೆಯ ಕೆಲಸ. ತನ್ನ ಪಕ್ಕದಲ್ಲಿ ನಿಂತಿರುವ ಮರಕಡಿಯುವವನಿಗೂ ಮರ ನೆರಳನ್ನು ಕೊಡದೇ ಇರುವುದಿಲ್ಲ.

**ಅಲಬ್ಧಂ ವಾಂಛತಾಂ ವಿತ್ತಂ ಲಬ್ಧಂ ಚ ಪರಿರಕ್ಷತಾಂ ।**
**ನಷ್ಟಂ ಚ ಶೋಚತಾಂ ಪುಂಸಾಂ ಕದಾ ದುಃಖಂ ನಿವರ್ತತೇ ॥ ೩೭**

-ಭಾರತಮಂಜರೀ, ೧೩-೭೩೭

ಹಣ ದೊರೆಯದಿದ್ದಾಗ ಅದಕ್ಕಾಗಿ ಹಾತೊರೆಯುತ್ತಲೂ, ದೊರಕಿದಾಗ ರಕ್ಷಿಸಲು ಯತ್ನಿಸುತ್ತಲೂ, ಕಳೆದುಹೋದಾಗ ಗೋಳಾಡುತ್ತಲೂ ಇರುವ ಜನರಿಗೆ ದುಃಖದ ಪರಿಹಾರ ಎಂದು?

ಅಲಬ್ಧಾಭೀಪ್ಸಿತೋಽಜ್ಞಾನಾದಿದ್ಧಮನ್ಯುಃ ಶುಚಾರ್ಪಿತಃ ।
ಸಹ ದೇಹೇನ ಮಾನೇನ ವರ್ಧಮಾನೇನ ಮನ್ಯುನಾ ॥
ಕರೋತಿ ವಿಗ್ರಹಂ ಕಾಮೀ ಕಾಮಿಷ್ವಂತಾಯ ಚಾತ್ಮನಃ ।
ಬಲಾಧಿಕ್ಯೈಃ ಸ ಹನ್ಯೇತ ಗಜೈರನ್ಯೈರ್ಗಜೋ ಯಥಾ ॥ ೩೮

-ಗರುಡಪುರಾಣ, ೬-೩೫ ; ೩೬

ಇಷ್ಟಾರ್ಥವು ಸಿಕ್ಕದಿದ್ದಾಗ ದುಃಖವು ಹೆಚ್ಚಾಗುತ್ತದೆ. ಕೋಪವು ಇಮ್ಮಡಿಸುತ್ತದೆ. ದೇಹದೊಡನೆ ಅಭಿಮಾನವೂ ಹೆಚ್ಚುತ್ತದೆ. ಆಸೆಯುಳ್ಳವನು ತನ್ನ ವಿರೋಧಿಯೊಡನೆ ಜಗಳವಾಡುತ್ತಾನೆ. ದುರ್ಬಲನು ಬಲಿಷ್ಠನಿಂದ, ಒಂದು ಆನೆಯು ಬೇರೆ ಆನೆಗಳಿಂದ ಹೇಗೆಯೋ ಹಾಗೆ ಕೊಲ್ಲಲ್ಪಡುತ್ತಾನೆ.

ಅಲ್ಪಾನಾಮಪಿ ವಸ್ತೂನಾಂ ಸಂಹತಿಃ ಕಾರ್ಯಸಾಧಿಕಾ ।
ತೃಣೈರ್ಗುಣತ್ವಮಾಪನ್ನೈರ್ಬಧ್ಯಂತೇ ಮತ್ತದಂತಿನಃ ॥ ೩೯

-ಹಿತೋಪದೇಶ, ಮಿತ್ರಲಾಭ-೨೭

ಅಲ್ಪವಾಗಿರುವ ವಸ್ತುಗಳೂ ಸಹ ಒಟ್ಟುಗೂಡಿದಾಗ ಕಾರ್ಯವನ್ನು ಸಾಧಿಸುತ್ತವೆ; ಒಟ್ಟುಗೂಡಿಸಿ ಹೊಸೆಯಲ್ಪಟ್ಟ ಹುಲ್ಲುಗಳಿಂದ ಮದ್ದಾನೆಗಳು ಕಟ್ಟಲ್ಪಡುತ್ತವೆ.

ಅವಂಧ್ಯಕೋಪಸ್ಯ ವಿಹಂತುರಾಪದಾಂ
ಭವಂತಿ ವಶ್ಯಾಃ ಸ್ವಯಮೇವ ದೇಹಿನಃ ।
ಅಮರ್ಷಶೂನ್ಯೇನ ಜನಸ್ಯ ಜಂತುನಾ
ನ ಜಾತಹಾರ್ದೇನ ನ ವಿದ್ವಿಷಾದರಃ ॥ ೪೦

-ಕಿರಾತಾರ್ಜುನೀಯ, ೧-೩೩

ಯಾರ ಕೋಪವು ಪರಿಣಾಮಕಾರಿಯೋ, ಯಾರು ಕಷ್ಟಗಳನ್ನು ಹೋಗಲಾಡಿಸ ಬಲ್ಲನೋ ಅಂತಹವನಿಗೆ ಜನರು ತಾವಾಗಿ ವಶರಾಗುತ್ತಾರೆ. ಕೋಪವೇ ಇಲ್ಲದ ಮನುಷ್ಯನೊಡನೆ ಸ್ನೇಹದಿಂದ ಆದರವಿಲ್ಲ, ಹಗೆತನದಿಂದ ಭಯವೂ ಇಲ್ಲ.

ಅವಿಜ್ಞಾತಪ್ರಬಂಧಸ್ಯ ವಚೋ ವಾಚಸ್ಪತೇರಪಿ ।
ವ್ರಜತ್ಯಫಲತಾಮೇವ ನಯದ್ರುಹ ಇವೇರಿತಮ್ ॥ ೪೧

-ಕಿರಾತಾರ್ಜುನೀಯ, ೧೧-೪೩

ಬೃಹಸ್ಪತಿಯಷ್ಟು ವಿದ್ವಾಂಸನಾಗಿದ್ದರೂ ಸಂದರ್ಭವನ್ನು ಅರ್ಥಮಾಡಿಕೊಳ್ಳದೆ ಮಾತನಾಡಿದರೆ ಆ ಮಾತು ನೀತಿಯಿಲ್ಲದವನ ಉದ್ಯೋಗದಂತೆ ವ್ಯರ್ಥವಾಗುತ್ತದೆ.

**ಅವಿದಿತ್ವಾತ್ಮನಃ ಶಕ್ತಿಂ ಪರಸ್ಯ ಚ ಸಮುತ್ಸುಕಃ ।**
**ಗಚ್ಛನ್ನಭಿಮುಖೋ ನಾಶಂ ಯಾತಿ ವಹ್ನೌ ಪತಂಗವತ್ ॥ ೪೨**

-ಪಂಚತಂತ್ರ, ಮಿತ್ರಭೇದ-೨೬೦

ತನ್ನ ಮತ್ತು ಇತರರ ಶಕ್ತಿಯನ್ನರಿಯದೆ ಕುತೂಹಲದಿಂದ ಕೂಡಿದವನಾಗಿ ಮುನ್ನುಗ್ಗುವವನು ಚಿಟ್ಟೆಯು ಬೆಂಕಿಯಲ್ಲಿ ಹೇಗೋ ಹಾಗೆ ನಾಶಹೊಂದುತ್ತಾನೆ.

**ಅಯಂ ನಿಜಃ ಪರೋ ವೇತಿ ಗಣನಾ ಲಘುಚೇತಸಾಂ ।**
**ಉದಾರಚರಿತಾನಾಂ ತು ವಸುಧೈವ ಕುಟುಂಬಕಮ್ ॥ ೪೩**

-ಹಿತೋಪದೇಶ, ಸಂಧಿ-೧೩೧

ಇವನು ನನ್ನವನು ಅಥವಾ ಬೇರೆಯವನು ಎಂಬ ಎಣಿಕೆ ಹುಲುಮನಸ್ಸಿನವರದು. ಉದಾರವಾದ ಮನಸ್ಸಿನವನಿಗೆ ಈ ಭೂಮಂಡಲವೇ ತನ್ನ ಕುಟುಂಬವಾಗಿರುವುದು.

**ಆಕಾರೇಣೈವ ಚತುರಾಃ ತರ್ಕಯಂತಿ ಪರೇಂಗಿತಂ ।**
**ಗರ್ಭಸ್ಥಂ ಕೇತಕೀಪುಷ್ಪಂ ಆಮೋದೇನೇವ ಷಟ್ಪದಾಃ ॥ ೪೪**

-ಪ್ರಸನ್ನರಾಘವ, ೧-೪

ಜಾಣರು ಮುಖವನ್ನು ನೋಡಿ ಇತರರ ಮನಸ್ಸಿನಲ್ಲಿರುವ ಭಾವವನ್ನು ಗ್ರಹಿಸುತ್ತಾರೆ. ದುಂಬಿಗಳು ಸುಗಂಧದಿಂದಲೇ ಒಳಗೆ ಮುಚ್ಚಿಕೊಂಡಿರುವ ತಾಳೆಹೂವನ್ನು ತಿಳಿಯುತ್ತವೆ.

**ಆಕಿಂಚನ್ಯಾದತಿಪರಿಚಯಾಜ್ಜಾಯಯೋಪೇಕ್ಷ್ಯಮಾಣೋ**
**ಭೂಪಾಲಾನಾಮನನುಸರಣಾದ್ಬಿಭ್ಯದೇವಾಖಿಲೇಭ್ಯಃ ।**
**ಗೇಹೇ ತಿಷ್ಠನ್ ಕುಮತಿರಲಸಃ ಕೂಪಕೂರ್ಮ್ಯಃ ಸಧರ್ಮಾ**
**ಕಿಂ ಜಾನೀತೇ ಭುವನಚರಿತಂ ಕಿಂ ಸುಖಂ ಚೋಪಭುಂಕ್ತೇ ॥**

-ವಿಶ್ವಗುಣಾದರ್ಶ,-೧೧೯

ಬಡತನ ಮತ್ತು ಅತಿಪರಿಚಯದಿಂದ ಹೆಂಡತಿಯ ಉಪೇಕ್ಷೆಗೆ ಒಳಗಾಗಿ, ಭೂಪಾಲರ ಅನುಸರಣೆಯನ್ನು ಅರಿಯದೆ, ಸಕಲರಿಗೂ ಹೆದರುತ್ತಾ ಮನೆಯಲ್ಲೇ ಇರತಕ್ಕ ಸೋಮಾರಿ ಬುದ್ಧಿಹೀನ. ಅವನು ಕೂಪದಲ್ಲಿರುವ ಆಮೆಯಂತೆ. ಅವನು ಜಗತ್ತಿನ ವಿಷಯವೇನನ್ನು ಬಲ್ಲ? ಯಾವ ಸುಖವನ್ನು ಅನುಭವಿಸಿಯಾನು?

ಆಜನ್ಮಮರಣಾಂತಂ ಚ ಗಂಗಾದಿತಟಿನೀಸ್ಥಿತಾಃ ।
ಮಂಡೂಕಮತ್ಸ್ಯಪ್ರಮುಖಾ ಯೋಗಿನಸ್ತೇ ಭವಂತಿ ಕಿಮ್ ॥ ೪೬

-ಗರುಡಪುರಾಣ, ೧೬-೬೮

ಹುಟ್ಟಿದ ಮೊದಲುಗೊಂಡು ಸಾಯುವವರೆಗೂ ಗಂಗಾ ಮೊದಲಾದ ಪವಿತ್ರ ನದೀಜಲದಲ್ಲಿದ್ದಮಾತ್ರಕ್ಕೆ ಯೋಗಿ ಎನಿಸುವುದಾದರೆ ಕಪ್ಪೆ, ಮೀನು ಮೊದಲಾದುವುಗಳೂ ಯೋಗಿಗಳೇ?

ಆಯುಷಃ ಕ್ಷಣ ಏಕೋಽಪಿ ನ ತುಲ್ಯಃ ಸ್ವರ್ಣಕೋಟಿಭಿಃ ।
ಸ ವೃಥಾ ನೀಯತೇ ಯೇನ ಪ್ರಮಾದಃ ಸುಮಹಾನಯಮ್ ॥ ೪೭

-ಸುಭಾಷಿತಸುಧಾನಿಧಿ

ಕೋಟಿ ಹೊನ್ನುಗಳೂ ಆಯುಸ್ಸಿನ ಒಂದು ಕ್ಷಣಕ್ಕೆ ಸಮಾನವಲ್ಲ; ಅದನ್ನೇ ವ್ಯರ್ಥಗೊಳಿಸುವುದೆಂದರೆ ಬಹಳ ದೊಡ್ಡ ನಷ್ಟವೇ ಆಗುತ್ತದೆ.

ಆರೋಪ್ಯತೇ ಶಿಲಾ ಶೈಲೇ ಯಥಾ ಯತ್ನೇನ ಭೂಯಸಾ ।
ನಿಪಾತ್ಯತೇ ಸುಖೇನಾಧಸ್ತಥಾತ್ಮಾ ಗುಣದೋಷಯೋಃ ॥ ೪೮

-ಹಿತೋಪದೇಶ, ಸುಹೃದ್ಭೇದ-೪೧

ಬಹಳ ಹೆಚ್ಚಿನ ಪ್ರಯತ್ನದಿಂದ ಕಲ್ಲೊಂದನ್ನು ಬೆಟ್ಟದ ಮೇಲೆ ಏರಿಸಬಹುದು, ಆದರೆ ಸುಲಭವಾಗಿ ಕೆಳಕ್ಕೆ ತಳ್ಳಬಹುದು. ಹಾಗೆಯೇ ಗುಣದೋಷಗಳಿಂದ ಆತ್ಮನೂ ಕೂಡ.

ಆರಂಭರುಚಿತಾಽಧೈರ್ಯಮಸತ್ಕಾರ್ಯಪರಿಗ್ರಹಃ ।
ವಿಷಯೋಪಸೇವಾ ಚಾಜಸ್ರಂ ರಾಜಸಂ ಗುಣಲಕ್ಷಣಮ್ ॥ ೪೯

-ಮನುಸ್ಮೃತಿ, ೧೨-೩೨

ಮೊದಲಲ್ಲಿ ಆಸಕ್ತಿ, ಸ್ವಲ್ಪ ಫಲ ಬಂದರೂ ಚಾಂಚಲ್ಯ, ನಿಷಿದ್ಧ ಕರ್ಮಗಳನ್ನು ಮಾಡುವುದು, ಯಾವಾಗಲೂ ಸುಖಾನುಭವದಲ್ಲಿ ಆಸಕ್ತಿ-ಇದು ರಜೋಗುಣಲಕ್ಷಣ.

ಆಲಸ್ಯಂ ಹಿ ಮನುಷ್ಯಾಣಾಂ ಶರೀರಸ್ಥೋ ಮಹಾನ್ ರಿಪುಃ ।
ನಾಸ್ತ್ಯುದ್ಯಮಸಮೋ ಬಂಧುಃ ಕುರ್ವಾಣೋ ನಾವಸೀದತಿ ॥ ೫೦

—ನೀತಿಶತಕ-೮೩

ಸೋಮಾರಿತನವು ಮನುಷ್ಯರ ಶರೀರದೊಳಗೇ ಇರುವ ದೊಡ್ಡ ಶತ್ರು. ಹಾಗೆಯೇ ಕಾಯಕಕ್ಕೆ ಸಮನಾದ ಬಂಧುವೂ ಇಲ್ಲ. ಕೆಲಸ ಮಾಡುತ್ತಿರುವವನು ಎಂದೂ ಕೆಡುವುದಿಲ್ಲ.

**ಆಲಸ್ಯಂ ಸ್ತ್ರೀಸೇವಾ ಸರೋಗತಾ ಜನ್ಮಭೂಮಿವಾತ್ಸಲ್ಯಂ ।**
**ಸಂತೋಷೋ ಭೀರುತ್ವಂ ಷಡ್ವ್ಯಾಘಾತಾ ಮಹತ್ತ್ವಸ್ಯ ॥ ೫೧**

-ಸುಭಾಷಿತಸುಧಾನಿಧಿ

ಮಹತ್ವವನ್ನು ಹೊಂದಲು ಆರು ವಿಘ್ನಗಳಿವೆ. ಅವು ಯಾವುವೆಂದರೆ- ಸೋಮಾರಿತನ, ಸ್ತ್ರೀಯರ ಸೇವೆ, ರೋಗಬಾಧೆ, ಹುಟ್ಟೂರಿನ ವ್ಯಾಮೋಹ, ತೃಪ್ತಿ ಮತ್ತು ಹೆದರಿಕೆ.

**ಆಶಾ ನಾಮ ನದೀ ಮನೋರಥಜಲಾ ತೃಷ್ಣಾತರಂಗಾಕುಲಾ**
**ರಾಗಗ್ರಾಹವತೀ ವಿತರ್ಕವಿಹಗಾ ಧೈರ್ಯದ್ರುಮಧ್ವಂಸಿನೀ ।**
**ಮೋಹಾವರ್ತಸುದುಸ್ತರಾತಿಗಹನಾ ಪ್ರೋತ್ತುಂಗಚಿಂತಾತಟೀ**
**ತಸ್ಯಾಃ ಪಾರಗತಾ ವಿಶುದ್ಧಮನಸೋ ನಂದಂತಿ ಯೋಗೀಶ್ವರಾಃ ॥೫೨**

-ವೈರಾಗ್ಯಶತಕ-೪೩

ಆಶೆಯಂಬ ನದಿಯಲ್ಲಿ ಬಯಕೆ ಎಂಬ ನೀರೂ, ದುರಾಸೆಯೆಂಬ ಅಲೆಗಳೂ, ಕಾಮವೆಂಬ ಮೊಸಳೆಗಳೂ, ಶಂಕೆಯೆಂಬ ಹಕ್ಕಿಗಳೂ ಇವೆ. ಧೈರ್ಯವೆಂಬ ಮರವನ್ನು ಉರುಳಿಸುತ್ತದೆ. ಮೋಹವೆಂಬ ಸುಳಿಯಿಂದ ದಾಟುವುದೇ ಕಷ್ಟವಾಗಿದೆ. ಚಿಂತೆಯೆಂಬ ಕಡಿದಾದ ದಡದಿಂದ ತುಂಬಾ ಅಪಾಯಕರವಾಗಿದೆ. ಯೋಗಿಗಳಲ್ಲಿ ಶ್ರೇಷ್ಠರಾದವರು, ಸ್ವಚ್ಛವಾದ ಮನಸ್ಸಿನಿಂದ ಆ ನದಿಯನ್ನು ದಾಟಿ ಆನಂದವನ್ನು ಅನುಭವಿಸುತ್ತಾರೆ.

**ಆಶಾಯಾ ಯೇ ದಾಸಾಸ್ತೇ ದಾಸಾಃ ಸರ್ವಲೋಕಸ್ಯ ।**
**ಆಶಾ ಯೇಷಾಂ ದಾಸೀ ತೇಷಾಂ ದಾಸಾಯತೇ ಲೋಕಃ ॥ ೫೩**

-ಸಮಯೋಚಿತಪದ್ಯಮಾಲಿಕಾ

ಆಸೆಗೆ ಯಾರು ದಾಸರೋ ಅವರು ಸಕಲಲೋಕಕ್ಕೂ ದಾಸರೇ. ಯಾರಿಗೆ ಆಸೆಯೇ ದಾಸಿಯಾಗಿರುತ್ತದೆಯೋ ಅವರಿಗೆ ಲೋಕವೇ ದಾಸವಾಗುತ್ತದೆ.

**ಆಶಾಪಿಶಾಚಿಕಾವಿಷ್ಟಃ ಪುರತೋ ಯಸ್ಯ ಕಸ್ಯಚಿತ್ ।**
**ವಂದತೇ ನಿಂದತಿ ಸ್ತೌತಿ ರೋದಿತಿ ಪ್ರಹಸತ್ಯಪಿ ॥ ೫೪**

-ಸುಭಾಷಿತಸುಧಾನಿಧಿ (ಬೃಹತ್ಕಥೆ)

ಆಸೆಯೆಂಬ ಪಿಶಾಚಿ ಹಿಡಿದವನು ಯಾರೆಂದರೆ ಅವರ ಮುಂದೆ ನಮಸ್ಕರಿಸುತ್ತಾನೆ, ನಿಂದಿಸುತ್ತಾನೆ, ಸ್ತುತಿಸುತ್ತಾನೆ, ಅಳುತ್ತಾನೆ ಮತ್ತು ನಗುತ್ತಾನೆ.

**ಇಚ್ಛತಿ ಶತೀ ಸಹಸ್ರಂ ಸಹಸ್ರೀ ಲಕ್ಷಮೀಹತೇ ।**
**ಲಕ್ಷಾಧಿಪಸ್ತಥಾ ರಾಜ್ಯಂ ರಾಜ್ಯಸ್ಥಃ ಸ್ವರ್ಗಮೀಹತೇ ॥ ೫೫**

-ಪಂಚತಂತ್ರ, ಅಪರೀಕ್ಷಿತಕಾರಕ-೭೮

ನೂರುಳ್ಳವನು ಸಾವಿರವನ್ನೂ ಸಾವಿರವುಳ್ಳವನು ಲಕ್ಷವನ್ನೂ, ಲಕ್ಷಾಧಿಪನು ರಾಜ್ಯವನ್ನೂ, ರಾಜ್ಯವುಳ್ಳವನು ಸ್ವರ್ಗವನ್ನೂ ಮೇಲೆಮೇಲೆ ಬಯಸುತ್ತಲೇ ಇರುತ್ತಾನೆ.

**ಇದಂ ಲಬ್ಧಮಿದಂ ನಷ್ಟಮಿದ ಷ್ಯೇ ಪುನರ್ಧಿಯಾ ।**
**ಇದಂ ಚಿಂತಯತಾಮೇವ ಜೀರ್ಣಮಾಯುಃ ಶರೀರಿಣಾಮ್ ॥ ೫೬**

-ಭಾರತಮಂಜರೀ, ೧೩-೭೪೧

"ಇದು ಸಿಕ್ಕಿತು, ಇದು ಕಳೆದುಹೋಯಿತು, ಇದನ್ನು ಬುದ್ಧಿಶಕ್ತಿಯಿಂದ ಮತ್ತೆ ಗಳಿಸುವೆನು" ಎಂದು ಚಿಂತಿಸುತ್ತಲೇ ಜನರ ಆಯುಸ್ಸು ಮುಗಿದುಹೋಗುತ್ತದೆ.

**ಉತ್ಖಾತಂ ನಿಧಿಶಂಕಯಾ ಕ್ಷಿತಿತಲಂ ಧ್ಮಾತಾ ಗಿರೇರ್ಧಾತವಃ**
**ನಿಸ್ತೀರ್ಣಃ ಸರಿತಾಂ ಪತಿರ್ನೃಪತಯೋ ಯತ್ನೇನ ಸಂತೋಷಿತಾಃ ।**
**ಮಂತ್ರಾರಾಧನತತ್ಪರೇಣ ಮನಸಾ ನೀತಾಃ ಶ್ಮಶಾನೇ ನಿಶಾಃ**
**ಪ್ರಾಪ್ತಃ ಕಾಣವರಾಟಕೋಽಪಿ ನ ಮಯಾ ತೃಷ್ಣೇ ಸಕಾಮಾ ಭವ ॥ ೫೭**

-ವೈರಾಗ್ಯಶತಕ-೩

ಭೂಮಿಯಲ್ಲಿ ನಿಧಿಯಿದೆಯೆಂದು ಅಗೆಯಲಾಯಿತು; ಬೆಟ್ಟದಲ್ಲಿರುವ ಧಾತುಗಳನ್ನು (ಚಿನ್ನದಾಸೆಯಿಂದ) ಮೂಸೆಗಳಲ್ಲಿಟ್ಟು ಸುಡಲಾಯಿತು ; ಸಮುದ್ರವನ್ನು ದಾಟಲಾಯಿತು ; ಕಷ್ಟಪಟ್ಟು ಹಣಸಂಪಾದನೆಗೋಸ್ಕರ ರಾಜಸೇವೆಯನ್ನು ಮಾಡಲಾಯಿತು; ಧನಿಕನಾಗಬೇಕೆಂಬಾಸೆಯಿಂದ ಶ್ಮಶಾನದಲ್ಲಿ ಮಂತ್ರಗಳನ್ನು ಜಪಿಸುತ್ತಾ ರಾತ್ರಿಗಳನ್ನು ಕಳೆಯಲಾಯಿತು. ಇಷ್ಟೆಲ್ಲಾ ಮಾಡಿದರೂ ನನಗೆ ಒಂದು ಕುರುಡುಕವಡೆಯೂ ದಕ್ಕಲಿಲ್ಲ. ದುರಾಸೆಯೇ, ಈಗಲಾದರೂ ತೃಪ್ತಿಹೊಂದು!

**ಉತ್ಸಾಹಸಂಪನ್ನಂ ಅದೀರ್ಘಸೂತ್ರಂ**
**ಕ್ರಿಯಾವಿಧಿಜ್ಞಂ ವ್ಯಸನೇಷ್ವಸಕ್ತಂ ।**
**ಶೂರಂ ಕೃತಜ್ಞಂ ದೃಢಸೌಹೃದಂ ಚ**
**ಲಕ್ಷ್ಮೀಃ ಸ್ವಯಂ ಯಾತಿ ನಿವಾಸಹೇತೋಃ ॥ ೫೮**

-ಹಿತೋಪದೇಶ, ಮಿತ್ರಲಾಭ-೧೩೫

ಉತ್ಸಾಹದಿಂದ ಕೂಡಿದವನೂ, ಸೋಮಾರಿಯಲ್ಲದವನೂ, ಕೆಲಸಮಾಡುವ ಪ್ರಕಾರವನ್ನರಿತವನೂ, ದುರಭ್ಯಾಸಗಳಲ್ಲಿ ಆಸಕ್ತಿ ಇಲ್ಲದವನೂ, ಶೂರನೂ, ಕೃತಜ್ಞನೂ, ಸ್ಥಿರವಾದ ಸ್ನೇಹವುಳ್ಳವನೂ ಆದವನಲ್ಲಿ ನೆಲಸಲು ಲಕ್ಷ್ಮಿ ತಾನಾಗಿ ಬರುತ್ತಾಳೆ.

**ಉಪಕರ್ತುಮಪ್ರಕಾಶಂ ಕ್ಷಂತುಂ ನ್ಯೂನೇಷ್ವಯಾಚಿತಂ ದಾತುಂ ।**
**ಅಭಿಸಂಧಾತುಂ ಚ ಗುಣೈಃ ಶತೇಷು ಕೇಚಿದ್ವಿಜಾನಂತಿ ॥** ೫೯

-ಸುಭಾಷಿತರತ್ನಭಾಂಡಾಗಾರ

ಯಾರಿಗೂ ತಿಳಿಯದಂತೆ ಉಪಕಾರಮಾಡುವುದು, ಕ್ಷಮಾಗುಣ, ಬಡವರಿಗೆ ಕೇಳುವುದಕ್ಕೆ ಮುಂಚೆಯೇ ದಾನ, ಒಳ್ಳೆಯ ಗುಣಗಳನ್ನೇ ಯೋಚಿಸುವುದು-ಈ ಗುಣಗಳು ನೂರಕ್ಕೊಬ್ಬರಿಗೆ ತಿಳಿದಿದ್ದರೆ ಹೆಚ್ಚು.

**ಉಪಕಾರಕಮಾಯತೇರ್ಭೃಶಂ**
**ಪ್ರಸವಃ ಕರ್ಮಫಲಸ್ಯ ಭೂರಿಣಃ ।**
**ಅನಪಾಯಿ ನಿಬರ್ಹಣಂ ದ್ವಿಷಾಂ**
**ನ ತಿತಿಕ್ಷಾಸಮಮಸ್ತಿ ಸಾಧನಮ್ ॥** ೬೦

-ಕಿರಾತಾರ್ಜುನೀಯ, ೨-೪೩

ತಾಳ್ಮೆಯು ಮುಂದಕ್ಕೆ ಹೆಚ್ಚು ಸಹಾಯವಾಗುತ್ತದೆ. ಪುಷ್ಕಳವಾದ ಫಲವನ್ನು ಕೊಟ್ಟು ನಮ್ಮ ಶ್ರಮವನ್ನು ಸಾರ್ಥಕಗೊಳಿಸುತ್ತದೆ. ಶಾಶ್ವತವಾಗಿದ್ದುಕೊಂಡು ಶತ್ರುಗಳನ್ನು ನಿಗ್ರಹಿಸುತ್ತದೆ. ತಾಳ್ಮೆಗಿಂತಲೂ ಉತ್ತಮವಾದ ಸಾಧನವಿಲ್ಲ.

**ಉಪಕಾರಪರಃ ಸ್ವಭಾವತಃ**
**ಸತತಂ ಸರ್ವಜನಸ್ಯ ಸಜ್ಜನಃ ।**
**ಅಸತಾಮನಿಶಂ ತಥಾಪ್ಯಹೋ**
**ಗುರುಹೃದ್ರೋಗಕರೀ ತದುನ್ನತಿಃ ॥** ೬೧

-ಶಿಶುಪಾಲವಧ, ೧೬-೨೨

ಒಳ್ಳೆಯವನು ಸ್ವಾಭಾವಿಕವಾಗಿ ಎಲ್ಲರಿಗೂ ಉಪಕಾರ ಮಾಡಲು ಆಸಕ್ತನಾಗಿರುತ್ತಾನೆ. ಆದರೆ ದುಷ್ಟರಿಗೆ ಸಜ್ಜನರ ಏಳಿಗೆಯು ಸಹಿಸುವುದಿಲ್ಲ. ಸಜ್ಜನರು ಏಳಿಗೆಯಾದಂತೆಲ್ಲಾ ದುಷ್ಟರ ಹೃದಯ ಬೇನೆಯು ಹೆಚ್ಚುತ್ತದೆ.

**ಉಪಾನಹೌ ಚ ವಾಸಶ್ಚ ಧೃತಮನ್ಯೈರ್ನ ಧಾರಯೇತ್ ।**
**ಉಪವೀತಮಲಂಕಾರಂ ಸ್ರಜಂ ಕರಕಮೇವ ಚ ॥** ೬೨

-ಮನುಸ್ಮೃತಿ, ೪-೬೬

ಬೇರೆಯವರು ಉಪಯೋಗಿಸಿದ ಚಪ್ಪಲಿಗಳು, ಬಟ್ಟೆ, ಜನಿವಾರ, ಅಲಂಕಾರ, ಹೂಮಾಲೆ, ಕಮಂಡಲು ಇವುಗಳನ್ನು ಉಪಯೋಗಿಸಬಾರದು.

**ಉಪಾಸತೇ ಯೇ ಗೃಹಸ್ಥಾಃ ಪರಪಾಕಮಬುದ್ಧಯಃ ।**
**ತೇನ ತೇ ಪ್ರೇತ್ಯ ಪಶುತಾಂ ವ್ರಜಂತ್ಯನ್ನಾದಿದಾಯಿನಾಮ್ ॥ ೬೩**

-ಮನುಸ್ಮೃತಿ, ೩-೧೦೪

ತಮಗೆ ಮನೆಯಿದ್ದೂ ಅನುಕೂಲವಿದ್ದೂ ಲೋಭದಿಂದ ಪ್ರಯಾಣಿಕರಿಗೋ ಇತರರಿಗೋಸ್ಕರವೋ ಇರುವ ಜಾಗಗಳಲ್ಲಿ ಊಟ ಮಾಡಿದರೆ, ಅವರು ಅನ್ನ ಕೊಟ್ಟವರ ಮನೆಯಲ್ಲಿ ಪಶುಗಳಾಗಿ ಮುಂದಿನ ಜನ್ಮದಲ್ಲಿ ಹುಟ್ಟುವರು.

**ಏಕ ಏವ ಪರೋ ಹ್ಯಾತ್ಮಾ ಸರ್ವೇಷಾಮಪಿ ದೇಹಿನಾಮ್ ।**
**ನಾನೇವ ಗೃಹ್ಯತೇ ಮೂಢೈರ್ಯಥಾ ಜ್ಯೋತಿರ್ಯಥಾ ನಭಃ ॥ ೬೪**

-ಭಾಗವತ, ೧೦-೫೪-೪೪

ಎಲ್ಲಾ ಪ್ರಾಣಿಗಳಿಗೂ ಒಂದೇ ಒಂದು ಶ್ರೇಷ್ಠವಾದ ಆತ್ಮವು. ಮೂರ್ಖರಿಂದ ಅದು ಬೆಳಕಿನಂತೆ, ಆಕಾಶದಂತೆ, ನಾನಾವಿಧವಾಗಿ ಗ್ರಹಿಸಲ್ಪಡುತ್ತದೆ.

**ಏವಂ ಕಾಮಾಶಯಂ ಚಿತ್ತಂ ಕಾಮಾನಾಮತಿಸೇವಯಾ ।**
**ವಿರಜ್ಯೇತ ಯಥಾ ರಾಜನ್ನಗ್ನಿವತ್ ಕಾಮಬಿಂದುಭಿಃ ॥ ೬೫**

-ಭಾಗವತ, ೭-೧೧-೩೪

ಎಲೈ ರಾಜನೇ, ಈ ರೀತಿಯಲ್ಲಿ ಕಾಮವಶವಾದ ಮನಸ್ಸು ಕಾಮಗಳ ಅತಿಯಾದ ಸೇವನೆಯ ಕಾರಣ ಬೆಂಕಿಯು ಹೇಗೋ ಹಾಗೆ ಕಾಮದ ಹನಿಗಳಿಂದ ಬೇರೆಯಾಗಬೇಕು.

**ಕರ್ಣೌ ಕೀಲಕಸನ್ನಿಭೈರ್ನವನವೈರುದ್ವೇಜಯಂತಂ ರವೈಃ**
**ಆಚಾಮಂತಮನುಕ್ಷಣಂ ತನುಭೃತಾಂ ಪ್ರಾಣಾಯಿತಂ ಶೋಣಿತಂ ।**
**ಯತ್ನೇನಾಪಿ ಗರೀಯಸಾ ನ ಮಶಕ ತ್ರಸ್ಯಂತಮಸ್ತ್ರಾಧಿಕಂ**
**ತ್ವಾಮತ್ಯಲ್ಪಕಳೇವರಂ ಕೃತವತಾ ಧಾತ್ರಾ ಜಗದ್ರಕ್ಷಿತಮ್ ॥ ೬೬**

-ಅನ್ಯೋಕ್ತಿಸ್ತಬಕ-೮೧

ಎಲೈ ಸೊಳ್ಳೆಯೆ, ಮೊಳೆಗಳಿಂದ ಚುಚ್ಚಿದ ಹಾಗೆ ಒರಟು ಧ್ವನಿಯಿಂದ ಕಿವಿಗಳನ್ನು ಬೇಸರಗೊಳಿಸುತ್ತೀಯೆ. ಪ್ರಾಣಿಗಳ ಪ್ರಾಣದಂತಿರುವ ರಕ್ತವನ್ನು ಹೀರಿತ್ತೀಯೆ. ಎಷ್ಟೇ ಮಹತ್ತಾದ ಪ್ರಯತ್ನದಿಂದಲೂ ನಿನ್ನನ್ನು ಹೆದರಿಸಲು ಸಾಧ್ಯವಿಲ್ಲ. ಅಸ್ತ್ರಕ್ಕಿಂತಲೂ ನಿನ್ನ ಕಚ್ಚುವಿಕೆ ಭಯಂಕರ. ಆದರೆ ಬ್ರಹ್ಮನು ನಿನ್ನನ್ನು ಬಹಳ ಸಣ್ಣದಾಗಿ ಸೃಷ್ಟಿಸಿ ಜಗತ್ತನ್ನು ಕಾಪಾಡಿದ್ದಾನೆ!

**ಕಶ್ಚಿದಾಮ್ರವಣಂ ಛಿತ್ವಾ ಪಲಾಶಾಂಶ್ಚ ನಿಷಿಂಚತಿ ।**
**ಪುಷ್ಪಂ ದೃಷ್ಟ್ವಾ ಫಲೇ ಗೃಧ್ನುಃ ಸ ಶೋಚತಿ ಫಲಾಗಮೇ ॥ ೬೭**

-ರಾಮಾಯಣ, ಅಯೋಧ್ಯಾ. ೬೩-೮

ಹೂವಿನ ಆಡಂಬರವನ್ನು ಕಂಡು ಒಳ್ಳೆಯ ಹಣ್ಣು ದೊರೆಯುವುದೆಂಬ ಆಸೆಯಿಂದ ಮಾವಿನ ತೋಪನ್ನು ಕಡಿದು ಮುತ್ತುಗದ ಮರಗಳನ್ನು ಬೆಳೆಸಿ ನೀರೆರೆದರೆ ಏನಾಗುವುದು? ಫಲಪ್ರಾಪ್ತಿಯ ಕಾಲದಲ್ಲಿ ಹಣ್ಣಿಲ್ಲವೆಂದು ವ್ಯಥೆಪಡಬೇಕಾಗುವುದು.

**ಕಪಾಲಸ್ಥಂ ಯಥಾ ತೋಯಂ ಶ್ವದೃತೌ ಚ ಯಥಾ ಪಯಃ ।**
**ಹೇಯಂ ದುಃಸ್ಥಾನದೋಷೇಣ ವೃತ್ತಹೀನಂ ತಥಾ ಶ್ರುತಮ್ ॥** ೬೮

-ಚತುರ್ವರ್ಗಚಿಂತಾಮಣಿ

ತಲೆಬುರುಡೆಯಲ್ಲಿರುವ ನೀರು, ನಾಯಿ ಚರ್ಮದಲ್ಲಿ ತಂದ ಹಾಲು ಸ್ಥಾನದೋಷ ದಿಂದ ಹೇಗೆ ಅಸಹ್ಯವೋ ಅಥವಾ ತ್ಯಾಜ್ಯವೋ ಅದೇ ರೀತಿ ನಡತೆಯಿಲ್ಲದವನ ವಿದ್ಯೆಯೂ ಹೇಯ.

**ಕಷ್ಟಾ ವೇಧವ್ಯಥಾ ಕಷ್ಟೋ ನಿತ್ಯಮುದ್ವಹನಕ್ಲಮಃ ।**
**ಶ್ರವಣಾನಾಂ, ಅಲಂಕಾರಃ ಕಪೋಲಸ್ಯ ತು ಕುಂಡಲಮ್ ॥** ೬೯

-ಅನರ್ಘರಾಘವ, ೧-೪೦

ಒಬ್ಬರಿಗೆ ತೊಂದರೆ ಆಯಾಸ ಅದೇ ಇನ್ನೊಬ್ಬರಿಗೆ ಅಲಂಕಾರ. ಕಿವಿಗಳು ಚುಚ್ಚಿಸಿಕೊಳ್ಳಬೇಕು, ದಿನವೂ ಹೊರುವ ಕಷ್ಟವನ್ನನುಭವಿಸಬೇಕು. ಆದರೆ ಕುಂಡಲಗಳು ಕೆನ್ನೆಗೆ ಅಲಂಕಾರವಾಗುತ್ತವೆ.

**ಕ್ಷಯಯುಕ್ತಮಪಿ ಸ್ವಭಾವಜಂ**
**ದಧತಂ ಧಾಮ ಶಿವಂ ಸಮೃದ್ಧಯೇ ।**
**ಪ್ರಣಮಂತ್ಯನಪಾಯಮುತ್ಥಿತಂ**
**ಪ್ರತಿಪಚ್ಚಂದ್ರಮಿವ ಪ್ರಜಾ ನೃಪಮ್ ॥** ೭೦

-ಕಿರಾತಾರ್ಜುನೀಯ, ೨-೧೮

ಪ್ರಕೃತ ಕ್ಷೀಣಸ್ಥಿತಿಯಲ್ಲಿದ್ದರೂ ಮುಂದೆ ಏಳಿಗೆಯಾಗುವ ಸೂಚನೆಯುಳ್ಳ ಮಂಗಳಕರವಾದ ಸತ್ತ್ವವುಳ್ಳ ಅರಸನನ್ನು ಪ್ರಜೆಗಳು ಪಾಡ್ಯಮಿಯ ಚಂದ್ರನಂತೆ ಆದರಿಸುತ್ತಾರೆ.

**ಕಾಕಃ ಕೃಷ್ಣಃ ಪಿಕಃ ಕೃಷ್ಣಃ ಕೋ ಭೇದಃ ಪಿಕಕಾಕಯೋಃ ।**
**ವಸಂತಸಮಯೇ ಪ್ರಾಪ್ತೇ ಕಾಕಃ ಕಾಕಃ ಪಿಕಃ ಪಿಕಃ ॥** ೭೧

-ಕುವಲಯಾನಂದ

ಕಾಗೆಯೂ ಕಪ್ಪು, ಕೋಗಿಲೆಯೂ ಕಪ್ಪು. ಕೋಗಿಲೆಗೂ ಕಾಗೆಗೂ ಭೇದವೇನು? ವಸಂತಕಾಲ ಬಂದಾಗ ಕಾಗೆ ಕಾಗೆಯೇ, ಕೋಗಿಲೆ ಕೋಗಿಲೆಯೇ.

**ಕಾಚಃ ಕಾಂಚನಸಂಸರ್ಗಾದ್ಧತ್ತೇ ಮಾರಕತೀಂ ದ್ಯುತಿಂ ।**
**ತಥಾ ಸತ್ಸಂನಿಧಾನೇನ ಮೂರ್ಖೋ ಯಾತಿ ಪ್ರವೀಣತಾಮ್ ॥ ೭೨**

-ಹಿತೋಪದೇಶ, ೧-೨೬

ಚಿನ್ನದ ಸಂಪರ್ಕವನ್ನು ಹೊಂದಿದ ಗಾಜೂ ಸಹ ಮರಕತದ ಕಾಂತಿಯನ್ನು ಹೊಂದುತ್ತದೆ. ಹಾಗೆಯೇ ಸಜ್ಜನರ ಸಹವಾಸದಿಂದ ಮೂರ್ಖನೂ ಕೂಡ ಪ್ರವೀಣತೆಯನ್ನು ಪಡೆಯುತ್ತಾನೆ.

**ಕಾಮಕ್ರೋಧಾವನಿರ್ಜಿತ್ಯ ಕಿಮರಣ್ಯೇ ಕರಿಷ್ಯತಿ ।**
**ಅಥವಾ ನಿರ್ಜಿತಾವೇತೌ ಕಿಮರಣ್ಯೇ ಕರಿಷ್ಯತಿ ॥ ೭೩**

-ಸುಭಾಷಿತಸುಧಾನಿಧಿ

ಕಾಮಕ್ರೋಧಗಳನ್ನು ಜಯಿಸದೆ ಕಾಡಿನಲ್ಲಿ ಏನನ್ನು ತಾನೇ ಮಾಡುತ್ತಾನೆ? ಅಥವಾ ಇವೆರಡನ್ನೂ ಗೆದ್ದಮೇಲೆ ಕಾಡಿನಲ್ಲಿ ಏನನ್ನು ತಾನೇ ಮಾಡುತ್ತಾನೆ?

**ಕಾಮಂ ದುಗ್ಧೇ ವಿಪ್ರಕರ್ಷತ್ಯಲಕ್ಷ್ಮೀಂ**
**ಕೀರ್ತಿಂ ಸೂತೇ ದುರ್ಹೃದೋ ನಿಷ್ಫಲಾಂತಿ ।**
**ಶುದ್ಧಾಂ ಶಾಂತಾಂ ಮಾತರಂ ಮಂಗಲಾನಾಂ**
**ಧೇನುಂ ಧೀರಾಃ ಸೂನೃತಾಂ ವಾಚಮಾಹುಃ ॥ ೭೪**

-ಉತ್ತರರಾಮಚರಿತ, ೫-೩೦

ಒಳ್ಳೆಯ ಮಾತು ಇಷ್ಟಾರ್ಥವನ್ನು ಕೊಡುತ್ತದೆ. ಅಮಂಗಳವನ್ನು ಹೋಗಲಾಡಿಸುತ್ತದೆ. ಕೀರ್ತಿಯನ್ನುಂಟುಮಾಡುತ್ತದೆ. ಶತ್ರುಗಳನ್ನು ನಾಶಮಾಡುತ್ತದೆ. ಸ್ವಚ್ಛವಾದ ಶಾಂತವಾದ ಮಂಗಳಕ್ಕೆ ತೌರೆನಿಸಿದ ಒಳ್ಳೆಯ ಮಾತನ್ನು ಕಾಮಧೇನುವೆನ್ನುತ್ತಾರೆ.

**ಕಾವ್ಯಶಾಸ್ತ್ರವಿನೋದೇನ ಕಾಲೋ ಗಚ್ಛತಿ ಧೀಮತಾಮ್ ।**
**ವ್ಯಸನೇನ ತು ಮೂರ್ಖಾಣಾಂ ನಿದ್ರಯಾ ಕಲಹೇನ ವಾ ॥ ೭೫**

-ಹಿತೋಪದೇಶ, ೧-೩೨

ಕಾವ್ಯ, ಶಾಸ್ತ್ರ ಇವುಗಳನ್ನು ಓದಿ ಸಂತೋಷಪಡುವುದರಲ್ಲಿ ಬುದ್ಧಿವಂತರ ವೇಳೆ ಕಳೆಯುತ್ತದೆ. ಆದರೆ ಮೂರ್ಖರ ಹೊತ್ತು ಜೂಜು, ನಿದ್ರೆ ಅಥವಾ ಜಗಳದಲ್ಲಿ ಹೋಗುತ್ತದೆ.

**ಕಾ ಹಿ ಪುಂಗಣನಾ ತೇಷಾಂ**
**ಯೇಽನ್ಯಶಿಕ್ಷಾವಿಚಕ್ಷಣಾಃ ।**

**ಯೇ ಸ್ವಂ ಶಿಕ್ಷಯಿತುಂ ದಕ್ಷಾಃ ।**
**ತೇಷಾಂ ಪುಂಗಣನಾ ನೃಣಾಮ್ ॥** ೭೬

-ಪರಿಶಿಷ್ಟಪರ್ವ, ೧-೩೮೩

ಯಾರು ಬೇರೆಯವರಿಗೆ ಬುದ್ಧಿ ಹೇಳುವುದರಲ್ಲಿ ನಿಪುಣರೋ ಅವರನ್ನು ಮನುಷ್ಯರಲ್ಲಿ ಲೆಕ್ಕಿಸಬೇಕೆ? ಯಾರು ತಾವೇ ಅರಿತು ನಡೆದುಕೊಳ್ಳುತ್ತಾರೋ ಅವರೇ ನಿಜವಾಗಿ ಮನುಷ್ಯರು.

**ಕಿಂ ಕುಲೇನೋಪದಿಷ್ಟೇನ ಶೀಲಮೇವಾತ್ರ ಕಾರಣಂ ।**
**ಭವಂತಿ ಸುತರಾಂ ಸ್ಫೀತಾಃ ಸುಕ್ಷೇತ್ರೇ ಕಂಟಕಿದ್ರುಮಾಃ ॥** ೭೭

-ಮೃಚ್ಛಕಟಿಕ, ೮-೨೯

ಕುಲವನ್ನು ಹೇಳಿ ಪ್ರಯೋಜನವಿಲ್ಲ. ನಡತೆಯೇ ಮುಖ್ಯ. ಒಳ್ಳೇ ಫಲವತ್ತಾದ ನೆಲದಲ್ಲಿ ಮುಳ್ಳಿನ ಗಿಡಗಳು ಚೆನ್ನಾಗಿ ಬೆಳೆಯುವುದಿಲ್ಲವೆ?

**ಕಿಂ ತಯಾ ಕ್ರಿಯತೇ ಧೇನ್ವಾ ಯಾ ನ ಸೂತೇ ನ ದುಗ್ಧದಾ ।**
**ಕೋಽರ್ಥಃ ಪುತ್ರೇಣ ಜಾತೇನ ಯೋ ನ ವಿದ್ವಾನ್ನ ಭಕ್ತಿಮಾನ್ ॥** ೭೮

-ಪಂಚತಂತ್ರ, ಕಥಾಮುಖ-೬

ಕರು ಹಾಕದ ಅಥವಾ ಹಾಲು ಕೊಡದ ಹಸುವಿನಿಂದೇನು ತಾನೇ ಮಾಡುವುದು? ವಿದ್ವಾಂಸನೂ ಆಗಿರದೆ ಭಕ್ತಿವಂತನೂ ಆಗಿರದೆ ಇರುವ ಪುತ್ರನು ಹುಟ್ಟಿದುದರಿಂದ ಏನು ತಾನೇ ಸಾರ್ಥಕ?

**ಕಿಂ ನಿಷ್ಕಾಮಸ್ಯ ನಾರೀಭಿಃ ಕಿಂ ಗತಾಸೋಶ್ಚ ಭೇಷಜೈಃ ।**
**ಜಿತೇಂದ್ರಿಯಸ್ಯ ಕಿಂ ಶೌಚೈಃ ನಿಷ್ಫಲಂ ಮೂರ್ಖದಾನವತ್ ॥** ೭೯

-ಬೃಹತ್‌ಪರಾಶರಸ್ಮೃತಿ, ೬-೨೧೮

ಕಾಮವಿಲ್ಲದವನಿಗೆ ಹೆಂಗಸರಿಂದೇನು ಪ್ರಯೋಜನ? ಸತ್ತವನಿಗೆ ಔಷಧವೇಕೆ? ಇಂದ್ರಿಯವನ್ನು ಗೆದ್ದವನಿಗೆ ಶೌಚದಿಂದ ಪ್ರಯೋಜನವಿಲ್ಲ. ಮೂರ್ಖನಿಗೆ ಮಾಡಿದ ದಾನದಂತೆ ಇವೆಲ್ಲಾ ನಿಷ್ಫಲ.

**ಕಿಮಪ್ಯಸ್ತಿ ಸ್ವಭಾವೇನ ಕಿಂ ಸುಂದರಮಸುಂದರಮ್ ।**
**ಯದೇವ ರೋಚತೇ ಯಸ್ಮೈ ತದ್ಭವೇತ್ತಸ್ಯ ಸುಂದರಮ್ ॥** ೮೦

-ಹಿತೋಪದೇಶ, ಸುಹೃದ್ಭೇದ-೪೬

ಸ್ವಭಾವತಃ ಸುಂದರವಾದುದು, ಅಸುಂದರವಾದುದು ಎಂದು ಏನಾದರೂ ಇದೆಯೇನು? ಯಾರಿಗೆ ಯಾವುದು ಇಷ್ಟವಾಗುತ್ತದೆಯೋ ಅವರಿಗೆ ಅದು ಸುಂದರ.

ಕಿಮಿವಾಖಿಲಲೋಕಕೀರ್ತಿತಂ
ಕಥಯತ್ಯಾತ್ಮಗುಣಂ ಮಹಾಮನಾಃ ।
ವದಿತಾ ನ ಲಭ್ಯೇಯಸೋಽಪರಃ
ಸ್ವಗುಣಂ ತೇನ ವದತ್ಯಸೌ ಸ್ವಯಮ್ ॥ ೮೧

-ಶಿಶುಪಾಲವಧ, ೧೬-೩೧

ಇಡೀ ಲೋಕವು ಹೊಗಳುತ್ತಿರಲು ಮಹಾತ್ಮನು ತನ್ನ ಗುಣಗಳನ್ನು ಹೇಳಿಕೊಳ್ಳ ಬೇಕಾಗಿರುವುದಿಲ್ಲ. ಆದರೆ ನೀಚನ ಗುಣಗಳನ್ನು ಹೇಳುವವರೇ ಇಲ್ಲ. ಆದುದರಿಂದ ಅವನು ತಾನೇ ತನ್ನ ಗುಣಗಳನ್ನು ಬೇರೆ ದಾರಿಯಿಲ್ಲದೆ ಹೇಳಿಕೊಳ್ಳಬೇಕಾಗುತ್ತದೆ.

ಕಿಂ ಶೇಷಸ್ಯ ಭರವ್ಯಥಾ ನ ವಪುಷಿ ಕ್ಷ್ಮಾಂ ನ ಕ್ಷಿಪತ್ಯೇಷ ಯತ್
ಕಿಂ ವಾ ನಾಸ್ತಿ ಪರಿಶ್ರಮೋ ದಿನಪತೇರಾಸ್ತೇ ನ ಯನ್ನಿಶ್ಚಲಃ ।
ಕಿಂ ತ್ವಂಗೀಕೃತಮುತ್ಸೃಜನ್ ಕೃಪಣವತ್ ಶ್ಲಾಘ್ಯೋ ಜನೋ ಲಜ್ಜತೇ
ನಿರ್ವ್ಯೂಢಂ ಪ್ರತಿಪನ್ನವಸ್ತುಷು ಸತಾಮೇತದ್ಧಿ ಗೋತ್ರವ್ರತಂ ॥೮೨

-ಮುದ್ರಾರಾಕ್ಷಸ, ೨-೧೮

ಆದಿಶೇಷನಿಗೆ ಶರೀರದಲ್ಲಿ ಭಾರದ ನೋವು ಇಲ್ಲವೇ! ಆದರೂ ಅವನು ಹೊತ್ತಭೂಮಿಯನ್ನು ಕೆಳಗೆ ಇಳುಹಲಿಲ್ಲ. ಸೂರ್ಯನಿಗೆ ಕಷ್ಟವಿಲ್ಲವೇ! ಆದರೂ ನಿಲ್ಲದೆ ಸಂಚರಿಸುತ್ತಿದ್ದಾನೆ. ಉತ್ತಮರಾದ ಜನರು ಒಪ್ಪಿಕೊಂಡ ಕೆಲಸವನ್ನು ಬಿಡಬೇಕಾದರೆ ನಾಚಿಕೆ ಪಡುತ್ತಾರೆ. ಒಪ್ಪಿಕೊಂಡ ಕೆಲಸವನ್ನು ನಿರ್ವಹಿಸುವುದು ಮಹಾತ್ಮರ ವ್ರತ.

ಕ್ರಿಯಾಯಾಸಪರಾಃ ಕೇಚಿದ್ವ್ರತಚರ್ಯಾದಿಸಂಯುತಾಃ ।
ಅಜ್ಞಾನಸಂವೃತಾತ್ಮಾನಃ ಸಂಚರಂತಿ ಪ್ರತಾರಕಾಃ ॥ ೮೩

-ಗರುಡಪುರಾಣ, ೧೬-೫೯

ಕೆಲವರು ಬಹಳ ಶ್ರಮದಿಂದ ಕರ್ಮಾದಿಗಳನ್ನೂ, ವ್ರತಾದಿಗಳನ್ನೂ ಮಾಡುತ್ತಾ ತಮ್ಮನ್ನು ಶ್ರೇಷ್ಠರೆಂದು ತಿಳಿದಿರುತ್ತಾರೆ. ಇವರು ಕೇವಲ ಅಜ್ಞಾನಿಗಳು. ಇವರು ಮೋಸಗಾರರು.

ಕೀರ್ತಿರಕ್ಷಣಮಾದಿಷ್ಟಂ ಕೀರ್ತಿರ್ಹಿ ಪರಮಂ ಧನಂ ।
ನಷ್ಟಕೀರ್ತೇರ್ಮನುಷ್ಯಸ್ಯ ಜೀವಿತಂ ನಿಷ್ಫಲಂ ಸ್ಮೃತಂ ॥ ೮೪

-ಸುಭಾಷಿತಸುಧಾನಿಧಿ

ಕೀರ್ತಿಯನ್ನು ಕಾಪಾಡಿಕೊಳ್ಳಬೇಕೆಂದು ಹೇಳಿದೆ. ಕೀರ್ತಿಯೇ ಹೆಚ್ಚಿನ ಐಶ್ವರ್ಯ ವಷ್ಟೇ? ಕೀರ್ತಿಯು ಹಾಳಾದ ಮನುಷ್ಯನ ಬಾಳು ವ್ಯರ್ಥವೆಂದು ಹೇಳಿದೆ.

ಕುರಂಗಮಾತಂಗಪತಂಗಭೃಂಗ-
ಮೀನಾ ಹತಾಃ ಪಂಚಭಿರೇವ ಪಂಚ ।
ಏಕಃ ಪ್ರಮಾದೀ ಸ ಕಥಂ ನ ಹನ್ಯತೇ
ಯಃ ಸೇವತೇ ಪಂಚಭಿರೇವ ಪಂಚ ॥ ೪೫

-ಗರುಡಪುರಾಣ, ೬-೩೪

ಜಿಂಕೆ, ಆನೆ, ದೀಪದ ಹುಳು, ದುಂಬಿ, ಮೀನು ಕೇವಲ ಒಂದೊಂದು ಇಂದ್ರಿಯಗಳ ದೌರ್ಬಲ್ಯದಿಂದಲೇ ನಾಶವಾಗುತ್ತವೆ. ತಪ್ಪನ್ನು ಮಾಡುವ ಸ್ವಭಾವವುಳ್ಳ ಮಾನವನು ಐದೂ ಇಂದ್ರಿಯಗಳ ಆಕರ್ಷಣೆಗೆ ತುತ್ತಾಗಿ ಕೆಡದೆ ಇರುವುದು ಸಾಧ್ಯವೇ?

ಕೃಮಿಕುಲಚಿತಂ ಲಾಲಾಕ್ಲಿನ್ನಂ ವಿಗಂಧಿ ಜುಗುಪ್ಸಿತಂ
ನಿರುಪಮರಸಪ್ರೀತ್ಯಾ ಖಾದನ್ ಖರಾಸ್ಥಿ ನಿರಾಮಿಷಮ್ ।
ಸುರಪತಿಮಪಿ ಶ್ವಾ ಪಾರ್ಶ್ವಸ್ಥಂ ವಿಲೋಕ್ಯ ನ ಶಂಕತೇ
ನ ಹಿ ಗಣಯತಿ ಕ್ಷುದ್ರೋ ಜಂತುಃ ಪರಿಗ್ರಹಫಲ್ಗುತಾಮ್ ॥೪೬

-ನೀತಿಶತಕ-೭

ಕ್ರಿಮಿಗಳಿಂದ ಕೂಡಿದ, ಜೊಲ್ಲಿನಿಂದ ಒದ್ದೆಯಾದ, ಕೆಟ್ಟವಾಸನೆಯಿರುವ, ಅಸಹ್ಯವಾಗಿರುವ, ಮಾಂಸವಿಲ್ಲದ ಒರಟು ಮೂಳೆಯನ್ನು ಎಣೆಯಿಲ್ಲದ ರಸವಿದೆಯೋ ಎಂಬಂತೆ ನಾಯಿ ಪ್ರೀತಿಯಿಂದ ತಿನ್ನುತ್ತದೆ. ಆಗ ಅದು ಪಕ್ಕದಲ್ಲಿ ದೇವೇಂದ್ರನಿದ್ದರೂ, ಅವನನ್ನು ಕಂಡರೂ ಹಿಂಜರಿಯುವುದಿಲ್ಲ. ನೀಚ ಪ್ರಾಣಿಯು ತಾನು ಮೆಚ್ಚಿದ ಪದಾರ್ಥವನ್ನು ನಿಃಸಾರವೆಂದು ಎಣಿಸುವುದೇ ಇಲ್ಲ.

ಕೇಚಿದ್ದೈವಾತ್ಸ್ವಭಾವಾದ್ವಾ ಕಾಲಾತ್ಪುರುಷಕಾರತಃ ।
ಸಂಯೋಗೇ ಕೇಚಿದಿಚ್ಛಂತಿ ಫಲಂ ಕುಶಲಬುದ್ಧಯಃ ॥ ೪೭

-ಯಾಜ್ಞವಲ್ಕ್ಯ-೩೫೦

ಕೆಲವರು ಅದೃಷ್ಟದಿಂದ ಒಳ್ಳೆಯ ಕೆಟ್ಟ ಫಲಗಳು ಉಂಟಾಗುತ್ತವೆ ಎನ್ನುತ್ತಾರೆ. ಕೆಲವರು ಸ್ವಭಾವತಃ ಎಲ್ಲವೂ ಆಗುವುವು ಎನ್ನುತ್ತಾರೆ. ಕಾಲವೇ ಕಾರಣವೆನ್ನುವವರು ಹಲವರು. ಪುರುಷಯತ್ನವೇ ಮುಖ್ಯ ಎಂದೂ ಹೇಳುವವರಿದ್ದಾರೆ. ಆದರೆ ನಿಪುಣರು ಇವೆಲ್ಲವೂ ಸೇರಿ ಫಲವನ್ನು ಕೊಡುತ್ತವೆ ಎಂದು ಹೇಳುತ್ತಾರೆ.

ಕೇವಲಂ ಜ್ಞಾತಶಾಸ್ತ್ರೋಽಪಿ ಸ್ವಾವಸ್ಥಾಂ ಯೋ ನ ಬುಧ್ಯತೇ ।
ತಸ್ಯಾಕಿಂಚಿತ್ಕರಂ ಜ್ಞಾನಂ ಅಂಧಸ್ಯೇವ ಸುದರ್ಪಣಃ ॥ ೪೮

-ಉಪಮಿತಿಭವಪ್ರಪಂಚಕಥಾ

ಚೆನ್ನಾಗಿ ಶಾಸ್ತ್ರವನ್ನು ತಿಳಿದೂ ಯಾರು ತನ್ನ ಸ್ಥಿತಿಯನ್ನರಿಯಲಾರನೋ, ಕುರುಡನಿಗೆ ಕನ್ನಡಿಯಂತೆ, ಜ್ಞಾನವು ಅವನಿಗೆ ಯಾವ ರೀತಿಯ ಪ್ರಯೋಜನವನ್ನೂ ಮಾಡಲಾರದು.

**ಕೋಽರ್ಥಃ ಪುತ್ರೇಣ ಜಾತೇನ ಯೋ ನ ವಿದ್ವಾನ್ನ ಧಾರ್ಮಿಕಃ ।**
**ಕಾಣೇನ ಚಕ್ಷುಷಾ ಕಿಂ ವಾ ಚಕ್ಷುಃ ಪೀಡೈವ ಕೇವಲಮ್ ॥ ೮೯**

-ಹಿತೋಪದೇಶ, ೧-೧೨

ವಿದ್ವಾಂಸನಾಗಲೀ, ಧಾರ್ಮಿಕನಾಗಲೀ ಆಗದೆ ಇರುವ ಪುತ್ರನು ಹುಟ್ಟಿ ತಾನೇ ಏನು ಪ್ರಯೋಜನ? ಕುರುಡುಕಣ್ಣಿನಿಂದೇನು ಪ್ರಯೋಜನ? ಕೇವಲ ಕಣ್ಣು ಬೇನೆಯೇ ಸರಿ.

**ಕೋ ಧೀರಸ್ಯ ಮನಸ್ವಿನಃ ಸ್ವವಿಷಯಃ ಕೋ ವಾ ವಿದೇಶಃ ಸ್ಮೃತಃ**
**ಯಂ ದೇಶಂ ಶ್ರಯತೇ ತಮೇವ ಕುರುತೇ ಬಾಹುಪ್ರತಾಪಾರ್ಜಿತಂ ।**
**ಯದ್ದಂಷ್ಟ್ರಾ ನಖಲಾಂಗುಲಪ್ರಹರಣೈಃ ಸಿಂಹೋ ವನಂ ಗಾಹತೇ**
**ತಸ್ಮಿನ್ನೇವ ಹತದ್ವಿಪೇಂದ್ರರುಧಿರೈಸ್ತೃಷ್ಣಾಂ ಛಿನತ್ತ್ಯಾತ್ಮನಃ ॥ ೯೦**

-ಪಂಚತಂತ್ರ, ಮಿತ್ರಸಂಪ್ರಾಪ್ತಿ-೧೨೬

ಧೀರನೂ ಮಾನವಂತನೂ ಆದವನಿಗೆ ತನ್ನ ದೇಶವಾವುದು? ಅಥವಾ ವಿದೇಶ ಯಾವುದು? ಯಾವ ದೇಶವನ್ನು ಅವನು ಸೇರುವನೋ ಅದನ್ನೇ ತನ್ನ ತೋಳ್ಬಲದಿಂದ ಗೆದ್ದುಕೊಳ್ಳುತ್ತಾನೆ. ತನ್ನ ಕೋರೆಹಲ್ಲು, ಉಗುರು ಮತ್ತು ಬಾಲಗಳ ಹೊಡೆತದಿಂದ ಯಾವ ಕಾಡನ್ನು ಸಿಂಹ ಪ್ರವೇಶಿಸುವುದೋ ಅಲ್ಲಿಯೇ ಆನೆಗಳ ರಾಜನನ್ನು ಕೊಂದು ಅದರ ರಕ್ತದಿಂದ ತನ್ನ ಬಾಯಾರಿಕೆಯನ್ನು ಹೋಗಲಾಡಿಸಿಕೊಳ್ಳುತ್ತದೆ.

**ಕ್ರೋಧೇನಾತಿತರೇಣ ಹಿ ಸುಯೋಧನೋ-**
**ಽನೀನಶತ್ ಕುಲಂ ಪ್ರಾಯಃ ।**
**ಕೇವಲಮಕ್ರೋಧೇನ ಚ ವಿವಾಸ್ಯ**
**ದಯಿತಾಂ ರಘೂದ್ವಹೋಽಖಿದ್ಯತ್ ॥ ೯೧**

ಹೆಚ್ಚು ಸಿಟ್ಟಿನಿಂದ ದುರ್ಯೋಧನನು ತನ್ನ ಇಡೀ ಕುಲಕ್ಕೇ ನಾಶವನ್ನುಂಟು ಮಾಡಿದನು. ಸಿಟ್ಟಿಲ್ಲದೆ ಶಾಂತತೆಯಿಂದಲೇ ಹೆಂಡತಿಯನ್ನು ಹೊರಗೆ ಅಟ್ಟಿ ಶ್ರೀರಾಮನು ವ್ಯಥೆಪಟ್ಟನು.

**ಗರ್ಜ ಗ್ರಾಮ್ಯಗೃಹಾಂಗಣೇಷು ವಿಹರ ಸ್ವೈರಂ ವನೇ ನಿರ್ಜನೇ**
**ನದ್ಯಾಃ ಕೂಲಮಕಾಂಡಮುತ್ಖನ ಮುದಾ ವರ್ತಸ್ವ ದುರ್ವೃತ್ತಿಷು ।**

**ಗೋಷ್ಠಾಧಿಷ್ಠಿತ ಗರ್ವಸಾರ ಸುರಭಿಪ್ರಾಣೇಶ ದುರ್ಗೇ ಪಥಿ**
**ದೃಷ್ಟವ್ಯಃ ಖಲು ಪೃಷ್ಠಲಂಬಿನಿ ಭರೇ ಭೂಯಾನಯಂ ತೇ ಮದಃ ॥ ೯೨**

-ಅನ್ಯೋಕ್ತಿಸ್ತಬಕ-೭೯

ಎಲೈ ಎತ್ತೇ! ಹಳ್ಳಿಯ ಮನೆಗಳ ಅಂಗಳಗಳಲ್ಲಿ ಗುಟರುಹಾಕು. ಸ್ವೇಚ್ಛೆಯಾಗಿ ಜನರಿಲ್ಲದ ಕಾಡಿನಲ್ಲಿ ಓಡಾಡು. ಕಾರಣವಿಲ್ಲದೇ ನದಿಯ ದಡವನ್ನು ಕೊಂಬುಗಳಿಂದ ತಿವಿದು ಕೆಡವು. ಬೇಕಾದಹಾಗೆ ಕೆಟ್ಟ ಅಭ್ಯಾಸಗಳನ್ನು ಮಾಡುತ್ತಾ ನಲಿ. ನೀನು ಹಸುಗಳ ದೊಡ್ಡಿಗೆ ಒಡೆಯ. ಹಸುಗಳಿಗೆ ಪ್ರಿಯ. ಗರ್ವವೇ ನಿನ್ನ ದೊಡ್ಡ ಗುಣ. ಆದರೆ ಕಠಿನವಾದ ದಾರಿಯಲ್ಲಿ ಬೆನ್ನಿನಮೇಲೆ ಭಾರ ಹೊತ್ತು ನಡೆಯುವಾಗ ನಿನ್ನ ಗರ್ವವೆಲ್ಲಿರುತ್ತದೆ, ಹೇಳು ನೋಡೋಣ!

**ಗತಂ ಚರಣಯೋರ್ಬಲಂ ಭುಜಬಲಂ ತಥಾ ದೃಗ್ಬಲಂ**
**ಬಲಂ ಶ್ರವಣಯೋಸ್ತಥಾ ದಶನಜಂ ಬಲಂ ವಾ ಪುನಃ ।**
**ಪರಂ ಪ್ರಕೃತಿದುಃಖದಾ ತದಪಿ ಜೀವಿತಾಶಾ ಭೃಶಂ**
**ನರಸ್ಯ ತು ದಿನೇ ದಿನೇ ಬಲವತೀ ಬಲಾಜ್ಜಾಯತೇ ॥ ೯೩**

-(ಜನಾರ್ದನಭಟ್ಟನ) ವೈರಾಗ್ಯಶತಕ-೮

ಕಾಲಲ್ಲಿ ಬಲವಿಲ್ಲ, ಕೈಯಲ್ಲಿ ಬಲವಿಲ್ಲ, ಕಣ್ಣಿನ ಶಕ್ತಿ ಉಡುಗಿತು. ಕಿವಿಯಲ್ಲಿ ಕೇಳುವ ಶಕ್ತಿ ಹೋಯಿತು. ಹಲ್ಲು ಶಿಥಿಲವಾಯಿತು. ಆದರೆ ಮನುಷ್ಯನಿಗೆ ಬದುಕುವ ಆಸೆ ಮಾತ್ರ ದಿನೇ ದಿನೇ ಪ್ರಬಲವಾಗುತ್ತಲೇ ಇದೆ!

**ಗಿರಿರ್ಮಹಾನ್ ಗಿರೇರಬ್ಧಿಃ ಮಹಾನಬ್ಧೇರ್ನಭೋ ಮಹತ್ ।**
**ನಭಸೋಽಪಿ ಮಹದ್ ಬ್ರಹ್ಮ ತತೋಽಪ್ಯಾಶಾ ಗರೀಯಸೀ ॥ ೯೪**

-ಕುವಲಯಾನಂದ

ಬೆಟ್ಟ ದೊಡ್ಡದು. ಅದಕ್ಕಿಂತ ಸಮುದ್ರ. ಸಮುದ್ರಕ್ಕಿಂತ ಆಕಾಶ ದೊಡ್ಡದು. ಆಕಾಶಕ್ಕಿಂತ ಬ್ರಹ್ಮವಸ್ತು ದೊಡ್ಡದು. ಅದಕ್ಕಿಂತಲೂ ಆಸೆ ದೊಡ್ಡದು!

**ಗುಣಗ್ರಾಮಾಭಿಸಂವಾದಿ ನಾಮಾಪಿ ಹಿ ಮಹಾತ್ಮನಾಂ ।**
**ಯಥಾ ಸುವರ್ಣಶ್ರೀಖಂಡ ರತ್ನಾಕರ ಸುಧಾಕರಾಃ ॥ ೯೫**

-ಪ್ರಸನ್ನರಾಘವ, ೧-೫

ಮಹಾತ್ಮರಾದವರ ಹೆಸರೂ ಸಹ ಅವರ ಉದಾತ್ತಗುಣಗಳನ್ನು ತಿಳಿಸುತ್ತದೆ. ಉದಾಹರಣೆಗೆ, ಚಿನ್ನದ ಹೆಸರು ಸುವರ್ಣ, ಅಂದರೆ ಆಕರ್ಷಕವಾದ ಬಣ್ಣವುಳ್ಳದ್ದು; ಗಂಧಕ್ಕೆ ಶ್ರೀಖಂಡ, ಅಂದರೆ ಗಂಧವೆಂಬ ಸಂಪತ್ತಿನಿಂದ ಕೂಡಿದ ಮರದ ತುಂಡು;

ಸಮುದ್ರವು ರತ್ನಾಕರ, ಅಂದರೆ ಶ್ರೇಷ್ಠವಾದ ವಸ್ತುಗಳನ್ನೊಳಗೊಂಡದ್ದು. ಚಂದ್ರನು ಸುಧಾಕರ, ಅಂದರೆ ಅಮೃತದಂತೆ ಆನಂದವನ್ನು ಕೊಡುವವನು.

**ಗುಣವಜ್ಜನಸಂಸರ್ಗಾದ್ಯಾತಿ ಸ್ವಲ್ಪೋಽಪಿ ಗೌರವಂ ।**
**ಪುಷ್ಪಮಾಲಾನುಷಂಗೇಣ ಸೂತ್ರಂ ಶಿರಸಿ ಧಾರ್ಯತೇ ॥** ೯೬

-ಸುಭಾಷಿತಸುಧಾನಿಧಿ

ಗುಣಶಾಲಿಗಳಾದ ಜನರ ಸಹವಾಸದಿಂದ ಸಣ್ಣವನೂ ಗೌರವವನ್ನು ಪಡೆಯುತ್ತಾನೆ. ಹೂವಿನ ಹಾರದ ಸಂಬಂಧದಿಂದ ನಾರನ್ನೂ ತಲೆಯಲ್ಲಿ ಮುಡಿಯುತ್ತಾರೆ.

**ಗುಣೇಷು ಯತ್ನಃ ಪುರುಷೇಣ ಕಾರ್ಯಃ**
**ನ ಕಿಂಚಿದಪ್ರಾಪ್ಯತಮಂ ಗುಣಾನಾಂ ।**
**ಗುಣಪ್ರಕರ್ಷಾದುಡುಪೇನ ಶಂಭೋಃ**
**ಅಲಂಘ್ಯಮುಲ್ಲಂಘಿತಮುತ್ತಮಾಂಗಮ್ ॥** ೯೭

-ಮೃಚ್ಛಕಟಿಕ, ೪-೨೩

ಯಾರೇ ಆಗಲಿ ಹೆಚ್ಚು ಗುಣಗಳನ್ನು ಸಂಪಾದಿಸಬೇಕು. ಗುಣಗಳಿಂದ ಸಾಧ್ಯವಾಗದ ಕೆಲಸವಿಲ್ಲ. ಚಂದ್ರನು ತನ್ನ ಹೊಳಪು ಮೊದಲಾದ ಗುಣಗಳಿಂದ ಯಾರೂ ಮೀರಲಾಗದ ಈಶ್ವರನ ತಲೆಯನ್ನೇ ಹತ್ತಿ ಕುಳಿತನು.

**ಗುರುಲಾಘವಮರ್ಥಾನಾಮಾರಂಭೇ ಕರ್ಮಣಾಂ ಫಲಂ ।**
**ದೋಷಂ ವಾ ಯೋ ನ ಜಾನಾತಿ ಸ ಬಾಲ ಇತಿ ಹೋಚ್ಯತೇ ॥**೯೮

-ರಾಮಾಯಣ, ಅಯೋಧ್ಯಾ, ೬೩-೭

ಕಾರ್ಯವನ್ನು ಆರಂಭಿಸುವಾಗ ಫಲದ ಹೆಚ್ಚುಕಡಿಮೆಗಳನ್ನೂ ಗುಣದೋಷಗಳನ್ನೂ ಯಾವನು ವಿಮರ್ಶಿಸುವುದಿಲ್ಲವೋ ಅವನು ಮೂಢನೆನಿಸುತ್ತಾನೆ.

**ಗುರೌ ಯತ್ರ ಪರೀವಾದೋ ನಿಂದಾ ವಾಪಿ ಪ್ರವರ್ತತೇ ।**
**ಕರ್ಣೌ ತತ್ರ ಪಿಧಾತವ್ಯೌ ಗಂತವ್ಯಂ ವಾ ತತೋಽನ್ಯತಃ ॥** ೯೯

-ಮನುಸ್ಮೃತಿ, ೨-೨೦೦

ಎಲ್ಲಿಯಾದರೂ ಯಾರಾದರೂ ಗುರುಗಳನ್ನು ಇಲ್ಲದ ಸಲ್ಲದ ನಿಂದೆಗಳನ್ನು ಮಾಡುತ್ತಿದ್ದರೆ ಕಿವಿಗಳನ್ನು ಮುಚ್ಚಿಕೊಳ್ಳಬೇಕು. ಅಲ್ಲಿಂದೆದ್ದು ಬೇರೆ ಕಡೆಗೆ ಹೋಗುವುದು ಒಳಿತು.

**ಗೃಹವಾಸಃ ಸುಖಾರ್ಥಾಯ ಪತ್ನೀಮೂಲಂ ಗೃಹೇ ಸುಖಂ ।**
**ಸಾ ಪತ್ನೀ ಯಾ ವಿನೀತಾ ಸ್ಯಾಚ್ಚಿತ್ತಜ್ಞಾ ವಶವರ್ತಿನೀ ॥** ೧೦೦

-ದಕ್ಷಸ್ಮೃತಿ, ೪-೭

ಮದುವೆ ಮಾಡಿಕೊಳ್ಳುವುದು ಸುಖಕ್ಕೋಸ್ಕರ. ಗೃಹಸ್ಥಾಶ್ರಮದಲ್ಲಿ ಸುಖಕ್ಕೆ ಹೆಂಡತಿಯೇ ಮೂಲ. ಯಾರು ಇಂಗಿತವನ್ನರಿತು ಹೇಳಿದಂತೆ ಕೇಳುತ್ತಾ ವಿನಯದಿಂದಿರುವಳೋ ಅವಳೇ ನಿಜವಾದ ಹೆಂಡತಿ.

**ಗೋಪಹೀನಾ ಯಥಾ ಗಾವಃ ವಿಲಯಂ ಯಾಂತ್ಯಪಾಲಿತಾಃ ।**
**ಏವಂ ನೃಪತಿಹೀನಾ ಹಿ ವಿಲಯಂ ಯಾಂತಿ ವೈ ಪ್ರಜಾಃ ॥ ೧೦೧**

-ಪ್ರತಿಮಾನಾಟಕ, ೩-೨೩

ಗೊಲ್ಲನಿಲ್ಲದೇಹೋದರೆ ಹಸುಗಳು ನೋಡಿಕೊಳ್ಳುವವರಿಲ್ಲದೆ ಚದರಿಹೋಗುತ್ತವೆ. ಅದೇ ರೀತಿ ರಾಜನಿಲ್ಲದ ಪ್ರಜೆಗಳು ರಕ್ಷಣೆಯಿಲ್ಲದೆ ನಾಶವಾಗುತ್ತಾರೆ.

**ಗಂಗಾದಿತೀರ್ಥೇಷು ವಸಂತಿ ಮತ್ಸ್ಯಾಃ**
**ದೇವಾಲಯೇ ಪಕ್ಷಿಗಣಾಶ್ಚ ನಿತ್ಯಂ ।**
**ತೇ ಜ್ಞಾನಹೀನಾ ನ ಫಲಂ ಲಭಂತೇ**
**ತೀರ್ಥಾನಿ ದೇವಾಯತನಾನಿ ಭಾವಾಃ ॥ ೧೦೨**

ಗಂಗೆ ಮೊದಲಾದ ಪುಣ್ಯತೀರ್ಥಗಳಲ್ಲಿ ಮೀನುಗಳು ಇರುತ್ತವೆ. ದೇವಾಲಯದಲ್ಲಿ ಹಕ್ಕಿಗಳು ಗೂಡು ಕಟ್ಟಿಕೊಂಡಿರುತ್ತವೆ. ಅವುಗಳಿಗೆ ಜ್ಞಾನವಿಲ್ಲ. ಅವು ಫಲವನ್ನು ಪಡೆಯಲಾರವು. ಒಳ್ಳೆಯ ಭಾವನೆಯೇ ಪುಣ್ಯತೀರ್ಥ ಮತ್ತು ದೇವಾಲಯವೆನಿಸುತ್ತದೆ.

**ಚೀಯತೇ ಬಾಲಿಶಸ್ಯಾಽಪಿ ಸತ್ಕ್ಷೇತ್ರಪತಿತಾ ಕೃಷಿಃ ।**
**ನ ಶಾಲೇಃ ಸ್ತಂಬಕರಿತಾ ವಪ್ತುರ್ಗುಣಮಪೇಕ್ಷತೇ ॥ ೧೦೩**

-ಮುದ್ರಾರಾಕ್ಷಸ, ೧-೩

ರೈತನು ಮೂರ್ಖನಾಗಿದ್ದರೂ ಭೂಮಿಯು ಫಲವತ್ತಾಗಿದ್ದರೆ ಬೇಸಾಯವು ಒಳ್ಳೆ ಫಲವನ್ನು ಕೊಡುತ್ತದೆ. ಭತ್ತದ ಪೈರು ಸೊಂಪಾಗಿ ಬೆಳೆದು ಹೆಚ್ಚು ತೆನೆಯನ್ನು ಬಿಡಲು ಬಿತ್ತುವವನ ಒಳ್ಳೆಯ ಗುಣ ಬೇಕಿಲ್ಲ.

**ಛನ್ನಂ ದೋಷಮುದಾಹರಂತಿ ಕುಪಿತಾ ನ್ಯಾಯೇನ ದೂರೀಕೃತಾಃ**
**ಸ್ವಾನ್ ದೋಷಾನ್ ಕಥಯಂತಿ ನಾಧಿಕರಣೇ ಸಂತೋಽಪಿ ನಷ್ಟಾ ಧ್ರುವಂ ।**
**ಯೇ ಪಕ್ಷಾಪರಪಕ್ಷದೋಷಸಹಿತಾಃ ಪಾಪಾನಿ ಸಂಕುರ್ವತೇ**
**ಸಂಕ್ಷೇಪಾದಪವಾದ ಏವ ಸುಲಭೋ ದ್ರಷ್ಟುರ್ಗುಣೋ ದೂರತಃ ॥ ೧೦೪**

-ಮೃಚ್ಛಕಟಿಕ, ೯-೪

ನ್ಯಾಯವನ್ನು ಗಮನಿಸದೆ ಸಿಟ್ಟಿನಿಂದ ತಪ್ಪನ್ನು ಮರೆಮಾಚುತ್ತಾರೆ. ದೊಡ್ಡವರೂ ಸಹ ನೀತಿಯಿಲ್ಲದೆ ತಮ್ಮ ಅಪರಾಧಗಳನ್ನು ನ್ಯಾಯಾಲಯದಲ್ಲಿ ಹೇಳುವುದಿಲ್ಲ. ಪಕ್ಷ ಮತ್ತು ಪ್ರತಿಪಕ್ಷಗಳಿಗೆ ಸೇರಿಕೊಂಡು ಪಾಪಗಳನ್ನು ಮಾಡುತ್ತಾರೆ. ಇದರಿಂದ ನ್ಯಾಯಾಧಿಪತಿಗೆ ಅಪವಾದವೇ ಹೊರತು ಅವನ ಗುಣಗಳಿಗೆ ಬೆಲೆಯೇ ಇಲ್ಲ.

**ಜಟಾಭಾರಾಜಿನೈರ್ಯುಕ್ತಾ ದಾಂಭಿಕಾ ವೇಷಧಾರಿಣಃ ।**
**ಭ್ರಮಂತಿ ಜ್ಞಾನಿವಲ್ಲೋಕೇ ಭ್ರಾಮಯಂತಿ ಜನಾನಪಿ ॥ ೧೦೫**

-ಗರುಡಪುರಾಣ, ೧೬-೬೩

ಜಟೆಗಳು, ಕೃಷ್ಣಾಜಿನ ಹೊತ್ತು ಸಂನ್ಯಾಸ ವೇಷ ಧರಿಸಿ ಡಾಂಬಿಕವಾಗಿ ಲೋಕದಲ್ಲಿ ಜ್ಞಾನಿಗಳಂತೆ ಸಂಚರಿಸುತ್ತಾ ಜನಗಳನ್ನೂ ಮೋಸಗೊಳಿಸುತ್ತಾರೆ.

**ಜ್ವಲತಿ ಚಲಿತೇಂಧನೋಗ್ನಿಃ ವಿಪ್ರಕೃತಃ ಪನ್ನಗಃ ಫಣಾಂ ಕುರುತೇ ।**
**ಪ್ರಾಯಃ ಸ್ವಂ ಮಹಿಮಾನಂ ಕೋಪಾತ್ ಪ್ರತಿಪದ್ಯತೇ ಜಂತುಃ ॥೧೦೬**

-ಅಭಿಜ್ಞಾನಶಾಕುಂತಲ, ೬-೩೧

ಸೌದೆಗಳನ್ನು ಸ್ವಲ್ಪ ಅಲುಗಾಡಿಸಿದರೆ ಬೆಂಕಿಯು ಚೆನ್ನಾಗಿ ಉರಿಯುತ್ತದೆ. ತುಳಿದರೆ ಅಥವಾ ಹೆದರಿಸಿದರೆ ಹಾವು ಹೆಡೆಯನ್ನು ಬಿಚ್ಚುತ್ತದೆ. ಪ್ರಾಣಿ ಅಥವಾ ಮನುಷ್ಯನು ಸಿಟ್ಟು ಬಂದಾಗ ತನ್ನ ಶಕ್ತಿಯನ್ನು ತೋರಿಸುತ್ತಾನೆ.

**ಜಾತಿವಿದ್ಯಾವಯಃಶಕ್ತಿರಾರೋಗ್ಯಂ ಬಹುಪಕ್ಷತಾ ।**
**ಅರ್ಥಿತ್ವಂ ವಿತ್ತಸಂಪತ್ತಿರಷ್ಟಾವೇತೇ ವರೇ ಗುಣಾಃ ॥ ೧೦೭**

-ಬೃಹತ್‌ಪರಾಶರಸ್ಮೃತಿ, ೬-೧೮

ಉತ್ತಮ ಕುಲ, ವಿದ್ಯೆ, ಯೌವನ, ಶಕ್ತಿ, ಆರೋಗ್ಯ, ಎಲ್ಲರ ಪ್ರೀತಿಗೆ ಪಾತ್ರ ನಾಗಿರುವುದು, ಮದುವೆಯಾಗಬೇಕೆಂಬ ಇಚ್ಛೆ, ಹಣ-ಇವು ವರನಲ್ಲಿರಬೇಕಾದ ಗುಣಗಳು.

**ಜೀರ್ಯಂತಿ ಜೀರ್ಯತಃ ಕೇಶಾ ದಂತಾ ಜೀರ್ಯಂತಿ ಜೀರ್ಯತಃ ।**
**ಚಕ್ಷುಃಶ್ರೋತ್ರೇ ಚ ಜೀರ್ಯೇತೇ ತೃಷ್ಣೈಕಾ ತು ನ ಜೀರ್ಯತೇ ॥೧೦೮**

-ಮಹಾಭಾರತ, ಅನು. ೭-೨೪

ವಯಸ್ಸಾದಂತೆ ಕೇಶಗಳು ಕ್ಷಯಿಸುತ್ತವೆ. ಹಲ್ಲುಗಳು ಉದರುತ್ತವೆ. ಕಣ್ಣು ಕಿವಿಗಳ ಶಕ್ತಿ ನಶಿಸುತ್ತದೆ. ಆದರೆ ಆಸೆಯೊಂದೇ ಕ್ಷೀಣಿಸುವುದಿಲ್ಲ.

ಮದುವೆ ಮಾಡಿಕೊಳ್ಳುವುದು ಸುಖಕ್ಕೋಸ್ಕರ. ಗೃಹಸ್ಥಾಶ್ರಮದಲ್ಲಿ ಸುಖಕ್ಕೆ ಹೆಂಡತಿಯೇ ಮೂಲ. ಯಾರು ಇಂಗಿತವನ್ನರಿತು ಹೇಳಿದಂತೆ ಕೇಳುತ್ತಾ ವಿನಯದಿಂದಿರುವಳೋ ಅವಳೇ ನಿಜವಾದ ಹೆಂಡತಿ.

**ಗೋಪಹೀನಾ ಯಥಾ ಗಾವಃ ವಿಲಯಂ ಯಾಂತ್ಯಪಾಲಿತಾಃ ।**
**ಏವಂ ನೃಪತಿಹೀನಾ ಹಿ ವಿಲಯಂ ಯಾಂತಿ ವೈ ಪ್ರಜಾಃ ॥ ೧೦೧**
-ಪ್ರತಿಮಾನಾಟಕ, ೩-೨೩

ಗೊಲ್ಲನಿಲ್ಲದೇಹೋದರೆ ಹಸುಗಳು ನೋಡಿಕೊಳ್ಳುವವರಿಲ್ಲದೆ ಚದರಿಹೋಗುತ್ತವೆ. ಅದೇ ರೀತಿ ರಾಜನಿಲ್ಲದ ಪ್ರಜೆಗಳು ರಕ್ಷಣೆಯಿಲ್ಲದೆ ನಾಶವಾಗುತ್ತಾರೆ.

**ಗಂಗಾದಿತೀರ್ಥೇಷು ವಸಂತಿ ಮತ್ಸ್ಯಾಃ**
**ದೇವಾಲಯೇ ಪಕ್ಷಿಗಣಾಶ್ಚ ನಿತ್ಯಂ ।**
**ತೇ ಜ್ಞಾನಹೀನಾ ನ ಫಲಂ ಲಭಂತೇ**
**ತೀರ್ಥಾನಿ ದೇವಾಯತನಾನಿ ಭಾವಾಃ ॥ ೧೦೨**

ಗಂಗೆ ಮೊದಲಾದ ಪುಣ್ಯತೀರ್ಥಗಳಲ್ಲಿ ಮೀನುಗಳು ಇರುತ್ತವೆ. ದೇವಾಲಯದಲ್ಲಿ ಹಕ್ಕಿಗಳು ಗೂಡು ಕಟ್ಟಿಕೊಂಡಿರುತ್ತವೆ. ಅವುಗಳಿಗೆ ಜ್ಞಾನವಿಲ್ಲ. ಅವು ಫಲವನ್ನು ಪಡೆಯಲಾರವು. ಒಳ್ಳೆಯ ಭಾವನೆಯೇ ಪುಣ್ಯತೀರ್ಥ ಮತ್ತು ದೇವಾಲಯವೆನಿಸುತ್ತದೆ.

**ಚೀಯತೇ ಬಾಲಿಶಸ್ಯಾಽಪಿ ಸತ್ಕ್ಷೇತ್ರಪತಿತಾ ಕೃಷಿಃ ।**
**ನ ಶಾಲೇಃ ಸ್ತಂಬಕರಿತಾ ವಪ್ತುರ್ಗುಣಮಪೇಕ್ಷತೇ ॥ ೧೦೩**
-ಮುದ್ರಾರಾಕ್ಷಸ, ೧-೩

ರೈತನು ಮೂರ್ಖನಾಗಿದ್ದರೂ ಭೂಮಿಯು ಫಲವತ್ತಾಗಿದ್ದರೆ ಬೇಸಾಯವು ಒಳ್ಳೆ ಫಲವನ್ನು ಕೊಡುತ್ತದೆ. ಭತ್ತದ ಪೈರು ಸೊಂಪಾಗಿ ಬೆಳೆದು ಹೆಚ್ಚು ತೆನೆಯನ್ನು ಬಿಡಲು ಬಿತ್ತುವವನ ಒಳ್ಳೆಯ ಗುಣ ಬೇಕಿಲ್ಲ.

**ಛನ್ನಂ ದೋಷಮುದಾಹರಂತಿ ಕುಪಿತಾ ನ್ಯಾಯೇನ ದೂರೀಕೃತಾಃ**
**ಸ್ವಾನ್ ದೋಷಾನ್ ಕಥಯಂತಿ ನಾಧಿಕರಣೇ ಸಂತೋಽಪಿ ನಷ್ಟಾ ಧ್ರುವಂ ।**
**ಯೇ ಪಕ್ಷಾಪರಪಕ್ಷದೋಷಸಹಿತಾಃ ಪಾಪಾನಿ ಸಂಕುರ್ವತೇ**
**ಸಂಕ್ಷೇಪಾದಪವಾದ ಏವ ಸುಲಭೋ ದ್ರಷ್ಟುರ್ಗುಣೋ ದೂರತಃ ॥ ೧೦೪**
-ಮೃಚ್ಛಕಟಿಕ, ೯-೪

ನ್ಯಾಯವನ್ನು ಗಮನಿಸದೆ ಸಿಟ್ಟಿನಿಂದ ತಪ್ಪನ್ನು ಮರೆಮಾಚುತ್ತಾರೆ. ದೊಡ್ಡವರೂ ಸಹ ನೀತಿಯಿಲ್ಲದೆ ತಮ್ಮ ಅಪರಾಧಗಳನ್ನು ನ್ಯಾಯಾಲಯದಲ್ಲಿ ಹೇಳುವುದಿಲ್ಲ. ಪಕ್ಷ ಮತ್ತು ಪ್ರತಿಪಕ್ಷಗಳಿಗೆ ಸೇರಿಕೊಂಡು ಪಾಪಗಳನ್ನು ಮಾಡುತ್ತಾರೆ. ಇದರಿಂದ ನ್ಯಾಯಾಧಿಪತಿಗೆ ಅಪವಾದವೇ ಹೊರತು ಅವನ ಗುಣಗಳಿಗೆ ಬೆಲೆಯೇ ಇಲ್ಲ.

**ಜಟಾಭಾರಾಜಿನೈರ್ಯುಕ್ತಾ ದಾಂಭಿಕಾ ವೇಷಧಾರಿಣಃ ।**
**ಭ್ರಮಂತಿ ಜ್ಞಾನಿವಲ್ಲೋಕೇ ಭ್ರಾಮಯಂತಿ ಜನಾನಪಿ ॥ ೧೦೫**

-ಗರುಡಪುರಾಣ, ೧೬-೬೩

ಜಟೆಗಳು, ಕೃಷ್ಣಾಜಿನ ಹೊತ್ತು ಸಂನ್ಯಾಸ ವೇಷ ಧರಿಸಿ ಡಾಂಬಿಕವಾಗಿ ಲೋಕದಲ್ಲಿ ಜ್ಞಾನಿಗಳಂತೆ ಸಂಚರಿಸುತ್ತಾ ಜನಗಳನ್ನೂ ಮೋಸಗೊಳಿಸುತ್ತಾರೆ.

**ಜ್ವಲತಿ ಚಲಿತೇಂಧನೋಗ್ನಿಃ ವಿಪ್ರಕೃತಃ ಪನ್ನಗಃ ಫಣಾಂ ಕುರುತೇ ।**
**ಪ್ರಾಯಃ ಸ್ವಂ ಮಹಿಮಾನಂ ಕೋಪಾತ್ ಪ್ರತಿಪದ್ಯತೇ ಜಂತುಃ ॥೧೦೬**

-ಅಭಿಜ್ಞಾನಶಾಕುಂತಲ, ೬-೩೧

ಸೌದೆಗಳನ್ನು ಸ್ವಲ್ಪ ಅಲುಗಾಡಿಸಿದರೆ ಬೆಂಕಿಯು ಚೆನ್ನಾಗಿ ಉರಿಯುತ್ತದೆ. ತುಳಿದರೆ ಅಥವಾ ಹೆದರಿಸಿದರೆ ಹಾವು ಹೆಡೆಯನ್ನು ಬಿಚ್ಚುತ್ತದೆ. ಪ್ರಾಣಿ ಅಥವಾ ಮನುಷ್ಯನು ಸಿಟ್ಟು ಬಂದಾಗ ತನ್ನ ಶಕ್ತಿಯನ್ನು ತೋರಿಸುತ್ತಾನೆ.

**ಜಾತಿವಿದ್ಯಾವಯಃಶಕ್ತಿರಾರೋಗ್ಯಂ ಬಹುಪಕ್ಷತಾ ।**
**ಅರ್ಥಿತ್ವಂ ವಿತ್ತಸಂಪತ್ತಿರಷ್ಟಾವೇತೇ ವರೇ ಗುಣಾಃ ॥ ೧೦೭**

-ಬೃಹತ್‌ಪರಾಶರಸ್ಮೃತಿ, ೬-೧೮

ಉತ್ತಮ ಕುಲ, ವಿದ್ಯೆ, ಯೌವನ, ಶಕ್ತಿ, ಆರೋಗ್ಯ, ಎಲ್ಲರ ಪ್ರೀತಿಗೆ ಪಾತ್ರ ನಾಗಿರುವುದು, ಮದುವೆಯಾಗಬೇಕೆಂಬ ಇಚ್ಛೆ, ಹಣ-ಇವು ವರನಲ್ಲಿರಬೇಕಾದ ಗುಣಗಳು.

**ಜೀರ್ಯಂತಿ ಜೀರ್ಯತಃ ಕೇಶಾ ದಂತಾ ಜೀರ್ಯಂತಿ ಜೀರ್ಯತಃ ।**
**ಚಕ್ಷುಃಶ್ರೋತ್ರೇ ಚ ಜೀರ್ಯೇತೇ ತೃಷ್ಣೈಕಾ ತು ನ ಜೀರ್ಯತೇ ॥೧೦೮**

-ಮಹಾಭಾರತ, ಅನು. ೭-೨೪

ವಯಸ್ಸಾದಂತೆ ಕೇಶಗಳು ಕ್ಷಯಿಸುತ್ತವೆ. ಹಲ್ಲುಗಳು ಉದರುತ್ತವೆ. ಕಣ್ಣು ಕಿವಿಗಳ ಶಕ್ತಿ ನಶಿಸುತ್ತದೆ. ಆದರೆ ಆಸೆಯೊಂದೇ ಕ್ಷೀಣಿಸುವುದಿಲ್ಲ.

**ಜೀವಂತೋಽಪಿ ಮೃತಾಃ ಪಂಚ ಶ್ರೂಯಂತೇ ಕಿಲ ಭಾರತೇ ।**
**ದರಿದ್ರೋ ವ್ಯಾಧಿತೋ ಮೂರ್ಖಃ ಪ್ರವಾಸೀ ನಿತ್ಯಸೇವಕಃ ॥೧೦೯**

-ಪಂಚತಂತ್ರ, ಮಿತ್ರಭೇದ-೨೮೯

ಬಡವ, ರೋಗಿ, ಮೂರ್ಖ, ಪಯಣಿಗ, ನಿತ್ಯಸೇವಕ ಇವರು ಐವರೂ ಬದುಕಿದ್ದರೂ ಸತ್ತಂತೆಯೇ ಎಂದು ಭಾರತದಲ್ಲಿ (ಕೇಳುತ್ತೇವೆ) ತಿಳಿಯುತ್ತೇವೆ.

**ಜ್ಯೌತಿಷಂ ಜಲದೇ ಮಿಥ್ಯಾ ಮಿಥ್ಯಾ ಶ್ವಾಸಿನಿ ವೈದ್ಯಕಂ ।**
**ಯೋಗೋ ಬಹ್ವಶನೇ ಮಿಥ್ಯಾ ಮಿಥ್ಯಾ ಜ್ಞಾನಂ ಚ ಮದ್ಯಪೇ ॥೧೧೦**

-ಸಮಯೋಚಿತಪದ್ಯಮಾಲಿಕಾ

ಮೋಡದ ವಿಷಯದಲ್ಲಿ ಜ್ಯೋತಿಃಶಾಸ್ತ್ರ ಸುಳ್ಳಾಗುತ್ತದೆ. ಉಬ್ಬಸ ರೋಗದಲ್ಲಿ ವೈದ್ಯಶಾಸ್ತ್ರ ಸುಳ್ಳಾಗುತ್ತದೆ. ಹೊಟ್ಟೆಬಾಕನಲ್ಲಿ ಯೋಗ ಸುಳ್ಳು. ಹೆಂಡಕುಡುಕನಲ್ಲಿ ಜ್ಞಾನ ಸುಳ್ಳು-ವ್ಯರ್ಥ.

**ಜ್ಯೌತಿಷಂ ವ್ಯವಹಾರಂ ಚ ಪ್ರಾಯಶ್ಚಿತ್ತಂ ಚಿಕಿತ್ಸಿತಂ ।**
**ಅಜಾನನ್ ಯೋ ನರೋ ಬ್ರೂಯಾತ್ ಸಾಹಸಂ ಕಿಮತಃ ಪರಂ ॥ ೧೧೧**

-ಬೃಹತ್‌ಪರಾಶರಸ್ಮೃತಿ, ೮-೮೩

ಯಾರು ಓದದೆ ಇದ್ದರೂ, ಜ್ಯೋತಿಷ, ನ್ಯಾಯ, ಪ್ರಾಯಶ್ಚಿತ್ತ ಮತ್ತು ವೈದ್ಯ ಹೇಳುತ್ತಾನೆಯೋ ಇದಕ್ಕಿಂತಲೂ ದೊಡ್ಡ ಅಪರಾಧವಿಲ್ಲ.

**ತತೋಽನೃತಂ ಮದಂ ಕಾಮಂ ರಜೋ ವೈರಂ ಚ ಪಂಚಮಂ ।**
**ಅಮೂನಿ ಪಂಚಸ್ಥಾನಾನಿ ಹ್ಯಧರ್ಮಪ್ರಭವಃ ಕಲಿಃ ॥ ೧೧೨**

-ಭಾಗವತ, ೧-೧೭-೩೯, ೪೦

ಕಲಿಯು ಅಧರ್ಮಕ್ಕೆ ಮೂಲ. ಅದಕ್ಕೆ ಐದು ಸ್ಥಾನಗಳು, ಅವು ಯಾವುವೆಂದರೆ- ಸುಳ್ಳು, ಮದ, ಕಾಮ, ರಜಸ್ಸು ಮತ್ತು ದ್ವೇಷ.

**ತಪಃ ಪರಂ ಕೃತಯುಗೇ ತ್ರೇತಾಯಾಂ ಜ್ಞಾನಮುಚ್ಯತೇ ।**
**ದ್ವಾಪರೇ ಯಜ್ಞಮಿತ್ಯೂಚುಃ ದಾನಮೇಕಂ ಕಲೌ ಯುಗೇ ॥ ೧೧೩**

-ಪರಾಶರಸ್ಮೃತಿ, ೧-೨೩

ಕೃತಯುಗದಲ್ಲಿ ತಪಸ್ಸು ಶ್ರೇಷ್ಠ. ತ್ರೇತಾಯುಗದಲ್ಲಿ ಜ್ಞಾನ ಶ್ರೇಷ್ಠ. ದ್ವಾಪರದಲ್ಲಿ ಯಜ್ಞ. ಕಲಿಯುಗದಲ್ಲಿ ದಾನವೇ ಶ್ರೇಷ್ಠ.

**ತಮಾಂಸಿ ಧ್ವಂಸಂತೇ ಪರಿಣಮತಿ ಭೂಯಾನುಪಶಮಃ**
**ಸಕೃತ್ಸಂವಾದೇಽಪಿ ಪ್ರಥತ ಇಹ ಚಾಮುತ್ರ ಚ ಶುಭಂ ।**
**ಅಥ ಪ್ರತ್ಯಾಸಂಗಃ ಕಮಪಿ ಮಹಿಮಾನಂ ವಿತರತಿ**
**ಪ್ರಸನ್ನಾನಾಂ ವಾಚಃ ಫಲಮಪರಿಮೇಯಂ ಪ್ರಸುವತೇ ॥ ೧೧೪**

-ಮಹಾವೀರಚರಿತ, ೧-೧೨

ಮಹಾತ್ಮರ ಜೊತೆಯಲ್ಲಿ ಸೇರಿದರೆ ಪಾಪಗಳು ನಾಶವಾಗುತ್ತವೆ. ಮನಸ್ಸಿಗೆ ಶಾಂತಿಯುಂಟಾಗುತ್ತದೆ. ಒಂದೇ ಸಲ ಮಾತನಾಡಿದರೂ ಈ ಲೋಕದಲ್ಲಿ ಪರಲೋಕದಲ್ಲಿ ಒಳ್ಳೆಯದಾಗುತ್ತದೆ. ಅವರ ಸಹವಾಸ ಎಲ್ಲೆಯಿಲ್ಲದಷ್ಟು ಮಹಿಮೆಯನ್ನು ಕೊಡುತ್ತದೆ. ಅವರು ಸಂತೋಷದಿಂದ ಮಾತನಾಡಿದರೆ ಮಿತಿಯಿಲ್ಲದಷ್ಟು ಫಲವನ್ನುಂಟುಮಾಡುತ್ತದೆ.

**ತಯೋರ್ನಿತ್ಯಂ ಪ್ರಿಯಂ ಕುರ್ಯಾತ್ ಆಚಾರ್ಯಸ್ಯ ಚ ಸರ್ವದಾ ।**
**ತೇಷ್ವೇವ ತ್ರಿಷು ತುಷ್ಟೇಷು ತಪಃ ಸರ್ವಂ ಸಮಾಪ್ಯತೇ ॥ ೧೧೫**

-ಮನುಸ್ಮೃತಿ, ೨-೨೨೮

ತಾಯಿತಂದೆಗಳಿಗೆ ಆಚಾರ್ಯರಿಗೆ ಪ್ರಿಯವಾದ ಕೆಲಸವನ್ನು ಮಾಡಬೇಕು. ಅವರು ಮೂರು ಜನ ತೃಪ್ತರಾದರೆ ಎಲ್ಲ ಬಗೆಯ ತಪಸ್ಸನ್ನು ಮಾಡಿದಂತೆಯೇ.

**ತರುಣೀಪ್ರಭುತಾ ಗೇಹೇ ಶ್ಯಾಲಕೋ ಬುದ್ಧಿದಾಯಕಃ ।**
**ಕನ್ಯಾವಿಕ್ರಯಿಣೋ ಲೋಭಾದ್ದಂಪತೀನಾಂ ಚ ಕಲ್ಕಸಮ್ ॥ ೧೧೬**

-ಭಾಗವತ ಮಹಾತ್ಮ್ಯ, ೧-೩೩

ಕಲಿಯುಗದಲ್ಲಿ, ಮನೆಯಲ್ಲಿ ಹೆಂಗಸಿನ ಯಾಜಮಾನ್ಯ, ಭಾವಮೈದುನನ ಬುದ್ಧಿವಾದ, ದುರಾಸೆಯಿಂದ ಕನ್ಯೆಯರ ಮಾರಾಟ ಮತ್ತು ದಂಪತಿಗಳ ಜಗಳ ಕಂಡು ಬರುತ್ತವೆ.

**ತ್ಯಾಜ್ಯಂ ಧೈರ್ಯಂ ವಿಧುರೇಽಪಿ ಕಾಲೇ**
**ಧೈರ್ಯಾತ್ಕದಾಚಿದ್ಗತಿಮಾಪ್ನುಯಾತ್ಸಃ ।**
**ಯಥಾ ಸಮುದ್ರೇಽಪಿ ಚ ಪೋತಭಂಗೇ**
**ಸಾಂಯಾತ್ರಿಕೋ ವಾಂಛತಿ ತರ್ತುಮೇವ ॥ ೧೧೭**

-ಪಂಚತಂತ್ರ, ಮಿತ್ರಭೇದ-೩೪೫

ಸಮುದ್ರದಲ್ಲಿ ಹಡಗು ಮುರಿದರೂ ನಾವಿಕನು ಸಾಗರವನ್ನು ಹೇಗೆ ದಾಟಲು ಬಯಸುವನೋ ಹಾಗೆ ಕಷ್ಟಕಾಲದಲ್ಲಿಯೂ ಧೈರ್ಯವನ್ನು ಎಂದೂ ಬಿಡಬಾರದು. ಧೈರ್ಯದಿಂದ ಎಂದಾದರೂ ಅವನು ಒಳ್ಳೆಯ ಗತಿಯನ್ನು ಹೊಂದಿಯಾನು!

ತಾಡಿತಸ್ಯ ಹಿ ಯೋಧಸ್ಯ ಶ್ಲಾಘನೀಯೇನ ಕರ್ಮಣಾ ।
ಅಕಾಲಾಂತರಿತಾ ಪೂಜಾ ನಾಶಯತ್ಯೇವ ವೇದನಾಮ್ ॥ ೧೧೮
-ಪಂಚರಾತ್ರ, ೨-೨೮

ಹೊಗಳಲು ಯೋಗ್ಯವಾದ ವೀರಕರ್ಮವನ್ನು ಕಾಳಗದಲ್ಲಿ ಮಾಡುವಾಗ ಗಾಯಗೊಂಡ ಸೈನಿಕನಿಗೆ, ಯುದ್ಧ ಮುಗಿದ ಕೂಡಲೇ ವಿಳಂಬವಿಲ್ಲದೆ ಮಾಡಿದ ಸನ್ಮಾನವು ಅವನ ನೋವನ್ನು ಹೋಗಲಾಡಿಸುವುದು.

ತಿರಸ್ಕುರ್ವಂತಿ ಕೃತಿನಸ್ತಾಪಯಂತಿ ತಪಸ್ವಿನಃ ।
ಆತ್ಮಾನಮಪಿ ಹಿಂಸಂತಿ ಕ್ರೋಧಾಂಧಾಃ ಕಿಮತಃಪರಂ ॥ ೧೧೯
-ಸುಭಾಷಿತಸುಧಾನಿಧಿ

ಕೋಪದಿಂದ ಕುರುಡಾದವರು ಕೆಲಸ ಮಾಡಿದವರನ್ನು ತಿರಸ್ಕರಿಸುತ್ತಾರೆ; ತಪಸ್ವಿಗಳನ್ನು ನೋಯಿಸುತ್ತಾರೆ; ತಮ್ಮನ್ನು ಹಿಂಸೆಗೊಳಪಡಿಸಿಕೊಳ್ಳುತ್ತಾರೆ. ಇದಕ್ಕಿಂತ ಮತ್ತೇನು?

ತುಂಗತ್ವಮಿತರಾ ನಾದ್ರೌ ನೇದಂ ಸಿಂಧಾವಗಾಧತಾ ।
ಅಲಂಘನೀಯತಾಹೇತುರುಭಯಂ ತನ್ಮನಸ್ವಿನಿ ॥ ೧೨೦
-ಶಿಶುಪಾಲವಧ, ೨-೪೮

ಬೆಟ್ಟವು ತುಂಬಾ ಎತ್ತರವಾಗಿದೆ. ಆದರೆ ಆಳವು ಅದರಲ್ಲಿಲ್ಲ. ಹಾಗೆಯೇ ಸಮುದ್ರವು ಆಳವಾಗಿದೆ. ಆದರೆ ಎತ್ತರವು ಅದರಲಿಲ್ಲ. ಮಾನವನಿಗೆ ತುಂಬಾ ಎತ್ತರವೂ ತುಂಬಾ ಆಳವೂ ದಾಟಲು ಸಾಧ್ಯವಿಲ್ಲ. ಅಭಿಮಾನಿಯಾದ ವೀರನಲ್ಲಿ ದಾಟಲಾಗದ ಇವೆರಡು ಗುಣಗಳೂ ಇವೆ.

ತುಲಾಶಾಸನಮಾನಾನಾಂ ಕೂಟಕೃನ್ನಾಣಕಸ್ಯ ಚ ।
ಏಭಿಶ್ಚ ವ್ಯವಹರ್ತಾ ಯಃ ಸ ದಾಪ್ಯೋ ದಮಮುತ್ತಮಮ್ ॥ ೧೨೧
-ಯಾಜ್ಞವಲ್ಕ್ಯ, ೨-೨೪೦

ತಕ್ಕಡಿ, ಶಾಸನ, ಅಳತೆ ಇವುಗಳಲ್ಲಿ ಮೋಸ ಮಾಡುವವನು, ಖೋಟಾ ನಾಣ್ಯ ಮಾಡುವವನು, ಇವುಗಳೊಡನೆ ವ್ಯವಹರಿಸುವವನು-ಇವರು ದಂಡಾರ್ಹರು.

ತುಲ್ಯೇऽಪರಾಧೇ ಸ್ವರ್ಭಾನುರ್ಭಾನುಮಂತಂ ಚಿರೇಣ ಯತ್ ।
ಹಿಮಾಂಶುಮಾಶುಗ್ರಸತೇ ತನ್ಮ್ರದಿಮ್ನಃಸ್ಫುಟಂ ಫಲಮ್ ॥ ೧೨೨
-ಶಿಶುಪಾಲವಧ, ೨-೪೯

ಸೂರ್ಯಚಂದ್ರರಿಬ್ಬರೂ ಮಾಡಿದ ತಪ್ಪು ಸಮ. ಆದರೂ ಅಪಕೃತನಾದ ರಾಹು ಸೂರ್ಯನನ್ನು ಬಹಳ ಕಾಲದ ನಂತರ ಅಪರೂಪವಾಗಿ ಹಿಡಿಯುತ್ತಾನೆ. ಆದರೆ ಚಂದ್ರನಿಗೆ ಆಗಾಗ ತೊಂದರೆ ಕೊಡುತ್ತಾನೆ. ಹೀಗೆ ಮೆತ್ತಗಿರುವವರು ಹೆಚ್ಚಾಗಿ ಅಪಮಾನಕ್ಕೆ ಗುರಿಯಾಗುವರು.

**ತೃಣಪರ್ಣೋದಕಾಹಾರಾಃ ಸತತಂ ವನವಾಸಿನಃ ।**
**ಜಂಬೂಕಾಖುಮೃಗಾದ್ಯಾಶ್ಚ ತಾಪಸಾಸ್ತೇ ಭವಂತಿ ಕಿಮ್ ॥ ೧೨೩**

-ಗರುಡಪುರಾಣ, ೧೬-೬೭

ಯಾವಾಗಲೂ ಕಾಡಿನಲ್ಲಿರುತ್ತಾ ಹುಲ್ಲು, ಎಲೆ, ನೀರು ಸೇವಿಸುತ್ತಾ ಇದ್ದ ಮಾತ್ರಕ್ಕೆ ತಪಸ್ವಿ ಎನಿಸುವುದಾದರೆ ನರಿ, ಇಲಿ, ಮೃಗ ಮೊದಲಾದುವುಗಳೂ ತಪಸ್ವಿಗಳೆನಿಸಬಹುದಲ್ಲವೆ?

**ತೃಣಾಲ್ಲಘುತರಸ್ತೂಲಸ್ತೂಲಾದಪಿ ಚ ಯಾಚಕಃ ।**
**ವಾಯುನಾ ಕಿಂ ನ ನೀತೋಽಸೌ ಮಾಮಯಂ ಪ್ರಾರ್ಥಯೇದಿತಿ ॥ ೧೨೪**

-ಸುಭಾಷಿತಸುಧಾನಿಧಿ

ಹುಲ್ಲಿಗಿಂತ ಹತ್ತಿ ಹಗುರ. ಹತ್ತಿಗಿಂತ ಯಾಚಕ ಹಗುರ. ಗಾಳಿ ಏಕೆ ಇವನನ್ನು ಹಾರಿಸಿಕೊಂಡು ಹೋಗಲಿಲ್ಲ? ನನ್ನನ್ನೂ ಎಲ್ಲಿ ಇವನು ಬೇಡುವನೋ ಎಂದು ಹಾರಿಸಿಕೊಂಡು ಹೋಗಿರಲಾರದು!

**ತೃಷ್ಣಯಾ ಚೇತ್ಪರಿತ್ಯಕ್ತೋ ಕೋ ದರಿದ್ರಃ ಕ ಈಶ್ವರಃ ।**
**ತಸ್ಯಾಶ್ಚೇತ್ಪ್ರಸರೋ ದತ್ತೋ ದಾಸ್ಯಂ ಚ ಶಿರಸಿ ಸ್ಥಿತಮ್ ॥ ೧೨೫**

-ಹಿತೋಪದೇಶ, ಮಿತ್ರಲಾಭ-೧೪೭

ಆಸೆಯೊಂದರಿಂದ ಬಿಡಲ್ಪಟ್ಟರೆ ಬಡವನಾರು? ಒಡೆಯನಾರು? ಅದು ಹರಡಲು ಅವಕಾಶ ಕೊಟ್ಟಿದ್ದೇ ಆದರೆ ದಾಸ್ಯ ತಲೆಗೆ ಕಟ್ಟಿದಂತೆಯೇ!

**ತೃಷ್ಣೇ ತ್ವಮಸಿ ರಾಗಾಂಧಾ ತ್ರಿಷು ಸ್ಥಾನೇಷು ರಜ್ಯಸಿ ।**
**ವ್ಯಾಧಿತೇಷ್ವನಪತ್ಯೇಷು ಜರಾಪರಿಣತೇಷು ಚ ॥ ೧೨೬**

-ಮಹಾಭಾರತ, ಸುಭಾಷಿತಸುಧಾನಿಧಿ

ಎಲೈ ಆಶೆಯೇ, ನೀನು ಪ್ರೀತಿಯಿಂದ ಕುರುಡಾಗಿದ್ದೀಯೆ. ರೋಗಕ್ಕೆ ತುತ್ತಾದವರು, ಮಕ್ಕಳಿಲ್ಲದವರು ಮತ್ತು ಮುಪ್ಪಿನಿಂದ ಹಣ್ಣಾದವರು-ಈ ಮೂರು ಕಡೆಗಳಲ್ಲಿಯೂ ತುಂಬಾ ಅನುರಾಗವನ್ನು ಹೊಂದಿರುವೆ.

ತೃಷ್ಣೇ ದೇವಿ ನಮಸ್ತುಭ್ಯಂ ಯಯಾ ವಿತ್ತಾನ್ವಿತಾ ಅಪಿ ।
ಅಕೃತ್ಯೇಷು ನಿಯೋಜ್ಯಂತೇ ಭ್ರಾಮ್ಯಂತೇ ದುರ್ಗಮೇಷ್ವಪಿ ॥ ೧೨೭

-ಪಂಚತಂತ್ರ, ಅಪರೀಕ್ಷಿತಕಾರಕ-೭೭

ಎಲೈ ಆಶಾದೇವಿ, ನಿನಗೆ ನಮಸ್ಕಾರ. ನಿನ್ನ ಪ್ರಭಾವದಿಂದ ಹಣವುಳ್ಳವರೂ ಮಾಡಬಾರದ ಕೆಲಸದಲ್ಲಿ ತೊಡಗುತ್ತಾರೆ; ಸಂಚಾರಮಾಡಲು ಕಷ್ಟವಾದ ಕಡೆಯಲ್ಲಿಯೂ ಅಲೆಯುತ್ತಾರೆ.

ತೇನಾಧೀತಂ ಶ್ರುತಂ ತೇನ ತೇನ ಸರ್ವಮನುಷ್ಠಿತಮ್ ।
ಯೇನಾಶಾಃ ಪೃಷ್ಠತಃಕೃತ್ವಾ ನೈರಾಶ್ಯಮವಲಂಬಿತಮ್ ॥ ೧೨೮

-ಹಿತೋಪದೇಶ, ಮಿತ್ರಲಾಭ-೧೧೧

ಆಶೆಗಳನ್ನೆಲ್ಲಾ ಹಿಂದಕ್ಕೆ ದೂಡಿ ಯಾವನು ಆಶೆಯಿಲ್ಲದಿರುವಿಕೆಯನ್ನು ಅವಲಂಬಿಸಿದ್ದಾನೆಯೋ ಅವನು ನಿಜವಾಗಿ ಹೆಚ್ಚು ಓದಿದವನು. ಅವನಿಂದ ಕೇಳ ಬೇಕಾದುದನ್ನು ಕೇಳಲ್ಪಟ್ಟಂತೆಯೇ! ಅವನಿಂದ ಎಲ್ಲವೂ ಆಚರಿಸಲ್ಪಟ್ಟಂತೆಯೇ!

ದವದಹನಜಟಾಲಜ್ವಾಲಜಾಲಾಹತಾನಾಂ
ಪರಿಗಳಿತಲತಾನಾಂ ಮ್ಲಾಯತಾಂ ಭೂರುಹಾಣಾಂ ।
ಅಯಿ ಜಲಧರ ಶೈಲಶ್ರೇಣಿಶೃಂಗೇಷು ತೋಯಂ
ವಿತರಸಿ ಬಹು ಕೋಽಯಂ ಶ್ರೀಮದಸ್ತಾವಕೀನಃ ॥ ೧೨೯

-ಭಾಮಿನೀವಿಲಾಸ, ೧-೩೪

ಕಾಡುಗಿಚ್ಚಿನ ಜ್ವಾಲೆಗಳಿಂದ ಅನೇಕ ವೃಕ್ಷಗಳು ಸುಟ್ಟುಹೋಗುತ್ತಿವೆ. ಬಳ್ಳಿಗಳು ನೆಲಕ್ಕೆ ಬಾಡಿ ಬಿದ್ದಿವೆ. ಆದರೂ ಎಲೈ ಮೋಡವೇ, ಇವನ್ನು ಲಕ್ಷಿಸದೆ ಕೇವಲ ಬೆಟ್ಟಗಳ ಸಾಲುಗಳಲ್ಲಿ ಮಾತ್ರ ಬೇಕಾದಷ್ಟು ಮಳೆ ಸುರಿಸುತ್ತಿರುವೆ. ಇದು ಉಚಿತವೆ? ಇದು ಕೇವಲ ನಿನ್ನ ಶ್ರೀಮಂತಿಕೆಯ ಕೊಬ್ಬಲ್ಲವೇ!

ದಾತೃಯಾಚಕಯೋರ್ಭೇದಃ ಕರಾಭ್ಯಾಮೇವ ದರ್ಶಿತಃ ।
ಏಕಸ್ಯ ಗಚ್ಛತಾಧಸ್ತಾದುಪರ್ಯನ್ಯಸ್ಯ ತಿಷ್ಠತಾ ॥ ೧೩೦

-ಬೃಹತ್ಕಥಾ

ಕೆಳಗೆ ನೀಡಿರುವ ಒಬ್ಬನ ಕೈಯಿಂದ ಹಾಗು ಮೇಲಿರುವ ಮತ್ತೊಬ್ಬನ ಕೈಯಿಂದ- ಹೀಗೆ ಈ ಎರಡು ಕೈಗಳಿಂದಲೇ ದಾನಿ ಮತ್ತು ಭಿಕ್ಷುಕರ ನಡುವಣ ಭೇದವು ಕಂಡು ಬರುತ್ತಿದೆ.

**ದಾನಾಯ ಲಕ್ಷ್ಮೀಃ ಸುಕೃತಾಯ ವಿದ್ಯಾ**
**ಚಿಂತಾ ಪರಬ್ರಹ್ಮವಿನಿಶ್ಚಯಾಯ ।**
**ಪರೋಪಕಾರಾಯ ವಚಾಂಸಿ ಯಸ್ಯ**
**ವಂದ್ಯಸ್ತ್ರಿಲೋಕೀತಿಲಕಃ ಸ ಏವ ॥ ೧೩೧**

-ಸುಭಾಷಿತರತ್ನಭಾಂಡಾಗಾರ

ಯಾರ ಹಣವು ದಾನಮಾಡುವುದಕ್ಕಾಗಿ, ವಿದ್ಯೆಯು ಒಳ್ಳೆಒಳ್ಳೆಯ ಕೆಲಸಗಳನ್ನು ಮಾಡುವುದಕ್ಕಾಗಿ, ಚಿಂತನೆಯು ಪರಬ್ರಹ್ಮವನ್ನು ತಿಳಿಯುವುದಕ್ಕಾಗಿ, ಮಾತು ಪರರ ಉಪಕಾರಕ್ಕಾಗಿ ಇರುತ್ತವೆಯೋ ಅವನೊಬ್ಬನೇ ಮೂರು ಲೋಕಗಳಿಗೂ ಶ್ರೇಷ್ಠ.

**ದ್ವಿಜೇಂದ್ರೋ ವಾ ಕಲಾಢ್ಯೋ ವಾ ಕಾಮಚಾರೀ ಭವೇದ್ಯದಿ ।**
**ನಿತ್ಯಂ ನಿಮಜ್ಜನ್ನಪ್ಯಬ್ಧೌ ನಾಂತಶ್ಶುದ್ಧೋ ಭವತ್ಯಲಂ ॥ ೧೩೨**

-ಸುಭಾಷಿತಸುಧಾನಿಧಿ

ಬ್ರಾಹ್ಮಣನಾಗಲೀ, ಶ್ರೇಷ್ಠಕಲಾವಿದನಾಗಲೀ ಮನಬಂದಂತೆ ನಡೆಯುವವನಾದರೆ ನಿತ್ಯವೂ ಸಮುದ್ರದಲ್ಲಿ ಮುಳುಗಿದರೂ ಸಾಕಷ್ಟು ಚಿತ್ತಶುದ್ಧಿ ಹೊಂದುವುದಿಲ್ಲ.

**ದೂರಸ್ಥಾನಾಮವಿದ್ಯಾನಾಂ ಮೋಕ್ಷಧರ್ಮಾನುಯಾಯಿನಾಂ ।**
**ಶೂರಾಣಾಂ ನಿರ್ಧನಾನಾಂ ಚ ನ ದೇಯಾ ಕನ್ಯಕಾ ಬುಧೈಃ ॥ ೧೩೩**

-ಬೃಹತ್‌ಪರಾಶರಸ್ಮೃತಿ, ೬-೨೬

ದೂರದಲ್ಲಿರುವವರಿಗೆ, ವಿದ್ಯಾಹೀನರಿಗೆ, ಮೋಕ್ಷದಲ್ಲಿ ಆಸಕ್ತಿಯಿರುವವರಿಗೆ, ವೀರಯೋಧರಿಗೆ, ಬಡವರಿಗೆ ತಿಳಿದವರು ಕನ್ಯೆಯನ್ನು ಕೊಡಬಾರದು.

**ದುರಾಚಾರೋ ಹಿ ಪುರುಷಃ ಲೋಕೇ ಭವತಿ ನಿಂದಿತಃ ।**
**ದುಃಖಭಾಗೀ ಚ ಸತತಂ ವ್ಯಾಧಿತೋಽಲ್ಪಾಯುರೇವ ಚ ॥ ೧೩೪**

-ಮನುಸ್ಮೃತಿ, ೪-೧೫೭

ಕೆಟ್ಟ ನಡತೆಯುಳ್ಳ ಮನುಷ್ಯನನ್ನು ಜನರು ನಿಂದಿಸುತ್ತಾರೆ. ಅವನು ಯಾವಾಗಲೂ ದುಃಖಿಯಾಗಿ, ರೋಗಿಯಾಗಿ, ಅಲ್ಪಾಯುವಾಗುತ್ತಾನೆ.

**ದ್ಯೂತಮೇತತ್ಪುರಾ ಕಲ್ಪೇ ದೃಷ್ಟಂ ವೈರಕರಂ ಮಹತ್ ।**
**ತಸ್ಮಾದ್ದ್ಯೂತಂ ನ ಸೇವೇತ ಹಾಸ್ಯಾರ್ಥಮಪಿ ಬುದ್ಧಿಮಾನ್ ॥ ೧೩೫**

ಮನುಸ್ಮೃತಿ, ೯-೨೨೭

ಹಿಂದಿನ ಕಾಲದಲ್ಲಿಯೂ ಜೂಜಾಟ ಬಹಳ ಹಗೆತನ ಜಗಳಗಳನ್ನುಂಟು ಮಾಡುತ್ತದೆ ಎಂದು ತಿಳಿದಿದೆ. ಆದುದರಿಂದ ಜಾಣನು ಪರಿಹಾಸಕ್ಕಾಗಿಯೂ ಸಹ ಜೂಜಾಡಬಾರದು.

**ದ್ಯೂತಾದನರ್ಥಃ ಸಂರಂಭೋ**
**ದ್ಯೂತಾತ್ ಸ್ನೇಹಕ್ಷಯೋ ಮಹಾನ್ ।**
**ಪಕ್ಷಾಣಾಂ ಚಾಪಿ ಮಹತಾಂ**
**ದ್ಯೂತಾದ್ಭೇದಃ ಪ್ರವರ್ತತೇ ॥** ೧೩೬

-ಸುಭಾಷಿತಸುಧಾನಿಧಿ

ಜೂಜಿನಿಂದ ಅನರ್ಥಕರವಾದ ಕೆಲಸ ಆರಂಭವಾಗುತ್ತದೆ; ಜೂಜಿನಿಂದ ಒಳ್ಳೆಯ ಸ್ನೇಹ ನಷ್ಟವಾಗುತ್ತದೆ. ದೊಡ್ಡ ಪಕ್ಷಗಳಲ್ಲಿಯೂ ಸಹ ಜೂಜಿನಿಂದ ಒಡಕು ಉಂಟಾಗುತ್ತದೆ.

**ಧನಕ್ಷಯಃ ಶಿಷ್ಟಗರ್ಹಾ ಸದಾಚಾರವಿವರ್ಜನಂ ।**
**ಶತ್ರುಭಿಃ ಪೀಡನಂ ಚೈವ ದ್ಯೂತಾಸಕ್ತಧಿಯಾಂ ನೃಣಾಮ್ ॥** ೧೩೭

-ಸುಭಾಷಿತಸುಧಾನಿಧಿ

ಜೂಜಿನಲ್ಲಿ ಆಸಕ್ತಿ ಹೊಂದಿರುವ ಮನುಷ್ಯರಿಗೆ ಹಣ ಹಾಳಾಗುವುದು ; ಸಜ್ಜನರಿಂದ ನಿಂದೆಯೊದಗುವುದು ; ಒಳ್ಳೆಯ ನಡತೆ ತಪ್ಪುವುದು ; ಮತ್ತು ಶತ್ರುಗಳಿಂದ ಹಿಂಸೆಯೂ ಸಹ ಸಂಭವಿಸುವುದು.

**ಧರ್ಮಶ್ಚ ಲೋಕದಂಭಾರ್ಥಂ ಪಾಷಂಡಾರ್ಥಂ ತಪಸ್ವಿನಃ ।**
**ವಿವಿಧಾ ವಾಗ್ವಂಚನಾರ್ಥಂ ಕಲೌ ಸತ್ಯಾನುಸಾರಿಣೀ ॥** ೧೩೮

-ಬೃಹತ್‌ಪರಾಶರಸ್ಮೃತಿ, ೧-೩೨

ಸನ್ಯಾಸಿಯ ಧರ್ಮಾಚರಣೆಯು ಕಲಿಯುಗದಲ್ಲಿ ಕೇವಲ ಜನಗಳಲ್ಲಿ ಗೌರವ ಪಡೆಯುವುದಕ್ಕೆ. ಸತ್ಯದಂತೆ ಆಡುವ ಎಲ್ಲ ಮಾತು ಮೋಸಮಾಡುವುದಕ್ಕಾಗಿ. ಇದು ಪಾಷಂಡತನವೇ ಸರಿ.

**ಧ್ಯಾನಮೇವ ಪರೋ ಧರ್ಮೋ ಧ್ಯಾನಮೇವ ಪರಂ ತಪಃ ।**
**ಧ್ಯಾನಮೇವ ಪರಂ ಶೌಚಂ ತಸ್ಮಾದ್ಧ್ಯಾನಪರೋ ಭವೇತ್ ॥** ೧೩೯

-ಅತ್ರಿಸ್ಮೃತಿ, ೪-೯

ಧ್ಯಾನವೇ ಶ್ರೇಷ್ಠವಾದ ಧರ್ಮ. ಧ್ಯಾನವು ಶ್ರೇಷ್ಠವಾದ ತಪಸ್ಸು. ಧ್ಯಾನವೇ ಒಳ್ಳೆಯ ಶೌಚ. ಆದುದರಿಂದ ಧ್ಯಾನವನ್ನು ಮಾಡಬೇಕು.

ನ ಕನ್ಯಾಯಾಃ ಪಿತಾ ವಿದ್ವಾನ್ ಗೃಹ್ಣೀಯಾತ್ ಶುಲ್ಕಮಣ್ವಪಿ ।
ಗೃಹ್ಣನ್ ಶುಲ್ಕಂ ಹಿ ಲೋಭೇನ ಸ್ಯಾನ್ನರೋಽಪತ್ಯವಿಕ್ರಯೀ ॥ ೧೪೦
-ಮನುಸ್ಮೃತಿ, ೩-೫೧

ವಿದ್ವಾಂಸನಾದ ಹೆಣ್ಣಿನ ತಂದೆಯು ಸ್ವಲ್ಪ ಶುಲ್ಕವನ್ನೂ ತೆಗೆದುಕೊಳ್ಳಬಾರದು. ಲೋಭದಿಂದ ತೆಗೆದುಕೊಂಡರೆ ಮಕ್ಕಳನ್ನು ಮಾರಿದಂತಾಗುತ್ತದೆ.

ನ ಚಾತ್ರಾತೀವ ಕರ್ತವ್ಯಂ ದೋಷದೃಷ್ಟಿಪರಂ ಮನಃ ।
ದೋಷೋ ಹ್ಯವಿದ್ಯಮಾನೋಽಪಿ ತಚ್ಚಿತ್ತಾನಾಂ ಪ್ರಕಾಶತೇ ॥೧೪೧
-ಶ್ಲೋಕವಾರ್ತಿಕ

ಮನಸ್ಸನ್ನು ಹೆಚ್ಚಾಗಿ ದೋಷದ ಕಡೆಗೆ ತಿರುಗಿಸುವುದು ಒಳ್ಳೆಯದಲ್ಲ. ದೋಷವಿಲ್ಲದಿದ್ದರೂ ಅದೇ ಮನಸ್ಸುಳ್ಳವರಿಗೆ ದೋಷವು ತೋರುತ್ತದೆ.

ನ ಜಾತು ಕಾಮಃ ಕಾಮಾನಾಮುಪಭೋಗೇನ ಶಾಮ್ಯತಿ ।
ಹವಿಷಾ ಕೃಷ್ಣವರ್ತ್ಮೇವ ಭೂಯ ಏವಾಭಿವರ್ಧತೇ ॥ ೧೪೨
-ಭಾಗವತ, ೧೯-೧೪

ಯಾವಾಗಲೂ ಕಾಮವು ಕಾಮಗಳನ್ನನುಭವಿಸುದರಿಂದ ಶಮನವಾಗುವುದಿಲ್ಲ. ಹವಿಸ್ಸಿನಿಂದ ಬೆಂಕಿಯು ಬೆಳಗುವಂತೆ, ಇನ್ನೂ ಹೆಚ್ಚಾಗಿ ವೃದ್ಧಿಹೊಂದುತ್ತದೆ.

ನ ತಥಾಸಿಸ್ತಥಾ ತೀಕ್ಷ್ಣಃ ಸರ್ಪೋ ವಾ ದುರಧಿಷ್ಠಿತಃ ।
ಯಥಾ ಕ್ರೋಧೋ ಹಿ ಜಂತೂನಾಂ ಶರೀರಸ್ಥೋ ವಿನಾಶಕಃ ॥ ೧೪೩
-ಆಪಸ್ತಂಬಸ್ಮೃತಿ, ೧೦-೪

ಕಾಣದೆ ತುಳಿಯಲ್ಪಟ್ಟ ಕತ್ತಿಯಾಗಲೀ ಹಾವಾಗಲೀ ಅಪಾಯವನ್ನುಂಟುಮಾಡುತ್ತವೆ. ಆದರೆ ಅವುಗಳಿಗಿಂತ ಹೆಚ್ಚಾಗಿ ಶರೀರದಲ್ಲಿರುವ ಸಿಟ್ಟು ಪ್ರಾಣಿಗಳಿಗೆ ಹಾನಿಯನ್ನುಂಟು ಮಾಡುತ್ತದೆ.

ನ ಪಾಣಿಪಾದಚಪಲೋ ನ ನೇತ್ರಚಪಲೋಽನೃಜುಃ ।
ನ ಸ್ಯಾದ್ವಾಕ್ಚಪಲಶ್ಚೈವ ನ ಪರದ್ರೋಹಕರ್ಮಧೀಃ ॥ ೧೪೪
-ಮನುಸ್ಮೃತಿ, ೪-೧೭೭

ಕೆಲಸಕ್ಕೆಬಾರದ ವಸ್ತುವನ್ನು ತೆಗೆದುಕೊಳ್ಳುವುದು, ವ್ಯರ್ಥವಾಗಿ ತಿರುಗಾಡುವುದು, ಸ್ತ್ರೀಸೌಂದರ್ಯವನ್ನು ನೋಡುವುದು, ಮೋಸದಿಂದ ನಡೆದುಕೊಳ್ಳುವುದು, ಇತರರನ್ನು ನಿಂದಿಸುವ ಮಾತು, ಇತರರಿಗೆ ಕೇಡನ್ನುಂಟುಮಾಡುವ ಕಾರ್ಯ ಮತ್ತು ಮನಸ್ಸು ಇರಬಾರದು.

**ನ ಪೂತೋ ನ ತಪಸ್ವೀ ಚ ನ ಯಜ್ವಾ ನ ಚ ಧರ್ಮಭಾಕ್ ।**
**ಕ್ರೋಧಸ್ಯ ಯೋ ವಶಂ ಗಚ್ಛೇತ್ತಸ್ಯ ಲೋಕದ್ವಯಂ ನ ಹಿ ॥ ೧೪೫**

-ಸುಭಾಷಿತಸುಧಾನಿಧಿ

ಯಾರು ಕೋಪಕ್ಕೆ ವಶವಾಗುವನೋ ಅವನು ಪವಿತ್ರನಾದವನಲ್ಲ, ತಪಸ್ವಿಯಲ್ಲ, ಯಾಗಮಾಡುವವನೂ ಅಲ್ಲ, ಧರ್ಮಯುಕ್ತನೂ ಅಲ್ಲ. ಅಂಥವನಿಗೆ ಇಹಪರಗಳೆಂಬ ಎರಡು ಲೋಕಗಳೂ ಇಲ್ಲ.

**ನ ಬಾಂಧವಾ ನ ಸುಹೃದೋ ನ ಧನಾನಿ ಮಹಾಂತ್ಯಪಿ ।**
**ಅಲಂ ಧಾರಯಿತುಂ ಶಕ್ತಾಃ ತಮಸ್ಯುಗ್ರೇ ನಿಮಜ್ಜತಃ ॥ ೧೪೬**

-ನಾರದಸ್ಮೃತಿ, ೨-೧೯೯

ಭಯಂಕರವಾದ ಕಷ್ಟದಲ್ಲಿ ಮುಳುಗುತ್ತಿರುವವನನ್ನು ನೆಂಟರಾಗಲೀ, ಮಿತ್ರರಾಗಲಿ, ಬೇಕಾದಷ್ಟು ಹಣವಾಗಲೀ ರಕ್ಷಿಸಲಾರದು.

**ನ ಭುಂಜೀತೋದ್ಧೃತಸ್ನೇಹಂ ನಾತಿಸೌಹಿತ್ಯಮಾಚರೇತ್ ।**
**ನಾತಿಪ್ರಗೇ ನಾತಿಸಾಯಂ ನ ಸಾಯಂ ಪ್ರಾತರಾಶಿತಃ ॥ ೧೪೭**

-ಮನುಸ್ಮೃತಿ, ೪-೬೨

ಎಣ್ಣೆತೆಗೆದ ಹಿಂಡಿ ಅಥವಾ ಸಾರತೆಗೆದಮೇಲೆ ಉಳಿಯುವ ಪದಾರ್ಥಗಳನ್ನು ತಿನ್ನಬಾರದು. ಅತಿ ತೃಪ್ತಿಗೆ ಅವಕಾಶಕೊಡಬಾರದು. ಸೂರ್ಯನು ಹುಟ್ಟುವಾಗ, ಮುಳುಗುವಾಗ ಊಟಮಾಡಬಾರದು. ಬೆಳಗಿನ ಊಟ ಹೆಚ್ಚಾಗಿದ್ದರೆ ರಾತ್ರಿ ಊಟ ಬಿಡಬೇಕು.

**ನಮಂತಿ ಫಲಿತಾ ವೃಕ್ಷಾ ನಮಂತಿ ಚ ಬುಧಾ ಜನಾಃ ।**
**ಶುಷ್ಕಕಾಷ್ಠಾನಿ ಮೂರ್ಖಾಶ್ಚ ಭಿದ್ಯಂತೇ ನ ನಮಂತಿ ಚ ॥ ೧೪೮**

-ಸುಭಾಷಿತಸುಧಾನಿಧಿ

ಹಣ್ಣುಬಿಟ್ಟ ಮರಗಳು ಬಾಗುತ್ತವೆ. ಹಾಗೆಯೇ ವಿದ್ವಾಂಸರಾದ ಜನರೂ ಬಾಗಿ ನಡೆಯುತ್ತಾರೆ. ಒಣಗಿದ ಮರಗಳೂ, ಮೂರ್ಖರೂ ಖಂಡಿಸಲ್ಪಡುತ್ತಾರೆಯೇ ಹೊರತು ಬಾಗುವುದಿಲ್ಲ.

**ನ ಮಾಂಸಭಕ್ಷಣೇ ದೋಷೋ ನ ಮದ್ಯೇ ನ ಚ ಮೈಥುನೇ ।**
**ಪ್ರವೃತ್ತಿರೇಷಾ ಭೂತಾನಾಂ ನಿವೃತ್ತಿಸ್ತು ಮಹಾಫಲಾ ॥ ೧೪೯**

-ಮನುಸ್ಮೃತಿ, ೮-೫೬

ಮಾಂಸ ತಿನ್ನುವುದು, ಮದ್ಯಪಾನ, ಸ್ತ್ರೀಸಂಗ ಇವು ಎಲ್ಲಾ ಪ್ರಾಣಿಗಳಲ್ಲಿಯೂ ಸ್ವಾಭಾವಿಕ. ಆದರೆ ಇವುಗಳನ್ನು ಬಿಟ್ಟರೆ ಅಮೋಘ ಫಲ ಸಿಗುತ್ತದೆ.

**ನ ಯೋಗೀ ನೈವ ಸಿದ್ಧೋ ವಾ ನ ಜ್ಞಾನೀ ಸತ್ಕ್ರಿಯೋ ನರಃ ।**
**ಕಲಿದಾವಾನಲೇನಾದ್ಯ ಸಾಧನಂ ಭಸ್ಮತಾಂ ಗತಮ್ ॥** ೧೫೦

-ಭಾಗವತಮಾಹಾತ್ಮ್ಯ, ೧-೩೫

ಕಲಿಯ ಕಾಡ್ಕಿಚ್ಚಿನಿಂದ ಈಗ ನಮ್ಮ ದೇಶದಲ್ಲಿ ಯೋಗಿಗಳಾಗಲಿ, ಸಿದ್ಧರಾಗಲೀ ಜ್ಞಾನಿಗಳಾಗಲೀ, ಒಳ್ಳೆಯ ಕೆಲಸಮಾಡುವ ಮನುಷ್ಯರಾಗಲೀ ಇಲ್ಲ. ಸಾಧನೆ ಸುಟ್ಟು ಬೂದಿಯಾಯಿತು.

**ನ ಯೋಜನಶತಂ ದೂರಂ ವಾಹ್ಯಮಾನಸ್ಯ ತೃಷ್ಣಯಾ ।**
**ಸಂತುಷ್ಟಸ್ಯ ಕರಪ್ರಾಪ್ತೇಽಪ್ಯರ್ಥೇ ಭವತಿ ನಾದರಃ ॥** ೧೫೧

-ಹಿತೋಪದೇಶ, ಮಿತ್ರಲಾಭ ೧೧೩

ಆಸೆಯಿಂದ ಪ್ರೇರಿಸಲ್ಪಡುವವನಿಗ ನೂರು ಯೋಜನಗಳೂ ದೂರವಲ್ಲ. ಸಂತುಷ್ಟನಾದವನಿಗೆ ಕೈಯಲ್ಲಿರುವ ಹಣದಲ್ಲಿಯೂ ಆದರವಿರುವುದಿಲ್ಲ.

**ನ ಲಂಘಯೇದ್ವತ್ಸತಂತ್ರೀಂ ಪ್ರಧಾವೇಚ್ಚ ವರ್ಷತಿ ।**
**ನ ಚೋದಕೇ ನಿರೀಕ್ಷೇತ ಸ್ವಂ ರೂಪಮಿತಿ ಧಾರಣಾ ॥** ೧೫೨

-ಮನುಸ್ಮೃತಿ, ೪-೩೮

ಕರುವಿಗೆ ಕಟ್ಟಿರುವ ಹಗ್ಗವನ್ನು ದಾಟಬಾರದು. ಮಳೆ ಸುರಿಯುತ್ತಿರುವಾಗ ಓಡಬಾರದು. ನೀರಿನಲ್ಲಿ ತನ್ನ ಪ್ರತಿಬಿಂಬವನ್ನು ನೋಡಬಾರದು.

**ನ ವಾರಯಾಮೋ ಭವತೀಂ ವಿಶಂತೀಂ**
**ವರ್ಷಾನದಿ ಸ್ರೋತಸಿ ಜಹ್ನುಜಾಯಾಃ ।**
**ನ ಯುಕ್ತಮೇತತ್ತು ಪುರೋ ಯದಸ್ಯಾಃ**
**ತರಂಗಭಂಗಾನ್ ಪ್ರಕಟೀಕರೋಷಿ ॥** ೧೫೩

-ಭಾಮಿನೀವಿಲಾಸ, ೧-೪೩

ಎಲೈ ಮಳೆಗಾಲದ ನದಿಯೇ! ನೀನು ಗಂಗಾನದಿಯನ್ನು ದರ್ಪದಿಂದ ಸೇರುತ್ತಿದ್ದೀಯೆ! ಹೋಗಲಿ ಎಂದು ಸುಮ್ಮನಿದ್ದೇವೆ. ಆದರೆ ಆ ಗಂಗೆಯ ಮುಂದೆ ನೀನು ಅಲೆಗಳನ್ನೆಬ್ಬಿಸಿ ಸ್ಪರ್ಧೆಮಾಡುವ ನಿನ್ನ ಕೆಲಸವನ್ನು ನಾವು ಖಂಡಿತ ಮೆಚ್ಚಲಾರೆವು.

**ನ ವೈ ಸ್ವಯಂ ತದಶ್ನೀಯಾತ್ ಅತಿಥಿಂ ಯನ್ನ ಭೋಜಯೇತ್ ।**
**ಧನ್ಯಂ ಯಶಸ್ಯಮಾಯುಷ್ಯಂ ಸ್ವರ್ಗ್ಯಂ ವಾತಿಥಿಪೂಜನಮ್ ॥ ೧೫೪**

-ಮನುಸ್ಮೃತಿ, ೩-೧೦೬

ಅತಿಥಿಗೆ ಬಡಿಸದ ಆಹಾರವನ್ನು ತಾನು ಉಣ್ಣಬಾರದು. ಅತಿಥಿಸತ್ಕಾರವು ಕೀರ್ತಿಯನ್ನೂ, ಹಣವನ್ನೂ ಆಯುಸ್ಸನ್ನೂ, ಪರಮಸುಖವನ್ನೂ ಕೊಡುತ್ತದೆ.

**ನ ಸಾಹಸೈಕಾಂತರಸಾನುವರ್ತಿನಾ**
**ನ ಚಾಪ್ಯುಪಾಯೋಪಹತಾಂತರಾತ್ಮನಾ ।**
**ವಿಭೂತಯಃ ಶಕ್ಯಮವಾಪ್ತುಮೂರ್ಜಿತಾಃ**
**ನಯೇ ಚ ಶೌರ್ಯೇ ಚ ವಸಂತಿ ಸಂಪದಃ ॥ ೧೫೫**

-ಹಿತೋಪದೇಶ, ವಿಗ್ರಹ-೧೧೩

ಕೇವಲ ಸಾಹಸವೊಂದನ್ನೇ ಅನುಸರಿಸುವವನಿಂದಾಗಲೀ, ಅಥವಾ ಉಪಾಯಗಳ ಪ್ರಭಾವಕ್ಕೊಳಗಾದ ಮನಸ್ಸಿನವನಿಂದಾಗಲೀ ಉನ್ನತೋನ್ನತವಾದ ಐಶ್ವರ್ಯಗಳನ್ನು ಪಡೆಯುವುದು ಸಾಧ್ಯವಿಲ್ಲ. ಸಂಪತ್ತು ಉಪಾಯ ಹಾಗೂ ಶೌರ್ಯ ಇವೆರಡರಲ್ಲಿಯೂ ನೆಲಸಿದೆ.

**ನ ಸ್ನಾನಮಾಚರೇದ್ಭುಕ್ತ್ವಾ ನಾತುರೋ ನ ಮಹಾನಿಶಿ ।**
**ನ ವಾಸೋಭಿಃ ಸಹಾಜಸ್ರಂ ನಾ ವಿಜ್ಞಾತೇ ಜಲಾಶಯೇ ॥ ೧೫೬**

-ಮನುಸ್ಮೃತಿ, ೪-೧೨೯

ಊಟಮಾಡಿದಮೇಲೆ ಸ್ನಾನಮಾಡಬಾರದು. ರೋಗಿಯು ಸ್ನಾನ ಮಾಡಬಾರದು. ಅರ್ಧರಾತ್ರಿಯವೇಳೆ ಸ್ನಾನ ಕೂಡದು. ಉಟ್ಟಬಟ್ಟೆಯಲ್ಲಿಯೇ ಸ್ನಾನಮಾಡಬಾರದು. ತಿಳಿಯದ ಕೊಳ ಬಾವಿಗಳಲ್ಲಿಳಿದು ಸ್ನಾನ ಮಾಡಬಾರದು.

**ನ ಸ್ಥಿರಂ ಕ್ಷಣಮಪ್ಯೇಕಂ ಉದಕಂ ತು ಯಥೋರ್ಮಿಭಿಃ ।**
**ವಾತಾಹತಂ ತಥಾ ಚಿತ್ತಂ ತಸ್ಮಾತ್ತಸ್ಯ ನ ವಿಶ್ವಸೇತ್ ॥ ೧೫೭**

-ದಕ್ಷಸ್ಮೃತಿ, ೭-೨೯

ಗಾಳಿ ಬೀಸುತ್ತಿರುವಾಗ ನೀರು ಅಲೆಗಳಿಂದ ಒಂದು ಕ್ಷಣವೂ ನಿಶ್ಚಲವಾಗಿರುವುದಿಲ್ಲ. ಮನಸ್ಸೂ ಹಾಗೆಯೇ. ಆದುದರಿಂದ ಅದನ್ನು ನಂಬಬಾರದು.

**ನ ಸೀದನ್ನಪಿ ಧರ್ಮೇಣ ಮನೋಽಧರ್ಮೇ ನಿವೇಶಯೇತ್ ।**
**ಅಧಾರ್ಮಿಕಾಣಾಂ ಪಾಪಾನಾಂ ಆಶುಪಶ್ಯನ್ ವಿಪರ್ಯಯಮ್ ॥೧೫೮**

-ಮನುಸ್ಮೃತಿ, ೪-೧೭೧

ನ್ಯಾಯವಾಗಿದ್ದು ತೀರಬಡವನಾಗಿದ್ದರೂ, ಅನ್ಯಾಯಮಾಡುವ ಪಾಪಿಗಳು ಶ್ರೀಮಂತರಾಗಿ ಸುಖವಾಗಿರುವುದನ್ನು ಕಂಡೂ ಸಹ, ಅಧರ್ಮ ಕಾರ್ಯದಲ್ಲಿ ಮನಸ್ಸಿಡಬಾರದು.

**ನ ಹಿ ಪೂರಯಿತುಂ ಶಕ್ಯಃ ಲೋಭಃ ಪ್ರೀತ್ಯಾ ಕಥಂಚನ ।**
**ನಿತ್ಯಗಂಭೀರತೋಯಾಭಿರಾಪಗಾಭಿರಿವಾಂಬುಧಿಃ ॥ ೧೫೯**

-ಸುಭಾಷಿತಸುಧಾನಿಧಿ

ಯಾವಾಗಲೂ ತುಂಬಿದ ನೀರಿನಿಂದ ಕೂಡಿದ ನದಿಗಳು ಹೇಗೆ ಸಮುದ್ರವನ್ನು ತುಂಬಲಾರವೋ ಹಾಗೆ ಲೋಭವನ್ನು ಹೇಗಾದರೂ ತುಂಬುವುದು ಸಾಧ್ಯವಿಲ್ಲ.

**ನಾಕ್ಷೈಃ ಕ್ರೀಡೇತ್ ಕದಾಚಿತ್ತು ಸ್ವಯಂ ನೋಪಾನಹೌ ಹರೇತ್ ।**
**ಶಯನಸ್ಥೋ ನ ಭುಂಜೀತನ ನ ಪಾಣಿಸ್ಥಂ ನ ಚಾಸನೇ ॥ ೧೬೦**

-ಮನುಸ್ಮೃತಿ, ೪-೭೪

ಎಂದಿಗೂ ಜೂಜಾಡಬಾರದು. ತಾನೇ ತನ್ನ ಪಾದರಕ್ಷೆಗಳನ್ನು ಹೊರಬಾರದು. ಹಾಸಿಗೆಯಲ್ಲಿ ಊಟಮಾಡಬಾರದು. ಒಂದು ಕೈಯಲ್ಲಿ ತಟ್ಟೆಯನ್ನಿಟ್ಟುಕೊಂಡು, ಆಸನದಲ್ಲಿಟ್ಟುಕೊಂಡು ಊಟಮಾಡಬಾರದು.

**ನಾಗ್ನಿಂ ಮುಖೇನೋಪಧಮೇತ್ ನಗ್ನಾಂ ನೇಕ್ಷೇತ ಚ ಸ್ತ್ರಿಯಂ ।**
**ನಾಮೇಧ್ಯಂ ಪ್ರಕ್ಷಿಪೇದಗ್ನೌ ನ ಚ ಪಾದೌ ಪ್ರತಾಪಯೇತ್ ॥ ೧೬೧**

-ಮನುಸ್ಮೃತಿ, ೪-೫೩

ಬೆಂಕಿಯನ್ನು ಬಾಯಿಂದ ಊದಬಾರದು. ಬೆತ್ತಲೆಯಾದ ಹೆಣ್ಣನ್ನು ನೋಡಬಾರದು. ಕೊಳೆಯನ್ನು ಬೆಂಕಿಯಲ್ಲಿ ಹಾಕಬಾರದು. ಕಾಲುಗಳನ್ನು ಬೆಂಕಿಯಲ್ಲಿ ಬೆಚ್ಚಗೆ ಮಾಡಿಕೊಳ್ಳಬಾರದು.

**ನಾತ್ಯರ್ಥಮರ್ಥಾರ್ಥನಯಾ ಧೀಮಾನುದ್ವೇಜಯೇಜ್ಜನಂ ।**
**ಅಬ್ಧಿರ್ದತ್ತಾಶ್ವರತ್ನಶ್ರೀರ್ಮಥ್ಯಮಾನೋಽಸೃಜದ್ವಿಷಮ್ ॥ ೧೬೨**

-ಚಾರುಚರ್ಯಾ-೩೭

ಬುದ್ಧಿಶಾಲಿಯು ಹಣಕ್ಕಾಗಿ ಜನರನ್ನು ಬಹಳ ಪೀಡಿಸಬಾರದು. ಉಚ್ಚೈಶ್ರವಸ್ಸೆಂಬ ಅಶ್ವವನ್ನೂ ರತ್ನಗಳನ್ನೂ ಲಕ್ಷ್ಮಿಯನ್ನೂ ಕೊಟ್ಟಮೇಲೆ ಸಹ ಸಮುದ್ರವನ್ನು ಕಡೆದದ್ದರಿಂದ ಅದು ವಿಷವನ್ನು ಕೊಟ್ಟಿತು.

**ನಾತಿದೂರೇ ನ ಚಾಸನ್ನೇ ಅತ್ಯಾಢ್ಯೇ ಚಾತಿದುರ್ಬಲೇ ।**
**ವೃತ್ತಿಹೀನೇ ಚ ಮೂರ್ಖೇ ಚ ಷಟ್ಸು ಕನ್ಯಾ ನ ದೀಯತೇ ॥ ೧೬೩**

-ಬೃಹತ್‌ಪರಾಶರಸ್ಮೃತಿ, ೬-೨೭

ಬಹಳ ದೂರದಲ್ಲಿರುವವನಿಗೆ, ಬಹಳ ಹತ್ತಿರದಲ್ಲಿರುವವನಿಗೆ, ಬಹಳ ಶ್ರೀಮಂತನಿಗೆ, ಬಹಳ ದುರ್ಬಲನಿಗೆ, ಉದ್ಯೋಗವಿಲ್ಲದವನಿಗೆ, ಮೂರ್ಖನಿಗೆ ಕನ್ಯೆಯನ್ನು ಕೊಡಬಾರದು.

**ನಾಽಧರ್ಮಶ್ಚರಿತೋ ಲೋಕೇ ಸದ್ಯಃ ಫಲತಿ ಗೌರಿವ ।**
**ಶನೈರಾವರ್ತಮಾನಸ್ತು ಕರ್ತುರ್ಮೂಲಾನಿ ಕೃಂತತಿ ॥ ೧೬೪**

-ಮನುಸ್ಮೃತಿ, ೪-೧೭೨

ಲೋಕದಲ್ಲಿ ಆಚರಿಸಿದ ಅಧರ್ಮವು ಭೂಮಿಯಂತೆ, ಹಸುವಿನಂತೆ ಕೂಡಲೇ ಫಲವನ್ನು ಕೊಡುವುದಿಲ್ಲ. ಕ್ರಮವಾಗಿ ಮಾಡಿದವನ ಬುಡವನ್ನೇ ಕತ್ತರಿಸುತ್ತದೆ.

**ನಾಧಾರ್ಮಿಕೇ ವಸೇದ್ಗ್ರಾಮೇ ನ ವ್ಯಾಧಿಬಹುಲೇ ಭೃಶಂ ।**
**ನೈಕಃ ಪ್ರಪದ್ಯೇತಾಧ್ವಾನಂ ನ ಚಿರಂ ಪರ್ವತೇ ವಸೇತ್ ॥ ೧೬೫**

-ಮನುಸ್ಮೃತಿ, ೪-೬೦

ಧರ್ಮವನ್ನು ಆಚರಿಸದ ಜನರಿರುವ ಹಳ್ಳಿಯಲ್ಲಿ, ಚಿಕಿತ್ಸೆಗೆ ಬಗ್ಗದ ರೋಗಗಳಿಂದ ಜನರು ನರಳುವ ಜಾಗಗಳಲ್ಲಿ ವಾಸಮಾಡಬಾರದು. ಒಂಟಿಯಾಗಿ ದೂರಪ್ರಯಾಣ ಮಾಡಬಾರದು. ಬೆಟ್ಟದ ಮೇಲೆ ಬಹಳಕಾಲ ವಾಸಮಾಡಬಾರದು.

**ನಾಧೀತೇಽತ್ರ ಜನೋ ಯದಿ ಕಶ್ಚಿದಧೀತೇ ಶತೇ ಸಹಸ್ರೇ ವಾ ।**
**ದುಸ್ತರ್ಕೇಷು ಶ್ರಾಮ್ಯತಿ ದೂರೀಕುರುತೇ ಶ್ರುತಿ-ಸ್ಮೃತಿಸುತರ್ಕಾನ್ ॥೧ ೬**

ವಿಶ್ವಗುಣಾದರ್ಶ- ೯೩

ಇಲ್ಲಿ ಜನರು ವೇದಶಾಸ್ತ್ರಗಳ ಅಧ್ಯಯನ ಮಾಡುವುದಿಲ್ಲ. ನೂರರಲ್ಲಿಯೋ ಸಾವಿರದಲ್ಲಿಯೋ ಒಬ್ಬರು ಓದಿದರೂ, ಕುತರ್ಕವನ್ನು ಮಾಡುತ್ತಾ ಶ್ರುತಿಸ್ಮೃತಿಗಳಿಗೊಪ್ಪುವ ವಾದವನ್ನು ದೂರಮಾಡುತ್ತಾರೆ.

**ನಾನ್ನಮದ್ಯಾದೇಕವಾಸಾಃ ನ ನಗ್ನಃ ಸ್ನಾನಮಾಚರೇತ್ ।**
**ನ ಮೂತ್ರಂ ಪಥಿ ಕುರ್ವೀತ ನ ಭಸ್ಮನಿ ನ ಗೋವ್ರಜೇ ॥ ೧೬೭**

-ಮನುಸ್ಮೃತಿ, ೪-೪೫

ಒಂದು ಬಟ್ಟೆಯನ್ನುಟ್ಟು ಉಣ್ಣಬಾರದು. ಬೆತ್ತಲೆ ಸ್ನಾನಮಾಡಬಾರದು. ರಸ್ತೆಯಲ್ಲಿ, ಬೂದಿಯಲ್ಲಿ, ದನದ ಕೊಟ್ಟಿಗೆಯಲ್ಲಿ ಮೂತ್ರವಿಸರ್ಜನೆ ಮಾಡಬಾರದು.

**ನಾಭೀಷೇಕೋ ನ ಸಂಸ್ಕಾರಃ ಸಿಂಹಸ್ಯ ಕ್ರಿಯತೇ ಮೃಗೈಃ ।**
**ವಿಕ್ರಮಾರ್ಜಿತವಿತ್ತಸ್ಯ ಸ್ವಯಮೇವ ಮೃಗೇಂದ್ರತಾ ॥ ೧೬೮**

-ಹಿತೋಪಪದೇಶ, ಸುಹೃದ್ಭೇದ-೧೬

ಸಿಂಹಕ್ಕೆ ಮೃಗಗಳು ಅಭಿಷೇಕವನ್ನಾಗಲೀ ಸಂಸ್ಕಾರವನ್ನಾಗಲೀ ಮಾಡುವುದಿಲ್ಲ. ತನ್ನ ಪರಾಕ್ರಮದಿಂದ ತಾನೇ ಸಂಪಾದಿಸಿಕೊಂಡ ಸಂಪತ್ತುಳ್ಳ ಅದಕ್ಕೆ ಮೃಗರಾಜಪದವಿ ತಾನಾಗಿ ಬರುತ್ತದೆ.

**ನಾರುಂತುದಃ ಸ್ಯಾದಾರ್ತೋಽಪಿ ನ ಪರದ್ರೋಹಕರ್ಮಧೀಃ ।**
**ಯಥಾಽಸ್ಯೋದ್ವಿಜತೇ ವಾಚಾ ನಾಲೋಕ್ಯಾಂ ತಾಮುದೀರಯೇತ್ ॥ ೨೬೯**

-ಮನುಸ್ಮೃತಿ, ೨-೧೬೧

ನೋವಿನಿಂದ ಕೂಡಿದ್ದರೂ ಇತರರಿಗೆ ನೋವನ್ನುಂಟುಮಾಡುವ ಮಾತನ್ನಾಡಬಾರದು. ಇತರರಿಗೆ ದ್ರೋಹವಾಗುವ ಕೆಲಸ ಮತ್ತು ಬುದ್ಧಿ ಇರಬಾರದು. ಇತರರಿಗೆ ಬೇಸರವಾಗುವ ಲೋಕರೂಢಿಯಲ್ಲಿಲ್ಲದ ಅಥವಾ ಉಚಿತವಲ್ಲದ ಮಾತನ್ನು ಆಡಬಾರದು.

**ನಾಸ್ತಿ ವೇದಾತ್ ಪರಂ ಶಾಸ್ತ್ರಂ ನಾಸ್ತಿ ಮಾತುಃ ಪರೋ ಗುರುಃ ।**
**ನಾಸ್ತಿ ದಾನಾತ್ ಪರಂ ಮಿತ್ರಂ ಇಹಲೋಕೇ ಪರತ್ರ ಚ ॥ ೧೭೦**

-ಅತ್ರಿಸಂಹಿತಾ, ೧-೧೫೦

ಈ ಲೋಕ ಮತ್ತು ಪರಲೋಕಗಳಲ್ಲಿ ವೇದಕ್ಕಿಂತಲೂ ಶ್ರೇಷ್ಠವಾದ ಶಾಸ್ತ್ರವಿಲ್ಲ. ತಾಯಿಗಿಂತಲೂ ದೊಡ್ಡವರಿಲ್ಲ. ದಾನಕ್ಕಿಂತಲೂ ಹೆಚ್ಚಿನ ಮಿತ್ರನಿಲ್ಲ.

**ನಾಸ್ತಿಕ್ಯಂ ವೇದನಿಂದಾಂ ಚ ದೇವತಾನಾಂ ಚ ಕುತ್ಸನಂ ।**
**ದ್ವೇಷಂ ದಂಭಂ ಚ ಮಾನಂ ಚ ಕ್ರೋಧಂ ತೈಕ್ಷ್ಣ್ಯಂ ಚ ವರ್ಜಯೇತ್॥ ೧೭೧**

-ಮನುಸ್ಮೃತಿ, ೪-೧೬೩

ದೇವರಿಲ್ಲವೆಂದು ವಾದಿಸುವುದು, ವೇದಗಳು ಪ್ರಮಾಣವಲ್ಲವೆನ್ನುವುದು, ದೇವತೆಗಳನ್ನು ಬೈಯುವುದು, ಹಗೆತನ, ಪೊಳ್ಳುಜಂಭ, ಅಭಿಮಾನ, ಸಿಟ್ಟು, ಕ್ರೂರತನ ಇವುಗಳನ್ನು ಬಿಡಬೇಕು.

**ನಿತರಾಂ ನೀಚೋಽಸ್ಮೀತಿ ತ್ವಂ ಖೇದಂ ಕೂಪ ಮಾ ಕದಾಪಿ ಕೃಥಾಃ ।**
**ಅತ್ಯಂತಸರಸಹೃದಯೋ ಯತಃ ಪರೇಷಾಂ ಗುಣಗ್ರಹೀತಾಽಸಿ ॥ ೧೭೨**
-ಭಾಮಿನೀವಿಲಾಸ, ೧-೭

ಎಲೈ ಭಾವಿಯೇ! ನಾನು ನೀಚ ಅಂದರೆ ಬಹಳ ಕೆಳಗೆ ಇರುವೆನು ಎಂದು ಎಂದಿಗೂ ವ್ಯಥೆಪಡಬೇಡ. ನಿನ್ನ ಹೃದಯವು ದಯಾರ್ದ್ರವಾಗಿದೆ ಅಲ್ಲದೆ ನೀನು ಬೇರೆಯವರ ಗುಣವನ್ನು ತಿಳಿಯುವವನಾಗಿದ್ದೀಯೆ. ನಿನ್ನಲ್ಲಿ ನೀರಿದೆ, ಹಗ್ಗವನ್ನು ಒಳಕ್ಕೆ ತೆಗೆದುಕೊಳ್ಳುತ್ತೀಯೆ. (ಕೆಳಮಟ್ಟದವನೂ ಸಹ ರಸಿಕನೂ ಗುಣಗ್ರಾಹಿಯೂ ಆಗಿರುವಾಗ ಅವನು ಉತ್ತಮನೇ).

**ನಿತ್ಯಂ ಕ್ರೋಧಾತ್ತಪೋ ರಕ್ಷೇತ್ ಧರ್ಮಂ ರಕ್ಷೇಚ್ಚ ಮತ್ಸರಾತ್ ।**
**ವಿದ್ಯಾಂ ಮಾನಾಪಮಾನಾಭ್ಯಾಮಾತ್ಮಾನಂ ತು ಪ್ರಮಾದತಃ ॥ ೧೭೩**
-ಮಹಾಭಾರತ, ವನ. ೨೧೩-೨೯

ಕ್ರೋಧ ಬರದಂತೆ ತಪಸ್ಸನ್ನೂ, ಹೊಟ್ಟೆಕಿಚ್ಚು ಪಡದೆ ಧರ್ಮವನ್ನೂ ರಕ್ಷಿಸಿಕೊಳ್ಳಬೇಕು. ಮಾನ-ಅಪಮಾನಗಳಿಗೆ ಜಗ್ಗದೆ ವಿದ್ಯೆಯನ್ನು ಸಂಗ್ರಹಿಸಿ ಉಳಿಸಿಕೊಳ್ಳಬೇಕು. ತಪ್ಪುದಾರಿ ತುಳಿಯದಂತೆ ತನ್ನ ಆತ್ಮವನ್ನು ಕಾಪಾಡಿಕೊಳ್ಳಬೇಕು.

**ನಿರ್ಧನತ್ವಮಸತ್ಯತ್ವಂ ವಿದ್ಯಾಯುಕ್ತಸ್ಯ ಕರ್ಹಿಚಿತ್ ।**
**ಅಸ್ಥಾನಿತ್ವಮಭಾಗ್ಯತ್ವಂ ನ ಸುಶೀಲಸ್ಯ ಕರ್ಹಿಚಿತ್ ॥ ೧೭೪**
-ಬೃಹತ್‌ಪರಶರಸ್ಮೃತಿ, ೮-೧೮೭

ವಿದ್ಯಾವಂತನು ಕೆಲವು ವೇಳೆ ಬಡವನಾಗಬಹುದು, ಅಪ್ರಾಮಾಣಿಕನಾಗಬಹುದು. ಆದರೆ ಒಳ್ಳೆಯ ಸ್ವಭಾವವುಳ್ಳವನಿಗೆ ಸ್ಥಾನವಾಗಲಿ, ಭಾಗ್ಯವಾಗಲಿ ಸಿಗದೇ ಇರುವುದಿಲ್ಲ.

**ನಿರ್ಧನಶ್ಚಾಪಿ ಕಾಮಾರ್ಥೀ ದರಿದ್ರಃ ಕಲಹಪ್ರಿಯಃ ।**
**ಮಂದಶಾಸ್ತ್ರೋ ವಿವಾದಾರ್ಥೀ ತ್ರಿವಿಧಂ ಮೂರ್ಖಲಕ್ಷಣಂ ॥ ೧೭೫**
-ಸುಭಾಷಿತಸುಧಾನಿಧಿ-೩೩

ಹಣವಿಲ್ಲದವನಾದರೂ ಆಸೆಗಳನ್ನರಸುತ್ತಾನೆ. ಬಡವನಾದರೂ ಜಗಳಮಾಡಲು ಉತ್ಸುಕನಾಗಿದ್ದಾನೆ. ಶಾಸ್ತ್ರದ ಜ್ಞಾನ ಕಡಿಮೆಯಾಗಿದ್ದರೂ ವಾದಮಾಡಲಿಚ್ಛಿಸುತ್ತಾನೆ. ಇವು ಮೂರೂ ಮೂರ್ಖರ ಲಕ್ಷಣಗಳು.

**ನಿಯಮಯಸಿ ವಿಮಾರ್ಗಪ್ರಸ್ಥಿತಾನಾತ್ತದಂಡಃ**
**ಪ್ರಶಮಯಸಿ ವಿವಾದಂ ಕಲ್ಪಸೇ ರಕ್ಷಣಾಯ ।**

**ಅತನುಷು ವಿಭವೇಷು ಜ್ಞಾತಯಃ ಸಂತು ನಾಮ**
**ತ್ವಯಿ ತು ಪರಿಸಮಾಪ್ತಂ ಬಂಧುಕೃತ್ಯಂ ಪ್ರಜಾನಾಮ್ ॥ ೧೭೬**

-ಅಭಿಜ್ಞಾನ ಶಾಕುಂತಲ, ೫-೮

ದಾರಿತಪ್ಪಿದವರನ್ನು ಶಿಕ್ಷಿಸುತ್ತೀಯೆ. ಪ್ರಜೆಗಳಲ್ಲಿ ಉಂಟಾಗುವ ಕಲಹಗಳನ್ನು ಹೋಗಲಾಡಿಸುತ್ತೀಯೆ. ಬೇಕಾದಷ್ಟು ಹಣವಿರುವಾಗ ನೆಂಟರು ಇರಬಹುದು. ಆದರೆ ಎಲ್ಲ ಪ್ರಜೆಗಳಿಗೂ ನೆಂಟರಂತೆ ಸಹಕರಿಸುವವನು ಅರಸನೇ ಆಗುತ್ತಾನೆ.

**ನಿರಾನಂದಾ ದಾರಾ ವ್ಯಸನವಿಮುಖೋ ಬಾಂಧವಜನೋ**
**ಜಡೀಭೂತಂ ಮಿತ್ರಂ ಧನವಿರಹಶೀರ್ಣಃ ಪರಿಜನಃ ।**
**ಅಸಂತುಷ್ಟಂ ಚೇತಃ ಕುಲಿಶಕಠಿನಂ ಜೀವಿತಮಿದಂ**
**ವಿಧಿರ್ವಾಮಾರಂಭಸ್ತದಪಿ ಚ ಮನೋ ವಾಂಛತಿ ಸುಖಮ್ ॥ ೧೭೭**

-ಸುಭಾಷಿತಸುಧಾನಿಧಿ-೧೭೩

ಹೆಂಡತಿಗೆ ಸಂತೋಷವಿಲ್ಲ, ಕಷ್ಟದಲ್ಲಿ ಬಾಂಧವರು ದೂರವಾಗಿದ್ದಾರೆ, ಸ್ನೇಹಿತರು ಉಪಕಾರ ಮಾಡುತ್ತಿಲ್ಲ. ಪರಿಜನರು ಹಣವಿಲ್ಲದೆ ಕಂಗಾಲಾಗಿದ್ದಾರೆ. ಮನಸ್ಸಿಗೆ ಸಂತೋಷವಿಲ್ಲ, ಈ ಜೀವನ ವಜ್ರಕಠಿಣವಾಗಿದೆ, ದೈವವು ಪ್ರತಿಕೂಲವಾಗಿದೆ. ಆದಾಗ್ಯೂ ಮನಸ್ಸು ಸುಖವನ್ನೇ ಬಯಸುತ್ತದಲ್ಲಾ!

**ನೂನಂ ಜನೇನ ಪುರುಷೇ ಮಹತಿ ಪ್ರಯುಕ್ತಂ**
**ಆಗಃ ಪರಂ ತದನುರೂಪಫಲಂ ಪ್ರಸೂತೇ ।**
**ಕೃತ್ವಾ ರಘೂದ್ವಹಗತೇಃ ಕ್ಷಣಮಂತರಾಯಂ**
**ಯದ್ಭಾರ್ಗವಃ ಪರಗತೇರ್ವಿಹತಿಂ ಪ್ರಪೇದೇ ॥ ೧೭೮**

-ಚಂಪೂರಾಮಾಯಣ, ಬಾಲಕಾಂಡ-೧೧೫

ಮನುಷ್ಯರಿಂದ ಮಹಾಪುರುಷರಲ್ಲಿ ಮಾಡಲ್ಪಟ್ಟ ಅಪರಾಧ ಅದಕ್ಕೆ ಸರಿಯಾದ ಫಲವನ್ನು ಕೊಡುತ್ತದೆ. ಒಂದು ಕ್ಷಣಕಾಲ ಶ್ರೀರಾಮನ ಸಂಚಾರಕ್ಕೆ ತಡೆಯನ್ನೊಡ್ಡಿ, ಪರಶುರಾಮನು ತನ್ನ ಸ್ವರ್ಗಗಮನಕ್ಕೆ ವಿಘ್ನವನ್ನು ಹೊಂದಿದನು.

**ನೇಕ್ಷೇತೋದ್ಯಂತಮಾದಿತ್ಯಂ ನಾಸ್ತಂಯಂತಂ ಕದಾಚನ ।**
**ನೋಪಸೃಷ್ಟಂ ನ ವಾರಿಸ್ಥಂ ನ ಮಧ್ಯಂ ನಭಸೋ ಗತಮ್ ॥ ೧೭೯**

-ಮನುಸ್ಮೃತಿ, ೪-೩೭

ಸೂರ್ಯನನ್ನು ಹುಟ್ಟುವಾಗ, ಮುಳುಗುವಾಗ, ಗ್ರಹಣಹಿಡಿದಾಗ, ನೀರಿನಲ್ಲಿ ಪ್ರತಿಬಿಂಬಿಸಿದಾಗ ಮತ್ತು ಆಕಾಶಮಧ್ಯದಲ್ಲಿರುವಾಗ ನೋಡಬಾರದು.

**ನೈರ್ಗುಣ್ಯಮೇವ ಸಾಧೀಯೋ ಧಿಗಸ್ತು ಗುಣಗೌರವಂ ।**
**ಶಾಖಿನೋಽನ್ಯೇ ವಿರಾಜಂತೇ ಖಂಡ್ಯಂತೇ ಚಂದನದ್ರುಮಾಃ ॥ ೧೮೦**

-ಭಾಮಿನೀವಿಲಾಸ, ೧-೮೩

ಒಳ್ಳೆಯ ಗುಣಗಳಿಲ್ಲದಿರುವುದೇ ಮೇಲು. ಒಳ್ಳೆಯ ಗುಣಗಳಿಂದ ಬರುವ ಗೌರವ ಬೇಡ. ಬೇರೆ ಮರಗಳು ಶಾಖೋಪಶಾಖೆಗಳಿಂದ ಮೆರೆಯುತ್ತಿರುವಾಗ ಶ್ರೀಗಂಧದ ಮರಗಳು ಕತ್ತರಿಸಲ್ಪಡುತ್ತವೆಯಲ್ಲಾ!

**ಪಂಕೋದ್ಭವಂ ನ ಚ ವಿಮರ್ದಸಹಂ ಸದೈವ**
**ಶೈವಾಲಜಾಲಸಹವಾಸವಿಡಂಬಿತಂ ಚ ।**
**ಇಂದೀವರಂ ದಿನಕರೇಣ ಮಹಾಶಯೇನ**
**ಸಂಭಾವಿತಂ ಭವತಿ ಭಾಜನಮಿಂದಿರಾಯಾಃ ॥ ೧೮೧**

-ಅನ್ಯೋಕ್ತಿಸ್ತಬಕ-೪೪

ಕಮಲವು ಕೆಸರಲ್ಲಿ ಹುಟ್ಟಿದೆ. ಬಹಳ ಮೃದು. ಕೇವಲ ಸ್ಪರ್ಶದಿಂದಲೂ ಮುದುಡುತ್ತದೆ. ಪಾಚಿಯ ಜೊತೆಯಲ್ಲಿರುವ ಅಪಮಾನ ಬೇರೆ. ಆದರೂ ಸೂರ್ಯನಿಂದ ಗೌರವಿಸಲ್ಪಟ್ಟದ್ದರಿಂದ ಲಕ್ಷ್ಮಿಗೂ ಆಶ್ರಯವಾಗಿದೆ. ಸೂರ್ಯನಿಂದ ಅರಳಿ ನೋಡುವುದಕ್ಕೆ ಚೆನ್ನಾಗಿ ಕಾಣುತ್ತದೆ. (ಮಹಾಶಯರ ಆಶ್ರಯವನ್ನು ಪಡೆದವನು ಎಷ್ಟೇ ಹೀನ ಸ್ಥಿತಿಯಲ್ಲಿದ್ದರೂ ಗೌರವವನ್ನು ಪಡೆಯುತ್ತಾನೆ ಎಂದು ಆಶಯ.)

**ಪ್ರಜಾಪೀಡನಸಂತಾಪಾತ್ಸಮುದ್ಭೂತೋ ಹುತಾಶನಃ ।**
**ರಾಜ್ಞಃ ಕುಲಂ ಶ್ರಿಯಂ ಪ್ರಾಣಾನ್ ಚಾದಗ್ಧ್ವಾ ನ ನಿವರ್ತತೇ ॥ ೧೮೨**

-ಯಾಜ್ಞವಲ್ಕ್ಯ-೩೪೧

ಪ್ರಜೆಗಳಿಗೆ ತೊಂದರೆ ಕೊಡುವುದರಿಂದ ಉಂಟಾದ ಉರಿಯು ಅರಸನ ವಂಶ, ಸಂಪತ್ತು, ಪ್ರಾಣ ಇವುಗಳನ್ನು ನಾಶಮಾಡದೆ ಇರುವುದಿಲ್ಲ.

**ಪಠಂತಿ ವೇದಶಾಸ್ತ್ರಾಣಿ ಬೋಧಯಂತಿ ಪರಸ್ಪರಂ ।**
**ನ ಜಾನಂತಿ ಪರಂ ತತ್ತ್ವಂ ದರ್ವೀ ಪಾಕರಸಂ ಯಥಾ ॥ ೧೮೩**

-ಗರುಡಪುರಾಣ, ೧೬-೭೮

ವೇದಗಳನ್ನೂ ಶಾಸ್ತ್ರಗಳನ್ನೂ ಓದುತ್ತಾರೆ. ಒಬ್ಬರಿಗೊಬ್ಬರು ಕಲಿಸುತ್ತಾರೆ. ಆದರೆ ಪರತತ್ತ್ವವನ್ನು ಅರಿತಿಲ್ಲ. ಸೌಟಿಗೆ ಅಡಿಗೆಯ ರುಚಿ ಗೊತ್ತೇ!

**ಪಯಃಪಾನಂ ಭುಜಂಗಾನಾಂ ಕೇವಲಂ ವಿಷವರ್ಧನಮ್ ।**
**ಉಪದೇಶೋ ಹಿ ಮೂರ್ಖಾಣಾಂ ಪ್ರಕೋಪಾಯ ನ ಶಾಂತಯೇ ॥ ೧೮೪**

-ಹಿತೋಪದೇಶ, ವಿಗ್ರಹ-೪

ಹಾವಿಗೆ ಹಾಲೆರೆಯುವುದು ಬರಿಯ ವಿಷವನ್ನು ಹೆಚ್ಚು ಮಾಡುವುದಕ್ಕೇ ಆಗುತ್ತದೆ; ಹಾಗೆಯೇ ಮೂರ್ಖರಿಗೆ ಮಾಡಿದ ಉಪದೇಶವೂ ಸಹ. ಇದರಿಂದ ಇನ್ನೂ ಹೆಚ್ಚು ಕೆರಳುವುದೇ ವಿನಾ ಶಾಂತವಾಗುವುದಿಲ್ಲ.

**ಪರನಿಂದಾಸು ಪಾಂಡಿತ್ಯಂ ಸ್ವೇಷು ಕಾರ್ಯೇಷ್ವನುದ್ಯಮಃ ।**
**ಪ್ರದ್ವೇಷಶ್ಚ ಗುಣಜ್ಞೇಷು ಪಂಥಾನೋ ಹ್ಯಾಪದಾಂ ತ್ರಯಃ ॥ ೧೮೫**

-ಸುಭಾಷಿತಸುಧಾನಿಧಿ

ಆಪತ್ತಿಗೆ ಮೂರು ದಾರಿಗಳು ಇವು-ಇತರರನ್ನು ನಿಂದಿಸುವುದರಲ್ಲಿ ಪಾಂಡಿತ್ಯ, ತನ್ನ ಕೆಲಸ ಮಾಡುವುದರಲ್ಲಿ ಪ್ರಯತ್ನವಿಲ್ಲದಿರುವುದು ಮತ್ತು ಗುಣಶಾಲಿಗಳಲ್ಲಿ ದ್ವೇಷ.

**ಪರಪರಿವಾದಃ ಪರಿಷದಿ ನ ಕಥಂಚಿತ್ಪಂಡಿತೇನ ವಕ್ತವ್ಯಃ ।**
**ಸತ್ಯಮಪಿ ತನ್ನ ವಾಚ್ಯಂ ಯದುಕ್ತಮಸುಖಾವಹಂ ಭವತಿ ॥ ೧೮೬**

-ಪಂಚತಂತ್ರ, ಕಾಕೋಲೂಕೀಯ-೧೧೨

ವಿದ್ವಾಂಸನಾದವನು ಸಭೆಯಲ್ಲಿ ಏನಾದರೂ ಇತರರ ನಿಂದೆಯನ್ನು ಮಾಡಬಾರದು. ಯಾವುದನ್ನು ಹೇಳಿದರೆ ನೋವುಂಟಾಗುವುದೋ ಅಂಥದನ್ನು ಸತ್ಯವಾಗಿದ್ದರೂ ಸಹ ಹೇಳಬಾರದು.

**ಪರದ್ರವ್ಯೇಷ್ವಭಿಧ್ಯಾನಂ ಮನಸಾನಿಷ್ಟಚಿಂತನಂ ।**
**ವಿತಥಾಭಿನಿವೇಶಶ್ಚ ತ್ರಿವಿಧಂ ಕರ್ಮ ಮಾನಸಮ್ ॥ ೧೮೭**

-ಮನುಸ್ಮೃತಿ, ೧೨-೫

ಹೇಗೆ ಪರದ್ರವ್ಯವನ್ನು ಪಡೆದೇನು ಎಂಬ ಚಿಂತೆ, ಇತರರಿಗೆ ಕೇಡು ಬಯಸುವುದು, ದೇವರಿಲ್ಲ-ಪರಲೋಕವಿಲ್ಲವೆಂಬ ನಿಶ್ಚಯ-ಇವು ಮೂರು ಮಾನಸಿಕವಾದ ಪಾಪ ಕರ್ಮಗಳು.

**ಪರಂ ಕೂಪಶತಾದ್ವಾಪೀ ಪರಂ ವಾಪೀಶತಾತ್ಕ್ರತುಃ ।**
**ಪರಂ ಕ್ರತುಶತಾತ್ ಪುತ್ರಃ ಸತ್ಯಂ ಪುತ್ರಶತಾತ್ ಪರಮ್ ॥ ೧೮೮**

-ನಾರದಸ್ಮೃತಿ, ೨-೧೯೦

ನೂರು ಬಾವಿಗಳಿಗಿಂತಲೂ ಒಂದು ಕೊಳ ಶ್ರೇಷ್ಠ, ನೂರು ಕೊಳಗಳಿಗಿಂತಲೂ ಒಂದು ಯಜ್ಞ ಶ್ರೇಷ್ಠ, ನೂರು ಯಜ್ಞಗಳಿಗಿಂತಲೂ ಒಬ್ಬ ಮಗ ಶ್ರೇಷ್ಠ, ನೂರು ಮಕ್ಕಳಿಗಿಂತಲೂ ಸತ್ಯ ಶ್ರೇಷ್ಠ.

**ಪರವಾನರ್ಥಸಂಸಿದ್ಧೌ ನೀಚವೃತ್ತಿರಪತ್ರಪಃ ।**
**ಅವಿಧೇಯೇಂದ್ರಿಯಃ ಪುಂಸಾಂ ಗೌರಿವೈತಿ ವಿಧೇಯತಾಮ್ ॥ ೧೮೯**
-ಕಿರಾತಾರ್ಜುನೀಯ, ೧೧-೩೩

ಹಣವನ್ನು ಗಳಿಸಲು ಇತರರಿಗೆ ಅಧೀನನಾಗಿ, ಕೆಳಮಟ್ಟದ ಕೆಲಸವನ್ನೂ ಸಹ ನಾಚಿಕೆಯಿಲ್ಲದೆ ಮಾಡುತ್ತಾ ಇಂದ್ರಿಯಗಳಿಗೆ ಅಧೀನನಾದವನು ಹಸುವಿನಂತೆ ಇತರರಿಗೆ ಗುಲಾಮನಾಗುತ್ತಾನೆ.

**ಪರಿತ್ಯಜೇದರ್ಥಕಾಮೌ ಯೌ ಸ್ಯಾತಾಂ ಧರ್ಮವರ್ಜಿತೌ ।**
**ಧರ್ಮಂ ಚಾಪ್ಯಸುಖೋದರ್ಕಂ ಲೋಕವಿಕ್ರುಷ್ಟಮೇವ ಚ ॥ ೧೯೦**
-ಮನುಸ್ಮೃತಿ, ೪-೧೭೬

ಧರ್ಮಕ್ಕೆ ವಿರುದ್ಧವಾದ ಅರ್ಥಕಾಮಗಳನ್ನು ಬಿಡಬೇಕು. ಹಿಂದೆ ಆಚರಣೆಯಲ್ಲಿದ್ದ ಧರ್ಮವು ಈಗ ಲೋಕನಿಂದಿತವಾಗಿದ್ದರೆ, ಮುಂದೆ ಒಳ್ಳೆಯ ಫಲವನ್ನು ಕೊಡುವುದಿಲ್ಲವಾದರೆ ಬಿಡಬೇಕು.

**ಪರಿತಪ್ಯತ ಏವ ನೋತ್ತಮಃ ಪರಿತಪ್ತೋಽಪ್ಯಪರಃ ಸುಸಂವೃತಿಃ ।**
**ಪರವೃದ್ಧಿಭಿರಾಹಿತವ್ಯಥಃ ಸ್ಫುಟನಿರ್ಭಿನ್ನದುರಾಶಯೋಽಧಮಃ ॥ ೧೯೧**
-ಶಿಶುಪಾಲವಧ, ೧೬-೨೩

ಉತ್ತಮನು ಪರರ ಏಳಿಗೆಯನ್ನು ಕಂಡು ಕರುಬುವವನಲ್ಲ. ಸಾಮಾನ್ಯನು ಕರುಬುತ್ತಾನೆ. ಆದರೆ ತೋರಿಸಿಕೊಳ್ಳುವುದಿಲ್ಲ. ಆದರೆ ನೀಚನು ಪರರ ಏಳಿಗೆಯನ್ನು ಸಹಿಸಲಾರದೆ ವ್ಯಥೆಪಟ್ಟು ತನ್ನ ಉರಿಯನ್ನು ಹೊರಗಡೆಯೂ ತೋರಿಸುತ್ತಾನೆ.

**ಪ್ರರೋಹಿಶಾಖಿನಾಂ ಶಾಖಾಸ್ಕಂಧಸರ್ವವಿದಾರಣೇ ।**
**ಉಪಜೀವ್ಯದ್ರುಮಾಣಾಂ ಚ ವಿಂಶತೇರ್ದ್ವಿಗುಣೋ ದಮಃ ॥ ೧೯೨**
-ಯಾಜ್ಞವಲ್ಕ್ಯ, ೨-೨೨೭

ಬೆಳೆಯುತ್ತಿರುವ ಮರಗಳ ಕೊಂಬೆ, ಬುಡ ಮೊದಲಾಗಿ ಎಲ್ಲವನ್ನೂ ಕಡಿದರೆ, ಇತರರಿಗೆ ಸಹಾಯಕವಾದ ಮರಗಳನ್ನೂ ಕಡಿದರೆ ಎರಡರಷ್ಟು ದ್ರವ್ಯದಂಡ ವಿಧಿಸಬೇಕು.

**ಪಶ್ಯಸ್ಯದ್ರೌ ಜ್ವಲದಗ್ನಿಂ ನ ಪುನಃ ಪಾದಯೋರಧಃ ।**
**ಯತ್ಪರಂ ಶಿಕ್ಷಯಸ್ಯೇವಂ ನ ಸ್ವಂ ಶಿಕ್ಷಯಸಿ ಸ್ವಯಮ್ ॥ ೧೯೩**
-ಪರಿಶಿಷ್ಟಪರ್ವ, ೧-೩೮೨

ಬೆಟ್ಟದಲ್ಲಿ ಉರಿಯುತ್ತಿರುವ ಅಗ್ನಿಯನ್ನು ಕಾಣುತ್ತೀಯ ಕಾಲಿನ ಕೆಳಗೆ ಇರುವ ಬೆಂಕಿಯು ಗೊತ್ತಿಲ್ಲ. ಬೇರೆಯವರಿಗೆ ನೀತಿಯನ್ನು ಹೇಳುತ್ತೀಯೆ. ಆದರೆ ನೀನು ನೀತಿಯನ್ನು ಪಾಲಿಸುತ್ತಿಲ್ಲ.

ಪ್ರಸಹ್ಯಮಣಿಮುದ್ಧರೇನ್ಮಕರವಕ್ತ್ರದಂಷ್ಟ್ರಾಂತರಾತ್
ಸಮುದ್ರಮಪಿ ಸಂತರೇತ್ಪ್ರಚಲದೂರ್ಮಿಮಾಲಾಕುಲಮ್ ।
ಭುಜಂಗಮಪಿ ಕೋಪಿತಂ ಶಿರಸಿ ಪುಷ್ಪವದ್ಧಾರಯೇತ್
ನ ತು ಪ್ರತಿನಿವಿಷ್ಟಮೂರ್ಖಜನಚಿತ್ತಮಾರಾಧಯೇತ್ ॥ ೧೯೪

-ನೀತಿಶತಕ-೨

ಮೊಸಳೆಯ ಬಾಯೊಳಗಿನ ಹಲ್ಲುಗಳ ಮಧ್ಯದಲ್ಲಿ ಸಿಕ್ಕಿಕೊಂಡ ರತ್ನವನ್ನೂ ಹಠಾತ್ತಾಗಿ ಹೊರಗೆ ತೆಗೆಯಬಹುದು. ಏಳುತ್ತಿರುವ ಅಲೆಗಳ ಸಾಲುಗಳಿಂದ ಕ್ಷುಬ್ಧವಾದ ಸಮುದ್ರವನ್ನೂ ಕೂಡ ದಾಟಬಹುದು. ಸಿಟ್ಟಿಗೆದ್ದ ಹಾವನ್ನೂ ಕೂಡ ಹೂವಿನಂತೆ ತಲೆಯಲ್ಲಿ ಧರಿಸಬಹುದು. ಆದರೆ ಹಟಮಾರಿಯಾದ ಮೂರ್ಖನ ಮನಸ್ಸನ್ನು ಮೆಚ್ಚಿಸಲಾಗುವುದೇ ಇಲ್ಲ.

ಪ್ರಸಿದ್ಧೌ ಕಾರ್ಯಾಣಾಂ ಪ್ರವದತಿ ಜನಃ ಪಾರ್ಥಿವಬಲಂ
ವಿಪತ್ತೌ ವಿಸ್ಪಷ್ಟಂ ಸಚಿವಮತಿದೋಷಂ ಜನಯತಿ ।
ಅಮಾತ್ಯಾ ಇತ್ಯುಕ್ತಾಃ ಶ್ರುತಿಸುಖಮುದಾರಂ ನೃಪತಿಭಿಃ
ಸುಸೂಕ್ಷ್ಮಂ ದಂಡ್ಯಂತೇ ಮತಿಬಲವಿದಗ್ಧಾಃ ಕುಪುರುಷಾಃ ॥ ೧೯೫

-ಅವಿಮಾರಕ, ೧-೫

ಕೈಹಿಡಿದ ಕೆಲಸಗಳು ಕೈಗೂಡಿದರೆ ಜನರು ಅರಸನ ಮಹಿಮೆಯೆಂದು ಹೊಗಳುತ್ತಾರೆ. ಕೆಲಸಗಳು ಕೆಟ್ಟುಹೋದರೆ ಮಂತ್ರಿಗಳಿಗೆ ಬುದ್ಧಿಯಿಲ್ಲವೆಂದು ತೆಗಳುತ್ತಾರೆ. ಕಿವಿಗೆ ಇಂಪಾಗುವಂತೆ ಧಾರಾಳವಾಗಿ ಅಮಾತ್ಯಾಃ ಎಂದು ಕರೆಯಲ್ಪಡುವ ಈ ಮಂತ್ರಿಗಳು ಬುದ್ಧಿಶಕ್ತಿಯಿಂದ ನುರಿತಿದ್ದರೂ ಸೂಕ್ಷ್ಮವಾದ ರೀತಿಯಲ್ಲಿ ಸಾಮಾನ್ಯವಾದ ಕೆಟ್ಟ ಮನುಷ್ಯರಂತೆ ರಾಜರಿಂದ ದಂಡಿಸಲ್ಪಡುತ್ತಾರೆ.

ಪಾತ್ರವಿಶೇಷೇ ನ್ಯಸ್ತಂ ಗುಣಾಂತರಂ ವ್ರಜತಿ ಶಿಲ್ಪಮಾಧಾತುಃ ।
ಜಲಮಿವ ಸಮುದ್ರಶುಕ್ತೌ ಮುಕ್ತಾಫಲತಾಂ ಪಯೋದಸ್ಯ ॥ ೧೯೬

-ಮಾಲವಿಕಾಗ್ನಿಮಿತ್ರ, ೧-೬

ಯೋಗ್ಯತೆಯನ್ನರಿತು ಗುರುವು ಕಲಿಸಿದ ವಿದ್ಯೆಯು ಬಹಳ ಉನ್ನತಮಟ್ಟವನ್ನೇರುತ್ತದೆ. ಮೋಡವು ಸುರಿದ ನೀರು ಕಡಲಿನ ಮುತ್ತಿನ ಚಿಪ್ಪಿನಲ್ಲಿ ಬಿದ್ದರೆ ಒಳ್ಳೆಯ ಮುತ್ತಾಗುತ್ತದೆ.

ಪಾದಾಹತಂ ಯದುತ್ಥಾಯ ಮೂರ್ಧಾನಮಧಿರೋಹತಿ ।
ಸ್ವಸ್ಥಾದೇವಾಪಮಾನೇಽಪಿ ದೇಹಿನಸ್ತದ್ವರಂ ರಜಃ ॥ ೧೯೭

-ಶಿಶುಪಾಲವಧ, ೨-೪೬

ಕಾಲಿನಿಂದ ತುಳಿದ ಕೂಡಲೇ ಧೂಳು ತನ್ನ ಜಾಗದಿಂದ ಎಗರಿ ತುಳಿದವನ ತಲೆಯಮೇಲೆ ಎರಗುತ್ತದೆ. ಅಪಮಾನವಾದರೂ ಸುಮ್ಮನಿರುವ ಮಾನವಗಿಂತಲೂ ಆ ಧೂಳೇ ಲೇಸು.

ಪಾದಾಹತೋಽಪಿ ದೃಢದಂಡಸಮಾಹತೋಽಪಿ
ಯಂ ದಂಷ್ಟ್ರಯಾ ಸ್ಪೃಶತಿ ತಂ ಕಿಲ ಹಂತಿ ಸರ್ಪಃ ।
ಕೋಪ್ಯೇಷ ಏವ ಪಿಶುನೋಗ್ರಮನುಷ್ಯಧರ್ಮಃ
ಕರ್ಣೇ ಪರಂ ಸ್ಪೃಶತಿ ಹಂತಿ ಪರಂ ಸಮೂಲಮ್ ॥ ೧೯೮

-ಪಂಚತಂತ್ರ, ಮಿತ್ರಭೇದ-೩೨೮

ಕಾಲಿನಿಂದ ಒದೆಯಲ್ಪಟ್ಟರೂ ಬಲವಾದ ಕೋಲಿನಿಂದ ಹೊಡೆಯಲ್ಪಟ್ಟರೂ ಹಾವು ಯಾರನ್ನು ತನ್ನ ಹಲ್ಲಿನಿಂದ ಕಚ್ಚುತ್ತದೆಯೋ ಅವನನ್ನೇ ಕೊಲ್ಲುತ್ತದೆ. ಆದರೆ ಚಾಡಿ ಹೇಳುವ ಕೆಟ್ಟಮನುಷ್ಯನ ಧರ್ಮ ಏನೋ ಬಹಳ ವಿಚಿತ್ರವಾಗಿದೆ! ಒಬ್ಬನನ್ನು ಅವನು ಕಿವಿಯಲ್ಲಿ ಕಚ್ಚುತ್ತಾನೆ ಮತ್ತೊಬ್ಬನನ್ನು ಬುಡಸಹಿತ ನಾಶಪಡಿಸುತ್ತಾನೆ.

ಪಾನಂ ದುರ್ಜನಸಂಸರ್ಗಃ ಪತ್ಯಾ ಚ ವಿರಹೋಽಟನಮ್ ।
ಸ್ವಪ್ನಮನ್ಯಗೃಹೇ ವಾಸಃ ನಾರೀಣಾಂ ದೂಷಣಾನಿ ಷಟ್ ॥ ೧೯೯

-ಹಿತೋಪದೇಶ, ಮಿತ್ರಲಾಭ-೭೬

ಮದ್ಯಪಾನ, ದುರ್ಜನರ ಸಹವಾಸ, ಪತಿಯೊಡನೆ ಅಗಲಿಕೆ, ಅಲೆದಾಡುವಿಕೆ, ಇನ್ನೊಬ್ಬರ ಮನೆಯಲ್ಲಿ ವಾಸ ಮತ್ತು ನಿದ್ರೆ ಇವು ಆರೂ ಹೆಂಗಸರಿಗೆ ದೂಷಣಗಳು.

ಪ್ರಾಯಃ ಸಂಪ್ರತಿ ಕೋಪಾಯ ಸನ್ಮಾರ್ಗಸ್ಯೋಪದೇಶನಂ ।
ವಿಲೂನನಾಸಿಕಸ್ಯೇವ ಯದ್ವದಾದರ್ಶದರ್ಶನಮ್ ॥ ೨೦೦

-ಪ್ರಬಂಧಚಿಂತಾಮಣಿ-ಪುಟ ೨೯೧

ಒಳ್ಳೆಯ ಮಾರ್ಗದಲ್ಲಿ ನಡೆದುಕೋ ಎಂದು ಹೇಳುವುದು ಕೋಪವನ್ನುಂಟು ಮಾಡುತ್ತದೆ. ಮೂಗು ಕಳೆದುಕೊಂಡವನಿಗೆ ಕನ್ನಡಿ ತೋರಿಸುವುದು ಅಪರಾಧವಾಗುತ್ತದೆ.

ಪ್ರಾಯೋ ಧನವತಾಮೇವ ಧನೇ ತೃಷ್ಣಾ ಗರೀಯಸೀ ।
ಪಶ್ಯ ಕೋಟಿದ್ವಯಾಸಕ್ತಂ ಲಕ್ಷಾಯ ಪ್ರವಣಂ ಧನುಃ ॥ ೨೦೧

-ಭೋಜಪ್ರಬಂಧ

ಸಾಮಾನ್ಯವಾಗಿ ಧನಿಕರಿಗೇ ಧನದ ಆಸೆ ಹೆಚ್ಚಾಗಿರುತ್ತದೆ. ಬಿಲ್ಲು ತನಗೆ ಎರಡು ಕೋಟಿ ಇದ್ದರೂ ಲಕ್ಷಕ್ಕೆ ಆಸೆಪಡುತ್ತದೆ, ನೋಡು! (ಕೋಟಿದ್ವಯ = ಬಿಲ್ಲಿನ ಎರಡು ತುದಿಗಳು. ಲಕ್ಷ = ಗುರಿ).

**ಪಾರಾವತಾಃ ಶಿಲಾಹಾರಾಃ ಕದಾಚಿದಪಿ ಚಾತಕಾಃ ।**
**ನ ಪಿಬಂತಿ ಮಹೀತೋಯಂ ವ್ರತಿನಸ್ತೇ ಭವಂತಿ ಕಿಮ್ ॥ ೨೦೨**

-ಗರುಡಪುರಾಣ, ೧೭-೬೯

ಪಾರಿವಾಳಗಳು ಹಕ್ಕಲಾರಿಸಿ ತಿನ್ನುತ್ತವೆ. ಚಾತಕಗಳು ಎಂದಿಗೂ ನೆಲದ ಮೇಲಿರುವ ನೀರನ್ನು ಕುಡಿಯುವುದಿಲ್ಲ. ಅವುಗಳು ವ್ರತ ಮಾಡುತ್ತವೆ ಎಂದು ಹೇಳೋಣವೇ!

**ಪಾರುಷ್ಯಮನೃತಂ ಚೈವ ಪೈಶುನ್ಯಂ ಚಾಪಿ ಸರ್ವಶಃ ।**
**ಅಸಂಬದ್ಧಪ್ರಲಾಪಶ್ಚ ವಾಙ್ಮಯಂ ಸ್ಯಾಚ್ಚತುರ್ವಿಧಮ್ ॥ ೨೦೩**

-ಮನುಸ್ಮೃತಿ, ೧೨-೬

ಅಪ್ರಿಯವಾದ ಮಾತು, ಸುಳ್ಳು, ಚಾಡಿ, ಅಸಂಗತವಾದ ಹರಟೆ ಇವು ನಾಲ್ಕು ಮಾತಿನಿಂದಾಗುವ ಪಾಪಕರ್ಮಗಳು.

**ಪ್ರಾಸಾದಿಕತ್ವಮಾರೋಗ್ಯಂ ಪ್ರಾಮೋದ್ಯಂ ಚಿರಜೀವಿತಂ ।**
**ಚಕ್ರವರ್ತಿಸುಖಂ ಸ್ಫೀತಂ ಶಾಂತಃ ಪ್ರಾಪ್ನೋತಿ ಸಂಸರನ್ ॥ ೨೦೪**

-ಬೋಧಿಚರ್ಯಾವತಾರ - ೨೪೨

ಸಂಸಾರದಲ್ಲಿದ್ದರೂ ಸಹ ಶಾಂತನಾದವನು ಮನಸ್ತೃಪ್ತಿಯನ್ನೂ, ಆರೋಗ್ಯವನ್ನೂ, ಆನಂದವನ್ನೂ, ದೀರ್ಘಾಯುಷ್ಯವನ್ನೂ, ವಿಸ್ತಾರವಾದ ರಾಜಭೋಗಗಳನ್ನೂ ಪಡೆಯುತ್ತಾನೆ.

**ಪುತ್ರೋ ಭೃತ್ಯಃ ಸುಹೃನ್ಮಿತ್ರಂ ಭಾರ್ಯಾ ಧರ್ಮಶ್ಚ ಸತ್ಯತಾ ।**
**ತಸ್ಯೈತಾನ್ಯಪಯಾಸ್ಯಂತಿ ಕ್ರೋಧಶೀಲಸ್ಯ ನಿಶ್ಚಿತಮ್ ॥ ೨೦೫**

-ಸುಭಾಷಿತಸುಧಾನಿಧಿ

ಮಗ, ಸೇವಕ, ಸ್ನೇಹಿತ, ಮಿತ್ರ, ಹೆಂಡತಿ, ಧರ್ಮ, ಸತ್ಯಶೀಲತೆ ಇವೆಲ್ಲವೂ ಕೋಪದ ಸ್ವಭಾವದವನನ್ನು ತ್ಯಜಿಸಿ, ದೂರಹೋಗುತ್ತವೆ.

**ಪೈಶುನ್ಯಂ ಸಾಹಸಂ ದ್ರೋಹ ಈರ್ಷ್ಯಾಸೂಯಾರ್ಥದೂಷಣಂ ।**
**ವಾಗ್ದಂಡಜಂ ಚ ಪೌರುಷ್ಯಂ ಕ್ರೋಧಜೋಽಪಿ ಗಣೋಷ್ಟಕಃ ॥ ೨೦೬**

-ಮನುಸ್ಮೃತಿ, ೭-೪೮

ಇಲ್ಲದಿರುವ ದೋಷವನ್ನು ಹೇಳುವುದು, ಒಳ್ಳೆಯವರನ್ನು ನಿಷ್ಕಾರಣವಾಗಿ ತೊಂದರೆಗೆ ಗುರಿಪಡಿಸುವುದು, ಮೋಸದಿಂದ ಕೊಲ್ಲಿಸುವುದು, ಇತರರಲ್ಲಿರುವ ಒಳ್ಳೆಯ ಗುಣಗಳನ್ನು ಸಹಿಸದೆ ಇರುವುದು, ಇತರರಲ್ಲಿ ಒಳ್ಳೆಯ ಗುಣಗಳಿದ್ದರೂ ಬೇಕಾಗಿ ದೋಷವನ್ನು ತೋರುವುದು, ಹಣವನ್ನು ಕದಿಯುವುದು ಅಥವಾ ತೆಗೆದುಕೊಂಡವರಿಗೆ ಕೊಡದೆ ಇರುವುದು, ಕೆಟ್ಟ ಮಾತನ್ನು ಆಡುವುದು, ತೀಕ್ಷ್ಣವಾದ ದಂಡ ಕೊಡುವುದು ಇವೆಂಟೂ ಸಿಟ್ಟಿನಿಂದಾದ ದೋಷಗಳು. ಇವುಗಳನ್ನು ಬಿಡಬೇಕು.

**ಬಲಾದ್ದತ್ತಂ ಬಲಾದ್ಭುಕ್ತಂ ಬಲಾದ್ಯಚ್ಚಾಪಿ ಲೇಖಿತಂ ।**
**ಸರ್ವಾನ್ ಬಲಕೃತಾನರ್ಥಾನ್ ಅಕೃತಾನ್ಮನುರಬ್ರವೀತ್ ॥ ೨೦೭**

-ಮನುಸ್ಮೃತಿ, ೮-೧೬೮

ಬಲಾತ್ಕಾರವಾಗಿ ಕೊಟ್ಟದ್ದು, ಅನುಭವಿಸಿದ್ದು, ಬರೆಸಿದ್ದು, ಎಲ್ಲವೂ ವ್ಯರ್ಥ. ಬಲಾತ್ಕಾರವಾಗಿ ನಡೆದ ಯಾವ ಕೆಲಸವೂ ಊರ್ಜಿತವಲ್ಲ.

**ಬಲವಾನಪಿ ಕೋಪಜನ್ಮನಃ**
**ತಮಸೋ ನಾಭಿಭವಂ ರುಣದ್ಧಿ ಯಃ ।**
**ಕ್ಷಯಪಕ್ಷ ಇವೈಂದವೀಃ ಕಲಾಃ**
**ಸಕಲಾ ಹಂತಿ ಸ ಶಕ್ತಿಸಂಪದಃ ॥ ೨೦೮**

-ಕಿರಾತಾರ್ಜುನೀಯ, ೨-೩೭

ಎಷ್ಟೇ ಪರಾಕ್ರಮಿಯಾಗಿರಲಿ ಕೋಪದಿಂದುಂಟಾದ ತಮಸ್ಸಿನ ವೇಗವನ್ನು ತಡೆಯದಿದ್ದರೆ, ಕೃಷ್ಣಪಕ್ಷದಲ್ಲಿ ಚಂದ್ರನ ಕಲೆಗಳನ್ನು ಹೇಗೋ ಹಾಗೆ ಅದು ಅವನ ಶಕ್ತಿಯೆಲ್ಲವನ್ನೂ ನಾಶಪಡಿಸುತ್ತದೆ.

**ಬಹೂನಾಮಪ್ಯಸಾರಾಣಾಂ ಸಮವಾಯೋ ಹಿ ದುರ್ಜಯಃ ।**
**ತೃಣೈರಾವೇಷ್ಟ್ಯತೇ ರಜ್ಜುರ್ಯೇನ ನಾಗೋಽಪಿ ಬಧ್ಯತೇ ॥ ೨೦೯**

-ಪಂಚತಂತ್ರ, ಮಿತ್ರಭೇದ-೩೬೧

ಕಡಿಮೆ ಶಕ್ತಿಯುಳ್ಳ ಅನೇಕ ವಸ್ತುಗಳು ಒಂದುಗೂಡಿದಾಗ ಅದನ್ನು ಗೆಲ್ಲುವುದು ಅಶಕ್ಯವಾಗುತ್ತದೆ. ಹುಲ್ಲುಗಳಿಂದ ಹೊಸೆಯಲ್ಪಟ್ಟ ಹಗ್ಗದಿಂದ ಆನೆಯೂ ಕೂಡ ಕಟ್ಟಲ್ಪಡುತ್ತದೆ.

**ಬೃಹತ್ಸಹಾಯಃ ಕಾರ್ಯಾಂತಂ ಕ್ಷೋದೀಯಾನಪಿ ಗಚ್ಛತಿ ।**
**ಸಂಭೂಯಾಂಭೋಧಿಮಭ್ಯೇತಿ ಮಹಾನದ್ಯಾ ನಗಾಪಗಾ ॥ ೨೧೦**

-ಶಿಶುಪಾಲವಧ, ೧೬-೨೨

ಎಷ್ಟೇ ಸಣ್ಣವನಾಗಿದ್ದರೂ, ಬಲಹೀನನಾಗಿದ್ದರೂ ದೊಡ್ಡವರ ಸಹಾಯವಿದ್ದರೆ ಕೆಲಸವನ್ನು ಮುಗಿಸಬಲ್ಲ. ಬೆಟ್ಟದ ತೊರೆಯು ಬಹಳ ಸಣ್ಣದಾಗಿದ್ದರೂ ಮಹಾನದಿಯೊಡನೆ ಸೇರಿ ಸಮುದ್ರವನ್ನು ಸೇರಬಲ್ಲುದು.

**ಭದ್ರಂ ಭದ್ರಮಿತಿ ಬ್ರೂಯಾತ್ ಭದ್ರಮಿತ್ಯೇವ ವಾ ವದೇತ್ ।**
**ಶುಷ್ಕವೈರಂ ವಿವಾದಂ ಚ ನ ಕುರ್ಯಾತ್ ಕೇನಚಿತ್ ಸಹ ॥ ೨೧೧**

-ಮನುಸ್ಮೃತಿ, ೪-೧೩೯

ಒಳ್ಳೆಯದಾಗಲಿ, ಶುಭವಾಗಲಿ ಎಂದೇ ಯಾವಾಗಲೂ ಯಾವ ಸಂದರ್ಭದಲ್ಲಿಯೂ ಹೇಳುತ್ತಿರಬೇಕು. ಕಾರಣವಿಲ್ಲದೆ ಹಗೆತನವನ್ನೂ, ಕೆಲಸಕ್ಕೆ ಬಾರದ ಚರ್ಚೆಯನ್ನೂ ಯಾರೊಡನೆಯೂ ಮಾಡಬಾರದು.

**ಭಯೇ ವಾ ಯದಿ ವಾ ಹರ್ಷೇ ಸಂಪ್ರಾಪ್ತೇ ಯೋ ವಿಮರ್ಶಯೇತ್।**
**ಕೃತ್ಯಂ ನ ಕುರುತೇ ವೇಗಾತ್ ನ ಸ ಸಂತಾಪಮಾಪ್ನುಯಾತ್ ॥ ೨೧೨**

-ಪಂಚತಂತ್ರ, ಮಿತ್ರಭೇದ-೧೧೪

ಭಯವುಂಟಾದಾಗ ಅಥವಾ ಸಂತೋಷವುಂಟಾದಾಗ ಯಾವಾತನು ನಿಧಾನವಾಗಿ ಯೋಚಿಸುತ್ತಾನೆಯೋ, ತಟ್ಟನೆ ಯಾವನು ಕೆಲಸಮಾಡುವುದಿಲ್ಲವೋ, ಅವನು ದುಃಖವನ್ನು ಹೊಂದುವುದಿಲ್ಲ.

**ಭವಂತಿ ಬಹವೋ ಮೂರ್ಖಾಃ ಕ್ವಚಿದೇಕೋ ವಿಶುದ್ಧಧೀಃ ।**
**ತ್ರಾಸಿತೋಽಪಿ ಸದಾ ಮೂರ್ಖೈರಚಲೋ ಯಸ್ಯ ಬುದ್ಧಿಮಾನ್ ॥೨೧೩**

-ವೇದಾಂತಾಚಾರ್ಯ

ಮೂರ್ಖರು ಬಹಳ ಮಂದಿ ಇರುತ್ತಾರೆ. ಒಳ್ಳೆಯ ಪ್ರಜ್ಞಾಶಕ್ತಿಯುಳ್ಳವನು ಅಪರೂಪ. ಮೂರ್ಖರಿಂದ ಹೆದರಿಸಲ್ಪಟ್ಟರೂ ಸಹ ಯಾರು ನಿಶ್ಚಲನಾಗಿರುವನೋ ಅವನೇ ಬುದ್ಧಿವಂತ.

**ಭ್ರಾಂತಂ ದೇಶಮನೇಕದುರ್ಗವಿಷಮಂ ಪ್ರಾಪ್ತಂ ನ ಕಿಂಚಿತ್ಫಲಂ**
**ತ್ಯಕ್ತ್ವಾ ಜಾತಿಕುಲಾಭಿಮಾನಮುಚಿತಂ ಸೇವಾ ಕೃತಾ ನಿಷ್ಫಲಾ ।**
**ಭುಕ್ತಂ ಮಾನವಿವರ್ಜಿತಂ ಪರಗೃಹೇಷ್ವಾಶಂಕಯಾ ಕಾಕವ-**
**ತ್ತೃಷ್ಣೇ ಜೃಂಭಸಿ ಪಾಪಕರ್ಮನಿರತೇ ನಾದ್ಯಾಪಿ ಸಂತುಷ್ಯಸಿ ॥ ೨೧೪**

-ವೈರಾಗ್ಯಶತಕ-೨೫

ಕಷ್ಟವಾದ ದಾರಿಗಳನ್ನು ತುಳಿದು ದೇಶದಲ್ಲಿ ಅಲೆದಾಯಿತು. ಆದರೆ ಯಾವ ಫಲವೂ ಸಿಕ್ಕಲಿಲ್ಲ. ಜಾತಿ ಕುಲಾಭಿಮಾನಗಳನ್ನು ತೊರೆದು ಸೇವೆ ಮಾಡಿದ್ದಾಯಿತು.

ಅದು ಪ್ರಯೋಜನವಾಗಲಿಲ್ಲ. ಬೇರೆಯವರ ಮನೆಗಳಲ್ಲಿ ಮಾನಬಿಟ್ಟು ಕಾಗೆಯಂತೆ ಹೆದರುತ್ತಾ ಊಟಮಾಡಿದ್ದಾಯಿತು. ಎಲೈ ದುರಾಸೆಯೇ ಪಾಪಕರ್ಮಗಳನ್ನು ಮಾಡುತ್ತಾ ಹೆಚ್ಚುತ್ತಿರುವೆ. ಆದರೂ ನೀನು ತೃಪ್ತಳಾಗಿಲ್ಲವಲ್ಲಾ!

**ಭಿಷಜ್ಮಿಥ್ಯಾಚರನ್ ದಂಡ್ಯಸ್ತಿರ್ಯಕ್ಷು ಪ್ರಥಮಂ ದಮಂ ।**
**ಮಾನುಷೇ ಮಧ್ಯಮಂ ರಾಜಪುರುಷೇಷೂತ್ತಮಂ ದಮಮ್ ॥ ೨೧೫**

-ಯಾಜ್ಞವಲ್ಕ್ಯ, ೨-೨೪೨

ವೈದ್ಯನು ಸುಳ್ಳಾಗಿ ದನಗಳಿಗೆ, ಮನುಷ್ಯರಿಗೆ, ಅಧಿಕಾರಿಗಳಿಗೆ ಚಿಕಿತ್ಸೆಮಾಡಿದರೆ ಕ್ರಮವಾಗಿ ಹೆಚ್ಚು ದಂಡಿಸಬೇಕು.

**ಭಿಕ್ಷಾಶನಂ ತದಪಿ ನೀರಸಮೇಕವಾರಂ**
**ಶಯ್ಯಾ ಚ ಭೂಃ ಪರಿಜನೋ ನಿಜದೇಹಮಾತ್ರಮ್ ।**
**ವಸ್ತ್ರಂ ಸುಜೀರ್ಣಶತಖಂಡಮಯೀ ಚ ಕಂಥಾ**
**ಹಾ ಹಾ ತಥಾಪಿ ವಿಷಯಾನ್ನ ಜಹಾತಿ ಚೇತಃ ॥ ೨೧೬**

-ವೈರಾಗ್ಯಶತಕ, ೧೮

ಭಿಕ್ಷಾನ್ನವೇ ಆಹಾರ. ಆ ನೀರಸವಾದ ಆಹಾರವೂ ಒಂದು ಹೊತ್ತು. ಭೂಮಿಯೇ ಹಾಸಿಗೆ. ತನ್ನ ದೇಹದ ಅಂಗಾಂಗಗಳೇ ಸೇವಕರು. ನೂರು ಚೂರುಗಳಿಂದ ಕೂಡಿದ ಹಳೆಯ ಕಂತೆಯೇ ಬಟ್ಟೆ. ಅಯ್ಯೋ! ಹಾಗಾದರೂ ಮನಸ್ಸು ವಿಷಯಸುಖಗಳ ಆಸೆಯನ್ನು ಬಿಡುವುದಿಲ್ಲ.

**ಭೂತಿರ್ನೀಚಗೃಹೇಷು ವಿಪ್ರಸದನೇ ದಾರಿದ್ರ್ಯಕೋಲಾಹಲಃ**
**ನಾಶೋ ಹಂತ ಸತಾಮಸತ್ಪಥಜುಷಾಮಾಯುಃ ಶತಾನಾಂ ಶತಂ ।**
**ದುರ್ನೀತಿಂ ತವ ವೀಕ್ಷ್ಯ ಕೋಪದಹನಜ್ವಾಲಾಜಟಾಲೋಽಪಿಸನ್**
**ಕಿಂ ಕುರ್ವೇ ಜಗದೀಶ ಯತ್ಪುನರಹಂ ದೀನೋ ಭವಾನೀಶ್ವರಃ ॥೨೧೭**

-ಭಾಮಿನೀಮಾನ, ೪-೨೫

ಮೂರ್ಖರೂ ನೀಚರೂ ಬೇಕಾದಹಾಗೆ ಶ್ರೀಮಂತರಾಗಿದ್ದಾರೆ. ಉತ್ತಮರ ಮತ್ತು ಪಂಡಿತರ ಮನೆಗಳಲ್ಲಿ ಬಡತನ ತುಂಬಿದೆ. ಒಳ್ಳೆಯವರು ಬೇಗ ಸಾಯುತ್ತಾರೆ. ಕೆಟ್ಟವರು ನೂರಕ್ಕೆ ನೂರು ವರ್ಷ ಬದುಕುತ್ತಾರೆ. ಈ ರೀತಿ ಭಗವಂತನ ಕೆಟ್ಟ ನಡವಳಿಕೆಯನ್ನು ನೋಡಿ ನನಗೆ ತುಂಬಾ ಸಿಟ್ಟಾಗಿ ಉರಿಯುತ್ತಿದ್ದೇನೆ. ಆದರೆ ಏನು ಮಾಡಲಿ. ಭಗವಂತನು ಎಲ್ಲಕ್ಕೂ ಈಶ್ವರ. ನಾನೋ ಕೇವಲ ಒಬ್ಬ ದೀನ.

**ಭೂತಾನಾಂ ಪ್ರಾಣಿನಃ ಶ್ರೇಷ್ಠಾಃ ಪ್ರಾಣಿನಾಂ ಬುದ್ಧಿಜೀವಿನಃ**
**ಬುದ್ಧಿಮತ್ಸು ನರಾಃ ಶ್ರೇಷ್ಠಾ ನರಾಣಾಂ ಸಾತ್ವಿಕಾಃ ಸ್ಮೃತಾಃ ।**

**ಸಾತ್ತ್ವಿಕೇಷು ಚ ವಿದ್ವಾಂಸಃ ವಿದ್ವತ್ಸು ಕೃತಬುದ್ಧಯಃ**
**ಕೃತಬುದ್ಧಿಷು ಕರ್ತಾರಃ ಕರ್ತೃಷು ಬ್ರಹ್ಮವೇದಿನಃ ॥** ೨೧೮

-ಮನುಸ್ಮೃತಿ, ೧-೯೬, ೯೭

ಲೋಕದಲ್ಲಿ ಜಡವಸ್ತುಗಳಿಗಿಂತಲೂ ಪ್ರಾಣಿಗಳು ಶ್ರೇಷ್ಠ. ಅವುಗಳಲ್ಲಿ ಬುದ್ಧಿಯನ್ನುಪಯೋಗಿಸುವ ಇರುವೆ, ನರಿ ಮೊದಲಾದುವುಗಳು ಉತ್ತಮ. ಬುದ್ಧಿಜೀವಿಗಳಲ್ಲಿ ಮಾನವ, ಮಾನವರಲ್ಲಿ ಒಳ್ಳೆಯವರು, ಒಳ್ಳೆಯವರಲ್ಲಿ ವಿದ್ಯಾವಂತರು, ವಿದ್ಯಾವಂತರಲ್ಲಿ ಪರಿಣತರು, ಪರಿಣತರಲ್ಲಿ ಆಚರಿಸುವವರು, ಆಚರಿಸುವವರಲ್ಲಿ ಬ್ರಹ್ಮಜ್ಞಾನಿಗಳು ಶ್ರೇಷ್ಠ.

**ಭೂರ್ಧಾರಯತಿ ಸತ್ಯೇನ ಸತ್ಯೇನೋದಯತೇ ರವಿಃ ।**
**ಸತ್ಯೇನ ವಾಯುಃ ಪವತೇ ಸತ್ಯೇನಾಪಃ ಸ್ರವಂತಿ ಚ ॥** ೨೧೯

-ನಾರದಸ್ಮೃತಿ, ೨-೧೯೧

ಸತ್ಯದಿಂದ ಭೂಮಿಯು ನಿಂತಿದೆ. ಸತ್ಯದಿಂದಲೇ ಸೂರ್ಯನು ಹುಟ್ಟುತ್ತಾನೆ. ಸತ್ಯದಿಂದಲೇ ಗಾಳಿಯು ಬೀಸುತ್ತದೆ. ಸತ್ಯದಿಂದಲೇ ನೀರು ಹರಿಯುತ್ತದೆ.

**ಭೇಷಜಸ್ನೇಹಲವಣಗಂಧಧಾನ್ಯಗುಡಾದಿಷು ।**
**ಪಣ್ಯೇಷು ಪ್ರಕ್ಷಿಪನ್ ಹೀನಂ ಪಣಾನ್ ದಾಪ್ಯಸ್ತು ಷೋಡಶ ॥** ೨೨೦

-ಯಾಜ್ಞವಲ್ಕ್ಯ, ೨-೨೪೫

ಔಷಧಗಳು, ಎಣ್ಣೆ, ಉಪ್ಪು, ಗಂಧ, ಧಾನ್ಯಗಳು, ಬೆಲ್ಲ ಮೊದಲಾದುವುಗಳಲ್ಲಿ ಹೀನಪದಾರ್ಥವನ್ನು ಬೆರಸಿ ಮಾರುವವನು ದಂಡಾರ್ಹ.

**ಮಂದೋಽಪ್ಯಮಂದತಾಮೇತಿ ಸಂಸರ್ಗೇಣ ವಿಪಶ್ಚಿತಃ ।**
**ಪಂಕಚ್ಛಿದಃ ಫಲಸ್ಯೇವ ನಿಕಷೇಣಾವಿಲಂ ಪಯಃ ॥** ೨೨೧

-ಮಾಳವಿಕಾಗ್ನಿಮಿತ್ರ, ೨-೭

ಪಂಡಿತರ ಸಹವಾಸದಿಂದ ದಡ್ಡನೂ ಪಂಡಿತನಾಗುತ್ತಾನೆ. ಬಗ್ಗಡವಾದ ನೀರು ಕತಕಬೀಜದ ಸಂಪರ್ಕದಿಂದ ತಿಳಿಯಾಗುವುದಿಲ್ಲವೇ?

**ಮಧು ಪಶ್ಯತಿ ಮೂಢಾತ್ಮಾ ಪ್ರಪಾತಂ ನೈವ ಪಶ್ಯತಿ ।**
**ಕರೋತಿ ನಿಂದಿತಂ ಕರ್ಮ ನರಕಾನ್ನ ಬಿಭೇತಿ ಚ ॥** ೨೨೨

-ದೇವೀಭಾಗವತ

ಜೇನುತುಪ್ಪ ಸಿಗುತ್ತದೆಂದು ಉತ್ಸಾಹದಿಂದಿರುವ ಮೂರ್ಖನು, ಕಣಿವೆಯಲ್ಲಿ ಬಿದ್ದು ಸಾಯುವೆನೆಂದು ತಿಳಿಯಲಾರ. ನಿಂದಿತವಾದ ಕೆಲಸವನ್ನು ಮಾಡುವವನು ನರಕಕ್ಕಾಗಿ ಹೆದರುವುದಿಲ್ಲ.

ಮನೋರಥಾನಾಂ ನ ಸಮಾಪ್ತಿರಸ್ತಿ
ವರ್ಷಾಯುತೇನಾಪಿ ತಥಾಬ್ದಲಕ್ಷೈಃ ।
ಪೂರ್ಣೇಷು ಪೂರ್ಣೇಷು ಮನೋರಥಾನಾಂ
ಉತ್ಪತ್ತಯಃ ಸಂತಿ ಪುನರ್ನವಾನಾಮ್ ॥ ೨೨೩

-ವಿಷ್ಣುಪುರಾಣ, ೪-೨-೧೧೬

ಹತ್ತು ಸಹಸ್ರ ವರ್ಷಗಳಾಗಲೀ, ಲಕ್ಷವರ್ಷಗಳಾಗಲೀ ಬಯಕೆಗಳಿಗೆ ಕೊನೆಯಿಲ್ಲ. ಬಯಕೆಗಳು ಸಫಲವಾದಂತೆಲ್ಲಾ ಮತ್ತೆ ಹೊಸ ಬಯಕೆಗಳು ಉಂಟಾಗುತ್ತಲೇ ಇರುತ್ತವೆ.

ಮಹತಸ್ತರಸಾ ವಿಲಂಘಯ-
ನ್ನಿಜದೋಷೇಣ ಕುಧೀರ್ವಿನಶ್ಯತಿ ।
ಕುರುತೇ ನ ಖಲು ಸ್ವಯೇಚ್ಛಯಾ
ಶಲಭಾನಿಂಧನಮಿದ್ಧದೀಧಿತಿಃ ॥ ೨೨೪

-ಶಿಶುಪಾಲವಧ, ೧೬-೩೫

ಅವಿವೇಕಿಯು ತನ್ನ ಅಲ್ಪಬಲದಿಂದ ಮಹಾತ್ಮರಲ್ಲಿ ಅತ್ಯಾಚಾರ ಮಾಡಿದರೆ ತನ್ನ ದೋಷದಿಂದ ತಾನೇ ಹಾಳಾಗುತ್ತಾನೆ. ಉರಿಯುವ ಬೆಂಕಿಯು ಪತಂಗದ ಹುಳುಗಳನ್ನು ತಾನಾಗಿ ತಾನು ಸುಡುವುದಿಲ್ಲ. ಅವುಗಳೇ ಬೆಂಕಿಯನ್ನು ಲಕ್ಷಿಸದೇ ಬೆಂಕಿಯಲ್ಲಿ ಬಿದ್ದು ಸಾಯುತ್ತವೆ.

ಮಹತಾಽಪಿ ಪ್ರಯತ್ನೇನ ತಮಿಸ್ರಾಯಾಂ ಪರಾಮೃಶನ್ ।
ಕೃಷ್ಣಶುಕ್ಲವಿವೇಕಂ ಹಿ ನ ಕಶ್ಚಿದಧಿಗಚ್ಛತಿ ॥ ೨೨೫

-ತಂತ್ರವಾರ್ತಿಕ, ೧-೩-೧

ಕತ್ತಲೆಯಲ್ಲಿ ಎಷ್ಟು ಪ್ರಯತ್ನಮಾಡಿ ನೋಡಿದರೂ ಯಾರೂ ಸಹ ಕಪ್ಪು ಬಿಳುಪನ್ನು ಬೇರೆಬೇರೆಯಾಗಿ ತಿಳಿಯಲಾರರು.

ಮಹದ್ಭಿಃ ಸ್ಪರ್ಧಮಾನಸ್ಯ ವಿಪದೇವ ಗರೀಯಸೀ ।
ದಂತಭಂಗೋಽಪಿ ನಾಗಾನಾಂ ಶ್ಲಾಘ್ಯೋ ಗಿರಿವಿದಾರಣೇ ॥ ೨೨೬

-ಪಂಚತಂತ್ರ, ಮಿತ್ರಭೇದ-೪೦೪

ದೊಡ್ಡವರೊಡನೆ ಸ್ಪರ್ಧೆ ಹೂಡುವವನಿಗೆ ಉಂಟಾಗುವ ವಿಪತ್ತೇ ಶ್ಲಾಘನೀಯ. ಬೆಟ್ಟಗಳನ್ನು ಸೀಳಲು ಪ್ರಯತ್ನಿಸುವ ಆನೆಗಳ ದಂತಗಳ ಭಂಗವೂ ಶ್ಲಾಘ್ಯವಾದುದೇ ಸರಿ.

ಮಾತಾ ಮಿತ್ರಂ ಪಿತಾ ಚೇತಿ ಸ್ವಭಾವಾತ್ ತ್ರಿತಯಂ ಹಿತಮ್ ।
ಕಾರ್ಯಕಾರಣತಶ್ಚಾನ್ಯೇ ಭವಂತಿ ಹಿತಬುದ್ಧಯಃ ॥ ೨೨೭

-ಹಿತೋಪದೇಶ, ಮಿತ್ರಲಾಭ-೨೯

ತಾಯಿ, ತಂದೆ, ಸ್ನೇಹಿತ ಇವರು ಮೂವರು ಸ್ವಭಾವದಿಂದಲೇ ಹಿತೈಷಿಗಳು. ಇತರರು ಬೇರೆ ಬೇರೆ ಕಾರ್ಯಕಾರಣಗಳ ದೆಸೆಯಿಂದ ಹಿತೈಷಿಗಳಾಗುತ್ತಾರೆ.

**ಮಾನುಷ್ಯೇ ಕದಲೀಸ್ತಂಭೇ ನಿಃಸಾರೇ ಸಾರಮಾರ್ಗಣಂ ।**
**ಯಃ ಕರೋತಿ ಸ ಸಂಮೂಢೋ ಜಲಬುದ್ಬುದಸನ್ನಿಭೇ ॥ ೨೨೮**

-ಕಾತ್ಯಾಯನಸ್ಮೃತಿ, ೨೨-೫

ಬಾಳೆಯ ಕಂಭದಂತೆ ನಿಃಸಾರವಾದ, ನೀರಿನ ಗುಳ್ಳೆಯಂತಿರುವ ಮನುಷ್ಯ ಜೀವನದಲ್ಲಿ ಸಾರವನ್ನು ಹುಡುಕುವವನು ಮೂರ್ಖ.

**ಮೂರ್ಖಾ ನ ದೃಷ್ಟವಾ ದೃಷ್ಟವ್ಯಾಶ್ಚೇ-**
**ನ್ನತೈಸ್ತು ಸಹ ತಿಷ್ಠೇತ್ ।**
**ಯದಿ ತಿಷ್ಠೇನ್ನ ಕಥಯೇದ್ಯದಿ ಕಥಯೇ-**
**ನ್ಮೂರ್ಖವತ್ಕಥಯೇತ್ ॥ ೨೨೯**

-ಸುಭಾಷಿತಸುಧಾನಿಧಿ

ಮೂರ್ಖರನ್ನು ಕಾಣಲು ಹೋಗಬಾರದು; ಹಾಗೆ ಕಂಡರೂ ಅವರೊಡನೆ ಇರಬಾರದು; ಹಾಗೆ ಇದ್ದರೂ ಅವರೊಡನೆ ಮಾತಾಡಬಾರದು ; ಹಾಗೆ ಮಾತಾಡಿದರೆ ಮೂರ್ಖನಂತೆಯೇ ಮಾತಾಡಬೇಕು.

**ಮೂರ್ಖಾಣಾಂ ಪಂಡಿತಾ ದ್ವೇಷ್ಯಾ ನಿರ್ಧನಾನಾಂ ಮಹಾಧನಾಃ ।**
**ವ್ರತಿನಃ ಪಾಪಶೀಲಾನಾಮಸತೀನಾಂ ಕುಲಸ್ತ್ರಿಯಃ ॥ ೨೩೦**

-ಪಂಚತಂತ್ರ, ಮಿತ್ರಭೇದ-೪೪೯

ಪಂಡಿತರನ್ನು ಮೂರ್ಖರು ದ್ವೇಷಿಸುತ್ತಾರೆ; ಹಾಗೆಯೇ ಶ್ರೀಮಂತರನ್ನು ಬಡವರೂ, ಒಳ್ಳೆಯ ನಿಯಮವನ್ನನುಸರಿಸುವವರನ್ನು ಪಾಪಶೀಲರೂ, ಕುಲಸ್ತ್ರೀಯರನ್ನು ಕೆಟ್ಟ ಹೆಂಗಸರೂ ದ್ವೇಷಿಸುತ್ತಾರೆ.

**ಮೃಗಯಾಕ್ಷೋ ದಿವಾಸ್ವಪ್ನಃ ಪರಿವಾದಃ ಸ್ತ್ರಿಯೋ ಮದಃ ।**
**ತೌರ್ಯತ್ರಿಕಂ ವೃಥಾಟ್ಯಾ ಚ ಕಾಮಜೋ ದಶಕೋ ಗಣಃ ॥ ೨೩೧**

-ಮನುಸ್ಮೃತಿ, ೭-೪೭

ಬೇಟೆ, ಜೂಜು, ಹಗಲುನಿದ್ರೆ, ಇತರರ ದೂಷಣೆ, ಸ್ತ್ರೀಯರಲ್ಲಿ ರತಿ, ಕುಡಿತ, ಸಂಗೀತ ನೃತ್ಯ, ಸುಮ್ಮನೆ ಅಲೆಯುವುದು– ಇವು ಕಾಮದಿಂದ ಉಂಟಾಗುವ ಹತ್ತು ದೋಷಗಳು. ಇವುಗಳನ್ನು ಬಿಡಬೇಕು.

**ಮೃತಃ ಕೀರ್ತಿಂ ನ ಜಾನಾತಿ ಜೀವನ್ ಕೀರ್ತಿಂ ಸಮಶ್ನುತೇ ।**
**ಮೃತಸ್ಯ ಕೀರ್ತಿರ್ಮರ್ತ್ಯಸ್ಯ ಯಥಾ ಮಾಲಾ ಗತಾಯುಷಃ ॥** ೨೩೨

-ಸುಭಾಷಿತಸುಧಾನಿಧಿ

ಸತ್ತವನಿಗೆ ಕೀರ್ತಿ ಗೊತ್ತಾಗುವುದಿಲ್ಲ ; ಬದುಕಿದ್ದರೆ ಕೀರ್ತಿಯನ್ನು ಅನುಭವಿಸುತ್ತಾನೆ. ಸತ್ತ ಮನುಷ್ಯನ ಕೀರ್ತಿ, ಸತ್ತವನಿಗೆ ಅಲಂಕಾರ ಮಾಡಿದ ಮಾಲೆಯಂತೆ ವ್ಯರ್ಥ.

**ಮೃತೈಃ ಸಂಪ್ರಾಪ್ಯತೇ ಸ್ವರ್ಗೋ ಜೀವದ್ಭಿಃ ಕೀರ್ತಿರುತ್ತಮಾ ।**
**ತದುಭಾವಪಿ ಶೂರಾಣಾಂ, ಗುಣಾವೇತೌ ಸುದುರ್ಲಭೌ ॥** ೨೩೩

-ಪಂಚತಂತ್ರ, ಮಿತ್ರಭೇದ-೩೩೩

ಸತ್ತರೆ ಸ್ವರ್ಗ ಲಭಿಸುತ್ತದೆ. ಬದುಕಿದ್ದರೆ ಉತ್ತಮವಾದ ಹೆಸರು ಬರುತ್ತದೆ. ಶೂರರಿಗೆ ಇವೆರಡೂ ಉಂಟು. ಈ ಎರಡು ಇತರರಿಗೆ ಸುಲಭವಲ್ಲ.

**ಯಚ್ಚ ಕಾಮಸುಖಂ ಲೋಕೇ ಯಚ್ಚ ದಿವ್ಯಂ ಮಹತ್‌ಸುಖಂ ।**
**ತೃಷ್ಣಾಕ್ಷಯಸುಖಸ್ಯೈತೇ ನಾರ್ಹತಃ ಷೋಡಶೀಂ ಕಲಾಮ್ ॥** ೨೩೪

-ಮಹಾಭಾರತ, ಶಾಂತಿ. ೧೭೪-೪೬

ಲೋಕದಲ್ಲಿ ಕಾಮಸುಖವೆಂಬುದೇನುಂಟೋ, ದೇವಲೋಕದ ಮಹಾಸುಖವೆಂಬುದೇನುಂಟೋ-ಇವೆರಡೂ ಆಸೆಯನ್ನು ಬಿಡುವುದರಿಂದಾಗುವ ಸುಖದ ಹದಿನಾರನೆಯ ಒಂದಂಶವೂ ಅಲ್ಲ.

**ಯಜತಾಂ ಪಾಂಡವಃ ಸ್ವರ್ಗಮವತ್ವಿಂದ್ರಸ್ತಪತ್ವಿನಃ ।**
**ವಯಂ ಹನಾಮ ದ್ವಿಷತಃ ಸರ್ವಃ ಸ್ವಾರ್ಥಂ ಸಮೀಹತೇ ॥** ೨೩೫

-ಶಿಶುಪಾಲವಧ, ೨-೬೫

ಯುಧಿಷ್ಠಿರನು ಯಜ್ಞಮಾಡಲಿ. ಇಂದ್ರನು ಸ್ವರ್ಗವನ್ನು ನೋಡಿಕೊಳ್ಳಲಿ. ಸೂರ್ಯನು ಬಿಸಿಲನ್ನು ಕೊಡಲಿ. ನಾವು ಶತ್ರುಗಳನ್ನು ಕೊಲ್ಲೋಣ. ಎಲ್ಲರೂ ಸ್ವಾರ್ಥವನ್ನು ಬಯಸುತ್ತಾರಲ್ಲವೆ?

**ಯತ್ ಪೃಥಿವ್ಯಾಂ ವ್ರೀಹಿಯವಂ ಹಿರಣ್ಯಂ ಪಶವಃ ಸ್ತ್ರಿಯಃ ।**
**ನಾಲಮೇಕಸ್ಯ ತತ್ಸರ್ವಮಿತಿ ಮತ್ವಾ ಶಮಂ ವ್ರಜೇತ್ ॥** ೨೩೬

-ಮಹಾಭಾರತ, ಉದ್ಯೋಗ. ೩೯-೮೪

ಜಗತ್ತಿನಲ್ಲಿರುವ ಬತ್ತ, ಜವೆಗೋಧಿ, ಚಿನ್ನ, ಪಶುಗಳು, ಸ್ತ್ರೀಯರು-ಇವೆಲ್ಲವೂ ಒಬ್ಬನಿಗೆ ಸಾಕೆನಿಸಲಾರದು. ಇದನ್ನರಿತು ಮನುಷ್ಯನು ಶಾಂತನಾಗಬೇಕು.

**ಯತ್ರ ನಾರ್ಯಸ್ತು ಪೂಜ್ಯಂತೇ ರಮಂತೇ ತತ್ರ ದೇವತಾಃ ।**
**ಯತ್ರೈತಾಸ್ತು ನ ಪೂಜ್ಯಂತೇ ಸರ್ವಾಸ್ತತ್ರಾಫಲಾಃ ಕ್ರಿಯಾಃ ॥ ೨೩೭**

-ಮನುಸ್ಮೃತಿ, ೩-೫೬

ಎಲ್ಲಿ ಹೆಂಗಸರಿಗೆ ಮಾನ್ಯತೆ ಇದೆಯೋ ಅಲ್ಲಿ ದೇವತೆಗಳು ಸಂತೋಷಪಡುತ್ತಾರೆ. ಎಲ್ಲಿ ಇವರಿಗೆ ಮನ್ನಣೆ ಇಲ್ಲವೋ ಅಲ್ಲಿ ಎಲ್ಲಾ ಕೆಲಸಗಳೂ ವ್ಯರ್ಥ.

**ಯಥಾ ಕಾಷ್ಠಮಯೋ ಹಸ್ತೀ ಯಥಾ ಚರ್ಮಮಯೋ ಮೃಗಃ ।**
**ಪುಮಾನ್ಯಶ್ಚಾನಧೀಯಾನಃ ತ್ರಯಸ್ತೇ ನಾಮ ಬಿಭ್ರತಿ ॥ ೨೩೮**

-ಮನುಸ್ಮೃತಿ, ೨-೧೫೭

ಮರದಿಂದ ಮಾಡಿದ ಆನೆ, ಚರ್ಮದಿಂದಾದ ಮೃಗ, ಓದದೇ ಇರುವ ಮನುಷ್ಯ ಇವರೆಲ್ಲರೂ ಹೆಸರಿಗೆ ಮಾತ್ರ.

**ಯಥಾ ಯಥಾ ನರೋಽಧರ್ಮಂ ಸ್ವಯಂ ಕೃತ್ವಾನುಭಾಷತೇ ।**
**ತಥಾ ತಥಾ ತ್ವಚೇವಾಹಿಸ್ತೇನಾಧರ್ಮೇಣ ಮುಚ್ಯತೇ ॥ ೨೩೯**

-ಮನುಸ್ಮೃತಿ, ೧೧-೨೨೮

ಮನುಷ್ಯನು ತಾನು ಮಾಡಿದ ಅಧರ್ಮವನ್ನು ಕುರಿತು ಪ್ರಕಟವಾಗಿ ಹೇಳಿದಂತೆಲ್ಲಾ, ಹಾವು ಪೊರೆಯಿಂದ ಬಿಡುಗಡೆ ಹೊಂದುವಂತೆ ಅಧರ್ಮದ ಪಾಪದಿಂದ ಬಿಡುಗಡೆ ಹೊಂದುತ್ತಾನೆ.

**ಯದಾ ಕಿಂಚಿಜ್ಜ್ಞೋಽಹಂ ದ್ವಿಪ ಇವ ಮದಾಂಧಃ ಸಮಭವಂ**
**ತದಾ ಸರ್ವಜ್ಞೋಽಸ್ಮೀತ್ಯಭವದವಲಿಪ್ತಂ ಮಮ ಮನಃ ।**
**ಯದಾ ಕಿಂಚಿತ್ಕಿಂಚಿದ್ಬುಧಜನಸಕಾಶಾದವಗತಂ**
**ತದಾ ಮೂರ್ಖೋಽಸ್ಮೀತಿ ಜ್ವರ ಇವ ಮದೋ ಮೇ ವ್ಯಪಗತಃ ॥ ೧೪೦**

–ನೀತಿಶತಕ-೬

ಯಾವಾಗ ನಾನು ಸ್ವಲ್ಪ ಕಲಿತು (ತಿಳಿದು) ಆನೆಯಂತೆ ಕೊಬ್ಬಿನಿಂದ ಕುರುಡನಾದೆನೋ, ಆಗ ನಾನು ಎಲ್ಲವನ್ನೂ ಅರಿತಿದ್ದೇನೆ ಎಂದು ಮನಸ್ಸು ಗರ್ವದಿಂದ ಕೂಡಿತ್ತು. ಯಾವಾಗ ಪಂಡಿತರಿಂದ ಸ್ವಲ್ಪ ಸ್ವಲ್ಪ ತಿಳಿದುಕೊಂಡೆನೋ ಆಗ "ನಾನು ಮೂರ್ಖ" ಎಂಬ ಭಾವನೆ ಬಂದು ನನ್ನ ಮದವೆಲ್ಲಾ ಜ್ವರದಂತೆ ಕಳೆದುಹೋಯಿತು.

**ಯದಿ ನಾತ್ಮನಿ ಪುತ್ರೇಷು ನ ಚೇತ್ಪುತ್ರೇಷು ನಪ್ತೃಷು ।**
**ನ ತ್ವೇವ ತು ಕೃತೋಽಧರ್ಮಃ ಕರ್ತುರ್ಭವತಿ ನಿಷ್ಫಲಃ ॥ ೨೪೧**

-ಮನುಸ್ಮೃತಿ, ೪-೧೭೩

ಅಧರ್ಮಾಚರಣೆಯಿಂದ ತನಗೆ ತೊಂದರೆಯಾಗದಿದ್ದರೆ ಮಕ್ಕಳಿಗೆ ತೊಂದರೆ ಯಾಗುತ್ತದೆ. ಇಲ್ಲವೇ ಮೊಮ್ಮಕ್ಕಳಿಗೆ, ಮರಿಮಕ್ಕಳಿಗೆ ಅದರ ಫಲವುಂಟಾಗುತ್ತದೆ. ಮಾಡಿದ ಅಧರ್ಮವು ಫಲ ಕೊಡದೆ ಇರುವುದಿಲ್ಲ.

**ಯದಿ ನಿತ್ಯಮನಿತ್ಯೇನ ನಿರ್ಮಲಂ ಮಲವಾಹಿನಾ ।**
**ಯಶಃ ಕಾಯೇನ ಲಭ್ಯೇತ ನನು ಲಬ್ಧಂ ಭವೇನ್ನ ಕಿಮ್ ॥ ೨೪೨**

-ಹಿತೋಪದೇಶ, ಮಿತ್ರಲಾಭ-೩೫

ಶಾಶ್ವತವಲ್ಲದುದೂ ಕಶ್ಮಲಯುತವೂ ಆದ ದೇಹದಿಂದ ಶಾಶ್ವತವೂ ನಿರ್ಮಲವೂ ಆದ ಯಶಸ್ಸು ಲಭ್ಯವಾಗುವುದಾದರೆ ಏನನ್ನು ತಾನೇ ಪಡೆದಂತಾಗಲಿಲ್ಲ?

**ಯಶೋಽಧಿಗಂತುಂ ಸುಖಲಿಪ್ಸಯಾ ವಾ**
**ಮನುಷ್ಯಸಂಖ್ಯಾಮತಿವರ್ತಿತುಂ ವಾ ।**
**ನಿರುತ್ಸುಕಾನಾಮಭಿಯೋಗಭಾಜಾಂ**
**ಸಮುತ್ಸುಕೇವಾಂಕಮುಪೈತಿ ಸಿದ್ಧಿಃ ॥ ೨೪೩**

-ಕಿರಾತಾರ್ಜುನೀಯ, ೩-೪೦

ಕೀರ್ತಿಯನ್ನು ಪಡೆಯಲು, ಸುಖವನ್ನು ಅನುಭವಿಸಲು, ಸಾಮಾನ್ಯ ಮನುಷ್ಯರ ಮಟ್ಟವನ್ನು ಮೀರಲು ಹಠತೊಟ್ಟವರಿಗೆ, ದುಃಖಚಿಂತೆಗಳನ್ನು ಗೆದ್ದವರಿಗೆ, ಯತ್ನ ಶೀಲರಿಗೆ ಸಿದ್ಧಿಯು ತಾನಾಗಿ ಕುತೂಹಲದಿಂದ ಹತ್ತಿರಕ್ಕೆ ಬರುತ್ತದೆ.

**ಯಸ್ತಂತೂನನುಪಾದಾಯ ತುರೀಮಾತ್ರಪರಿಗ್ರಹಾತ್ ।**
**ಪಟಂ ಕರ್ತುಂ ಸಮೀಹೇತ ಸ ಹನ್ಯಾದ್ವ್ಯೋಮ ಮುಷ್ಟಿಭಿಃ ॥ ೨೪೪**

-ತಂತ್ರವಾರ್ತಿಕ - ೧೭೦

ಯಾರು ದಾರಗಳನ್ನು ತೆಗೆದುಕೊಳ್ಳದೆ ಲಾಳಿಯನ್ನು ಮಾತ್ರ ಉಪಯೋಗಿಸಿ ಬಟ್ಟೆಯನ್ನು ನೇಯಲು ಇಷ್ಟಪಡುತ್ತಾನೆಯೋ, ಅವನು ಆಕಾಶವನ್ನು ಮುಷ್ಟಿಗಳಿಂದ ಗುದ್ದುತ್ತಾನೆ.

**ಯಾಚನಾ ಹಿ ಪುರುಷಸ್ಯ ಮಹತ್ತ್ವಂ**
**ನಾಶಯತ್ಯಖಿಲಮೇವ ತಥಾ ಹಿ ।**
**ಸದ್ಯ ಏವ ಭಗವಾನಪಿ ವಿಷ್ಣು-**
**ರ್ವಾಮನೋ ಭವತಿ ಯಾಚಿತುಮಿಚ್ಛನ್ ॥ ೨೪೫**

-ಸುಭಾಷಿತಸುಧಾನಿಧಿ

ಪುರುಷನ ಎಲ್ಲಾ ಮಹತ್ವವನ್ನೂ ಯಾಚನೆ ನಾಶಮಾಡಿಬಿಡುವುದು. ಭಗವಂತನಾದ ವಿಷ್ಣುವೂ ಸಹ ಬೇಡಲಿಚ್ಛಿಸಿದವನಾಗಿ ವಾಮನನಾಗುತ್ತಾನೆ.

**ಯಾಂತಿ ನ್ಯಾಯಪ್ರವೃತ್ತಸ್ಯ ತಿರ್ಯಂಚೋಽಪಿ ಸಹಾಯತಾಂ ।**
**ಅಪಂಥಾನಂ ತು ಗಚ್ಛಂತಂ ಸೋದರೋಽಪಿ ವಿಮುಂಚತಿ ॥ ೨೪೬**

-ಅನರ್ಘರಾಘವ, ೧-೪

ನ್ಯಾಯವಾದ ದಾರಿಯಲ್ಲಿ ಹೋಗುವವನಿಗೆ, ರಾಮನಿಗೆ ಕೋತಿಗಳು ಸಹಾಯವಾದಂತೆ, ಮನುಷ್ಯೇತರ ಪ್ರಾಣಿಗಳೂ ಸಹಾಯಮಾಡುತ್ತವೆ. ತಪ್ಪುದಾರಿ ತುಳಿಯುವವನನ್ನು, ರಾವಣನನ್ನು ವಿಭೀಷಣನು ಬಿಟ್ಟಂತೆ, ಸಹೋದರನೂ ಕೈಬಿಡುತ್ತಾನೆ.

**ಯಾ ದುಸ್ತ್ಯಜಾ ದುರ್ಮತಿಭಿರ್ಯಾ ನ ಜೀರ್ಯತಿ ಜೀರ್ಯತಃ ।**
**ತಾಂ ತೃಷ್ಣಾಂ ಸಂತ್ಯಜೇತ್ ಪ್ರಾಜ್ಞಃ ಸುಖೇನೈವಾಭಿಪೂರ್ಯತೇ ॥ ೨೪೭**

-ವಿಷ್ಣುಪುರಾಣ, ೪-೧೦-೨೬

ಕೆಟ್ಟಬುದ್ಧಿಯುಳ್ಳವರು ಯಾವುದನ್ನು ಬಿಡಲಾರರೋ, ನಾವು ಮುದಿತನದಿಂದ ದುರ್ಬಲರಾದರೂ ಯಾವುದು ಕಡಿಮೆಯಾಗುವುದಿಲ್ಲವೋ ಅಂತಹ ಆಸೆಯನ್ನು ಜಾಣನು ಬಿಡಬೇಕು. ಆಗ ಅವನಿಗೆ ಎಲ್ಲ ವಿಧದಲ್ಲಿಯೂ ಸುಖವೇ ಆಗುತ್ತದೆ.

**ಯಾದೃಶಂ ಫಲಮಾಪ್ನೋತಿ ಕುಪ್ಲವೈಃ ಸಂತರನ್ ಜಲಮ್ ।**
**ತಾದೃಶಂ ಫಲಮಾಪ್ನೋತಿ ಕುಪುತ್ರೈಃ ಸಂತರಂಸ್ತಮಃ ॥ ೨೪೮**

-ಮನುಸ್ಮೃತಿ, ೯-೧೬೧

ಕೆಟ್ಟದಾದ ದೋಣಿಯಿಂದ ನೀರನ್ನು ದಾಟಲು ಯತ್ನಿಸಿದರೆ ಯಾವ ಫಲ ವಾಗುತ್ತದೆಯೋ, ಕೆಟ್ಟ ಮಕ್ಕಳಿಂದ ದುಃಖವನ್ನು ಪರಿಹರಿಸಲು ಯತ್ನಿಸಿದರೆ ವ್ಯರ್ಥವಾಗುತ್ತದೆ.

**ಯುಧ್ಯಂತಿ ಪಶವಃ ಸರ್ವೇ ಪಠಂತಿ ಶುಕಸಾರಿಕಾಃ ।**
**ದಾತುಂ ಜಾನಾತಿ ಯೋ ವಿತ್ತಂ ಸ ಶೂರಃ ಸ ಚ ಪಂಡಿತಃ ॥ ೨೪೯**

-ಸುಭಾಷಿತರತ್ನಭಾಂಡಾಗಾರ

ಎಲ್ಲಾ ಪ್ರಾಣಿಗಳೂ ಹೋರಾಡುತ್ತವೆ. ಗಿಣಿ, ಶಾರಿಕೆ ಮುಂತಾದ ಪಕ್ಷಿಗಳೂ ಪಠಿಸುತ್ತವೆ. ಯಾವನಿಗೆ ಹಣವನ್ನು ದಾನಮಾಡಲು ಬರುತ್ತದೆಯೋ ಅವನೀಗ ಶೂರ ಮತ್ತು ಪಂಡಿತ !

**ಯೇ ಕಾರ್ಯಿಕೇಭ್ಯೋಽರ್ಥಮೇವ ಗೃಹ್ಣೀಯುಃ ಪಾಪಚೇತಸಃ ।**
**ತೇಷಾಂ ಸರ್ವಸ್ವಮಾದಾಯ ರಾಜಾ ಕುರ್ಯಾತ್ ಪ್ರವಾಸನಮ್ ॥ ೨೫೦**

-ಮನುಸ್ಮೃತಿ, ೭-೧೨೪

ಕೆಲಸಕ್ಕಾಗಿ ತಮ್ಮ ಹತ್ತಿರ ಬರುವವರಿಂದ ಹಣವನ್ನು ತೆಗೆದುಕೊಳ್ಳುವ ಪಾಪಿಷ್ಠರಾದ ಅಧಿಕಾರಿಗಳ ಎಲ್ಲಾ ಆಸ್ತಿಯನ್ನು ಮುಟ್ಟುಗೋಲುಹಾಕಿ ಅವರನ್ನು ದೇಶದಿಂದ ಹೊರಕ್ಕೆ ದೂಡಬೇಕು.

**ಯೇಷಾಂ ನ ವಿದ್ಯಾ ನ ತಪೋ ನ ದಾನಂ**
**ಜ್ಞಾನಂ ನ ಶೀಲಂ ನ ಗುಣೋ ನ ಧರ್ಮಃ ।**
**ತೇ ಮರ್ತ್ಯಲೋಕೇ ಭುವಿ ಭಾರಭೂತಾ**
**ಮನುಷ್ಯರೂಪೇಣ ಮೃಗಾಶ್ಚರಂತಿ ॥** ೨೫೧

-ನೀತಿಶತಕ-೧೧

ಯಾರಲ್ಲಿ, ವಿದ್ಯೆಯಾಗಲಿ, ತಪಸ್ಸಾಗಲಿ, ದಾನವಾಗಲಿ, ಜ್ಞಾನವಾಗಲಿ, ಶೀಲವಾಗಲಿ, ಗುಣವಾಗಲಿ, ಧರ್ಮವಾಗಲಿ ಇಲ್ಲವೋ ಅವರು ಈ ಮನುಷ್ಯಲೋಕದಲ್ಲಿ, ಭೂಮಿಗೆ ಭಾರವಾಗಿ ಮನುಷ್ಯರೂಪದಿಂದ ಸಂಚರಿಸುವ ಮೃಗಗಳು ಮಾತ್ರ.

**ಯೋ ನ ನಿರ್ಗತ್ಯ ನಿಃಶೇಷಾಂ ವಿಲೋಕಯತಿ ಮೇದಿನೀಂ ।**
**ಅನೇಕಾದ್ಭುತವೃತ್ತಾಂತಾಂ ಸ ನರಃ ಕೂಪದರ್ದುರಃ ॥** ೨೫೨

-ಉಪಮಿತಿಭವಪ್ರಪಂಚ-೮೨೮

ಯಾರು ಮನೆಯಿಂದ ಹೊರಟು ಅನೇಕ ಆಶ್ಚರ್ಯಗಳಿಂದ ಕೂಡಿದ ಜಗತ್ತನ್ನು ಪೂರ್ಣವಾಗಿ ನೋಡುವುದಿಲ್ಲವೋ ಅವನು ಭಾವಿಯಲ್ಲಿರುವ ಕಪ್ಪೆಯಂತಾಗುತ್ತಾನೆ.

**ಯೋ ನ ವೇತ್ತಿ ಗುಣಾನ್ಯಸ್ಯ ನ ತಂ ಸೇವೇತ ಪಂಡಿತಃ ।**
**ನ ಹಿ ತಸ್ಮಾತ್ಫಲಂ ತಸ್ಯ ಸುಕೃಷ್ಟಾ ದೂಷರಾದಿವ ॥** ೨೫೩

-ಸುಭಾಷಿತರತ್ನಭಾಂಡಾಗಾರ

ಯಾವನು ಒಳ್ಳೆಯ ಗುಣಗಳ ಬೆಲೆಯನ್ನು ತಿಳಿಯಲಾರನೋ ಅಂಥವನನ್ನು ಪಂಡಿತನು ಆಶ್ರಯಿಸಬಾರದು. ಚೆನ್ನಾಗಿ ಉತ್ತರೂ ಚೌಳುನೆಲದಂತೆ ಅವನಿಂದ ಏನೂ ಪ್ರಯೋಜನವಾಗಲಾರದು.

**ಯೋಽನ್ಯಥಾಸಂತಮಾತ್ಮಾನಂ ಅನ್ಯಥಾ ಸತ್ಸು ಭಾಷತೇ ।**
**ಸ ಪಾಪಕೃತ್ತಮೋ ಲೋಕೇ ಸ್ತೇನ ಆತ್ಮಾಪಹಾರಕಃ ॥** ೨೫೪

-ಮನುಸ್ಮೃತಿ, ೪-೨೫೫

ತಾನು ಇರುವ ರೀತಿ ಹೇಗಿದ್ದರೂ, ದೊಡ್ಡವರಲ್ಲಿ ತನ್ನನ್ನು ಹೊಗಳಿಸಿಕೊಳ್ಳುವ ರೀತಿಯಲ್ಲಿ ವರ್ಣಿಸಿಕೊಳ್ಳುವವನು ಲೋಕದಲ್ಲಿ ಪಾಪಿಷ್ಠ, ಕಳ್ಳ, ಆತ್ಮಘಾತಿ.

**ಯೋಽರಕ್ಷನ್ ಬಲಿಮಾದತ್ತೇ ಕರಂ ಶುಲ್ಕಂ ಚ ಪಾರ್ಥಿವಃ ।**
**ಪ್ರತಿಭಾಗಂ ಚ ದಂಡಂ ಚ ಸ ಸದ್ಯೋ ನರಕಂ ವ್ರಜೇತ್ ॥ ೨೫೫**

-ಮನುಸ್ಮೃತಿ, ೮-೩೦೭

ಯಾವ ಅರಸನು ಪ್ರಜೆಗಳ ಆಸ್ತಿಪಾಸ್ತಿಗಳನ್ನೂ ಪ್ರಾಣಗಳನ್ನೂ ರಕ್ಷಿಸದೆ, ನಾನಾ ರೀತಿಯ ತೆರಿಗೆ ಕಂದಾಯಗಳನ್ನು ತೆಗೆದುಕೊಳ್ಳುತ್ತಾನೆಯೋ ಅವನು ನರಕಕ್ಕೆ ಹೋಗುವನು.

**ಯೋಽಸಾಧುಭ್ಯೋಽರ್ಥಮಾದಾಯ ಸಾಧುಭ್ಯಃ ಸಂಪ್ರಯಚ್ಛತಿ ।**
**ಸ ಕೃತ್ವಾ ಪ್ಲವಮಾತ್ಮಾನಂ ಸಂತಾರಯತಿ ತಾವುಭೌ ॥ ೨೫೬**

-ಮನುಸ್ಮೃತಿ, ೧೧-೧೯

ಯಾರು ಕೆಟ್ಟವರಿಂದ ಹಣವನ್ನು ಪಡೆದು ಒಳ್ಳೆಯವರಿಗೆ ಕೊಡುತ್ತಾನೆಯೋ ಅವನು ತನ್ನನ್ನೇ ದೋಣಿಯನ್ನಾಗಿಸಿ ಅವರಿಬ್ಬರನ್ನೂ ದಾಟಿಸುತ್ತಾನೆ.

**ಯೌವನಂ ಧನಸಂಪತ್ತಿಃ ಪ್ರಭುತ್ವಮವಿವೇಕಿತಾ ।**
**ಏಕೈಕಮಪ್ಯನರ್ಥಾಯ ಕಿಮು ಯತ್ರ ಚತುಷ್ಟಯಂ ॥ ೨೫೭**

-ಹಿತೋಪದೇಶ, ೧-೧೧

ಯೌವನ, ಐಶ್ವರ್ಯ, ಒಡೆತನ ಮತ್ತು ಅವಿವೇಕ ಇವು ಒಂದೊಂದೂ ಅನರ್ಥವನ್ನು ತಂದೊಡ್ಡುವುದು. ನಾಲ್ಕೂ ಒಂದೆಡೆ ಇದ್ದಮೇಲೆ ಹೇಳಬೇಕಾದುದೇನು?

**ರತ್ನಾಕರಃ ಕಿಂ ಕುರುತೇ ಸ್ವರತ್ನೈಃ**
**ವಿಂಧ್ಯಾಚಲಃ ಕಿಂ ಕರಿಭಿಃ ಕರೋತಿ ।**
**ಶ್ರೀಖಂಡಖಂಡೈಃ ಮಲಯಾಚಲಃ ಕಿಂ**
**ಪರೋಪಕಾರಾಯ ಸತಾಂ ವಿಭೂತಯಃ ॥ ೨೫೮**

-ಸುಭಾಷಿತರತ್ನಭಾಂಡಾಗಾರ

ಸಮುದ್ರಕ್ಕೆ ರತ್ನಗಳಿಂದೇನು ಪ್ರಯೋಜನ? ವಿಂಧ್ಯಪರ್ವತವು ತನ್ನಲ್ಲಿರುವ ಆನೆಗಳಿಂದ ಏನು ಮಾಡುತ್ತದೆ? ಮಲಯಪರ್ವತವು ತನ್ನಲ್ಲಿರುವ ಶ್ರೀಗಂಧಮರಗಳಿಂದೇನು ಮಾಡುತ್ತದೆ? ಸತ್ಪುರುಷರ ಸಂಪತ್ತು ಇತರರ ಸಹಾಯಕ್ಕಾಗಿಯೇ ಮೀಸಲಾಗಿರುತ್ತದೆ.

**ರಾಗಂ ವಿಜೃಂಭಯತಿ ಸಂಶ್ರಯತೇ ಪ್ರಮಾದಂ**
**ದೋಷಾನ್ ನ ಚಿಂತಯತಿ ಸಾಹಸಮಭ್ಯುಪೈತಿ ।**

ಸ್ವಚ್ಛಂದತೋ ವ್ರಜತಿ ನೇಚ್ಛತಿ ನೀತಿಮಾರ್ಗಂ
ಬುದ್ಧಿಂ ಶುಭಾಂ ಸುವಿದುಷಾಮವಶೀಕರೋತಿ ॥ ೨೫೯

-ಅವಿಮಾರಕ, ೩-೧

ಯೌವನವು ಕಾಮವನ್ನು ಹೆಚ್ಚುವಂತೆ ಮಾಡುತ್ತದೆ. ತಪ್ಪುಗಳನ್ನು ಅಡಿಗಡಿಗೆ ಮಾಡಿಸುತ್ತದೆ. ಜಾಗರೂಕತೆ ಇರುವುದಿಲ್ಲ. ಅಪಾಯದ ಕೆಲಸಗಳನ್ನೂ ಮಾಡಲು ಪ್ರೇರಿಸುತ್ತದೆ. ಸ್ವೇಚ್ಛೆಯಾಗಿ ನಡೆಯುವಂತೆ ಮಾಡುತ್ತದೆ. ನೀತಿಯನ್ನು ಲಕ್ಷಿಸುವುದಿಲ್ಲ. ಎಷ್ಟೇ ವಿದ್ವಾಂಸನಾಗಿದ್ದರೂ ಅವನ ಒಳ್ಳೆಯ ಬುದ್ಧಿಯನ್ನೂ ಸಹ ಹದ್ದು ಮೀರುವಂತೆ ಮಾಡುತ್ತದೆ.

ರಾಗೋ ನಾಮ ಮನಶ್ಶಲ್ಯಂ ಗುಣದ್ರವಿಣತಸ್ಕರಃ ।
ರಾಹುರ್ವಿದ್ಯಾಶಶಾಂಕಸ್ಯ ತಪೋವನಹುತಾಶನಃ ॥ ೨೬೦

-ಸುಭಾಷಿತಸುಧಾನಿಧಿ

ರಾಗ ಎಂಬುದು ಮನಸ್ಸಿಗೆ ನಾಟಿದ ಮೊಳೆ ; ಗುಣವೆಂಬ ಹಣವನ್ನು ಕದಿಯುವ ಕಳ್ಳ ; ವಿದ್ಯಾ ಎಂಬ ಚಂದ್ರನನ್ನು ನುಂಗುವ ರಾಹು ; ತಪೋವನವನ್ನು ನಾಶಿಸುವ ಬೆಂಕಿ.

ರೂಪಾದೀನ್ ವಿಷಯಾನ್ನಿರೂಪ್ಯ ಕರಣೈರ್ಯೈರಾತ್ಮಲಾಭಸ್ತ್ವಯಾ
ಲಬ್ಧಸ್ತೇಷ್ವಪಿ ಚಕ್ಷುರಾದಿಷು ಹತಾಃ ಸ್ವಾರ್ಥಾವಬೋಧಕ್ರಿಯಾಃ ।
ಅಂಗಾನಿ ಪ್ರಸಭಂ ತ್ಯಜಂತಿ ಪಟುತಾಮಾಜ್ಞಾ ವಿಧೇಯಾನಿ ತೇ
ನ್ಯಸ್ತಂ ಮೂರ್ಧ್ನಿ ಪದಂ ತವೈವ ಜರಯಾ ತೃಷ್ಣೇ ಮುಧಾ ತಾಮ್ಯಸಿ॥೧೬೧

-ಮುದ್ರಾರಾಕ್ಷಸ, ೩-೧

ರೂಪ, ರಸ, ಗಂಧ, ಶಬ್ದ, ಸ್ಪರ್ಶ ಇವುಗಳನ್ನು ತಿಳಿಯುವ ಇಂದ್ರಿಯಗಳ ಸಹಾಯದಿಂದಲೇ ಆಶೆಯು ಹುಟ್ಟಿತು, ಹೆಚ್ಚಿತು. ಮುದಿತನದಿಂದ ಆ ಇಂದ್ರಿಯಗಳೂ ಸಹ ತಮ್ಮ ಶಕ್ತಿಯನ್ನು ಕಳೆದುಕೊಂಡವು. ಆಶೆಗೆ ಅಧೀನವಾಗಿದ್ದ ಅವಯವಗಳೂ ದುರ್ಬಲವಾದವು. ಮುದಿತನವು ತನ್ನ ಹೆಜ್ಜೆಯನ್ನಿಟ್ಟು ಅದುಮುತ್ತಿದ್ದರೂ ಆಶೆಯು ಮೇಲೆ ಏಳಲು ಒದ್ದಾಡುತ್ತಲೇ ಇದೆ.

ರೇ ರೇ ರಾಸಭ ವಸ್ತ್ರಭಾರವಹನಾತ್ ಕುಗ್ರಾಸಮಶ್ನಾಸಿ ಕಿಂ
ರಾಜಾಶ್ವಾವಸಥಂ ಪ್ರಯಾಹಿ ಚಣಕಾಭ್ಯೂಷಾನ್ ಸುಖಂ ಭಕ್ಷಯ ।
ಸರ್ವಾನ್ ಪುಚ್ಛವತೋ ಹಯಾನಭಿವದಂತ್ಯತ್ರಾಧಿಕಾರೇ ಸ್ಥಿತಾಃ
ರಾಜಾ ತೈರುಪದಿಷ್ಟಮೇವ ಮನುತೇ ಸತ್ಯಂ ತಟಸ್ಥಾಃ ಪರೇ ॥ ೨೬೨

-ಭಲ್ಲಟಶತಕ

ಎಲ್ಲೈ ಕತ್ತೆ! ಬಟ್ಟೆಯ ಮೂಟೆಗಳನ್ನು ಹೊತ್ತು ಕಸವನ್ನೇಕೆ ತಿನ್ನುತ್ತೀಯೆ! ಅರಸನ ಲಾಯಕ್ಕೆ ಹೋಗು. ಅಲ್ಲಿ ಬೆಂದ ಕಡಲೆಯನ್ನು ಸುಖವಾಗಿ ತಿನ್ನು. ಬಾಲವುಳ್ಳ ಪ್ರತಿಯೊಂದು ಪ್ರಾಣಿಯನ್ನೂ ಕುದುರೆಯೆಂದು ಅಲ್ಲಿನ ಅಧಿಕಾರಿಗಳು ಹೇಳುತ್ತಾರೆ. ಅರಸನು ಅವರು ಹೇಳಿದುದನ್ನೇ ನಂಬುತ್ತಾನೆ. ಉಳಿದವರು ಮನಸ್ಸಿಗೆ ಹಚ್ಚಿಕೊಳ್ಳುವುದಿಲ್ಲ.

**ಲಭೇತ ಸಿಕತಾಸು ತೈಲಮಪಿ ಯತ್ನತಃ ಪೀಡಯನ್**
**ಪಿಬೇಚ್ಚ ಮೃಗತೃಷ್ಣಿಕಾಸು ಸಲಿಲಂ ಪಿಪಾಸಾರ್ದಿತಃ ।**
**ಕದಾಚಿದಪಿ ಪರ್ಯಟನ್ ಶಶವಿಷಾಣಮಾಸಾದಯೇತ್**
**ನ ತು ಪ್ರತಿನಿವಿಷ್ಟಮೂರ್ಖಜನಚಿತ್ತಮಾರಾಧಯೇತ್ ॥ ೨೬೩**

-ನೀತಿಶತಕ-೩

ಮರಳಿನಲ್ಲಿ ಪ್ರಯತ್ನದಿಂದ ಕಿವುಚಿ ಎಣ್ಣೆಯನ್ನಾದರೂ ತೆಗೆಯಬಹುದು; ಬಾಯಾರಿಕೆಯಿಂದ ಪೀಡಿತನಾದವನು ಬಿಸಿಲ್ಗುದುರೆಗಳಲ್ಲಿ ನೀರನ್ನಾದರೂ ಕುಡಿಯ ಬಹುದು; ಎಂದಾದರೂ ಅಲೆದಾಡುತ್ತಾ ಮೊಲದ ಕೊಂಬನ್ನಾದರೂ ಹೊಂದಬಹುದು. ಆದರೆ ಹಟಮಾರಿಯಾದ ಮೂರ್ಖನ ಮನಸ್ಸನ್ನು ಮೆಚ್ಚಿಸಲಾಗುವುದೇ ಇಲ್ಲ.

**ಲಶುನೇ ಕುಸುಮಾಧಿವಾಸನಂ ಪಿಶುನೇ ಸಜ್ಜನತಾಪ್ರಸಂಜನಂ ।**
**ಶುನಿ ಕಿಂಚ ಶುಚಿತ್ವಕಲ್ಪನಂ ನ ವಿಧೇರಪ್ಯಧಿಕಾರಗೋಚರಂ ॥ ೨೬೪**

-ಅನ್ಯೋಕ್ತಿಸ್ತಬಕ-೫೭

ಬೆಳ್ಳುಳ್ಳಿಯನ್ನು ಹೂಗಳ ಸಹಾಯದಿಂದ ಸುವಾಸನೆ ಬರುವಂತೆ ಮಾಡುವುದು, ದುಷ್ಟನನ್ನೂ ಚಾಡಿಕೋರನನ್ನೂ ಒಳ್ಳೆಯವನನ್ನಾಗಿ ಬದಲಾಯಿಸುವುದು, ನಾಯಿಯನ್ನು ಶುಚಿಯಾಗಿ ಮಾಡುವುದು ವಿಧಿಯ ಸಾಮರ್ಥ್ಯವನ್ನೂ ಮೀರಿದೆ.

**ಲಾಂಗೂಲಚಾಲನಮಧಶ್ಚರಣಾವಪಾತಂ**
**ಭೂಮೌ ನಿಪತ್ಯ ವದನೋದರದರ್ಶನಂ ಚ ।**
**ಶ್ವಾ ಪಿಂಡದಸ್ಯ ಕುರುತೇ ಗಜಪುಂಗವಸ್ತು**
**ಧೀರಂ ವಿಲೋಕಯತಿ ಚಾಟುಶತೈಶ್ಚ ಭುಂಕ್ತೇ ॥ ೨೬೫**

-ಹಿತೋಪದೇಶ, ಸುಹೃದ್ಭೇದ-೩೭

ಅನ್ನ ಹಾಕಿದವನ ಮುಂದೆ ನಾಯಿ ಬಾಲವಾಡಿಸುತ್ತದೆ; ಕಾಲಿನಮೇಲೆ ಬೀಳುತ್ತದೆ; ನೆಲದಮೇಲೆ ಬಿದ್ದು ಬಾಯಿಯನ್ನೂ ಹೊಟ್ಟೆಯನ್ನೂ ತೋರಿಸುತ್ತದೆ. ಆದರೆ ಗಜರಾಜ ನಾದರೋ ಗಂಭೀರವಾಗಿ ನೋಡುತ್ತದೆ ಮತ್ತು ನೂರಾರು ಸರಸವಾಕ್ಯಗಳನ್ನು ಹೇಳಿಸಿಕೊಂಡು ಊಟಮಾಡುತ್ತದೆ.

ಲಾಭಪೂಜಾನಿಮಿತ್ತಂ ಹಿ ವ್ಯಾಖ್ಯಾನಂ ಶಿಷ್ಯಸಂಗ್ರಹಃ ।
ಏತೇ ಚಾನ್ಯೇ ಚ ಬಹವಃ ಪ್ರಪಂಚಾಃ ಕುತಪಸ್ವಿನಾಂ ॥ ೨೬೬

-ದಕ್ಷಸ್ಮೃತಿ, ೭-೩೮

ಉಪನ್ಯಾಸಮಾಡುವುದು, ಶಿಷ್ಯರನ್ನು ಹೆಚ್ಚಿಸಿಕೊಳ್ಳುವುದು ಇನ್ನೂ ಅನೇಕ ಉಪಾಯಗಳಿಂದ ಕೆಟ್ಟ ಸಂನ್ಯಾಸಿಗಳು ತಮ್ಮ ಲಾಭವನ್ನೂ, ಪೂಜೆಯನ್ನೂ ಹೆಚ್ಚಿಸಿಕೊಳ್ಳುತ್ತಾರೆ.

ಲೋಕಃ ಸ್ವಯಂ ಶ್ರೇಯಸಿ ನಷ್ಟದೃಷ್ಟಿ-
ರ್ಯೋಽರ್ಥಾನ್ ಸಮೀಹೇತ ನಿಕಾಮಕಾಮಃ ।
ಅನ್ಯೋನ್ಯವೈರಃ ಸುಖಲೇಶಹೇತೋ-
ರನಂತದುಃಖಂ ಚ ನ ವೇದ ಮೂಢಃ ॥ ೨೬೭

-ಭಾಗವತ, ೫-೫-೧೬

ಬಹಳ ಆಸೆಯಿಂದ ಹಣ ಬೇಡುವವನು ತಾನಾಗಿ ಶ್ರೇಯಸ್ಸನ್ನು ಕಾಣದೆ ಹಾಳಾಗುತ್ತಾನೆ. ಅಲ್ಪಸುಖಕ್ಕಾಗಿ ಪರಸ್ಪರ ದ್ವೇಷದಿಂದ ಕೊನೆಯಿಲ್ಲದ ವ್ಯಥೆಯನ್ನು ತಂದುಕೊಳ್ಳುತ್ತಾನೆ. ಮೂರ್ಖನಿಗೆ ಇದರ ಅರಿವೇ ಇರುವುದಿಲ್ಲ.

ಲೋಕಾಂತರಸುಖಂ ಪುಣ್ಯಂ ತಪೋದಾನಸಮುದ್ಭವಂ ।
ಸಂತತಿಃ ಶುದ್ಧವಂಶ್ಯಾ ಹಿ ಪರತ್ರೇಹ ಚ ಶರ್ಮಣೇ ॥ ೨೬೮

-ರಘುವಂಶ, ೧-೬೯

ತಪಸ್ಸು ಮತ್ತು ದಾನಗಳಿಂದ ಬೇರೆ ಲೋಕಗಳನ್ನು ಸುಖವನ್ನು ಪಡೆಯಬಹುದು. ಆದರೆ ಉತ್ತಮ ವಂಶದಲ್ಲಿ ಹುಟ್ಟಿದ ಸಂತತಿಯಿಂದ ಪರಲೋಕದಲ್ಲಿಯೂ ಇಹಲೋಕದಲ್ಲಿಯೂ ಸುಖವುಂಟಾಗುತ್ತದೆ.

ಲೋಭಃ ಪಿತಾತಿವೃದ್ಧೋ ಜನನೀ ಮಾಯಾ ಸಹೋದರಃ ಕೂಟಃ ।
ಭ್ರುಕುಟೀರಚನಾ ಚ ವಿದ್ಯಾ ಪುತ್ರೋ ದಂಭಸ್ಯ ಹುಂಕಾರಃ ॥ ೨೬೯

-ಸುಭಾಷಿತಸುಧಾನಿಧಿ

ದಂಭಕ್ಕೆ ಲೋಭ ಮುದಿತಂದೆ ; ಮಾಯೆಯೇ ತಾಯಿ ; ವಂಚನೆಯೇ ಸೋದರ ; ಹುಬ್ಬುಗಂಟಿಕ್ಕುವುದು ವಿದ್ಯೆ. ಹುಂಕಾರ ಪುತ್ರ.

ಲೋಭಃ ಸ್ವಪ್ನೋಽಧೃತಿಃ ಕ್ರೌರ್ಯಂ ನಾಸ್ತಿಕ್ಯಂ ಭಿನ್ನವೃತ್ತಿತಾ ।
ಯಾಚಿಷ್ಣುತಾ ಪ್ರಮಾದಶ್ಚ ತಾಮಸಂ ಗುಣಲಕ್ಷಣಂ ॥ ೨೭೦

-ಮನುಸ್ಮೃತಿ, ೧೨-೩೩

ದುರಾಸೆ, ಸೋಮಾರಿಯಾಗಿ ಹೆಚ್ಚು ನಿದ್ರೆಮಾಡುವುದು, ಗಾಬರಿ, ಕ್ರೂರಸ್ವಭಾವ, ದೇವರಿಲ್ಲವೆಂಬ ಭಾವನೆ, ಆಚಾರವಿಲ್ಲದಿರುವಿಕೆ, ಬೇಡುವುದು, ತಪ್ಪು ಮಾಡುವುದು ತಮೋಗುಣದ ಲಕ್ಷಣ.

**ಲೋಭಾವಿಷ್ಟೋ ನರೋ ವಿತ್ತಂ ವೀಕ್ಷತೇ ನೈವ ಚಾಪದಂ ।**
**ದುಗ್ಧಂ ಪಶ್ಯತಿ ಮಾರ್ಜಾರೋ ಯಥಾ ನ ಲಗುಡಾಹತಿಂ ॥ ೨೭೧**

ಲೋಭಕ್ಕೆ ವಶನಾದವನು ಹಣವನ್ನು ನೋಡುತ್ತಾನೆ ; ವಿಪತ್ತನ್ನು ಕಾಣುವುದೇ ಇಲ್ಲ. ಬೆಕ್ಕು ಹಾಲನ್ನು ನೋಡುತ್ತದೆಯೇ ವಿನಾ ದೊಣ್ಣೆ ಪೆಟ್ಟನ್ನು ಯೋಚಿಸುವುದಿಲ್ಲವಷ್ಟೇ ?

**ಲೋಭೇನ ಬುದ್ಧಿಶ್ಚಲತಿ ಲೋಭೋ ಜನಯತೇ ತೃಷಾಮ್ ।**
**ತೃಷಾರ್ತೋ ದುಃಖಮಾಪ್ನೋತಿ ಪರತ್ರೇಹ ಚ ಮಾನವಃ ॥ ೨೭೨**

-ಹಿತೋಪದೇಶ, ಮಿತ್ರಲಾಭ-೧೦೮

ಲೋಭದಿಂದ ಬುದ್ಧಿತಪ್ಪುತ್ತದೆ; ಲೋಭ ಅತ್ಯಾಶೆಯನ್ನುಂಟುಮಾಡುತ್ತದೆ. ಆ ಬಾಯಾರಿಕೆಗೊಳಗಾದವನು ಇಲ್ಲಿಯೂ ಪರಲೋಕದಲ್ಲಿಯೂ ದುಃಖಕ್ಕೊಳಗಾಗುತ್ತಾನೆ.

**ವ್ರಜಂತಿ ತೇ ಮೂಢಧಿಯಃ ಪರಾಭವಂ**
**ಭವಂತಿ ಮಾಯಾವಿಷು ಯೇನ ಮಾಯಿನಃ ।**
**ಪ್ರವಿಶ್ಯ ಹಿ ಘ್ನಂತಿ ಶಠಾಸ್ತಥಾವಿಧಾನ್**
**ಅಸಂವೃತಾಂಗಾನ್ ನಿಶಿತಾ ಇವೇಷವಃ ॥ ೨೭೩**

-ಕಿರಾತಾರ್ಜುನೀಯ, ೧-೩೦

ಕಪಟಿಗಳಲ್ಲಿ ಯಾರು ಕಪಟದಿಂದಲೇ ವರ್ತಿಸುವುದಿಲ್ಲವೋ ಅಂತಹ ಮೂರ್ಖರು ಖಂಡಿತವಾಗಿ ಸೋಲುತ್ತಾರೆ. ಹರಿತವಾದ ಬಾಣಗಳು ಕವಚಾದಿಗಳಿಂದ ಮುಚ್ಚಲ್ಪಡದಿರುವ ಶರೀರದ ಭಾಗಗಳನ್ನು ಚುಚ್ಚುವಂತೆ ಮೋಸಗಾರರು ಅಂತಹವರನ್ನು ಸುಲಭವಾಗಿ ಮೋಸಗೊಳಿಸುತ್ತಾರೆ.

**ವನೇಽಪಿ ದೋಷಾಃ ಪ್ರಭವಂತಿ ರಾಗಿಣಾಂ**
**ಗೃಹೇಽಪಿ ಪಂಚೇಂದ್ರಿಯನಿಗ್ರಹಂ ತಪಃ ।**
**ಅಕುತ್ಸಿತೇ ಕರ್ಮಣಿ ಯಃ ಪ್ರವರ್ತತೇ**
**ನಿವೃತ್ತರಾಗಸ್ಯ ಗೃಹಂ ತಪೋವನಮ್ ॥ ೨೭೪**

-ಹಿತೋಪದೇಶ, ಸಂಧಿ-೮೭

ಆಸೆಗಳಿಗೊಳಗಾದವರಿಗೆ ಕಾಡಿನಲ್ಲಿದ್ದರೂ ದೋಷಗಳು ಬಿಡುವುದಿಲ್ಲ. ಗೃಹಸ್ಥನಾಗಿದ್ದರೂ ಐದು ಇಂದ್ರಿಯಗಳನ್ನು ಜಯಿಸುವುದೇ ತಪಸ್ಸು. ಹೇಯವಲ್ಲದ ಕೆಲಸ ಗಳಲ್ಲಿ ತೊಡಗುವವನೂ, ಆಶೆಯನ್ನು ಬಿಟ್ಟವನೂ, ಆದವನಿಗೆ ಮನೆಯೇ ತಪೋವನ.

ವರಂ ಪರ್ವತದುರ್ಗೇಷು ಭ್ರಾಂತಂ ವನಚರೈಃ ಸಹ ।
ನ ಮೂರ್ಖಜನಸಂಪರ್ಕಃ ಸುರೇಂದ್ರಭವನೇಷ್ವಪಿ ॥ ೨೭೫

-ನೀತಿಶತಕ-೧೨

ಕಾಡಿನಲ್ಲಿ ಸಂಚರಿಸುವ ಪ್ರಾಣಿಗಳೊಡನೆ ಬೆಟ್ಟಗಳ ಮೇಲಿನ ದುರ್ಗಮವಾದ ಪ್ರದೇಶಗಳಲ್ಲಿ ಅಲೆಯುವುದು ಉತ್ತಮ. ದೇವೇಂದ್ರನ ಮನೆಗಳಲ್ಲಿಯಾದರೂ ಮೂರ್ಖ ಜನರ ಸಹವಾಸ ಬೇಡ.

ವಲೀಭಿರ್ಮುಖಮಾಕ್ರಾಂತಂ ಪಲಿತೈರಂಕಿತಂ ಶಿರಃ ।
ಗಾತ್ರಾಣಿ ಶಿಥಿಲಾಯಂತೇ ತೃಷ್ಣೈಕಾ ತರುಣಾಯತೇ ॥ ೨೭೬

-ವೈರಾಗ್ಯಶತಕ-೧೪

ಮುಖವು ಸುಕ್ಕುಗಳಿಂದ ತುಂಬಿದೆ. ತಲೆಯು ನೆರೆತ ಕೂದಲಿಂದ ಕೂಡಿದೆ. ಶರೀರದ ಅಂಗಾಂಗಗಳು ಶಿಥಿಲವಾಗಿವೆ. ಆದರೆ, ಆಸೆಯೊಂದೇ ಯೌವನದಿಂದ ಕೂಡಿದೆ.

ವ್ಯಸನಸ್ಯ ಚ ಮೃತ್ಯೋಶ್ಚ ವ್ಯಸನಂ ಕಷ್ಟಮುಚ್ಯತೇ ।
ವ್ಯಸನ್ಯಧೋಽಧೋ ವ್ರಜತಿ ಸ್ವರ್ಯಾತ್ಯವ್ಯಸನೀ ಮೃತಃ ॥ ೨೭೭

-ಮನುಸ್ಮೃತಿ, ೭-೫೩

ವ್ಯಸನ (ಕೆಟ್ಟ ಅಭ್ಯಾಸ) ಮತ್ತು ಸಾವು ಇವುಗಳಲ್ಲಿ ವ್ಯಸನವೇ ಹೆಚ್ಚು ಹಾನಿಯನ್ನುಂಟು ಮಾಡುತ್ತದೆ. ವ್ಯಸನವಿಲ್ಲದವನು ಸತ್ತು ಸ್ವರ್ಗ ಸೇರಿದರೆ ವ್ಯಸನಿಯು ದಿನೇ ದಿನೇ ಕೆಳಕ್ಕೆ ಹೋಗುತ್ತಾನೆ.

ವಾಗ್ದೇವ್ಯಾ ಸಹ ಸಖ್ಯಮಾಚರ ವಹ ಬ್ರಹ್ಮಾಣಮಾವಿಷ್ಕುರು
ಪ್ರಾವೀಣ್ಯಂ ಗತಿಷು ಪ್ರದರ್ಶಯ ನಿಜಂ ವಿದ್ಯಾಬಲಂ ನಿರ್ಮಲಂ ।
ಮೀನಂ ಮಾ ಸ್ಪೃಶ ಮೌಕ್ತಿಕಂ ಕವಲಯ ಕ್ರೀಡ ದ್ರುತಂ ದೌಸ್ತಲೇ
ಚೇದವ್ರೀಡ ಬಕಾಧಮ ಪ್ರತಿಭಯಾ ಹಂಸತ್ವಮಾಕಾಂಕ್ಷಸಿ ॥ ೨೭೮

-ಅನ್ಯೋಕ್ತಿಸ್ತಬಕ-೭೧

ಎಲೈ ಕೊಕ್ಕರೆ! ನಿನಗೆ ಹಂಸವಾಗಬೇಕೆನ್ನುವ ಹಂಬಲವಿದೆ. ಆದರೆ ಅದಕ್ಕಾಗಿ ನೀನು ಏನೇನು ಮಾಡಬೇಕು ಗೊತ್ತೆ! ಸರಸ್ವತಿಯೊಡನೆ ಸ್ನೇಹ ಬೆಳೆಸಬೇಕು. ಬ್ರಹ್ಮನನ್ನು ಬೆನ್ನಿನಮೇಲೆ ಹೊರಬೇಕು. ನಿನ್ನ ನಡಿಗೆಯಲ್ಲಿ ಕುಶಲತೆಯನ್ನು ತೋರಬೇಕು. ನಿನ್ನ

ವಿದ್ಯಾಬಲವನ್ನು ಹೆಚ್ಚಿಸಿಕೊಳ್ಳಬೇಕು. ಮೀನನ್ನು ತಿನ್ನಬಾರದು. ಮುತ್ತನ್ನು ತಿನ್ನಬೇಕು. ಆಕಾಶದಲ್ಲಿ ವಿಹರಿಸಬೇಕು. ನಾಚಿಕೆಯಿಲ್ಲದ ಅಧಮ ಕೊಕ್ಕರೆಯೇ! ಈ ರೀತಿಯಾದ ಪ್ರತಿಭೆಯಿದ್ದರೆ ಹಂಸವಾಗಲು ಬಯಸು!

**ವಾಪ್ಯಾಂ ಸ್ನಾತಿ ವಿಚಕ್ಷಣೋ ದ್ವಿಜವರೋ ಮೂರ್ಖೋಽಪಿ ವರ್ಣಾಧಮಃ**
**ಫುಲ್ಲಾಂ ನಾಮ್ಯತಿ ವಾಯಸೋಽಪಿ ಹಿ ಲತಾಂ ಯಾ ನಾಮಿತಾ ಬರ್ಹಿಣಾ ।**
**ಬ್ರಹ್ಮಕ್ಷತ್ರವಿಶಸ್ತರಂತಿ ಚ ಯಯಾ ನಾವಾ ತಯೈವೇತರೇ**
**ತ್ವಂ ವಾಪೀವ ಲತೇವ ನೌರಿವ ಜನಂ ವೇಶ್ಯಾಽಸಿ ಸರ್ವಂ ಭಜ ॥ ೨೭೯**

-ಮೃಚ್ಛಕಟಿಕ, ೧-೩೨

ಪಂಡಿತರು, ಬ್ರಾಹ್ಮಣರು, ಮೂರ್ಖರು, ಸಾಮಾನ್ಯರು ಎಲ್ಲರೂ ಕೊಳದಲ್ಲಿ ಸ್ನಾನಮಾಡುತ್ತಾರೆ. ಅರಳಿದ ಹೂಗಳಿಂದ ತುಂಬಿದ ಬಳ್ಳಿಯನ್ನು ನವಿಲೂ ಬಗ್ಗಿಸುತ್ತದೆ, ಕಾಗೆಯೂ ಬಗ್ಗಿಸುತ್ತದೆ. ಒಂದೇ ದೋಣಿಯಲ್ಲಿ ಎಲ್ಲ ಜನರೂ ಕುಳಿತು ನದಿಯನ್ನು ದಾಟುತ್ತಾರೆ. ಆದುದರಿಂದ ಕೊಳದಂತೆ, ಬಳ್ಳಿಯಂತೆ, ದೋಣಿಯಂತೆ ಸೂಳೆಯು ಎಲ್ಲರನ್ನೂ ಭೇದವಿಲ್ಲದೆ ಉಪಚರಿಸುತ್ತಾಳೆ.

**ವಾರ್ತಾ ಚ ಕೌತುಕವತೀ ವಿಮಲಾ ಚ ವಿದ್ಯಾ**
**ಲೋಕೋತ್ತರಃ ಪರಿಮಲಶ್ಚ ಕುರಂಗನಾಭೇಃ ।**
**ತೈಲಸ್ಯ ಬಿಂದುರಿವ ವಾರಿಣಿ ದುರ್ನಿವಾರಂ**
**ಏತತ್ತ್ರಯಂ ಪ್ರಸರತಿ ಸ್ವಯಮೇವ ಭೂಮೌ ॥ ೨೮೦**

-ಪ್ರಸನ್ನರಾಘವ, ೨-೨

ಕುತೂಹಲವನ್ನು ಕೆರಳಿಸುವ ಸುದ್ದಿ, ಉತ್ತಮವಾದ ವಿದ್ಯೆ, ಕಸ್ತೂರೀ ಮೃಗದ ಅತಿಶಯವಾದ ಪರಿಮಳ ಇವು ಮೂರು ನೀರಿನಲ್ಲಿ ಎಣ್ಣೆಯ ಬಿಂದುವಿನಂತೆ ಲೋಕದಲ್ಲಿ ತಾನಾಗಿ ಹರಡುತ್ತವೆ.

**ವ್ಯಾಲಂ ಬಾಲಮೃಣಾಲತಂತುಭಿರಸೌ ರೋದ್ಧುಂ ಸಮುಜ್ಜೃಂಭತೇ**
**ಛೇತ್ತುಂ ವಜ್ರಮಣೀನ್ ಶಿರೀಷಕುಸುಮಪ್ರಾಂತೇನ ಸನ್ನಹ್ಯತೇ ।**
**ಮಾಧುರ್ಯಂ ಮಧುಬಿಂದುನಾ ರಚಯಿತುಂ ಕ್ಷಾರಾಂಬುಧೇರೀಹತೇ**
**ನೇತುಂ ವಾಂಛತಿ ಯಃ ಖಲಾನ್ ಪಥಿ ಸತಾಂ ಸೂಕ್ತೈಃ**
**ಸುಧಾಸ್ಯಂದಿಭಿಃ॥ ೨೮೧**

-ನೀತಿಶತಕ-೪

ಯಾರು ದುರ್ಜನರನ್ನು ಅಮೃತವನ್ನು ಹರಿಸತಕ್ಕ ಒಳ್ಳೆಯ ಮಾತುಗಳಿಂದ ಸಜ್ಜನರ ದಾರಿಯಲ್ಲಿ ಒಯ್ಯಲು ಇಷ್ಟಪಡುತ್ತಾನೊ, ಅವನು ಘೋರಸರ್ಪವನ್ನು ಎಳೆಯ ಕಮಲನಾಳದ ನಾರುಗಳಿಂದ ಕಟ್ಟಬಹುದು; ಅಥವಾ ವಜ್ರಮಣಿಗಳನ್ನು ಬಾಗೇಹೂವಿನ

ಕೊನೆಯಿಂದ ಕತ್ತರಿಸಬಹುದು; ಅಥವಾ ಉಪ್ಪು ಸಮುದ್ರವನ್ನು ಒಂದು ತೊಟ್ಟು ಜೇನುತುಪ್ಪದಿಂದ ಸಿಹಿಮಾಡಬಹುದು.

**ವಿಕ್ರೋಶಂತೋ ಯಸ್ಯ ರಾಷ್ಟ್ರಾದ್ಧ್ರಿಯಂತೇ ದಸ್ಯುಭಿಃ ಪ್ರಜಾಃ ।**
**ಸಂಪಶ್ಯತಃ ಸಭೃತ್ಯಸ್ಯ ಮೃತಃ ಸ ನ ತು ಜೀವತಿ ॥ ೨೮೨**

-ಮನುಸ್ಮೃತಿ, ೭-೧೪೩

ರಾಜನೂ ಅವನ ಅಧಿಕಾರಿಗಳೂ ನೋಡುತ್ತಿರಲು ಯಾರ ರಾಜ್ಯದಲ್ಲಿ ಕಳ್ಳರು ಹೆಚ್ಚಾಗಿ ಜನಗಳು ತೊಂದರೆಗೊಳಗಾಗಿ ಹಾಹಾಕಾರ ಮಾಡುತ್ತಾರೆಯೋ ಅಲ್ಲಿ ರಾಜನು ಬದುಕಿದ್ದರೂ ಸತ್ತಂತೆಯೇ.

**ವಿತ್ತಮೇವ ಕಲೌ ನೃಣಾಂ ಜನ್ಮಾಚಾರಗುಣೋದಯಃ ।**
**ಧರ್ಮನ್ಯಾಯವ್ಯವಸ್ಥಾಯಾಂ ಕಾರಣಂ ಬಲಮೇವ ಹಿ ॥ ೨೮೩**

-ಭಾಗವತ, ೧೨-೨-೨

ಈ ಕಲಿಯುಗದಲ್ಲಿ ಮನುಷ್ಯರಿಗೆ ಹಣವೇ ಕುಲ, ಆಚಾರ, ಗುಣಗಳಿಗೆ ಕಾರಣ ಮತ್ತು ಧರ್ಮ ನ್ಯಾಯ ವ್ಯವಸ್ಥೆಯಲ್ಲಿ ಬಲವೇ ಕಾರಣ.

**ವಿದುರೇಷ್ಯದಪಾಯಮಾತ್ಮನಾ**
**ಪರತಃ ಶ್ರದ್ದಧತೇಽಥವಾ ಬುಧಾಃ ।**
**ನ ಪರೋಪಹಿತಂ ನ ಚ ಸ್ವತಃ**
**ಪ್ರಮಿಮೀತೇಽನುಭವಾದೃತೇಽಲ್ಪಧೀಃ ॥ ೨೮೪**

-ಶಿಶುಪಾಲವಧ, ೧೬-೪೦

ಪಂಡಿತರು ಮುಂದೆ ಬರುವ ಅಪಾಯವನ್ನು ತಾವಾಗಿ ತಿಳಿಯಬಲ್ಲರು. ಅಥವಾ ಬೇರೆಯವರು ತಿಳಿಯಹೇಳಿದರೆ ನಂಬುತ್ತಾರೆ. ಆದರೆ ಅವಿವೇಕಿಗಳು ಮುಂದೆ ಬರುವ ಸಂಕಟವನ್ನು ತಾವಾಗಿಯೂ ತಿಳಿಯಲಾರರು. ಬೇರೆಯವರು ಹೇಳಿದರೂ ನಂಬುವುದಿಲ್ಲ. ತಮಗೇ ಅನುಭವವಾಗಬೇಕು.

**ವಿಧಾಯ ವೈರಂ ಸಾಮರ್ಷೇ ನರೋಽರೌ ಯ ಉದಾಸತೇ ।**
**ಪ್ರಕ್ಷಿಪ್ಯೋದರ್ಚಿಷಂ ಕಕ್ಷೇ ಶೇರತೇ ತೇಽಭಿಮಾರುತಮ್ ॥ ೨೮೫**

-ಶಿಶುಪಾಲವಧ, ೨-೪೨

ಸೇಡಿನಿಂದ ತುಂಬಿದ ಶತ್ರುವಿಗೆ ಅಪಕಾರವನ್ನೆಸಗಿ ಯಾರು ಸುಮ್ಮನೆ ಇರುತ್ತಾನೆಯೋ ಅವನು ಹುಲ್ಲಿಯ ಬಣವೆಗೆ ಬೆಂಕಿಯಿಟ್ಟು ಗಾಳಿಗೆದುರಾಗಿ ಮಲಗಿದಂತೆಯೇ ನಾಶವಾಗುವನು.

ವಿಪರ್ಯಸ್ತಮನಶ್ಚೇಷ್ಟೈಃ ಶಿಲಾಶಕಲವರ್ಷ್ಮಭಿಃ ।
ಮಾಂಸವೃಕ್ಷೈರಿಯಂ ಮೂರ್ಖೈಃ ಭಾರಾಕ್ರಾಂತಾ ವಸುಂಧರಾ ॥ ೨೮೬
-ಮೃಚ್ಛಕಟಿಕ ೮-೬

ವಿಚಿತ್ರವಾದ ಮನಸ್ಸು ಮತ್ತು ನಡತೆಗಳಿಂದ, ಕಲ್ಲಿನಂತೆ ಕಠಿನವಾದ ಶರೀರದಿಂದ ಮೂರ್ಖರೆಂಬುವರು ಮಾಂಸದ ವೃಕ್ಷದಂತೆ ಭೂಮಿಗೆ ಭಾರವಾಗಿ ಓಡಾಡುತ್ತಿದ್ದಾರೆ.

ವಿಷಂ ರುಧಿರಮಾಸಾದ್ಯ ಪ್ರಸರ್ಪತಿ ಯಥಾ ತನೌ ।
ತಥೈವ ಛಿದ್ರಮಾಸಾದ್ಯ ದೋಷಶ್ಚಿತ್ತೇ ಪ್ರಸರ್ಪತಿ ॥ ೨೮೭
-ಬೋಧಿಚರ್ಯಾವತಾರ, ೭-೬೯

ವಿಷವು ರಕ್ತವನ್ನು ಸೇರಿ ಹೇಗೆ ಶರೀರದಲ್ಲಿ ಹರಡುತ್ತದೆಯೋ ಅದೇ ರೀತಿ ಸ್ವಲ್ಪ ಅವಕಾಶವನ್ನು ಹೊಂದಿದರೂ ದೋಷವು ಮನಸ್ಸನ್ನು ಕೆಡಿಸುತ್ತದೆ.

ವಿಷಧರತೋಽಪ್ಯತಿವಿಷಮಃ
ಖಲ ಇತಿ ನ ಮೃಷಾ ವದಂತಿ ವಿದ್ವಾಂಸಃ ।
ಯದಯಂ ನಕುಲದ್ವೇಷೀ
ಕುಲವಿದ್ವೇಷೀ ಪುನಃ ಪಿಶುನಃ ॥ ೨೮೮
-ಸುಬಂಧು-ಸುಭಾಷಿತಸುಧಾನಿಧಿ

ವಿಷದ ಹಾವಿಗಿಂತ ದುಷ್ಟನು ಹೆಚ್ಚು ಕೆಡುಕನೆಂದು ವಿದ್ವಾಂಸರು ಹೇಳುವುದು ಸುಳ್ಳಲ್ಲ. ಏಕೆಂದರೆ, ಹಾವು ನಕುಲದ್ವೇಷಿ-ಮುಂಗಸಿಗೆ ಶತ್ರು, ಕುಲದ್ವೇಷಿಯಲ್ಲ. ದುಷ್ಟನು ಕುಲದ್ವೇಷಿ.

ವೇದಾಃ ತ್ಯಾಗಶ್ಚ ಯಜ್ಞಾಶ್ಚ ನಿಯಾಮಾಶ್ಚ ತಪಾಂಸಿ ಚ ।
ನ ವಿಪ್ರದುಷ್ಟಭಾವಸ್ಯ ಸಿದ್ಧಿಂ ಗಚ್ಛಂತಿ ಕರ್ಹಿಚಿತ್ ॥ ೨೮೯
-ಮನುಸ್ಮೃತಿ, ೨-೯೭

ವೇದಾಧ್ಯಯನ, ದಾನ, ಯಜ್ಞಗಳು, ವ್ರತ ಪೂಜೆ ಮೊದಲಾದುವು, ತಪಸ್ಸು-ಇವುಗಳು ಇಂದ್ರಿಯಸುಖದಲ್ಲಿ ಆಸಕ್ತನಾದ ಕೆಟ್ಟವನಿಗೆ ಸಿದ್ಧಿಸುವುದಿಲ್ಲ.

ಶಕ್ತಃ ಪರಜನೇ ದಾತಾ ಸ್ವಜನೇ ದುಃಖಜೀವಿನಿ ।
ಮಧ್ವಾಪಾತೋ ವಿಷಾಸ್ವಾದಃ ಸ ಧರ್ಮಪ್ರತಿರೂಪಕಃ ॥ ೨೯೦
-ಮನುಸ್ಮೃತಿ, ೧೧-೯

ತನ್ನ ಕುಟುಂಬದವರು ಕಷ್ಟದಲ್ಲಿರುವಾಗ ಕೀರ್ತಿಗೋಸ್ಕರ ದಾನಧರ್ಮಗಳನ್ನು ಮಾಡುವುದು ಧರ್ಮವಲ್ಲ, ಧರ್ಮದಂತೆ ಇರುತ್ತದೆ. ಇದರ ಆರಂಭವು ಚೆನ್ನಾಗಿದ್ದು ಕೊನೆಗೆ ದುಃಖವನ್ನು ತಂದೊಡ್ಡುತ್ತದೆ.

**ಶಕ್ತಿವೈಕಲ್ಯನಮ್ರಸ್ಯ ನಿಃಸಾರತ್ವಾಲ್ಲಘೀಯಸಃ ।**
**ಜನ್ಮಿನೋ ಮಾನಹೀನಸ್ಯ ತೃಣಸ್ಯ ಚ ಸಮಾ ಗತಿಃ ॥ ೨೯೧**

-ಕಿರಾತಾರ್ಜುನೀಯ, ೧೧-೫೯

ಹುಲ್ಲುಕಡ್ಡಿಯು ಗಟ್ಟಿಯಾಗಿಲ್ಲವಾದ್ದರಿಂದ ಬಗ್ಗುತ್ತದೆ. ಸಾರವಿಲ್ಲವಾದುದರಿಂದ ಹಗುರವಾಗಿದೆ. ಅದರಂತೆ ಮಾನವಿಲ್ಲದ ಮಾನವನು ಶಕ್ತಿ ಇಲ್ಲದಿದ್ದರೆ ಇನ್ನೊಬ್ಬರಿಗೆ ಸೇವಕನಾಗಿ, ಹಣವಿಲ್ಲದೆ ಹಗುರವಾಗುತ್ತಾನೆ.

**ಶರ್ಕರಾಸ್ವಾದಮತ್ತೇನ ಮಕ್ಷಿಕಾ ಚೇದುಪೇಕ್ಷ್ಯತೇ ।**
**ಸಾಕಂ ಪ್ರವಿಶ್ಯ ಜಠರಂ ವಿಪತ್ತಿಂ ತನುತೇ ನ ಕಿಮ್ ॥ ೨೯೨**

ಸಕ್ಕರೆಯನ್ನು ರುಚಿನೋಡುವ ಸಂತೋಷದಲ್ಲಿ ನೊಣವನ್ನು ಗಮನಿಸದೇಹೋದರೆ, ಅದು ಹೊಟ್ಟೆಯೊಳಗೆ ಹೋಗಿ ತೊಂದರೆ ಕೊಡುವುದಿಲ್ಲವೇ?

**ಶಕ್ಯೋ ವಾರಯಿತುಂ ಜಲೇನ ಹುತಭುಕ್ ಛತ್ರೇಣ ಸೂರ್ಯಾತಪೋ**
**ನಾಗೇಂದ್ರೋ ನಿಶಿತಾಂಕುಶೇನ ಸಮದೌ ದಂಡೇನ ಗೋಗರ್ದಭೌ ।**
**ವ್ಯಾಧಿರ್ಭೇಷಜಸಂಗ್ರಹೈಶ್ಚ ವಿವಿಧೈರ್ಮಂತ್ರಪ್ರಯೋಗೈರ್ವಿಷಂ**
**ಸರ್ವಸ್ಯೌಷಧಮಸ್ತಿ ಶಾಸ್ತ್ರವಿಹಿತಂ ಮೂರ್ಖಸ್ಯ ನಾಸ್ತ್ಯೌಷಧಮ್ ॥ ೨೯೩**

-ನೀತಿಶತಕ-೯

ನೀರಿನಿಂದ ಬೆಂಕಿ, ಛತ್ರಿಯಿಂದ ಬಿಸಿಲು, ಹರಿತವಾದ ಅಂಕುಶದಿಂದ ಮದಿಸಿದಾನೆ, ಕೋಲಿನಿಂದ ದನ ಕತ್ತೆಗಳೂ, ಔಷಧಸಂಗ್ರಹಗಳಿಂದ ರೋಗವೂ ನಾನಾ ಬಗೆಯ ಮಂತ್ರ ಪ್ರಯೋಗಗಳಿಂದ ವಿಷವೂ ನಿವಾರಿಸಲ್ಪಡಲು ಸಾಧ್ಯ. ಆದರೆ ಮೂರ್ಖನಿಗೆ ಔಷಧವಿಲ್ಲ.

**ಶತಂ ದದ್ಯಾನ್ನ ವಿವದೇದಿತಿ ಸುಜ್ಞಸ್ಯ ಸಮ್ಮತಮ್ ।**
**ವಿನಾ ಹೇತುಮಪಿ ದ್ವಂದ್ವಂ ತತ್ಸ್ಯಾನ್ಮೂರ್ಖಸ್ಯ ಲಕ್ಷಣಮ್ ॥ ೧೯೪**

-ಹಿತೋಪದೇಶ, ವಿಗ್ರಹ-೩೦

ಒಳ್ಳೆಯ ತಿಳಿವಳಿಕೆಯುಳ್ಳವನ ಅಭಿಪ್ರಾಯ, 'ನೂರಾದರೂ ಕೊಟ್ಟುಬಿಡೋಣ, ಜಗಳವಾಡುವುದು ಬೇಡ' ಎಂದಿರುತ್ತದೆ. ಆದರೆ ತಕ್ಕ ಕಾರಣವಿಲ್ಲದಿದ್ದಗೂ ಜಗಳ ಮಾಡುವುದು ಮೂರ್ಖನ ಲಕ್ಷಣ.

**ಶ್ರದ್ಧೇಯಾ ವಿಪ್ರಲಬ್ಧಾರಃ ಪ್ರಿಯಾ ವಿಪ್ರಿಯಕಾರಿಣಃ ।**
**ಸುದುಸ್ತ್ಯಜಾಃ ತ್ಯಜಂತೋಽಪಿ ಕಾಮಾಃ ಕಷ್ಟಾ ಹಿ ಶತ್ರವಃ ॥ ೨೯೫**

-ಕಿರಾತಾರ್ಜುನೀಯ, ೧೧-೩೫

ಕಾಮಸುಖಗಳು ಬೇರೆ ಶತ್ರುಗಳಿಗಿಂತಲೂ ಭಯಂಕರ. ಬಿಡಬೇಕೆಂದು ಯತ್ನಿಸಿದರೂ ಬೆನ್ನುಬಿಡುವುದಿಲ್ಲ. ಚೆನ್ನಾಗಿ ನಂಬಿದವನನ್ನು ಮೋಸಗೊಳಿಸುತ್ತವೆ. ಪ್ರೀತಿಯಿಂದ ಸ್ವೀಕರಿಸಿದರೆ ತೊಂದರೆಯನ್ನುಂಟುಮಾಡುತ್ತವೆ.

**ಶಯ್ಯಾ ಶಾದ್ವಲಮಾಸನಂ ಶುಚಿ ಶಿಲಾ ಸದ್ಮ ದ್ರುಮಾಣಾಮಧಃ**
**ಶೀತಂ ನಿರ್ಝರವಾರಿ ಪಾನಮಶನಂ ಕಂದಾಃ ಸಹಾಯಾ ಮೃಗಾಃ ।**
**ಇತ್ಯಪ್ರಾರ್ಥಿತಲಭ್ಯಸರ್ವವಿಭವೇ ದೋಷೋಽಯಮೇಕೋ ವನೇ**
**ದುಷ್ಪ್ರಾಪಾರ್ಥಿನಿ ಯತ್ ಪರಾರ್ಥಘಟನಾವಂಧ್ಯೈರ್ವೃಥಾ ಸ್ಥೀಯತೇ ॥ ೨೯೬**

-ನಾಗಾನಂದ, ೪-೨

ಮೆತ್ತನೆಯ ಹಸುರುಹುಲ್ಲು ಹಾಸಿಗೆ, ಶುಭ್ರವಾದ ಕಲ್ಲು ಪೀಠ, ಮರಗಳ ಕೆಳಗೆ ಮನೆ, ತೊರೆಗಳ ತಂಪಾದ ನೀರು ಪಾನೀಯ, ಗೆಡ್ಡೆಗಳು ಆಹಾರ, ಮೃಗಗಳು ಗೆಳೆಯರು. ಹೀಗೆ ಕಾಡಿನಲ್ಲಿ ಎಲ್ಲ ಸೌಕರ್ಯಗಳು ಸುಲಭವಾಗಿಯೇ ಸಿಗುತ್ತವೆ. ಆದರೆ ಸಹಾಯ ಮಾಡೋಣವೆಂದರೆ ಒಬ್ಬನೂ ಸಿಕ್ಕುವುದಿಲ್ಲ ಎಂಬುದೇ ನನ್ನ ವ್ಯಥೆ.

**ಶರಣಂ ಕಿಂ ಪ್ರಪನ್ನಾನಿ ವಿಷವನ್ಮಾರಯಂತಿ ವಾ ।**
**ನ ತ್ಯಜ್ಯಂತೇ ನ ಭುಜ್ಯಂತೇ ಕೃಪಣೇನ ಧನಾನಿ ಯತ್ ॥ ೨೯೭**

-ಕುವಲಯಾನಂದ.

ಜಿಪುಣನು ಹಣವನ್ನು ಕೈಬಿಡುವುದಿಲ್ಲ. ತಾನೂ ಅನುಭವಿಸುವುದಿಲ್ಲ. ಏಕಿರಬಹುದು? ಹಣವು ಆತನಿಗೆ ಶರಣಾಗತವಾಗಿರಬಹುದೆ? ಅಥವಾ ವಿಷದಂತೆ ಆತನನ್ನು ಕೊಲ್ಲಬಹುದೆ?

**ಶ್ವಸ್ತ್ವಯಾ ಸುಖಸಂವಿತ್ತಿಃ ಸ್ಮರಣೀಯಾಧುನಾತನೀ ।**
**ಇತಿ ಸ್ವಪ್ನೋಪಮಾನ್ ಮತ್ವಾ ಕಾಮಾನ್ಮಾಗಾಸ್ತದಂಗತಾಮ್ ॥ ೨೯೮**

-ಕಿರಾತಾರ್ಜುನೀಯ, ೧೧-೩೪

ಇಂದಿನ ಸುಖವನ್ನು ನಾಳೆ ನೆನೆಯಬೇಕಾಗುತ್ತದೆ. ಕಳೆದುಹೋದ ಸುಖ ಬರೀ ನೆನಪಿನಲ್ಲುಳಿದು ಸುಖವು ಶಾಶ್ವತವಲ್ಲವೆಂದು ತಿಳಿಸುತ್ತದೆ. ಆದುದರಿಂದ ಕಾಮಸುಖಗಳು ಸ್ವಪ್ನಕ್ಕೆ ಸಮವೆಂದು ತಿಳಿದು ಅದನ್ನು ಆದರಿಸಬೇಡ.

ಶಾಠ್ಯೇನ ಮಿತ್ರಂ ಕಪಟೇನ ಧರ್ಮಂ
ಪರೋಪತಾಪೇನ ಸಮೃದ್ಧಭಾವಮ್ ।
ಸುಖೇನ ವಿದ್ಯಾಂ ಪರುಷೇಣ ನಾರೀಂ
ವಾಂಛಂತಿ ಯೇ ನೂನಮಪಂಡಿತಾಸ್ತೇ ॥ ೨೯೯

-ಸುಭಾಷಿತಸುಧಾನಿಧಿ

ಮೋಸದಿಂದ ಸ್ನೇಹಿತನನ್ನೂ, ವಂಚನೆಯಿಂದ ಧರ್ಮವನ್ನೂ, ಇತರರಿಗೆ ಹಿಂಸೆ ಮಾಡುವುದರಿಂದ ಸಮೃದ್ಧಿಯನ್ನೂ, ಸುಖದಿಂದ ವಿದ್ಯೆಯನ್ನೂ, ಒರಟುಮಾತುಗಳಿಂದ ಹೆಂಗಸನ್ನೂ ಯಾರು ಪಡೆಯಲು ಬಯಸುತ್ತಾರೆಯೋ ಅವರು ನಿಜವಾಗಿ ಅವಿವೇಕಿಗಳು.

ಶಾಸ್ತ್ರಜ್ಞಃ ಕಪಟಾನುಸಾರಕುಶಲೋ ವಕ್ತಾ ನ ಚ ಕ್ರೋಧನಃ
ತುಲ್ಯೋ ಮಿತ್ರಪರಸ್ವಕೇಷು ಚರಿತಂ ದೃಷ್ಟ್ವೈವ ದತ್ತೋತ್ತರಃ ।
ಕ್ಲೀಬಾನ್ ಪಾಲಯಿತಾ ಶಠಾನ್ ವ್ಯಥಯಿತಾ ಧರ್ಮ್ಯೋ ನ ಲೋಭಾನ್ವಿತಃ
ದ್ವಿರ್ಭಾವೇ ಪರತತ್ತ್ವಬದ್ಧಹೃದಯೋ ರಾಜ್ಞಶ್ಚ ಕೋಪಾಪಹಃ ॥ ೩೦೦

-ಮೃಚ್ಛಕಟಿಕ, ೯-೫

ನ್ಯಾಯಾಧಿಪತಿಯು ಶಾಸ್ತ್ರವನ್ನು ಬಲ್ಲವನು. ಮೋಸವನ್ನು ಕಂಡುಹಿಡಿಯುವುದರಲ್ಲಿ ನಿಪುಣ. ಚೆನ್ನಾಗಿ ಮಾತನಾಡುತ್ತಾನೆ. ಮುಂಗೋಪಿಯಲ್ಲ. ಮಿತ್ರರಲ್ಲಿಯೂ ಶತ್ರುಗಳಲ್ಲಿಯೂ ಸಮಾನನು. ನಡತೆಯಿಂದಲೇ ನಿರ್ಣಯವನ್ನು ಹೇಳುವವನು. ಬಲಹೀನರನ್ನು ಕಾಪಾಡುತ್ತಾನೆ. ದುಷ್ಟರನ್ನು ದಂಡಿಸುತ್ತಾನೆ. ಧರ್ಮವನ್ನು ಪಾಲಿಸುತ್ತಾನೆ. ಲೋಭಕ್ಕೆ ಒಳಗಾಗುವುದಿಲ್ಲ. ಸಂದೇಹ ಬಂದಾಗ ನ್ಯಾಯವೇ ಮುಖ್ಯವಾಗುತ್ತದೆ. ಅರಸನ ಕೋಪವನ್ನು ಹೋಗಲಾಡಿಸುತ್ತಾನೆ.

ಶಾಸ್ತ್ರಾರ್ಥಂ ತತ್ತ್ವತೋಽಜ್ಞಾತ್ವಾ ಚರಿಷ್ಯಾಮೋ ವಯಂ ಸದಾ ।
ನ ನೋ ವ್ಯಸನಿತಾ ಕಾಚಿತ್ ವಿಮತಿಪ್ರತಿಬೋಧನೇ ॥ ೩೦೧

-ಭಾಸ್ಕರಾಚಾರ್ಯ-೨೧೬

ಶಾಸ್ತ್ರದ ಅರ್ಥವನ್ನು ಸರಿಯಾಗಿ ತಿಳಿದು ನಾವು ನಡೆಯುತ್ತೇವೆ. ಭಿನ್ನಾಭಿಪ್ರಾಯವುಳ್ಳವರನ್ನು ಒಪ್ಪಿಸಲೇಬೇಕೆಂಬ ವ್ಯಸನ ನಮಗಿಲ್ಲ.

ಶಾಸ್ತ್ರೇಷು ಹೀನಾಃ ಕವಯೋ ಭವಂತಿ
ಕವಿತ್ವಹೀನಾಶ್ಚ ಪುರಾಣಭಟ್ಟಾಃ ।
ಪುರಾಣಹೀನಾಃ ಕೃಷಕಾ ಭವಂತಿ
ಭಗ್ನಾಃ ಕೃಷೇರ್ಭಾಗವತಾ ಭವಂತಿ ॥ ೩೦೨

-ಅತ್ರಿಸಂಹಿತಾ, ೧-೩೮೨

ಶಾಸ್ತ್ರಗಳನ್ನು ತಿಳಿಯಲಾರದವರು ಕವಿಗಳಾಗುತ್ತಾರೆ. ಕವಿಗಳಾಗಲು ಶಕ್ತಿ ಇಲ್ಲದವರು ಪುರಾಣಗಳನ್ನು ಹೇಳುವವರಾಗುತ್ತಾರೆ. ಅದೂ ಬಾರದಿದ್ದವರು ಬೇಸಾಯ ಮಾಡುತ್ತಾರೆ. ಬೇಸಾಯಕ್ಕೂ ಅವಕಾಶವಿಲ್ಲದವರು ಭಿಕ್ಷುಕರಾಗುತ್ತಾರೆ.

**ಶಿಷ್ಯೋ ಭಾರ್ಯಾ ಶಿಶುರ್ಭ್ರಾತಾ ಪುತ್ರೋ ದಾಸಃ ಸಮಾಶ್ರಿತಃ ।**
**ಯಸ್ಯೈತಾನಿ ವಿನೀತಾನಿ ತಸ್ಯ ಲೋಕೇ ಹಿ ಗೌರವಮ್ ॥ ೩೦೩**

-ದಕ್ಷಸ್ಮೃತಿ, ೪-೧೪

ಶಿಷ್ಯ, ಹೆಂಡತಿ, ತಮ್ಮಂದಿರು, ಮಗ, ಸೇವಕ, ಆಶ್ರಿತರು ಯಾರ ಮನೆಯಲ್ಲಿ ವಿಧೇಯರಾಗಿರುತ್ತಾರೆಯೋ ಅವನಿಗೆ ಲೋಕದಲ್ಲಿ ಗೌರವ ಹೆಚ್ಚು.

**ಶುಷ್ಕೇಣೈಕೇನ ವೃಕ್ಷೇಣ ವನಂ ಪುಷ್ಪಿತಪಾದಪಂ ।**
**ಕುಲಂ ಚಾರಿತ್ರಹೀನೇನ ಪುರುಷೇಣೇವ ದಹ್ಯತೇ ॥ ೩೦೪**

-ಪಂಚರಾತ್ರ, ೧-೧೨

ಒಂದೇ ಒಂದು ಒಣಗಿದ ಮರವಿದ್ದರೂ ಕಾಡುಗಿಚ್ಚಿನಿಂದ ತಾನುರಿದು ಹೂಗಳಿಂದ ತುಂಬಿದ ಹಸುರು ಮರಗಳ ವನವನ್ನೇ ದಹಿಸುತ್ತದೆ. ಒಬ್ಬನೇ ಒಬ್ಬ ಕೆಟ್ಟನಡತೆಯುಳ್ಳ ಮನುಷ್ಯನಿಂದ ಇಡೀ ಕುಲವು ಕೆಟ್ಟಹೆಸರನ್ನು ಪಡೆಯುತ್ತದೆ.

**ಶೋಚಂತಿ ಜಾಮಯೋ ಯತ್ರ ವಿನಶ್ಯತ್ಯಾಶು ತತ್ಕುಲಂ ।**
**ನ ಶೋಚಂತಿ ತು ಯತ್ರೈತಾ ವರ್ಧತೇ ತದ್ಧಿ ಸರ್ವದಾ ॥ ೩೦೫**

-ಮನುಸ್ಮೃತಿ, ೩-೫೭

ಯಾವ ಕುಟುಂಬಕ್ಕೆ ಸೇರಿದ ಹೆಣ್ಣುಮಕ್ಕಳು ಕಷ್ಟದಲ್ಲಿದ್ದು ದುಃಖಿಸುತ್ತಾರೆಯೋ ಆ ಕುಟುಂಬವು ನಶಿಸುತ್ತದೆ. ಹೆಣ್ಣುಮಕ್ಕಳು ಆನಂದವಾಗಿದ್ದರೆ, ಆ ಕುಟುಂಬ ಯಾವಾಗಲೂ ಏಳಿಗೆಯನ್ನು ಪಡೆಯುತ್ತದೆ.

**ಷಡ್ದೋಷಾಃ ಪುರುಷೇಣೇಹ ಹಾತವ್ಯಾ ಭೂತಿಮಿಚ್ಛತಾ ।**
**ನಿದ್ರಾ ತಂದ್ರಾ ಭಯಂ ಕ್ರೋಧಃ ಆಲಸ್ಯಂ ದೀರ್ಘಸೂತ್ರತಾ ॥ ೩೦೬**

-ಹಿತೋಪದೇಶ, ಮಿತ್ರಲಾಭ-೨೫

ಅಭಿವೃದ್ಧಿಯನ್ನು ಬಯಸುವ ಪುರುಷನು ನಿದ್ರೆ, ತೂಕಡಿಕೆ, ಹೆದರಿಕೆ, ಕ್ರೋಧ, ಸೋಮಾರಿತನ, ಪಾಲುಮಾರಿಕೆ ಈ ಆರು ದೋಷಗಳನ್ನೂ ಬಿಡಬೇಕು.

**ಸ್ಖಲಿತಃ ಸ್ಖಲಿತೋ ವಧ್ಯ ಇತಿ ಚೇನ್ನಿಶ್ಚಿತಂ ಭವೇತ್ ।**
**ದ್ವಿತ್ರಾ ಯದ್ಯವಶಿಷ್ಯೇರನ್ ಬಹುದೋಷಾ ಹಿ ಮಾನವಾಃ ॥ ೩೦೭**

-ಮಹಾಭಾರತ, ಸುಭಾಷಿತಸುಧಾನಿಧಿ

ಎಡವಿದವನು ಒಬ್ಬೊಬ್ಬನೂ ವಧ್ಯನೆಂಬುದೇ ನಿಶ್ಚಯವಾಗಿಬಿಟ್ಟರೆ ಲೋಕದಲ್ಲಿ ಇಬ್ಬರು ಅಥವಾ ಮೂರು ಜನ ಉಳಿದಾರು! ಮನುಷ್ಯರೆಲ್ಲಾ ಎಷ್ಟಾದರೂ ಹೆಚ್ಚು ದೋಷಗಳುಳ್ಳವರೇ!

ಸಂಚಿತಸ್ಯಾಪಿ ಮಹತಾ ವತ್ಸ ಕ್ಲೇಶೇನ ಮಾನವೈಃ ।
ಯಶಸಸ್ತಪಸಶ್ಚೈವ ಕ್ರೋಧೋ ನಾಶಕರಃ ಪರಃ ॥ ೩೦೮
-ವಿಷ್ಣುಪುರಾಣ, ೧-೧-೧೮

ಬಹಳ ಕಷ್ಟಪಟ್ಟು ಮಾನವನು ಸಂಪಾದಿಸಿದ ಕೀರ್ತಿ, ತಪಸ್ಸು ಎಲ್ಲವನ್ನೂ ಕೋಪವು ನಾಶಗೊಳಿಸುತ್ತದೆ.

ಸತ್ಯಂ ದೇವಾಃ ಸಮಾಸೇನ ಮನುಷ್ಯಾಸ್ತ್ವನೃತಂ ಸ್ಮೃತಾಃ ।
ಇಹೈವ ತಸ್ಯ ದೇವತ್ವಂ ಯಸ್ಯ ಸತ್ಯೇ ಸ್ಥಿತಾ ಮತಿಃ ॥ ೩೦೯
-ನಾರದಸ್ಮೃತಿ, ೨-೧೯೩

ದೇವತೆಗಳು ಎಂದರೆ ಸತ್ಯವೆಂದೂ ಮನುಷ್ಯರೆಂದರೆ ಸುಳ್ಳೆಂದೂ ಸಂಗ್ರಹವಾಗಿ ಹೇಳುತ್ತಾರೆ. ಯಾರ ಬುದ್ಧಿಯು ಸತ್ಯವನ್ನೇ ಅವಲಂಬಿಸಿದೆಯೋ, ಅವನು ಈ ಲೋಕದಲ್ಲಿಯೇ ದೇವರೆನಿಸುತ್ತಾನೆ.

ಸಂತಾಪಂ ತನುತೇ ಭಿನತ್ತಿ ವಿನಯಂ ಸೌಹಾರ್ದಮುತ್ಸಾದಯ-
ತ್ಯುದ್ವೇಗಂ ಜನಯತ್ಯವದ್ಯವಚನಂ ಸೂತೇ ವಿಧತ್ತೇ ಕಲಿಂ ।
ಕೀರ್ತಿಂ ಕೃಂತತಿ ದುರ್ಮತಿಂ ವಿತರತಿ ವ್ಯಾಹಂತಿ ಪುಣ್ಯೋದಯಂ
ದತ್ತೇ ಯಃ ಕುಗತಿಂ ಸ ಹಾತುಮುಚಿತೋ ರೋಷಃ ಸ ದೋಷಃ ಸತಾಮ್॥
ಸೋಮಪ್ರಭಾಚಾರ್ಯನ ಸೂಕ್ತಿಮುಕ್ತಾವಲಿ-೪೭

ಕೋಪವು ದೋಷಯುಕ್ತವಾದದ್ದು. ಅದನ್ನು ಸಜ್ಜನರು ತ್ಯಜಿಸಬೇಕು. ರೋಷಃ ಮನಸ್ಸಿಗೆ ತಾಪವನ್ನುಂಟುಮಾಡುತ್ತದೆ. ವಿನಯವನ್ನು ದೂರೀಕರಿಸುತ್ತದೆ. ಸ್ನೇಹವನ್ನು ಕೆಡಿಸುತ್ತದೆ. ಉದ್ವೇಗವನ್ನುಂಟುಮಾಡುತ್ತದೆ. ಕೆಟ್ಟ ಮಾತನ್ನು ಹೇಳಿಸುತ್ತದೆ. ಜಗಳವನ್ನು ಹುಟ್ಟಿಸುತ್ತದೆ. ಕೀರ್ತಿಯನ್ನು ಕತ್ತರಿಸುತ್ತದೆ. ದುರ್ಬುದ್ಧಿಯನ್ನು ಕೊಡುತ್ತದೆ. ಪುಣ್ಯವನ್ನು ತೂರಿ ದುರ್ಗತಿಯನ್ನು ತರುತ್ತದೆ.

ಸಂಪದಾ ಸುಸ್ಥಿರಂಮನ್ಯೋ ಭವತಿ ಸ್ವಲ್ಪಯಾಽಪಿ ಯಃ ।
ಕೃತಕೃತ್ಯೋ ವಿಧಿರ್ಮನ್ಯೇ ನ ವರ್ಧಯತಿ ತಸ್ಯ ತಾಂ ॥ ೩೧೧
-ಶಿಶುಪಾಲವಧ, ೨-೩೨

ಯಾರು ಅಲ್ಪಸಂಪತ್ತಿನಿಂದ 'ಇಷ್ಟೇ ಸಾಕು' ಎಂದು ತೃಪ್ತಿಪಡುತ್ತಾನೆಯೋ ಅವನ ಸಂಪತ್ತನ್ನು ವಿಧಿಯೂ ಹೆಚ್ಚಿಸಲು ಸಹಾಯಮಾಡುವುದಿಲ್ಲ. ವಿಧಿಯು 'ನನ್ನ ಕೆಲಸ ಮುಗಿಯಿತು, ಇವನು ತೃಪ್ತನಾಗಿದ್ದಾನೆ' ಎಂದು ಸುಮ್ಮನಾಗುತ್ತಾನೆ.

**ಸಭಾ ವಾ ನ ಪ್ರವೇಷ್ಟವ್ಯಾಂ ವಕ್ತವ್ಯಂ ವಾ ಸಮಂಜಸಂ ।**
**ಅಬ್ರುವನ್ ವಿಬ್ರುವನ್ ವಾಽಪಿ ನರೋ ಭವತಿ ಕಿಲ್ಬಿಷೀ ॥ ೩೧೨**

-ಮನುಸ್ಮೃತಿ, ೮-೧೩

ಸಭೆಯನ್ನು ಪ್ರವೇಶಿಸಬಾರದು. ಅಥವಾ ಉಚಿತವಾದ ಮಾತನ್ನು ಹೇಳಬೇಕು. ತಿಳಿದು ಹೇಳದಿದ್ದರೂ, ಅನ್ಯಾಯವಾಗಿ ಹೇಳಿದರೂ ಮನುಷ್ಯನು ಪಾಪಿಯಾಗುತ್ತಾನೆ.

**ಸಂಭೂಯ ವಣಿಜಾಂ ಪಣ್ಯಂ ಅನರ್ಘೇಣೋಪರುಂಧತಾಂ ।**
**ವಿಕ್ರೀಣತಾಂ ವಾ ವಿಹಿತೋ ದಂಡ ಉತ್ತಮ ಸಾಹಸಃ ॥ ೩೧೩**

-ಯಾಜ್ಞವಲ್ಕ್ಯ, ೨-೨೫೦

ವರ್ತಕರು ಒಗ್ಗಟ್ಟಾಗಿ ಬೆಲೆ ಕಡಿಮೆಯಿದ್ದಾಗ ಮಾರದೆ ಸರಕುಗಳನ್ನು ಕೂಡಿಟ್ಟು ಅನ್ಯಾಯವಾಗಿ ಹೆಚ್ಚು ಬೆಲೆಗೆ ಮಾರಿದರೆ ಅವರು ದಂಡಾರ್ಹರು.

**ಸ್ವಭಾವೋ ನೋಪದೇಶೇನ ಶಕ್ಯತೇ ಕರ್ತುಮನ್ಯಥಾ ।**
**ಸುತಪ್ತಮಪಿ ಪಾನೀಯಂ ಪುನರ್ಗಚ್ಛತಿ ಶೀತತಾಮ್ ॥ ೩೧೪**

-ಪಂಚತಂತ್ರ, ಮಿತ್ರಭೇದ-೨೮೦

ಉಪದೇಶಮಾಡುವುದರಿಂದ ಒಬ್ಬನ ಸ್ವಭಾವವನ್ನು ಬದಲಾಯಿಸುವುದು ಸಾಧ್ಯವಿಲ್ಲ. ನೀರನ್ನು ಚೆನ್ನಾಗಿ ಕುದಿಸಿದರೂ ಮತ್ತೆ ಅದು ತಣ್ಣಗೇ ಆಗುತ್ತದೆ.

**ಸರ್ವಥಾ ವ್ಯವಹರ್ತವ್ಯಂ ಕುತೋಹ್ಯವಚನೀಯತಾ ।**
**ಯಥಾ ಸ್ತ್ರೀಣಾಂ ತಥಾ ವಾಚಾಂ ಸಾಧುತ್ವೇ ದುರ್ಜನೋ ಜನಃ ॥ ೩೧೫**

ಉತ್ತರರಾಮಚರಿತ, ೧-೫

ಮಾತನಾಡಲೇಬೇಕಾಗುತ್ತದೆ. ಬೇರೆಯವರಿಂದ ದೂಷಣೆಯನ್ನು ತಪ್ಪಿಸಿಕೊಳ್ಳುವುದು ಹೇಗೆ? ಮಾತಿನ ಮತ್ತು ಸ್ತ್ರೀಯರ ಶುದ್ಧತೆಯ ವಿಚಾರದಲ್ಲಿ ಜನರು ದುಷ್ಟರಹಾಗೆ ವರ್ತಿಸುತ್ತಾರೆ.

**ಸರ್ವಸ್ಯ ಹಿ ಪರೀಕ್ಷ್ಯಂತೇ ಸ್ವಭಾವಾ ನೇತರೇ ಗುಣಾಃ ।**
**ಅತೀತ್ಯ ಹಿ ಗುಣಾನ್ಸರ್ವಾನ್ ಸ್ವಭಾವೋ ಮೂರ್ಧ್ನಿ ವರ್ತತೇ ॥೩೧೬**

-ಹಿತೋಪದೇಶ, ಮಿತ್ರಲಾಭ-೧೫

ಎಡವಿದವನು ಒಬ್ಬೊಬ್ಬನೂ ವಧ್ಯನೆಂಬುದೇ ನಿಶ್ಚಯವಾಗಿಬಿಟ್ಟರೆ ಲೋಕದಲ್ಲಿ ಇಬ್ಬರು ಅಥವಾ ಮೂರು ಜನ ಉಳಿದಾರು! ಮನುಷ್ಯರೆಲ್ಲಾ ಎಷ್ಟಾದರೂ ಹೆಚ್ಚು ದೋಷಗಳುಳ್ಳವರೇ!

**ಸಂಚಿತಸ್ಯಾಪಿ ಮಹತಾ ವತ್ಸ ಕ್ಲೇಶೇನ ಮಾನವೈಃ ।**
**ಯಶಸಸ್ತಪಸಶ್ಚೈವ ಕ್ರೋಧೋ ನಾಶಕರಃ ಪರಃ ॥ ೩೦೮**

-ವಿಷ್ಣುಪುರಾಣ, ೧-೧-೧೮

ಬಹಳ ಕಷ್ಟಪಟ್ಟು ಮಾನವನು ಸಂಪಾದಿಸಿದ ಕೀರ್ತಿ, ತಪಸ್ಸು ಎಲ್ಲವನ್ನೂ ಕೋಪವು ನಾಶಗೊಳಿಸುತ್ತದೆ.

**ಸತ್ಯಂ ದೇವಾಃ ಸಮಾಸೇನ ಮನುಷ್ಯಾಸ್ತ್ವನೃತಂ ಸ್ಮೃತಾಃ ।**
**ಇಹೈವ ತಸ್ಯ ದೇವತ್ವಂ ಯಸ್ಯ ಸತ್ಯೇ ಸ್ಥಿತಾ ಮತಿಃ ॥ ೩೦೯**

-ನಾರದಸ್ಮೃತಿ, ೨-೧೯೩

ದೇವತೆಗಳು ಎಂದರೆ ಸತ್ಯವೆಂದೂ ಮನುಷ್ಯರೆಂದರೆ ಸುಳ್ಳೆಂದೂ ಸಂಗ್ರಹವಾಗಿ ಹೇಳುತ್ತಾರೆ. ಯಾರ ಬುದ್ಧಿಯು ಸತ್ಯವನ್ನೇ ಅವಲಂಬಿಸಿದೆಯೋ, ಅವನು ಈ ಲೋಕದಲ್ಲಿಯೇ ದೇವರೆನಿಸುತ್ತಾನೆ.

**ಸಂತಾಪಂ ತನುತೇ ಭಿನತ್ತಿ ವಿನಯಂ ಸೌಹಾರ್ದಮುತ್ಸಾದಯ-**
**ತ್ಯುದ್ವೇಗಂ ಜನಯತ್ಯವದ್ಯವಚನಂ ಸೂತೇ ವಿಧತ್ತೇ ಕಲಿಂ ।**
**ಕೀರ್ತಿಂ ಕೃಂತತಿ ದುರ್ಮತಿಂ ವಿತರತಿ ವ್ಯಾಹಂತಿ ಪುಣ್ಯೋದಯಂ**
**ದತ್ತೇ ಯಃ ಕುಗತಿಂ ಸ ಹಾತುಮುಚಿತೋ ರೋಷಃ ಸ ದೋಷಃ ಸತಾಮ್॥**

ಸೋಮಪ್ರಭಾಚಾರ್ಯನ ಸೂಕ್ತಿಮುಕ್ತಾವಲಿ-೪೭

ಕೋಪವು ದೋಷಯುಕ್ತವಾದದ್ದು. ಅದನ್ನು ಸಜ್ಜನರು ತ್ಯಜಿಸಬೇಕು. ರೋಷಃ ಮನಸ್ಸಿಗೆ ತಾಪವನ್ನುಂಟುಮಾಡುತ್ತದೆ. ವಿನಯವನ್ನು ದೂರೀಕರಿಸುತ್ತದೆ. ಸ್ನೇಹವನ್ನು ಕೆಡಿಸುತ್ತದೆ. ಉದ್ವೇಗವನ್ನುಂಟುಮಾಡುತ್ತದೆ. ಕೆಟ್ಟ ಮಾತನ್ನು ಹೇಳಿಸುತ್ತದೆ. ಜಗಳವನ್ನು ಹುಟ್ಟಿಸುತ್ತದೆ. ಕೀರ್ತಿಯನ್ನು ಕತ್ತರಿಸುತ್ತದೆ. ದುರ್ಬುದ್ಧಿಯನ್ನು ಕೊಡುತ್ತದೆ. ಪುಣ್ಯವನ್ನು ತೂರಿ ದುರ್ಗತಿಯನ್ನು ತರುತ್ತದೆ.

**ಸಂಪದಾ ಸುಸ್ಥಿರಂಮನ್ಯೋ ಭವತಿ ಸ್ವಲ್ಪಯಾಽಪಿ ಯಃ ।**
**ಕೃತಕೃತ್ಯೋ ವಿಧಿರ್ಮನ್ಯೇ ನ ವರ್ಧಯತಿ ತಸ್ಯ ತಾಂ ॥ ೩೧೧**

-ಶಿಶುಪಾಲವಧ, ೨-೩೨

ಯಾರು ಅಲ್ಪಸಂಪತ್ತಿನಿಂದ 'ಇಷ್ಟೇ ಸಾಕು' ಎಂದು ತೃಪ್ತಿಪಡುತ್ತಾನೆಯೋ ಅವನ ಸಂಪತ್ತನ್ನು ವಿಧಿಯೂ ಹೆಚ್ಚಿಸಲು ಸಹಾಯಮಾಡುವುದಿಲ್ಲ. ವಿಧಿಯು 'ನನ್ನ ಕೆಲಸ ಮುಗಿಯಿತು, ಇವನು ತೃಪ್ತನಾಗಿದ್ದಾನೆ' ಎಂದು ಸುಮ್ಮನಾಗುತ್ತಾನೆ.

**ಸಭಾ ವಾ ನ ಪ್ರವೇಷ್ಟವ್ಯಾಂ ವಕ್ತವ್ಯಂ ವಾ ಸಮಂಜಸಂ ।**
**ಅಬ್ರುವನ್ ವಿಬ್ರುವನ್ ವಾಽಪಿ ನರೋ ಭವತಿ ಕಿಲ್ಬಿಷೀ ॥ ೩೧೨**

-ಮನುಸ್ಮೃತಿ, ೮-೧೩

ಸಭೆಯನ್ನು ಪ್ರವೇಶಿಸಬಾರದು. ಅಥವಾ ಉಚಿತವಾದ ಮಾತನ್ನು ಹೇಳಬೇಕು. ತಿಳಿದು ಹೇಳದಿದ್ದರೂ, ಅನ್ಯಾಯವಾಗಿ ಹೇಳಿದರೂ ಮನುಷ್ಯನು ಪಾಪಿಯಾಗುತ್ತಾನೆ.

**ಸಂಭೂಯ ವಣಿಜಾಂ ಪಣ್ಯಂ ಅನರ್ಘೇಣೋಪರುಂಧತಾಂ ।**
**ವಿಕ್ರೀಣತಾಂ ವಾ ವಿಹಿತೋ ದಂಡ ಉತ್ತಮ ಸಾಹಸಃ ॥ ೩೧೩**

-ಯಾಜ್ಞವಲ್ಕ್ಯ, ೨-೨೫೦

ವರ್ತಕರು ಒಗ್ಗಟ್ಟಾಗಿ ಬೆಲೆ ಕಡಿಮೆಯಿದ್ದಾಗ ಮಾರದೆ ಸರಕುಗಳನ್ನು ಕೂಡಿಟ್ಟು ಅನ್ಯಾಯವಾಗಿ ಹೆಚ್ಚು ಬೆಲೆಗೆ ಮಾರಿದರೆ ಅವರು ದಂಡಾರ್ಹರು.

**ಸ್ವಭಾವೋ ನೋಪದೇಶೇನ ಶಕ್ಯತೇ ಕರ್ತುಮನ್ಯಥಾ ।**
**ಸುತಪ್ತಮಪಿ ಪಾನೀಯಂ ಪುನರ್ಗಚ್ಛತಿ ಶೀತತಾಮ್ ॥ ೩೧೪**

-ಪಂಚತಂತ್ರ, ಮಿತ್ರಭೇದ-೨೮೦

ಉಪದೇಶಮಾಡುವುದರಿಂದ ಒಬ್ಬನ ಸ್ವಭಾವವನ್ನು ಬದಲಾಯಿಸುವುದು ಸಾಧ್ಯವಿಲ್ಲ. ನೀರನ್ನು ಚೆನ್ನಾಗಿ ಕುದಿಸಿದರೂ ಮತ್ತೆ ಅದು ತಣ್ಣಗೇ ಆಗುತ್ತದೆ.

**ಸರ್ವಥಾ ವ್ಯವಹರ್ತವ್ಯಂ ಕುತೋಹ್ಯವಚನೀಯತಾ ।**
**ಯಥಾ ಸ್ತ್ರೀಣಾಂ ತಥಾ ವಾಚಾಂ ಸಾಧುತ್ವೇ ದುರ್ಜನೋ ಜನಃ ॥ ೩೧೫**

ಉತ್ತರರಾಮಚರಿತ, ೧-೫

ಮಾತನಾಡಲೇಬೇಕಾಗುತ್ತದೆ. ಬೇರೆಯವರಿಂದ ದೂಷಣೆಯನ್ನು ತಪ್ಪಿಸಿಕೊಳ್ಳುವುದು ಹೇಗೆ? ಮಾತಿನ ಮತ್ತು ಸ್ತ್ರೀಯರ ಶುದ್ಧತೆಯ ವಿಚಾರದಲ್ಲಿ ಜನರು ದುಷ್ಟರಹಾಗೆ ವರ್ತಿಸುತ್ತಾರೆ.

**ಸರ್ವಸ್ಯ ಹಿ ಪರೀಕ್ಷ್ಯಂತೇ ಸ್ವಭಾವಾ ನೇತರೇ ಗುಣಾಃ ।**
**ಅತೀತ್ಯ ಹಿ ಗುಣಾನ್ಸರ್ವಾನ್ ಸ್ವಭಾವೋ ಮೂರ್ಧ್ನಿ ವರ್ತತೇ ॥೩೧೬**

-ಹಿತೋಪದೇಶ, ಮಿತ್ರಲಾಭ-೧೫

ಎಡವಿದವನು ಒಬ್ಬೊಬ್ಬನೂ ವಧ್ಯನೆಂಬುದೇ ನಿಶ್ಚಯವಾಗಿಬಿಟ್ಟರೆ ಲೋಕದಲ್ಲಿ ಇಬ್ಬರು ಅಥವಾ ಮೂರು ಜನ ಉಳಿದಾರು! ಮನುಷ್ಯರೆಲ್ಲಾ ಎಷ್ಟಾದರೂ ಹೆಚ್ಚು ದೋಷ ಗಳುಳ್ಳವರೇ!

**ಸಂಚಿತಸ್ಯಾಪಿ ಮಹತಾ ವತ್ಸ ಕ್ಲೇಶೇನ ಮಾನವೈಃ ।**
**ಯಶಸಸ್ತಪಸಶ್ಚೈವ ಕ್ರೋಧೋ ನಾಶಕರಃ ಪರಃ ॥** ೩೦೮

-ವಿಷ್ಣುಪುರಾಣ, ೧-೧-೧೮

ಬಹಳ ಕಷ್ಟಪಟ್ಟು ಮಾನವನು ಸಂಪಾದಿಸಿದ ಕೀರ್ತಿ, ತಪಸ್ಸು ಎಲ್ಲವನ್ನೂ ಕೋಪವು ನಾಶಗೊಳಿಸುತ್ತದೆ.

**ಸತ್ಯಂ ದೇವಾಃ ಸಮಾಸೇನ ಮನುಷ್ಯಾಸ್ತ್ವನೃತಂ ಸ್ಮೃತಾಃ ।**
**ಇಹೈವ ತಸ್ಯ ದೇವತ್ವಂ ಯಸ್ಯ ಸತ್ಯೇ ಸ್ಥಿತಾ ಮತಿಃ ॥** ೩೦೯

-ನಾರದಸ್ಮೃತಿ, ೨-೧೯೩

ದೇವತೆಗಳು ಎಂದರೆ ಸತ್ಯವೆಂದೂ ಮನುಷ್ಯರೆಂದರೆ ಸುಳ್ಳೆಂದೂ ಸಂಗ್ರಹವಾಗಿ ಹೇಳುತ್ತಾರೆ. ಯಾರ ಬುದ್ಧಿಯು ಸತ್ಯವನ್ನೇ ಅವಲಂಬಿಸಿದೆಯೋ, ಅವನು ಈ ಲೋಕದಲ್ಲಿಯೇ ದೇವರೆನಿಸುತ್ತಾನೆ.

**ಸಂತಾಪಂ ತನುತೇ ಭಿನತ್ತಿ ವಿನಯಂ ಸೌಹಾರ್ದಮುತ್ಸಾದಯ-**
**ತ್ಯುದ್ವೇಗಂ ಜನಯತ್ಯವದ್ಯವಚನಂ ಸೂತೇ ವಿಧತ್ತೇ ಕಲಿಂ ।**
**ಕೀರ್ತಿಂ ಕೃಂತತಿ ದುರ್ಮತಿಂ ವಿತರತಿ ವ್ಯಾಹಂತಿ ಪುಣ್ಯೋದಯಂ**
**ದತ್ತೇ ಯಃ ಕುಗತಿಂ ಸ ಹಾತುಮುಚಿತೋ ರೋಷಃ ಸ ದೋಷಃ ಸತಾಮ್॥**

ಸೋಮಪ್ರಭಾಚಾರ್ಯನ ಸೂಕ್ತಿಮುಕ್ತಾವಲಿ-೪೭

ಕೋಪವು ದೋಷಯುಕ್ತವಾದದ್ದು. ಅದನ್ನು ಸಜ್ಜನರು ತ್ಯಜಿಸಬೇಕು. ರೋಷಃ ಮನಸ್ಸಿಗೆ ತಾಪವನ್ನುಂಟುಮಾಡುತ್ತದೆ. ವಿನಯವನ್ನು ದೂರೀಕರಿಸುತ್ತದೆ. ಸ್ನೇಹವನ್ನು ಕೆಡಿಸುತ್ತದೆ. ಉದ್ವೇಗವನ್ನುಂಟುಮಾಡುತ್ತದೆ. ಕೆಟ್ಟ ಮಾತನ್ನು ಹೇಳಿಸುತ್ತದೆ. ಜಗಳವನ್ನು ಹುಟ್ಟಿಸುತ್ತದೆ. ಕೀರ್ತಿಯನ್ನು ಕತ್ತರಿಸುತ್ತದೆ. ದುರ್ಬುದ್ಧಿಯನ್ನು ಕೊಡುತ್ತದೆ. ಪುಣ್ಯವನ್ನು ತೂರಿ ದುರ್ಗತಿಯನ್ನು ತರುತ್ತದೆ.

**ಸಂಪದಾ ಸುಸ್ಥಿರಂಮನ್ಯೋ ಭವತಿ ಸ್ವಲ್ಪಯಾಽಪಿ ಯಃ ।**
**ಕೃತಕೃತ್ಯೋ ವಿಧಿರ್ಮನ್ಯೇ ನ ವರ್ಧಯತಿ ತಸ್ಯ ತಾಂ ॥** ೩೧೧

-ಶಿಶುಪಾಲವಧ, ೨-೩೨

ಯಾರು ಅಲ್ಪಸಂಪತ್ತಿನಿಂದ 'ಇಷ್ಟೇ ಸಾಕು' ಎಂದು ತೃಪ್ತಿಪಡುತ್ತಾನೆಯೋ ಅವನ ಸಂಪತ್ತನ್ನು ವಿಧಿಯೂ ಹೆಚ್ಚಿಸಲು ಸಹಾಯಮಾಡುವುದಿಲ್ಲ. ವಿಧಿಯು 'ನನ್ನ ಕೆಲಸ ಮುಗಿಯಿತು, ಇವನು ತೃಪ್ತನಾಗಿದ್ದಾನೆ' ಎಂದು ಸುಮ್ಮನಾಗುತ್ತಾನೆ.

**ಸಭಾ ವಾ ನ ಪ್ರವೇಷ್ಟವ್ಯಾಂ ವಕ್ತವ್ಯಂ ವಾ ಸಮಂಜಸಂ ।**
**ಅಬ್ರುವನ್ ವಿಬ್ರುವನ್ ವಾಽಪಿ ನರೋ ಭವತಿ ಕಿಲ್ಬಿಷೀ ॥ ೩೧೨**

-ಮನುಸ್ಮೃತಿ, ೮-೧೩

ಸಭೆಯನ್ನು ಪ್ರವೇಶಿಸಬಾರದು. ಅಥವಾ ಉಚಿತವಾದ ಮಾತನ್ನು ಹೇಳಬೇಕು. ತಿಳಿದು ಹೇಳದಿದ್ದರೂ, ಅನ್ಯಾಯವಾಗಿ ಹೇಳಿದರೂ ಮನುಷ್ಯನು ಪಾಪಿಯಾಗುತ್ತಾನೆ.

**ಸಂಭೂಯ ವಣಿಜಾಂ ಪಣ್ಯಂ ಅನರ್ಘೇಣೋಪರುಂಧತಾಂ ।**
**ವಿಕ್ರೀಣತಾಂ ವಾ ವಿಹಿತೋ ದಂಡ ಉತ್ತಮ ಸಾಹಸಃ ॥ ೩೧೩**

-ಯಾಜ್ಞವಲ್ಕ್ಯ, ೨-೨೫೦

ವರ್ತಕರು ಒಗ್ಗಟ್ಟಾಗಿ ಬೆಲೆ ಕಡಿಮೆಯಿದ್ದಾಗ ಮಾರದೆ ಸರಕುಗಳನ್ನು ಕೂಡಿಟ್ಟು ಅನ್ಯಾಯವಾಗಿ ಹೆಚ್ಚು ಬೆಲೆಗೆ ಮಾರಿದರೆ ಅವರು ದಂಡಾರ್ಹರು.

**ಸ್ವಭಾವೋ ನೋಪದೇಶೇನ ಶಕ್ಯತೇ ಕರ್ತುಮನ್ಯಥಾ ।**
**ಸುತಪ್ತಮಪಿ ಪಾನೀಯಂ ಪುನರ್ಗಚ್ಛತಿ ಶೀತತಾಮ್ ॥ ೩೧೪**

-ಪಂಚತಂತ್ರ, ಮಿತ್ರಭೇದ-೨೮೦

ಉಪದೇಶಮಾಡುವುದರಿಂದ ಒಬ್ಬನ ಸ್ವಭಾವವನ್ನು ಬದಲಾಯಿಸುವುದು ಸಾಧ್ಯವಿಲ್ಲ. ನೀರನ್ನು ಚೆನ್ನಾಗಿ ಕುದಿಸಿದರೂ ಮತ್ತೆ ಅದು ತಣ್ಣಗೇ ಆಗುತ್ತದೆ.

**ಸರ್ವಥಾ ವ್ಯವಹರ್ತವ್ಯಂ ಕುತೋಹ್ಯವಚನೀಯತಾ ।**
**ಯಥಾ ಸ್ತ್ರೀಣಾಂ ತಥಾ ವಾಚಾಂ ಸಾಧುತ್ವೇ ದುರ್ಜನೋ ಜನಃ ॥ ೩೧೫**

ಉತ್ತರರಾಮಚರಿತ, ೧-೫

ಮಾತನಾಡಲೇಬೇಕಾಗುತ್ತದೆ. ಬೇರೆಯವರಿಂದ ದೂಷಣೆಯನ್ನು ತಪ್ಪಿಸಿಕೊಳ್ಳುವುದು ಹೇಗೆ? ಮಾತಿನ ಮತ್ತು ಸ್ತ್ರೀಯರ ಶುದ್ಧತೆಯ ವಿಚಾರದಲ್ಲಿ ಜನರು ದುಷ್ಟರಾಗಿ ವರ್ತಿಸುತ್ತಾರೆ.

**ಸರ್ವಸ್ಯ ಹಿ ಪರೀಕ್ಷ್ಯಂತೇ ಸ್ವಭಾವಾ ನೇತರೇ ಗುಣಾಃ ।**
**ಅತೀತ್ಯ ಹಿ ಗುಣಾನ್ಸರ್ವಾನ್ ಸ್ವಭಾವೋ ಮೂರ್ಧ್ನಿ ವರ್ತತೇ ॥೩೧೬**

-ಹಿತೋಪದೇಶ, ಮಿತ್ರಲಾಭ-೧೫

(ಎಲ್ಲ) ಮನುಷ್ಯರ ಸ್ವಭಾವವನ್ನು ಪರೀಕ್ಷಿಸುತ್ತಾರೆ ; ಇತರ ಗುಣಗಳನ್ನಲ್ಲ. ಏಕೆಂದರೆ ಎಲ್ಲ ಗುಣಗಳನ್ನೂ ಮೀರಿಸಿ ಸ್ವಭಾವವು ಎಲ್ಲಕ್ಕೂ ಮೇಲಿರುತ್ತದೆ.

**ಸರ್ವಸ್ಯೈವ ಹಿ ಶಾಸ್ತ್ರಸ್ಯ ಕರ್ಮಣೋ ವಾಽಪಿ ಕಸ್ಯಚಿತ್ ।**
**ಯಾವತ್ ಪ್ರಯೋಜನಂ ನೋಕ್ತಂ ತಾವತ್ ತತ್ ಕೇನ ಗೃಹ್ಯತೇ ॥೩೧೭**

-ಶ್ಲೋಕವಾರ್ತಿಕ, ೧-೧-೧೨

ಎಲ್ಲಾ ಶಾಸ್ತ್ರಗಳಿಗೂ, ಎಲ್ಲಾ ಕರ್ಮಗಳಿಗೂ ಪ್ರಯೋಜನವನ್ನು ಹೇಳಬೇಕು. ಇಲ್ಲವಾದರೆ ಅವುಗಳನ್ನು ಯಾರೂ ಗ್ರಹಿಸುವುದಿಲ್ಲ.

**ಸರ್ವೈರ್ಗುಣೈರ್ವಿಹೀನೋಽಪಿ ವೀರ್ಯವಾನ್ ಹಿ ತರೇದ್ರಿಪೂನ್ ।**
**ಸರ್ವೈರಪಿ ಗುಣೈರ್ಯುಕ್ತೋ ನಿರ್ವೀರ್ಯಃ ಕಿಂ ಕರಿಷ್ಯತಿ ॥ ೩೧೮**

-ವಲ್ಲಭದೇವ, ಸುಭಾಷಿತಸುಧಾನಿಧಿ

ಯಾವ ಗುಣಗಳು ಇಲ್ಲದೇಹೋದರೂ ಪರಾಕ್ರಮಿಯು ಶತ್ರುಗಳನ್ನು ಜಯಿಸುವನು. ಎಲ್ಲ ಗುಣಗಳೂ ಇದ್ದು ನಿರ್ವೀರ್ಯನಾದವನು ಏನನ್ನುತ್ತಾನೆ ಮಾಡಬಲ್ಲನು?

**ಸಂಸಾರಜಸುಖಾಸಕ್ತಂ ಬ್ರಹ್ಮಜ್ಞೋಽಸ್ಮೀತಿ ವಾದಿನಂ ।**
**ಕರ್ಮಬ್ರಹ್ಮೋಭಯಭ್ರಷ್ಟಂ ಸಂತ್ಯಜೇದಂತ್ಯಜಂ ಯಥಾ ॥ ೩೧೯**

-ಗರುಡಪುರಾಣ, ೧೬-೬೪

ನಾನು ಬ್ರಹ್ಮಜ್ಞಾನಿಯೆಂದು ಹೇಳಿಕೊಳ್ಳುತ್ತ ಸಂಸಾರಸುಖದಲ್ಲಿ ಆಸಕ್ತನಾದವನು ಕರ್ಮ ಮತ್ತು ಬ್ರಹ್ಮ ಇವೆರಡನ್ನೂ ಅರಿಯದ ಭ್ರಷ್ಟ. ಅವನನ್ನು ನೀಚನೆಂದು ವರ್ಜಿಸಬೇಕು.

**ಸಸ್ಯಲಂಪಟಬಲೀವರ್ದೋ ನ ಶಕ್ಯೋ ವಾರಯಿತುಂ**
**ಅನ್ಯಪ್ರಸಕ್ತಕಲತ್ರಂ ನ ಶಕ್ಯಂ ವಾರಯಿತುಂ ।**
**ದ್ಯೂತಪ್ರಸಕ್ತಮನುಷ್ಯೋ ನ ಶಕ್ಯೋ ವಾರಯಿತುಂ**
**ಯೋಽಪಿ ಸ್ವಾಭಾವಿಕದೋಷೋ ನ ಶಕ್ಯೋ ವಾರಯಿತುಮ್ ॥೩೨೦**

-ಮೃಚ್ಛಕಟಿಕ, ೩-೨

ಪೈರು ಮೇಯುವ ಆಸೆಯುಳ್ಳ ಎತ್ತನ್ನು ತಡೆಯುವುದು ಸಾಧ್ಯವಿಲ್ಲ. ಬೇರೆ ಪುರುಷನಲ್ಲಿ ಆಸಕ್ತಳಾದ ಹೆಂಡತಿಯನ್ನು ತಡೆಯಲಾಗುವುದಿಲ್ಲ. ಅದೇ ರೀತಿ ಜೂಜಿನಲ್ಲಿ ಆಸಕ್ತನಾದವನನ್ನು ತಡೆಯುವುದಿಲ್ಲ. ಯಾರಲ್ಲಿ ಯಾವ ದೋಷವು ಸ್ವಾಭಾವಿಕವಾಗಿದೆಯೋ ಅದನ್ನು ತಡೆಯಲಾಗುವುದಿಲ್ಲ.

ಸಹಜಾಂಧದೃಶಃ ಸ್ವದುರ್ನಯೇ
ಪರದೋಷೇಕ್ಷಣದಿವ್ಯಚಕ್ಷುಷಃ ।
ಸ್ವಗುಣೋಚ್ಚಗಿರೋ ಮುನಿವ್ರತಾಃ
ಪರವರ್ಣಗ್ರಹಣೇಷ್ವಸಾಧವಃ ॥ ೩೨೧

-ಶಿಶುಪಾಲವಧ, ೧೬-೨೯

ತಮ್ಮ ಕೆಟ್ಟ ನಡತೆಯ ವಿಚಾರದಲ್ಲಿ ಸ್ವಾಭಾವಿಕವಾಗಿ ಕುರುಡರೇ ಆಗಿರುವ ಕೆಟ್ಟವರು ಬೇರೆಯವರ ತಪ್ಪುಗಳನ್ನು ಹುಡುಕುವುದರಲ್ಲಿ ದಿವ್ಯದೃಷ್ಟಿಯನ್ನು ಪಡೆದಿರುತ್ತಾರೆ. ತಮ್ಮ ಗುಣಗಳನ್ನು ಬಹಳ ಗಟ್ಟಿಯಾಗಿ ಹೇಳುವ ಇವರು ಬೇರೆಯವರ ಗುಣಗಳ ವಿಚಾರದಲ್ಲಿ ಮೌನವಾಗಿರುತ್ತಾರೆ.

ಸಹಸಾ ವಿದಧೀತ ನ ಕ್ರಿಯಾಂ
ಅವಿವೇಕಃ ಪರಮಾಪದಾಂ ಪದಂ ।
ವೃಣತೇ ಹಿ ವಿಮೃಶ್ಯಕಾರಿಣಂ
ಗುಣಲುಬ್ಧಾಃ ಸ್ವಯಮೇವ ಸಂಪದಃ ॥ ೩೨೨

ಕಿರಾತಾರ್ಜುನೀಯ, ೨-೩೦

ಹಿಂದು ಮುಂದು ಆಲೋಚಿಸದೆ ಕೆಲಸಕ್ಕೆ ಕೈಹಾಕಬಾರದು. ಸರಿಯಾಗಿ ತಿಳಿಯದಿರುವಿಕೆಯು ದೊಡ್ಡ ಅಪಾಯವನ್ನುಂಟುಮಾಡುತ್ತದೆ. ಒಳ್ಳೆಯ ಗುಣಗಳನ್ನಪೇಕ್ಷಿಸುವ ಸಂಪತ್ತು ವಿಮರ್ಶೆಯಿಂದ ಕೆಲಸಮಾಡುವವನನ್ನು ತಾನಾಗಿ ಸೇರುತ್ತದೆ.

ಸಂಹತಿಃ ಶ್ರೇಯಸೀ ಪುಂಸಾಂ ಸ್ವಕುಲೈರಲ್ಪಕೈರಪಿ ।
ತುಷೇಣಾಪಿ ಪರಿತ್ಯಕ್ತಾಃ ತಂಡುಲೋ ನ ಪ್ರರೋಹತಿ ॥ ೩೨೩

-ಹಿತೋಪದೇಶ, ಮಿತ್ರಲಾಭ-೨೬

ಅಲ್ಪರೇ ಆಗಿದ್ದಾಗ್ಗೂ ತನ್ನ ಕುಲದವರೊಡನೆ ಕೂಡಿಕೊಂಡಿರುವುದು ಮನುಷ್ಯನಿಗೆ ಶ್ರೇಯಸ್ಸಿಗೆ ಕಾರಣ. ಹೊಟ್ಟಿನಿಂದ ಬಿಡಲ್ಪಟ್ಟ ಭತ್ತ ಮೊಳೆಯುವುದಿಲ್ಲ.

ಸಾಮವಾದಾಃ ಸಕೋಪಸ್ಯ ತಸ್ಯ ಪ್ರತ್ಯುತ ದೀಪಕಾಃ ।
ಪ್ರತಪ್ತಸ್ಯೇವ ಸಹಸಾ ಸರ್ಪಿಷಸ್ತೋಯಬಿಂದವಃ ॥ ೩೨೪

-ಶಿಶುಪಾಲವಧ, ೨-೫೫

ಕೋಪದಿಂದ ಕೆರಳಿದ ಶತ್ರುವನ್ನು ಕುರಿತು ಒಳ್ಳೆಯ ಮಾತುಗಳನ್ನಾಡಿದರೆ ಅವು ಸಮಾಧಾನಕ್ಕೆ ಬದಲಾಗಿ ಅವನನ್ನು ಮತ್ತಷ್ಟು ಕೆರಳಿಸುತ್ತವೆ, ಕಾದಿರುವ ತುಪ್ಪದ ಮೇಲೆ ಬಿದ್ದ ನೀರಿನ ಹನಿಗಳು ಕಾವನ್ನು ಕೆರಳಿಸುವಂತೆ.

ಸಾಹಿತ್ಯಸಂಗೀತಕಲಾವಿಹೀನಃ
ಸಾಕ್ಷಾತ್ಪಶುಃ ಪುಚ್ಛವಿಷಾಣಹೀನಃ ।
ತೃಣಂ ನ ಖಾದನ್ನಪಿ ಜೀವಮಾನ-
ಸ್ತದ್ಭಾಗಧೇಯಂ ಪರಮಂ ಪಶೂನಾಮ್ ॥ ೩೨೫
-ನೀತಿಶತಕ-೧೦

ಸಾಹಿತ್ಯ, ಸಂಗೀತ, ಕಲೆಗಳನ್ನು ಕಲಿಯದವನು ಬಾಲ, ಕೊಂಬುಗಳಿಲ್ಲದ ಸಾಕ್ಷಾತ್ ಪಶು. ಹುಲ್ಲು ತಿನ್ನದೆಯೇ ಅವನು ಜೀವಿಸುವುದು ಪಶುಗಳ ಪರಮಭಾಗ್ಯ!

ಸ್ವಾಯತ್ತಮೇಕಾಂತಗುಣಂ ವಿಧಾತ್ರಾ
ವಿನಿರ್ಮಿತಂ ಛಾದನಮಜ್ಞತಾಯಾಃ ।
ವಿಶೇಷತಃ ಸರ್ವವಿದಾಂ ಸಮಾಜೇ
ವಿಭೂಷಣಂ ಮೌನಮಪಂಡಿತಾನಾಮ್ ॥ ೩೨೬
-ನೀತಿಶತಕ-೫

ಅಜ್ಞಾನವನ್ನು ಮುಚ್ಚಿಡಲು ಬ್ರಹ್ಮನು ಮೌನವೆಂಬ ಒಂದು ವಿಶೇಷ ಗುಣವನ್ನು ನಮಗೆ ಕೊಟ್ಟಿರುತ್ತಾನೆ. ಅದಕ್ಕೂ ಹೆಚ್ಚಾಗಿ ಎಲ್ಲವನ್ನೂ ತಿಳಿದವರ ಸಭೆಯಲ್ಲಿ ಪಂಡಿತರಲ್ಲದವರಿಗೆ ಮೌನವೇ ಭೂಷಣ.

ಸ್ತ್ರಿಯಾಂ ತು ರೋಚಮಾನಾಯಾಂ ಸರ್ವಂ ತದ್ರೋಚತೇ ಕುಲಂ ।
ತಸ್ಯಾಂ ತ್ವರೋಚಮಾನಾಯಾಂ ಸರ್ವಮೇವ ನ ರೋಚತೇ ॥ ೩೨೭
-ಮನುಸ್ಮೃತಿ, ೩-೬೨

ಹೆಣ್ಣು ಒಡವೆ ವಸ್ತ್ರಗಳಿಂದ ಸಂತುಷ್ಟಳಾಗಿದ್ದರೆ ಆ ಕುಟುಂಬವೇ ನಲಿಯುತ್ತ ಇರುತ್ತದೆ. ಹೆಣ್ಣು ಅಶಾಂತಳಾಗಿದ್ದರೆ ಆ ಕುಟುಂಬವು ಶೋಭಿಸುವುದಿಲ್ಲ.

ಸ್ತ್ರೀಣಾಮಶಿಕ್ಷಿತಪಟುತ್ವಮಮಾನುಷೀಷು
ಸಂದೃಶ್ಯತೇ ಕಿಮುತ ಯಾಃ ಪ್ರತಿಬೋಧವತ್ಯಃ ।
ಪ್ರಾಗಂತರಿಕ್ಷಗಮನಾತ್ಸ್ವಮಪತ್ಯಜಾತಂ
ಅನ್ಯೈರ್ದ್ವಿಜೈಃ ಪರಭೃತಾಃ ಖಲು ಪೋಷಯಂತಿ ॥ ೩೨೮
-ಅಭಿಜ್ಞಾನ ಶಾಕುಂತಲ, ೫-೨೨

ಹೆಂಗಸರು ಯಾವ ಬಗೆಯ ಶಿಕ್ಷಣವೂ ಇಲ್ಲದೆಯೇ ಜಾಣರೂ ಸಮರ್ಥರೂ ಆಗಿರುತ್ತಾರೆ. ತಿರ್ಯಗ್‌ಜಂತುಗಳಲ್ಲಿಯೂ ಇದನ್ನು ಕಾಣಬಹುದೆಂದಮೇಲೆ ಒಳ್ಳೆಯ ತಿಳಿವಳಿಕೆ ಇರುವವರ ವಿಚಾರದಲ್ಲಿ ಹೇಳಬೇಕಾದ್ದೇ ಇಲ್ಲ. ಕೋಗಿಲೆಗಳು ತಮ್ಮ ಮರಿಗಳನ್ನು, ರೆಕ್ಕೆ ಬೆಳೆದು ಆಕಾಶದಲ್ಲಿ ಹಾರುವವರೆಗೆ ಬೇರೆ ಹಕ್ಕಿಗಳ (ಕಾಗೆಗಳ) ಗೂಡಿನಲ್ಲಿಟ್ಟು ಜಾಣತನದಿಂದ ರಕ್ಷಿಸುತ್ತವೆ.

ಸುಕ್ಷೇತ್ರೇ ವಾಪಯೇದ್ಬೀಜಂ ಸುಪುತ್ರೇ ದಾಪಯೇದ್ಧನಂ ।
ಸುಕ್ಷೇತ್ರೇ ಚ ಸುಪುತ್ರೇ ಚ ಯತ್ಕ್ಷಿಪ್ತಂ ನೈವ ನಶ್ಯತಿ ॥ ೩೨೯
-ಪರಾಶರಸ್ಮೃತಿ, ೧-೫೬

ಫಲವತ್ತಾದ ನೆಲದಲ್ಲಿ ಬೀಜವನ್ನು ಬಿತ್ತಬೇಕು. ಗುಣಶಾಲಿಯಾದ ಮಗನಿಗೆ ಹಣವನ್ನು ಕೊಡಬೇಕು. ಒಳ್ಳೆಯ ನೆಲದಲ್ಲಿ ಒಳ್ಳೆಯ ಮಗನಲ್ಲಿ ಇಟ್ಟದ್ದು, ಕೊಟ್ಟದ್ದು ಎಂದಿಗೂ ಹಾಳಾಗುವುದಿಲ್ಲ.

ಸುಖಂ ನ ಕೃಷಿತೋಽನ್ಯತ್ರ ಯದಿ ಧರ್ಮೇಣ ವರ್ತತೇ ।
ಅವಸ್ತ್ರತ್ವಂ ನಿರನ್ನತ್ವಂ ಕೃಷಿತೋ ನೈವ ಜಾಯತೇ ॥ ೩೩೦
-ಬೃಹತ್‌ಪರಾಶರಸ್ಮೃತಿ, ೫-೧೮೬

ಬೇಸಾಯ ಬಿಟ್ಟರೆ ಸುಖವಿಲ್ಲ. ಧರ್ಮದಿಂದ ನಡೆದುಕೊಂಡಲ್ಲಿ ಬೇಸಾಯ ಮಾಡುವವನಿಗೆ ಎಂದೂ ಅನ್ನಬಟ್ಟೆಗೆ ಕೊರತೆ ಇರುವುದಿಲ್ಲ.

ಸುಮಹಾಂತ್ಯಪಿ ಶಾಸ್ತ್ರಾಣಿ ಧಾರಯಂತೋ ಬಹುಶ್ರುತಾಃ ।
ಛೇತ್ತಾರಃ ಸಂಶಯಾನಾಂ ಚ ಕ್ಲಿಶ್ಯಂತೇ ಲೋಭಮೋಹಿತಾಃ ॥ ೩೩೧
-ಹಿತೋಪದೇಶ, ಮಿತ್ರಲಾಭ-೭೦

ಕಠಿಣತಮವಾದ ಶಾಸ್ತ್ರಗಳ ಜ್ಞಾನವನ್ನು ಹೊಂದಿರುವವರೂ, ಬಹಳ ವಿಚಾರಗಳನ್ನು ಕೇಳಿ ತಿಳಿದುಕೊಂಡವರೂ, ಇತರರ ಸಂಶಯಗಳನ್ನು ಹೋಗಲಾಡಿಸುವವರೂ ಆದವರೂ ಸಹ ಲೋಭದ ಮೋಹಕ್ಕೊಳಗಾಗಿ ಕಷ್ಟಪಡುತ್ತಾರೆ.

ಸುಲಭಶರಣಮಾಶ್ರಯೋ ಭಯಾನಾಂ
ವನಗಹನಂ ತಿಮಿರಂ ಚ ತುಲ್ಯಮೇವ ।
ಉಭಯಮಪಿ ಹಿ ರಕ್ಷತೇಽಂಧಕಾರೋ
ಜನಯತಿ ಯಶ್ಚ ಭಯಾನಿ ಯಶ್ಚ ಭೀತಃ ॥ ೩೩೨
-ಚಾರುದತ್ತ, ೧-೨೦

ದಟ್ಟವಾದ ಕಾಡು, ಕತ್ತಲೂ ಎರಡೂ ಒಂದೇ. ಇವು ಭಯವನ್ನುಂಟುಮಾಡುತ್ತವೆ. ಅಲ್ಲದೆ ಭಯವುಂಟುಮಾಡುವ ಕಳ್ಳನನ್ನೂ, ಹೆದರಿ ಓಡುವ ಮನುಷ್ಯನನ್ನೂ ತಮ್ಮಲ್ಲಿ ಮುಚ್ಚಿಟ್ಟುಕೊಳ್ಳುತ್ತವೆ.

ಸುವರ್ಣಪುಷ್ಪಿತಾಂ ಪೃಥ್ವೀಂ ವಿಚಿನ್ವಂತಿ ನರಾಸ್ತ್ರಯಃ ।
ಶೂರಶ್ಚ ಕೃತವಿದ್ಯಶ್ಚ ಯಶ್ಚ ಜಾನಾತಿ ಸೇವಿತುಮ್ ॥ ೩೩೩
–ಪಂಚತಂತ್ರ, ಮಿತ್ರಭೇದ-೪೬

ಶೂರನೂ, ವಿದ್ಯೆಯನ್ನು ಸಂಪಾದಿಸಿದವನೂ, ಸೇವಿಸಲು ಬಲ್ಲವನೂ ಈ ಮೂವರು ಮನುಷ್ಯರು ಭೂಮಿಯಲ್ಲಿ ಚಿನ್ನವನ್ನು ಪಡೆಯುತ್ತಾರೆ.

**ಸ್ತುವಂತಿ ಶ್ರಾಂತಾಸ್ಯಾಃ ಕ್ಷಿತಿಪತಿಮಭೂತೈರಪಿ ಗುಣೈಃ**
**ಪ್ರವಾಚಃ ಕಾರ್ಪಣ್ಯಾದ್ಯದವಿತಥವಾಚೋऽಪಿ ಪುರುಷಾಃ ।**
**ಪ್ರಭಾವಸ್ತೃಷ್ಣಾಯಾಃ ಸ ಖಲು ಸಕಲಃ ಸ್ಯಾದಿತರಥಾ**
**ನಿರೀಹಾಣಾಮೀಶಸ್ತೃಣಮಿವ ತಿರಸ್ಕಾರವಿಷಯಃ ।** ೩೩೪

-ಮುದ್ರಾರಾಕ್ಷಸ, ೩-೧೬

ಚೆನ್ನಾಗಿ ಮಾತು ಬಲ್ಲವರು, ಸುಳ್ಳು ಹೇಳಬಾರದೆಂದಿರುವವರು ಅನೇಕ ವೇಳೆ ಆಶೆಯಿಂದ ಅರಸನ ಇಲ್ಲದ ಗುಣಗಳನ್ನು ವರ್ಣಿಸುತ್ತಾ ಹೊಗಳುವರು. ಇದು ಆಶೆಯ ಮಹಿಮೆ. ಇದು ಬೇರೆ ರೀತಿಯಾಗಿಯೂ ಆಗಬಹುದು. ಆಸೆಯಿಲ್ಲದವರಿಗೆ ಅರಸನು ಹುಲ್ಲುಕಡ್ಡಿಗೆ ಸಮಾನ.

**ಸ್ಪೃಶಂತಿ ಶರವತ್ತೀಕ್ಷ್ಣಾಃ ಸ್ತೋಕಮಂತರ್ವಿಶಂತಿ ಚ ।**
**ಬಹುಸ್ಪೃಶಾऽಪಿ ಸ್ಥೂಲೇನ ಸ್ಥೀಯತೇ ಬಹಿರಶ್ಮವತ್ ॥** ೩೩೫

-ಶಿಶುಪಾಲವಧ, ೨-೭೮

ಬುದ್ಧಿವಂತರು ಬಾಣಗಳಂತೆ ಸೂಕ್ಷ್ಮಬುದ್ಧಿಯಿಂದ ಸ್ವಲ್ಪ ಸ್ಪರ್ಶದಿಂದಲೇ ಒಳಹೊಗುತ್ತಾರೆ. ಅಂದರೆ ಒಂದೇ ಸಲಕ್ಕೆ ಎಲ್ಲವನ್ನೂ ತಿಳಿದು ವಿಮರ್ಶಿಸುತ್ತಾರೆ. ಆದರೆ ದಡ್ಡರು ಎಷ್ಟೇ ಸಲ ಸ್ಪರ್ಶಮಾಡಿದರೂ ಸ್ಥೂಲವಾದ ಕಲ್ಲಿನಂತೆ ಹೊರಗೇ ಇರುತ್ತಾರೆ. ಅರ್ಥವನ್ನೇ ಮಾಡಿಕೊಳ್ಳಲಾರರು.

**ಸೇವಾಧ್ವಜೋऽಂಜಲಿರ್ಮೂರ್ಧ್ನಿ ಹೃದಿ ದೈನ್ಯಂ ಮುಖೇ ಸ್ತುತಿಃ ।**
**ಆಶಾಗ್ರಹಗೃಹೀತಾನಾಂ ಕಿಯತೀಯಂ ವಿಡಂಬನಾ ॥** ೩೩೬

ಆಸೆಯೆಂಬ ಗ್ರಹ ಹಿಡಿದವರಿಗೆ ಸೇವೆಯೇ ಧ್ವಜ ; ಶಿರಸ್ಸಿನಲ್ಲಿ ಅಂಜಲಿ; ಹೃದಯದಲ್ಲಿ ದೈನ್ಯ ; ಮುಖದಲ್ಲಿ ಸ್ತುತಿ-ಏನು ಹಾಸ್ಯಾಸ್ಪದ!

**ಸೇವೇವ ಮಾನಮಖಿಲಂ ಜ್ಯೋತ್ಸ್ನೇವ ತಮೋ ಜರೇವ ಲಾವಣ್ಯಮ್ ।**
**ಹರಿಹರಕಥೇವ ದುರಿತಂ ಗುಣಶತಮಪ್ಯರ್ಥಿತಾ ಹರತಿ ॥** ೩೩೭

-ಹಿತೋಪದೇಶ, ಮಿತ್ರಲಾಭ-೧೦೫

ಮರ್ಯಾದೆಯನ್ನೆಲ್ಲಾ ಊಳಿಗವು ಕಳೆಯುವಂತೆ, ಬೆಳದಿಂಗಳು ಕತ್ತಲೆಯನ್ನು ಹೋಗಲಾಡಿಸುವಂತೆ, ಮುಪ್ಪು ಸೌಂದರ್ಯವನ್ನು ಕೆಡಿಸುವಂತೆ, ವಿಷ್ಣು, ಶಿವ ಇವರ ಕಥೆ ಪಾಪವನ್ನು ಹೇಗೆ ಕಳೆಯುವುದೋ ಹಾಗೆ, ಯಾಚನೆ ನೂರಾರು ಗುಣಗಳನ್ನು ಅಪಹರಿಸಿಬಿಡುತ್ತದೆ.

**ಸ್ತೋತಾರಃ ಕೇ ಭವಿಷ್ಯಂತಿ ಮೂರ್ಖಸ್ಯ ಜಗತೀತಲೇ ।**
**ನ ಸ್ತೌತಿ ಚೇತ್ ಸ್ವಯಂ ಚ ಸ್ವಂ ಕದಾ ತಸ್ಯಾಸ್ತು ನಿರ್ವೃತಿಃ ॥ ೩೩೮**

-ಕಲಿವಿಡಂಬನ-೭

ಮೂರ್ಖನು ತನ್ನನ್ನು ತಾನೇ ಹೊಗಳಿಕೊಳ್ಳದಿದ್ದರೆ ಅವನನ್ನು ಹೊಗಳತಕ್ಕವರು ಜಗತ್ತಿನಲ್ಲಿ ಯಾರು ಸಿಗುತ್ತಾರೆ! ಅವನಿಗೆ ಸುಖ ಯಾವಾಗ ದೊರಕೀತು!

**ಹಂತುಂ ದೇವಕತನಯಾಂ ವಸುದೇವೇನೋದ್ಯತಾಯುಧಃ ಕಂಸಃ ।**
**ಮಧುರೋಕ್ತಿಭಿರನುನೀತಃ ಸಾಮ್ನಾ ಮೂರ್ಖಂ ವಶೀ ಕುರ್ಯಾತ್ ॥**

-ಗುಮಾನಿಕವಿಯ ಉಪದೇಶಶತಕ-೮

ದೇವಕಿಯನ್ನು ಸಂಹರಿಸಲು ಕತ್ತಿಯನ್ನೆತ್ತಿದ್ದ ಕಂಸನನ್ನು ವಸುದೇವನು ಒಳ್ಳೆಯ ಮಾತುಗಳಿಂದ ಸಾಂತ್ವನಗೊಳಿಸಿದನು. ಮೂರ್ಖನನ್ನು ಸಾಮದಿಂದ ವಶಪಡಿಸಿಕೊಳ್ಳಬೇಕು.

**ಹೀಯತೇ ನ ಪ್ರದೀಪೇನ ಕ್ಷೀಯತೇ ನೈವ ವಹ್ನಿನಾ ।**
**ನಾಶ್ಯತೇ ರವಿಣಾ ನಾಪಿ ಕ್ರೋಧರೂಪಂ ತಮೋ ಮಹತ್ ॥ ೩೪೦**

-ಸುಭಾಷಿತಸುಧಾನಿಧಿ

ಕೋಪದ ರೂಪದಲ್ಲಿರುವ ಗಾಢವಾದ ಕತ್ತಲೆಯನ್ನು ಪ್ರಕಾಶಮಾನವಾದ ದೀಪಕಳೆಯಲಾರದು; ಬೆಂಕಿ ಕಡಮೆ ಮಾಡಲಾರದು; ಸೂರ್ಯನೂ ಸಹ ನಾಶಪಡಿಸ ಲಾರನು.

**ಹೀನಾಂಗಾನತಿರಿಕ್ತಾಂಗಾನ್ವಿದ್ಯಾಹೀನಾನ್ ವಯೋಽಧಿಕಾನ್ ।**
**ರೂಪದ್ರವ್ಯವಿಹೀನಾಂಶ್ಚ ಜಾತಿಹೀನಾಂಶ್ಚ ನಾಕ್ಷಿಪೇತ್ ॥ ೩೪೧**

-ಮನುಸ್ಮೃತಿ, ೪-೧೪೧

ಅಂಗಹೀನರನ್ನೂ, ಆರು ಬೆರಳುಳ್ಳವನೇ ಮೊದಲಾದ ಅಧಿಕಾಂಗರನ್ನೂ, ಓದದವರನ್ನೂ, ಮುದುಕರನ್ನೂ, ಕುರೂಪಿಗಳನ್ನೂ, ಬಡವರನ್ನೂ, ನಿಮ್ನವರ್ಗದವರನ್ನೂ ಅಣಕಿಸಬಾರದು, ನಿಂದಿಸಬಾರದು, ತುಚ್ಛವಾಗಿ ಕಾಣಬಾರದು.

**ಹೇತೌ ಲಿಂಗೇ ಪ್ರಶಮನೇ ರೋಗಾಣಾಮಪುನರ್ಭವೇ ।**
**ಜ್ಞಾನಂ ಚತುರ್ವಿಧಂ ಯಸ್ಯ ಸ ರಾಜಾರ್ಹೋ ಭಿಷಕ್ತಮಃ ॥ ೩೪೨**

-ಸುಭಾಷಿತಸುಧಾನಿಧಿ

ರೋಗಗಳ ಕಾರಣವನ್ನೂ, ಚಿಹ್ನೆಗಳನ್ನೂ, ನಿವಾರಣೆಯನ್ನೂ ಮತ್ತು ಇನ್ನೊಮ್ಮೆ ಬರದಂತೆ ಮಾಡುವುದನ್ನೂ ಯಾವನು ತಿಳಿದಿರುವನೋ ಅವನು ರಾಜನಿಗೆ ತಕ್ಕವನಾದ ವೈದ್ಯಶ್ರೇಷ್ಠ.

## ೯. ರಾಜನೀತಿ

**ಅಕೃತಾತ್ಮಾನಮಾಸಾದ್ಯ ರಾಜಾನಮನಯೇ ರತಂ ।**
**ಸಮೃದ್ಧಾನಿ ವಿನಶ್ಯಂತಿ ರಾಷ್ಟ್ರಾಣಿ ನಗರಾಣಿ ಚ ॥** ೧

-ರಾಮಾಯಣ, ಸುಂದರ. ೨೧-೧೧

ಜಿತೇಂದ್ರಿಯನಲ್ಲದ ಮತ್ತು ದುರ್ನೀತಿಯಲ್ಲಿ ಆಸಕ್ತನಾದ ರಾಜನಿದ್ದರೆ, ರಾಷ್ಟ್ರಗಳೂ ನಗರಗಳೂ ಸಮೃದ್ಧವಾಗಿದ್ದರೂ ಹಾಳಾಗುತ್ತವೆ.

**ಅರ್ಥಾನರ್ಥೌ ವಿನಿಶ್ಚಿತ್ಯ ವ್ಯವಸಾಯಂ ಭಜೇತ ಹ ।**
**ಗುಣತಃ ಸಂಗ್ರಹಂ ಕುರ್ಯಾದ್ದೋಷತಸ್ತು ವಿಸರ್ಜಯೇತ್ ॥** ೨

-ರಾಮಾಯಣ, ಯುದ್ಧ. ೧೭-೪೧

ಸಾಧಕಬಾಧಕಗಳನ್ನು ನಿಶ್ಚಯಿಸಿ ಉದ್ಯೋಗವನ್ನು ನಡೆಸಬೇಕು. ಗುಣವಿದ್ದರೆ ಸಂಗ್ರಹಿಸಬೇಕು. ದೋಷವಿದ್ದರೆ ಬಿಡಬೇಕು.

**ಅದಂಡ್ಯಾನ್ ದಂಡಯನ್ ರಾಜಾ ದಂಡ್ಯಾಂಶ್ಚೈವಾಪ್ಯದಂಡಯನ್ ।**
**ಅಯಶೋ ಮಹದಾಪ್ನೋತಿ ನರಕಂ ಚೈವ ಗಚ್ಛತಿ ॥** ೩

-ಮನುಸ್ಮೃತಿ, ೮-೧೨೮

ನಿರಪರಾಧಿಗಳನ್ನು ದಂಡಿಸುವುದರಿಂದಲೂ, ಅಪರಾಧಿಗಳನ್ನು ದಂಡಿಸದೇ ಬಿಟ್ಟು ಬಿಡುವುದರಿಂದಲೂ, ಅರಸನು ಅಪಕೀರ್ತಿಯನ್ನು ಪಡೆಯುವುದು ಮಾತ್ರವಲ್ಲದೆ, ನರಕದಲ್ಲಿ ಬೀಳುತ್ತಾನೆ.

**ಅಧರ್ಮಸ್ತು ಮಹಾಂಸ್ತಾತ ಭವೇತ್ತಸ್ಯ ಮಹೀಪತೇಃ ।**
**ಯೋ ಹರೇದ್ ಬಲಿಷಡ್ಭಾಗಂ ನ ಚ ರಕ್ಷತಿ ಪುತ್ರವತ್ ॥**

-ರಾಮಾಯಣ, ಅರಣ್ಯ. ೬-೧೧

ಶ್ರೀರಾಮ, ರಾಜನು ಪ್ರಜೆಗಳ ಸಂಪಾದನೆಯಲ್ಲಿ ಆರನೆಯ ಒಂದು ಭಾಗವನ್ನು ತೆರಿಗೆಯಾಗಿ ತೆಗೆದುಕೊಳ್ಳುವನಾದ್ದರಿಂದ, ಅವನು ಪ್ರಜೆಗಳನ್ನು ಮಕ್ಕಳಂತೆ ಪಾಲಿಸಬೇಕು. ಇಲ್ಲದಿದ್ದರೆ ಮಹತ್ತರವಾದ ಅಧರ್ಮವು ಅವನಿಗೆ ಗಂಟುಬೀಳುತ್ತದೆ.

**ಅಂಧಾ ವಿದ್ವಜ್ಜನೈರ್ಹೀನಾ ಮೂಕಾ ಕವಿಭಿರುಜ್ಝಿತಾ ।**
**ಬಧಿರಾ ಗಾಯನೈರ್ಹೀನಾ ಸಭಾ ಭವತಿ ಭೂಭೃತಾಮ್ ॥** ೫

-ಸಭಾರಂಜನಶತಕ-೧೮

ವಿದ್ವಾಂಸರಿಲ್ಲದ ರಾಜಸಭೆ ಕುರುಡು. ಕವಿಗಳಿಲ್ಲದಿದ್ದರೆ ಮೂಕ. ಸಂಗೀತಗಾರರಿಲ್ಲದಿದ್ದರೆ ಕಿವುಡು.

**ಅನಭಿಜ್ಞಾಯ ಶಾಸ್ತ್ರಾರ್ಥಾನ್ ಪುರುಷಾಃ ಪಶುಬುದ್ಧಯಃ ।**
**ಪ್ರಾಗಲ್ಭ್ಯಾದ್ವಕ್ತುಮಿಚ್ಛಂತಿ ಮಂತ್ರಿಷ್ವಭ್ಯಂತರೀಕೃತಾಃ ॥** ೬

-ರಾಮಾಯಣ, ಯುದ್ಧ ೬೩-೧೪

ರಾಜನು ನಂಬಿಕೊಂಡಿರುವ ಮಂತ್ರಿಗಳಲ್ಲಿ ಪಶುಬುದ್ಧಿಗಳಾದ ಪುರುಷರೂ ಇರುತ್ತಾರೆ. ಶಾಸ್ತ್ರಾರ್ಥವು ಗೊತ್ತಿಲ್ಲದಿದ್ದರೂ ಅವರು ವಾಗ್ಜಾಲದಿಂದ ರಾಜನಿಗೆ ಸಲಹೆ ಕೊಡಲು ಬಯಸುತ್ತಾರೆ.

**ಅನಾಗತವಿಧಾತಾ ಚ ಪ್ರತ್ಯುತ್ಪನ್ನಮತಿಸ್ತಥಾ ।**
**ದ್ವಾವೇತೌ ಸುಖಮೇಧೇತೇ ಯದ್ಭವಿಷ್ಯೋ ವಿನಶ್ಯತಿ ॥** ೭

-ಪಂಚತಂತ್ರ, ಮಿತ್ರಭೇದ-೩೪೭

ವಿಪತ್ತು ಬರುವ ಮೊದಲೇ ಪ್ರತಿಕ್ರಿಯೆಮಾಡುವವನು ಹಾಗೂ ಸಮಯಕ್ಕೆ ತಕ್ಕಂತೆ ಬುದ್ಧಿಯನ್ನೋಡಿಸುವವನು ಇವರಿಬ್ಬರೂ ಸುಖವನ್ನು ಪಡೆಯುತ್ತಾರೆ. ಆಗುವುದಾಗಲಿ ಎನ್ನುವವನು ನಾಶಹೊಂದುತ್ತಾನೆ.

**ಅಯುಕ್ತಚಾರಂ ದುರ್ದರ್ಶಮಸ್ವಾಧೀನಂ ನರಾಧಿಪಂ ।**
**ವರ್ಜಯಂತಿ ನರಾ ದೂರಾನ್ನದೀಪಂಕಮಿವ ದ್ವಿಪಾಃ ॥** ೮

-ರಾಮಾಯಣ, ಅರಣ್ಯ, ೩೩-೫

ಯಾವ ರಾಜನು ಗೂಢಚಾರರನ್ನು ನೇಮಿಸಿಕೊಂಡಿಲ್ಲವೋ, ಯಾವನು ಉಚಿತ ಕಾಲದಲ್ಲಿ ಪ್ರಜೆಗಳಿಗೆ ದರ್ಶನವೀಯುವುದಿಲ್ಲವೋ, ಯಾವನು ಕಂಡವರ ಮಾತಿಗೆ ಕಟ್ಟುಬಿದ್ದು ಪರಾಧೀನನಾಗಿ ವರ್ತಿಸುವನೋ ಅವನನ್ನು ಪ್ರಜೆಗಳು ನದಿಯ ಕೆಸರನ್ನು ಆನೆಗಳು ವರ್ಜಿಸುವಂತೆ ದೂರವಿಡುತ್ತಾರೆ.

**ಅಹೋ ತಮ ಇವೇದಂ ಸ್ಯಾನ್ನ ಪ್ರಜ್ಞಾಯೇತ ಕಿಂಚನ ।**
**ರಾಜಾ ಚೇನ್ನ ಭವೇಲ್ಲೋಕೇ ವಿಭಜನ್ ಸಾಧ್ವಸಾಧುನೀ ॥** ೯

-ರಾಮಾಯಣ, ಅಯೋಧ್ಯಾ. ೬೭-೩೬

ಸರಿತಪ್ಪುಗಳನ್ನು ವಿಂಗಡಿಸುವ ರಾಜನು ಲೋಕದಲ್ಲಿಲ್ಲದಿದ್ದರೆ, ಯಾವುದು ಏನೂ ತಿಳಿಯದೇ ಹೋದೀತು. ಆಹಾ! ಎಲ್ಲವೂ ಕತ್ತಲೆಯಿಂದ ಮುಚ್ಚಿಹೋದೀತು.

ಆಸನೇ ಶಯನೇ ಯಾನೇ ಪಾನಭೋಜನವಸ್ತುಷು ।
ದೃಷ್ಟ್ವಾದೃಷ್ಟಪ್ರಮತ್ತೇಷು ಪ್ರಹರಂತ್ಯರಯೋಽರಿಷು ॥ ೧೦
-ಪಂಚತಂತ್ರ, ಕಾಕೋಲೂಕೀಯ-೨೨೭

ಕುಳಿತುಕೊಳ್ಳುವ ಆಸನದಲ್ಲಿ, ಹಾಸಿಗೆಯಲ್ಲಿ, ವಾಹನದಲ್ಲಿ, ಊಟಮಾಡುವ ಮತ್ತು ಕುಡಿಯುವ ಪದಾರ್ಥದಲ್ಲಿ ಕಾಣುವ ಮತ್ತು ಕಾಣಿಸದೆ ಇರುವುದರಲ್ಲಿ ಮೈಮರೆತಿರುವಲ್ಲಿ ಶತ್ರುಗಳು ತಮ್ಮ ಶತ್ರುಗಳನ್ನು ಕೊಲ್ಲುತ್ತಾರೆ.

ಏಕಂ ವಿಷರಸೋ ಹಂತಿ ಶಸ್ತ್ರೇಣೈಕಶ್ಚ ಹನ್ಯತೇ ।
ಸಬಂಧುರಾಷ್ಟ್ರಂ ರಾಜಾನಂ ಹಂತ್ಯೇಕೋ ಮಂತ್ರವಿಪ್ಲವಃ ॥ ೧೧
-ಯಶಸ್ತಿಲಕ, ೩-೨೮

ವಿಷವು ಒಬ್ಬನನ್ನು ಕೊಲ್ಲುತ್ತದೆ. ಆಯುಧದಿಂದ ಒಬ್ಬನು ಹತನಾಗುತ್ತಾನೆ. ದುಷ್ಟ ಮಂತ್ರಾಲೋಚನೆಯು ಬಂಧು ರಾಷ್ಟ್ರಸಹಿತವಾಗಿ ರಾಜನನ್ನು ಕೊಲ್ಲುತ್ತದೆ.

ಏಕಸ್ಯ ಹಿ ಪ್ರಸಾದೇನ ಕೃತ್ಸ್ನೋ ಲೋಕಃ ಪ್ರಸೀದತಿ ।
ವ್ಯಾಕುಲೇನಾಕುಲಃ ಸರ್ವೋ ಭವತೀತಿ ವಿನಿಶ್ಚಯಮ್ ॥ ೧೨
-ಸುಭಾಷಿತಸುಧಾನಿಧಿ

ಯಾವ ಒಬ್ಬ ರಾಜನು ಪ್ರಸನ್ನನಾದರೆ ಸಮಸ್ತವಾದ ಲೋಕವೂ ಪ್ರಸನ್ನವಾಗುತ್ತದೆ. ಅವನು ದುಃಖಿತನಾದರೆ ಎಲ್ಲರೂ ದುಃಖಿತರಾಗುವರೆಂಬುದು ನಿಶ್ಚಯ.

ಕರ್ಮ ಲೋಕವಿರುದ್ಧಂ ತು ಕುರ್ವಾಣಂ ಕ್ಷಣದಾಚರ ।
ತೀಕ್ಷ್ಣಂ ಸರ್ವಜನೋ ಹಂತಿ ಸರ್ಪಂ ದುಷ್ಟಮಿವಾಗತಮ್ ॥ ೧೩
-ರಾಮಾಯಣ, ಅರಣ್ಯ ೨೯-೪

ಎಲೈ ರಾಕ್ಷಸ, ಪ್ರಜಾವಿರೋಧಿಯಾದ ಕಾರ್ಯವನ್ನು ಮಾಡುವ ಉಗ್ರಸ್ವಭಾವದವನನ್ನು, ಮನೆಯಲ್ಲಿ ಸೇರಿದ ಕೆಟ್ಟಹಾವನ್ನು ಹೊಡೆಯುವಂತೆ ಪ್ರಜೆಗಳು ಹೊಡೆದು ಕೊಲ್ಲುತ್ತಾರೆ.

ಕವೀನಾಂ ಪ್ರತಿಭಾ ಚಕ್ಷುಃ ಶಾಸ್ತ್ರಂ ಚಕ್ಷುರ್ವಿಪಶ್ಚಿತಾಂ ।
ಜ್ಞಾನಂ ಚಕ್ಷುರ್ಮಹರ್ಷೀಣಾಂ ಚರಾಶ್ಚಕ್ಷುರ್ಮಹೀಕ್ಷಿತಾಮ್ ॥ ೧೪
-ರಾಮಾಯಣಮಂಜರೀ, ಅರಣ್ಯ. ೬೪೦

ಕವಿಗಳಿಗೆ ಪ್ರತಿಭೆ ಕಣ್ಣು. ವಿದ್ವಾಂಸರಿಗೆ ಶಾಸ್ತ್ರವು ಕಣ್ಣು, ಮಹರ್ಷಿಗಳಿಗೆ ಜ್ಞಾನವು ಕಣ್ಣು, ರಾಜರಿಗೆ ಗೂಢಚಾರರೇ ಕಣ್ಣು.

**ಕ್ಷಂತವ್ಯಂ ಪ್ರಭುಣಾ ನಿತ್ಯಂ ಕ್ಷಿಪತಾಂ ಕಾರ್ಯಿಣಾಂ ನೃಣಾಂ ।**
**ಬಾಲವೃದ್ಧಾತುರಾಣಾಂ ಚ ಕುರ್ವತಾ ಹಿತಮಾತ್ಮನಃ ॥** ೧೫

-ಮನುಸ್ಮೃತಿ, ೮-೩೧೨

ಸಮಯದಲ್ಲಿ ಕೆಲಸವಾಗದೆ ದುಃಖದಿಂದ ಒಂದು ವೇಳೆ ಆಕ್ಷೇಪಮಾಡಿದರೂ ಅರಸನು ಅದನ್ನು ಕ್ಷಮಿಸಬೇಕು. ಮಕ್ಕಳು, ರೋಗಿಗಳು, ಮುದುಕರು ಆಡಿದ ಆಕ್ಷೇಪಗಳನ್ನು ಸಹಿಸಬೇಕು. ಇದರಿಂದ ಹಿತವೇ ಆಗುತ್ತದೆ.

**ಕುಲೀನಃ ಶೀಲಸಂಪನ್ನೋ ವಾಗ್ಮೀ ದಕ್ಷಃ ಪ್ರಿಯಂವದಃ ।**
**ಯಥೋಕ್ತವಾದೀ ಸ್ಮೃತಿಮಾನ್ ದೂತಃ ಸ್ಯಾತ್ಸಪ್ತಭಿರ್ಗುಣೈಃ ॥** ೧೬

-ಮಹಾಭಾರತ, ಸುಭಾಷಿತಸುಧಾನಿಧಿ

ಒಳ್ಳೆಯ ಕುಲದಲ್ಲಿ ಜನನ, ಒಳ್ಳೆಯ ನಡತೆ, ವಾಗ್ಮಿಯಾಗಿರುವುದು, ಸಮರ್ಥನಾಗಿರುವುದು, ಪ್ರಿಯವನ್ನಾಡುವುದು, ತಿಳಿಸಿದಂತೆ ಹೇಳುವುದು, ನೆನಪನ್ನು ಹೊಂದಿರುವುದು-ಈ ಏಳು ಗುಣಗಳಿಂದ ಒಳ್ಳೆಯ ದೂತನೆನಿಸಿಕೊಳ್ಳುತ್ತಾನೆ.

**ಗುಣೇಷು ರಾಗೋ ವ್ಯಸನೇಷ್ವನಾದರೋ**
**ರತಿಃ ಸುಭೃತ್ಯೇಷು ಚ ಯಸ್ಯ ಭೂಪತೇಃ ।**
**ಚಿರಂ ಸ ಭುಂಕ್ತೇ ಚಲಚಾಮರಾಂಶುಕಾಂ**
**ಸಿತಾತಪತ್ರಾಭರಣಾಂ ನೃಪಶ್ರಿಯಮ್ ॥** ೧೭

ಪಂಚತಂತ್ರ, ಕಾಕೋಲೂಕೀಯ-೨೪೯

ಯಾವ ರಾಜನಿಗೆ ಸದ್ಗುಣಗಳಲ್ಲಿ ಪ್ರೀತಿಯೂ, ಕೆಟ್ಟ ಹವ್ಯಾಸಗಳಲ್ಲಿ ಅನಾದರವೂ, ಒಳ್ಳೆಯ ಸೇವಕರಲ್ಲಿ ಸಂತೋಷವೂ ಇರುವುದೋ ಅಂಥವನು ಚಂಚಲವಾದ ಚಾಮರ ಮತ್ತು ವಸ್ತ್ರಗಳಿಂದ ಕೂಡಿದುದೂ, ಬೆಳ್ಗೊಡೆಯ ಆಭರಣವನ್ನು ಹೊಂದಿದುದೂ ಆದ ರಾಜ್ಯಲಕ್ಷ್ಮಿಯನ್ನು ಬಹುಕಾಲ ಅನುಭವಿಸುತ್ತಾನೆ.

**ಚಾರೋ ಯಸ್ಯ ವಿಚಾರಶ್ಚ ರಾಜ್ಞೋ ನಾಸ್ತೀಕ್ಷಣದ್ವಯಂ ।**
**ತಸ್ಯಾಂಧದುಗ್ಧವದ್ರಾಜ್ಯಂ ಮಂತ್ರಿಮಾರ್ಜಾಲಗೋಚರಮ್ ॥** ೧೮

-ಯಶಸ್ತಿಲಕ, ೩-೧೭೩

ಗೂಢಚಾರ, ವಿಚಾರ-ಇವೆರಡು ರಾಜನ ಎರಡು ಕಣ್ಣುಗಳು. ಅವು ಇಲ್ಲದಿದ್ದರೆ ಆ ರಾಜನ ರಾಜ್ಯವು, ಕುರುಡನೆದುರಿಗಿನ ಹಾಲಿನಂತೆ, ಮಂತ್ರಿಯೆಂಬ ಬೆಕ್ಕಿನ ಪಾಲಾಗುತ್ತದೆ.

**ಜಾತಮಾತ್ರಂ ನ ಯಃ ಶತ್ರುಂ ವ್ಯಾಧಿಂ ಚ ಪ್ರಶಮಂ ನಯೇತ್ ।**
**ಅತಿಪುಷ್ಟಾಂಗಯುಕ್ತೋಽಪಿ ಸ ಪಶ್ಚಾತ್ತೇನ ಹನ್ಯತೇ ॥ ೧೯**

-ಪಂಚತಂತ್ರ, ಕಾಕೋಲೂಕೀಯ-೩

ಹುಟ್ಟಿದ ಕೂಡಲೇ ಶತ್ರುವನ್ನೂ ರೋಗವನ್ನೂ ಯಾವನು ಅಡಗಿಸುವುದಿಲ್ಲವೋ ಅಂಥವನು ಎಷ್ಟೇ ಸಮೃದ್ಧವಾದ ರಾಜ್ಯಾಂಗಗಳನ್ನು ಹೊಂದಿದ್ದರೂ, ಚೆನ್ನಾಗಿ ಬೆಳೆವಣಿಗೆಯಾದ ಶರೀರ ಹೊಂದಿದ್ದರೂ ಮುಂದೆ ಅದರಿಂದಲೇ ಕೊಲ್ಲಲ್ಪಡುತ್ತಾನೆ.

**ತೀಕ್ಷ್ಣಮಲ್ಪಪ್ರದಾತಾರಂ ಪ್ರಮತ್ತಂ ಗರ್ವಿತಂ ಶಠಂ ।**
**ವ್ಯಸನೇ ಸರ್ವಭೂತಾನಿ ನಾಭಿಧಾವಂತಿ ಪಾರ್ಥಿವಮ್ ॥ ೨೦**

-ರಾಮಾಯಣ, ಅರಣ್ಯ. ೩೩-೧೫

ರಾಜನು ಉಗ್ರನೂ ಅಲ್ಪವೇತನ ಕೊಡತಕ್ಕವನೂ ಮೈಮರೆತವನೂ ಗರ್ವಿತನೂ ವಂಚಕನೂ ಆಗಿದ್ದರೆ, ಅವನಿಗೆ ವಿಪತ್ಕಾಲ ಬಂದಾಗ ಯಾವ ಪ್ರಜೆಗಳೂ ಸಹಾಯಕ್ಕೆ ಬರುವುದಿಲ್ಲ.

**ದುಷ್ಟಸ್ಯ ದಂಡಃ ಸುಜನಸ್ಯ ಪೂಜಾ**
**ನ್ಯಾಯೇನ ಕೋಶಸ್ಯ ಚ ಸಂಪ್ರವೃದ್ಧಿಃ ।**
**ಅಪಕ್ಷಪಾತೋಽರ್ಥಿಷು ರಾಷ್ಟ್ರರಕ್ಷಾ**
**ಪಂಚೈವ ಯಜ್ಞಾಃ ಕಥಿತಾ ನೃಪಾಣಾಮ್ ॥ ೨೧**

-ಅತ್ರಿಸಂಹಿತಾ, ೧-೨೮

ಕೆಟ್ಟವರನ್ನು ದಂಡಿಸುವುದು, ಒಳ್ಳೆಯವರಿಗೆ ಸನ್ಮಾನ, ನ್ಯಾಯವಾದ ರೀತಿಯಲ್ಲಿ ಖಜಾನೆಯನ್ನು ತುಂಬುವುದು, ನ್ಯಾಯಾರ್ಥಿಗಳಲ್ಲಿ ಪಕ್ಷಪಾತವಿಲ್ಲದೆ ನಿರ್ಣಯ, ರಾಜ್ಯದ ರಕ್ಷಣೆ-ಇವು ಐದೂ ರಾಜರಿಗೆ ಯಜ್ಞಗಳಂತೆ ಕರ್ತವ್ಯ.

**ನ ಕಶ್ಚಿಚ್ಚಂಡಕೋಪಾನಾಮಾತ್ಮೀಯೋ ನಾಮ ಭೂಭುಜಾಮ್ ।**
**ಹೋತಾರಮಪಿ ಜುಹ್ವಾನಂ ಸ್ಪೃಷ್ಟೋ ದಹತಿ ಪಾವಕಃ ॥ ೨೨**

-ನೀತಿಶತಕ, ೫೫

ಬಹಳ ಕೋಪಿಷ್ಠರಾದ ರಾಜರಿಗೆ ತನ್ನವನೆಂಬುವನು ಒಬ್ಬನೂ ಇಲ್ಲ. ಬೆಂಕಿಯು ಹೋಮಮಾಡುತ್ತಿರುವ ಹೋತೃವನ್ನೂ ಸಹ ಸುಡುತ್ತದೆ.

**ನ ಚಂದ್ರೇಣ ನ ಚೌಷಧ್ಯಾ ನ ಸೂರ್ಯೇಣ ನ ವಹ್ನಿನಾ ।**
**ಸಾಮ್ನೈವ ವಿಲಯಂ ಯಾತಿ ವಿದ್ವೇಷಪ್ರಭವಂ ತಮಃ ॥ ೨೩**

ಪಂಚತಂತ್ರ, ಮಿತ್ರಭೇದ-೪೧೧

ಹಗೆತನದಿಂದ ಉಂಟಾದ ಕತ್ತಲೆ, ಚಂದ್ರನಿಂದಾಗಲೀ, ಮೂಲಿಕೆಯಿಂದಾಗಲೀ, ಸೂರ್ಯನಿಂದಾಗಲೀ, ಬೆಂಕಿಯಿಂದಾಗಲೀ ಹೋಗುವುದಿಲ್ಲ ; ಅದು ಕೇವಲ ಸಾಮೋಪಾಯದಿಂದಲೇ ನಾಶವಾಗುತ್ತದೆ.

ನ ಮಿತ್ರಕಾರಣಾದ್ರಾಜಾ ವಿಪುಲಾದ್ವಾ ಧನಾಗಮಾತ್ ।
ಸಮುತ್ಸೃಜೇತ್ಸಾಹಸಿಕಾನ್ ಸರ್ವಭೂತಭಯಾವಹಾನ್ ॥ ೨೪

-ಮನುಸ್ಮೃತಿ, ೮-೩೪೭

ಸ್ನೇಹಿತರೆಂದಾಗಲಿ, ಹೆಚ್ಚು ಹಣ ಬರುವುದೆಂದಾಗಲೀ, ಲೂಟಿ ಮೊದಲಾದ ಅಪರಾಧಗಳನ್ನು ಮಾಡಿದ, ಎಲ್ಲರಿಗೂ ಭಯವನ್ನುಂಟು ಮಾಡುವವರನ್ನು ರಾಜನು ದಂಡನೆ ಮಾಡದೆ ಬಿಡಬಾರದು.

ನ ಯತ್ರ ಶಕ್ಯತೇ ಕರ್ತುಂ ಸಾಮ ದಾನಮಥಾಪಿ ವಾ ।
ಭೇದಸ್ತತ್ರ ಪ್ರಯೋಕ್ತವ್ಯೋ ಯತಃ ಸ ವಶಕಾರಕಃ ॥ ೨೫

-ಪಂಚತಂತ್ರ, ಲಬ್ಧಪ್ರಣಾಶ-೭೩

ಎಲ್ಲಿ ಸಾಮೋಪಾಯದಿಂದ ಅಥವಾ ದಾನದಿಂದಲೂ ಕೆಲಸವನ್ನು ಸಾಧಿಸುವುದಕ್ಕಾಗುವುದಿಲ್ಲವೋ ಅಲ್ಲಿ ಭೇದೋಪಾಯವನ್ನು ಬಳಸಬೇಕು. ಏಕೆಂದರೆ ಅದು ವಶಮಾಡಿ ಕೆಲಸವನ್ನು ಸಾಧಿಸಿಕೊಡಬಲ್ಲದು.

ನಯನಾಭ್ಯಾಂ ಪ್ರಸುಪ್ತೋಽಪಿ ಜಾಗರ್ತಿ ನಯಚಕ್ಷುಷಾ ।
ವ್ಯಕ್ತಕ್ರೋಧಪ್ರಸಾದಶ್ಚ ಸ ರಾಜಾ ಪೂಜ್ಯತೇ ಜನೈಃ ॥ ೨೬

-ರಾಮಾಯಣ, ಅರಣ್ಯ. ೩೩-೨೧

ಕಣ್ಣುಗಳನ್ನು ಮುಚ್ಚಿದ್ದರೂ ಯಾವನು ರಾಜನೀತಿಯೆಂಬ ಕಣ್ಣನ್ನು ತೆರೆದು ಸದಾ ಎಚ್ಚರದಲ್ಲಿರುವನೋ ಯಾವನ ಕ್ರೋಧವಾಗಲಿ ಪ್ರಸಾದವಾಗಲಿ ಸ್ಫುಟವಾದ ಫಲವನ್ನು ಕೊಡುತ್ತದೆಯೋ ಅಂಥ ರಾಜನನ್ನು ಪ್ರಜೆಗಳು ಆದರಿಸುತ್ತಾರೆ.

ನರಾಧಿಪಾ ನೀಚಜನಾನುವರ್ತಿನೋ
ಬುಧೋಪದಿಷ್ಟೇನ ಪಥಾ ನ ಯಾಂತಿ ಯೇ ।
ವಿಶಂತ್ಯತೋ ದುರ್ಗಮಮಾರ್ಗನಿರ್ಗಮಂ
ಸಮಸ್ತಸಂಬಾಧಮನರ್ಥಪಂಜರಂ ॥ ೨೭

-ಪಂಚತಂತ್ರ, ಮಿತ್ರಭೇದ-೪೧೪

ತಿಳಿದವರು ತಿಳಿಸುವ ಹಾದಿಯಲ್ಲಿ ಯಾವ ರಾಜರುಗಳು ಹೋಗದೆ ನೀಚಜನರನ್ನು ಅನುಸರಿಸುವರೋ ಅಂಥವರು ಎಲ್ಲರಿಗೂ ಬಾಧೆಯನ್ನುಂಟುಮಾಡುವುದೂ, ಹೊರಕ್ಕೆ ಬರಲು ಕಷ್ಟಕರವಾದ ಮಾರ್ಗವುಳ್ಳದೂ ಆದ ಅನರ್ಥದ ಪಂಜರವನ್ನು ಪ್ರವೇಶಿಸುತ್ತಾರೆ.

**ನಾನುತಿಷ್ಠತಿ ಕಾರ್ಯಾಣಿ ಭಯೇಷು ನ ಬಿಭೇತಿ ಚ ।**
**ಕ್ಷಿಪ್ರಂ ರಾಜ್ಯಾಚ್ಚ್ಯುತೋ ದೀನಸ್ತೃಣೈಸ್ತುಲ್ಯೋ ಭವೇದಿಹ ॥** ೨೮

-ರಾಮಾಯಣ, ಅರಣ್ಯ. ೩೩-೧೭

ಯೋಗ್ಯಕಾಲದಲ್ಲಿ ತನ್ನ ಕರ್ತವ್ಯವನ್ನು ಯಾವನು ಮಾಡುವುದಿಲ್ಲವೋ, ಭಯಕಾಲದಲ್ಲಿ ಆತಂಕಪಡುವುದಿಲ್ಲವೋ, ಅಂಥವನು ಬಹು ಬೇಗನೆ ರಾಜ್ಯಭ್ರಷ್ಟನಾಗುತ್ತಾನೆ; ಹುಲ್ಲುಕಡ್ಡಿಗೆ ಸಮನಾಗುತ್ತಾನೆ.

**ನಾರಾಜಕೇ ಜನಪದೇ ಬೀಜಮುಷ್ಟಿಃ ಪ್ರಕೀರ್ಯತೇ ।**
**ನಾರಾಜಕೇ ಪಿತುಃ ಪುತ್ರೋ ಭಾರ್ಯಾ ವಾ ವರ್ತತೇ ವಶೇ ॥** ೨೯

ರಾಮಾಯಣ, ಅಯೋಧ್ಯಾ. ೬೭-೧೦

ರಾಜನಿಲ್ಲದ ದೇಶದಲ್ಲಿ ಬಿತ್ತನೆಯ ಕೆಲಸವು ನಡೆಯದು. ಅಂಥ ದೇಶದಲ್ಲಿ ತಂದೆಯ ಮಾತನ್ನು ಮಗನು ಕೇಳುವುದಿಲ್ಲ. ಗಂಡನ ಮಾತನ್ನು ಹೆಂಡತಿ ಕೇಳುವುದಿಲ್ಲ.

**ನಾರಾಜಕೇ ಜನಪದೇ ಯೋಗಕ್ಷೇಮಃ ಪ್ರವರ್ತತೇ ।**
**ನ ಚಾಪ್ಯರಾಜಕೇ ಸೇನಾ ಶತ್ರೂನ್ ವಿಷಹತೇ ಯುಧಿ ॥** ೩೦

—ರಾಮಾಯಣ, ಅಯೋಧ್ಯಾ. ೬೭-೨೪

ರಾಜನಿಲ್ಲದ ದೇಶದಲ್ಲಿ ಜನರ ಯೋಗಕ್ಷೇಮಗಳು ನಡೆಯುವುದಿಲ್ಲ. (ನಿಯಾಮಕನೇ ಇಲ್ಲದ್ದರಿಂದ) ಸೇನೆಯು ಯುದ್ಧದಲ್ಲಿ ಶತ್ರುಗಳನ್ನು ಎದುರಿಸಿ ಹೋರಾಡುವುದಿಲ್ಲ.

**ನಾರಾಜಕೇ ಜನಪದೇ ಸ್ವಕಂ ಭವತಿ ಕಸ್ಯಚಿತ್ ।**
**ಮತ್ಸ್ಯಾ ಇವ ನರಾ ನಿತ್ಯಂ ಭಕ್ಷಯಂತಿ ಪರಸ್ಪರಮ್ ॥** ೩೧

ರಾಮಾಯಣ, ಅಯೋಧ್ಯಾ. ೬೭-೩೧

ರಾಜನಿಲ್ಲದ ರಾಜ್ಯದಲ್ಲಿ ಯಾರ ಸ್ವತ್ತು ಯಾವುದು ಎಂಬ ನಿರ್ಧಾರವೇ ಇರುವುದಿಲ್ಲ. ದೊಡ್ಡಮೀನು ಸಣ್ಣಮೀನನ್ನು ನುಂಗಿದಂತೆ ಒಬ್ಬರನ್ನೊಬ್ಬರು ತಿಂದುಬಿಡುತ್ತಾರೆ!

**ನಾಸ್ತಿಕ್ಯಮನೃತಂ ಕ್ರೋಧಂ ಪ್ರಮಾದಂ ದೀರ್ಘಸೂತ್ರತಾಂ ।**
**ಅದರ್ಶನಂ ಜ್ಞಾನವತಾಮಾಲಸ್ಯಂ ಪಂಚವೃತ್ತಿತಾಮ್ ॥**
**ಏಕಚಿಂತನಮರ್ಥಾನಾಮನರ್ಥಜ್ಞೈಶ್ಚ ಮಂತ್ರಣಂ ।**
**ನಿಶ್ಚಿತಾನಾಮನಾರಂಭಂ ಮಂತ್ರಸ್ಯಾಪರಿರಕ್ಷಣಮ್ ॥**
**ಮಂಗಲಸ್ಯಾಪ್ರಯೋಗಂ ಚ ಪ್ರತ್ಯುತ್ಥಾನಂ ಚ ಸರ್ವತಃ ।**
**ಕಚ್ಚಿತ್ತ್ವಂ ವರ್ಜಯಸ್ಯೇತಾನ್ ರಾಜದೋಷಾಂಶ್ಚತುರ್ದಶ ॥** ೩೨

ರಾಮಾಯಣ, ಅಯೋಧ್ಯಾ. ೧೦೦-೬೫, ೬೬, ೬೭

**ಇವು ಹದಿನಾಲ್ಕು ರಾಜದೋಷಗಳು:-**

ನಾಸ್ತಿಕತೆ, ಸುಳ್ಳು, ಸಿಟ್ಟು, ಅನವಧಾನ, ನಿಧಾನವಾಗಿ ತಡೆದು ಕೆಲಸಮಾಡುವುದು, ಪ್ರಾಜ್ಞರಾದ ಸಜ್ಜನರೊಡನೆ ಸೇರದಿರುವುದು, ಸೋಮಾರಿತನ, ಪಂಚೇಂದ್ರಿಯಗಳಿಗೆ ಅಧೀನನಾಗಿ ಇಂದ್ರಿಯಚಾಪಲ್ಯದಲ್ಲಿ ಮುಳುಗುವುದು.

ಯಾರೊಡನೆಯೂ ಸಮಾಲೋಚಿಸದೆ ಏಕಪಕ್ಷೀಯವಾದ ನಿರ್ಧಾರ, ಅನುಭವ ವಿಲ್ಲದವರೊಡನೆ ಮಂತ್ರಾಲೋಚನೆ, ನಿಶ್ಚಯಿಸಿದ ಕಾರ್ಯವನ್ನು ಆರಂಭಿಸದಿರುವುದು, ಮಂತ್ರಾಲೋಚನೆಯನ್ನು ರಹಸ್ಯವಾಗಿ ಉಳಿಸಿಕೊಳ್ಳದಿರುವುದು.

ಮಂಗಳಕರವಾದ ಶುಭಕಾರ್ಯವನ್ನು ಮಾಡದಿರುವುದು, ಎಲ್ಲ ಶತ್ರುಗಳ ಮೇಲೂ ಏಕಕಾಲದಲ್ಲಿ ಯುದ್ಧಾರಂಭ-ಈ ಹದಿನಾಲ್ಕು ದೋಷಗಳಿಗೆ ಅವಕಾಶವನ್ನು ಕೊಡಬೇಡ. (ಶ್ರೀರಾಮನು ಭರತನಿಗೆ ಹೇಳಿದ್ದು)

**ನಿರ್ವನೋ ವಧ್ಯತೇ ವ್ಯಾಘ್ರೋ ನಿರ್ವ್ಯಾಘ್ರಂ ಛಿದ್ಯತೇ ವನಂ ।**
**ತಸ್ಮಾದ್ವ್ಯಾಘ್ರೋ ವನಂ ರಕ್ಷೇತ್ ವನಂ ವ್ಯಾಘ್ರಂ ಚ ಪಾಲಯೇತ್ ॥**೩೩

-ಮಹಾಭಾರತ, ಉದ್ಯೋಗ. ೨೯-೫೫

ವನವಿಲ್ಲದಿದ್ದರೆ ಹುಲಿ ಹತ್ಯೆಗೆ ಒಳಗಾಗುತ್ತದೆ. ಹುಲಿ ಇಲ್ಲದಿದ್ದರೆ ವನ ಹಾಳಾಗುತ್ತದೆ. ಆದ್ದರಿಂದ ಹುಲಿ ವನವನ್ನೂ ವನವು ಹುಲಿಯನ್ನೂ ರಕ್ಷಿಸಬೇಕು.

**ನೃಶಂಸಮನೃಶಂಸಂ ವಾ ಪ್ರಜಾರಕ್ಷಣಕಾರಣಾತ್ ।**
**ಪಾತಕಂ ವಾ ಸದೋಷಂ ವಾ ಕರ್ತವ್ಯಂ ರಕ್ಷತಾ ಸತಾ ॥** ೩೪

-ರಾಮಾಯಣ, ಬಾಲ. ೨೫-೧೮

ಪ್ರಜಾರಕ್ಷಣೆಗಾಗಿ ಮಾಡುವ ಕಾರ್ಯವು ಕ್ರೂರವಾಗಿರಲಿ ಇಲ್ಲದಿರಲಿ, ಪಾಪಹೇತುವಾಗಿರಲಿ ದೋಷಯುಕ್ತವಾಗಿರಲಿ, ಪ್ರಜಾಪಾಲನೆಯ ಹೊಣೆ ಹೊತ್ತವನು ಅದನ್ನು ಮಾಡಲೇಬೇಕು.

ನೋಪೇಕ್ಷಿತವ್ಯೋ ವಿದ್ವದ್ಭಿಃ ಶತ್ರುರಲ್ಪೋಽಪ್ಯವಜ್ಞಯಾ ।
ವಹ್ನಿರಲ್ಪೋಽಪಿ ಸಂವೃದ್ಧಃ ಕುರುತೇ ಭಸ್ಮಸಾದ್ವನಮ್ ॥ ೩೫
-ಸುಭಾಷಿತಸುಧಾನಿಧಿ

ಬಹಳ ಅಲ್ಪನಾದ ಶತ್ರುವನ್ನೂ ಕೂಡ ತಿಳಿದವರು ಎಚ್ಚರದಪ್ಪಿ ಉಪೇಕ್ಷಿಸಬಾರದು. ಬೆಂಕಿ ಬಹಳ ಸಣ್ಣದಾದರೂ ದೊಡ್ಡದಾದಾಗ ವನವನ್ನೇ ಭಸ್ಮಮಾಡಿಬಿಡುತ್ತದೆ.

ಪರ್ಜನ್ಯಮಿವ ಭೂತಾನಿ ಮಹಾದ್ರುಮಮಿವಾಂಡಜಾಃ ।
ನರಾಃ ಸಮುಪಜೀವಂತಿ ನೃಪಂ ಸರ್ವಾರ್ಥಸಾಧಕಮ್ ॥ ೩೬
-ಸುಭಾಷಿತಸುಧಾನಿಧಿ

ಎಲ್ಲಾ ಪ್ರಾಣಿಗಳೂ ಮಳೆಯನ್ನು ಹೇಗೋ ಹಾಗೆ ಪಕ್ಷಿಗಳು ಮಹಾವೃಕ್ಷವನ್ನು ಹೇಗೋ ಹಾಗೆ ಎಲ್ಲಾ ಇಷ್ಟಗಳನ್ನೂ ನಡಿಸಿಕೊಡುವ ರಾಜನನ್ನು ಜನರು ಚೆನ್ನಾಗಿ ಆಶ್ರಯಿಸುತ್ತಾರೆ.

ಪ್ರಜ್ಞಾವೃದ್ಧಂ ಧರ್ಮವೃದ್ಧಂ ಸ್ವಬಂಧುಂ
ವಿದ್ಯಾವೃದ್ಧಂ ವಯಸಾ ಚಾಪಿ ವೃದ್ಧಂ ।
ಕಾರ್ಯಾಕಾರ್ಯೇ ಪೂಜಯಿತ್ವಾ ಪ್ರಸಾದ್ಯ
ಯಃ ಸಂಪೃಚ್ಛೇನ್ನ ಸ ಮುಹ್ಯೇತ್ ಕದಾಚಿತ್ ॥ ೩೭
-ಮಹಾಭಾರತ, ಉದ್ಯೋಗ. ೪೦-೨೩

ಬುದ್ಧಿಶಕ್ತಿಯಲ್ಲಿ ಹಿರಿಯ, ಧರ್ಮಾಚರಣೆಯಲ್ಲಿ ಹಿರಿಯ, ಆಪ್ತನಾದ ಬಂಧು, ವಿದ್ಯಾವೃದ್ಧ ಮತ್ತು ವಯೋವೃದ್ಧ-ಇವರನ್ನು ಗೌರವಿಸಿ ಸಂತೋಷಪಡಿಸಿ ಯಾವಾತನು ಕಾರ್ಯಾಕಾರ್ಯಗಳ ವಿಚಾರದಲ್ಲಿ ಅವರ ಸಲಹೆಯನ್ನು ಪಡೆಯುವನೋ ಅವನು ಎಂದಿಗೂ ಮೌಢ್ಯದಿಂದ ತಪ್ಪುದಾರಿ ಹಿಡಿಯುವುದಿಲ್ಲ.

ಪರಮಂ ಯತ್ನಮಾತಿಷ್ಠೇತ್ ಸ್ತೇನಾನಾಂ ನಿಗ್ರಹೇ ನೃಪಃ ।
ಸ್ತೇನಾನಾಂ ನಿಗ್ರಹಾದಸ್ಯ ಯಶೋ ರಾಷ್ಟ್ರಂ ಚ ವರ್ಧತೇ ॥ ೩೮
-ಮನುಸ್ಮೃತಿ, ೮-೩೦೨

ಅರಸನು ಕಳ್ಳರನ್ನು ಹಿಡಿಯುವುದರಲ್ಲಿ, ಅಡಗಿಸುವುದರಲ್ಲಿ ವಿಶೇಷ ಪ್ರಯತ್ನ ಮಾಡಬೇಕು. ಇದರಿಂದ ಅವನ ಕೀರ್ತಿಯು ಹೆಚ್ಚುತ್ತದೆ. ರಾಷ್ಟ್ರವು ಸಂಪನ್ನವಾಗುತ್ತದೆ.

ಪರಸ್ಪರಾಮಿಷತಯಾ ಜಗತೋ ಭಿನ್ನವರ್ತ್ಮನಃ ।
ದಂಡಾಭಾವೇ ಪರಿಧ್ವಂಸೀ ಮಾತ್ಸ್ಯೋ ನ್ಯಾಯಃ ಪ್ರವರ್ತತೇ ॥ ೩೯
-ಕಾಮಂದಕೀಯ, ೨-೪೦

ಬೇರೆ ಬೇರೆ ದಾರಿಯನ್ನನುಸರಿಸುವ ಜನ ರಾಜದಂಡ ಭಯವಿಲ್ಲದಿದ್ದರೆ ಒಬ್ಬರನ್ನೊಬ್ಬರು ಕೊಂದು ನಾಶವಾಗುತ್ತಾರೆ. ದೊಡ್ಡಮೀನು ಚಿಕ್ಕಮೀನನ್ನು ನುಂಗುವಂತೆ ದುರ್ಬಲರು ಕಷ್ಟಪಡುತ್ತಾರೆ.

**ಪ್ರಸಾದೋ ನಿಷ್ಫಲೋ ಯಸ್ಯ ಕ್ರೋಧಶ್ಚಾಪಿ ನಿರರ್ಥಕಃ ।**
**ನ ತಂ ಭರ್ತಾರಮಿಚ್ಛಂತಿ ಷಂಡಂ ಪತಿಮಿವ ಸ್ತ್ರಿಯಃ ॥ ೪೦**

-ಮಹಾಭಾರತ, ಉದ್ಯೋಗ. ೩೪-೨೧

ಯಾರ ಅನುಗ್ರಹವೂ ನಿಷ್ಫಲವೋ, ಕೋಪವೂ ವ್ಯರ್ಥವೋ ಅವನು ಸ್ವಾಮಿಯಾಗಲೆಂದು ಯಾರೂ ಬಯಸುವುದಿಲ್ಲ. ಹೆಂಗಸರು ಷಂಡನಾದ ಗಂಡನನ್ನು ಹೇಗೆ ಬಯಸುವುದಿಲ್ಲವೋ ಹಾಗೆ.

**ಪಾನಂ ಸ್ತ್ರೀ ಮೃಗಯಾ ದ್ಯೂತಂ ಅರ್ಥದೂಷಣಮೇವ ಚ ।**
**ವಾಗ್ದಂಡಯೋಶ್ಚ ಪಾರುಷ್ಯಂ ವ್ಯಸನಾನಿ ಮಹೀಭುಜಾಮ್ ॥ ೪೧**

-ಸುಭಾಷಿತರತ್ನಭಾಂಡಾಗಾರ

ಕುಡಿತ, ಸ್ತ್ರೀಯರಲ್ಲಿ ಅತ್ಯಾಸಕ್ತಿ, ಬೇಟೆ, ಜೂಜು, ಹಣವನ್ನು ಅತಿಯಾಗಿ ದುರುಪಯೋಗಮಾಡುವುದು, ಒರಟುಮಾತು, ಔಚಿತ್ಯ ಮೀರಿದ ದಂಡ ಇವು ಏಳು ರಾಜರಲ್ಲಿರಬಾರದ ಕೆಟ್ಟ ಗುಣಗಳು.

**ಪಿತಾಽಚಾರ್ಯಃ ಸುಹೃನ್ಮಾತಾ ಭಾರ್ಯಾ ಪುತ್ರಃ ಪುರೋಹಿತಃ ।**
**ನಾದಂಡ್ಯೋ ನಾಮ ರಾಜ್ಞೋಽಸ್ತಿ ಯಃ ಸ್ವಧರ್ಮೇ ನ ತಿಷ್ಠತಿ ॥ ೪೨**

-ಮನುಸ್ಮೃತಿ, ೮-೩೩೫

ತಂದೆ, ಆಚಾರ್ಯ, ಮಿತ್ರ, ತಾಯಿ, ಹೆಂಡತಿ, ಮಗ, ಪುರೋಹಿತ ಇವರನ್ನೂ ಸಹ ಧರ್ಮವನ್ನು ಮೀರಿದರೆ ಅರಸನು ದಂಡಿಸದೆ ಬಿಡಬಾರದು.

**ಪುತ್ರಾ ಇವ ಪಿತುರ್ಗೇಹೇ ವಿಷಯೇ ಯಸ್ಯ ಮಾನವಾಃ ।**
**ನಿರ್ಭಯಾ ವಿಚರಿಷ್ಯಂತಿ ಸ ರಾಜಾ ರಾಜಸತ್ತಮಃ ॥ ೪೩**

-ಸುಭಾಷಿತಸುಧಾನಿಧಿ

ತಂದೆಯ ಮನೆಯಲ್ಲಿ ಮಕ್ಕಳು ಹೇಗೋ ಹಾಗೆ ಯಾರ ರಾಜ್ಯದಲ್ಲಿ ಜನರು ನಿರ್ಭಯರಾಗಿ ಓಡಾಡುವರೋ ಆ ರಾಜನೀಗ ರಾಜಶ್ರೇಷ್ಠ.

**ಪ್ರೋಕ್ತಃ ಪ್ರತ್ಯುತ್ತರಂ ನಾಹ ವಿರುದ್ಧಂ ಪ್ರಭುಣಾ ಚ ಯಃ ।**
**ನ ಸಮೀಪೇ ಹಸತ್ಯುಚ್ಚೈಃ ಸ ಭವೇದ್ರಾಜವಲ್ಲಭಃ ॥ ೪೪**

-ಪಂಚತಂತ್ರ, ಮಿತ್ರಭೇದ-೬೧

ಒಡೆಯನು ಹೇಳಿದ ಮಾತಿಗೆ ಯಾರು ಎದುರುಮಾತಾಡುವುದಿಲ್ಲವೋ, ಯಾರು ಒಡೆಯನ ಸಮೀಪದಲ್ಲಿ ಗಟ್ಟಿಯಾಗಿ ನಗುವುದಿಲ್ಲವೋ ಅವನು ರಾಜನಿಗೆ ಪ್ರೀತಿಪಾತ್ರನಾಗುತ್ತಾನೆ.

**ಭವೇತ್ಸ್ವ ಪರರಾಷ್ಟ್ರಾಣಾಂ ಕಾರ್ಯಾಕಾರ್ಯವಿಲೋಕನೇ ।**
**ಚಾರಚಕ್ಷುರ್ಮಹೀಭರ್ತುರ್ಯಸ್ಯ ನಾಸ್ತ್ಯಂಧ ಏವ ಸಃ ॥ ೪೫**

-ಹಿತೋಪದೇಶ, ವಿಗ್ರಹ-೩೩

ತನ್ನ ರಾಜ್ಯದಲ್ಲಿ ಹಾಗೂ ಇತರ ದೇಶಗಳಲ್ಲಿ ಮಾಡಬೇಕಾದ್ದು ಮತ್ತು ಮಾಡಬಾರದುದನ್ನು ಕಾಣಲು ರಾಜನಿಗೆ ಗೂಢಚಾರನೆಂಬ ಕಣ್ಣುಗಳಿರಬೇಕು; ಇದಿಲ್ಲದವನು ಕುರುಡನೇ ಸರಿ.

**ಅಶಕ್ತಸ್ತು ಭವೇತ್ಸಾಧುಃ ಬ್ರಹ್ಮಚಾರೀ ತು ನಿರ್ಧನಃ ।**
**ರೋಗಾರ್ತೋ ದೈವಭಕ್ತಃ ಸ್ಯಾತ್ ವೃದ್ಧಾ ನಾರೀ ಪತಿವ್ರತಾ ॥ ೪೬**

ಕೈಲಾಗದವನು ಒಳ್ಳೆಯವನಾಗುತ್ತಾನೆ. ಹಣವಿಲ್ಲದವನು ಬ್ರಹ್ಮಚಾರಿಯಾಗಿ ಉಳಿಯುತ್ತಾನೆ. ರೋಗದಿಂದ ನರಳುವವನಿಗೆ ದೇವರಲ್ಲಿ ಭಕ್ತಿಯುಂಟಾಗುತ್ತದೆ. ಮುದಿಯಾದ ಹೆಂಗಸು ಸಹಜವಾಗಿಯೇ ಪತಿವ್ರತೆಯಾಗುವಳು.

**ಮೂಲಚ್ಛೇದಂ ರಿಪೋಃ ಕುರ್ಯಾದಥವಾ ನ ಪ್ರಕೋಪಯೇತ್ ।**
**ಅನ್ಯಥಾಸೌ ವಿನಾಶಾಯ ಪಾದಸ್ಪೃಷ್ಟ ಇವೋರಗಃ ॥ ೪೭**

-ಭಾರತಮಂಜರೀ, ೧೩-೫೭೧

ವೈರಿಯನ್ನು ಬುಡಸಹಿತ ನಾಶಮಾಡಬೇಕು. ಇಲ್ಲವೆ, ಅವನನ್ನು ಕೆಣಕಬಾರದು. ಹಾಗಿಲ್ಲದಿದ್ದರೆ ಕಾಲಿನಿಂದ ತುಳಿಯಲ್ಪಟ್ಟ ಹಾವಿನಂತೆ ನಮ್ಮ ವಿನಾಶಕ್ಕೆ ಕಾರಣನಾಗುತ್ತಾನೆ.

**ಮೂಲಮರ್ಥಸ್ಯ ಸಂರಕ್ಷ್ಯಮೇಷ ಕಾರ್ಯವಿದಾಂ ನಯಃ ।**
**ಮೂಲೇ ಹಿ ಸತಿ ಸಿಧ್ಯಂತಿ ಗುಣಾಃ ಪುಷ್ಪಫಲೋದ್ಗಮಾಃ ॥ ೪೮**

-ರಾಮಾಯಣ, ಕಿಷ್ಕಂಧಾ. ೬೫-೨೫

ಸಮಸ್ತಕಾರ್ಯದಲ್ಲಿಯೂ ಮೂಲಭೂತವಾದ್ದನ್ನು ಉಳಿಸಿಕೊಳ್ಳಬೇಕೆಂಬುದು ಕಾರ್ಯಜ್ಞರ ನೀತಿ. ವೃಕ್ಷದ ಮೂಲವನ್ನು ಸರಿಯಾಗಿ ನೋಡಿಕೊಂಡರೆ ತಾನೆ ಪುಷ್ಪಫಲಾದಿ ಪ್ರಯೋಜನಗಳು ದೊರಕುತ್ತವೆ?

**ಯ ಉಪೇಕ್ಷೇತ ಶತ್ರುಂ ಸ್ವಂ ಪ್ರಸರಂತಂ ಯದೃಚ್ಛಯಾ ।**
**ರೋಗಂ ಚಾಲಸ್ಯಸಂಯುಕ್ತಂ ಸ ಶನೈಸ್ತೇನ ಹನ್ಯತೇ ॥** ೪೯

-ಪಂಚತಂತ್ರ, ಕಾಕೋಲೂಕೀಯ, ೨

ಸ್ವೇಚ್ಛೆಯಾಗಿ ಬೆಳೆಯುತ್ತಿರುವ ಶತ್ರುವನ್ನು ಯಾವನು ಉದಾಸೀನಮಾಡುವನೋ, ಯಾವನು ಸೋಮಾರಿತನದಿಂದ ಕೂಡಿ ರೋಗವನ್ನು ಉದಾಸೀನಮಾಡುವನೋ, ಅವನು ಅದರಿಂದಲೇ ಕ್ರಮಕ್ರಮವಾಗಿ ಕೊಲ್ಲಲ್ಪಡುತ್ತಾನೆ.

**ಯತ್ ಕರೋತಿ ಪರಂ ಧರ್ಮಂ ಮುನಿರ್ಮೂಲಫಲಾಶನಃ ।**
**ತತ್ರ ರಾಜ್ಞಶ್ಚತುರ್ಭಾಗಃ ಪ್ರಜಾ ಧರ್ಮೇಣ ರಕ್ಷತಃ ॥** ೫೦

-ರಾಮಾಯಣ, ಅರಣ್ಯ. ೬-೧೪

ಫಲಮೂಲಗಳನ್ನು ತಿಂದುಕೊಂಡು ತಪಸ್ಸನ್ನಾಚರಿಸುವ ಮುನಿಯು ಎಷ್ಟು ಧರ್ಮವನ್ನು ಸಂಪಾದಿಸುವನೋ ಅದರಲ್ಲಿ ನಾಲ್ಕನೆಯ ಒಂದು ಭಾಗವು ಧರ್ಮನಿಷ್ಠನಾಗಿ ಪ್ರಜೆಗಳನ್ನು ಪಾಲಿಸುವ ರಾಜನಿಗೆ ಸಲ್ಲುತ್ತದೆ.

**ಯಥಾ ದೃಷ್ಟಿಃ ಶರೀರಸ್ಯ ನಿತ್ಯಮೇವ ಪ್ರವರ್ತತೇ ।**
**ತಥಾ ನರೇಂದ್ರೋ ರಾಷ್ಟ್ರಸ್ಯ ಪ್ರಭವಃ ಸತ್ಯಧರ್ಮಯೋಃ ॥** ೫೧

-ರಾಮಾಯಣ, ಅಯೋಧ್ಯಾ. ೬೭-೩೩

ದೇಹಕ್ಕೆ ಕಣ್ಣಿರುವಂತೆ ರಾಜನು ರಾಷ್ಟ್ರದ ಕಣ್ಣಾಗಿ ಹಿತಾಹಿತಗಳನ್ನು ನೋಡಿ ಕೊಳ್ಳುತ್ತಾನೆ. ಸತ್ಯಧರ್ಮಗಳಿಗೆ ಅವನು ಮೂಲಕಾರಣ.

**ಯಥಾ ಹ್ಯನುದಕಾ ನದ್ಯೋ ಯಥಾ ವಾಪ್ಯತೃಣಂ ವನಂ ।**
**ಅಗೋಪಾಲಾ ಯಥಾ ಗಾವಸ್ತಥಾ ರಾಷ್ಟ್ರಮರಾಜಕಮ್ ॥** ೫೨

-ರಾಮಾಯಣ, ಅಯೋಧ್ಯಾ. ೬೭-೨೯

ರಾಜನಿಲ್ಲದ ರಾಷ್ಟ್ರವು ನೀರಿಲ್ಲದ ನದಿಯಂತೆ ಆಗುವುದು. ಅದು ಹುಲ್ಲಿಲ್ಲದ ಕಾಡಿನಂತೆ ಕಾವಲಿಲ್ಲದ ದನಗಳ ಮಂದೆಯಂತೆ.

**ಯಥಾ ನೇಚ್ಛತಿ ನೀರೋಗಃ ಕದಾಚಿತ್ಸುಚಿಕಿತ್ಸಕಂ ।**
**ತಥಾಪದ್ರಹಿತೋ ರಾಜಾ ಸಚಿವಂ ನಾಭಿವಾಂಛತಿ ॥** ೫೩

-ಪಂಚತಂತ್ರ, ಮಿತ್ರಭೇದ-೧೨೯

ರೋಗರಹಿತನು ಯಾವಾಗಲೂ ವೈದ್ಯನನ್ನು ಹೇಗೆ ಬಯಸುವುದಿಲ್ಲವೋ ಹಾಗೆಯೇ ತೊಂದರೆಗೆ ಸಿಲುಕದ ರಾಜನು ಮಂತ್ರಿಯನ್ನು ಇಚ್ಛಿಸುವುದಿಲ್ಲ.

**ಯಥಾ ಮಧು ಸಮಾದತ್ತೇ ರಕ್ಷನ್ ಪುಷ್ಪಾಣಿ ಷಟ್ಪದಃ ।**
**ತದ್ವದರ್ಥಾನ್ ಮನುಷ್ಯೇಭ್ಯಃ ಆದದ್ಯಾದವಿಹಿಂಸಯಾ ॥**
**ಪುಷ್ಪಂ ಪುಷ್ಪಂ ವಿಚಿನ್ವೀತ ಮೂಲಚ್ಛೇದಂ ನ ಕಾರಯೇತ್ ।**
**ಮಾಲಾಕಾರ ಇವಾರಾಮೇ ನ ಯಥಾಂಗಾರಕಾರಕಃ ॥** ೫೪

-ಮಹಾಭಾರತ, ಉದ್ಯೋಗ. ೩೪-೧೭, ೧೮

ದುಂಬಿ ಹೂಗಳಿಗೆ ತೊಂದರೆ ಮಾಡದೆ ಬಂಡನ್ನು ಹೀರುವಂತೆ, ರಾಜನು ಜನರಿಗೆ ಹಿಂಸೆ ಕೊಡದೆ ಅವರಿಂದ ಹಣವನ್ನು ವಸೂಲುಮಾಡಬೇಕು. ಹೂವಾಡಿಗನು ತೋಟದಲ್ಲಿ ಹೂವನ್ನು ಕೀಳುವಂತೆ ಸಂಗ್ರಹಿಸಬೇಕು. ಇದ್ದಿಲು ಮಾಡತಕ್ಕವನಂತೆ ಮೂಲ ಛೇದವನ್ನೇ ಮಾಡಬಾರದು.

**ಯದಿ ನ ಪ್ರಣಯೇದ್ರಾಜಾ ದಂಡಂ ದಂಡೇಷ್ವ ತಂದ್ರಿತಃ ।**
**ಶೂಲೇ ಮತ್ಸ್ಯಾನಿ ವಾಪಕ್ಷ್ಯನ್ ದುರ್ಬಲಾನ್ ಬಲವತ್ತರಾಃ ॥** ೫೫

-ಮನುಸ್ಮೃತಿ, ೭-೨೦

ಅರಸನು ಎಚ್ಚರಿಕೆಯಿಂದ ಅಪರಾಧಿಗಳನ್ನು ದಂಡಿಸದೇ ಹೋದರೆ ಬಲಿಷ್ಠರು ಬಲಹೀನರನ್ನು ಶೂಲದಲ್ಲಿ ಚುಚ್ಚಿ ಮೀನನ್ನು ಬೇಯಿಸುವಂತೆ ಬೇಯಿಸಿಬಿಡುತ್ತಿದ್ದರು.

**ಯಸ್ತು ಹಿತ್ವಾ ಮತಂ ಭರ್ತುಃ ಸ್ವಮತಂ ಸಂಪ್ರಭಾಷತೇ ।**
**ಅನುಕ್ತವಾದೀ ದೂತಃ ಸನ್ ಸ ದೂತೋ ವಧಮರ್ಹತಿ ॥** ೫೬

-ರಾಮಾಯಣ, ಯುದ್ಧ. ೨೦-೧೯

ಯಾವ ದೂತನು ತನ್ನ ಒಡೆಯನ ಮಾತನ್ನು ತಿಳಿಸದೆ, ತನ್ನ ಅಭಿಪ್ರಾಯವನ್ನು ಹೇಳುವನೋ, ಹೇಳದ್ದನ್ನು ಹೇಳುವ ಆ ದೂತನು ವಧೆಗೆ ಅರ್ಹನು.

**ಯಾನಿ ಮಿಥ್ಯಾಭಿಶಸ್ತಾನಾಂ ಪತಂತ್ಯಸ್ರಾಣಿ ರಾಘವ ।**
**ತಾನಿ ಪುತ್ರಪಶೂನ್ ಘ್ನಂತಿ ಪ್ರೀತ್ಯರ್ಥಮನುಶಾಸತಃ ॥** ೫೭

-ರಾಮಾಯಣ, ಅಯೋಧ್ಯಾ. ೧೦೦-೫೯

ಭರತ, ರಾಜನು ತನ್ನ ಸೌಖ್ಯಕ್ಕಾಗಿ ರಾಜ್ಯವನ್ನಾಳುತ್ತಿದ್ದರೆ ಪ್ರಜೆಗಳು ಅನ್ಯಾಯಕ್ಕೆ ಗುರಿಯಾಗಿ ಕಣ್ಣೀರು ಸುರಿಸುತ್ತಾರೆ. ಪ್ರಜೆಗಳ ಕಣ್ಣೀರು ರಾಜನ ಸಂತತಿಯನ್ನೂ ಪಶು ಮುಂತಾದ ಸಂಪತ್ತನ್ನೂ ನಾಶಮಾಡುತ್ತದೆ. (ಶ್ರೀರಾಮನ ನುಡಿ)

**ಯೇ ತೀಕ್ಷ್ಣಮಂತ್ರಾಃ ಸಚಿವಾ ಭಜ್ಯಂತೇ ಸಹ ತೇನ ವೈ ।**
**ವಿಷಮೇಷು ರಥಾಃ ಶೀಘ್ರಾ ಮಂದಸಾರಥಯೋ ಯಥಾ ॥** ೫೮

-ರಾಮಾಯಣ, ಅರಣ್ಯ. ೪೧-೧೨

ಮಂತ್ರಿಗಳು ಉಗ್ರವಾದಿಗಳಾಗಿ ತೀಕ್ಷ್ಣಮಾರ್ಗವನ್ನು ಬೋಧಿಸತಕ್ಕವರಾದರೆ, ತಮ್ಮ ಪ್ರಭುವಿನೊಡನೆ ತಾವೂ ನಾಶಹೊಂದುತ್ತಾರೆ. ಸಾಮರ್ಥ್ಯವಿಲ್ಲದ ಸಾರಥಿಯು ಹಳ್ಳತಿಟ್ಟುಗಳಲ್ಲಿ ಶೀಘ್ರವಾಗಿ ಓಡಿಸುವ ರಥಗಳಂತೆ ಉರುಳುತ್ತಾರೆ.

**ರಾಜನ್ ದುಧುಕ್ಷಸಿ ಯದಿ ಕ್ಷಿತಿಧೇನುಮೇತಾಂ**
**ತೇನಾದ್ಯ ವತ್ಸಮಿವ ಲೋಕಮಮುಂ ಪುಷಾಣ ।**
**ತಸ್ಮಿಂಶ್ಚ ಸಮ್ಯಗನಿಶಂ ಪರಿಪೋಷ್ಯಮಾಣೇ**
**ನಾನಾಫಲೈಃ ಫಲತಿ ಕಲ್ಪಲತೇವ ಭೂಮಿಃ ॥ ೫೯**

-ನೀತಿಶತಕ-೪೪

ರಾಜನೇ, ನೀನು ಈ ಭೂಮಿಯೆಂಬ ಹಸುವನ್ನು ಕರೆಯಲು ಇಚ್ಛಿಸಿದ್ದೇ ಆದರೆ, ಈ ಪ್ರಜೆಗಳನ್ನು ಕರುವಿನಂತೆ ಬೆಳಸು. ಹೀಗೆ ಯಾವಾಗಲೂ ಪ್ರಜೆಗಳು ಸಂರಕ್ಷಿಸಲ್ಪಟ್ಟರೆ ಭೂಮಿಯೂ ಕೂಡ ನಾನಾ ಬಗೆಯ ಫಲಗಳಿಂದ ಕೂಡಿ ಕಲ್ಪವೃಕ್ಷದಂತೆ ಫಲಿಸುತ್ತದೆ.

**ರಾಜಭಿರ್ಧೃತದಂಡಾಸ್ತು ಕೃತ್ವಾ ಪಾಪಾನಿ ಮಾನವಾಃ ।**
**ನಿರ್ಮಲಾಃ ಸ್ವರ್ಗಮಾಯಾಂತಿ ಸಂತಃ ಸುಕೃತಿನೋ ಯಥಾ ॥ ೬೦**

-ರಾಮಾಯಣ, ಕಿಷ್ಕಿಂಧಾ. ೧೮-೩೨

ಪಾಪಕರ್ಮಗಳನ್ನಾಚರಿಸಿದವರು ರಾಜರಿಂದ ತಕ್ಕ ಶಿಕ್ಷೆಯನ್ನು ಪಡೆದರೆ, ಅವರ ಪಾಪಕರ್ಮಗಳೆಲ್ಲವೂ ನೀಗುತ್ತವೆ. ಪುಣ್ಯಶಾಲಿಗಳಾದ ಸಜ್ಜನರಂತೆ ಅವರು ಸದ್ಗತಿಯನ್ನು ಪಡೆಯುತ್ತಾರೆ.

**ರಾಜಸೇವಾ ಮನುಷ್ಯಾಣಾಮಸಿಧಾರಾವಲೇಹನಂ ।**
**ಪಂಚಾನನಪರಿಷ್ವಂಗೋ ವ್ಯಾಲೀವದನಚುಂಬನಮ್ ॥ ೬೧**

-ಕುವಲಯಾನಂದ

ಮನುಷ್ಯರಿಗೆ ರಾಜಸೇವೆಯೆಂಬುದು ಕತ್ತಿಯ ಅಲಗನ್ನು ನೆಕ್ಕಿದಂತೆ. ಸಿಂಹವನ್ನು ಅಪ್ಪಿಕೊಂಡಂತೆ. ಸರ್ಪದ ಮುಖವನ್ನು ಚುಂಬಿಸಿದಂತೆ.

**ರಾಜಾ ಧರ್ಮಶ್ಚ ಕಾಮಶ್ಚ ದ್ರವ್ಯಾಣಾಂ ಚೋತ್ತಮೋ ನಿಧಿಃ ।**
**ಧರ್ಮಃ ಶುಭಂ ವಾ ಪಾಪಂ ವಾ ರಾಜಮೂಲಂ ಪ್ರವರ್ತತೇ ॥ ೬೨**

-ರಾಮಾಯಣ, ಅರಣ್ಯ ೫೦-೧೦

ರಾಜನೇ ಧರ್ಮಕಾಮಗಳಿಗೆ ಪ್ರವರ್ತಕ. ಅವನೇ ಅರ್ಥಕ್ಕೆ ನಿಧಿ. ಧರ್ಮವಾಗಲಿ, ಒಳ್ಳೆಯದಾಗಲಿ, ಕೆಟ್ಟದಾಗಲಿ-ರಾಜನ ಪ್ರೇರಣೆಯಿಂದ ನಡೆಯುತ್ತದೆ.

**ರಾಜಾನಾಂ ಪ್ರಥಮಂ ವಿಂದೇತ್ತತೋ ಭಾರ್ಯಾಂ ತತೋ ಧನಂ ।**
**ರಾಜನ್ಯಸತಿ ಲೋಕಸ್ಯ ಕುತೋ ಭಾರ್ಯಾ ಕುತೋ ಧನಮ್ ॥ ೬೩**

-ಮಹಾಭಾರತ, ಶಾಂತಿ. ೫೭-೪೧

ಮೊದಲು ರಾಜನನ್ನು ಪಡೆದುಕೊಳ್ಳಬೇಕು. ಅನಂತರ ಮಡದಿ, ಹಣ. ಲೋಕಕ್ಕೆ ರಾಜನಿಲ್ಲದಿದ್ದರೆ ಮಡದಿಯೆಲ್ಲಿ? ಹಣವೆಲ್ಲಿ?

**ರಾಜ್ಯಂ ಹಿ ಸುಮಹತ್ತಂತ್ರಂ ಧಾರ್ಯತೇ ನಾಕೃತಾತ್ಮಭಿಃ ।**
**ನ ಶಕ್ಯಂ ಮೃದುನಾ ವೋಢುಮಾಯಾಸಸ್ಥಾನಮುತ್ತಮಮ್ ॥ ೬೪**

-ಮಹಾಭಾರತ, ಶಾಂತಿ. ೫೪-೨೧

ರಾಜಕಾರ್ಯವೆಂಬುದು ಮಹತ್ತರವಾದ ಉದ್ಯೋಗ. ಅಜಿತೇಂದ್ರಿಯರಿಂದ ಅದನ್ನು ಹೊರಲು ಸಾಧ್ಯವಿಲ್ಲ. ಆಯಾಸವಾಗತಕ್ಕ ಮಹಾಭಾರವನ್ನು ಮೃದುವಾದವನು ಹೊರಲಾರ.

**ರಾಜ್ಞಿ ಧರ್ಮಿಣಿ ಧರ್ಮಿಷ್ಠಾಃ ಪಾಪೇ ಪಾಪಪರಾಃ ಸದಾ ।**
**ರಾಜಾನಮನುವರ್ತಂತೇ ಯಥಾ ರಾಜಾ ತಥಾ ಪ್ರಜಾಃ ॥ ೬೫**

-ಭೋಜಪ್ರಬಂಧ

ರಾಜನು ಧರ್ಮಿಷ್ಠನಾದರೆ ಪ್ರಜೆಗಳು ಧರ್ಮಿಷ್ಠರಾಗಿರುತ್ತಾರೆ. ಅವನು ಪಾಪಿಯಾದರೆ ಇವರೂ ಸದಾ ಪಾಪಿಗಳಾಗಿರುತ್ತಾರೆ. ಪ್ರಜೆಗಳು ರಾಜನನ್ನು ಅನುಸರಿಸುತ್ತಾರೆ. ರಾಜನಿದ್ದಂತೆ ಪ್ರಜೆ.

**ರಾಜ್ಞೋ ಹಿ ರಕ್ಷಾಧಿಕೃತಾಃ ಪರಸ್ವಾದಾಯಿನಃ ಶಠಾಃ ।**
**ಭೃತ್ಯಾ ಭವಂತಿ ಪ್ರಾಯೇಣ ತೇಭ್ಯೋ ರಕ್ಷೇದಿಮಾಃ ಪ್ರಜಾಃ ॥ ೬೬**

-ಮನುಸ್ಮೃತಿ, ೭-೧೨೩

ಅರಸನಿಂದ ನೇಮಿಸಲ್ಪಟ್ಟ ಅಧಿಕಾರಿಗಳು ದುಷ್ಟರಾಗಿ ಇತರರ ಹಣವನ್ನು ಸೆಳೆಯುತ್ತಾರೆ. ಆದುದರಿಂದ ಪ್ರಜೆಗಳನ್ನು ಅಂತಹವರಿಂದ ಕಾಪಾಡುವುದು ಆವಶ್ಯಕ.

**ಲುಬ್ಧಮರ್ಥೇನ ಗೃಹ್ಣೀಯಾತ್ ಸ್ತಬ್ಧಮಂಜಲಿಕರ್ಮಣಾ ।**
**ಮೂರ್ಖಂ ಛಂದಾನುವೃತ್ತೇನ ಯಾಥಾತಥ್ಯೇನ ಪಂಡಿತಮ್ ॥ ೬೭**

-ಹಿತೋಪದೇಶ, ಸಂಧಿ-೧೦೭

ಹಣದಾಸೆಯಿರುವವನನ್ನು ಹಣದಿಂದ ವಶಪಡಿಸಿಕೊಳ್ಳಬೇಕು. ಗರ್ವಿಷ್ಠನನ್ನು ಕೈಮುಗಿದು ಸಾಧಿಸಬೇಕು. ಮೂರ್ಖನನ್ನು ಅವನ ಮನಸ್ಸನ್ನನುಸರಿಸಿಯೇ ಸಾಧಿಸಬೇಕು. ಸತ್ಯದಿಂದ ಪಂಡಿತನನ್ನು ಒಲಿಸಬೇಕು.

ಲುಬ್ಧಸ್ಯ ನಶ್ಯತಿ ಯಶಃ ಪಿಶುನಸ್ಯ ಮೈತ್ರೀ
ನಷ್ಟಕ್ರಿಯಸ್ಯ ಕುಲಮರ್ಥಪರಸ್ಯ ಧರ್ಮಃ ।
ವಿದ್ಯಾಫಲಂ ವ್ಯಸನಿನಃ ಕೃಪಣಸ್ಯ ಸೌಖ್ಯಂ
ರಾಜ್ಯಂ ಪ್ರಮತ್ತಸಚಿವಸ್ಯ ನರಾಧಿಪಸ್ಯ ॥ ೬೮

-ಪಂಚತಂತ್ರ, ಕಾಕೋಲೂಕೀಯ-೨೩೦

ಲೋಭಿಯ ಯಶಸ್ಸು ನಾಶವಾಗುತ್ತದೆ. ಚಾಡಿ ಹೇಳುವವನಿಗೆ ಸ್ನೇಹ ನಷ್ಟವಾಗುತ್ತದೆ. ವಿಹಿತವಾದ ಕ್ರಿಯೆಗಳನ್ನು ಮಾಡದವನ ಕುಲ ನಾಶವಾಗುತ್ತದೆ. ಹಣವನ್ನೇ ಗಣಿಸುವವನಿಗೆ ಧರ್ಮನಾಶವಾಗುತ್ತದೆ. ದುರ್ವ್ಯಸನಗಳಿಗೆ ತುತ್ತಾದವನಿಗೆ ವಿದ್ಯೆಯ ಫಲ ಸಿಗುವುದಿಲ್ಲ. ಜಿಪುಣನಿಗೆ ಸೌಖ್ಯವಿಲ್ಲವಾಗುತ್ತದೆ. ಹಾಗೆಯೇ ಮೈಮರೆತ ಮಂತ್ರಿಯನ್ನು ಹೊಂದಿರುವ ರಾಜನ ರಾಜ್ಯ ನಾಶವಾಗುತ್ತದೆ.

ವೈರಾಗ್ಯಮಿವ ವೃದ್ಧಾನಾಮೌಚಿತ್ಯಂ ಮಹತಾಮಿವ ।
ಶುಚಿಶೀಲಮಿವಾರ್ಯಾಣಾಂ ಸತ್ಯಂ ರಾಜ್ಞಾಂ ವಿಭೂಷಣಮ್ ॥ ೬೯

-ರಾಮಾಯಣಮಂಜರೀ, ಅರಣ್ಯ-೨೭೭

ವೃದ್ಧರಿಗೆ ವೈರಾಗ್ಯವೂ, ಮಹಾತ್ಮರಿಗೆ ಔಚಿತ್ಯಜ್ಞಾನವೂ, ಪೂಜ್ಯರಿಗೆ ಶುದ್ಧವಾದ ನಡತೆಯೂ ಭೂಷಣ. ಹಾಗೆಯೇ ರಾಜರಿಗೆ ಸತ್ಯವೇ ಭೂಷಣ.

ಶತ್ರುಪಕ್ಷಂ ಸಮೃದ್ಧ್ಯಂತಂ ಯೋ ಮೋಹಾತ್ ಸಮುಪೇಕ್ಷತೇ ।
ವ್ಯಾಧಿರಾಪ್ಯಾಯಿತ ಇವ ತಸ್ಯ ಮೂಲಂ ಛಿನತ್ತಿ ಸಃ ॥ ೭೦

-ಮಹಾಭಾರತ, ಸಭಾ. ೫೫-೧೬

ಬೆಳೆಯುತ್ತಿರುವ ಶತ್ರುಪಕ್ಷವನ್ನು ಯಾವನು ಮೋಹದಿಂದ ಉಪೇಕ್ಷಿಸುವನೋ ಬೆಳೆದ ರೋಗದಂತೆ, ಅವನ ಬುಡವನ್ನೇ ಅದು ತುಂಡರಿಸುತ್ತದೆ!

ಶತ್ರುಮುನ್ಮೂಲಯೇತ್ಪ್ರಾಜ್ಞಃ ತೀಕ್ಷ್ಣಂ ತೀಕ್ಷ್ಣೇನ ಶತ್ರುಣಾ ।
ವ್ಯಥಾಕರಂ ಸುಖಾರ್ಥಾಯ ಕಂಟಕೇನೇವ ಕಂಟಕಮ್ ॥ ೭೧

-ಪಂಚತಂತ್ರ, ಲಬ್ಧಪ್ರಣಾಶ-೧೯

ಸುಖವುಂಟಾಗುವುದಕ್ಕಾಗಿ ನೋವುಂಟುಮಾಡುವ ಮುಳ್ಳೊಂದನ್ನು ಮತ್ತೊಂದು ಮುಳ್ಳಿನಿಂದ ಹೇಗೋ ಹಾಗೆ ಬುದ್ಧಿವಂತನಾದವನು ಪ್ರಬಲನಾದ ಒಬ್ಬ ಶತ್ರುವನ್ನು ಪ್ರಬಲನಾದ ಮತ್ತೊಬ್ಬ ಶತ್ರುವಿನಿಂದ ನಿರ್ಮೂಲನ ಮಾಡಬೇಕು.

**ಶ್ರೀಮಾನಜನನಿಂದ್ಯಶ್ಚ ಶೂರಶ್ಚಾಪ್ಯವಿಕತ್ಥನಃ ।**
**ಸಮದೃಷ್ಟಿಃ ಪ್ರಭುಶ್ಚೈವ ದುರ್ಲಭಾಃ ಪುರುಷಾಸ್ತ್ರಯಃ ॥** ೭೨

-ಯೋಗವಾಸಿಷ್ಠ, ವೈರಾಗ್ಯ. ೧೩-೯

ಜನರ ನಿಂದೆಗೆ ಗುರಿಯಾಗದ ಧನಿಕ, ಆತ್ಮಪ್ರಶಂಸೆ ಮಾಡಿಕೊಳ್ಳದ ಶೂರ, ಸಮದೃಷ್ಟಿಯುಳ್ಳ ಪ್ರಭು-ಈ ಮೂವರು ದುರ್ಲಭ.

**ಶುಷ್ಕೈಃ ಕಾಷ್ಠೈರ್ಭವೇತ್ ಕಾರ್ಯಂ ಲೋಷ್ಟೈರಪಿ ಚ ಪಾಂಸುಭಿಃ ।**
**ನ ತು ಸ್ಥಾನಾತ್ ಪರಿಭ್ರಷ್ಟೈಃ ಕಾರ್ಯಂ ಸ್ಯಾದ್ವಸುಧಾಧಿಪೈಃ ॥** ೭೩

-ರಾಮಾಯಣ, ಅರಣ್ಯ. ೩೩-೧೮

ಒಣಗಿದ ಕಟ್ಟಿಗೆಗಳಿಂದಲೂ ಪ್ರಯೋಜನ ಉಂಟು. ಮಣ್ಣುಹೆಂಟೆಗಳಿಂದಲೂ ಕಡೆಗೆ ಧೂಳಿನಿಂದಲೂ ಉಪಯೋಗವುಂಟು. ಆದರೆ ಸ್ಥಾನಭ್ರಷ್ಟರಾದ ರಾಜರಿಂದ ಯಾವ ಉಪಯೋಗವೂ ಇಲ್ಲ.

**ಸಕ್ತಂ ಗ್ರಾಮ್ಯೇಷು ಭೋಗೇಷು ಕಾಮವೃತ್ತಂ ಮಹೀಪತಿಂ ।**
**ಲುಬ್ಧಂ ನ ಬಹು ಮನ್ಯಂತೇ ಶ್ಮಶಾನಾಗ್ನಿಮಿವ ಪ್ರಜಾಃ ॥** ೭೪

-ರಾಮಾಯಣ, ಅರಣ್ಯ. ೩೩-೩

ಗ್ರಾಮ್ಯಭೋಗಗಳಲ್ಲಿ ಆಸಕ್ತನಾಗಿ ಮನಬಂದಂತೆ ನಡೆಯುವ ಸುಖಲೋಲುಪನಾದ ರಾಜನನ್ನು ಪ್ರಜೆಗಳು ಗೌರವಿಸುವುದಿಲ್ಲ. ಮಸಣದ ಬೆಂಕಿಯನ್ನು ಕಂಡಂತೆ ಹೀನವಾಗಿ ಕಾಣುತ್ತಾರೆ.

**ಸತ್ಯಾನೃತಾ ಚ ಪರುಷಾ ಪ್ರಿಯವಾದಿನೀ ಚ**
**ಹಿಂಸ್ರಾ ದಯಾಳುರಪಿ ಚಾರ್ಥಪರಾ ವದಾನ್ಯಾ ।**
**ಭೂರಿವ್ಯಯಾ ಪ್ರಚುರವಿತ್ತಸಮಾಗಮಾ ಚ**
**ವೇಶ್ಯಾಂಗನೇವ ನೃಪನೀತಿರನೇಕರೂಪಾ ॥** ೭೫

-ನೀತಿಶತಕ-೩೮

ಸತ್ಯ ಹೇಳುವುದು ಹಾಗು ಸುಳ್ಳು ಹೇಳುವುದು, ನಿಷ್ಠುರವಾಗಿ ಮಾತಾಡುವುದು ಹಾಗೂ ಪ್ರಿಯವಾದಿನಿಯಾಗಿರುವುದು, ಹಿಂಸಕಳಾಗಿರುವುದು, ದಯಾಳುವಾಗಿರುವುದು, ಹಣದಲ್ಲಿ ಆಸಕ್ತಿ ಹೊಂದಿರುವುದು ಮತ್ತು ಉದಾರಿಯಾಗಿರುವುದು, ಹೆಚ್ಚು ವೆಚ್ಚ ಮಾಡುವುದು ಮತ್ತು ಹೆಚ್ಚು ಹಣವನ್ನು ಕೂಡಿಡುವುದು ಹೀಗೆ ಮಾಡುವ ವೇಶ್ಯಾಂಗನೆಯಂತೆ ರಾಜನೀತಿ ಅನೇಕರೂಪವಾಗಿರುತ್ತದೆ.

**ಸಮರಭರಃ ಸುಭಟಾನಾಂ ಫಲಾನಿ ಕರ್ಶೇಜಪೈಸ್ತು ಭೋಗ್ಯಾನಿ ।**
**ಕರಿದಶನಾ ಇವ ನೃಪತೇರ್ಬಾಹ್ಯಾಃ ಕ್ಲೇಶಾಯ ಖಾದನೇಽಂತಸ್ಥಾಃ ॥ ೭೬**

-ಯಶಸ್ತಿಲಕ, ೩-೨೭೪

ಯುದ್ಧದ ಭಾರವನ್ನು ಹೊರತಕ್ಕವರು ಸೈನಿಕರು. ಅದರ ಫಲವಾಗಿ ಸುಖವನ್ನು ಭೋಗಿಸತಕ್ಕವರು ಚಾಡಿಖೋರರು! ಆನೆಯ ಕೋರೆಹಲ್ಲುಗಳಂತೆ ಹೊರಗೆ ಇರತಕ್ಕವರು ಕಷ್ಟವನ್ನನುಭವಿಸುತ್ತಾರೆ. ಒಳಗಿರತಕ್ಕವರು ಮೆಲ್ಲುತ್ತಾರೆ!

**ಸಾಕಾರೋ ನಿಃಸ್ಪೃಹೋ ವಾಗ್ಮೀ ನಾನಾಶಾಸ್ತ್ರವಿಚಕ್ಷಣಃ ।**
**ಪರಚಿತ್ತಾವಗಂತಾ ಚ ರಾಜ್ಞೋ ದೂತಃ ಸ ಇಷ್ಯತೇ ॥ ೭೭**

-ಪಂಚತಂತ್ರ, ಕಾಕೋಲೂಕೀಯ-೮೬

ಒಳ್ಳೆಯ ರೂಪವಂತನೂ, ನಿಃಸ್ಪೃಹನೂ, ವಾಗ್ಮಿಯೂ, ಅನೇಕ ಶಾಸ್ತ್ರಗಳಲ್ಲಿ ಪರಿಶ್ರಮವುಳ್ಳವನೂ ಮತ್ತೊಬ್ಬರ ಮನಸ್ಸನ್ನರಿಯಬಲ್ಲವನೂ ಆದಂತಹ ದೂತನನ್ನು ರಾಜನು ಬಯಸುತ್ತಾನೆ.

**ಸಾಮಾದಿದಂಡಪರ್ಯಂತೋ ನಯಃ ಪ್ರೋಕ್ತಃ ಸ್ವಯಂಭುವಾ ।**
**ತೇಷಾಂ ದಂಡಸ್ತು ಪಾಪೀಯಾನ್ ತಂ ಪಶ್ಚಾದ್ವಿನಿಯೋಜಯೇತ್ ॥ ೭೮**

-ಪಂಚತಂತ್ರ, ಮಿತ್ರಭೇದ-೪೦೮

ಬ್ರಹ್ಮನು ಹೇಳಿರುವ ನೀತಿ, ಸಾಮ ಮೊದಲಾದುದರಿಂದ ಹಿಡಿದು ದಂಡದವರೆಗೂ ಇರುತ್ತದೆ. ಆದರೆ ಇವುಗಳಲ್ಲಿ ದಂಡವೆಂಬುದು ಬಹಳ ಪಾಪಕರವಾದುದು. ಅದನ್ನು ಕೊನೆಯಲ್ಲಿ ಬಳಸಬೇಕು.

**ಸಾಮ್ನಾ ದಾನೇನ ಭೇದೇನ ಸಮಸ್ತೈರಥವಾ ಪೃಥಕ್ ।**
**ವಿಜೇತುಂ ಪ್ರಯತೇತಾರೀನ್ ನ ಯುದ್ಧೇನ ಕದಾಚನ ॥ ೭೯**

-ಮನುಸ್ಮೃತಿ, ೭-೧೯೮

ಸಾಮದಿಂದ, ಹಣ ಕೊಡುವುದರಿಂದ, ಒಳಸಂಚಿನಿಂದ ಬೇರೆಬೇರೆಯಾಗಿ ಆಗಲಿ, ಎಲ್ಲವನ್ನೂ ಒಟ್ಟಿಗೆ ಉಪಯೋಗಿಸಿಯಾಗಲಿ ಶತ್ರುಗಳನ್ನು ಗೆಲ್ಲಬೇಕು. ಯುದ್ಧವನ್ನು ಮಾಡಬಾರದು.

**ಸಾಮ್ನೈವ ಯತ್ರ ಸಿದ್ಧಿಃ ನ ತತ್ರ ದಂಡೋ ಬುಧೇನ ವಿನಿಯೋಜ್ಯಃ ।**
**ಪಿತ್ತಂ ಯದಿ ಶರ್ಕರಯಾ ಶಾಮ್ಯತಿ ಕೋಽರ್ಥಃ ಪಟೋಲೇನ ॥ ೮೦**

-ಪಂಚತಂತ್ರ, ಮಿತ್ರಭೇದ-೪೦೯

ಎಲ್ಲಿ ಸಾಮೋಪಾಯದಿಂದ ಕೆಲಸವಾಗುವುದೋ ಅಲ್ಲಿ ದಂಡವನ್ನು ತಿಳಿದವನು ಬಳಸಬಾರದು. ಸಕ್ಕರೆಯಿಂದಲೇ ಪಿತ್ತಶಮನವಾಗುವಂತಿದ್ದರೆ ಹಾಗಲಕಾಯಿಯನ್ನೇಕೆ ಬಳಸಬೇಕು?

**ಸ್ತ್ರಿಯಃ ಸಪುರುಷಾಃ ಮಾರ್ಗಂ ಸರ್ವಾಲಂಕಾರಸಂಯುತಾಃ ।**
**ನಿರ್ಭಯಾಃ ಪ್ರತಿಪದ್ಯಂತೇ ಯದಾ ರಕ್ಷತಿ ಭೂಮಿಪಃ ॥ ೮೧**

-ಸುಭಾಷಿತಸುಧಾನಿಧಿ

ರಾಜನು ರಕ್ಷಿಸುವಾಗ ಎಲ್ಲಾ ಅಲಂಕಾರಗಳಿಂದ ಕೂಡಿದ ಹೆಂಗಸರು ಪುರುಷರೊಡನೆ ಬೀದಿಗಳಲ್ಲಿ ನಿರ್ಭಯರಾಗಿ ಸಂಚರಿಸುತ್ತಾರೆ.

**ಹೋಮಾರ್ಥೈರ್ವಿಧಿವತ್ಪ್ರದಾನವಿಧಿನಾ ಸದ್ವಿಪ್ರವೃಂದಾರ್ಚನೈಃ**
**ಯಜ್ಞೈರ್ಭೂರಿಸುದಕ್ಷಿಣೈಃ ಸುವಿಹಿತೈಃ ಸಂಪ್ರಾಪ್ಯತೇ ಯತ್ಫಲಂ ।**
**ಸತ್ತೀರ್ಥಾಶ್ರಮವಾಸ ಹೋಮನಿಯಮೈಶ್ಚಾಂದ್ರಾಯಣಾದ್ಯೈಃ ಕೃತೈಃ**
**ಪುಂಭಿಸ್ತತ್ಫಲಮಾಹವೇ ವಿನಿಹಿತೈಃ ಸಂಪ್ರಾಪ್ಯತೇ ತತ್ಕ್ಷಣಾತ್ ॥ ೮೨**

-ಪಂಚತಂತ್ರ, ಮಿತ್ರಭೇದ-೩೩೫

ಹೋಮಮಾಡುವುದಕ್ಕಾಗಿ ಒಳ್ಳೆಯ ದ್ವಿಜಶ್ರೇಷ್ಠರನ್ನು ಶಾಸ್ತ್ರೋಕ್ತವಾದ ರೀತಿಯಲ್ಲಿ ದಾನಮಾಡುವುದರಿಂದ ಅರ್ಚಿಸುವುದರಿಂದ, ಚೆನ್ನಾಗಿ ನಡೆಸಿದ ಹೆಚ್ಚಾದ ದಕ್ಷಿಣೆಗಳನ್ನುಳ್ಳ ಯಜ್ಞಗಳಿಂದ ಯಾವ ಫಲ ಲಭಿಸುವುದೋ, ಒಳ್ಳೆಯ ತೀರ್ಥಕ್ಷೇತ್ರ, ಆಶ್ರಮ ಇವುಗಳಲ್ಲಿ ವಾಸಮಾಡಿ ನಿಯಮಕ್ಕನುಸಾರ ಹೋಮಮಾಡುವುದರಿಂದ ಅಥವಾ ನಡೆಸಿದ ಚಾಂದ್ರಾಯಣಾದಿ ವ್ರತಗಳಿಂದ ಯಾವ ಫಲ ಲಭಿಸುವುದೋ ಆ ಫಲವನ್ನು ಯುದ್ಧದಲ್ಲಿ ಹತರಾದ ಮನುಷ್ಯರು ಆ ಕ್ಷಣದಲ್ಲಿಯೇ ಪಡೆಯುತ್ತಾರೆ.



# ೧೦. ಧರ್ಮ

**ಅಕುರ್ವನ್ ವಿಹಿತಂ ಕರ್ಮ ನಿಂದಿತಂ ಚ ಸಮಾಚರನ್ ।**
**ಪ್ರಸಕ್ತಶ್ಚೇಂದ್ರಿಯಾರ್ಥೇಷು ಪ್ರಾಯಶ್ಚಿತ್ತೀಯತೇ ನರಃ ॥ ೧**

-ಮನುಸ್ಮೃತಿ, ೧೧-೪೪

ಮಾಡಬೇಕಾದ ಕರ್ತವ್ಯವನ್ನು ಮಾಡದೆ, ನಿಂದಿತವಾದ ಕೆಲಸ ಮಾಡುತ್ತಾ, ಇಂದ್ರಿಯಲೋಲುಪನಾದ ಮನುಷ್ಯನು ಪ್ರಾಯಶ್ಚಿತ್ತಮಾಡಿಕೊಳ್ಳಬೇಕು.

**ಅಕ್ರೋಧೇನ ಜಯೇತ್ ಕ್ರೋಧಮಸಾಧುಂ ಸಾಧುನಾ ಜಯೇತ್ ।**
**ಜಯೇತ್ ಕದರ್ಯಂ ದಾನೇನ ಜಯೇತ್ ಸತ್ಯೇನ ಚಾನೃತಮ್ ॥ ೨**

-ಮಹಾಭಾರತ, ಉದ್ಯೋಗ. ೩೯-೭೨

ತಾಳ್ಮೆಯಿಂದ ಕೋಪವನ್ನೂ ಒಳ್ಳೆಯದರಿಂದ ಕೆಟ್ಟದ್ದನ್ನೂ ಜಯಿಸಬೇಕು. ಜಿಪುಣನನ್ನು ದಾನದಿಂದಲೂ ಸುಳ್ಳನ್ನು ಸತ್ಯದಿಂದಲೂ ಜಯಿಸಬೇಕು.

**ಅಜರಾಮರವತ್ ಪ್ರಾಜ್ಞೋ ವಿದ್ಯಾಮರ್ಥಂ ಚ ಸಾಧಯೇತ್ ।**
**ಗೃಹೀತ ಇವ ಕೇಶೇಷು ಮೃತ್ಯುನಾ ಧರ್ಮಮಾಚರೇತ್ ॥ ೩**

-ಸಮಯೋಚಿತ ಪದ್ಯಮಾಲಿಕಾ

ನನಗೆ ಮುಪ್ಪೂ ಇಲ್ಲ, ಮರಣವೂ ಇಲ್ಲ-ಎಂಬಂತೆ ಬುದ್ಧಿಶಾಲಿಯಾದವನು ವಿದ್ಯೆಯನ್ನೂ ಧನವನ್ನೂ ಸಂಪಾದಿಸಬೇಕು. ಮೃತ್ಯು ಬಂದು ಜುಟ್ಟನ್ನು ಹಿಡಿದು ಕೊಂಡಿದೆಯೋ ಎಂಬಂತೆ ಹೆದರಿಕೆಯಿಂದ ಧರ್ಮವನ್ನಾಚರಿಸಬೇಕು.

**ಅಜ್ಞಾನಾದ್ಯದಿ ವಾ ಜ್ಞಾನಾತ್ಕೃತ್ವಾ ಕರ್ಮ ವಿಗರ್ಹಿತಂ ।**
**ತಸ್ಮಾದ್ವಿಮುಕ್ತಿಮನ್ವಿಚ್ಛನ್ ದ್ವಿತೀಯಂ ನ ಸಮಾಚರೇತ್ ॥ ೪**

-ಮನುಸ್ಮೃತಿ, ೧೧-೨೩೨

ತಿಳಿದಾಗಲೀ ತಿಳಿಯದೇ ಆಗಲಿ ನಿಂದಿತವಾದ ಕರ್ಮವನ್ನು ಮಾಡಿದಮೇಲೆ, ಆ ಪಾಪಕರ್ಮದಿಂದ ಬಿಡುಗಡೆಯಾಗಬೇಕಾದರೆ ಮತ್ತೊಮ್ಮೆ ಅಂಥ ಕೆಲಸವನ್ನು ಮಾಡಬಾರದು.

**ಅತಿವಾದಾಂಸ್ತಿತಿಕ್ಷೇತ ನಾವಮನ್ಯೇತ ಕಂಚನ ।**
**ನ ಚೇಮಂ ದೇಹಮಾಶ್ರಿತ್ಯ ವೈರಂ ಕುರ್ವೀತ ಕೇನಚಿತ್ ॥ ೫**

-ಮನುಸ್ಮೃತಿ, ೬-೪೭

ಎಲ್ಲಿ ಸಾಮೋಪಾಯದಿಂದ ಕೆಲಸವಾಗುವುದೋ ಅಲ್ಲಿ ದಂಡವನ್ನು ತಿಳಿದವನು ಬಳಸಬಾರದು. ಸಕ್ಕರೆಯಿಂದಲೇ ಪಿತ್ತಶಮನವಾಗುವಂತಿದ್ದರೆ ಹಾಗಲಕಾಯಿಯನ್ನೇಕೆ ಬಳಸಬೇಕು?

**ಸ್ತ್ರಿಯಃ ಸಪುರುಷಾಃ ಮಾರ್ಗಂ ಸರ್ವಾಲಂಕಾರಸಂಯುತಾಃ ।**
**ನಿರ್ಭಯಾಃ ಪ್ರತಿಪದ್ಯಂತೇ ಯದಾ ರಕ್ಷತಿ ಭೂಮಿಪಃ ॥ ೮೧**

-ಸುಭಾಷಿತಸುಧಾನಿಧಿ

ರಾಜನು ರಕ್ಷಿಸುವಾಗ ಎಲ್ಲಾ ಅಲಂಕಾರಗಳಿಂದ ಕೂಡಿದ ಹೆಂಗಸರು ಪುರುಷ ರೊಡನೆ ಬೀದಿಗಳಲ್ಲಿ ನಿರ್ಭಯರಾಗಿ ಸಂಚರಿಸುತ್ತಾರೆ.

**ಹೋಮಾರ್ಥೈರ್ವಿಧಿವತ್ಪ್ರದಾನವಿಧಿನಾ ಸದ್ವಿಪ್ರವೃಂದಾರ್ಚನೈಃ**
**ಯಜ್ಞೈರ್ಭೂರಿಸುದಕ್ಷಿಣೈಃ ಸುವಿಹಿತೈಃ ಸಂಪ್ರಾಪ್ಯತೇ ಯತ್ಫಲಂ ।**
**ಸತ್ತೀರ್ಥಾಶ್ರಮವಾಸ ಹೋಮನಿಯಮೈಶ್ಚಾಂದ್ರಾಯಣಾದ್ಯೈಃ ಕೃತೈಃ**
**ಪುಂಭಿಸ್ತತ್ಫಲಮಾಹವೇ ವಿನಿಹಿತೈಃ ಸಂಪ್ರಾಪ್ಯತೇ ತತ್ಕ್ಷಣಾತ್ ॥ ೮೨**

-ಪಂಚತಂತ್ರ, ಮಿತ್ರಭೇದ-೩೩೫

ಹೋಮಮಾಡುವುದಕ್ಕಾಗಿ ಒಳ್ಳೆಯ ದ್ವಿಜಶ್ರೇಷ್ಠರನ್ನು ಶಾಸ್ತ್ರೋಕ್ತವಾದ ರೀತಿಯಲ್ಲಿ ದಾನಮಾಡುವುದರಿಂದ ಅರ್ಚಿಸುವುದರಿಂದ, ಚೆನ್ನಾಗಿ ನಡೆಸಿದ ಹೆಚ್ಚಾದ ದಕ್ಷಿಣೆಗಳನ್ನುಳ್ಳ ಯಜ್ಞಗಳಿಂದ ಯಾವ ಫಲ ಲಭಿಸುವುದೋ, ಒಳ್ಳೆಯ ತೀರ್ಥಕ್ಷೇತ್ರ, ಆಶ್ರಮ ಇವುಗಳಲ್ಲಿ ವಾಸಮಾಡಿ ನಿಯಮಕ್ಕನುಸಾರ ಹೋಮಮಾಡುವುದರಿಂದ ಅಥವಾ ನಡೆಸಿದ ಚಾಂದ್ರಾಯಣಾದಿ ವ್ರತಗಳಿಂದ ಯಾವ ಫಲ ಲಭಿಸುವುದೋ ಆ ಫಲವನ್ನು ಯುದ್ಧದಲ್ಲಿ ಹತರಾದ ಮನುಷ್ಯರು ಆ ಕ್ಷಣದಲ್ಲಿಯೇ ಪಡೆಯುತ್ತಾರೆ.



## ೧೦. ಧರ್ಮ

**ಅಕುರ್ವನ್ ವಿಹಿತಂ ಕರ್ಮ ನಿಂದಿತಂ ಚ ಸಮಾಚರನ್ ।**
**ಪ್ರಸಕ್ತಶ್ಚೇಂದ್ರಿಯಾರ್ಥೇಷು ಪ್ರಾಯಶ್ಚಿತ್ತೀಯತೇ ನರಃ ॥** ೧

-ಮನುಸ್ಮೃತಿ, ೧೧-೪೪

ಮಾಡಬೇಕಾದ ಕರ್ತವ್ಯವನ್ನು ಮಾಡದೆ, ನಿಂದಿತವಾದ ಕೆಲಸ ಮಾಡುತ್ತಾ, ಇಂದ್ರಿಯಲೋಲುಪನಾದ ಮನುಷ್ಯನು ಪ್ರಾಯಶ್ಚಿತ್ತಮಾಡಿಕೊಳ್ಳಬೇಕು.

**ಅಕ್ರೋಧೇನ ಜಯೇತ್ ಕ್ರೋಧಮಸಾಧುಂ ಸಾಧುನಾ ಜಯೇತ್ ।**
**ಜಯೇತ್ ಕದರ್ಯಂ ದಾನೇನ ಜಯೇತ್ ಸತ್ಯೇನ ಚಾನೃತಮ್ ॥** ೨

-ಮಹಾಭಾರತ, ಉದ್ಯೋಗ. ೩೯-೭೨

ತಾಳ್ಮೆಯಿಂದ ಕೋಪವನ್ನೂ ಒಳ್ಳೆಯದರಿಂದ ಕೆಟ್ಟದ್ದನ್ನೂ ಜಯಿಸಬೇಕು. ಜಿಪುಣನನ್ನು ದಾನದಿಂದಲೂ ಸುಳ್ಳನ್ನು ಸತ್ಯದಿಂದಲೂ ಜಯಿಸಬೇಕು.

**ಅಜರಾಮರವತ್ ಪ್ರಾಜ್ಞೋ ವಿದ್ಯಾಮರ್ಥಂ ಚ ಸಾಧಯೇತ್ ।**
**ಗೃಹೀತ ಇವ ಕೇಶೇಷು ಮೃತ್ಯುನಾ ಧರ್ಮಮಾಚರೇತ್ ॥** ೩

-ಸಮಯೋಚಿತ ಪದ್ಯಮಾಲಿಕಾ

ನನಗೆ ಮುಪ್ಪೂ ಇಲ್ಲ, ಮರಣವೂ ಇಲ್ಲ-ಎಂಬಂತೆ ಬುದ್ಧಿಶಾಲಿಯಾದವನು ವಿದ್ಯೆಯನ್ನೂ ಧನವನ್ನೂ ಸಂಪಾದಿಸಬೇಕು. ಮೃತ್ಯು ಬಂದು ಜುಟ್ಟನ್ನು ಹಿಡಿದು ಕೊಂಡಿದೆಯೋ ಎಂಬಂತೆ ಹೆದರಿಕೆಯಿಂದ ಧರ್ಮವನ್ನಾಚರಿಸಬೇಕು.

**ಅಜ್ಞಾನಾದ್ಯದಿ ವಾ ಜ್ಞಾನಾತ್ಕೃತ್ವಾ ಕರ್ಮ ವಿಗರ್ಹಿತಂ ।**
**ತಸ್ಮಾದ್ವಿಮುಕ್ತಿಮನ್ವಿಚ್ಛನ್ ದ್ವಿತೀಯಂ ನ ಸಮಾಚರೇತ್ ॥** ೪

-ಮನುಸ್ಮೃತಿ, ೧೧-೨೩೨

ತಿಳಿದಾಗಲೀ ತಿಳಿಯದೇ ಆಗಲಿ ನಿಂದಿತವಾದ ಕರ್ಮವನ್ನು ಮಾಡಿದಮೇಲೆ, ಆ ಪಾಪಕರ್ಮದಿಂದ ಬಿಡುಗಡೆಯಾಗಬೇಕಾದರೆ ಮತ್ತೊಮ್ಮೆ ಅಂಥ ಕೆಲಸವನ್ನು ಮಾಡಬಾರದು.

**ಅತಿವಾದಾಂಸ್ತಿತಿಕ್ಷೇತ ನಾವಮನ್ಯೇತ ಕಂಚನ ।**
**ನ ಚೇಮಂ ದೇಹಮಾಶ್ರಿತ್ಯ ವೈರಂ ಕುರ್ವೀತ ಕೇನಚಿತ್ ॥** ೫

-ಮನುಸ್ಮೃತಿ, ೬-೪೭

ಬೇರೆಯವರು ಅತಿಕ್ರಮಿಸಿ ಮಾತನಾಡಿದರೂ ಸಹಿಸಬೇಕು. ಯಾರನ್ನೂ ಅವಮಾನಗೊಳಿಸಬಾರದು. ಅನಿತ್ಯವಾದ ಈ ಶರೀರಕ್ಕಾಗಿ ಯಾರೊಡನೆಯೂ ಹಗೆತನವಿರಬಾರದು.

**ಅತಿಸಾಹಸಮತಿದುಷ್ಕರಮತ್ಯಾಶ್ಚರ್ಯಂ ಚ ದಾನಮರ್ಥಾನಾಂ ।**
**ಯೋ ಹಿ ದದಾತಿ ಶರೀರಂ ನ ದದಾತಿ ಸ ವಿತ್ತಲೇಶಮಪಿ ॥ ೬**

-ಸುಭಾಷಿತಸುಧಾನಿಧಿ (ಕಲಾವಿಲಾಸ)

ಹಣವನ್ನು ದಾನಮಾಡುವುದು ದೊಡ್ಡ ಸಾಹಸ ; ಅತ್ಯಂತ ಕಠಿಣವಾದ ಕೆಲಸ ಇದು ; ಇದು ಅತ್ಯಂತ ಆಶ್ಚರ್ಯಕರವಾದುದು. ಏಕೆಂದರೆ, ತನ್ನ ದೇಹವನ್ನಾದರೂ ಒಬ್ಬನು ತ್ಯಜಿಸಿಯಾನು, ಸ್ವಲ್ಪ ಹಣವನ್ನು ಮಾತ್ರ ಅವನು ಕೊಡುವುದಿಲ್ಲ.

**ಅಂಧಃ ಸ ಏವ ಶ್ರುತವರ್ಜಿತೋ ಯಃ**
**ಶಠಃ ಸ ಏವಾರ್ಥಿನಿರರ್ಥಕೋ ಯಃ ।**
**ಮೃತಃ ಸ ಏವಾಸ್ತಿ ಯಶೋ ನ ಯಸ್ಯ**
**ಧರ್ಮೇ ನ ಧೀರ್ಯಸ್ಯ ಸ ಏವ ಶೋಚ್ಯಃ ॥ ೭**

-ಚತುರ್ವರ್ಗಸಂಗ್ರಹ, ೧-೮

ವಿದ್ಯೆ ಇಲ್ಲದವನೇ ಕುರುಡ. ಯಾಚಕರಿಗೆ ಏನನ್ನೂ ಕೊಡದವನೇ ದುಷ್ಟ. ಕೀರ್ತಿಯನ್ನು ಗಳಿಸದವನು ಮೃತನೇ ಸರಿ. ಧರ್ಮದಲ್ಲಿ ಯಾರಿಗೆ ಆಸಕ್ತಿ ಇಲ್ಲವೋ ಅವನು ಶೋಚನೀಯ.

**ಅನಿತ್ಯಾನಿ ಶರೀರಾಣಿ ವಿಭವೋ ನೈವ ಶಾಶ್ವತಃ ।**
**ನಿತ್ಯಂ ಸಂನಿಹಿತೋ ಮೃತ್ಯುಃ ಕರ್ತವ್ಯೋ ಧರ್ಮಸಂಗ್ರಹಃ ॥ ೮**

-ಸಮಯೋಚಿತ ಪದ್ಯಮಾಲಿಕಾ

ದೇಹಗಳು ನಶ್ವರವಾದವು. ಸಂಪತ್ತು ಶಾಶ್ವತವಲ್ಲ. ಮೃತ್ಯು ಸದಾ ಸಮೀಪದಲ್ಲೇ ಇರುತ್ತದೆ. ಆದ್ದರಿಂದ ಒಳ್ಳೆಯ ಕೆಲಸವನ್ನು ಹೆಚ್ಚಾಗಿ ಮಾಡಬೇಕು.

**ಅನುಚರತಿ ಶಶಾಂಕಂ ರಾಹುದೋಷೇಽಪಿ ತಾರಾ**
**ಪತತಿ ಚ ವನವೃಕ್ಷೇ ಯಾತಿ ಭೂಮಿಂ ಲತಾ ಚ ।**
**ತ್ಯಜತಿ ನ ಚ ಕರೇಣುಃ ಪಂಕಲಗ್ನಂ ಗಜೇಂದ್ರಂ**
**ವ್ರಜತು ಚರತು ಧರ್ಮಂ ಭರ್ತೃನಾಥಾ ಹಿ ನಾರ್ಯಃ ॥ ೯**

-ಪ್ರತಿಮಾ ನಾಟಕ, ೧-೨೫

ರಾಹುವಿನ ದವಡೆಯಲ್ಲಿರುವಾಗಲೂ ಗಂಡನಾದ ಚಂದ್ರನನ್ನು ತಾರೆಯು ಅಗಲುವುದಿಲ್ಲ. ಅರಣ್ಯದಲ್ಲಿ ಹೆಮ್ಮರವು ನೆಲಕ್ಕೊರಗಿದರೆ, ಬಳ್ಳಿಯೂ ಅದರೊಡನೆ ಒರಗುತ್ತದೆ. ಕೆಸರಿನಲ್ಲಿ ಸಿಕ್ಕಿಕೊಂಡ ಸಲಗನನ್ನು ಹೆಣ್ಣಾನೆಯು ಬಿಟ್ಟು ಹೋಗುವುದಿಲ್ಲ. ಆದುದರಿಂದ ಹೆಣ್ಣು ತನ್ನ ಧರ್ಮವನ್ನು ಆಚರಿಸಲಿ. ಹೆಂಗಸರಿಗೆ ಗಂಡನೇ ದಿಕ್ಕಲ್ಲವೇ!

**ಅನುಮಂತಾ ವಿಶಸಿತಾ ನಿಹಂತಾ ಕ್ರಯವಿಕ್ರಯೀ ।**
**ಸಂಸ್ಕರ್ತಾ ಚೋಪಹರ್ತಾ ಚ ಖಾದಕಾಶ್ಚೇತಿ ಘಾತಕಾಃ ॥ ೧೦**

-ಮನುಸ್ಮೃತಿ, ೫-೫೧

ಕೊಲ್ಲುವುದಕ್ಕೆ ಒಪ್ಪಿಗೆ ಕೊಟ್ಟವನು, ಅಂಗಾಂಗಗಳನ್ನು ಕತ್ತರಿಸಿ ಬೇರೆ ಮಾಡುವವನು, ಕೊಂದವನು, ಮಾರುವವನು, ಕೊಳ್ಳುವವನು, ಬೇಯಿಸುವವನು, ಒದಗಿಸುವವನು, ತಿನ್ನುವವನು-ಇಷ್ಟು ಜನರೂ ಘಾತಕರೆಂದು ಲೆಕ್ಕಿಸಲ್ಪಡುತ್ತಾರೆ.

**ಅಪ್ರಣೋದ್ಯೋಽತಿಥಿಃ ಸಾಯಂ ಸೂರ್ಯೋಢೋ ಗೃಹಮೇಧಿನಾ ।**
**ಕಾಲೇ ಪ್ರಾಪ್ತಸ್ತ್ವಕಾಲೇ ವಾ ನಾಸ್ಯಾನಶ್ನನ್ ಗೃಹೇ ವಸೇತ್ ॥ ೧೧**

-ಮನುಸ್ಮೃತಿ, ೩-೧೦೫

ಸೂರ್ಯನು ಮುಳುಗುತ್ತಿರುವಾಗ ಸಂಜೆ ಬಂದ ಅತಿಥಿಯನ್ನು ಮನೆಯಲ್ಲಿಯೇ ಇರಿಸಿಕೊಳ್ಳಬೇಕು. ಊಟದ ವೇಳೆಯಲ್ಲಾಗಲೀ ಅವೇಳೆಯಲ್ಲಾಗಲೀ ಬಂದ ಅತಿಥಿಯು ಊಟಮಾಡದೆ ಮಲಗಬಾರದು.

**ಅಭಕ್ಷ್ಯಪರಿಹಾರಶ್ಚ ಸಂಸರ್ಗಶ್ಚಾಪ್ಯನಿಂದಿತೈಃ ।**
**ಆಚಾರೇಷು ವ್ಯವಸ್ಥಾನಂ ಶೌಚಮಿತ್ಯಭಿಧೀಯತೇ ॥ ೧೨**

-ಅತ್ರಿಸಂಹಿತಾ, ೧-೩೫

ತಿನ್ನಬಾರದ್ದನ್ನು ಬಿಡುವುದು, ದೋಷವಿಲ್ಲದವರೊಡನೆ ಸಹವಾಸ, ಆಚಾರಗಳನ್ನು ಬಿಡದೆ ಇರುವುದು-ಶೌಚವೆಂದು ಹೇಳಲ್ಪಟ್ಟಿದೆ.

**ಅಭಿವಾದನಶೀಲಸ್ಯ ನಿತ್ಯಂ ವೃದ್ಧೋಪಸೇವಿನಃ ।**
**ಚತ್ವಾರಿ ಸಂಪ್ರವರ್ಧಂತೇ ಕೀರ್ತಿರಾಯುರ್ಯಶೋ ಬಲಮ್ ॥ ೧೩**

-ಮಹಾಭಾರತ, ಉದ್ಯೋಗ. ೩೯-೭೪

ನಿತ್ಯವೂ ಹಿರಿಯರಿಗೆ ಅಭಿವಾದನೆ ಮಾಡಿ ಅವರ ಸೇವೆಯನ್ನು ಮಾಡತಕ್ಕವನಿಗೆ, ಕೀರ್ತಿ, ಆಯುಸ್ಸು, ಒಳ್ಳೆಯ ಹೆಸರು ಮತ್ತು ಬಲ-ಈ ನಾಲ್ಕು ವರ್ಧಿಸುತ್ತವೆ.

**ಅಹನ್ಯಹನಿ ದಾತವ್ಯಂ ಅದೀನೇನಾಂತರಾತ್ಮನಾ ।**
**ಸ್ತೋಕಾದಪಿ ಪ್ರಯತ್ನೇನ ದಾನಮಿತ್ಯಭಿಧೀಯತೇ ॥ ೧೪**

-ಅತ್ರಿಸಂಹಿತಾ, ೧-೪೦

ಪ್ರತಿದಿನವೂ ಮನಸ್ಸಿನಲ್ಲಿ ವ್ಯಥೆಪಡದೆ, ತನಗಿರುವ ಅಲ್ಪದಲ್ಲೇ ಯತ್ನದಿಂದ ಇತರರಿಗೆ ಕೊಡಬೇಕು. ಇದಕ್ಕೆ ದಾನವೆಂದು ಹೆಸರು.

**ಅಹಿಂಸಯೈವ ಭೂತಾನಾಂ ಕಾರ್ಯಂ ಶ್ರೇಯೋಽನುಶಾಸನಂ ।**
**ವಾಕ್ಚೈವ ಮಧುರಾಶ್ಲಕ್ಷ್ಣಾ ಪ್ರಯೋಜ್ಯಾ ಧರ್ಮಮಿಚ್ಛತಾ ॥ ೧೫**

-ಮನುಸ್ಮೃತಿ, ೨-೧೫೯

ಪ್ರಾಣಿಗಳನ್ನಾಗಲಿ, ಶಿಷ್ಯರನ್ನಾಗಲಿ ಪಳಗಿಸುವಾಗ, ಅವರಿಗೆ ಶಿಕ್ಷಣ ಕೊಡುವಾಗ ಹಿಂಸೆಯಿಲ್ಲದೆ ಅಂದರೆ ಶಾರೀರಿಕ ದಂಡನೆ ಮಾಡದೆಯೇ ಕೆಲಸ ಮಾಡಬೇಕು. ನಯವಾದ, ಇಂಪಾದ ಮಾತನ್ನಾಡಬೇಕು. ಅವನೇ ಧರ್ಮವನ್ನು ಆಚರಿಸತಕ್ಕವನು.

**ಅಹಿಂಸಾ ಸತ್ಯಮಸ್ತೇಯಂ ಶೌಚಮಿಂದ್ರಿಯನಿಗ್ರಹಃ ।**
**ದಾನಂ ದಮೋ ದಯಾ ಕ್ಷಾಂತಿಃ ಸರ್ವೇಷಾಂ ಧರ್ಮಸಾಧನಮ್ ॥ ೧೬**

-ಯಾಜ್ಞವಲ್ಕ್ಯ, ೧-೧೨೨

ಅಹಿಂಸೆ, ಸತ್ಯ, ಕಳ್ಳತನ ಮಾಡದಿರುವುದು, ನೈರ್ಮಲ್ಯ, ಇಂದ್ರಿಯನಿಗ್ರಹ, ದಾನ, ದಯೆ, ಶಿಸ್ತು, ತಾಳ್ಮೆ ಇವು ಎಲ್ಲರಿಗೂ ಧರ್ಮಸಾಧನ.

**ಅಹೋ ಏಷಾಂ ವರಂ ಜನ್ಮ ಸರ್ವಪ್ರಾಣ್ಯುಪಜೀವನಮ್ ।**
**ಸುಜನಸ್ಯೇವ ಯೇಷಾಂ ವೈ ವಿಮುಖಾ ಯಾಂತಿ ನಾರ್ಥಿನಃ ॥ ೧೭**

-ಭಾಗವತ, ೧೦-೨೨-೩೩

ಎಲ್ಲಾ ಪ್ರಾಣಿಗಳಿಗೂ ಜೀವನವನ್ನು ಕಲ್ಪಿಸತಕ್ಕ ಈ ಮರಗಳ ಜನ್ಮ ಎಷ್ಟೋ ಉತ್ತಮ. ಸತ್ಪುರುಷರ ದೆಸೆಯಿಂದ ಹೇಗೆ ವಿಮುಖರಾಗಿ ಅರ್ಥಿಗಳು ಹಿಂದಿರುಗುವುದಿಲ್ಲವೋ ಹಾಗೆ ಈ ಮರಗಳಿಂದಲೂ ವಿಮುಖರಾಗುವುದಿಲ್ಲ.

**ಅಶ್ವಮೇಧಸಹಸ್ರಾಣಿ ಸತ್ಯಂ ಚ ತುಲಯಾ ಧೃತಮ್ ।**
**ಅಶ್ವಮೇಧಸಹಸ್ರಸ್ಯ ಸತ್ಯಮೇವಾತಿರಿಚ್ಯತೇ ॥ ೧೮**

-ಹಿತೋಪದೇಶ, ಸಂಧಿ-೧೩೬

ಸಾವಿರ ಅಶ್ವಮೇಧ ಯಾಗಗಳನ್ನೂ ಸತ್ಯವನ್ನೂ ತಕ್ಕಡಿಯಲ್ಲಿ ತೂಗಿದಾಗ, ಸಹಸ್ರ ಅಶ್ವಮೇಧಗಳಿಗಿಂತ ಸತ್ಯವೇ ಹೆಚ್ಚು ತೂಗುತ್ತದೆ.

**ಆಚಾರಃ ಪರಮೋ ಧರ್ಮಃ ಶ್ರುತ್ಯುಕ್ತಃ ಸ್ಮಾರ್ತ ಏವ ಚ ।**
**ತಸ್ಮಾದಸ್ಮಿನ್ ಸದಾ ಯುಕ್ತಃ ನಿತ್ಯಂ ಸ್ಯಾದಾತ್ಮವಾನ್ನರಃ ॥** ೧೯

-ಮನುಸ್ಮೃತಿ, ೧-೧೦೮

ವೇದಗಳಲ್ಲಿ ಸ್ಮೃತಿಗಳಲ್ಲಿ ಹೇಳುವ ಸದಾಚಾರವು ಶ್ರೇಷ್ಠವಾದ ಧರ್ಮ. ಆದುದರಿಂದ ಮಾನವನು ಅವುಗಳನ್ನು ಸರ್ವದಾ ಕಾಪಾಡಿಕೊಂಡು ಆತ್ಮಜ್ಞಾನವನ್ನು ಪಡೆಯಬೇಕು.

**ಆಚಾರ್ಯಂ ಚ ಪ್ರವಕ್ತಾರಂ ಪಿತರಂ ಮಾತರಂ ಗುರುಂ ।**
**ನ ಹಿಂಸ್ಯಾತ್ಸಜ್ಜನಾನ್ ಗಾಶ್ಚ ಸರ್ವಾಂಶ್ಚೈವ ತಪಸ್ವಿನಃ ॥** ೨೦

-ಮನುಸ್ಮೃತಿ, ೪-೧೬೨

ಪಾಠ ಕಲಿಸಿದವನನ್ನು, ಉಪದೇಶಿಸುವವನನ್ನು, ತಂದೆಯನ್ನು, ತಾಯಿಯನ್ನು, ಹಿರಿಯರನ್ನು, ಸತ್ಪುರುಷರನ್ನು ಹಸುಗಳನ್ನು, ಎಲ್ಲ ತಪಸ್ವಿಗಳನ್ನೂ ಹಿಂಸಿಸಬಾರದು.

**ಆತ್ಮಾ ನದೀ ಭಾರತ ಪುಣ್ಯತೀರ್ಥಾ**
**ಸತ್ಯೋದಕಾ ಶೀಲತಟಾ ದಯೋರ್ಮಿಃ ।**
**ಅತ್ರಾಭಿಷೇಕಂ ಕುರು ಪಾಂಡುಪುತ್ರ**
**ನ ವಾರಿಣಾ ಶುಧ್ಯತಿ ಚಾಂತರಾತ್ಮಾ ॥** ೨೧

-ಹಿತೋಪದೇಶ, ಸಂಧಿ-೯೦

ಎಲೈ ಭರತವಂಶೋತ್ಪನ್ನನೇ, ಪಾಂಡುಪುತ್ರನೇ, ಆತ್ಮವೇ ನದಿ, ಪುಣ್ಯವೆಂಬುದು ಇಳಿಯಲು ಅನುಕೂಲವಾದ ಘಟ್ಟ ; ಸತ್ಯವೇ ಜಲ; ನಡತೆಯೇ ದಡ ; ದಯೆಯೆಂಬುದೇ ಅಲೆ; ಈ ನದಿಯಲ್ಲಿ ಸ್ನಾನಮಾಡು. ಮನಸ್ಸು ಬರಿಯ ನೀರಿನಿಂದ ಶುದ್ಧವಾಗುವುದಿಲ್ಲ.

**ಆದಿತ್ಯಚಂದ್ರಾವನಿಲಾನಲೌ ಚ**
**ದ್ಯೌರ್ಭೂಮಿರಾಪೋ ಹೃದಯಂ ಯಮಶ್ಚ ।**
**ಅಹಶ್ಚ ರಾತ್ರಿಶ್ಚ ಉಭೇ ಚ ಸಂಧ್ಯೇ**
**ಧರ್ಮಶ್ಚ ಜಾನಾತಿ ನರಸ್ಯ ವೃತ್ತಮ್ ॥** ೨೨

-ಮಹಾಭಾರತ, ಆದಿ. ೭೪-೩೦

ಸೂರ್ಯ, ಚಂದ್ರ, ವಾಯು, ಅಗ್ನಿ, ಆಕಾಶ, ಭೂಮಿ, ಜಲ, ಹೃದಯ, ಯಮ, ಅಹೋರಾತ್ರಗಳು, ಎರಡು ಸಂಧ್ಯಾಕಾಲಗಳು ಮತ್ತು ಧರ್ಮಪುರುಷ - ಇವರಿಗೆ ಮನುಷ್ಯನ ನಡತೆ ತಿಳಿದಿರುತ್ತದೆ.

**ಆಯಾಸಶತಲಬ್ಧಸ್ಯ ಪ್ರಾಣೇಭ್ಯೋಽಪಿ ಗರೀಯಸಃ ।**
**ಗತಿರೇಕೈವ ವಿತ್ತಸ್ಯ ದಾನಂ ಶೇಷಾ ವಿಪತ್ತಯಃ ॥** ೨೩

-ಸುಭಾಷಿತಸುಧಾನಿಧಿ

ನೂರಾರು ಪ್ರಯತ್ನಗಳಿಂದ ಸಂಪಾದಿಸಿದ, ಪ್ರಾಣಗಳಿಗಿಂತಲೂ ಹೆಚ್ಚಾದ ಹಣಕ್ಕೆ ಇರುವ ಒಂದೇ ಒಂದು ಒಳ್ಳೆಯ ಗತಿ ಎಂದರೆ ದಾನ ; ಉಳಿದುದೆಲ್ಲವೂ ವಿಪತ್ತುಗಳೇ!

**ಆರ್ಷಂ ಧರ್ಮೋಪದೇಶಂ ಚ ವೇದಶಾಸ್ತ್ರಾವಿರೋಧಿನಾ ।**
**ಯಸ್ತರ್ಕೇಣಾನುಸಂಧತ್ತೇ ಸ ಧರ್ಮಂ ವೇದ ನೇತರಃ ॥** ೨೪

-ಮನುಸ್ಮೃತಿ, ೧೨-೧೦೬

ಋಷಿಗಳ ಮಾತನ್ನೂ ಧರ್ಮೋಪದೇಶವನ್ನೂ ವೇದಗಳಿಗೂ ಶಾಸ್ತ್ರಗಳಿಗೂ ವಿರೋಧವಿಲ್ಲದಂತೆ ಯಾರು ತರ್ಕಮಾಡಿ ತಿಳಿಯುತ್ತಾನೆಯೋ ಅವನೇ ಧರ್ಮವನ್ನು ಚೆನ್ನಾಗಿ ಬಲ್ಲವನು.

**ಇಜ್ಯಾಧ್ಯಯನದಾನಾನಿ ತಪಃ ಸತ್ಯಂ ಧೃತಿಃ ಕ್ಷಮಾ ।**
**ಅಲೋಭ ಇತಿ ಮಾರ್ಗೋಽಯಂ ಧರ್ಮಸ್ಯಾಷ್ಟವಿಧಃ ಸ್ಮೃತಃ ॥** ೨೫

-ಹಿತೋಪದೇಶ, ಮಿತ್ರಲಾಭ-೭

ಧರ್ಮಕ್ಕೆ ಯಾಗ, ಅಧ್ಯಯನ, ದಾನ, ತಪಸ್ಸು, ಸತ್ಯ, ಧೈರ್ಯ, ಕ್ಷಮಾಗುಣ, ಲೋಭವಿಲ್ಲದಿರುವುದು ಇವು ಎಂಟೂ ಮಾರ್ಗಗಳೆಂದು ಹೇಳಲಾಗಿದೆ.

**ಉತ್ಪಾದ್ಯ ಪುತ್ರಾನನೃಣಾಂಶ್ಚ ಕೃತ್ವಾ**
**ವೃತ್ತಿಂ ಚ ತೇಭ್ಯೋಽನುವಿಧಾಯ ಕಾಂಚಿತ್ ।**
**ಸ್ಥಾನೇ ಕುಮಾರೀಃ ಪ್ರತಿಪಾದ್ಯ ಸರ್ವಾಃ**
**ಅರಣ್ಯಸಂಸ್ಥೋಽಥ ಮುನಿರ್ಬುಭೂಷೇತ್ ॥** ೨೬

-ಮಹಾಭಾರತ, ಉದ್ಯೋಗ. ३೭-३೯

ಮಕ್ಕಳನ್ನು ಪಡೆದು ಅವರಿಗೆ ಸಾಲದ ಹೊರೆಯಿಲ್ಲದಂತೆ ಮಾಡತಕ್ಕದ್ದು. ಅವರಿಗೆ ಜೀವನೋಪಾಯವನ್ನು ಕಲ್ಪಿಸಿ, ಹೆಣ್ಣುಮಕ್ಕಳೆಲ್ಲರನ್ನೂ ಮದುವೆಮಾಡತಕ್ಕದ್ದು. ಆಮೇಲೆ ಮುನಿಯಾಗಿ ಅರಣ್ಯದಲ್ಲಿ ನೆಲಸಬೇಕು.

**ಉಪಕಾರಃ ಪರೋ ಧರ್ಮಃ ಪರಾರ್ಥಂ ಕರ್ಮ ನೈಪುಣಂ ।**
**ಪಾತ್ರೇ ದಾನಂ ಪರಃ ಕಾಮಃ ಪರೋ ಮೋಕ್ಷೋ ವಿತೃಷ್ಣತಾ ॥** ೨೭

-ಸುಭಾಷಿತರತ್ನಭಾಂಡಾಗಾರ

ಪರೋಪಕಾರವೇ ದೊಡ್ಡ ಧರ್ಮ ; ಇತರರಿಗಾಗಿ ಕೆಲಸಮಾಡುವುದೇ ಕಾರ್ಯ ನಿಪುಣತೆ ; ಸತ್ಪಾತ್ರದಲ್ಲಿ ದಾನಮಾಡುವುದೇ ಶ್ರೇಷ್ಠವಾದ ಆಶೆ ; ಆಶೆಯಿಲ್ಲದಿರುವಿಕೆಯೇ ನಿಜವಾಗಿ ಮೋಕ್ಷ.

**ಉಪಾರ್ಜಿತಾನಾಮರ್ಥಾನಾಂ ತ್ಯಾಗ ಏವ ಹಿ ರಕ್ಷಣಂ ।**
**ತಡಾಗೋದರಸಂಸ್ಥಾನಾಂ ಪರೀವಾಹ ಇವಾಂಭಸಾಮ್ ॥ ೨೮**

-ಹಿತೋಪದೇಶ, ಮಿತ್ರಲಾಭ-೧೧೮

ಸಂಪಾದಿಸಿದ ಹಣದ ತ್ಯಾಗವೇ ಅದರ ರಕ್ಷಣೆಯಷ್ಟೆ? ಕೆರೆಯೊಳಗೆ ಸೇರಿದ ನೀರಿಗೆ ಕೋಡಿಯು ಹೇಗೋ ಹಾಗೆ!

**ಉಭಯೋರ್ನಾಸ್ತಿ ಭೋಗೇಚ್ಛಾ ಪರಾರ್ಥಂ ಧನಸಂಚಯಃ ।**
**ಕೃಪಣೋದಾರಯೋಃ ಪಶ್ಯ ತಥಾಪಿ ಮಹದಂತರಮ್ ॥ ೨೯**

–ಸುಭಾಷಿತಸುಧಾನಿಧಿ

ಜಿಪುಣ ಮತ್ತು ಉದಾರಿ ಇವರಿಬ್ಬರಿಗೂ ತಾವು ಅನುಭವಿಸಬೇಕೆಂಬ ಇಚ್ಛೆ ಇಲ್ಲ; ಇಬ್ಬರೂ ಮತ್ತೊಬ್ಬರಿಗಾಗಿಯೇ ಹಣ ಕೂಡಿಡುವುದು. ಆದರೂ ಇವರಿಬ್ಬರಲ್ಲಿ ಇರುವ ಅಪಾರವಾದ ವ್ಯತ್ಯಾಸವನ್ನು ನೋಡು.

**ಏಕಃ ಪ್ರಜಾಯತೇ ಜಂತುರೇಕ ಏವ ಪ್ರಲೀಯತೇ ।**
**ಏಕೋಽನುಭುಂಕ್ತೇ ಸುಕೃತಂ ಏಕ ಏವ ಚ ದುಷ್ಕೃತಮ್ ॥ ೩೦**

-ಮನುಸ್ಮೃತಿ, ೪-೨೪೦

ಮನುಷ್ಯನು ಒಂಟಿಯಾಗಿ ಹುಟ್ಟುತ್ತಾನೆ. ಒಂಟಿಯಾಗಿ ಸಾಯುತ್ತಾನೆ. ಪುಣ್ಯದ ಫಲವನ್ನೂ ಪಾಪದ ಫಲವನ್ನೂ ಅನುಭವಿಸತಕ್ಕವನು ತಾನೊಬ್ಬನೇ.

**ಏತಾವಾನವ್ಯಯೋ ಧರ್ಮಃ ಪುಣ್ಯಶ್ಲೋಕೈರುಪಾಸಿತಃ ।**
**ಯೋ ಭೂತಶೋಕಹರ್ಷಾಭ್ಯಾಂ ಆತ್ಮಾ ಶೋಚತಿ ಹರ್ಷತಿ ॥ ೩೧**

-ಭಾಗವತ, ೬-೧೦-೯

ಹೀಗೆ ಧರ್ಮವು ನಾಶವಿಲ್ಲದ್ದು ; ಪುಣ್ಯವಂತರಿಂದ ಸೇವಿಸಲ್ಪಡುತ್ತದೆ. ಯಾರ ಮನಸ್ಸು ಪ್ರಾಣಿಗಳ ದುಃಖದಿಂದ ದುಃಖಿಸುತ್ತದೋ ಮತ್ತು ಸಂತೋಷದಿಂದ ಸಂತೋಷಪಡುತ್ತದೋ ಅವನೇ ಪುಣ್ಯವಂತನು.

**ಏವಮಾಚಾರತೋ ದೃಷ್ಟ್ವಾ ಧರ್ಮಸ್ಯ ಮುನಯೋ ಗತಿಂ ।**
**ಸರ್ವಸ್ಯ ತಪಸೋ ಮೂಲಂ ಆಚಾರಂ ಜಗೃಹುಃ ಪರಮ್ ॥ ೩೨**

-ಮನುಸ್ಮೃತಿ, ೧-೧೧೦

ಋಷಿಗಳು ಆಚಾರಾನುಷ್ಠಾನದಿಂದಲೇ ಧರ್ಮವು ಹೆಚ್ಚುವುದೆಂದು ತಿಳಿದು ಎಲ್ಲ ಬಗೆಯ ತಪಸ್ಸಿಗೂ ಆಚಾರವನ್ನೇ ಮೂಲವೆಂದು ಸ್ವೀಕರಿಸಿದರು.

**ಕರ್ತವ್ಯೋ ಭ್ರಾತೃಷು ಸ್ನೇಹೋ ವಿಸ್ಮರ್ತವ್ಯಾಃ ಗುಣೇತರಾಃ ।**
**ಸಂಬಂಧೋ ಬಂಧುಭಿಃ ಶ್ರೇಯಾನ್ ಲೋಕಯೋರುಭಯೋರಪಿ ॥ ೩೩**

-ದೂತವಾಕ್ಯ, ೧-೨೯

ಸಹೋದರರಲ್ಲಿ ಪ್ರೀತಿಯನ್ನು ತೋರಿಸಬೇಕು. ದೋಷಗಳನ್ನು ಮರೆಯಬೇಕು. ನೆಂಟರೊಡನೆ ಪ್ರೀತಿಯ ವ್ಯವಹಾರವು ಇಹಪರಗಳೆರಡರಲ್ಲಿಯೂ ಒಳ್ಳೆಯದು.

**ಕಃ ಪಥ್ಯತರೋ ಧರ್ಮಃ ಕಃ ಶುಚಿರಿಹ ಯಸ್ಯ ಮಾನಸಂ ಶುದ್ಧಂ ।**
**ಕಃ ಪಂಡಿತೋ ವಿವೇಕೀ ಕಿಂ ವಿಷಮವಧೀರಣಾ ಗುರುಷು ॥ ೩೪**

-ಪ್ರಶ್ನೋತ್ತರ ರತ್ನಮಾಲಿಕಾ

ಅತ್ಯಂತ ಹಿತಕರವಾದದ್ದು ಯಾವುದು ? ಧರ್ಮ. ಯಾವನು ಶುಚಿ ? ಯಾವನ ಮನಸ್ಸು ಶುಚಿಯಾಗಿರುವುದೋ ಅವನು. ಪಂಡಿತನು ಯಾರು? (ನಿತ್ಯಾನಿತ್ಯವಸ್ತುಗಳನ್ನು) ವಿವೇಚಿಸಿ ತಿಳಿದವನು. ಯಾವುದು ವಿಷ ? ಹಿರಿಯರ ನಿಂದೆ.

**ಕರ್ಮಣಾ ಜಾಯತೇ ಸರ್ವಂ ಕರ್ಮೈವ ಗತಿಸಾಧನಂ ।**
**ತಸ್ಮಾತ್ಸರ್ವಪ್ರಯತ್ನೇನ ಸಾಧು ಕರ್ಮ ಸಮಾಚರೇತ್ ॥ ೩೫**

-ವಿಷ್ಣುಪುರಾಣ, ೧-೧೮-೩೨

ಕರ್ಮದಿಂದಲೇ ಎಲ್ಲವೂ ಆಗುತ್ತದೆ. ಕರ್ಮವೇ ನಮ್ಮ ಬೇರೆ ಬೇರೆ ಗತಿಗಳಿಗೆ ಕಾರಣ. ಆದುದರಿಂದ ಪ್ರಯತ್ನಪೂರ್ವಕವಾಗಿ ಒಳ್ಳೆಯ ಕೆಲಸವನ್ನೇ ಮಾಡಬೇಕು.

**ಕರ್ಮಣಾ ಮನಸಾ ವಾಚಾ ಪರಪೀಡಾಂ ಕರೋತಿ ಯಃ ।**
**ತದ್ಬೀಜಂ ಜನ್ಮ ಫಲತಿ ಪ್ರಭೂತಂ ತಸ್ಯ ಚಾಶುಭಮ್ ॥ ೩೬**

-ವಿಷ್ಣುಪುರಾಣ, ೧-೧೯-೬

ಯಾರು ಕ್ರಿಯೆಯಿಂದಲೂ, ಮನಸ್ಸಿನಿಂದಲೂ, ಮಾತಿನಿಂದಲೂ ಇತರರ ಹಿಂಸೆ ಮಾಡುತ್ತಾನೆಯೋ, ಆ ಪಾಪಕರ್ಮಗಳಿಂದಾದ ಜನ್ಮದಲ್ಲಿ ಅವನಿಗೆ ಹೆಚ್ಚು ದುಃಖವುಂಟಾಗುತ್ತದೆ.

**ಕಿಂ ದಾತುರಖಿಲೈರ್ದೋಷೈಃ ಕಿಂ ಲುಬ್ಧಸ್ಯಾಖಿಲೈರ್ಗುಣೈಃ ।**
**ನ ಲೋಭಾದಧಿಕೋ ದೋಷೋ ನ ದಾನಾದಧಿಕೋ ಗುಣಃ ॥ ೩೭**

-ಸಭಾರಂಜನಶತಕ-೩೬

ದಾನಿಯಲ್ಲಿ ಎಷ್ಟು ದೋಷಗಳಿದ್ದರೇನು? ಲೋಭಿಯಲ್ಲಿ ಎಷ್ಟು ಗುಣಗಳಿದ್ದರೇನು? ಲೋಭಕ್ಕಿಂತ ಹೆಚ್ಚಿನ ದೋಷವಿಲ್ಲ. ದಾನಕ್ಕಿಂತ ಹೆಚ್ಚಿನ ಗುಣವಿಲ್ಲ.

**ಕೃತ್ವಾ ಪಾಪಂ ಹಿ ಸಂತಪ್ಯ ತಸ್ಮಾತ್ಪಾಪಾತ್ಪ್ರಮುಚ್ಯತೇ ।**
**ನೈವಂ ಕುರ್ಯಾಂ ಪುನರಿತಿ ನಿವೃತ್ತ್ಯಾ ಪೂಯತೇ ತು ಸಃ ॥ ೩೮**

-ಮನುಸ್ಮೃತಿ, ೧೧-೨೩೦

ಪಾಪಕೆಲಸಗಳನ್ನು ಮಾಡಿದವನು ಪಶ್ಚಾತ್ತಾಪದಿಂದ ಮತ್ತೆ ಹೀಗೆ ಮಾಡುವುದಿಲ್ಲ ವೆಂದು ಅಂದುಕೊಂಡರೆ ಪಾಪಗಳಿಂದ ಮುಕ್ತನಾಗಿ ಪವಿತ್ರನಾಗುತ್ತಾನೆ.

**ಕೋ ಧರ್ಮೋ ಭೂತದಯಾ ಕಿಂ ಸೌಖ್ಯಮರೋಗಿತಾ ಜಗತಿ ಜಂತೋಃ।**
**ಕಃ ಸ್ನೇಹಃ ಸದ್ಭಾವಃ ಕಿಂ ಪಾಂಡಿತ್ಯಂ ಪರಿಚ್ಛೇದಃ ॥ ೩೯**

-ಹಿತೋಪದೇಶ, ಮಿತ್ರಲಾಭ-೧೧೪

ಲೋಕದ ಜನಗಳಿಗೆ ಧರ್ಮವಾವುದು? ಭೂತದಯೆ. ಸೌಖ್ಯವಾವುದು? ರೋಗ ವಿಲ್ಲದಿರುವಿಕೆ. ಸ್ನೇಹವಾವುದು? ಸದ್ಭಾವವೇ. ಪಾಂಡಿತ್ಯವಾವುದು? ವಿವೇಕದಿಂದ ವಿಮರ್ಶಿಸುವುದೇ.

**ಖ್ಯಾಪನೇನಾನುತಾಪೇನ ತಪಸಾಽಧ್ಯಯನೇನ ಚ ।**
**ಪಾಪಕೃನ್ಮುಚ್ಯತೇ ಪಾಪಾತ್ತಥಾ ದಾನೇನ ಚಾಪದಿ ॥ ೪೦**

-ಮನುಸ್ಮೃತಿ, ೧೧-೨೨೭

ಪಾಪಮಾಡಿದವನು ತನ್ನ ಪಾಪವನ್ನು ಹೇಳಿಕೊಳ್ಳುವುದರಿಂದಲೂ, ಪಶ್ಚಾತ್ತಾಪ ದಿಂದಲೂ, ತಪಸ್ಸಿನಿಂದಲೂ, ಅಧ್ಯಯನದಿಂದಲೂ, ದಾನದಿಂದಲೂ ಶುದ್ಧನಾಗುತ್ತಾನೆ.

**ಚಕ್ರಿಣೋ ದಶಮೀಸ್ಥಸ್ಯ ರೋಗಿಣೋ ಭಾರಿಣಃ ಸ್ತ್ರಿಯಾಃ ।**
**ಸ್ನಾತಕಸ್ಯ ಚ ರಾಜ್ಞಶ್ಚ ಪಂಥಾ ದೇಯೋ ವರಸ್ಯ ಚ ॥ ೪೧**

-ಮನುಸ್ಮೃತಿ, ೨-೧೩೮

ದಾರಿಯಲ್ಲಿ ನಡೆಯುತ್ತಿರುವಾಗ ಗಾಡಿಯಲ್ಲಿ ಕುಳಿತವನಿಗೆ, ತುಂಬಾ ಮುದುಕನಿಗೆ, ರೋಗಿಗೆ, ಭಾರಹೊತ್ತವನಿಗೆ, ಹೆಂಗಸರಿಗೆ, ಸಮಾವರ್ತನೆ ಮುಗಿಸಿದವನಿಗೆ, ಅರಸನಿಗೆ, ವರನಿಗೆ ದಾರಿ ಕೊಡಬೇಕು.

**ಚಾಟತಸ್ಕರದುರ್ವೃತ್ತಮಹಾಸಾಹಸಿಕಾದಿಭಿಃ ॥**
**ಪೀಡ್ಯಮಾನಾಃ ಪ್ರಜಾ ರಕ್ಷೇತ್ಕಾಯಸ್ಥೈಶ್ಚ ವಿಶೇಷತಃ ॥ ೪೨**

-ಯಾಜ್ಞವಲ್ಕ್ಯ, ೧-೩೩೬

ಮೋಸಗಾರರು, ಕಳ್ಳರು, ಜೂಜುಕೋರರು, ದರೋಡೆಮಾಡುವವರು ಇವರಿಂದ ಪ್ರಜೆಗಳನ್ನು ಕಾಪಾಡಬೇಕು. ಅಲ್ಲದೆ ಗುಮಾಸ್ತರಿಂದ ತೊಂದರೆಗೀಡಾಗದಂತೆ ವಿಶೇಷವಾಗಿ ನೋಡಿಕೊಳ್ಳಬೇಕು.

**ಚಾತಕಸ್ತ್ರಿಚತುರಾನ್ ಪಯಃಕಣಾನ್**
**ಯಾಚತೇ ಜಲಧರಂ ಪಿಪಾಸಯಾ ।**
**ಸೋಽಪಿ ಪೂರಯತಿ ವಿಶ್ವಮಂಭಸಾ**
**ಹಂತ ಹಂತ ಮಹತಾಮುದಾರತಾ ॥** ೪೩

-ಕುವಲಯಾನಂದ

ಚಾತಕಪಕ್ಷಿ ಬಾಯಾರಿಕೆಯಿಂದ ಮೂರು ನಾಲ್ಕು ನೀರಿನ ಹನಿಗಳಿಗಾಗಿ ಮೇಘವನ್ನು ಯಾಚಿಸುತ್ತದೆ. ಮೇಘವಾದರೋ ವಿಶ್ವವನ್ನೇ ನೀರಿನಿಂದ ತುಂಬಿಬಿಡುತ್ತದೆ. ಅಬ್ಬಬ್ಬಾ! ಮಹಾತ್ಮರ ಔದಾರ್ಯವೆ!

**ಜಲಬಿಂದುನಿಪಾತೇನ ಕ್ರಮಶಃ ಪೂರ್ಯತೇ ಘಟಃ ।**
**ಸ ಹೇತುಃ ಸರ್ವವಿದ್ಯಾನಾಂ ಧರ್ಮಸ್ಯ ಚ ಧನಸ್ಯ ಚ ॥** ೪೪

-ಹಿತೋಪದೇಶ, ಸುಹೃದ್ಭೇದ-೧೧

ನೀರಿನ ಒಂದೊಂದು ಹನಿಯ ಬೀಳುವಿಕೆಯಿಂದ ಕ್ರಮವಾಗಿ ಮಡಕೆ ತುಂಬುತ್ತದೆ. ಎಲ್ಲ ವಿದ್ಯೆಗಳಿಗೂ, ಧರ್ಮಕ್ಕೂ, ಧನಕ್ಕೂ ಇದೇ ಕಾರಣ.

**ಜ್ಞಾತ್ವಾಽಪರಾಧಂ ದೇಶಂ ಚ ಕಾಲಂ ಬಲಮಥಾಪಿ ವಾ ।**
**ವಯಃ ಕರ್ಮ ಚ ವಿತ್ತಂ ಚ ದಂಡಂ ದಂಡ್ಯೇಷು ಪಾತಯೇತ್ ॥** ೪೫

-ಯಾಜ್ಞವಲ್ಕ್ಯ, ೧-೩೬೮

ಅಪರಾಧ, ದೇಶ, ಕಾಲ, ಬಲ, ವಯಸ್ಸು, ಉದ್ಯೋಗ, ಹಣ-ಇವುಗಳೆಲ್ಲವನ್ನು ಗಮನಿಸಿ ಅಪರಾಧಿಗಳಿಗೆ ತಕ್ಕ ದಂಡನೆಯನ್ನು ರಾಜನು ವಿಧಿಸಬೇಕು.

**ತ್ಯಜೇದೇಕಂ ಕುಲಸ್ಯಾರ್ಥೇ ಗ್ರಾಮಸ್ಯಾರ್ಥೇ ಕುಲಂ ತ್ಯಜೇತ್ ।**
**ಗ್ರಾಮಂ ಜನಪದಸ್ಯಾರ್ಥೇ ಆತ್ಮಾರ್ಥೇ ಪೃಥಿವೀಂ ತ್ಯಜೇತ್ ॥** ೪೬

-ಹಿತೋಪದೇಶ, ಮಿತ್ರಲಾಭ-೧೧೫

ಕುಲದ ಹಿತಕ್ಕಾಗಿ ಒಬ್ಬನನ್ನು ತ್ಯಾಗಮಾಡಬೇಕು; ಗ್ರಾಮದ ಹಿತಕ್ಕಾಗಿ ಕುಲವನ್ನೂ, ದೇಶದ ಹಿತಕ್ಕಾಗಿ ಗ್ರಾಮವನ್ನೂ, ಆತ್ಮನ ಹಿತಕ್ಕಾಗಿ ಪೃಥ್ವಿಯನ್ನೂ ತ್ಯಾಗಮಾಡಬೇಕು.

ತಪಃ ಶೌಚಂ ದಯಾ ಸತ್ಯಂ ಇತಿ ಪಾದಾಃ ಕೃತೇ ಕೃತಾಃ ।
ಅಧರ್ಮಾಂಶೈಸ್ತ್ರಯೋ ಭಗ್ನಾಃ ಸ್ಮಯಸಂಗಮದೈಸ್ತವ ॥ ೪೭
-ಭಾಗವತ, ೧-೧೭-೨೪

ಕೃತಯುಗದಲ್ಲಿ ಧರ್ಮಕ್ಕೆ ತಪಸ್ಸು, ಶು ‌ಧ್ದಿ, ದಯೆ, ಸತ್ಯ ಎಂಬ ನಾಲ್ಕು ಪಾದಗಳು ಇದ್ದವು. ಅಧರ್ಮದ ಅಂಶಗಳಾದ, ಅಹಂಕಾರ, ಸಹವಾಸ ಮತ್ತು ಮದಗಳಿಂದ, ಅದರ ಮೂರು ಪಾದಗಳು ಅಂದರೆ ತಪಸ್ಸು, ಶುದ್ಧತೆ ಮತ್ತು ದಯೆ ಕಲಿಯುಗದಲ್ಲಿ ಮುರಿದು ಹೋದವು.

ತಪಃ ಪರಂ ಕೃತಯುಗೇ ತ್ರೇತಾಯಾಂ ಜ್ಞಾನಮುಚ್ಯತೇ ।
ದ್ವಾಪರೇ ಯಜ್ಞಮೇವಾಹುರ್ದಾನಮೇವ ಕಲೌ ಯುಗೇ ॥ ೪೮
-ಸುಭಾಷಿತಸುಧಾನಿಧಿ

ಕೃತಯುಗದಲ್ಲಿ ತಪಸ್ಸು ಶ್ರೇಷ್ಠವಾದ ಧರ್ಮವಾಗಿತ್ತು. ತ್ರೇತಾಯುಗದಲ್ಲಿ ಜ್ಞಾನವನ್ನೂ ದ್ವಾರಪಯುಗದಲ್ಲಿ ಯಜ್ಞವನ್ನೂ ಶ್ರೇಷ್ಠವಾದ ಧರ್ಮವೆಂದು ತಿಳಿದರು. ಆದರೆ ಕಲಿಯುಗ ದಲ್ಲಿ ದಾನವನ್ನೇ ಶ್ರೇಷ್ಠವಾದ ಧರ್ಮವೆಂದು ಹೇಳಿದ್ದಾರೆ.

ತಸ್ಮಾದ್ಧರ್ಮಂ ಸಹಾಯಾರ್ಥಂ ನಿತ್ಯಂ ಸಂಚಿನುಯಾಚ್ಛನೈಃ ।
ಧರ್ಮೇಣ ಹಿ ಸಹಾಯೇನ ತಮಸ್ತರತಿ ದುಸ್ತರಂ ॥ ೪೯
-ಮನುಸ್ಮೃತಿ, ೪-೨೪೨

ದಿನವೂ ಕ್ರಮವಾಗಿ ತನ್ನ ಸಹಾಯಕ್ಕಾಗಿ ಧರ್ಮವನ್ನು ಗಳಿಸಬೇಕು. ಧರ್ಮದಿಂದ ಕಷ್ಟಕರವಾದ ಪಾಪಗಳನ್ನೂ ಕಳೆದುಕೊಳ್ಳುತ್ತಾನೆ.

ತಸ್ಮಾದೇತಾಃ ಸದಾ ಪೂಜ್ಯಾಃ ಭೂಷಣಾಚ್ಛಾದನಾಶನೈಃ ।
ಭೂತಿಕಾಮೈರ್ನರೈರ್ನಿತ್ಯಂ ಸತ್ಕಾರೇಷೂತ್ಸವೇಷು ಚ ॥ ೫೦
-ಮನುಸ್ಮೃತಿ, ೩-೫೯

ಏಳಿಗೆಯನ್ನು ಬಯಸುವ ಮಾನವರು ಹಬ್ಬ, ಮದುವೆ ಮೊದಲಾದ ಸಂದರ್ಭಗಳಲ್ಲಿ ಹೆಣ್ಣುಮಕ್ಕಳಿಗೆ ಒಡವೆ, ವಸ್ತ್ರ, ಒಳ್ಳೆಯ ಊಟ ಇವುಗಳನ್ನು ಕೊಟ್ಟು ಗೌರವಿಸಬೇಕು.

ತ್ಯಾಗೋ ಗುಣೋ ವಿತ್ತವತಾಂ ವಿತ್ತಂ ತ್ಯಾಗವತಾಂ ಗುಣಃ ।
ಪರಸ್ಪರ ವಿಯುಕ್ತೌತು ವಿತ್ತತ್ಯಾಗೌ ವಿಡಂಬನಾ ॥ ೫೧
-ಸುಭಾಷಿತಸುಧಾನಿಧಿ

ಹಣವುಳ್ಳವರಿಗೆ ತ್ಯಾಗ ಗುಣ. ತ್ಯಾಗಮಾಡುವವರಿಗೆ ಹಣವೇ ಗುಣ. ಅವೆರಡೂ ಒಂದೆಡೆ ಸೇರದಿದ್ದಾಗ ಹಣ ಮತ್ತು ತ್ಯಾಗಗಳು ಹಾಸ್ಯಾಸ್ಪದವಾದವು.

ತಾವತ್ಪ್ರೀತಿರ್ಭವೇಲ್ಲೋಕೇ ಯಾವದ್ದಾನಂ ಪ್ರದೀಯತೇ ।
ವತ್ಸಃ ಕ್ಷೀರಕ್ಷಯಂ ದೃಷ್ಟ್ವಾ ಪರಿತ್ಯಜತಿ ಮಾತರಂ ॥ ೫೨
-ಪಂಚತಂತ್ರ, ಮಿತ್ರಸಂಪ್ರಾಪ್ತಿ-೫೩

ಎಲ್ಲಿಯವರೆಗೆ ದಾನ ಕೊಡುತ್ತಾ ಇರುವನೋ ಅಲ್ಲಿಯವರೆಗೆ ಲೋಕದಲ್ಲಿ ಪ್ರೀತಿ ಇರುತ್ತದೆ. ಹಾಲು ಬತ್ತಿದುದನ್ನು ನೋಡಿ ಕರು ತಾಯಿಯನ್ನು ದೂರಮಾಡುತ್ತದೆ.

ತ್ರಿಭಿರ್ವರ್ಷೈಸ್ತ್ರಿಭಿರ್ಮಾಸೈಸ್ತ್ರಿಭಿಃ ಪಕ್ಷೈಸ್ತ್ರಿಭಿರ್ದಿನೈಃ ।
ಅತ್ಯುತ್ಕಟೈಃ ಪುಣ್ಯಪಾಪೈರಿಹೈವ ಫಲಮಶ್ನುತೇ ॥ ೫೩
-ಸಮಯೋಚಿತಪದ್ಯಮಾಲಿಕಾ

ಬಹಳ ಘೋರವಾದ ಪುಣ್ಯಪಾಪಗಳನ್ನು ಮಾಡಿದರೆ, ಅದರ ಫಲವನ್ನು ಈ ಜನ್ಮದಲ್ಲಿಯೇ ಮೂರು ವರ್ಷ, ಮೂರು ತಿಂಗಳು, ಮೂರು ಪಕ್ಷ ಅಥವಾ ಮೂರು ದಿನ ಗಳಲ್ಲಿ ಅನುಭವಿಸುತ್ತಾನೆ.

ದಂಡಃ ಶಾಸ್ತಿ ಪ್ರಜಾಃ ಸರ್ವಾಃ ದಂಡ ಏವಾಭಿರಕ್ಷತಿ ।
ದಂಡಃ ಸುಪ್ತೇಷು ಜಾಗರ್ತಿ ದಂಡಂ ಧರ್ಮಂ ವಿದುರ್ಬುಧಾಃ ॥ ೫೪
-ಮನುಸ್ಮೃತಿ, ೭-೧೮

ದಂಡದಿಂದ ಎಲ್ಲಾ ಪ್ರಜೆಗಳನ್ನೂ ಆಳಬಹುದು. ಪ್ರಜೆಗಳನ್ನು ದಂಡವೇ ಕಾಪಾಡುತ್ತದೆ. ಮಲಗಿರುವವರನ್ನೂ ಸಹ ದಂಡವೇ ಕಾಪಾಡುವುದು. ದಂಡವು ಧರ್ಮದ ಪ್ರಧಾನಾಂಶ. (ದಂಡ ಎಂದರೆ ತಪ್ಪಿಗೆ ಅನುರೂಪವಾದ ಶಿಕ್ಷೆ)

ದಶ ಧರ್ಮಂ ನ ಜಾನಂತಿ ಧೃತರಾಷ್ಟ್ರ ನಿಬೋಧ ತಾನ್ ।
ಮತ್ತಃ ಪ್ರಮತ್ತ ಉನ್ಮತ್ತಃ ಶ್ರಾಂತಃ ಕ್ರುದ್ಧೋ ಬುಭುಕ್ಷಿತಃ ॥
ತ್ವರಮಾಣಶ್ಚ ಲುಬ್ಧಶ್ಚ ಭೀತಃ ಕಾಮೀ ಚ ತೇ ದಶ ।
ತಸ್ಮಾದೇತೇಷು ಸರ್ವೇಷು ನ ಪ್ರಸಜ್ಜೇತ ಪಂಡಿತಃ ॥ ೫೫
-ಮಹಾಭಾರತ, ಉದ್ಯೋಗ. ೩೩-೧೦೧, ೧೦೨

ಧೃತರಾಷ್ಟ್ರ, ಈ ಹತ್ತು ಜನರಿಗೆ ಧರ್ಮವು ತಿಳಿಯದು. ಅವರು ಯಾರೆಂದರೆ; ಅಹಂಕಾರಿ, ಅಮಲೇರಿದವನು, ಹುಚ್ಚ, ಬಳಲಿದವನು, ಕ್ರೋಧಗೊಂಡವನು, ಹಸಿವಾದವನು, ಅವಸರದಲ್ಲಿರತಕ್ಕವನು, ಲೋಭಿ, ಭೀತ ಮತ್ತು ಕಾಮಿ. ಆದ್ದರಿಂದ ಪಂಡಿತನು ಇಂಥವರ ಸಹವಾಸ ಮಾಡಬಾರದು.

ದಾತವ್ಯಂ ಭೋಕ್ತವ್ಯಂ ಧನವಿಷಯೇ ಸಂಚಯೋ ನ ಕರ್ತವ್ಯಃ ।
ಪಶ್ಯೇಹ ಮಧುಕರೀಣಾಂ ಸಂಚಿತಮರ್ಥಂ ಹರಂತ್ಯನ್ಯೇ ॥ ೫೬
-ಪಂಚತಂತ್ರ, ಮಿತ್ರಸಂಪ್ರಾಪ್ತಿ-೧೫೬

ಹಣದ ವಿಚಾರದಲ್ಲಿ ಹೇಳುವುದಾದರೆ ...ಡಬೇಕು, ಅನುಭವಿಸಬೇಕು. ಆದರೆ ಸುಮ್ಮನೆ ಕೂಡಿಡಬಾರದು. ಜೇನುಗಳು ಕೂಡಿಟ್ಟ ಪದಾರ್ಥವನ್ನು ಇತರರು ಅಪಹರಿಸುವರೆಂಬುದನ್ನು ಕಾಣು.

ದಾತಾ ಲಘುರಪಿ ಸೇವ್ಯೋ ಭವತಿ ನ ಕೃಪಣೋ ಮಹಾನಪಿ ಸಮೃದ್ಧ್ಯಾ ।
ಕೂಪೋಽತಃ ಸ್ವಾದುಜಲಃ ಪ್ರೀತ್ಯೈ ಲೋಕಸ್ಯ ನ ಸಮುದ್ರಃ ॥ ೫೭
-ಪಂಚತಂತ್ರ, ಮಿತ್ರಸಂಪ್ರಾಪ್ತಿ-೭೫

ದಾನಮಾಡುವವನು ಅಲ್ಪನಾದರೂ ಸೇವಿಸಲು ತಕ್ಕವನು. ಐಶ್ವರ್ಯದಿಂದ ದೊಡ್ಡವನೇ ಆಗಿದ್ದರೂ ಜಿಪುಣನು ಸೇವಿಸಲರ್ಹನಲ್ಲ. ಬಾವಿಯೊಳಗಿನ ಸಿಹಿನೀರು ಲೋಕಕ್ಕೆ ಪ್ರೀತಿಯುಂಟುಮಾಡುತ್ತದೆ. ಆದರೆ ಸಮುದ್ರ ಹಾಗೆ ಮಾಡುವುದಿಲ್ಲ.

ದಾತುಃ ಪ್ರತಿಗ್ರಹೀತುಶ್ಚ ಯೌ ಹಸ್ತಾವುತ್ತರಾಧರೌ ।
ತಯೋರಪ್ಯೌತ್ತರಾಧರ್ಯಂ ತಾಭ್ಯಾಮೇವೋಪಪಾದ್ಯತೇ ॥ ೫೮
-ಸಭಾರಂಜನಶತಕ-೩೧

ದಾನಮಾಡತಕ್ಕವನ ಕೈ ಮೇಲೆ, ತೆಗೆದುಕೊಳ್ಳತಕ್ಕವನ ಕೈಕೆಳಗೆ. ಅವರಲ್ಲಿ ಯಾರು ಮೇಲ್ಮಟ್ಟದವರು, ಯಾರು ಕೆಳಮಟ್ಟದವರು-ಎಂಬುದು ಅದರಿಂದಲೇ ಗೊತ್ತಾಗುತ್ತದೆ.

ದಾತೃತ್ವಮೇವ ಸರ್ವೇಭ್ಯೋ ಗುಣೇಭ್ಯೋ ಭಾಸತೇತರಾಂ ।
ಜ್ಞಾತೃತ್ವಸಹಿತಂ ತಚ್ಚೇತ್ಸುವರ್ಣಸ್ಯೇವ ಸೌರಭಮ್ ॥ ೫೯
-ಸುಭಾಷಿತಸುಧಾನಿಧಿ

ಎಲ್ಲ ಗುಣಗಳಿಗಿಂತ ಅತ್ಯಧಿಕವಾಗಿ ಪ್ರಕಾಶಿಸುವ ಗುಣವೆಂದರೆ ದಾನಮಾಡುವ ಗುಣ. ಅದು ಜ್ಞಾನಗುಣದೊಡನೆ ಬೆರೆತರೆ ಚಿನ್ನಕ್ಕೆ ಪರಿಮಳವಿಟ್ಟಂತೆಯೇ.

ದಾನಂ ವಿತ್ತಾದೃತಂ ವಾಚಃ ಕೀರ್ತಿಧರ್ಮೌ ತಥಾಯುಷಃ ।
ಪರೋಪಕರಣಂ ಕಾಯಾದಸಾರಾತ್ಸಾರಮುದ್ಧರೇತ್ ॥ ೬೦
-ಸುಭಾಷಿತಸುಧಾನಿಧಿ

ಹಣದಿಂದ ದಾನವನ್ನೂ, ಮಾತಿನಿಂದ ಸತ್ಯವನ್ನೂ, ಜೀವಿತದಿಂದ ಕೀರ್ತಿ ಮತ್ತು ಧರ್ಮ ಇವುಗಳನ್ನೂ, ದೇಹದಿಂದ ಪರೋಪಕಾರವನ್ನೂ, ಅಸಾರವಾದುದರಿಂದ ಸಾರವನ್ನೂ ಸಾಧಿಸಿ ಉದ್ಧಾರ ಮಾಡಿಕೊಳ್ಳಬೇಕು.

**ದಾನಂ ಪ್ರಿಯವಾಕ್ಸಹಿತಂ ಜ್ಞಾನಮಗರ್ವಂ ಕ್ಷಮಾನ್ವಿತಂ ಶೌರ್ಯಂ ।**
**ತ್ಯಾಗಸಹಿತಂ ಚ ವಿತ್ತಂ ದುರ್ಲಭಮೇತಚ್ಚತುಷ್ಟಯಂ ಲೋಕೇ ॥ ೬೧**

-ಹಿತೋಪದೇಶ, ಮಿತ್ರಲಾಭ-೧೨೨

ಲೋಕದಲ್ಲಿ ಇವು ನಾಲ್ಕು ಬಹಳ ದುರ್ಲಭ. ಅವು ಯಾವುವೆಂದರೆ, ಪ್ರಿಯವಾದ ಮಾತಿನೊಡನೆ ಮಾಡುವ ದಾನ, ಅಹಂಕಾರವಿಲ್ಲದ ಜ್ಞಾನ, ಕ್ಷಮೆಯಿಂದ ಕೂಡಿರುವ ಶೌರ್ಯ ಮತ್ತು ತ್ಯಾಗದೊಡನೆ ಕೂಡಿರುವ ಐಶ್ವರ್ಯ.

**ದಾನಂ ಭೋಗೋ ನಾಶಸ್ತಿಸ್ರೋ ಗತಯೋ ಭವಂತಿ ವಿತ್ತಸ್ಯ ।**
**ಯೋ ನ ದದಾತಿ ನ ಭುಂಕ್ತೇ ತಸ್ಯ ತೃತೀಯಾ ಗತಿರ್ಭವತಿ ॥ ೬೨**

-ಪಂಚತಂತ್ರ, ಮಿತ್ರಸಂಪ್ರಾಪ್ತಿ-೧೫೭

ಹಣಕ್ಕೆ ದಾನ, ಅನುಭವ, ಮತ್ತು ನಾಶ ಎಂಬ ಮೂರು ಗತಿಗಳಾಗುತ್ತವೆ. ಯಾರು ಕೊಡುವುದೂ ಇಲ್ಲವೋ ಅನುಭವಿಸುವುದೂ ಇಲ್ಲವೋ ಅಂಥವನ ಹಣಕ್ಕೆ ಮೂರನೆಯ ಗತಿ ಆಗುತ್ತದೆ.

**ದಾನೇನ ತುಲ್ಯೋ ನಿಧಿರಸ್ತಿ ನಾನ್ಯೋ**
**ಲೋಭಾಚ್ಚ ನಾನ್ಯೋಽಸ್ತಿ ರಿಪುಃ ಪೃಥಿವ್ಯಾಂ ।**
**ವಿಭೂಷಣಂ ಶೀಲಸಮಂ ನ ಚಾನ್ಯತ್**
**ಸಂತೋಷತುಲ್ಯಂ ಧನಮಸ್ತಿ ನಾನ್ಯತ್ ॥ ೬೩**

-ಪಂಚತಂತ್ರ, ಮಿತ್ರಸಂಪ್ರಾಪ್ತಿ-೧೬೬

ದಾನಕ್ಕೆ ಸಮಾನವಾದ ಬೇರೆ ಆಸ್ತಿ ಯಾವುದೂ ಇಲ್ಲ. ಲೋಕದಲ್ಲಿ ಆಶೆಗಿಂತ ಬೇರೆ ಶತ್ರು ಮತ್ತೊಂದಿಲ್ಲ. ಒಳ್ಳೆಯ ನಡತೆಗೆ ಸಮನಾದ ಬೇರೊಂದು ಒಡವೆಯಿಲ್ಲ. ಸಂತೋಷಕ್ಕೆ ಸಮನಾದ ಬೇರೊಂದು ಐಶ್ವರ್ಯವಿಲ್ಲ.

**ದಾರಿದ್ರ್ಯೇಣ ಕುಲಂ ಮದೇನ ಕುಶಲಂ ದ್ವೇಷೇಣ ವಿದ್ಯಾಫಲಂ**
**ಶೀಲಂ ದುರ್ಜನಸಂಗಮೇನ ಮಲಿನಾಚಾರೇಣ ಶುಕ್ಲಂ ಯಶಃ ।**
**ಆಲಸ್ಯೇನ ಧನಂ ಪ್ರಯಾತಿ ನಿಧನಂ ಲೌಲ್ಯೇನ ಮಾನೋನ್ನತಿಃ**
**ಯಾಚ್ಞಾದೈನ್ಯಪರಿಗ್ರಹೇಣ ಚ ಗುಣಗ್ರಾಮಃ ಸಮಗ್ರೋ ನೃಣಾಮ್॥ ೬೪**

-ಚತುರ್ವರ್ಗಸಂಗ್ರಹ, ೨-೧೫

ಬಡತನದಿಂದ ಕುಟುಂಬವೂ ಮದದಿಂದ ಕ್ಷೇಮವೂ ದ್ವೇಷದಿಂದ ವಿದ್ಯಾಫಲವೂ ದುರ್ಜನರ ಸಹವಾಸದಿಂದ ನಡತೆಯೂ ದುರಾಚಾರದಿಂದ ಶುಭ್ರವಾದ ಕೀರ್ತಿಯೂ ನಶಿಸುತ್ತವೆ. ಸೋಮಾರಿತನದಿಂದ ಹಣವೂ ಲೋಭದಿಂದ ಗೌರವವೂ ಕ್ಷೀಣಿಸುತ್ತವೆ. ಯಾಚನಾದೈನ್ಯದಿಂದ ಜನರ ಸಕಲ ಸದ್ಗುಣಗಳೂ ಅಡಗಿಹೋಗುತ್ತವೆ.

**ದೃಷ್ಟಿಪೂತಂ ನ್ಯಸೇತ್ಪಾದಂ ವಸ್ತ್ರಪೂತಂ ಜಲಂ ಪಿಬೇತ್ ।**
**ಸತ್ಯಪೂತಾಂ ವದೇದ್ವಾಚಂ ಮನಃಪೂತಂ ಸಮಾಚರೇತ್ ॥** ೬೫

-ಮನುಸ್ಮೃತಿ, ೬-೪೬

ಕಣ್ಣಿನಿಂದ ನೋಡಿ ಹೆಜ್ಜೆಯಿಡಬೇಕು. ಬಟ್ಟೆಯಿಂದ ಶೋಧಿಸಿ ನೀರನ್ನು ಕುಡಿಯಬೇಕು. ಸತ್ಯದಿಂದ ಶುದ್ಧವಾದ ಮಾತನ್ನಾಡಬೇಕು. ಮನಸ್ಸಿನಿಂದ ಪವಿತ್ರವಾದ ಕೆಲಸವನ್ನು ಮಾಡಬೇಕು.

**ದೇವದ್ವಿಜಗುರುಪ್ರಾಜ್ಞಪೂಜನಂ ಶೌಚಮಾರ್ಜವಂ ।**
**ಬ್ರಹ್ಮಚರ್ಯಮಹಿಂಸಾ ಚ ಶಾರೀರಂ ತಪ ಉಚ್ಯತೇ ॥**
**ಅನುದ್ವೇಗಕರಂ ವಾಕ್ಯಂ ಸತ್ಯಂ ಪ್ರಿಯಹಿತಂ ಚ ಯತ್ ।**
**ಸ್ವಾಧ್ಯಾಯಾಭ್ಯಸನಂ ಚೈವ ವಾಙ್ಮಯಂ ತಪ ಉಚ್ಯತೇ ॥**
**ಮನಃಪ್ರಸಾದಃ ಸೌಮ್ಯತ್ವಂ ಮೌನಮಾತ್ಮವಿನಿಗ್ರಹಃ ।**
**ಭಾವಸಂಶುದ್ಧಿರಿತ್ಯೇತತ್ತಪೋ ಮಾನಸಮುಚ್ಯತೇ ॥** ೬೬

-ಭಗವದ್ಗೀತಾ, ೧೭-೧೪, ೧೫, ೧೬

ದೇವ ದ್ವಿಜ ಗುರು ಜ್ಞಾನಿಗಳ ಪೂಜನ, ಶುಚಿತ್ವ, ಸರಳತೆ, ಬ್ರಹ್ಮಚರ್ಯ ಮತ್ತು ಅಹಿಂಸೆ-ಇವು ಕಾಯಿಕ ತಪಸ್ಸು.

ಮನಸ್ಸಿಗೆ ಉದ್ವೇಗವನ್ನುಂಟುಮಾಡದ ಮತ್ತು ಸತ್ಯವೂ ಪ್ರಿಯವೂ ಹಿತಕರವೂ ಆದನುಡಿ, ವೇದಾಭ್ಯಾಸ - ಇವು ವಾಙ್ಮಯವಾದ ತಪಸ್ಸು.

ಮನಸ್ಸಿನ ಪ್ರಸನ್ನತೆ, ಸೌಮ್ಯತೆ, ಮಿತಭಾಷಣ, ಮನಶ್ಶುದ್ಧಿ-ಇವು ಮಾನಸ ತಪಸ್ಸು.

**ದೇಶಃ ಕಾಲಃ ಪಾತ್ರಂ ವಿತರತಿ ವಿತ್ತಸ್ಯ ಕಮಪಿ ಮಹಿಮಾನಂ ।**
**ಅಬ್ಧಿತಲೇ ಶುಕ್ತಿಪುಟೇ ಸ್ವಾತಂ ಘನತೋಯಮೇತಿ ಮಣಿಭಾವಮ್ ॥** ೬೭

-ಸುಭಾಷಿತಸುಧಾನಿಧಿ

ದಾನ ಮಾಡಿದ ಹಣಕ್ಕೆ ಅಪೂರ್ವವಾದ ಮಹಿಮೆಯನ್ನು ಒಳ್ಳೆಯ ದೇಶ, ಕಾಲ ಮತ್ತು ಪಾತ್ರಗಳು ಉಂಟುಮಾಡುತ್ತವೆ. ಸಮುದ್ರದ ತಳದಲ್ಲಿನ ಚಿಪ್ಪಿನೊಳಗಡೆ ಸೇರಿದ ಮೋಡದ ಹನಿ ಮುತ್ತಿನ ರೂಪವನ್ನು ತಳೆಯುತ್ತದೆ.

**ದೇಶಭಂಗೇ ಪ್ರವಾಸೇ ವಾ ವ್ಯಾಧಿಷು ವ್ಯಸನೇಷ್ವಪಿ ।**
**ರಕ್ಷೇದೇವ ಸ್ವದೇಹಾದಿ ಪಶ್ಚಾದ್ಧರ್ಮಂ ಸಮಾಚರೇತ್ ॥ ೬೮**

-ಪರಾಶರಸ್ಮೃತಿ, ೭-೪೦

ದೇಶದಲ್ಲಿ ಯುದ್ಧ ಮೊದಲಾದ ಉಪದ್ರವಗಳಿದ್ದಾಗ, ಪ್ರಯಾಣಸಮಯದಲ್ಲಿ, ರೋಗಗಳಲ್ಲಿ, ಸಂಕಟವೊದಗಿದಾಗ ಮೊದಲು ತನ್ನ ಶರೀರವನ್ನು ಕಾಪಾಡಿಕೊಳ್ಳಬೇಕು. ಆಮೇಲೆ ಧರ್ಮದ ಕಡೆ ಗಮನಕೊಡಬಹುದು.

**ದ್ವೇಷ್ಯೋಽಪಿ ಸಂಮತಃ ಶಿಷ್ಟಃ ತಸ್ಯಾರ್ತಸ್ಯ ಯಥೌಷಧಂ ।**
**ತ್ಯಾಜ್ಯೋ ದುಷ್ಟಃ ಪ್ರಿಯೋಽಪ್ಯಾಸೀತ್ ಅಂಗಲೀವೋರಗಕ್ಷತಾ ॥ ೬೯**

-ರಘುವಂಶ, ೧,೨೮

ರೋಗಿಯಾದವನಿಗೆ ಕಹಿಯಾಗಿದ್ದರೂ ಔಷಧ ಬೇಕು. ಹಾಗೆ ಹಗೆಯಾಗಿದ್ದರೂ ಒಳ್ಳೆಯವನು ರಾಜ್ಯದ ಕೆಲಸಕ್ಕೆ ಬೇಕು. ಎಷ್ಟೇ ಪ್ರೀತಿಪಾತ್ರನಾಗಿದ್ದರೂ ದುಷ್ಟನನ್ನು ದೂರ ಇಡಬೇಕು. ಬೆರಳು ನಮ್ಮದೇ ಆಗಿದ್ದರೂ, ಹಾವು ಕಚ್ಚಿದಾಗ, ಆ ಬೆರಳಿನಿಂದ ಬೇರೆ ಶರೀರದ ಭಾಗಗಳಿಗೆ ಅಪಾಯವಾಗದಂತೆ ಅದನ್ನು ಕತ್ತರಿಸಬೇಕಲ್ಲವೇ!

**ಧನಾನಿ ಜೀವಿತಂ ಚೈವ ಪರಾರ್ಥೇ ಪ್ರಾಜ್ಞ ಉತ್ಸೃಜೇತ್ ।**
**ಸನ್ನಿಮಿತ್ತಂ ವರಂ ತ್ಯಾಗೋ ವಿನಾಶೇ ನಿಯತೇ ಸತಿ ॥ ೭೦**

-ಹಿತೋಪದೇಶ, ಮಿತ್ರಲಾಭ-೩೨

ಬುದ್ಧಿವಂತನಾದವನು ತನ್ನ ಹಣವನ್ನೂ ಪ್ರಾಣವನ್ನೂ ಮತ್ತೊಬ್ಬರಿಗಾಗಿ ತ್ಯಾಗ ಮಾಡಬೇಕು. ಅವುಗಳಿಗೆ ವಿನಾಶವು ಸಿದ್ಧವೇ ಆಗಿರುವಾಗ ಒಳ್ಳೆಯ ಕಾರಣಕ್ಕಾಗಿ ತ್ಯಾಗಮಾಡುವುದು ಬಹಳ ಶ್ರೇಷ್ಠವಾದುದೇ ಆಗಿದೆ.

**ಧನೇನ ಕಿಂ ಯೋ ನ ದದಾತಿ ನಾಶ್ನುತೇ**
**ಬಲೇನ ಕಿಂ ಯೇನ ರಿಪುಂ ನ ಬಾಧತೇ ।**
**ಶ್ರುತೇನ ಕಿಂ ಯೇನ ನ ಧರ್ಮಮಾಚರೇತ್**
**ಕಿಮಾತ್ಮನಾ ಯೋ ನ ಜಿತೇಂದ್ರಿಯೋ ಭವೇತ್ ॥ ೭೧**

-ಹಿತೋಪದೇಶ, ಸುಹೃದ್ಭೇದ-೯

ಯಾರು ದಾನಮಾಡುವುದಿಲ್ಲವೋ, ತಾನೂ ಅನುಭವಿಸುವುದಿಲ್ಲವೋ ಅಂಥ ಹಣದಿಂದ ಏನು ಪ್ರಯೋಜನ? ಶತ್ರುಗಳನ್ನು ಬಾಧಿಸದೇ ಇರುವ ಬಲದಿಂದ ಏನು ತಾನೇ ಪ್ರಯೋಜನ? ಯಾವುದರಿಂದ ಧರ್ಮವನ್ನಾಚರಿಸುವುದಿಲ್ಲವೋ ಅಂಥ ವಿದ್ಯೆಯಿಂದ ಏನು ಪ್ರಯೋಜನ? ಜಿತೇಂದ್ರಿಯನಾಗದೇ ಇರುವ ತನ್ನಿಂದ ತಾನೇ ಏನು ಪ್ರಯೋಜನ?

**ಧರ್ಮ ಏವ ಹತೋ ಹಂತಿ ಧರ್ಮೋ ರಕ್ಷತಿ ರಕ್ಷಿತಃ ।**
**ತಸ್ಮಾದ್ಧರ್ಮೋ ನ ಹಂತವ್ಯಃ ಮಾನೋ ಧರ್ಮೋ ಹತೋವಧೀತ್ ॥ ೭೨**

-ಮನುಸ್ಮೃತಿ, ೮-೧೫

ಧರ್ಮವನ್ನು ಮೀರಿದರೆ ಅದು ನಮಗೆ ಹಾನಿಯುಂಟುಮಾಡುತ್ತದೆ. ಧರ್ಮವನ್ನು ಆಚರಿಸಿದರೆ ರಕ್ಷಣೆಯುಂಟಾಗುತ್ತದೆ. ಆದುದರಿಂದ ಧರ್ಮವನ್ನು ಮೀರಬಾರದು. ಧರ್ಮವನ್ನು ಮೀರಿ ಹಾಳಾಗುವುದು ಬೇಡ.

**ಧರ್ಮಃ ಶ್ರುತೋ ವಾ ದೃಷ್ಟೋ ವಾ ಸ್ಮೃತೋ ವಾ ಕಥಿತೋಽಪಿ ವಾ ।**
**ಸಂಮೋದಿತೋ ವಾ ರಾಜೇಂದ್ರ ಪುನಾತಿ ಪುರುಷಂ ಸದಾ ॥ ೭೩**

-ಸುಭಾಷಿತಸುಧಾನಿಧಿ

ಎಲೈ ರಾಜನೇ, ಧರ್ಮವನ್ನು ಕೇಳಿದರೂ, ನೋಡಿದರೂ, ನೆನೆಸಿಕೊಂಡರೂ, ಹೇಳಿದರೂ, ಅನುಮೋದಿಸಿದರೂ ಸಹ ಅದು ಯಾವಾಗಲೂ ಪುರುಷನನ್ನು (ಶುದ್ಧಿಗೊಳಿಸುತ್ತದೆ)- ಪವಿತ್ರಗೊಳಿಸುತ್ತದೆ.

**ಧರ್ಮಾದರ್ಥಃ ಪ್ರಭವತೇ ಧರ್ಮಾತ್ ಪ್ರಭವತೇ ಸುಖಂ ।**
**ಧರ್ಮೇಣ ಲಭತೇ ಸರ್ವಂ ಧರ್ಮಸಾರಮಿದಂ ಜಗತ್ ॥ ೭೪**

-ರಾಮಾಯಣ, ಅಯೋಧ್ಯಾ. ೯-೩೦

ಧರ್ಮದಿಂದಲೇ ಅರ್ಥ ; ಧರ್ಮದಿಂದಲೇ ಸುಖ. ಸಕಲ ಅಭೀಷ್ಟವೂ ಧರ್ಮದಿಂದ ಕೈಗೂಡುತ್ತದೆ. ಈ ಜಗತ್ತು ಧರ್ಮದ ತಳಹದಿಯ ಮೇಲೆ ನಿಂತಿದೆ.

**ಧರ್ಮಾರ್ಥಕಾಮಮೋಕ್ಷಾಖ್ಯಂ ಯ ಇಚ್ಛೇಚ್ಛ್ರೇಯ ಆತ್ಮನಃ ।**
**ಏಕಮೇವ ಹರೇಸ್ತತ್ರ ಕಾರಣಂ ಪಾದಸೇವನಮ್ ॥ ೭೫**

-ಭಾಗವತ, ೪-೮-೪೧

ಯಾರು ಧರ್ಮ, ಅರ್ಥ, ಕಾಮ, ಮೋಕ್ಷಗಳೆಂಬ ಹೆಸರುಳ್ಳ ತನ್ನ ಶ್ರೇಯಸ್ಸನ್ನು ಬಯಸುವನೋ, ಅವನು ಅದಕ್ಕೆ ಒಂದೇ ಕಾರಣವಾದ ಹರಿಪಾದಸೇವೆಯನ್ನು ಮಾಡಬೇಕು.

**ಧರ್ಮೋ ಹಿ ಪರಮೋ ಲೋಕೇ ಧರ್ಮೇ ಸತ್ಯಂ ಪ್ರತಿಷ್ಠಿತಂ ।**
**ಧರ್ಮಸಂಶ್ರಿತಮೇತಚ್ಚ ಪಿತುರ್ವಚನಮುತ್ತಮಮ್ ॥ ೭೬**

-ರಾಮಾಯಣ, ಅಯೋಧ್ಯಾ. ೨೧-೪೧

ಲೋಕದಲ್ಲಿ ಧರ್ಮವೇ ಶ್ರೇಷ್ಠವಾದದ್ದು. ಧರ್ಮದಲ್ಲಿ ಸತ್ಯವು ನೆಲೆಸಿದೆ. ಪಿತೃವಾಕ್ಯಪರಿಪಾಲನವು ಧರ್ಮವನ್ನಾಶ್ರಯಿಸಿದೆ.

**ಧರ್ಮೋ ಹಿ ಯತ್ನೈಃ ಪುರುಷೇಣ ಸಾಧ್ಯಃ**
**ಭುಜಂಗಜಿಹ್ವಾಚಪಲಾ ನೃಪಶ್ರಿಯಃ ।**
**ತಸ್ಮಾತ್‌ಪ್ರಜಾಪಾಲನಮಾತ್ರಬುದ್ಧ್ಯಾ**
**ಹತೇಷು ದೇಹೇಷು ಗುಣಾ ಧರಂತೇ ॥** ೭೭

-ಕರ್ಣಭಾರ, ೧-೧೭

ಮನುಷ್ಯನು ಕಷ್ಟಪಟ್ಟಾದರೂ ಧರ್ಮವನ್ನು ಅಂದರೆ ಒಳ್ಳೆಯ ಕೆಲಸವನ್ನು ಸಾಧಿಸಬೇಕು. ರಾಜ್ಯಸಂಪತ್ತು ಹಾವಿನ ನಾಲಗೆಗಳಂತೆ ಅನಿತ್ಯ, ಚಂಚಲ. ಆದುದರಿಂದ ಅರಸನು ಚೆನ್ನಾಗಿ ಪ್ರಜೆಗಳನ್ನು ನೋಡಿಕೊಳ್ಳಬೇಕು. ಈ ಧರ್ಮದಿಂದ ಅವನು ಸತ್ತಮೇಲೂ ಅವನ ಒಳ್ಳೆಯ ಗುಣಗಳು ಉಳಿಯುತ್ತವೆ.

**ಧಾರಣಾದ್ಧರ್ಮ ಇತ್ಯಾಹುರ್ಧರ್ಮೋ ಧಾರಯತೇ ಪ್ರಜಾಃ ।**
**ಯತ್ ಸ್ಯಾದ್ಧಾರಣಸಂಯುಕ್ತಂ ಸ ಧರ್ಮ ಇತಿ ನಿಶ್ಚಯಃ ॥** ೭೮

-ಮಹಾಭಾರತ, ಕರ್ಣ. ೬೯-೫೮

ಧಾರಣೆ ಮಾಡುವುದರಿಂದ 'ಧರ್ಮ' ಎನ್ನುತ್ತಾರೆ. ಧರ್ಮವು ಪ್ರಜೆಗಳನ್ನು ಧರಿಸುತ್ತದೆ. ಯಾವುದರಲ್ಲಿ ಧಾರಣೆಯುಂಟೋ ಅದು ಧರ್ಮವೆಂದು ನಿಶ್ಚಯ.

ಧಾರಣ=ಹಿಡಿದು ನಿಲ್ಲಿಸುವುದು ಮತ್ತು ಪಾಲನೆ.

**ಧೃತಿಃ ಕ್ಷಮಾ ದಮೋಽಸ್ತೇಯಂ ಶೌಚಮಿಂದ್ರಿಯನಿಗ್ರಹಃ ।**
**ಧೀರ್ವಿದ್ಯಾ ಸತ್ಯಮಕ್ರೋಧೋ ದಶಕಂ ಧರ್ಮಲಕ್ಷಣಮ್ ॥** ೭೯

-ಮನುಸ್ಮೃತಿ, ೬-೯೨

ತೃಪ್ತಿ, ತಾಳ್ಮೆ ಸಿಟ್ಟು ಮೊದಲಾದುವನ್ನು ನಿಗ್ರಹಿಸುವುದು, ಅನ್ಯಾಯದಿಂದ ಇತರರ ದ್ರವ್ಯವನ್ನು ತೆಗೆದುಕೊಳ್ಳದೇ ಇರುವುದು, ಶುಚಿಯಾಗಿರುವುದು, ಇಂದ್ರಿಯಗಳ ನಿಗ್ರಹ, ಶಾಸ್ತ್ರಜ್ಞಾನ, ಸತ್ಯ, ಶಾಂತಿ ಇವು ಹತ್ತು ಧರ್ಮವೆನಿಸುತ್ತದೆ.

**ನ ಕಾಮಯೇಽಹಂ ಗತಿಮೀಶ್ವರಾತ್ ಪರಾ-**
**ಮಷ್ಟರ್ದ್ಧಿಯುಕ್ತಾಮಪುನರ್ಭವಂ ವಾ ।**
**ಆರ್ತಿಂ ಪ್ರಪದ್ಯೇಽಖಿಲದುಃಖಭಾಜಾ-**
**ಮಂತಃ ಸ್ಥಿತೋ ಯೇನ ಭವಂತ್ಯದುಃಖಾಃ ॥** ೮೦

-ಭಾಗವತ, ೯-೨೧-೧೨

ನಾನು ಅಷ್ಟೈಶ್ವರ್ಯದಿಂದ ಕೂಡಿದ ಉತ್ಕೃಷ್ಟವಾದ ಗತಿಯನ್ನಾಗಲಿ ಜನನರಾಹಿತ್ಯ ವನ್ನಾಗಲಿ ಭಗವಂತನಿಂದ ಪಡೆಯಲಾಶಿಸುವುದಿಲ್ಲ. ದುಃಖಿಗಳಾದ ಎಲ್ಲ ಜನರ

ನಡುವೆಯಿದ್ದು ಅವರ ಕಷ್ಟವನ್ನು ನಾನು ಹೊತ್ತುಕೊಂಡು, ಅವರನ್ನು ದುಃಖದಿಂದ ವಿಮೋಚನೆಗೊಳಿಸುವ ಅವಕಾಶವನ್ನು ಕೇಳಿಕೊಳ್ಳುತ್ತೇನೆ.

**ನ ಗೋಪ್ರದಾನಂ ನ ಮಹೀಪ್ರದಾನಂ**
**ನ ಚಾನ್ನದಾನಂ ನ ತಥಾತ್ಮದಾನಂ ।**
**ಯಥಾ ವದಂತೀಹ ಮಹಾಪ್ರದಾನಂ**
**ಸರ್ವಪ್ರದಾನೇಷ್ವಭಯಪ್ರದಾನಮ್ ॥** ೮೧

-ಹಿತೋಪದೇಶ ಸಂಧಿ-೬೦

ಎಲ್ಲ ಬಗೆಯ ದಾನಗಳಲ್ಲಿಯೂ ಅಭಯಪ್ರದಾನವನ್ನು ದೊಡ್ಡದಾನವೆಂದು ಹೇಳುವಂತೆ ಗೋದಾನವನ್ನಾಗಲೀ, ಭೂದಾನವನ್ನಾಗಲೀ, ಅನ್ನದಾನವನ್ನಾಗಲೀ, ಆತ್ಮದಾನ ವನ್ನಾಗಲೀ ಹೇಳುವುದಿಲ್ಲ.

**ನ ಚಾಗಮಾದೃತೇ ಧರ್ಮಸ್ತರ್ಕೇಣ ವ್ಯವತಿಷ್ಠತೇ ।**
**ಋಷೀಣಾಮಪಿ ಯಜ್ಞಾನಂ ತದಪ್ಯಾಗಮಪೂರ್ವಕಮ್ ॥** ೮೨

-ವಾಕ್ಯಪದೀಯ, ೧-೩೦

ಶಾಸ್ತ್ರದ ನೆರವಿಲ್ಲದೆ ಬರಿಯ ತರ್ಕದಿಂದ ಧರ್ಮವು ವ್ಯವಸ್ಥೆಗೊಳ್ಳುವುದಿಲ್ಲ. ಋಷಿಗಳ (ಧರ್ಮ)ಜ್ಞಾನವೂ ಸಹ ಶಾಸ್ತ್ರಪೂರ್ವಕವಾದದ್ದು.

**ನ ಜಾತು ಕಾಮಾನ್ನ ಭಯಾನ್ನ ಲೋಭಾತ್**
**ಧರ್ಮಂ ಜಹ್ಯಾಜ್ಜೀವಿತಸ್ಯಾಪಿ ಹೇತೋಃ ।**
**ನಿತ್ಯೋ ಧರ್ಮಃ ಸುಖದುಃಖೇ ತ್ವನಿತ್ಯೇ**
**ಜೀವೋ ನಿತ್ಯೋ ಹೇತುರಸ್ಯ ತ್ವನಿತ್ಯಃ ॥** ೮೩

-ಮಹಾಭಾರತ, ಉದ್ಯೋಗ. ೪೦-೧೨

ಕಾಮದಿಂದಾಗಲಿ, ಭಯದಿಂದಾಗಲಿ, ಆಸೆಯಿಂದಾಗಲಿ, ಕಡೆಗೆ ಪ್ರಾಣಾಪೇಕ್ಷೆ ಯಿಂದಾಗಲಿ ಎಂದೂ ಧರ್ಮವನ್ನು ಬಿಡಬಾರದು. ಧರ್ಮವು ಶಾಶ್ವತ. ಸುಖದುಃಖಗಳು ಸ್ಥಿರವಲ್ಲ. ಜೀವನು ನಿತ್ಯ. ಜನ್ಮಕ್ಕೆ ಕಾರಣವಾದ ಕರ್ಮ ಅನಿತ್ಯ.

**ನ ತಥಾ ರತ್ನಮಾಸಾದ್ಯ ಸುಜನಃ ಪರಿತುಷ್ಯತಿ ।**
**ಯಥಾ ತತ್ ತದ್ಗತಾಕಾಂಕ್ಷೇ ಪಾತ್ರೇ ದತ್ವಾ ಪ್ರಹೃಷ್ಯತಿ ॥** ೮೪

-ಅವಿಮಾರಕ, ೪-೧೪

ಒಳ್ಳೆಯ ಮನುಷ್ಯ ಶ್ರೇಷ್ಠವಸ್ತುವು ಸಿಕ್ಕಿದಾಗ ಆಗುವ ಸಂತೋಷಕ್ಕಿಂತಲೂ, ಅದನ್ನು ಪಡೆಯಲು ಒಳ್ಳೆಯ ಪಾತ್ರನು ಸಿಕ್ಕಿದಾಗ ಮಿಗಿಲಾಗಿ ಸಂತೋಷಪಡುತ್ತಾನೆ.

ನ ತ್ಯಜೇದ್ಧರ್ಮಮರ್ಯಾದಾಮಪಿ ಕ್ಲೇಶದಶಾಂ ಶ್ರಿತಃ ।
ಹರಿಶ್ಚಂದ್ರೋ ಹಿ ಧರ್ಮಾರ್ಥೀ ಸೇಹೇ ಚಂಡಾಲದಾಸತಾಮ್ ॥ ೮೫

-ಚಾರುಚರ್ಯಾ-೧೩

ಎಂತಹ ಕಷ್ಟಸ್ಥಿತಿ ಬಂದರೂ ಧರ್ಮದ ಮೇರೆಯನ್ನು ಮೀರಕೂಡದು. ಧರ್ಮಾಪೇಕ್ಷಿಯಾದ ಹರಿಶ್ಚಂದ್ರನು ಚಂಡಾಲನ ದಾಸತ್ವವನ್ನು ಸಹಿಸಿಕೊಂಡನು.

ನ ತತ್ ಸಮಾಚರೇದ್ಧೀರೋ ಯತ್ ಪರೋಽಸ್ಯ ವಿಗರ್ಹಯೇತ್ ।
ಯಥಾತ್ಮನಸ್ತಥಾನ್ಯೇಷಾಂ ದಾರಾ ರಕ್ಷ್ಯಾ ವಿಪಶ್ಚಿತಾ ॥ ೮೬

-ರಾಮಾಯಣ, ಅರಣ್ಯ. ೫೦-೮

ಇನ್ನೊಬ್ಬರು ನಿಂದಿಸಬಹುದಾದ ಕಾರ್ಯವನ್ನು ವಿವೇಕಿಯು ಮಾಡಬಾರದು. ತನ್ನ ಮಡದಿಯಂತೆಯೇ ಪರರ ಮಡದಿಯೂ ಎಂದು ತಿಳಿದು ಅವಳ ಮಾನವನ್ನು ರಕ್ಷಿಸಬೇಕು.

ನ ತಥ್ಯವಚನಂ ಸತ್ಯಂ ನಾತಥ್ಯವಚನಂ ಮೃಷಾ ।
ಯದ್ಭೂತಹಿತಮತ್ಯಂತಂ ತತ್ಸತ್ಯಮಿತರನ್ಮೃಷಾ ॥ ೮೭

-ಸುಭಾಷಿತಸುಧಾನಿಧಿ

ನಿಜವಾದದ್ದನ್ನು ಹೇಳುವ ಮಾತು ಸತ್ಯವಲ್ಲ ; ನಿಜವಲ್ಲದುದನ್ನು ಹೇಳುವ ಮಾತು ಸುಳ್ಳಲ್ಲ. ಯಾವುದು ಪ್ರಾಣಿಗಳಿಗೆ ಅತ್ಯಂತ ಹಿತವಾದುದೋ ಅದು ಸತ್ಯ ; ಹಾಗಲ್ಲದುದು ಸುಳ್ಳು.

ನ ನರ್ಮಯುಕ್ತಂ ವಚನಂ ಹಿನಸ್ತಿ
ನ ಸ್ತ್ರೀಷು ರಾಜನ್ ನ ವಿವಾಹಕಾಲೇ ।
ಪ್ರಾಣಾತ್ಯಯೇ ಸರ್ವಧನಾಪಹಾರೇ
ಪಂಚಾನೃತಾನ್ಯಾಹುರಪಾತಕಾನಿ ॥ ೮೮

-ಮಹಾಭಾರತ, ಆದಿ. ೮೨-೧೬

(ಶರ್ಮಿಷ್ಠೆ ಯಯಾತಿಗೆ ಹೇಳಿದ್ದು)

ಹಾಸ್ಯಾರ್ಥವಾದ ಸುಳ್ಳುಮಾತಿನಿಂದ ಹಿಂಸೆ ಇಲ್ಲ-ಎಂದರೆ ಅದು ಪಾಪಜನಕವಲ್ಲ. ಹಾಗೆಯೇ ಸ್ತ್ರೀಯರಲ್ಲಿ, ವಿವಾಹಕಾಲದಲ್ಲಿ, ಪ್ರಾಣಾಪತ್ತಿನಲ್ಲಿ, ಸಕಲ ಧನದ ಅಪಹಾರವಾಗುವ ಸಂದರ್ಭದಲ್ಲಿ-ಒಟ್ಟು ಈ ಐದು ಸಂದರ್ಭಗಳಲ್ಲಿ ಹೇಳುವ ಸುಳ್ಳು ಪಾಪಜನಕವಲ್ಲವೆಂದು ಬಲ್ಲವರು ಹೇಳುತ್ತಾರೆ.

ನ ವಿದ್ಯಯಾ ಕೇವಲಯಾ ತಪಸಾ ವಾಽಪಿ ಪಾತ್ರತಾ ।
ಯತ್ರ ವೃತ್ತಮಿಮೇ ಚೋಭೇ ತದ್ಧಿ ಪಾತ್ರಂ ಪ್ರಕೀರ್ತಿತಮ್ ॥ ೮೯
-ಯಾಜ್ಞವಲ್ಕ್ಯ, ೧-೨೦೦

ಬರೀ ವಿದ್ಯೆಯಿಂದಾಗಲೀ, ತಪಸ್ಸಿನಿಂದಾಗಲೀ ಯಾರೂ 'ಪಾತ್ರ'ನೆನಿಸುವುದಿಲ್ಲ. ಯಾರಲ್ಲಿ ನಡತೆ, ವಿದ್ಯೆ ಮತ್ತು ತಪಸ್ಸು ಇರುತ್ತವೆಯೋ ಅವನೇ ಸತ್ಪಾತ್ರ.

ನ ಸಂಶಯಂ ಪ್ರಪದ್ಯೇತ ನಾಕಸ್ಮಾದಪ್ರಿಯಂ ವದೇತ್ ।
ನಾಹಿತಂ ನಾನೃತಂ ಚೈವ ನ ಸ್ತೇನಃ ಸ್ಯಾನ್ನ ವಾರ್ಧುಷೀ ॥ ೯೦
-ಯಾಜ್ಞವಲ್ಕ್ಯ, ೧-೧೩೨

ಪ್ರಾಣಸಂಶಯವನ್ನುಂಟುಮಾಡುವ ಕೆಲಸವನ್ನು ಮಾಡಬಾರದು. ಕಾರಣವಿಲ್ಲದೆ ಉದ್ವೇಗವನ್ನುಂಟುಮಾಡುವ, ಹಿತವಲ್ಲದ, ಸುಳ್ಳಾದ ಮಾತುಗಳನ್ನಾಡಬಾರದು. ಕಳ್ಳನಾಗಬಾರದು. ಬಡ್ಡಿಯಿಂದ ಜೀವನ ಮಾಡಬಾರದು.

ನ ಸಾ ಸಭಾ ಯತ್ರ ನ ಸಂತಿ ವೃದ್ಧಾ
ನ ತೇ ವೃದ್ಧಾ ಯೇ ನ ವದಂತಿ ಧರ್ಮಂ ।
ನಾಸೌ ಧರ್ಮೋ ಯತ್ರ ನ ಸತ್ಯಮಸ್ತಿ
ನ ತತ್ ಸತ್ಯಂ ಯತ್‌ಛಲೇನಾಭ್ಯುಪೇತಮ್ ॥ ೯೧
-ಮಹಾಭಾರತ, ಉದ್ಯೋಗ. ೩೫-೫೮

ಎಲ್ಲಿ ವೃದ್ಧರಿಲ್ಲವೋ ಅದು ಸಭೆಯಲ್ಲ. ಯಾರು ಧರ್ಮವನ್ನು ನುಡಿಯುವುದಿಲ್ಲವೋ ಅವರು ವೃದ್ಧರಲ್ಲ. ಎಲ್ಲಿ ಸತ್ಯವಿಲ್ಲವೋ ಅದು ಧರ್ಮವಲ್ಲ. ಯಾವುದು ಹಟದಿಂದ ಕೂಡಿದ್ದೋ ಅದು ಸತ್ಯವಲ್ಲ.

ನ ಹಿ ಧರ್ಮಾರ್ಥಸಿದ್ಧ್ಯರ್ಥಂ ಪಾನಮೇವಂ ಪ್ರಶಸ್ಯತೇ ।
ಪಾನಾದರ್ಥಶ್ಚ ಧರ್ಮಶ್ಚ ಕಾಮಶ್ಚ ಪರಿಹೀಯತೇ ॥ ೯೨
-ರಾಮಾಯಣ, ಕಿಷ್ಕಿಂಧಾ. ೩೩-೪೬

ಧರ್ಮಾರ್ಥಗಳನ್ನು ಸಾಧಿಸತಕ್ಕವರಿಗೆ ಮದ್ಯಪಾನವು ಯೋಗ್ಯವಲ್ಲ. ಧರ್ಮ, ಅರ್ಥ, ಕಾಮ-ಈ ಮೂರು ಮದ್ಯಪಾನದಿಂದ ಕ್ಷೀಣಿಸುತ್ತವೆ.

ನಾಕೃತ್ವಾ ಪ್ರಾಣಿನಾಂ ಹಿಂಸಾಂ ಮಾಂಸಮುತ್ಪದ್ಯತೇ ಕ್ವಚಿತ್ ।
ನ ಚ ಪ್ರಾಣಿವಧಃ ಸ್ವರ್ಗ್ಯಃ ತಸ್ಮಾನ್ಮಾಂಸಂ ವಿವರ್ಜಯೇತ್ ॥ ೯೩
-ಮನುಸ್ಮೃತಿ, ೫-೪೮

ಪ್ರಾಣಿಗಳನ್ನು ಕೊಲ್ಲದೇ ಮಾಂಸ ಸಿಕ್ಕುವುದಿಲ್ಲ. ಪ್ರಾಣಿವಧೆ ಒಳ್ಳೆಯದಲ್ಲ. ಆದುದರಿಂದ ಮಾಂಸವನ್ನು ಬಿಡಬೇಕು.

**ನಾಧರ್ಮಶ್ಚರಿತೋ ರಾಜನ್ ಸದ್ಯಃ ಫಲತಿ ಗೌರಿವ ।**
**ಶನೈರಾವರ್ತ್ಯಮಾನೋ ಹಿ ಕರ್ತುರ್ಮೂಲಾನಿ ಕೃಂತತಿ ॥ ೯೪**

-ಮಹಾಭಾರತ, ಆದಿ, ೮೦-೨

(ಶುಕ್ರಾಚಾರ್ಯನು ವೃಷಪರ್ವನಿಗೆ ಹೇಳಿದ್ದು)

ರಾಜ, ಅಧರ್ಮವನ್ನಾಚರಿಸಿದರೆ ಅದು ಹಸುವಿನಂತೆ ಕೂಡಲೆ ಫಲವನ್ನೀಯುವುದಿಲ್ಲ. ಅದು ಮೆಲ್ಲನೆ ತಿರುಗಿ, ಅಧರ್ಮಿಯ ಬುಡವನ್ನೇ ಕಡಿದುಹಾಕುತ್ತದೆ.

**ನಾಪೇಕ್ಷಾ ನ ಚ ದಾಕ್ಷಿಣ್ಯಂ ನ ಪ್ರೀತಿರ್ನಚ ಸಂಗತಿಃ ।**
**ತಥಾऽಪಿ ಹರತೇ ತಾಪಂ ಲೋಕಾನಾಮುನ್ನತೋ ಘನಃ ॥ ೯೫**

-ಭಾಮಿನೀವಿಲಾಸ, ೧-೩೭

ಮುಗಿಲಿಗೆ ಯಾವ ಅಪೇಕ್ಷೆಯೂ ಇಲ್ಲ. ದಾಕ್ಷಿಣ್ಯವಿಲ್ಲ. ಪ್ರೀತಿಗೋಸ್ಕರವೂ ಅಲ್ಲ. ಜೊತೆಗಾರನೆಂಬ ಭಾವನೆಯೂ ಇಲ್ಲ. ಆದರೂ ಮುಗಿಲು ತನ್ನದೇ ಆದ ದೊಡ್ಡಸ್ತಿಕೆಯಿಂದ ಜನಗಳ ಬೇಗೆಯ ಬೇಗುದಿಯನ್ನು ಹೋಗಲಾಡಿಸುತ್ತದೆ.

**ನಾಮುತ್ರ ಹಿ ಸಹಾಯಾರ್ಥಂ ಪಿತಾ ಮಾತಾ ಚ ತಿಷ್ಠತಃ ।**
**ನ ಪುತ್ರದಾರಾ ನ ಜ್ಞಾತಿಃ ಧರ್ಮಸ್ತಿಷ್ಠತಿ ಕೇವಲಃ ॥ ೯೬**

-ಮನುಸ್ಮೃತಿ, ೪-೨೩೯

ತಂದೆ, ತಾಯಿ, ಮಕ್ಕಳು, ಹೆಂಡತಿ, ನೆಂಟರು ಪರಲೋಕದಲ್ಲಿ ಸಹಾಯ ಮಾಡಲಾರರು. ಧರ್ಮ ಒಂದೇ ಮನುಷ್ಯನನ್ನು ಕಾಪಾಡುತ್ತದೆ.

**ನಾಶ್ರಮಃ ಕಾರಣಂ ಧರ್ಮೇ ಕ್ರಿಯಮಾಣೋ ಭವೇದ್ಧಿ ಸಃ ।**
**ಅತೋ ಯದಾತ್ಮನೋऽಪಥ್ಯಂ ಪರೇಷಾಂ ನ ತದಾಚರೇತ್ ॥ ೯೭**

-ಯಾಜ್ಞವಲ್ಕ್ಯ, ೪-೬೫

ಧರ್ಮಕಾರ್ಯಗಳಿಗೆ ಆಶ್ರಮವಾಗಲಿ ದಂಡಕಮಂಡಲುಗಳಾಗಲೀ ಕಾರಣವಲ್ಲ. ಮಾಡಿದರೆ ಧರ್ಮವು ಆಗುತ್ತದೆ. ಆದುದರಿಂದ ಜ್ಞಾನಿಯಾದವನು ತನಗೆ ಪಥ್ಯವಲ್ಲದ್ದನ್ನು ಇನ್ನೊಬ್ಬರಿಗೆ ಮಾಡಬಾರದು.

**ನಾಸ್ತಿ ಸತ್ಯಾತ್ ಪರೋ ಧರ್ಮಃ ಸಂತುಷ್ಟಿರ್ನಾತ್ಮಜಾತ್ ಪರಾ ।**
**ನಾನ್ನದಾನಾತ್ ಪರಂ ದಾನಂ ವಂದನಾನ್ನೋಪಚಾರಕಮ್ ॥ ೯೮**

-ಪ್ರಯೋಗರತ್ನಮಾಲಾ-೧೫೯

ಸತ್ಯಕ್ಕಿಂತ ಹೆಚ್ಚಿನ ಧರ್ಮವಿಲ್ಲ; ಪುತ್ರಜನ್ಮಕ್ಕಿಂತ ಹೆಚ್ಚಿನ ಆನಂದವಿಲ್ಲ. ಅನ್ನದಾನಕ್ಕಿಂತ ಉತ್ತಮವಾದ ದಾನವಿಲ್ಲ. ನಮಸ್ಕಾರಕ್ಕಿಂತ ಉತ್ತಮವಾದ ಉಪಚಾರವಿಲ್ಲ.

**ನ ಹಾಯನೈರ್ನಪಲಿತೈಃ ನ ವಿತ್ತೇನ ನ ಬಂಧುಭಿಃ ।**
**ಋಷಯಶ್ಚಕ್ರಿರೇ ಧರ್ಮಂ ಯೋಽನೂಚಾನಃ ಸ ನೋ ಮಹಾನ್ ॥ ೯೯**

-ಮನುಸ್ಮೃತಿ, ೨-೧೫೪

ವಯಸ್ಸಿನಿಂದಾಗಲೀ, ನರೆಗೂದಲಿನಿಂದಾಗಲಿ, ಹಣದಿಂದಾಗಲಿ, ನೆಂಟಸ್ತಿಕೆ ಯಿಂದಾಗಲೀ ಯಾರೂ ದೊಡ್ಡವರಾಗುವುದಿಲ್ಲ. ಋಷಿಗಳು ಧರ್ಮವನ್ನು ಆಚರಿಸಿ ದೊಡ್ಡವರಾದರು. ಅಧ್ಯಯನಮಾಡಿದವನು ದೊಡ್ಡವನು.

**ನ ಹೀದೃಶಂ ಸಂವನನಂ ತ್ರಿಷು ಲೋಕೇಷು ವಿದ್ಯತೇ ।**
**ದಯಾ ಮೈತ್ರೀ ಚ ಭೂತೇಷು ದಾನಂ ಚ ಮಧುರಾ ಚ ವಾಕ್ ॥೧೦೦**

-ಮಹಾಭಾರತ, ಆದಿ. ೮೭-೧೩

ಪ್ರಾಣಿಗಳಲ್ಲಿ ದಯೆ, ಸ್ನೇಹ, ದಾನ, ಪ್ರಿಯವಾದ ಮಾತು-ಇಂತಹ ಪ್ರೀತಿಜನಕ ವಾದ ಉತ್ತಮ ಗುಣವು ಮೂರು ಲೋಕಗಳಲ್ಲಿ ಇನ್ನೊಂದಿಲ್ಲ.

**ನಿದಾನಜ್ಞಸ್ಯ ಭಿಷಜೋ ರುಗ್ಣಹಿಂಸಾಂ ಪ್ರಯುಂಜತಃ ।**
**ನ ಕಿಂಚಿದಪಿ ನೈರ್ಘೃಣ್ಯಂ ಘೃಣೈವಾತ್ರ ಪ್ರಯೋಜಿಕಾ ॥ ೧೦೧**

-ಶಿವಪುರಾಣ

ರೋಗದ ಮೂಲಕಾರಣವನ್ನು ತಿಳಿದು ರೋಗಿಯನ್ನು ಶಸ್ತ್ರಚಿಕಿತ್ಸೆಯ ಹಿಂಸೆಗೆ ಗುರಿಮಾಡಿದರೂ, ವೈದ್ಯನು ಕರುಣೆಯಿಂದಲೇ ರೋಗಿಗೆ ಗುಣವಾಗಲಿ ಎಂದು ಮಾಡುತ್ತಾನೆ. ಇದು ಕ್ರೂರವಾದ ಕ್ರಿಯೆಯಲ್ಲ.

**ಪ್ರಜಾ ಸಂರಕ್ಷಣಂ ಧರ್ಮೋ ಧಾರ್ಮಿಕಸ್ಯ ಮಹೀಭೃತಃ ।**
**ತಸ್ಮಾದಸಾಧೂನ್ ಧರ್ಮಾಯ ನಿಘ್ನನ್ ದೋಷೈರ್ನ ಲಿಪ್ಯತೇ ॥ ೧೦೨**

-ಕೌಟಿಲ್ಯ

ಧರ್ಮಿಷ್ಠನಾದ ಅರಸನು ಪ್ರಜೆಗಳನ್ನು ಕಾಪಾಡಬೇಕು. ಅದಕ್ಕಾಗಿ ದುಷ್ಟರನ್ನು ದಂಡಿಸಿದರೆ ದೋಷವುಂಟಾಗುವುದಿಲ್ಲ.

**ಪರಸ್ಮಿನ್ ಬಂಧುವರ್ಗೇ ವಾ ಮಿತ್ರೇ ದ್ವೇಷ್ಯೇ ರಿಪೌ ತಥಾ ।**
**ಆತ್ಮವದ್ವರ್ತಿತವ್ಯಂ ಹಿ ದಯೈಷಾ ಪರಿಕೀರ್ತಿತಾ ॥ ೧೦೩**

-ಅತ್ರಿಸಂಹಿತಾ, ೧-೪೧

ನೆಂಟರಲ್ಲಾಗಲೀ ಬೇರೆಯವರಲ್ಲಾಗಲಿ, ಮಿತ್ರರಲ್ಲಾಗಲಿ ದ್ವೇಷದಿಂದ ಕೂಡಿದ ಶತ್ರುವಿನಲ್ಲಾಗಲಿ ತನ್ನಂತೆ ಅವರೂ ಎಂದು ತಿಳಿದು ವರ್ತಿಸುವುದೇ ದಯೆ.

**ಪರೋಪದೇಶೇ ಪಾಂಡಿತ್ಯಂ ಸರ್ವೇಷಾಂ ಸುಕರಂ ನೃಣಾಂ ।**
**ಧರ್ಮೇ ಸ್ವೀಯಮನುಷ್ಠಾನಂ ಕಸ್ಯಚಿತ್ತು ಮಹಾತ್ಮನಃ ॥ ೧೦೪**

-ಸಮಯೋಚಿತಪದ್ಯಮಾಲಿಕಾ

ಪರೋಪದೇಶ ಮಾಡುವಾಗ ಪಾಂಡಿತ್ಯವನ್ನು ಮೆರೆಸುವುದು ಎಲ್ಲರಿಗೂ ಸುಲಭ. ತಾನು ಧರ್ಮದಲ್ಲಿ ನಡೆಯುವುದು ಯಾವನೋ ಒಬ್ಬ ಮಹಾತ್ಮನಿಗೆ ಸಾಧ್ಯವಾದೀತು.

**ಪಾದೋಽಧರ್ಮಸ್ಯ ಕರ್ತಾರಂ ಪಾದಃ ಸಾಕ್ಷಿಣಮೃಚ್ಛತಿ ।**
**ಪಾದಃ ಸಭಾಸದಃ ಸರ್ವಾನ್ ಪಾದೋ ರಾಜಾನಮೃಚ್ಛತಿ ॥ ೧೦೫**

-ಮನುಸ್ಮೃತಿ, ೮-೧೮

ಒಂದು ಸಭೆಯಲ್ಲಿ ಅಧರ್ಮವು ನಡೆದು ಅದನ್ನು ಯಾರೂ ವಿರೋಧಿಸದೇ ಇದ್ದರೆ ಅಧರ್ಮದ ಕಾಲುಭಾಗ ಮಾಡಿದವನಿಗೂ, ಕಾಲುಭಾಗ ಸಾಕ್ಷಿಗೂ, ಕಾಲುಭಾಗ ಎಲ್ಲಾ ಸಭ್ಯರಿಗೂ, ಕಾಲುಭಾಗ ಅರಸನಿಗೂ ಸೇರುತ್ತದೆ.

**ಪ್ರಾಣಾ ಯಥಾತ್ಮನೋಽಭೀಷ್ಟಾ ಭೂತಾನಾಮಪಿ ತೇ ತಥಾ ।**
**ಆತ್ಮೌಪಮ್ಯೇನ ಭೂತೇಷು ದಯಾಂ ಕುರ್ವಂತಿ ಸಾಧವಃ ॥ ೧೦೬**

-ಹಿತೋಪದೇಶ, ಮಿತ್ರಲಾಭ-೧೦

ತನಗೆ ಹೇಗೆ ಪ್ರಾಣದಮೇಲೆ ಆಸೆ ಇದೆಯೋ ಹಾಗೆಯೇ ಇತರ ಪ್ರಾಣಿಗಳಿಗೂ ಸಹ. ಆದುದರಿಂದ ಸಾಧುಗಳು ತಮ್ಮಂತೆಯೇ ಎಣಿಸಿ ಪ್ರಾಣಿಗಳೆಲ್ಲಕ್ಕೂ ದಯೆ ತೋರುತ್ತಾರೆ.

**ಪಿತಾ ಮಾತಾ ಭ್ರಾತಾ ಪ್ರಿಯಸಹಚರೀ ಸೂನುನಿವಹಃ**
**ಸುಹೃತ್ ಸ್ವಾಮೀ ಮಾದ್ಯತ್ಕರಿಭಟರಥಾಶ್ವಃ ಪರಿಕರಃ ।**
**ನಿಮಜ್ಜಂತಂ ಜಂತುಂ ನರಕಕುಹರೇ ರಕ್ಷಿತುಮಲಂ**
**ಗುರೋರ್ಧರ್ಮಾಧರ್ಮಪ್ರಕಟನಪರಾತ್ ಕೋಽಪಿ ನ ಪರಃ ॥ ೧೦೭**

-ಸೋಮಪ್ರಭಾಚಾರ್ಯನ ಸೂಕ್ತಿಮುಕ್ತಾವಲಿ-೧೫

ಧರ್ಮಾಧರ್ಮಗಳ ಸ್ವರೂಪವನ್ನು ವಿವರಿಸಿ ಹೇಳುವ ಗುರು ಒಬ್ಬನೇ ನರಕದಲ್ಲಿ ಮುಳುಗುವ ಮನುಷ್ಯನನ್ನು ರಕ್ಷಿಸಲು ಸಮರ್ಥ. ಇನ್ನು ಯಾರೂ ಅಲ್ಲ. ತಂದೆ, ತಾಯಿ, ಪ್ರಿಯೆ, ಮಕ್ಕಳು, ಮಿತ್ರ, ಒಡೆಯ, ಆನೆ, ಸೈನಿಕ, ರಥ, ಕುದುರೆ, ಪರಿವಾರಗಳು ಅವನನ್ನು ರಕ್ಷಿಸಲಾರವು.

ಪಿಬಂತಿ ನದ್ಯಃ ಸ್ವಯಮೇವ ನಾಂಭಃ
ಖಾದಂತಿ ನ ಸ್ವಾದುಫಲಾನಿ ವೃಕ್ಷಾಃ ।
ಪಯೋಧರೋ ನ ಕ್ವಚಿದತ್ತಿ ಸಸ್ಯಂ
ಪರೋಪಕಾರಾಯ ಸತಾಂ ವಿಭೂತಯಃ ॥ ೧೦೮

-ಸುಭಾಷಿತಸುಧಾನಿಧಿ

ನದಿಗಳು ನೀರನ್ನು ತಾವೇ ಕುಡಿಯುವುದಿಲ್ಲ. ಮರಗಳು ತಮ್ಮ ಸಿಹಿಯಾದ ಹಣ್ಣುಗಳನ್ನು ತಾವೇ ತಿನ್ನುವುದಿಲ್ಲ. ಮೋಡ ಎಲ್ಲಿಯೂ ಸಸ್ಯವನ್ನು ತಿನ್ನುವುದಿಲ್ಲ. ಸಜ್ಜನರ ಐಶ್ವರ್ಯ ಮತ್ತೊಬ್ಬರ ಉಪಕಾರಕ್ಕಾಗಿಯೇ.

ಪುಣ್ಯೇನ ಕಾಯಃ ಸುಖಿತಃ ಪಾಂಡಿತ್ಯೇನ ಮನಃಸುಖಂ ।
ತಿಷ್ಠನ್ ಪರಾರ್ಥಂ ಸಂಸಾರೇ ಕೃಪಾಲುಃ ಕೇನ ಖಿದ್ಯತೇ ॥ ೧೦೯

-ಬೋಧಿಚರ್ಯಾವತಾರ, ೨೫೯

ಪುಣ್ಯಕಾರ್ಯಗಳಿಂದ ಶರೀರಕ್ಕೆ ಸುಖವುಂಟಾಗುತ್ತದೆ. ಪಾಂಡಿತ್ಯದಿಂದ ಮನಸ್ಸಿಗೆ ಸುಖವುಂಟಾಗುತ್ತದೆ. ಬೇರೆಯವರಿಗೋಸ್ಕರ ಜಗತ್ತಿನಲ್ಲಿ ಜೀವಿಸುವ ಕೃಪಾಳುವಿಗೆ ದುಃಖವಾಗಲು ಕಾರಣವೇ ಇಲ್ಲ.

ಪೂರ್ವೇ ವಯಸಿ ತತ್ ಕುರ್ಯಾತ್ ಯೇನ ವೃದ್ಧಃ ಸುಖಂ ವಸೇತ್
ಯಾವಜ್ಜೀವೇನ ತತ್ ಕುರ್ಯಾತ್ ಯೇನ ಪ್ರೇತ್ಯ ಸುಖಂ ವಸೇತ್

-ಮಹಾಭಾರತ, ಉದ್ಯೋ. ೩೫-೭೮

ವಯಸ್ಸಾದಮೇಲೆ ಯಾವುದರಿಂದ ಸುಖವಾಗಿರಲು ಸಾಧ್ಯವೋ ಅದನ್ನು ಪೂರ್ವ ವಯಸ್ಸಿನಲ್ಲಿ ಮಾಡಬೇಕು. ಪರಲೋಕದಲ್ಲಿ ಯಾವುದರಿಂದ ಸುಖ ಉಂಟೋ ಅಂಥ ಕೆಲಸವನ್ನು ಬದುಕಿರುವಾಗ ಮಾಡಬೇಕು.

ಫಲಮೂಲಾಶನೈರ್ಮೇಧ್ಯೈಃ ಮುನ್ಯನ್ನಾನಾಂ ಚ ಭೋಜನೈಃ ।
ನ ತತ್ಫಲಮವಾಪ್ನೋತಿ ಯನ್ಮಾಂಸಪರಿವರ್ಜನಾತ್ ॥ ೧೧೧

-ಮನುಸ್ಮೃತಿ, ೫-೫೪

ಪವಿತ್ರವಾದ ಹಣ್ಣು ಗೆಡ್ಡೆ ಮೊದಲಾದ ಋಷಿಗಳ ಆಹಾರದಿಂದಲೂ ಬಾರದ ಫಲ, ಮಾಂಸವನ್ನು ಬಿಡುವುದರಿಂದ ಬರುತ್ತದೆ.

ಭವಂತಿ ನರಕಾಃ ಪಾಪಾತ್ ಪಾಪಂ ದಾರಿದ್ರ್ಯಸಂಭವಂ ।
ದಾರಿದ್ರ್ಯಮಪ್ರಧಾನೇನ ತಸ್ಮಾದ್ದಾನಪರೋ ಭವೇತ್ ॥ ೧೧೨

-ಕುವಲಯಾನಂದ

ಪಾಪಕಾರ್ಯದಿಂದ ನರಕಪ್ರಾಪ್ತಿಯಾಗುತ್ತದೆ. ಪಾಪಕರ್ಮವು ದಾರಿದ್ರ್ಯದಿಂದ ನಡೆಯುತ್ತದೆ. ದಾರಿದ್ರ್ಯವು ದಾನಮಾಡದಿರುವುದರಿಂದ ಸಂಭವಿಸುತ್ತದೆ. ಆದ್ದರಿಂದ ಮನುಷ್ಯನು ದಾನಶೀಲನಾಗಬೇಕು.

**ಭಾನುಃ ಸಕೃದ್ಯುಕ್ತತುರಂಗ ಏವ**
**ರಾತ್ರಿಂ ದಿವಂ ಗಂಧವಹಃ ಪ್ರಯಾತಿ ।**
**ಶೇಷಃ ಸದೈವಾಹಿತಭೂಮಿಭಾರಃ ।**
**ಷಷ್ಠಾಂಶವೃತ್ತೇರಪಿ ಧರ್ಮ ಏಷಃ ॥** ೧೧೩

-ಅಭಿಜ್ಞಾನ ಶಾಕುಂತಲ, ೫-೪

ಸೂರ್ಯನು ಒಂದು ಸಲ ಕುದುರೆಯನ್ನು ಹೂಡಿ ಹೊರಟಿದ್ದಾನೆ, ಅವನ ಕೆಲಸಕ್ಕೆ ವಿರಾಮವೇ ಇಲ್ಲ. ಗಾಳಿ ರಾತ್ರಿ ಹಗಲೂ ಬೀಸುತ್ತದೆ. ಆದಿಶೇಷನು ಸರ್ವದಾ ಭೂಮಿಯ ಭಾರವನ್ನು ಹೊತ್ತೇ ಇದ್ದಾನೆ. ಅದರಂತೆ ಆರನೆಯ ಒಂದು ಭಾಗವನ್ನು ಕಂದಾಯವಾಗಿ ತೆಗೆದುಕೊಳ್ಳುವ ಅರಸನ ಕೆಲಸಕ್ಕೂ ವಿರಾಮವೇ ಇಲ್ಲ.

**ಬಾಲೋ ವಾ ಯದಿ ವಾ ವೃದ್ಧೋ ಯುವಾ ವಾ ಗೃಹಮಾಗತಃ ।**
**ತಸ್ಯ ಪೂಜಾ ವಿಧಾತವ್ಯಾ ಸರ್ವತ್ರಾಭ್ಯಾಗತೋ ಗುರುಃ ॥** ೧೧೪

-ಹಿತೋಪದೇಶ, ಮಿತ್ರಲಾಭ-೭೯

ಮನೆಗೆ ಬಂದವನು ಬಾಲನಾಗಿರಲಿ, ವೃದ್ಧನಾಗಿರಲಿ, ಯುವಕನಾಗಿರಲಿ ಅವನಿಗೆ ಸತ್ಕಾರವನ್ನು ಮಾಡಬೇಕು. ಯಾವಾಗಲೂ ಅಭ್ಯಾಗತನಾದವನು ಗುರುಸಮಾನ.

**ಬ್ರಾಹ್ಮೇ ಮುಹೂರ್ತೇ ಚೋತ್ಥಾಯ ಚಿಂತಯೇದಾತ್ಮನೋ ಹಿತಂ ।**
**ಧರ್ಮಾರ್ಥಕಾಮಾನ್ ಸ್ವೇ ಕಾಲೇ ಯಥಾಶಕ್ತಿ ನ ಹಾಪಯೇತ್ ॥** ೧೧೫

-ಯಾಜ್ಞವಲ್ಕ್ಯ, ೧-೧೧೫

ಮುಂಜಾನೆ ಎದ್ದು ತನಗೆ ಯಾವುದು ಒಳ್ಳೆಯದೆಂಬುದನ್ನು ಆಲೋಚಿಸಬೇಕು. ಆಯಾ ಕಾಲದಲ್ಲಿ ಧರ್ಮ, ಅರ್ಥ, ಕಾಮಗಳನ್ನು ಯಥಾಶಕ್ತಿ ಅನುಭವಿಸಬೇಕು. ಬಿಡಬಾರದು.

**ಮತ್ತಂ ಪ್ರಮತ್ತಮುನ್ಮತ್ತಂ ಸುಪ್ತಂ ಬಾಲಂ ಸ್ತ್ರಿಯಂ ಜಡಂ ।**
**ಪ್ರಪನ್ನಂ ವಿರಥಂ ಭೀತಂ ನ ರಿಪುಂ ಹಂತಿ ಧರ್ಮವಿತ್ ॥** ೧೧೬

-ಭಾಗವತ, ೧-೭-೩೬

ಧರ್ಮಶಾಸ್ತ್ರವನ್ನು ತಿಳಿದವನು ಮತ್ತನನ್ನೂ, ಪ್ರಮತ್ತನನ್ನೂ, ಹುಚ್ಚನನ್ನೂ, ನಿದ್ರೆಮಾಡುವವನನ್ನೂ, ಬಾಲಕನನ್ನೂ, ಹೆಂಗಸನ್ನೂ, ಜಡನನ್ನೂ, ಶರಣಾಗತನಾದ, ರಥವಿಲ್ಲದ, ಅಥವಾ ಹೆದರಿದ ಶತ್ರುವನ್ನೂ ಕೊಲ್ಲುವುದಿಲ್ಲ.

**ಮನಃಪ್ರೀತಿಕರಃ ಸ್ವರ್ಗಃ ನರಕಸ್ತದ್ವಿಪರ್ಯಯಃ ।**
**ನರಕಸ್ವರ್ಗಸಂಜ್ಞೇ ವೈ ಪಾಪಪುಣ್ಯೇ ದ್ವಿಜೋತ್ತಮ ॥ ೧೧೭**

-ವಿಷ್ಣುಪುರಾಣ, ೨-೬-೪೪

ಮನಸ್ಸಿಗೆ ಆನಂದವುಂಟುಮಾಡುವುದೇ ಸ್ವರ್ಗ. ದುಃಖವೇ ನರಕ. ನರಕ ಸ್ವರ್ಗಗಳಿಗೆ ಪಾಪ ಪುಣ್ಯವೆಂದು ಹೆಸರು.

**ಮಯ್ಯೇವ ಜೀರ್ಣತಾಂ ಯಾತು ಯತ್ತ್ವಯೋಪಕೃತಂ ಮಮ ।**
**ನರಃ ಪ್ರತ್ಯುಪಕಾರಾರ್ಥೀ ವಿಪತ್ತಿಮನುಕಾಂಕ್ಷತಿ ॥ ೧೧೮**

-ಸುಭಾಷಿತಸುಧಾನಿಧಿ (ವಸಿಷ್ಠ)

ನೀನು ನನಗೆ ಮಾಡಿದ ಉಪಕಾರ ನನ್ನಲ್ಲಿಯೇ ಜೀರ್ಣವಾಗಿಹೋಗಲಿ. ಉಪಕಾರಕ್ಕೆ ಪ್ರತಿಯಾಗಿ ಉಪಕಾರ ಮಾಡಲು ಬಯಸುವ ಮನುಷ್ಯ ಇನ್ನೊಬ್ಬನಿಗೆ ವಿಪತ್ತನ್ನೇ ನಿರೀಕ್ಷಿಸುತ್ತಾನೆ.

**ಮಹತಾ ಪುಣ್ಯಯೋಗೇನ ಮಾನುಷಂ ಜನ್ಮ ಲಭ್ಯತೇ ।**
**ತತ್ಪ್ರಾಪ್ಯ ನ ಕೃತೋ ಧರ್ಮಃ ಕೀದೃಶಂ ಹಿ ಮಯಾಕೃತಮ್ ೧೧೯**

-ಗರುಡಪುರಾಣ, ೨-೩೪

ಬಹಳ ಪುಣ್ಯಗಳಿಂದ ಮನುಷ್ಯ ಜನ್ಮ ಸಿಗುತ್ತದೆ. ಅದನ್ನು ಪಡೆದೂ ಸಹ ನಾನು ಧರ್ಮಕಾರ್ಯ ಮಾಡಲಿಲ್ಲ. ನಾನು ಮಾಡಿದ್ದೇನು-ಎಂದು ಜೀವಿಯು ಪಶ್ಚಾತ್ತಾಪಪಡುತ್ತಾನೆ.

**ಮಾಂ ಸ ಭಕ್ಷಯಿತಾಽಮುತ್ರ ಯಸ್ಯ ಮಾಂಸಮಿಹಾದ್ಮ್ಯಹಂ ।**
**ಏತನ್ಮಾಂಸಸ್ಯ ಮಾಂಸತ್ವಂ ಪ್ರವದಂತಿ ಮನೀಷಿಣಃ ॥ ೧೨೦**

-ಮನುಸ್ಮೃತಿ, ೫-೫೫

ಯಾವುದರ ಮಾಂಸವನ್ನು ಇಲ್ಲಿ ತಿನ್ನುತ್ತೇನೆಯೋ, ಬೇರೆ ಲೋಕದಲ್ಲಿ ಮಾಂ=ನನ್ನನ್ನು ಸಃ=ಅದು ತಿನ್ನುತ್ತದೆ. ಇದೇ ಮಾಂಸ ಎಂಬ ಪದಕ್ಕೆ ಅರ್ಥವೆಂದು ತಿಳಿದವರು ಹೇಳುತ್ತಾರೆ.

**ಮೃತಂ ಶರೀರಮುತ್ಸೃಜ್ಯ ಕಾಷ್ಠಲೋಷ್ಟಸಮಂ ಕ್ಷಿತೌ ।**
**ವಿಮುಖಾ ಬಾಂಧವಾ ಯಾಂತಿ ಧರ್ಮಸ್ತಮನುಗಚ್ಛತಿ ॥ ೧೨೧**

-ಮನುಸ್ಮೃತಿ, ೪-೨೪೧

ಪಾಪಕಾರ್ಯದಿಂದ ನರಕಪ್ರಾಪ್ತಿಯಾಗುತ್ತದೆ. ಪಾಪಕರ್ಮವು ದಾರಿದ್ರ್ಯದಿಂದ ನಡೆಯುತ್ತದೆ. ದಾರಿದ್ರ್ಯವು ದಾನಮಾಡದಿರುವುದರಿಂದ ಸಂಭವಿಸುತ್ತದೆ. ಆದ್ದರಿಂದ ಮನುಷ್ಯನು ದಾನಶೀಲನಾಗಬೇಕು.

**ಭಾನುಃ ಸಕೃದ್ಯುಕ್ತತುರಂಗ ಏವ**
**ರಾತ್ರಿಂ ದಿವಂ ಗಂಧವಹಃ ಪ್ರಯಾತಿ ।**
**ಶೇಷಃ ಸದೈವಾಹಿತಭೂಮಿಭಾರಃ ।**
**ಷಷ್ಠಾಂಶವೃತ್ತೇರಪಿ ಧರ್ಮ ಏಷಃ ॥** ೧೧೩

-ಅಭಿಜ್ಞಾನ ಶಾಕುಂತಲ, ೫-೪

ಸೂರ್ಯನು ಒಂದು ಸಲ ಕುದುರೆಯನ್ನು ಹೂಡಿ ಹೊರಟಿದ್ದಾನೆ, ಅವನ ಕೆಲಸಕ್ಕೆ ವಿರಾಮವೇ ಇಲ್ಲ. ಗಾಳಿ ರಾತ್ರಿ ಹಗಲೂ ಬೀಸುತ್ತದೆ. ಆದಿಶೇಷನು ಸರ್ವದಾ ಭೂಮಿಯ ಭಾರವನ್ನು ಹೊತ್ತೇ ಇದ್ದಾನೆ. ಅದರಂತೆ ಆರನೆಯ ಒಂದು ಭಾಗವನ್ನು ಕಂದಾಯವಾಗಿ ತೆಗೆದುಕೊಳ್ಳುವ ಅರಸನ ಕೆಲಸಕ್ಕೂ ವಿರಾಮವೇ ಇಲ್ಲ.

**ಬಾಲೋ ವಾ ಯದಿ ವಾ ವೃದ್ಧೋ ಯುವಾ ವಾ ಗೃಹಮಾಗತಃ ।**
**ತಸ್ಯ ಪೂಜಾ ವಿಧಾತವ್ಯಾ ಸರ್ವತ್ರಾಭ್ಯಾಗತೋ ಗುರುಃ ॥** ೧೧೪

-ಹಿತೋಪದೇಶ, ಮಿತ್ರಲಾಭ-೭೯

ಮನೆಗೆ ಬಂದವನು ಬಾಲನಾಗಿರಲಿ, ವೃದ್ಧನಾಗಿರಲಿ, ಯುವಕನಾಗಿರಲಿ ಅವನಿಗೆ ಸತ್ಕಾರವನ್ನು ಮಾಡಬೇಕು. ಯಾವಾಗಲೂ ಅಭ್ಯಾಗತನಾದವನು ಗುರುಸಮಾನ.

**ಬ್ರಾಹ್ಮೇ ಮುಹೂರ್ತೇ ಚೋತ್ಥಾಯ ಚಿಂತಯೇದಾತ್ಮನೋ ಹಿತಂ ।**
**ಧರ್ಮಾರ್ಥಕಾಮಾನ್ ಸ್ವೇ ಕಾಲೇ ಯಥಾಶಕ್ತಿ ನ ಹಾಪಯೇತ್ ॥** ೧೧೫

-ಯಾಜ್ಞವಲ್ಕ್ಯ, ೧-೧೧೫

ಮುಂಜಾನೆ ಎದ್ದು ತನಗೆ ಯಾವುದು ಒಳ್ಳೆಯದೆಂಬುದನ್ನು ಆಲೋಚಿಸಬೇಕು. ಆಯಾ ಕಾಲದಲ್ಲಿ ಧರ್ಮ, ಅರ್ಥ, ಕಾಮಗಳನ್ನು ಯಥಾಶಕ್ತಿ ಅನುಭವಿಸಬೇಕು. ಬಿಡಬಾರದು.

**ಮತ್ತಂ ಪ್ರಮತ್ತಮುನ್ಮತ್ತಂ ಸುಪ್ತಂ ಬಾಲಂ ಸ್ತ್ರಿಯಂ ಜಡಂ ।**
**ಪ್ರಪನ್ನಂ ವಿರಥಂ ಭೀತಂ ನ ರಿಪುಂ ಹಂತಿ ಧರ್ಮವಿತ್ ॥** ೧೧೬

-ಭಾಗವತ, ೧-೭-೩೬

ಧರ್ಮಶಾಸ್ತ್ರವನ್ನು ತಿಳಿದವನು ಮತ್ತನನ್ನೂ, ಪ್ರಮತ್ತನನ್ನೂ, ಹುಚ್ಚನನ್ನೂ, ನಿದ್ರೆಮಾಡುವವನನ್ನೂ, ಬಾಲಕನನ್ನೂ, ಹೆಂಗಸನ್ನೂ, ಜಡನನ್ನೂ, ಶರಣಾಗತನಾದ, ರಥವಿಲ್ಲದ, ಅಥವಾ ಹೆದರಿದ ಶತ್ರುವನ್ನೂ ಕೊಲ್ಲುವುದಿಲ್ಲ.

**ಮನಃಪ್ರೀತಿಕರಃ ಸ್ವರ್ಗಃ ನರಕಸ್ತದ್ವಿಪರ್ಯಯಃ ।**
**ನರಕಸ್ವರ್ಗಸಂಜ್ಞೇ ವೈ ಪಾಪಪುಣ್ಯೇ ದ್ವಿಜೋತ್ತಮ ॥** ೧೧೭
-ವಿಷ್ಣುಪುರಾಣ, ೨-೬-೪೪

ಮನಸ್ಸಿಗೆ ಆನಂದವುಂಟುಮಾಡುವುದೇ ಸ್ವರ್ಗ. ದುಃಖವೇ ನರಕ. ನರಕ ಸ್ವರ್ಗಗಳಿಗೆ ಪಾಪ ಪುಣ್ಯವೆಂದು ಹೆಸರು.

**ಮಯ್ಯೇವ ಜೀರ್ಣತಾಂ ಯಾತು ಯತ್ತ್ವಯೋಪಕೃತಂ ಮಮ ।**
**ನರಃ ಪ್ರತ್ಯುಪಕಾರಾರ್ಥೀ ವಿಪತ್ತಿಮನುಕಾಂಕ್ಷತಿ ॥** ೧೧೮
-ಸುಭಾಷಿತಸುಧಾನಿಧಿ (ವಸಿಷ್ಠ)

ನೀನು ನನಗೆ ಮಾಡಿದ ಉಪಕಾರ ನನ್ನಲ್ಲಿಯೇ ಜೀರ್ಣವಾಗಿಹೋಗಲಿ. ಉಪಕಾರಕ್ಕೆ ಪ್ರತಿಯಾಗಿ ಉಪಕಾರ ಮಾಡಲು ಬಯಸುವ ಮನುಷ್ಯ ಇನ್ನೊಬ್ಬನಿಗೆ ವಿಪತ್ತನ್ನೇ ನಿರೀಕ್ಷಿಸುತ್ತಾನೆ.

**ಮಹತಾ ಪುಣ್ಯಯೋಗೇನ ಮಾನುಷಂ ಜನ್ಮ ಲಭ್ಯತೇ ।**
**ತತ್ಪ್ರಾಪ್ಯ ನ ಕೃತೋ ಧರ್ಮಃ ಕೀದೃಶಂ ಹಿ ಮಯಾಕೃತಮ್** ೧೧೯
-ಗರುಡಪುರಾಣ, ೨-೩೪

ಬಹಳ ಪುಣ್ಯಗಳಿಂದ ಮನುಷ್ಯ ಜನ್ಮ ಸಿಗುತ್ತದೆ. ಅದನ್ನು ಪಡೆದೂ ಸಹ ನಾನು ಧರ್ಮಕಾರ್ಯ ಮಾಡಲಿಲ್ಲ. ನಾನು ಮಾಡಿದ್ದೇನು-ಎಂದು ಜೀವಿಯು ಪಶ್ಚಾತ್ತಾಪಪಡುತ್ತಾನೆ.

**ಮಾಂ ಸ ಭಕ್ಷಯಿತಾಽಮುತ್ರ ಯಸ್ಯ ಮಾಂಸಮಿಹಾದ್ಮ್ಯಹಂ ।**
**ಏತನ್ಮಾಂಸಸ್ಯ ಮಾಂಸತ್ವಂ ಪ್ರವದಂತಿ ಮನೀಷಿಣಃ ॥** ೧೨೦
-ಮನುಸ್ಮೃತಿ, ೫-೫೫

ಯಾವುದರ ಮಾಂಸವನ್ನು ಇಲ್ಲಿ ತಿನ್ನುತ್ತೇನೆಯೋ, ಬೇರೆ ಲೋಕದಲ್ಲಿ ಮಾಂ=ನನ್ನನ್ನು ಸಃ=ಅದು ತಿನ್ನುತ್ತದೆ. ಇದೇ ಮಾಂಸ ಎಂಬ ಪದಕ್ಕೆ ಅರ್ಥವೆಂದು ತಿಳಿದವರು ಹೇಳುತ್ತಾರೆ.

**ಮೃತಂ ಶರೀರಮುತ್ಸೃಜ್ಯ ಕಾಷ್ಠಲೋಷ್ಟಸಮಂ ಕ್ಷಿತೌ ।**
**ವಿಮುಖಾ ಬಾಂಧವಾ ಯಾಂತಿ ಧರ್ಮಸ್ತಮನುಗಚ್ಛತಿ ॥** ೧೨೧
-ಮನುಸ್ಮೃತಿ, ೪-೨೪೧

ಸತ್ತಮೇಲೆ ಸೌದೆಯಂತೆ, ಮಣ್ಣಿನ ಹೆಂಟೆಯಂತೆ ಇರುವ ಹೆಣವನ್ನು ಬಿಟ್ಟು ನೆಂಟರು ಹಿಂತಿರುಗುತ್ತಾರೆ. ಧರ್ಮ ಒಂದೇ ಅವನನ್ನು ಹಿಂಬಾಲಿಸುತ್ತದೆ.

**ಮೃತೋಽಪ್ಯರ್ಥಂ ನ ಮೋಕ್ಷ್ಯಾಮಿ ಬದ್ಧ್ವಾ ನೇಷ್ಯಾಮಿ ಮೂರ್ಧನಿ ।**
**ಇತಿ ಚೇತ್ ಸುದೃಢೋ ಲೋಭಃ ಪಾತ್ರೇ ದೇಯಮಶಂಕಿತಮ್ ॥ ೧೨೨**

-ಸಭಾರಂಜನಶತಕ-೩೮

'ಸತ್ತರೂ ಹಣವನ್ನು ಬಿಡಲಾರೆ, ಅದನ್ನು ಕಟ್ಟಿ ತಲೆಯಲ್ಲಿ ಹೊತ್ತುಕೊಂಡು ಹೋಗುವೆನು' ಎಂದು ಲೋಭವು ದೃಢವಾಗಿರುವುದಾದರೆ, ಹಿಂದೆ ಮುಂದೆ ನೋಡದೆ ಯೋಗ್ಯರಿಗೆ ದಾನಮಾಡು! (ದಾನಮಾಡಿದ್ದು ಸತ್ತಮೇಲೆ ಜೊತೆಗೆ ಬರುತ್ತದೆ.)

**ಮೃಷಾವಾದಂ ಪರಿಹರೇತ್ ಕುರ್ಯಾತ್ ಪ್ರಿಯಮಯಾಚಿತಃ ।**
**ನ ಚ ಕಾಮಾನ್ನ ಸಂರಂಭಾನ್ನ ದ್ವೇಷಾದ್ಧರ್ಮಮುತ್ಸೃಜೇತ್ ॥ ೧೨೩**

ಮಹಾಭಾರತ, ವನ. ೨೦೭-೪೨

ವ್ಯರ್ಥವಾಗಿ ವಾದಕ್ಕಿಳಿಯಬಾರದು. ಅಪ್ರಾರ್ಥಿತನಾಗಿ ಒಳ್ಳೆಯದನ್ನು ಮಾಡಬೇಕು. ಕಾಮ, ದುಡುಕು, ದ್ವೇಷಗಳಿಂದ ಧರ್ಮವನ್ನೆಂದಿಗೂ ತ್ಯಜಿಸಬಾರದು.

**ಯ ಉದ್ಧರೇತ್ಕರಂ ರಾಜಾ ಪ್ರಜಾ ಧರ್ಮೇಷ್ವಶಿಕ್ಷಯನ್ ।**
**ಪ್ರಜಾನಾಂ ಶಮಲಂ ಭುಂಕ್ತೇ ಭಗಂ ಚ ಸ್ವಂ ಜಹಾತಿ ಸಃ ॥ ೧೨೪**

-ಭಾಗವತ, ೪-೨೧-೨೪

ಯಾವ ರಾಜನು ಧರ್ಮದ ವಿಷಯದಲ್ಲಿ ಪ್ರಜೆಗಳನ್ನು ಉಪದೇಶಿಸದೆ ತೆರಿಗೆಯನ್ನು ಅವರಿಂದ ಪಡೆಯುತ್ತಾನೋ ಅವನು ಪ್ರಜೆಗಳ ಕೊಳಕನ್ನು ತಿನ್ನುತ್ತಾನೆ. ಅವನಿಗೆ ಶ್ರೇಯಸ್ಸು ಇಲ್ಲ.

**ಯಚ್ಛನ್ ಜಲಮಪಿ ಜಲದೋ ವಲ್ಲಭತಾಮೇತಿ ಸಕಲಲೋಕಸ್ಯ ।**
**ನಿತ್ಯಂ ಪ್ರಸಾರಿತಕರೋ ಮಿತ್ರೋಽಪಿ ನ ವೀಕ್ಷಿತುಂ ಶಕ್ಯಃ ॥ ೧೨೫**

ಪಂಚತಂತ್ರ, ಮಿತ್ರಸಂಪ್ರಾಪ್ತಿ-೭೯

ಮೋಡವು ಬರಿಯ ನೀರನ್ನು ಕೊಡುತ್ತಿದ್ದರೂ ಎಲ್ಲ ಜನರಿಗೂ ಪ್ರಿಯವಾಗಿರುತ್ತದೆ. ಸೂರ್ಯನು (ಮಿತ್ರನಾಗಿದ್ದರೂ) ಕಿರಣಗಳನ್ನು ಹರಡುತ್ತಾನೆ-ಕೈನೀಡಿಕೊಂಡಿರುತ್ತಾನಾದ್ದರಿಂದ ಅವನನ್ನು ಕಣ್ಣೆತ್ತಿ ನೋಡಲೂ ಸಾಧ್ಯವಿಲ್ಲ!

**ಯತ್ಕರ್ಮ ಕುರ್ವತೋಽಸ್ಯ ಸ್ಯಾತ್ ಪರಿತೋಷೋಂತರಾತ್ಮನಃ ।**
**ತತ್ಪ್ರಯತ್ನೇನ ಕುರ್ವೀತ ವಿಪರೀತಂ ತು ವರ್ಜಯೇತ್ ॥ ೧೨೬**

-ಮನುಸ್ಮೃತಿ, ೪-೧೬೧

ಯಾವ ಕೆಲಸವನ್ನು ಮಾಡುವಾಗ ಮನಸ್ಸಿಗೆ ಸಂತೋಷವಾಗುತ್ತದೆಯೋ ಅದನ್ನು ಕಷ್ಟಪಟ್ಟಾದರೂ ಮಾಡಬೇಕು. ಅದಕ್ಕೆ ವಿರುದ್ಧವಾದುದನ್ನು ಮಾಡಬಾರದು.

**ಯತ್ ಕೃತ್ವಾ ನ ಭವೇದ್ಧರ್ಮೋ ನ ಕೀರ್ತಿರ್ನ ಯಶೋ ಭುವಿ ।**
**ಶರೀರಸ್ಯ ಭವೇತ್ ಖೇದಃ ಕಸ್ತತ್ ಕರ್ಮ ಸಮಾಚರೇತ್ ॥ ೧೨೭**

-ರಾಮಾಯಣ, ಅರಣ್ಯ. ೫೦-೧೯

ಯಾವುದನ್ನಾಚರಿಸಿದರೆ ಧರ್ಮವಿಲ್ಲವೋ ಕೀರ್ತಿ ಇಲ್ಲವೋ ಒಳ್ಳೆಯ ಹೆಸರಿಲ್ಲವೋ, ದೇಹಕ್ಕೆ ಆಯಾಸ ಮಾತ್ರ ಆಗುವುದೋ ಅಂಥ ಕಾರ್ಯವನ್ನು ಯಾವನು ಮಾಡಿಯಾನು?

**ಯತ್ ಸ್ಯಾದಹಿಂಸಾಸಂಯುಕ್ತಂ ಸ ಧರ್ಮ ಇತಿ ನಿಶ್ಚಯಃ ।**
**ಅಹಿಂಸಾರ್ಥಾಯ ಭೂತಾನಾಂ ಧರ್ಮಪ್ರವಚನಂ ಕೃತಮ್ ॥ ೧೨೮**

-ಮಹಾಭಾರತ, ಕರ್ಣ. ೬೯-೫೭

ಯಾವುದರಲ್ಲಿ ಹಿಂಸೆ ಇಲ್ಲವೋ ಅದು ಧರ್ಮವೆಂಬುದು ನಿಶ್ಚಿತ. ಪ್ರಾಣಿಗಳಿಗೆ ಹಿಂಸೆಯಾಗಬಾರದೆಂದೇ ಧರ್ಮಪ್ರವಚನ ನಡೆದಿದೆ.

**ಯಥಾ ಜಾನಂತಿ ಬಹವೋ ಯಥಾ ವಕ್ಷ್ಯಂತಿ ದಾತರಿ ।**
**ತಥಾ ಧರ್ಮಂ ಚರೇತ್ ಸರ್ವಂ ನ ವೃಥಾ ಧರ್ಮಮಾಚರೇತ್ ॥ ೧೨೯**

-ಕಲಿವಿಡಂಬನ-೮೯

ಧರ್ಮ ಮಾಡಿದ್ದು ಬಹುಜನರಿಗೆ ಗೊತ್ತಾಗಬೇಕು, ದಾತೃವನ್ನು ಹೊಗಳಬೇಕು-ಹಾಗೆ ಧರ್ಮವನ್ನಾಚರಿಸಬೇಕು! ಸುಮ್ಮನೆ ಧರ್ಮವನ್ನು ಮಾಡತಕ್ಕದ್ದಲ್ಲ!

**ಯಥಾ ಯಮಃ ಪ್ರಿಯದ್ವೇಷ್ಯೌ ಪ್ರಾಪ್ತೇ ಕಾಲೇ ನಿಯಚ್ಛತಿ ।**
**ತಥಾ ರಾಜ್ಞಾ ನಿಯಂತವ್ಯಾಃ ಪ್ರಜಾಸ್ತದ್ಧಿ ಯಮವ್ರತಂ ॥ ೧೩೦**

-ಮನುಸ್ಮೃತಿ, ೯-೩೦೭

ಇವರು ಬೇಕಾದವರು, ಇವರು ಬೇಡದವರೆಂಬ ಭಾವನೆಯಿಲ್ಲದೆ ಆಯುಸ್ಸು ಮುಗಿದಾಗ ಎಲ್ಲರನ್ನೂ ಹೇಗೆ ಯಮನು ಸಾಯಿಸುತ್ತಾನೆಯೋ ಅದೇ ರೀತಿ ಪಕ್ಷಪಾತವಿಲ್ಲದೆ ಅರಸನು ಎಲ್ಲರನ್ನೂ ದಂಡಿಸಬೇಕು. ಇದು ಯಮವ್ರತ.

**ಯದಸತ್ಯಂ ವದೇನ್ಮರ್ತ್ಯಃ ಯದ್ವಾಽಸೇವ್ಯಂ ಚ ಸೇವತೇ ।**
**ಯದ್ಗಚ್ಛತಿ ವಿದೇಶಂ ಚ ತತ್ಸರ್ವಮುದರಾರ್ಥತಃ ॥ ೧೩೧**

-ಪಂಚತಂತ್ರ, ಮಿತ್ರಭೇದ-೨೭೯

ಮನುಷ್ಯನು ಹೇಳುವ ಸುಳ್ಳು, ಸೇವಿಸಲು ಅನರ್ಹನಾದವನನ್ನು ಸೇವಿಸುವುದು, ಬೇರೆ ದೇಶಕ್ಕೆ ಹೋಗುವುದು-ಇದೆಲ್ಲವೂ ಹೊಟ್ಟೆಗಾಗಿ.

**ಯದಾ ಯದಾ ಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ ।**
**ಅಭ್ಯುತ್ಥಾ ನಮಧರ್ಮಸ್ಯ ತದಾತ್ಮಾನಂ ಸೃಜಾಮ್ಯಹಂ ॥**
**ಪರಿತ್ರಾಣಾಯ ಸಾಧೂನಾಂ ವಿನಾಶಾಯ ಚ ದುಷ್ಕೃತಾಂ ।**
**ಧರ್ಮಸಂಸ್ಥಾಪನಾರ್ಥಾಯ ಸಂಭವಾಮಿ ಯುಗೇ ಯುಗೇ ॥** ೧೩೨

-ಭಗವದ್ಗೀತಾ, ೪-೭, ೮

ಅರ್ಜುನ, ಯಾವ ಯಾವಾಗ ಧರ್ಮವು ಕುಗ್ಗುವುದೋ ಅಧರ್ಮವು ಬೆಳೆಯುವುದೋ ಆಗ ನಾನು ನನ್ನನ್ನು ನಿರ್ಮಿಸಿಕೊಳ್ಳುತ್ತೇನೆ-ಅವತರಿಸುತ್ತೇನೆ.

ಸಜ್ಜನರನ್ನು ಪರಿಪಾಲಿಸುವುದಕ್ಕಾಗಿ, ದುಷ್ಟರನ್ನು ನಾಶಗೊಳಿಸುವುದಕ್ಕಾಗಿ ಮತ್ತು ಧರ್ಮವನ್ನು ಸ್ಥಾಪಿಸುವುದಕ್ಕಾಗಿ ಯುಗಯುಗದಲ್ಲಿಯೂ ಅವತರಿಸುತ್ತೇನೆ.

**ಯದ್‌ಭೂತಹಿತಮತ್ಯಂತಂ ತತ್‌ಸತ್ಯಮಿತಿ ಧಾರಣಾ ।**
**ವಿಪರ್ಯಯಕೃತೋಽಧರ್ಮಃ ಪಶ್ಯ ಧರ್ಮಸ್ಯ ಸೂಕ್ಷ್ಮತಾಮ್ ॥** ೧೩೩

-ಮಹಾಭಾರತ, ವನ. ೨೦೯-೪

(ಧರ್ಮವ್ಯಾಧನು ಬ್ರಾಹ್ಮಣನಿಗೆ ಹೇಳಿದ್ದು)

ಯಾವುದು ಪರಮಾರ್ಥದಲ್ಲಿ ಪ್ರಾಣಿಗಳಿಗೆ ಹಿತಕಾರಿಯೋ ಅದೇ ಸತ್ಯವೆಂದು ನಿಶ್ಚಿತ. ಇದಕ್ಕೆ ವಿರುದ್ಧವಾದದ್ದು-ಪ್ರಾಣಿಗಳಿಗೆ ಅಹಿತಕಾರಿಯಾದದ್ದು ಅಧರ್ಮ. ಧರ್ಮವು ಎಷ್ಟು ಸೂಕ್ಷ್ಮವೆಂಬುದನ್ನು ನೋಡು!

**ಯಃ ಪ್ರಾಪ್ಯ ದುಷ್ಪ್ರಾಪಮಿದಂ ನರತ್ವಂ**
**ಧರ್ಮಂ ನ ಯತ್ನೇನ ಕರೋತಿ ಮೂಢಃ ।**
**ಕ್ಲೇಶಪ್ರಬಂಧೇನ ಸ ಲಬ್ಧಮಬ್ಧೌ**
**ಚಿಂತಾಮಣಿಂ ಪಾತಯತಿ ಪ್ರಮಾದಾತ್ ॥** ೧೩೪

-ಸೋಮಪ್ರಭಾಚಾರ್ಯನ ಸೂಕ್ತಿಮುಕ್ತಾವಲಿ-೪

ದುರ್ಲಭವಾದ ಮನುಷ್ಯಜನ್ಮವನ್ನು ಪಡೆದೂ ಯಾವನು ಧರ್ಮವನ್ನಾಚರಿಸುವುದಿಲ್ಲವೋ ಅವನು ಮೂಢನೇ ಸರಿ. ಕಷ್ಟಪಟ್ಟು ಸಂಪಾದಿಸಿದ ಚಿಂತಾಮಣಿಯನ್ನು ಅವನು ಎಚ್ಚರದಪ್ಪಿ ಸಮುದ್ರಕ್ಕೆ ಎಸೆಯುತ್ತಿದ್ದಾನೆ.

**ಯವೀಯಾನಾತ್ಮನಃ ಪುತ್ರಃ ಶಿಷ್ಯಶ್ಚಾಪಿ ಗುಣೋದಿತಃ ।**
**ಪುತ್ರವತ್ತೇ ತ್ರಯಶ್ಚಿಂತ್ಯಾ ಧರ್ಮಶ್ಚೇದತ್ರ ಕಾರಣಮ್ ॥** ೧೩೫

-ರಾಮಾಯಣ, ಕಿಷ್ಕಿಂಧಾ, ೧೮-೧೪

ಧರ್ಮಮಾರ್ಗವೇ ಯುಕ್ತವೆಂದು ನಂಬುವುದಾದರೆ, ತನ್ನ ತಮ್ಮ ಮಗ ಮತ್ತು ಗುಣಶಾಲಿಯಾದ ಶಿಷ್ಯ-ಈ ಮೂವರನ್ನೂ ಮಕ್ಕಳೆಂದು ತಿಳಿದು ವಾತ್ಸಲ್ಯದಿಂದ ನೋಡಿಕೊಳ್ಳಬೇಕು.

**ಯಃ ಶಾಸ್ತ್ರವಿಧಿಮುತ್ಸೃಜ್ಯ ವರ್ತತೇ ಕಾಮಕಾರತಃ ।**
**ನ ಸ ಸಿದ್ಧಿಮವಾಪ್ನೋತಿ ನ ಸುಖಂ ನ ಪರಾಂ ಗತಿಮ್ ॥** ೧೩೬

-ಭಗವದ್ಗೀತಾ, ೧೬-೨೩

ಯಾವನು ಶಾಸ್ತ್ರವಿಧಾನವನ್ನು ಬದಿಗೊತ್ತಿ ಮನಸ್ಸಿಗೆ ಬಂದಂತೆ ನಡೆಯುವನೋ ಅವನು ಸಿದ್ಧಿಯನ್ನು ಪಡೆಯುವುದಿಲ್ಲ. ಅವನಿಗೆ ಸುಖವೂ ಇಲ್ಲ.-ಉತ್ತಮ ಗತಿಯೂ ಇಲ್ಲ.

**ಯಸ್ಯ ಧರ್ಮವಿಹೀನಾನಿ ದಿನಾನ್ಯಾಯಾಂತಿ ಯಾಂತಿ ಚ ।**
**ಸ ಲೋಹಕಾರಭಸ್ತ್ರೇವ ಶ್ವಸನ್ನಪಿ ನ ಜೀವತಿ ॥** ೧೩೭

-ಪಂಚತಂತ್ರ, ಕಾಕೋಲೂಕೀಯ-೯೫

ಧರ್ಮದ ಆಚರಣೆಯಿಲ್ಲದೆ ಯಾರ ದಿನಗಳು ಕಳೆದುಹೋಗುತ್ತವೆಯೋ ಅಂಥವನು ಕಮ್ಮಾರನ ತಿದಿಯಂತೆ ಉಸಿರಾಡುತ್ತಿದ್ದರೂ ಬದುಕಿರುವವನಲ್ಲ.

**ಯಸ್ಮಿನ್ ದೇಶೇ ಯ ಆಚಾರೋ ವ್ಯವಹಾರಃ ಕುಲಸ್ಥಿತಿಃ ।**
**ತಥೈವ ಪರಿಪಾಲ್ಯೋಽಸೌ ಯದಾ ವಶಮುಪಾಗತಃ ॥** ೧೩೮

-ಯಾಜ್ಞವಲ್ಕ್ಯ, ೧-೩೪೩

ಒಂದು ದೇಶವನ್ನು ವಶಮಾಡಿಕೊಂಡಮೇಲೆ, ಆ ದೇಶವನ್ನು ಅಲ್ಲಿನ ಆಚಾರ, ವ್ಯವಹಾರ, ಕುಟುಂಬಗಳ ಮರ್ಯಾದೆ ಇವುಗಳನ್ನು ಅನುಸರಿಸಿಯೇ ಆಳಬೇಕು.

**ಯಾತ್ಯೇಕತೋಽಸ್ತಶಿಖರಂ ಪತಿರೋಷಧೀನಾಂ**
**ಆವಿಷ್ಕೃತೋಽರುಣಪುರಃಸರ ಏಕತೋಽರ್ಕಃ ।**
**ತೇಜೋದ್ವಯಸ್ಯ ಯುಗಪದ್ವ್ಯಸನೋದಯಾಭ್ಯಾಂ**
**ಲೋಕೋ ನಿಯಮ್ಯತ ಇವಾತ್ಮದಶಾಂತರೇಷು ॥** ೧೩೯

ಅಭಿಜ್ಞಾನ ಶಾಕುಂತಲ, ೪-೨

ಒಂದು ಕಡೆ ಚಂದ್ರನು ಮುಳುಗುತ್ತಿದ್ದಾನೆ. ಇನ್ನೊಂದು ಕಡೆ ಸೂರ್ಯನು ಅರುಣನೊಡನೆ ಕಾಣಿಸಿಕೊಳ್ಳುತ್ತಿದ್ದಾನೆ. ಒಂದೇ ಕಾಲದಲ್ಲಿ, ಬೆಳಕನ್ನು ಕೊಡುವ ಇವರಿಬ್ಬರ ಮುಳುಗುವಿಕೆ, ಉದಯ ಇವೆರಡು, ಜನಗಳಿಗೆ ಸುಖದುಃಖರೂಪ ಜೀವನವನ್ನು ತಿಳಿಸುವಂತೆ ಇದೆ.

ಯುಕ್ತಃ ಪ್ರಮಾದ್ಯಸಿ ಹಿತಾದಪೇತಃ ಪರಿತಪ್ಯಸೇ ।
ಯದಿ ನೇಷ್ಟಾತ್ಮನಃ ಪೀಡಾ ಮಾ ಸಂಜಿ ಭವತಾ ಜನೇ ॥ ೧೪೦
-ಕಿರಾತಾರ್ಜುನೀಯ, ೧೧-೨೯

ಬೇಕಾದದ್ದು ಸಿಕ್ಕಿದರೆ ಸಂತೋಷವಾಗುತ್ತದೆ. ಇಲ್ಲದಿದ್ದರೆ ದುಃಖವಾಗುತ್ತದೆ. ಪೀಡೆ ಅಥವಾ ಹಿಂಸೆಯು ನಿನಗೆ ಇಷ್ಟವಲ್ಲದಿರುವಾಗ ಇನ್ನೊಬ್ಬರಿಗೆ ಅದನ್ನು ಕೊಡಬಾರದಲ್ಲವೇ!

ಯೋ ಬಂಧನವಧಕ್ಲೇಶಾನ್ ಪ್ರಾಣಿನಾಂ ನ ಚಿಕೀರ್ಷತಿ ।
ಸ ಸರ್ವಸ್ಯ ಹಿತಪ್ರೇಪ್ಸುಃ ಸುಖಮತ್ಯಂತಮಶ್ನುತೇ ॥ ೧೪೧
-ಮನುಸ್ಮೃತಿ, ೫-೪೬

ಕಟ್ಟಿಹಾಕುವುದು, ಕೊಲ್ಲುವುದು ಮೊದಲಾದ ಹಿಂಸೆಗಳನ್ನು ಪ್ರಾಣಿಗಳಿಗೆ ಯಾರು ಮಾಡುವುದಿಲ್ಲವೋ, ಎಲ್ಲರ ಹಿತವನ್ನೂ ಬಯಸುವ ಅವನು ಬಹಳ ಸುಖವಾಗಿರುತ್ತಾನೆ.

ಯೋಽಹಿಂಸಕಾನಿ ಭೂತಾನಿ ಹಿನಸ್ತ್ಯಾತ್ಮಸುಖೇಚ್ಛಯಾ ।
ಸ ಜೀವಂಶ್ಚ ಮೃತಶ್ಚೈವ ನ ಕ್ವಚಿತ್ಸುಖಮೇಧತೇ ॥ ೧೪೨
-ಮನುಸ್ಮೃತಿ, ೫-೪೫

ಸಾಧುಗಳಾದ ಜಿಂಕೆ ಮೊದಲಾದ ಪ್ರಾಣಿಗಳನ್ನು ಯಾರು ತನ್ನ ಸುಖಕ್ಕೋಸ್ಕರ ಕೊಲ್ಲುತ್ತಾನೆಯೋ, ಅವನು ಬದುಕಿದ್ದರೂ ಸತ್ತಿದ್ದರೂ ಎಲ್ಲಿಯೂ ಸುಖಪಡಲಾರ.

ವರಂ ಕಾರ್ಯಂ ಮೌನಂ ನ ಚ ವಚನಮುಕ್ತಂ ಯದನೃತಂ
ವರಂ ಕ್ಲೈಬ್ಯಂ ಪುಂಸಾಂ ನ ಚ ಪರಕಲತ್ರಾಭಿಗಮನಮ್ ।
ವರಂ ಪ್ರಾಣತ್ಯಾಗೋ ನ ಚ ಪಿಶುನವಾದೇಷ್ವಭಿರತಿಃ
ವರಂ ಭಿಕ್ಷಾಶಿತ್ವಂ ನ ಚ ಪರಧನಾಸ್ವಾದನಬಲಮ್ ॥ ೧೪೩
-ಹಿತೋಪದೇಶ, ಮಿತ್ರಲಾಭ-೧೦೪

ಮೌನವಾಗಿದ್ದರೂ ಒಳ್ಳೆಯದೇ; ಆದರೆ ಸುಳ್ಳಾದ ಮಾತನ್ನಾಡುವುದು ಸಲ್ಲದು. ಪುರುಷನಿಗೆ ನಪುಂಸಕತ್ವವಾದರೂ ಉತ್ತಮ; ಆದರೆ ಪರಸ್ತ್ರೀ ಗಮನಸಲ್ಲದು. ಪ್ರಾಣತ್ಯಾಗವಾದರೂ ಒಳ್ಳೆಯದು; ಆದರೆ ಚಾಡಿ ಹೇಳುವುದರಲ್ಲಿ ಆಸಕ್ತಿ ಸಲ್ಲದು. ಭಿಕ್ಷೆ ಬೇಡಿ ಹೊಟ್ಟೆಹೊರೆಯುವುದೂ ಶ್ರೇಷ್ಠ; ಆದರೆ ಮತ್ತೊಬ್ಬರ ಧನದ ಸವಿಯಿಂದ ಬರುವ ಬಲ ಮಾತ್ರ ಬೇಡ.

**ವಯೋ ಬುದ್ಧ್ಯರ್ಥವಾಗ್ವೇಷ ಶ್ರುತಾಭಿಜನಕರ್ಮಣಾಂ ।**
**ಆಚರೇತ್ಸದೃಶೀಂ ವೃತ್ತಿಂ ಅಜಿಹ್ಮಾಮಶಠಾಂ ತಥಾ ॥ ೧೪೪**

-ಯಾಜ್ಞವಲ್ಕ್ಯ, ೧-೧೨೩

ವಯಸ್ಸು, ಬುದ್ಧಿ, ಹಣ, ಮಾತು, ವೇಷ, ವಿದ್ಯೆ, ಕುಲ, ಕಸಬು ಇವುಗಳಿಗೆ ತಕ್ಕ ಉದ್ಯೋಗ ಮಾಡಬೇಕು. ಮೋಸ ಮಾಡಬಾರದು. ಕೆಟ್ಟ ದಾರಿ ತುಳಿಯಬಾರದು.

**ವಿದ್ವದ್ಭಿಃ ಸೇವಿತಃ ಸದ್ಭಿಃ ನಿತ್ಯಮದ್ವೇಷರಾಗಿಭಿಃ ।**
**ಹೃದಯೇನಾಭ್ಯನುಜ್ಞಾತೋ ಯೋ ಧರ್ಮಸ್ತಂ ನಿಬೋಧತ ॥ ೧೪೫**

--ಮನುಸ್ಮೃತಿ, ೨-೧

ದ್ವೇಷ ಆಸಕ್ತಿ ಇಲ್ಲದೆ ನಿಷ್ಪಕ್ಷಪಾತವಾಗಿ ಒಳ್ಳೆಯ ವಿದ್ವಾಂಸರಿಂದ ನಿತ್ಯವೂ ಆಚರಿಸಲ್ಪಟ್ಟ ಮತ್ತು ಮನಸ್ಸೊಪ್ಪಿದ ಕಾರ್ಯವು ಧರ್ಮವೆನಿಸುತ್ತದೆ. ಅದನ್ನು ಹೇಳುತ್ತೇನೆ, ತಿಳಿಯಿರಿ.

**ವಿದ್ಯಾ ಪ್ರವಸತೋ ಮಿತ್ರಂ ಭಾರ್ಯಾ ಮಿತ್ರಂ ಗೃಹೇ ಸತಃ ।**
**ಆತುರಸ್ಯ ಭಿಷಕ್ ಮಿತ್ರಂ ದಾನಂ ಮಿತ್ರಂ ಮರಿಷ್ಯತಃ ॥ ೧೪೬**

-ಸುಭಾಷಿತಸುಧಾನಿಧಿ

ಪ್ರವಾಸಮಾಡುವವನಿಗೆ ವಿದ್ಯೆ ಮಾತ್ರ. ಮನೆಯಲ್ಲಿರುವವನಿಗೆ ಹೆಂಡತಿ ಮಿತ್ರಳು. ರೋಗಿಗೆ ವೈದ್ಯ ಮಿತ್ರ. ಹಾಗೆಯೇ ಸಾಯುವವನಿಗೆ ದಾನವೇ ಮಿತ್ರ.

**ವಿದೇಶೇಷು ಧನಂ ವಿದ್ಯಾ ವ್ಯಸನೇಷು ಧನಂ ಮತಿಃ ।**
**ಪರಲೋಕೇ ಧನಂ ಧರ್ಮಃ ಶೀಲಂ ತು ನಿಖಿಲಂ ಧನಮ್ ॥ ೧೪೭**

-ಭಾರತಮಂಜರೀ, ೧೩-೪೭೦

ಪರಸ್ಥಳದಲ್ಲಿ ವಿದ್ಯೆಯೇ ಧನ. ವಿಪತ್ಕಾಲದಲ್ಲಿ ಬುದ್ಧಿಯೇ ಧನ. ಪರಲೋಕದಲ್ಲಿ ಧರ್ಮವೇ ಧನ. ಒಳ್ಳೆಯ ನಡತೆಯಾದರೋ ಎಲ್ಲೆಡೆಯಲ್ಲಿಯೂ ಅಖಂಡ ಧನ.

**ವಿನಯೋ ರತ್ನಮುಕುಟಂ ಸಚ್ಛಾಸ್ತ್ರಂ ಮಣಿಕುಂಡಲೇ ।**
**ತ್ಯಾಗಶ್ಚ ಕಂಕಣಂ ಯೇಷಾಂ ಕಿ ತೇಷಾಂ ಜಡಮಂಡನೈಃ ॥ ೧೪೮**

-ಭಾರತಮಂಜರೀ, ೫-೩೫೬

ಯಾರಿಗೆ ವಿನಯವೇ ರತ್ನಕಿರೀಟವೋ, ಒಳ್ಳೆಯ ಶಾಸ್ತ್ರವೇ ಮಣಿಕುಂಡಲಗಳೋ, ತ್ಯಾಗವೇ ಕಂಕಣವೋ, ಅವರಿಗೆ ಜಡವಾದ ಒಡವೆಗಳಿಂದ ಏನು ಪ್ರಯೋಜನ?

**ವೃಕ್ಷಾಂಶ್ಛಿತ್ವಾ ಪಶೂನ್ಹತ್ವಾ ಕೃತ್ವಾ ರುಧಿರಕರ್ದಮಂ ।**
**ಯದ್ಯೇವಂ ಗಮ್ಯತೇ ಸ್ವರ್ಗೇ ನರಕಃ ಕೇನ ಗಮ್ಯತೇ ॥ ೧೪೯**

-ಪಂಚತಂತ್ರ, ಕಾಕೋಲೂಕೀಯ-೧೦೫

ಮರಗಳನ್ನು ಕಡಿದು, ಪ್ರಾಣಿಗಳನ್ನು ಕೊಂದು ರಕ್ತದ ಕೆಸರನ್ನು ಹರಿಸಿ ಹೀಗೆ ಮಾಡಿ ಸ್ವರ್ಗ ಪಡೆಯುವನೆಂದರೆ, ನರಕಕ್ಕೆ ಹೋಗುವವರು ಯಾರು?

**ವೇದಾಭ್ಯಾಸಸ್ತಪೋ ಜ್ಞಾನಂ ಶೌಚಮಿಂದ್ರಿಯನಿಗ್ರಹಃ ।**
**ಧರ್ಮಕ್ರಿಯಾತ್ಮಚಿಂತಾ ಚ ಸಾತ್ತ್ವಿಕಂ ಗುಣಲಕ್ಷಣಮ್ ॥ ೧೫೦**

-ಮನುಸ್ಮೃತಿ, ೧೨-೩೧

ವೇದಗಳನ್ನು ಅಭ್ಯಾಸಮಾಡುವುದು, ತಪಸ್ಸು, ತತ್ತ್ವಜ್ಞಾನ, ಇಂದ್ರಿಯನಿಗ್ರಹ, ಧರ್ಮಾಚರಣೆ, ಆತ್ಮಚಿಂತನ-ಇವು ಸತ್ತ್ವಗುಣದ ಲಕ್ಷಣ.

**ಶತೇಷು ಜಾಯತೇ ಶೂರಃ ಸಹಸ್ರೇಷು ಚ ಪಂಡಿತಃ ।**
**ವಕ್ತಾ ದಶಸಹಸ್ರೇಷು ದಾತಾ ಭವತಿ ವಾ ನ ವಾ ॥ ೧೫೧**

-ವ್ಯಾಸಸ್ಮೃತಿ, ೪-೫೮

ನೂರರಲ್ಲೊಬ್ಬನು ಶೂರನಾಗುತ್ತಾನೆ. ಸಾವಿರಕ್ಕೊಬ್ಬನು ವಿದ್ವಾಂಸನಾಗುತ್ತಾನೆ. ಹತ್ತು ಸಾವಿರಕ್ಕೊಬ್ಬ ಭಾಷಣಮಾಡುವವನಾಗುತ್ತಾನೆ. ಆದರೆ ದಾನಮಾಡುವವನು ಇರುವನೋ ಇಲ್ಲವೋ!

**ಶ್ರದ್ಧಯಾ ಧಾರ್ಯತೇ ಧರ್ಮೋ ಬಹುಭಿರ್ನಾರ್ಥರಾಶಿಭಿಃ ।**
**ನಿಷ್ಕಿಂಚನಾ ಹಿ ಮುನಯಃ ಶ್ರದ್ಧಾವಂತೋ ದಿವಂಗತಾಃ ॥ ೧೫೨**

-ಗರುಡಪುರಾಣ, ೮-೧೧೦

ಶ್ರದ್ಧೆಯಿಂದಲೇ ಧರ್ಮವು ಬೆಳಗುತ್ತದೆ. ಬೇಕಾದಷ್ಟು ಹಣವಿದ್ದರೂ ಧರ್ಮವನ್ನು ಸಂಪಾದಿಸಲಾರ. ಏನೂ ಹಣವಿಲ್ಲದ ಋಷಿಗಳು ಶ್ರದ್ಧೆಯಿಂದ ಸದ್ಗತಿ ಪಡೆದಿದ್ದಾರೆ.

**ಶರತಲ್ಪಮಧಿಶಯಾನಾದ್ ಭೀಷ್ಮಾದಾಕರ್ಣ್ಯ ಧರ್ಮಜೋ ಧರ್ಮಾನ್ ।**
**ದುಃಖಂ ಜಹೌ ದುರಂತಂ ಪ್ರಷ್ಟವ್ಯಾಃ ಸತ್ಪಥಂ ವೃದ್ಧಾಃ ॥ ೧೫೩**

-ಗುಮಾನಿಕವಿಯ ಉಪದೇಶಶತಕ-೩೬

ಶರತಲ್ಪದಲ್ಲಿ ಮಲಗಿದ್ದ ಭೀಷ್ಮನಿಂದ ಧರ್ಮರಾಜನು ಧರ್ಮೋಪದೇಶಗಳನ್ನು ಕೇಳಿ ದುರಂತವಾದ ದುಃಖವನ್ನು ನೀಗಿಕೊಂಡನು. ಸನ್ಮಾರ್ಗದ ವಿಷಯವಾಗಿ ಹಿರಿಯರನ್ನು ಕೇಳಬೇಕು.

**ಶಿಕ್ಷಾಕ್ಷಯಂ ಗಚ್ಛತಿ ಕಾಲಪರ್ಯಯಾತ್**
**ಸುಬದ್ಧಮೂಲಾ ನಿಪತಂತಿ ಪಾದಪಾಃ ।**
**ಜಲಂ ಜಲಸ್ಥಾನಗತಂ ಚ ಶುಷ್ಯತಿ**
**ಹುತಂ ಚ ದತ್ತಂ ಚ ತಥೈವ ತಿಷ್ಠತಿ ॥** ೧೫೪

ಕರ್ಣಭಾರ, ೧-೨೨

ಕಲಿತ ವಿದ್ಯೆಯು ಕಾಲ ಕಳೆದಂತೆ ಮರೆತುಹೋಗುತ್ತದೆ. ಆಳವಾಗಿ ಬೇರುಬಿಟ್ಟು ನಿಂತಿರುವ ಹೆಮ್ಮರಗಳೂ ಕಾಲಕ್ರಮೇಣ ಬಿದ್ದುಹೋಗುತ್ತವೆ. ದೊಡ್ಡ ಜಲಾಶಯಗಳಲ್ಲಿರುವ ನೀರೂ ಸಹ ಎಂದಾದರೂ ಒಣಗಿಹೋಗುವುದು ಸಂಭವ. ಆದರೆ ಯಜ್ಞೇಶ್ವರನಿಗೆ ಅರ್ಪಿಸಿದ ಆಹುತಿ, ಒಳ್ಳೆಯವರಿಗೆ ಕೊಟ್ಟ ದಾನ ಎಂದೆಂದಿಗೂ ನಶಿಸುವುದಿಲ್ಲ.

**ಶುಶ್ರೂಷಸ್ವ ಗುರೂನ್ ಕುರು ಪ್ರಿಯಸಖೀವೃತ್ತಿಂ ಸಪತ್ನೀಜನೇ**
**ಭರ್ತುರ್ವಿಪ್ರಕೃತಾಪಿ ರೋಷಣತಯಾ ಮಾ ಸ್ಮ ಪ್ರತೀಪಂಗಮಃ ।**
**ಭೂಯಿಷ್ಠಂ ಭವ ದಕ್ಷಿಣಾ ಪರಿಜನೇ ಭಾಗ್ಯೇಷ್ವನುತ್ಸೇಕಿನೀ**
**ಯಾಂತ್ಯೇವಂ ಗೃಹಿಣೀಪದಂ ಯುವತಯೋ ವಾಮಾಃ ಕುಲಸ್ಯಾಧಯಃ ॥**೧೫೫

-ಅಭಿಜ್ಞಾನ ಶಾಕುಂತಲ, ೪-೧೮

ಹಿರಿಯರಿಗೆ ಸೇವೆ ಮಾಡು. ಸವತಿಯರನ್ನು ಗೆಳತಿಯರಂತೆ ಕಾಣು. ಗಂಡನು ಒಂದು ವೇಳೆ ತಪ್ಪು ಮಾಡಿದರೂ ಸಿಟ್ಟಿನಿಂದ ವಿರೋಧಮಾಡಬೇಡ. ಸೇವಕವರ್ಗದಲ್ಲಿ ನಯವಾಗಿ ನಡೆದುಕೋ. ಸಂಪತ್ತು ಹೆಚ್ಚಿದಾಗ ಗರ್ವಪಡಬೇಡ. ಯುವತಿಯರು ಈ ರೀತಿ ನಡೆದುಕೊಂಡರೆ ಒಳ್ಳೆಯ ಗೃಹಿಣಿ ಎನಿಸುವರು. ಇದಕ್ಕೆ ವಿರುದ್ಧವಾದವರು ಕುಲದ ಚಿಂತೆಗೆ ಕಾರಣರಾಗುವರು.

**ಶ್ರೂಯತಾಂ ಧರ್ಮಸರ್ವಸ್ವಂ ಶ್ರುತ್ವಾ ಚೈವಾವಧಾರ್ಯತಾಂ ।**
**ಆತ್ಮನಃ ಪ್ರತಿಕೂಲಾನಿ ಪರೇಷಾಂ ನ ಸಮಾಚರೇತ್ ॥** ೧೫೬

-ಪಂಚತಂತ್ರ, ಕಾಕೋಲೂಕೀಯ-೧೦೨

ಧರ್ಮದ ಸರ್ವಸ್ವವನ್ನೂ ಕೇಳಿ, ಕೇಳಿ ನಿಶ್ಚಯಮಾಡಿಕೊಳ್ಳಿ, ತನಗೆ ಯಾವುದು ಪ್ರತಿಕೂಲವೋ ಅದನ್ನು ಇತರರ ಬಗೆಗೆ ಆಚರಿಸಬಾರದು.

**ಶ್ರೇಯಾನ್ ಸ್ವಧರ್ಮೋ ವಿಗುಣಃ ಪರಧರ್ಮಾತ್ಸ್ವನುಷ್ಠಿತಾತ್ ।**
**ಸ್ವಧರ್ಮೇ ನಿಧನಂ ಶ್ರೇಯಃ ಪರಧರ್ಮೋ ಭಯಾವಹಃ ॥** ೧೫೭

-ಭಗವದ್ಗೀತಾ, ೩-೩೫

ಪರಧರ್ಮವನ್ನು ಚೆನ್ನಾಗಿ ಆಚರಿಸಬಹುದಾಗಿದ್ದರೂ ಸ್ವಧರ್ಮವೇ ಉತ್ತಮ.

ಅದು ವಿಗುಣವಾಗಿದ್ದರೂ-ದೋಷಯುಕ್ತವಾಗಿದ್ದರೂ ಚಿಂತೆ ಇಲ್ಲ. ಸ್ವಧರ್ಮದಲ್ಲಿ ನಡೆಯುವಾಗ ಮರಣ ಒದಗಿದರೂ ಶ್ರೇಯಸ್ಕರವೇ. ಪರಧರ್ಮದಲ್ಲಿ ಭಯ ಉಂಟು.

**ಸಂಕ್ಷೇಪಾತ್ಕಥ್ಯತೇ ಧರ್ಮೋ ಜನಾಃ ಕಿಂ ವಿಸ್ತರೇಣ ವಃ ।**
**ಪರೋಪಕಾರಃ ಪುಣ್ಯಾಯ ಪಾಪಾಯ ಪರಪೀಡನಮ್ ॥** ೧೫೮

-ಪಂಚತಂತ್ರ, ಕಾಕೋಲೂಕೀಯ-೧೦೧

ಎಲೈ ಜನರೇ, ನಿಮಗೆ ಧರ್ಮವನ್ನು ಸಂಗ್ರಹವಾಗಿ ಹೇಳುತ್ತೇನೆ. ಹೆಚ್ಚು ಬೆಳಸುವುದರಿಂದೇನು? ಪರೋಪಕಾರ ಪುಣ್ಯಕ್ಕೂ ಪರಹಿಂಸೆಯು ಪಾಪಕ್ಕೂ ಕಾರಣವಾಗುತ್ತದೆ.

**ಸತ್ಯಸ್ಯ ವಚನಂ ಶ್ರೇಯಃ ಸತ್ಯಾದಪಿ ಹಿತಂ ವದೇತ್ ।**
**ಯದ್ಭೂತಹಿತಮತ್ಯಂತಂ ಏತತ್ಸತ್ಯಂ ಮತಂ ಮಮ ॥** ೧೫೯

ಮಹಾಭಾರತ, ಶಾಂತಿ ೩೨೯-೧೩

ಸತ್ಯವನ್ನು ನುಡಿಯುವುದು ಶ್ರೇಯಸ್ಕರ. ಸತ್ಯಕ್ಕಿಂತಲೂ ಪ್ರಾಣಿಗಳಿಗೆ ಹಿತವಾದ್ದನ್ನು ಹೇಳುವುದುತ್ತಮ. ಯಾವುದು ಪರಮಾರ್ಥದಲ್ಲಿ ಪ್ರಾಣಿಗಳಿಗೆ ಹಿತವೋ ಅದೇ ಸತ್ಯವೆಂದು ನನ್ನ (ಸನತ್ಕುಮಾರನ) ಮತ.

**ಸತ್ಯಂ ಬ್ರೂಯಾತ್ ಪ್ರಿಯಂ ಬ್ರೂಯಾತ್**
**ನ ಬ್ರೂಯಾತ್ ಸತ್ಯಮಪ್ರಿಯಂ ।**
**ಪ್ರಿಯಂ ಚ ನಾನೃತಂ ಬ್ರೂಯಾತ್**
**ಏಷ ಧರ್ಮಃ ಸನಾತನಃ ॥** ೧೬೦

-ಮನುಸ್ಮೃತಿ, ೪-೧೩೮

ಸತ್ಯವನ್ನೇ ಹೇಳಬೇಕು. ಪ್ರೀತಿಯನ್ನುಂಟುಮಾಡುವ ಮಾತನ್ನೇ ಹೇಳಬೇಕು. ಆದರೆ ಪ್ರಿಯವಲ್ಲದ ಸತ್ಯವನ್ನಾಗಲಿ, ಪ್ರಿಯವಾದ ಸುಳ್ಳನ್ನಾಗಲೀ ಹೇಳಬಾರದು. ಇದು ಬಹಳ ಕಾಲದಿಂದ ಬಂದ ಸಂಪ್ರದಾಯ.

**ಸತ್ಯಮಸ್ತೇಯಮಕ್ರೋಧೋ ಹ್ರೀಃ ಶೌಚಂ ಧೀರ್ಧೃತಿರ್ದಮಃ ।**
**ಸಂಯತೇಂದ್ರಿಯತಾ ವಿದ್ಯಾ ಧರ್ಮಃ ಸರ್ವ ಉದಾಹೃತಃ ॥** ೧೬೧

-ಯಾಜ್ಞವಲ್ಕ್ಯ, ೪-೬೬

ಸತ್ಯ, ಕದಿಯದಿರುವುದು, ಸಿಟ್ಟನ್ನು ಗೆದ್ದಿರುವುದು, ತಪ್ಪಿಗೆ ನಾಚಿಕೆ, ನೈರ್ಮಲ್ಯ, ಹಿತಾಹಿತ ಜ್ಞಾನ, ನಿಶ್ಚಲಬುದ್ಧಿ, ಗರ್ವವಿಲ್ಲದಿರುವುದು, ಇಂದ್ರಿಯನಿಗ್ರಹ, ವಿದ್ಯೆ-ಇವೆಲ್ಲವೂ ಧರ್ಮದಲ್ಲಿ ಸೇರುತ್ತವೆ.

**ಸತೀಮಪಿ ಜ್ಞಾತಿಕುಲೈಕಸಂಶ್ರಯಾಂ**
**ಜನೋಽನ್ಯಥಾ ಭರ್ತೃಮತೀಂ ವಿಶಂಕತೇ ।**
**ಅತಃ ಸಮೀಪೇ ಪರಿಣೇತುರಿಷ್ಯತೇ**
**ಪ್ರಿಯಾಪ್ರಿಯಾ ವಾ ಪ್ರಮದಾ ಸ್ವಬಂಧುಭಿಃ ॥ ೧೬೨**

-ಅಭಿಜ್ಞಾನ ಶಾಕುಂತಲ, ೫-೧೭

ಗಂಡನು ಬದುಕಿದ್ದೂ ತೌರುಮನೆಯಲ್ಲೇ ಇರುವ ಹೆಣ್ಣು ಪತಿವ್ರತೆಯಾಗಿದ್ದರೂ ಜನರು ಅವಳ ವಿಷಯದಲ್ಲಿ ಸಂಶಯ ತಾಳುತ್ತಾರೆ. ಆದುದರಿಂದ ಗಂಡನಿಗೆ ಪ್ರಿಯಳಾಗಿರಲಿ, ಇಲ್ಲವಾಗಲಿ ನೆಂಟರು ಅವಳನ್ನು ಹೇಗಾದರೂ ಗಂಡನ ಮನೆಯಲ್ಲಿರಲೆಂದು ಅಪೇಕ್ಷಿಸುತ್ತಾರೆ.

**ಸತ್ತ್ವೇ ಪ್ರಲೀನಾಃ ಸ್ವರ್ಯಾಂತಿ ನರಲೋಕಂ ತು ರಾಜಸಾಃ ।**
**ತಮೋಲಯಾಸ್ತು ನಿರಯಂ ಯಾಂತಿ ಮಾಮೇವ ನಿರ್ಗುಣಾಃ ॥೧೬೩**

-ಭಾಗವತ, ೧೧-೨೫-೨೨

ಸತ್ತ್ವಗುಣದಲ್ಲಿರುವವರು ಸ್ವರ್ಗಕ್ಕೆ ಹೋಗುತ್ತಾರೆ. ರಾಜಸರು ಮನುಷ್ಯ ಲೋಕಕ್ಕೆ ಹೋಗುತ್ತಾರೆ. ತಮೋಗುಣದಿಂದಿರುವವರು ನರಕಕ್ಕೆ ಹೋಗುತ್ತಾರೆ. ಗುಣತ್ರಯರಹಿತರು ನನ್ನನ್ನೇ (ಪರಮಾತ್ಮನನ್ನೇ) ಹೊಂದುತ್ತಾರೆ.

**ಸದಾ ಪ್ರಹೃಷ್ಟಯಾ ಭಾವ್ಯಂ ಗೃಹಕಾರ್ಯೇಷು ದಕ್ಷಯಾ ।**
**ಸುಸಂಸ್ಕೃತೋಪಸ್ಕರಯಾ ವ್ಯಯೇ ಚಾಮುಕ್ತಹಸ್ತಯಾ ॥ ೧೬೪**

-ಮನುಸ್ಮೃತಿ, ೫-೧೫೦

ಗೃಹಿಣಿಯು ಯಾವಾಗಲೂ ಸಂತೋಷದಿಂದಿರಬೇಕು. ಮನೆಯ ಕೆಲಸಗಳಲ್ಲಿ ಕುಶಲಳಾಗಿ, ಮನೆಯನ್ನೂ ಪಾತ್ರೆ ಪದಾರ್ಥಗಳನ್ನೂ ಶುಭ್ರವಾಗಿಟ್ಟಿರಬೇಕು. ಖರ್ಚಿನಲ್ಲಿ ಹಿಡಿತವಿರಬೇಕು.

**ಸಂಪದೋ ಜಲತರಂಗವಿಲೋಲಾ**
**ಯೌವನಂ ತ್ರಿಚತುರಾಣಿ ದಿನಾನಿ ।**
**ಶಾರದಾಭ್ರಪರಿಪೇಲವಮಾಯುಃ**
**ಕಿಂ ಧನೈಃ ಪರಹಿತಾನಿ ಕುರುಧ್ವಮ್ ॥ ೧೬೫**

-ಸುಭಾಷಿತಸುಧಾನಿಧಿ

ನೀರಿನ ಅಲೆಗಳಂತೆ ಐಶ್ವರ್ಯವು ಚಂಚಲವಾದದ್ದು ; ಯೌವನ ಮೂರು ನಾಲ್ಕು ದಿನಗಳು ಇರುವಂಥದ್ದು ; ಆಯುಷ್ಯವಾದರೋ ಶರತ್ಕಾಲದ ಮೋಡದಂತೆ ಅತ್ಯಲ್ಪಕಾಲವಿರುವಂಥದ್ದು. ಹೀಗಿರಲು ಹಣದಿಂದೇನು? ಇತರರಿಗೆ ಒಳ್ಳೆಯದನ್ನು ಮಾಡಿ.

**ಸಂಪ್ರಾಪ್ತಾಯ ತ್ವತಿಥಯೇ ಪ್ರದದ್ಯಾದಾಸನೋದಕೇ ।**
**ಅನ್ನಂ ಚೈವ ಯಥಾಶಕ್ತಿ ಸತ್ಕೃತ್ಯ ವಿಧಿಪೂರ್ವಕಮ್ ॥ ೧೬೬**

-ಮನುಸ್ಮೃತಿ, ೩-೯೯

ಮನೆಗೆ ಬಂದ ಅತಿಥಿಗೆ ಕುಳ್ಳಿರಲು ಆಸನವನ್ನೂ ನೀರನ್ನೂ ಕೊಡಬೇಕು. ಆಮೇಲೆ ಸತ್ಕರಿಸಿ ತನ್ನ ಶಕ್ತಿಗೆ ತಕ್ಕಂತೆ ಅನ್ನವನ್ನು ನೀಡಬೇಕು.

**ಸಮುತ್ಪತ್ತಿಂ ಚ ಮಾಂಸಸ್ಯ ವಧಬಂಧೌ ಚ ದೇಹಿನಾಂ ।**
**ಪ್ರಸಮೀಕ್ಷ್ಯ ನಿವರ್ತೇತ ಸರ್ವಮಾಂಸಸ್ಯ ಭಕ್ಷಣಾತ್ ॥ ೧೬೭**

-ಮನುಸ್ಮೃತಿ, ೫-೪೯

ಮಾಂಸವು ಹೇಗೆ ಸಿಗುತ್ತದೆ? ವಧೆಯಿಂದಲೂ ಬಂಧನದಿಂದಲೂ ಪ್ರಾಣಿಗಳಿಗೆ ಹೇಗೆ ಪೀಡೆಯಾಗುತ್ತದೆ?-ಎಂಬುದನ್ನು ಆಲೋಚಿಸಿ ಎಲ್ಲ ಮಾಂಸಗಳನ್ನೂ ಬಿಡಬೇಕು.

**ಸಂರಕ್ಷಣಾರ್ಥಂ ಜಂತೂನಾಂ ರಾತ್ರಾವಹನಿ ವಾ ಸದಾ ।**
**ಶರೀರಸ್ಯಾತ್ಯಯೇ ಚೈವ ಸಮೀಕ್ಷ್ಯ ವಸುಧಾಂ ಚರೇತ್ ॥ ೧೬೮**

-ಮನುಸ್ಮೃತಿ, ೬-೬೮

ತನಗೆ ಎಷ್ಟೇ ತೊಂದರೆಯಾದರೂ, ರಾತ್ರಿಯಲ್ಲಾಗಲೀ ಹಗಲಾಗಲಿ ಪ್ರಾಣಿಗಳನ್ನು ಉಳಿಸುವುದಕ್ಕಾಗಿ ಚೆನ್ನಾಗಿ ನೆಲವನ್ನು ನೋಡುತ್ತಾ ನಡೆಯಬೇಕು.

**ಸರ್ವಲಕ್ಷಣಹೀನೋಽಪಿ ಯಃ ಸದಾಚಾರವಾನ್ನರಃ ।**
**ಶ್ರದ್ದಧಾನೋಽನಸೂಯಶ್ಚ ಶತಂ ವರ್ಷಾಣಿ ಜೀವತಿ ॥ ೧೬೯**

-ಮನುಸ್ಮೃತಿ, ೪-೧೫೮

ಯಾವ ಲಕ್ಷಣಗಳೂ ಇಲ್ಲದಿದ್ದರೂ ಸಹ, ಒಳ್ಳೆಯ ನಡತೆಯುಳ್ಳವನು, ನಂಬಿಕೆಯಿಂದ ಕೂಡಿದವನು, ಅಸೂಯೆ ಇಲ್ಲದವನು ನೂರು ವರ್ಷ ಬದುಕುತ್ತಾನೆ.

**ಸರ್ವಂಸಹಾ ಯೇ ಋಜವಃ ಪ್ರತಿಜ್ಞಾತಾರ್ಥಪಾಲಕಾಃ ।**
**ಪರೋಪಕಾರಿಣಃ ಸೇವ್ಯಾಃ ನಿರ್ಧನಾ ಅಪಿ ತೇ ಜನಾಃ ॥ ೧೭೦**

-ಸುಭಾಷಿತರತ್ನಭಾಂಡಾಗಾರ

ಎಲ್ಲವನ್ನೂ ಸಹಿಸಿಕೊಳ್ಳುವವರೂ ಕಪಟವರಿಯದವರೂ ಹೇಳಿದುದನ್ನು ನಡೆಸುವವರೂ ಪರೋಪಕಾರಿಗಳೂ ಆದ ಜನರು ಬಡವರಾಗಿದ್ದಾಗ್ಯೂ ಸೇವ್ಯರೇ ಆಗಿದ್ದಾರೆ.

**ಸರ್ವಹಿಂಸಾನಿವೃತ್ತಾ ಯೇ ನರಾಃ ಸರ್ವಂ ಸಹಾಶ್ಚ ಯೇ ।**
**ಸರ್ವಸ್ಯಾಶ್ರಯಭೂತಾಶ್ಚ ತೇ ನರಾಃ ಸ್ವರ್ಗಗಾಮಿನಃ ॥ ೧೭೧**

-ಸುಭಾಷಿತರತ್ನಭಾಂಡಾಗಾರ

ಯಾರು ಎಲ್ಲ ರೀತಿಯಲ್ಲಿಯೂ ಹಿಂಸೆಯನ್ನು ಬಿಟ್ಟಿದ್ದಾರೋ, ಎಲ್ಲವನ್ನೂ ಸಹಿಸಿಕೊಳ್ಳುತ್ತಾರೆಯೋ, ಎಲ್ಲರಿಗೂ ಆಶ್ರಯವಾಗಿದ್ದಾರೆಯೋ ಅಂಥ ಜನರು ಸ್ವರ್ಗವನ್ನು ಪಡೆಯುತ್ತಾರೆ.

**ಸರ್ವಾಶುಚಿ ನಿಧಾನಸ್ಯ ಕೃತಘ್ನಸ್ಯ ವಿನಾಶಿನಃ ।**
**ಶರೀರಕಸ್ಯಾಪಿ ಕೃತೇ ಮೂಢಾಃ ಪಾಪಾನಿ ಕುರ್ವತೇ ॥ ೧೭೨**

-ನಾಗಾನಂದ, ೪-೭

ಎಲ್ಲ ಬಗೆಯ ಕೊಳೆಯಿಂದ ತುಂಬಿದ, ಉತ್ತಮ ಆಹಾರವನ್ನು ಕೆಟ್ಟದಾಗಿ ಮಾರ್ಪಡಿಸುವ, ನಾಶವಾಗುವ, ಈ ಅಲ್ಪಶರೀರಕ್ಕಾಗಿ ಮೂರ್ಖರು ಪಾಪ ಕೆಲಸವನ್ನು ಮಾಡುತ್ತಾರೆ.

**ಸರ್ವೇ ಕಂಕಣಕೇಯೂರಕುಂಡಲಪ್ರತಿಮಾ ಗುಣಾಃ ।**
**ಶೀಲಂ ಚಾಕೃತ್ರಿಮಂ ಲೋಕೇ ಲಾವಣ್ಯಮಿವ ಭೂಷಣಮ್ ॥ ೧೭೩**

-ಸುಭಾಷಿತಸುಧಾನಿಧಿ

ಇತರ ಎಲ್ಲಾ ಗುಣಗಳೂ ಕೈಬಳೆ, ತೋಳ್ಬಳೆ, ಕರ್ಣಕುಂಡಲಗಳಂತೆ ಆದರೆ ಶೀಲವು ಲಾವಣ್ಯದಂತೆ ಲೋಕದಲ್ಲಿ ಸಹಜವಾದ ಭೂಷಣವಾಗಿರುತ್ತದೆ.

**ಸ್ವಸುಖನಿರಭಿಲಾಷಃ ಖಿದ್ಯಸೇ ಕಸ್ಯ ಹೇತೋಃ**
**ಪ್ರತಿದಿನಮಥವಾ ತೇ ವೃತ್ತಿರೇವಂ ವಿಧೈವ ।**
**ಅನುಭವತಿ ಹಿ ಮೂರ್ಧ್ನಾ ಪಾದಪಸ್ತೀವ್ರಮುಷ್ಣಂ ।**
**ಶಮಯತಿ ಪರಿತಾಪಂ ಛಾಯಯಾ ಸಂಶ್ರಿತಾನಾಮ್ ॥ ೧೭೪**

-ಅಭಿಜ್ಞಾನ ಶಾಕುಂತಲ, ೫-೭

ತನ್ನ ಸುಖವನ್ನು ಕಡೆಗಣಿಸಿ ಏತಕ್ಕಾಗಿ ಕಷ್ಟಪಡುತ್ತೀಯೆ? ಅಥವಾ ಅರಸನ ವೃತ್ತಿಯೇ ಅಂತಹುದು. ದೊಡ್ಡ ಮರವು ತಾನು ಬಿಸಿಲಿನಲ್ಲಿ ನಿಂತು ಆಶ್ರಿತರ ತಾಪವನ್ನು ನೆರಳಿನಿಂದ ಹೋಗಲಾಡಿಸುತ್ತದೆ.

**ಸ್ತ್ರೀಷು ನರ್ಮವಿವಾಹೇ ಚ ವೃತ್ತ್ಯರ್ಥೇ ಪ್ರಾಣಸಂಕಟೇ ।**
**ಗೋಬ್ರಾಹ್ಮಣಾರ್ಥೇ ಹಿಂಸಾಯಾಂ ನಾನೃತಂ ಸ್ಯಾಜ್ಜುಗುಪ್ಸಿತಮ್ ॥ ೧೭೫**

-ಭಾಗವತ, ೮-೧೯-೪೩

ಹೆಂಗಸರಲ್ಲಿಯೂ, ಸುಖವಿವಾಹದಲ್ಲಿಯೂ, ವೃತ್ತಿಗೋಸ್ಕರವಾಗಿಯೂ, ಪ್ರಾಣಾಪಾಯದಲ್ಲಿಯೂ, ಗೋ-ಬ್ರಾಹ್ಮಣಗೋಸ್ಕರವೂ, ಹಿಂಸೆ ಒದಗಿದಾಗಲೂ ನುಡಿದ ಸುಳ್ಳು ನಿಂದಾಸ್ಪದವಲ್ಲ.



# ೧೧. ವಿವೇಕ

**ಅಕ್ಷರಾಣಿ ಪರೀಕ್ಷ್ಯಂತಾಮಂಬರಾಡಂಬರೇಣ ಕಿಂ ।**
**ಶಂಭುರಂಬರಹೀನೋಽಪಿ ಸರ್ವಜ್ಞಃ ಕಿಂ ನ ಕಥ್ಯತೇ ॥ ೧**

-ಅಪ್ಪಯ್ಯದೀಕ್ಷಿತರು

ಅಕ್ಷರಗಳನ್ನು (ವಿದ್ಯೆಯನ್ನು) ಪರೀಕ್ಷಿಸಿ ನೋಡೋಣವಾಗಲಿ. ವಸ್ತ್ರಗಳ ಆಡಂಬರ ದಿಂದೇನು? ಶಿವನು ಬಟ್ಟೆಯಿಲ್ಲದ ದಿಗಂಬರನೆನಿಸಿದ್ದರೂ ಸರ್ವಜ್ಞನೆನಿಸಿಲ್ಲವೆ?

**ಅಂತಸ್ಸಾರೈರಕುಟಿಲೈರಚ್ಛಿದ್ರೈಃ ಸುಪರೀಕ್ಷಿತೈಃ ।**
**ಮಂತ್ರಿಭಿರ್ಧಾರ್ಯತೇ ರಾಜ್ಯಂ ಸುಸ್ತಂಭೈರಿವ ಮಂದಿರಮ್ ॥ ೨**

-ಪಂಚತಂತ್ರ, ಮಿತ್ರಭೇದ-೧೩೭

ಒಳಗೆ ಗಟ್ಟಿಯಾಗಿ, ನೇರವಾಗಿದ್ದು, ಒಡಕುಗಳಿಲ್ಲದೆ, ಚೆನ್ನಾಗಿ ಪರೀಕ್ಷಿಸಲ್ಪಟ್ಟಿರುವ ಒಳ್ಳೆ ಕಂಬಗಳು ಕಟ್ಟಡದ ಭಾರವನ್ನು ಹೊರುವಂತೆ, ಒಳಗೆ ಸತ್ವವನ್ನುಳ್ಳವರೂ, ವಕ್ರವಲ್ಲದವರೂ, ಮೋಸವಿಲ್ಲದವರೂ, ಚೆನ್ನಾಗಿ ಪರೀಕ್ಷಿಸಲ್ಪಟ್ಟವರೂ ಆದ ಮಂತ್ರಿಗಳೇ ರಾಜ್ಯದ ಭಾರವನ್ನು ನಿರ್ವಹಿಸುತ್ತಾರೆ.

**ಅರ್ಥಸ್ಯ ನಿಶ್ಚಯೋ ದೃಷ್ಟೋ ವಿಚಾರೇಣ ಹಿತೋಕ್ತಿತಃ ।**
**ನ ಸ್ನಾನೇನ ನ ದಾನೇನ ಪ್ರಾಣಾಯಾಮಶತೇನ ವಾ ॥ ೩**

-ವಿವೇಕಚೂಡಾಮಣಿ-೧೩

ಆಪ್ತೋಕ್ತಿಗೆ ಅನುಗುಣವಾಗಿ ವಿಚಾರಮಾಡುವುದರಿಂದ ತತ್ತ್ವಾರ್ಥದ ನಿಶ್ಚಯವಾಗುತ್ತದೆ. ಸ್ನಾನದಾನಗಳಿಂದಾಗಲಿ ನೂರಾರು ಪ್ರಾಣಾಯಾಮಗಳಿಂದಾಗಲಿ ಆಗುವುದಿಲ್ಲ.

**ಅದೇಶಕಾಲಜ್ಞಮನಾಯತಿಕ್ಷಮಂ**
**ಯದಪ್ರಿಯಂ ಲಾಘವಕಾರಿ ಚಾತ್ಮನಃ ।**
**ಯೋಽತ್ರಾಬ್ರವೀತ್ಕಾರಣವರ್ಜಿತಂ ವಚೋ**
**ನ ತದ್ವಚಃ ಸ್ಯಾದ್ವಿಷಮೇವ ತದ್ವಚಃ । ೪**

-ಪಂಚತಂತ್ರ, ಕಾಕೋಲೂಕೀಯ-೧೧೦

ಆಯಾ ದೇಶ ಹಾಗೂ ಕಾಲದ ಸ್ಥಿತಿಯನ್ನರಿಯದೆ, ಮುಂದಾಗುವುದನ್ನು ಗಮನಿಸದೆ, ತನ್ನನ್ನು ಹಗುರಗೊಳಿಸತಕ್ಕ, ಪ್ರಿಯವಲ್ಲದ, ಸಕಾರಣವಲ್ಲದ ಮಾತನ್ನು ಯಾರಾದರೂ ಇಲ್ಲಿ ಹೇಳಿದರೆ ಅದು ಮಾತಲ್ಲ ; ಅದು ವಿಷವೇ ಸರಿ.

ಅಧಿಗತಪರಮಾರ್ಥಾನ್ ಪಂಡಿತಾನ್ ಮಾವಮಂಸ್ಥಾ
ತೃಣಮಿವ ಲಘು ಲಕ್ಷ್ಮೀರ್ನೈವ ತಾನ್ ಸಂರುಣದ್ಧಿ ।
ಅಭಿನವಮದಲೇಖಾಶ್ಯಾಮಗಂಡಸ್ಥಲಾನಾಂ
ನ ಭವತಿ ಬಿಸತಂತುರ್ವಾರಣಂ ವಾರಣಾನಾಮ್ ॥ ೫
-ನೀತಿಶತಕ-೧೫

ಪರಮಾರ್ಥವನ್ನು ತಿಳಿದ ಪಂಡಿತರನ್ನು ಅವಮಾನಿಸಬೇಡ. ಲಕ್ಷ್ಮಿಯು ಅವರಿಗೆ ಹುಲ್ಲುಕಡ್ಡಿಯಂತೆ. ಅದು ಅವರನ್ನು ತಡೆಯುವುದಿಲ್ಲ. ಹೊಸದಾಗಿ ಹರಿಯುವ ಮದದಿಂದ ಕಪ್ಪಗಿರುವ ಕಪೋಲಗಳುಳ್ಳ ಆನೆಗಳಿಗೆ ಕಮಲದ ನಾರು ಅಡ್ಡಿಯಾಗುವುದಿಲ್ಲ.

ಅಧೀತ್ಯ ಚತುರೋ ವೇದಾನ್ ವ್ಯಾಕೃತ್ಯಾಷ್ಟಾದಶ ಸ್ಮೃತೀಃ ।
ಅಹೋ ಶ್ರಮಸ್ಯ ವೈಫಲ್ಯಂ ಆತ್ಮಾಪಿ ಕಲಿತೋ ನ ಚೇತ್ ॥ ೬

ನಾಲ್ಕು ವೇದಗಳನ್ನೂ ಕಲಿತು ಹದಿನೆಂಟು ಸ್ಮೃತಿಗಳನ್ನೂ ವ್ಯಾಖ್ಯಾನ ಮಾಡಿಯೂ ಆತ್ಮಜ್ಞಾನ ಸಂಪಾದಿಸದೆ ಹೋದಮೇಲೆ ಅಷ್ಟು ಶ್ರಮವೂ ವ್ಯರ್ಥವೇ ಸರಿ!

ಅನಂತಪಾರಂ ಕಿಲ ಶಬ್ದಶಾಸ್ತ್ರಂ
ಸ್ವಲ್ಪಂ ತಥಾಯುರ್ಬಹವಶ್ಚ ವಿಘ್ನಾಃ ।
ಸಾರಂ ತತೋ ಗ್ರಾಹ್ಯಮಪಾಸ್ಯ ಫಲ್ಗು
ಹಂಸೈರ್ಯಥಾ ಕ್ಷೀರಮಿವಾಂಬುಮಧ್ಯಾತ್ ॥ ೭
-ಪಂಚತಂತ್ರ, ಕಥಾಮುಖ-೯

ಶಬ್ದಶಾಸ್ತ್ರ ಕೊನೆಯಿಲ್ಲದ್ದು. ಆಯುಸ್ಸೋ ಬಹಳ ಕಡಿಮೆಯಾದದ್ದು ; ತೊಂದರೆಗಳೋ ಅಪಾರವಾಗಿವೆ. ಆದುದರಿಂದ ಅಸಾರವಾದದ್ದನ್ನು ತ್ಯಾಗಮಾಡಿ ಸಾರವಾದುದನ್ನು ನೀರಿನ ಮಧ್ಯದಿಂದ ಹಾಲನ್ನು ಬೇರ್ಪಡಿಸಿ ಹಂಸವು ತೆಗೆದುಕೊಳ್ಳುವಂತೆ ಗ್ರಹಿಸಬೇಕು.

ಅನಾರಂಭೋ ಹಿ ಕಾರ್ಯಾಣಾಂ ಪ್ರಥಮಂ ಬುದ್ಧಿಲಕ್ಷಣಂ ।
ಪ್ರಾರಬ್ಧಸ್ಯಾಂತಗಮನಂ ದ್ವಿತೀಯಂ ಬುದ್ಧಿಲಕ್ಷಣಮ್ ॥ ೮
-ಪಂಚತಂತ್ರ, ಕಾಕೋಲೂಕೀಯ-೧೨೫

ಕೆಲಸವನ್ನು ಆರಂಭಮಾಡದೆ ಇರುವುದು ಮೊದಲನೆಯ ಬುದ್ಧಿಲಕ್ಷಣ. ಆದರೆ ಹಾಗೆ ಪ್ರಾರಂಭಿಸಿದ ಕೆಲಸವನ್ನು ಮುಗಿಸುವುದು ಎರಡನೆಯ ಬುದ್ಧಿಲಕ್ಷಣ.

ಅನುಭವೇನ ವಿನಾಧಿಗತಂ ಶ್ರುತಂ
ಭವತಿ ನೈವ ನೃಣಾಮುಪಕಾರಕಂ ।
ದಧಿನಿ ವರ್ತತ ಏವ ಹವಿಃ ಪುನಃ
ನ ಮಥನೇನ ವಿನಾ ತದವಾಪ್ಯತೇ ॥ ೯

-ಯಜ್ಞಫಲ-೪ನೇ ಅಂಕ

ಓದಿ ಕಲಿತದ್ದಾಗಲಿ ಕೇಳಿ ತಿಳಿದದ್ದಾಗಲಿ ಸ್ವತಃ ಅನುಭವವಿಲ್ಲದೆ ಜನರಿಗೆ ಉಪಯುಕ್ತವಾಗುವುದಿಲ್ಲ. ಮೊಸರಲ್ಲಿ ತುಪ್ಪವೇನೋ ಇರುತ್ತದೆ. ಆದರೆ ಮೊಸರನ್ನು ಕಡೆಯದೆ ಅದು ದೊರಕುವುದಿಲ್ಲ.

ಅನೇಕಸಂಶಯೋಚ್ಛೇದಿ ಪರೋಕ್ಷಾರ್ಥಸ್ಯ ದರ್ಶಕಮ್ ।
ಸರ್ವಸ್ಯ ಲೋಚನಂ ಶಾಸ್ತ್ರಂ ಯಸ್ಯ ನಾಸ್ತ್ಯಂಧ ಏವ ಸಃ ॥ ೧೦

-ಹಿತೋಪದೇಶ, ೧-೧೦

ಅನೇಕಾನೇಕ ಸಂದೇಹಗಳನ್ನು ಕಳೆದುಹಾಕುವುದೂ, ಕಣ್ಣಿಗೆ ಕಾಣದ ಪದಾರ್ಥ ಗಳನ್ನೂ ತೋರಿಸುವುದೂ, ಎಲ್ಲರಿಗೂ ಕಣ್ಣಾದುದೂ ಆದ ಶಾಸ್ತ್ರವು ಯಾರಿಗಿಲ್ಲವೋ ಅವನು ಕುರುಡನೇ ಸರಿ!

ಅಪ್ರಾಪ್ತಕಾಲಂ ವಚನಂ ಬೃಹಸ್ಪತಿರಪಿ ಬ್ರುವನ್ ।
ಲಭತೇ ಬಹ್ವವಜ್ಞಾನಮಪಮಾನಂ ಚ ಪುಷ್ಕಲಮ್ ॥ ೧೧

-ಪಂಚತಂತ್ರ, ಮಿತ್ರಭೇದ-೬೭

ಸಮಯಕ್ಕೆ ಸರಿಹೊಂದದ ಮಾತನ್ನು ಬೃಹಸ್ಪತಿ ಹೇಳಿದರೂ ಸಹ ಅವನಿಗೆ ಹೆಚ್ಚಾದ ತಿರಸ್ಕಾರವೂ ಅಪಮಾನವೂ ಸಂಭವಿಸುವುವು.

ಅಪಿ ಮಾನುಷ್ಯಕಂ ಲಬ್ಧ್ವಾ ಭವಂತಿ ಜ್ಞಾನಿನೋ ನಯೇ ।
ಪಶುತ್ವೈವ ವರಾ ತೇಷಾಂ ಪ್ರತ್ಯವಾಯಾಪ್ರವರ್ತನಾತ್ ॥ ೧೨

-ಸಭಾರಂಜನಶತಕ-೭

ಮನುಷ್ಯಜನ್ಮವನ್ನು ಪಡೆದಿದ್ದರೂ ಯಾರು ವಿದ್ಯಾವಂತರಾಗುವುದಿಲ್ಲವೋ ಅವರು ಪಶುಗಳಾಗಿ ಹುಟ್ಟಿದ್ದರೆ ಒಳ್ಳೆಯದಾಗುತ್ತಿತ್ತು! ಏಕೆಂದರೆ, ಪಶುಗಳಿಗೆ ಪಾಪದ ಲೇಪವಿಲ್ಲ!

ಅಪ್ರಿಯಸ್ಯಾಪಿ ಪಥ್ಯಸ್ಯ ಪರಿಣಾಮಃ ಸುಖಾವಹಃ ।
ವಕ್ತಾ ಶ್ರೋತಾ ಚ ಯತ್ರಾಸ್ತಿ ರಮಂತೇ ತತ್ರ ಸಂಪದಃ ॥ ೧೩

-ಹಿತೋಪದೇಶ, ಸುಹೃದ್ಭೇದ-೧೨೨

ಪ್ರಿಯವಲ್ಲದಿದ್ದರೂ ಪಥ್ಯವಾದ ಮಾತಿನ ಪರಿಣಾಮ ಸುಖಕರವೇ ಆಗುವುದು. ಅಂಥ ಮಾತನ್ನು ಹೇಳುವವನೂ ಕೇಳುವವನೂ ಎಲ್ಲಿರುವನೋ ಅಲ್ಲಿ ಎಲ್ಲ ಸಂಪತ್ತುಗಳೂ ನಲಿಯುವುವು.

**ಅಂಭೋಜಿನೀವನನಿವಾಸವಿಲಾಸಮೇವ**
**ಹಂಸಸ್ಯ ಹಂತಿ ನಿತರಾಂ ಕುಪಿತೋ ವಿಧಾತಾ ।**
**ಕಿಂ ತಸ್ಯ ದುಗ್ಧಜಲಭೇದವಿಧೌ ಪ್ರಸಿದ್ಧಾಂ**
**ವೈದಗ್ಧ್ಯಕೀರ್ತಿಮಪಹರ್ತುಮಸೌ ಸಮರ್ಥಃ ॥ ೧೪**

-ನೀತಿಶತಕ-೧೬

ಬ್ರಹ್ಮನು ಕೋಪಗೊಂಡರೆ ಹಂಸದ ಕಮಲವನವಾಸದ ಆನಂದವನ್ನು ಮಾತ್ರ ತಪ್ಪಿಸಿಬಿಡಬಹುದು. ಆದರೆ ಹಾಲಿನಿಂದ ನೀರನ್ನು ಬೇರ್ಪಡಿಸುವ ಅದರ ಪ್ರಖ್ಯಾತವಾದ ಕೀರ್ತಿಯನ್ನು ಅಪಹರಿಸಲು ಶಕ್ತನೇನು?

**ಅಲಂ ದಾನೇನ ವಿಪ್ರೇಂದ್ರ ಯಜನಾಧ್ಯಯನೇನ ವಾ ।**
**ಇದಂ ತತ್ಸ್ವರ್ಗಸೋಪಾನಮಮಲಂ ಯತ್ಪ್ರಿಯಂ ವಚಃ ॥ ೧೫**

-ಸುಭಾಷಿತಸುಧಾನಿಧಿ

ಎಲೈ ಬ್ರಾಹ್ಮಣೋತ್ತಮನೇ, ದಾನಮಾಡುವುದು, ಯಾಗಮಾಡುವುದು ಹಾಗೂ ಅಧ್ಯಯನಮಾಡುವುದು ಸಾಕು. ಪ್ರಿಯವಾದ ಮತ್ತು ಪರಿಶುದ್ಧವಾದ ಯಾವ ಮಾತುಂಟೋ ಅದು ಸ್ವರ್ಗಕ್ಕೆ ಮೆಟ್ಟಲಿದ್ದಂತೆ! ಅದನ್ನು ಸಾಧಿಸಬೇಕು.

**ಅಸಂಸಕ್ತಃ ಶರೀರೇಽಸ್ಮಿನ್ನಮುನೋತ್ಪಾದಿತೋ ಗೃಹೇ ।**
**ಅಪತ್ಯೇ ದ್ರವಿಣೇ ವಾಪಿ ಕಃ ಕುರ್ಯಾನ್ಮಮತಾಂ ಬುಧಃ ॥ ೧೬**

-ಭಾಗವತ, ೪-೨೦-೧

ತನ್ನ ಶರೀರದಲ್ಲಿಯೇ ಮಮತೆಯನ್ನು ತ್ಯಜಿಸಿದ ವಿದ್ವಾಂಸನು, ಈ ಶರೀರವು ಸೃಜಿಸಿದ ಮನೆ, ಮಕ್ಕಳು, ಹಣಗಳಲ್ಲಿ ಮಮತೆಯನ್ನಿಡುವನೆ?

**ಆಚಾರ್ಯಪುತ್ರಃ ಶುಶ್ರೂಷುಃ ಜ್ಞಾನದೋ ಧಾರ್ಮಿಕಃ ಶುಚಿಃ ।**
**ಆಪ್ತಃ ಶಕ್ತೋಽರ್ಥದಃ ಸಾಧುಃ ಸ್ವೋಽಧ್ಯಾಪ್ಯಾ ದಶ ಧರ್ಮತಃ ॥ ೧೭**

-ಮನುಸ್ಮೃತಿ, ೨-೧೦೯

ಅಧ್ಯಾಪಕನಾದವನು ಈ ಹತ್ತು ಮಂದಿಗೆ ಕರ್ತವ್ಯವೆಂದು ತಿಳಿದು ಪಾಠ ಹೇಳಿ ಕೊಡಬೇಕು-೧. ತನ್ನ ಆಚಾರ್ಯರ ಮಗ. ೨. ತನಗೆ ಸೇವೆಮಾಡುವವನು. ೩. ಬೇರೆ

ವಿದ್ಯೆಯನ್ನು ಹೇಳಿಕೊಡುವವನು. ೪. ಧರ್ಮವನ್ನು ಬಲ್ಲವನು. ೫. ಶುಚಿಯಾಗಿರುವವನು. ೬. ನೆಂಟ. ೭. ತಿಳಿದು ಯೋಚಿಸಬಲ್ಲವನು. ೮. ಹಣ ಕೊಡುವವನು. ೯. ಹಿತೈಷಿ. ೧೦. ಜ್ಞಾತಿ.

**ಆಚಾರ್ಯಾತ್ ಪಾದಮಾದತ್ತೇ ಪಾದಂ ಶಿಷ್ಯಃ ಸ್ವಮೇಧಯಾ ।**
**ಕಾಲೇನ ಪಾದಮಾದತ್ತೇ ಪಾದಂ ಸಬ್ರಹ್ಮಚಾರಿಭಿಃ ॥ ೧೮**

-ಮಹಾಭಾರತ, ಉದ್ಯೋಗ

ಶಿಷ್ಯನು ಆಚಾರ್ಯನಿಂದ ವಿದ್ಯೆಯ ಕಾಲುಭಾಗವನ್ನು ಗ್ರಹಿಸುತ್ತಾನೆ. ಕಾಲುಭಾಗವನ್ನು ತನ್ನ ಬುದ್ಧಿಶಕ್ತಿಯಿಂದಲೂ ಕಾಲುಭಾಗವನ್ನು ಜೊತೆಗೆ ವಿದ್ಯಾರ್ಥಿಗಳಿಂದಲೂ ಉಳಿದ ಕಾಲುಭಾಗವನ್ನು ಕಾಲಪರಿಪಾಕದಿಂದಲೂ ತಿಳಿದುಕೊಳ್ಳುತ್ತಾನೆ.

**ಆಪರಿತೋಷಾದ್ವಿದುಷಾಂ ನ ಸಾಧು ಮನ್ಯೇ ಪ್ರಯೋಗವಿಜ್ಞಾನಂ ।**
**ಬಲವದಪಿ ಶಿಕ್ಷಿತಾನಾಂ ಆತ್ಮನ್ಯಪ್ರತ್ಯಯಂ ಚೇತಃ ॥ ೧೯**

-ಅಭಿಜ್ಞಾನ ಶಾಕುಂತಲ, ೧-೨

ರಸಿಕರಾದ ಪಂಡಿತರಿಗೆ ತೃಪ್ತಿಯಾಗುವವರೆಗೂ ನನ್ನ ನಾಟಕ ಬರೆಯುವ ಕಲೆಯನ್ನು ಉತ್ತಮವೆಂದು ಹೇಳಲಾರೆ. ಎಷ್ಟೇ ಪಾಂಡಿತ್ಯವಿರಲಿ, ಸಾಮರ್ಥ್ಯವಿರಲಿ ಮನಸ್ಸು ತನ್ನನ್ನು ಮೆಚ್ಚುವುದಿಲ್ಲ.

**ಇತಃ ಕೋನ್ವಸ್ತಿ ಮೂಢಾತ್ಮಾ ಯಸ್ತು ಸ್ವಾರ್ಥೇ ಪ್ರಮಾದ್ಯತಿ ।**
**ದುರ್ಲಭಂ ಮಾನುಷಂ ದೇಹಂ ಪ್ರಾಪ್ಯ ತತ್ರಾಪಿ ಪೌರುಷಮ್ ॥ ೨೦**

-ವಿವೇಕಚೂಡಾಮಣಿ-೫

ದುರ್ಲಭವಾದ ಮನುಷ್ಯದೇಹವನ್ನು ಪಡೆದು, ಅದರಲ್ಲಿಯೂ ಪುರುಷಜನ್ಮವನ್ನು ಹೊಂದಿ, ತನ್ನ ಸ್ವಾರ್ಥವೇ ಆದ ಮೋಕ್ಷದ ವಿಷಯದಲ್ಲಿ ಯಾವನು ಪ್ರಮಾದವನ್ನೆಸಗುವನೋ ಅವನಿಗಿಂತ ಮೂಢಾತ್ಮನು ಇನ್ನು ಯಾವನಿದ್ದಾನು?

**ಉಕ್ತೋ ಭವತಿ ಯಃ ಪೂರ್ವಂ ಗುಣವಾನಿತಿ ಸಂಸದಿ ।**
**ತಸ್ಯ ದೋಷೋ ನ ವಕ್ತವ್ಯಃ ಪ್ರತಿಜ್ಞಾಭಂಗಭೀರುಣಾ ॥ ೨೧**

-ಪಂಚತಂತ್ರ, ಮಿತ್ರಭೇದ-೨೬೭

ಸಭೆಯಲ್ಲಿ ಯಾರನ್ನು ಗುಣವಂತನೆಂದು ಮೊದಲು ಹೇಳಿ ಆಗಿದೆಯೋ ಮೊದಲು ಮಾಡಿದ ಪ್ರತಿಜ್ಞೆಯ ಭಂಗಕ್ಕೆ ಹೆದರಿ ಅವನ ದೋಷಗಳನ್ನು ಹೇಳಕೂಡದು.

**ಉಚ್ಚೈರುಚ್ಚರಿತವ್ಯಂ ಯತ್ಕಿಂಚಿದಜಾನತಾಪಿ ಪುರುಷೇಣ ।**
**ಮೂರ್ಖಾ ಬಹು ಮನ್ಯಂತೇ ವಿದುಷಾಮಪಿ ಸಂಶಯೋ ಭವತಿ ॥ ೨೨**

-ಸುಭಾಷಿತಸುಧಾನಿಧಿ

ಏನನ್ನೂ ತಿಳಿಯದವನೂ ಸಹ ಹೇಳುವುದನ್ನು ಗಟ್ಟಿಯಾಗಿ ಹೇಳಬೇಕು. ಅದನ್ನು ಕೇಳಿ ಮೂರ್ಖರು ಬಹಳ ಗೌರವ ತೋರುತ್ತಾರೆ. ವಿದ್ವಾಂಸರಿಗೂ ಕೂಡ ಅದು ಸರಿಯೆಂಬ ಸಂದೇಹವುಂಟಾಗುತ್ತದೆ.

**ಉದ್ಯಂತು ಶತಮಾದಿತ್ಯಾ ಉದ್ಯಂತು ಶತಮಿಂದವಃ ।**
**ನ ವಿನಾ ವಿದುಷಾಂ ವಾಕ್ಯೈರ್ನಶ್ಯತ್ಯಾಭ್ಯಂತರಂ ತಮಃ ॥ ೨೩**

-ಸಭಾರಂಜನ ಶತಕ-೩

ನೂರು ಸೂರ್ಯರು ಹುಟ್ಟಲಿ, ನೂರು ಚಂದ್ರರು ಹುಟ್ಟಲಿ; ಜ್ಞಾನಿಗಳ ನುಡಿಗಳಿಂದಲ್ಲದೆ ಅಂತರಂಗದ ಅಜ್ಞಾನದ ಕತ್ತಲೆ ಹರಿಯುವುದಿಲ್ಲ.

**ಉದೀರಿತೋಽರ್ಥಃ ಪಶುನಾಪಿ ಗೃಹ್ಯತೇ**
**ಹಯಾಶ್ಚ ನಾಗಾಶ್ಚ ವಹಂತಿ ದೇಶಿತಾಃ ।**
**ಅನುಕ್ತಮಪ್ಯೂಹತಿ ಪಂಡಿತೋ ಜನಃ**
**ಪರೇಂಗಿತಜ್ಞಾನಫಲಾ ಹಿ ಬುದ್ಧಯಃ ॥ ೨೪**

-ಹಿತೋಪದೇಶ, ಸುಹೃದ್ಭೇದ-೪೩

ಸುಸ್ಪಷ್ಟವಾಗಿ ಹೇಳಿದ ಅರ್ಥವನ್ನು ಪಶುಗಳೂ ಗ್ರಹಿಸುತ್ತವೆ. ಕುದುರೆಗಳೂ ಆನೆಗಳೂ ಅಪ್ಪಣೆಗನುಸಾರ ನಡೆಯುತ್ತವೆ. ಆದರೆ ಪಂಡಿತರಾದ ಜನರು ಹೇಳದೆ ಇರುವುದನ್ನೂ ಊಹಿಸುತ್ತಾರೆ. ಇತರರ ಇಂಗಿತವನ್ನು ತಿಳಿಯುವುದೇ ಬುದ್ಧಿಯ ಸಾಫಲ್ಯವಷ್ಟೇ?

**ಉಪದಿಶತಿ ಲೋಕವೃತ್ತಂ ವಿತರತಿ ವಿತ್ತಂ ವಿನೋದಯತಿ ಚಿತ್ತಂ ।**
**ಉತ್ತಂಭಯತಿ ಮಹತ್ತ್ವಂ ವಿದ್ಯಾ ಹೃದ್ಯಾ ಸುರಾಜಸೇವೇವ ॥ ೨೫**

-ಹರಿಹರ ಸುಭಾಷಿತ, ೩-೭

ವಿದ್ಯೆಯು ಲೋಕವೃತ್ತವನ್ನು ತಿಳಿಸುತ್ತದೆ. ಧನವನ್ನು ಸಂಪಾದಿಸಿಕೊಡುತ್ತದೆ. ಮನಸ್ಸಿಗೆ ಹರ್ಷವನ್ನುಂಟುಮಾಡಿ ಗೌರವವನ್ನು ತಂದುಕೊಡುತ್ತದೆ. ಹೃದ್ಯವಾದ ವಿದ್ಯೆ ಉತ್ತಮರಾಜನ ಸೇವೆಯಂತೆ ಇದೆಲ್ಲವನ್ನೂ ಕೊಡುತ್ತದೆ.

ಏಕಮಪ್ಯಕ್ಷರಂ ಯಸ್ತು ಗುರುಃ ಶಿಷ್ಯೇ ನಿವೇದಯೇತ್ ।
ಪೃಥಿವ್ಯಾಂ ನಾಸ್ತಿ ತದ್ದ್ರವ್ಯಂ ಯದ್ದತ್ವಾ ಹ್ಯನೃಣೀಭವೇತ್ ॥ ೨೬

-ಅತ್ರಿಸಂಹಿತಾ, ೧-೯

ಗುರುವು ಶಿಷ್ಯನಿಗೆ ಒಂದೇ ಅಕ್ಷರವನ್ನು ಕಲಿಸಿದರೂ, ಅದರ ಋಣಪರಿಹಾರಕ್ಕೆ ತಕ್ಕ ದ್ರವ್ಯವು ಈ ಭೂಮಿಯಲ್ಲಿಯೇ ಇಲ್ಲ.

ಏಕಂ ವಿಷರಸೋ ಹಂತಿ ಶಸ್ತ್ರೇಣೈಕಶ್ಚ ಬಾಧ್ಯತೇ ।
ಸರಾಷ್ಟ್ರಂ ಸಪ್ರಜಂ ಹಂತಿ ರಾಜಾನಂ ಮಂತ್ರವಿಸ್ರವಃ ॥ ೨೭

-ಸುಭಾಷಿತಸುಧಾನಿಧಿ

ವಿಷದ ರಸ ಒಬ್ಬನನ್ನು ಕೊಲ್ಲುತ್ತದೆ. ಶಸ್ತ್ರದಿಂದ ಒಬ್ಬನು ಮಾತ್ರ ಸಾಯುತ್ತಾನೆ. ಆದರೆ ಕೆಟ್ಟ ಮಂತ್ರಾಲೋಚನೆಯ ಪ್ರಯೋಗ ಪ್ರಜೆಗಳು ಮತ್ತು ರಾಜ್ಯ ಇವುಗಳೊಡನೆ ಕೂಡಿದ ರಾಜನನ್ನು ನಾಶಪಡಿಸುತ್ತದೆ.

ಏಕಃ ಸ್ವಾದು ನ ಭುಂಜೀತ ನೈಕಃ ಕಾರ್ಯಂ ವಿಚಿಂತಯೇತ್ ।
ಏಕೋ ನ ಗಚ್ಛೇದಧ್ವಾನಂ ನೈಕಃ ಸುಪ್ತೇಷು ಜಾಗೃಯಾತ್ ॥ ೨೮

-ಸುಭಾಷಿತಸುಧಾನಿಧಿ

ಒಬ್ಬನೇ ಸಿಹಿಯಾದುದನ್ನು ತಿನ್ನಬಾರದು; ಒಬ್ಬನೇ ಕಾರ್ಯವನ್ನು ಕುರಿತು ಚಿಂತಿಸಬಾರದು; ಒಬ್ಬನೇ ಹಾದಿ ನಡೆಯಬಾರದು. ಎಲ್ಲರೂ ನಿದ್ರಿಸಿರುವಾಗ ಒಬ್ಬ ಎಚ್ಚರವಾಗಿರಬಾರದು.

ಏಕಂ ಹನ್ಯಾನ್ನ ವಾ ಹನ್ಯಾತ್ ಇಷುರ್ಮುಕ್ತೋ ಧನುಷ್ಮತಾ ।
ಬುದ್ಧಿರ್ಬುದ್ಧಿಮತಃ ಸೃಷ್ಟಾ ಹಂತಿ ರಾಷ್ಟ್ರಂ ಸನಾಯಕಮ್ ॥ ೨೯

-ಪಂಚತಂತ್ರ, ಮಿತ್ರಭೇದ-೨೧೫

ಬಿಲ್ಲುಗಾರ ಬಿಟ್ಟ ಬಾಣ ಒಬ್ಬನನ್ನು ಕೊಲ್ಲಬಹುದು ಅಥವಾ ಕೊಲ್ಲದಿರಬಹುದು. ಆದರೆ ಬುದ್ಧಿವಂತನಾದವನು ಹೂಡಿದ ಬುದ್ಧಿವಂತಿಕೆಯ ಸಂಚು ನಾಯಕನನ್ನೊಡಗೊಂಡ ರಾಜ್ಯವನ್ನೇ ನಾಶಮಾಡುತ್ತದೆ.

ಕಚ್ಚಿತ್ ಸಹಸ್ರಾನ್ಮೂರ್ಖಾಣಾಮೇಕಮಿಚ್ಛಸಿ ಪಂಡಿತಂ ।
ಪಂಡಿತೋ ಹ್ಯರ್ಥಕೃಚ್ಛ್ರೇಷು ಕುರ್ಯಾನ್ನಿಃಶ್ರೇಯಸಂ ಮಹತ್ ॥ ೩೦

-ರಾಮಾಯಣ, ಅಯೋಧ್ಯಾ. ೧೦೦-೨೨

ಸಾವಿರ ಮೂರ್ಖರಿಗಿಂತಲೂ ಒಬ್ಬ ವಿದ್ವಾಂಸನೇ ಲೇಸೆಂದು ಅವನನ್ನು ಆದರಿಸುವೆಯಷ್ಟೆ? ಏಕೆಂದರೆ, ಕಷ್ಟಕಾಲದಲ್ಲಿ ವಿದ್ವಾಂಸನೊಬ್ಬನೇ ಸರಿಯಾದ ಉಪಾಯವನ್ನು ಬೋಧಿಸಿ ಕಾರ್ಯವನ್ನು ನಿರ್ವಹಿಸಬಲ್ಲ. (ಶ್ರೀರಾಮನು ಭರತನಿಗೆ ಹೇಳಿದ್ದು.)

**ಕಷ್ಟಂ ಕರ್ಮೇತಿ ದುರ್ಮೇಧಾಃ ಕರ್ತವ್ಯಾದ್ವಿನಿವರ್ತತೇ ।**
**ನ ಸಾಹಸಮನಾರಭ್ಯ ಶ್ರೇಯಃ ಸಮುಪಲಭ್ಯತೇ ॥** ೩೧

-ಹರಿಹರ ಸುಭಾಷಿತ, ೧೨-೪೯

ಈ ಕಾರ್ಯ ಕಷ್ಟಕರವಾದದ್ದೆಂದು ಬುದ್ಧಿಗೇಡಿಯು ಕರ್ತವ್ಯದಿಂದ ವಿಮುಖ ನಾಗುತ್ತಾನೆ. ಸಾಹಸವನ್ನಾಚರಿಸದೆ ಶ್ರೇಯಸ್ಸು ದೊರೆಯುವುದಿಲ್ಲ.

**ಕುರು ಗುರುವಚೋ ನಿಪೀತಂ**
**ಭೂಯೋ ಭೂಯೋ ವಿಚಿಂತಯಾಧೀತಂ ।**
**ವಿದ್ಯಾ ಗುರೂಪದಿಷ್ಟಾ ಚಿರ**
**ಪರಿವೃಷ್ಟಾ ವಿಭೂಷಣಂ ವಪುಷಃ ॥** ೩೨

-ಹರಿಹರ ಸುಭಾಷಿತ, ೩-೩

ಗುರುವಿನ ಉಪದೇಶವನ್ನು ಕುಡಿ. ಕಲಿತದ್ದನ್ನು ಮತ್ತೆ ಮತ್ತೆ ಚಿಂತನೆ ಮಾಡು. ಗುರೂಪದಿಷ್ಟವಾದ ವಿದ್ಯೆ ಬಹಳ ಕಾಲ ಚಿಂತನೆಗೊಳಗಾದರೆ ದೇಹಕ್ಕೆ ಭೂಷಣ ವಾಗಿರುತ್ತದೆ.

**ಕೇಯೂರಾ ನ ವಿಭೂಷಯಂತಿ ಪುರುಷಂ ಹಾರಾ ನ ಚಂದ್ರೋಜ್ಜ್ವಲಾಃ**
**ನ ಸ್ನಾನಂ ನ ವಿಲೇಪನಂ ನ ಕುಸುಮಂ ನಾಲಂಕೃತಾ ಮೂರ್ಧಜಾಃ ।**
**ವಾಣ್ಯೇಕಾ ಸಮಲಂಕರೋತಿ ಪುರುಷಂ ಯಾ ಸಂಸ್ಕೃತಾ ಧಾರ್ಯತೇ**
**ಕ್ಷೀಯಂತೇ ಖಲು ಭೂಷಣಾನಿ ಸತತಂ ವಾಗ್ಭೂಷಣಂ ಭೂಷಣಮ್॥** ೩೩

-ನೀತಿಶತಕ-೧೭

ಕಂಕಣಗಳಾಗಲಿ, ಚಂದ್ರನಂತೆ ಬೆಳಗುವ ಹಾರಗಳಾಗಲಿ, ಸ್ನಾನವಾಗಲಿ, ಗಂಧಾದಿ ಲೇಪನಗಳಾಗಲಿ, ಹೂವಾಗಲಿ, ಅಲಂಕರಿಸಲ್ಪಟ್ಟ ಕೂದಲುಗಳಾಗಲೀ, ಮನುಷ್ಯನನ್ನು ಅಲಂಕರಿಸುವುದಿಲ್ಲ. ಸಂಸ್ಕಾರಯುಕ್ತವಾಗಿ ಆಡುವ ಮಾತ್ತೊಂದೇ ಮನುಷ್ಯನಿಗೆ ಅಲಂಕಾರ. ಒಡವೆಗಳೆಲ್ಲಾ ನಾಶವಾಗುತ್ತವೆ. ಆದರೆ ವಾಣಿಯೆಂಬ ಅಲಂಕಾರವೇ ನಾಶವಾಗದೇ ಇರುವುದು.

**ಕೋऽತಿಭಾರಃ ಸಮರ್ಥಾನಾಂ ಕಿಂ ದೂರಂ ವ್ಯವಸಾಯಿನಾಂ ।**
**ಕೋ ವಿದೇಶಃ ಸವಿದ್ಯಾನಾಂ ಕಃ ಪರಃ ಪ್ರಿಯವಾದಿನಾಮ್ ॥ ೩೪**
-ಹಿತೋಪದೇಶ, ಸುಹೃದ್ಭೇದ-೧೨

ಸಮರ್ಥರಾದವರಿಗೆ ಯಾವುದು ತಾನೇ ಹೆಚ್ಚು ಭಾರವಾಗುತ್ತದೆ?. ಪ್ರಯತ್ನಶೀಲರಿಗೆ ದೂರವಾವುದು? ವಿದ್ಯೆಯುಳ್ಳವರಿಗೆ ಪರದೇಶವಾವುದು? ಪ್ರಿಯವಾದ ಮಾತುಗಳನ್ನಾಡುವವರಿಗೆ ಯಾರು ತಾನೇ ಶತ್ರುವಾಗುತ್ತಾರೆ?

**ಗುಣಾನಾಮಂತರಂ ಪ್ರಾಯಸ್ತಜ್ಞೋ ವೇತ್ತಿ ನ ಚಾಪರಃ ।**
**ಮಾಲತೀಮಲ್ಲಿಕಾಮೋದಂ ಘ್ರಾಣಂ ವೇತ್ತಿ ನ ಲೋಚನಂ ॥ ೩೫**
-ಸುಭಾಷಿತರತ್ನಸಮುಚ್ಚಯ

ಗುಣಗಳ ಭೇದವನ್ನು ಗುಣಜ್ಞನು ತಿಳಿಯಬಲ್ಲನೇ ಹೊರತು ಇನ್ನೊಬ್ಬನಲ್ಲ. ಜಾಜಿ ಹೂ ಮಲ್ಲಿಗೆ ಹೂಗಳ ಸುಗಂಧಭೇದವನ್ನು ಮೂಗು ಬಲ್ಲದು, ಕಣ್ಣಲ್ಲ.

**ಘರ್ಮಾರ್ತಂ ನ ತಥಾ ಸುಶೀತಲಜಲೈಃ ಸ್ನಾನಂ ನ ಮುಕ್ತಾವಲೀ**
**ನ ಶ್ರೀಖಂಡವಿಲೇಪನಂ ಸುಖಯತಿ ಪ್ರತ್ಯಂಗಮಪ್ಯರ್ಪಿತಂ ।**
**ಪ್ರೀತ್ಯೈ ಸಜ್ಜನಭಾಷಿತಂ ಪ್ರಭವತಿ ಪ್ರಾಯೋ ಯಥಾ ದೇಹಿನಾಂ**
**ಸದ್ಯುಕ್ತ್ಯಾ ಚ ಪುರಸ್ಕೃತಂ ಸುಕೃತಿನಾಮಾಕೃಷ್ಟಿಮಂತ್ರೋಪಮಮ್ ॥ ೩೬**
-ಹಿತೋಪದೇಶ, ಮಿತ್ರಲಾಭ-೭೧

ಒಳ್ಳೆಯ ಯುಕ್ತಿಗಳಿಂದ ಕೂಡಿರುವುವೂ, ಆಕರ್ಷಿಸುವ ಮಂತ್ರಸಮಾನವಾದವೂ ಆದ ಪುಣ್ಯವಂತರಾದ ಸಜ್ಜನರ ಮಾತುಗಳು ಮನುಷ್ಯರಲ್ಲಿ ಹೇಗೆ ಪ್ರೀತಿಯನ್ನುಂಟು ಮಾಡುತ್ತವೆಯೋ ಹಾಗೆ ಬೇಗೆಗೊಳಗಾದವನನ್ನು ತಂಪಾದ ನೀರಿನ ಸ್ನಾನವಾಗಲೀ, ಮುತ್ತುಗಳ ಹಾರವಾಗಲೀ, ದೇಹದ ಸರ್ವಾಂಗಗಳಿಗೆ ಲೇಪಿಸಿದ ಶ್ರೀಗಂಧವಾಗಲೀ ಸುಖವನ್ನುಂಟುಮಾಡುವುದಿಲ್ಲ.

**ಚಿತ್ತಸ್ಯ ಶುದ್ಧಯೇ ಕರ್ಮ ನ ತು ವಸ್ತೂಪಲಬ್ಧಯೇ ।**
**ವಸ್ತುಸಿದ್ಧಿರ್ವಿಚಾರೇಣ ನ ಕಿಂಚಿತ್ ಕರ್ಮಕೋಟಿಭಿಃ ॥ ೩೭**
-ವಿವೇಕಚೂಡಾಮಣಿ

ಕರ್ಮವು ಚಿತ್ತದ ಶುದ್ಧಿಗಾಗಿ, ವಸ್ತುಸಿದ್ಧಿಗಲ್ಲ. ವಸ್ತುವಿನ (ಮೋಕ್ಷದ) ಸಿದ್ಧಿಯು ವಿಚಾರದಿಂದ ಲಭಿಸುತ್ತದೆ. ಕೋಟಿಕರ್ಮಗಳನ್ನು ಮಾಡಿದ್ದರಿಂದ ಏನೂ ಆಗುವುದಿಲ್ಲ.

**ಜಡಸಂಗೇಽಪಿನ ಲಿಪ್ತಾಃ ಶ್ರೀಸದ್ಭಾವೇಽಪಿ ನೋತ್ತರಲಾಃ ।**
**ಅಂಭೋಜಕೋರಕಾ ಇವ ವಿಜ್ಞಾ ವಿಕಸಂತಿ ವಿಶ್ವಸ್ಮೈ ॥ ೩೮**

-ಅನ್ಯೋಕ್ತಿಸ್ತಬಕ-೪

ಅರಿತವರು ಮೂರ್ಖರ ಸಹವಾಸದಲ್ಲಿದ್ದರೂ ಬದಲಾಯಿಸುವುದಿಲ್ಲ. ಹಣ ವಿದ್ದರೂ ಚಂಚಲರಾಗದೆ ಲೋಕ ಕಲ್ಯಾಣಕ್ಕಾಗಿ ಬೆಳೆಯುತ್ತಾರೆ. ಇದಕ್ಕೆ ತಾವರೆಯ ಮೊಗ್ಗು ದೃಷ್ಟಾಂತ. ಕೆಸರಲ್ಲಿದ್ದರೂ ಕೊಳೆಯಾಗುವುದಿಲ್ಲ. ಕಾಂತಿಯಿದ್ದರೂ ಚಂಚಲತೆ ಇಲ್ಲ. ಸೂರ್ಯನ ಕಿರಣಗಳಿಂದ ಅರಳುತ್ತವೆ.

**ಜ್ಞಾನಮೇವ ಪರಂಬ್ರಹ್ಮ ಜ್ಞಾನಂ ಬಂಧಾಯ ಕಲ್ಪತೇ ।**
**ಜ್ಞಾನಾತ್ಮಕಮಿದಂ ವಿಶ್ವಂ ನ ಜ್ಞಾನಾದ್ವಿದ್ಯತೇ ಪರಂ ॥ ೩೯**

-ವಿಷ್ಣುಪುರಾಣ, ೨-೬-೪೮

ಜ್ಞಾನವೇ ಪರಬ್ರಹ್ಮ. ಜ್ಞಾನದಿಂದಲೇ ಬಂಧನ. ಇಡೀ ಜಗತ್ತು ಜ್ಞಾನಸ್ವರೂಪ. ಜ್ಞಾನವನ್ನು ಬಿಟ್ಟು ಬೇರೆ ಇಲ್ಲ.

**ತತ್ಕರ್ಮ ಯನ್ನ ಬಂಧಾಯ ಸಾ ವಿದ್ಯಾ ಯಾ ವಿಮುಕ್ತಯೇ ।**
**ಆಯಾಸಾಯಾಪರಂ ಕರ್ಮ ವಿದ್ಯಾನ್ಯಾ ಶಿಲ್ಪನೈಪುಣಮ್ ॥ ೪೦**

-ವಿಷ್ಣುಪುರಾಣ, ೧-೧೯-೪೧

ಯಾವುದರಿಂದ ಬಂಧನವಾಗುವುದಿಲ್ಲವೋ ಅದೇ ಸರಿಯಾದ ಕರ್ಮ. ಮೋಕ್ಷಕ್ಕೆ ಸಾಧನವಾದುದೇ ವಿದ್ಯೆ. ಉಳಿದ ಕೆಲಸಗಳು ಕೇವಲ ಆಯಾಸವನ್ನುಂಟುಮಾಡುತ್ತವೆ. ಬೇರೆ ವಿದ್ಯೆಗಳು ಕೇವಲ ಶಿಲ್ಪಿಯ ಕೌಶಲ ಮಾತ್ರ.

**ತತ್ತದುತ್ಪ್ರೇಕ್ಷಮಾಣಾನಾಂ ಪುರಾಣೈರಾಗಮೈರ್ವಿನಾ ।**
**ಅನುಪಾಸಿತವೃದ್ಧಾನಾಂ ವಿದ್ಯಾ ನಾತಿಪ್ರಸೀದತಿ ॥ ೪೧**

-ವಾಕ್ಯಪದೀಯ, ೨-೪೯೪

ಪುರಾಣಗಳನ್ನು, ವೇದಗಳನ್ನು ಓದದೆ, ಹಿರಿಯರ ಸೇವೆ ಮಾಡದೆ ತಾವೇ ಊಹಾ ಪೋಹಗಳನ್ನು ಮಾಡುವವರ ವಿದ್ಯೆಯು ಹೆಚ್ಚು ಫಲಿಸುವುದಿಲ್ಲ.

**ತಮಃಪರಿವೃತಂ ವೇಶ್ಮ ಯಥಾ ದೀಪೇನ ದೀಪ್ಯತೇ ।**
**ತಥಾ ಬುದ್ಧಿಪ್ರದೀಪೇನ ಶಕ್ಯ ಆತ್ಮಾ ನಿರೀಕ್ಷಿತುಮ್ ॥ ೪೨**

-ಸುಭಾಷಿತಸುಧಾನಿಧಿ

ಕತ್ತಲು ಕವಿದ ಮನೆಯನ್ನು ಹೇಗೆ ದೀಪವು ಬೆಳಗುವುದೋ ಹಾಗೆ ಬುದ್ಧಿ ಎಂಬ ದೀಪದಿಂದ ಆತ್ಮನನ್ನು ಕಾಣುವುದು ಶಕ್ಯ.

**ತ್ರೈವಿದ್ಯೇಭ್ಯಸ್ತ್ರಯೀಂ ವಿದ್ಯಾಂ ದಂಡನೀತಿಂ ಚ ಶಾಶ್ವತೀಂ ।**
**ಆನ್ವೀಕ್ಷಕೀಂ ಚಾತ್ಮವಿದ್ಯಾಂ ವಾರ್ತಾರಂಭಾಂಶ್ಚ ಲೋಕತಃ ॥ ೪೩**

-ಮನುಸ್ಮೃತಿ, ೭-೪೩

ಅರಸನು ವೇದ ಬಲ್ಲವರಿಂದ ವೇದಗಳಲ್ಲಿ ತಿಳಿಯಬೇಕಾದ ವಿಷಯಗಳನ್ನೂ, ಪರಂಪರೆಯಿಂದ ಬಂದ ದಂಡನೀತಿಯನ್ನೂ, ತರ್ಕಶಾಸ್ತ್ರವನ್ನೂ, ಬ್ರಹ್ಮವಿದ್ಯೆಯನ್ನೂ, ಬೇಸಾಯ ವಾಣಿಜ್ಯ ಪಶುಪಾಲನೆ ಮೊದಲಾದ ಹಣವನ್ನು ಹೆಚ್ಚಿಸುವ ವಿದ್ಯೆಗಳನ್ನೂ ತಿಳಿಯಬೇಕು.

**ದಾಕ್ಷಿಣ್ಯಂ ಸ್ವಜನೇ ದಯಾ ಪರಿಜನೇ ಶಾಠ್ಯಂ ಸದಾ ದುರ್ಜನೇ**
**ಪ್ರೀತಿಃ ಸಾಧುಜನೇ ನಯೋ ನೃಪಜನೇ ವಿದ್ವಜ್ಜನೇಽಪ್ಯಾರ್ಜವಮ್**
**ಶೌರ್ಯಂ ಶತ್ರುಜನೇ ಕ್ಷಮಾ ಗುರುಜನೇ ನಾರೀಜನೇ ಧೂರ್ತತಾ**
**ಯೇ ಚೈವಂ ಪುರುಷಾಃ ಕಲಾಸು ಕುಶಲಾಸ್ತೇಷ್ವೇವ ಲೋಕಸ್ಥಿತಿಃ ॥೪೪**

-ನೀತಿಶತಕ-೨೦

ಸ್ವಜನರಲ್ಲಿ ದಾಕ್ಷಿಣ್ಯ, ಸೇವಕರಲ್ಲಿ ದಯೆ, ದುಷ್ಟರಲ್ಲಿ ದೌರ್ಜನ್ಯ, ಸಜ್ಜನರಲ್ಲಿ ಪ್ರೀತಿ, ರಾಜರಲ್ಲಿ ನಯ, ವಿದ್ವಾಂಸರಲ್ಲಿ ಋಜುಬುದ್ಧಿ, ಶತ್ರುಗಳಲ್ಲಿ ಪರಾಕ್ರಮ, ಹಿರಿಯರಲ್ಲಿ ತಾಳ್ಮೆ, ಸ್ತ್ರೀಯರಲ್ಲಿ ಧೂರ್ತತೆ ಈ ರೀತಿ ಯಾವ ಪುರುಷರು ಕಲೆಗಳಲ್ಲಿ ಕುಶಲರಾಗಿರುತ್ತಾರೋ ಅವರ ಮೇಲೆಯೇ ಲೋಕಸ್ಥಿತಿ ಏರ್ಪಟ್ಟಿರುವುದು.

**ದಾನೇ ತಪಸಿ ಶೌರ್ಯೇ ವಾ ಯಸ್ಯ ನ ಪ್ರಥಿತಂ ಯಶಃ ।**
**ವಿದ್ಯಾಯಾಮರ್ಥಲಾಭೇ ವಾ ಮಾತುರುಚ್ಚಾರ ಏವ ಸಃ ॥ ೪೫**

-ನೈಷಧವ್ಯಾಖ್ಯಾ (ನಾರಾ) ೩-೮೮

ದಾನ, ತಪಸ್ಸು, ಶೌರ್ಯ, ವಿದ್ಯೆ, ಧನಸಂಪಾದನೆ ಇವುಗಳಲ್ಲೊಂದರಲ್ಲಾದರೂ ಯಾವನ ಕೀರ್ತಿ ಹರಡಿಲ್ಲವೋ ಅವನು ತಾಯಿಯ ಮಲವೇ ಸರಿ.

**ದುರ್ಲಭಂ ತ್ರಯಮೇವೈತದ್ದೈವಾನುಗ್ರಹಹೇತುಕಂ ।**
**ಮನುಷ್ಯತ್ವಂ ಮುಮುಕ್ಷುತ್ವಂ ಮಹಾಪುರುಷಸಂಶ್ರಯಃ ॥ ೪೬**

-ವಿವೇಕಚೂಡಾಮಣಿ-೩

ಮನುಷ್ಯಜನ್ಮ, ಮೋಕ್ಷಾಭಿಲಾಷೆ, ಮಹಾಜನರ ಸಂಸರ್ಗ ಇವು ಮೂರು ದುರ್ಲಭ. ಅದು ದೈವಾನುಗ್ರಹದಿಂದ ದೊರೆಯತಕ್ಕದ್ದು.

**ಧರ್ಮಾರ್ಥಕಾಮಮೋಕ್ಷಾಣಾಂ ಪ್ರಾಣಾಃ ಸಂಸ್ಥಿತಿಹೇತವಃ ।**
**ತನ್ನಿಘ್ನತಾ ಕಿಂ ನ ಹತಂ ರಕ್ಷತಾ ಕಿಂ ನ ರಕ್ಷಿತಮ್ ॥ ೪೭**

-ಹಿತೋಪದೇಶ, ಮಿತ್ರಲಾಭ-೩೦

ಧರ್ಮ, ಅರ್ಥ, ಕಾಮ ಮತ್ತು ಮೋಕ್ಷಗಳನ್ನು ಕಾದಿಟ್ಟುಕೊಳ್ಳಲು ಸಾಧನವೆಂದರೆ ಪ್ರಾಣ. ಅದನ್ನು ಹಾಳುಮಾಡಿಕೊಳ್ಳುವವನಿಂದ ಯಾವದು ತಾನೇ ನಾಶಮಾಡಲ್ಪಡಲಿಲ್ಲ? ಅದನ್ನು ರಕ್ಷಿಸಿಕೊಂಡವನು ಏನನ್ನು ತಾನೇ ರಕ್ಷಿಸಿಕೊಂಡಿಲ್ಲ?

**ಧರ್ಮಾರ್ಥೌ ಯತ್ರ ನ ಸ್ಯಾತಾಂ ಶುಶ್ರೂಷಾವಾऽಪಿ ತದ್ವಿಧಾ ।**
**ತತ್ರ ವಿದ್ಯಾ ನ ವಕ್ತವ್ಯಾ ಶುಭಂ ಬೀಜಮಿವೋಷರೇ ॥ ೪೮**

-ಮನುಸ್ಮೃತಿ, ೨-೧೧೨

ಯಾರಲ್ಲಿ ಧರ್ಮವಿಲ್ಲವೋ, ಯಾರಿಂದ ಪ್ರಯೋಜನವಿಲ್ಲವೋ, ಯಾರು ಸೇವೆ ಮಾಡುವುದಿಲ್ಲವೋ ಅಂಥವರಿಗೆ ವಿದ್ಯೆಯನ್ನು ಹೇಳಬಾರದು. ಅವರಿಗೆ ಕಲಿಸಿದರೆ ಒಳ್ಳೆಯ ಬೀಜವನ್ನು ಬಂಜರುಭೂಮಿಯಲ್ಲಿ ಬಿತ್ತಿದಂತಾಗುತ್ತದೆ.

**ನ ತಚ್ಛಸ್ತ್ರೈಃ ನ ನಾಗೇಂದ್ರೈರ್ನ ಹಯೈಃ ನ ಪದಾತಿಭಿಃ ।**
**ಕಾರ್ಯಂ ಸಂಸಿದ್ಧಿಮಭ್ಯೇತಿ ಯಥಾ ಬುದ್ಧ್ಯಾ ಪ್ರಸಾಧಿತಮ್ ॥ ೪೯**

-ಪಂಚತಂತ್ರ, ಮಿತ್ರಭೇದ-೧೩೫

ಹೇಗೆ ಬುದ್ಧಿಶಕ್ತಿಯಿಂದ ಸಾಧಿಸುತ್ತಾನೋ ಹಾಗೆ ಕಾರ್ಯಸಿದ್ಧಿಯನ್ನು ಶಸ್ತ್ರಗಳಿಂದಾಗಲೀ, ಆನೆಗಳಿಂದಾಗಲೀ, ಕುದುರೆಗಳಿಂದಾಗಲೀ, ಕಾಲಾಳುಗಳಿಂದಾಗಲೀ ಪಡೆಯಲಾಗುವುದಿಲ್ಲ.

**ನ ತೇನ ವೃದ್ಧೋ ಭವತಿ ಯೇನಾಸ್ಯ ಪಲಿತಂ ಶಿರಃ ।**
**ಯೋ ವೈ ಯುವಾಪ್ಯಧೀಯಾನಸ್ತಂ ದೇವಾಃ ಸ್ಥವಿರಂ ವಿದುಃ ॥ ೫೦**

-ಮನುಸ್ಮೃತಿ, ೨-೧೫೬

ಕೂದಲು ಬೆಳ್ಳಗಾದ ಮಾತ್ರದಿಂದ ಯಾರೂ ಹಿರಿಯನಾಗುವುದಿಲ್ಲ. ಚೆನ್ನಾಗಿ ಓದಿದ, ಕಲಿತ ತರುಣನನ್ನೂ ಸಹ ದೇವತೆಗಳು ಮುಂದುವರಿದವನೆಂದು ಗೌರವಿಸುತ್ತಾರೆ.

**ನ ದೇವಾ ದಂಡಮಾದಾಯ ರಕ್ಷಂತಿ ಪಶುಪಾಲವತ್ ।**
**ಯಂ ಹಿ ರಕ್ಷಿತುಮಿಚ್ಛಂತಿ ಬುದ್ಧ್ಯಾ ಸಂಯೋಜಯಂತಿ ತಮ್ ॥ ೫೧**

ದನ ಕಾಯುವವನು ಕೋಲಿನಿಂದ ದನಗಳನ್ನು ನೋಡಿಕೊಳ್ಳುವಂತೆ ದೇವತೆಗಳು ನಮ್ಮನ್ನು ರಕ್ಷಿಸುವುದಕ್ಕೆ ಬರುವುದಿಲ್ಲ. ಯಾರನ್ನು ಕಾಪಾಡಬೇಕೆಂದಿಷ್ಟಪಡುತ್ತಾರೆಯೋ ಅವರಿಗೆ ಆ ರೀತಿಯ ಬುದ್ಧಿಯನ್ನು ಕೊಡುತ್ತಾರೆ.

**ನ ಯತ್ರಾಸ್ತಿ ಗತಿರ್ವಾಯೋಃ ರಶ್ಮೀನಾಂ ಚ ವಿವಸ್ವತಃ ।**
**ತತ್ರಾಪಿ ಪ್ರವಿಶತ್ಯಾಶು ಬುದ್ಧಿರ್ಬುದ್ಧಿಮತಾಂ ಸದಾ ॥** ೫೨

-ಪಂಚತಂತ್ರ, ಅಪರೀಕ್ಷಿತಕಾರಕ-೪೬

ಎಲ್ಲಿ ಗಾಳಿಯ ಸಂಚಾರವೂ ಇಲ್ಲವೋ, ಸೂರ್ಯನ ಕಿರಣಗಳೂ ಪ್ರವೇಶಿಸುವುದಿಲ್ಲವೋ, ಅಲ್ಲಿಯೂ ಸಹ ಬುದ್ಧಿವಂತರ ಬುದ್ಧಿಯು ಯಾವಾಗಲೂ ಬೇಗ ಪ್ರವೇಶ ಮಾಡುತ್ತದೆ.

**ನಷ್ಟಂ ಮೃತಮತಿಕ್ರಾಂತಂ ನಾನುಶೋಚಂತಿ ಪಂಡಿತಾಃ ।**
**ಪಂಡಿತಾನಾಂ ಚ ಮೂರ್ಖಾಣಾಂ ವಿಶೇಷೋಽಯಂ ಯತಃ ಸ್ಮೃತಃ॥** ೫೩

-ಪಂಚತಂತ್ರ, ಮಿತ್ರಭೇದ-೩೬೩

ನಷ್ಟವಾದುದಕ್ಕಾಗಿ, ಮೃತನಾದವನಿಗೆ ಮತ್ತು ಕಾಲ ಮಿಂಚಿಹೋದುದಕ್ಕೆ ಬುದ್ಧಿವಂತರು ದುಃಖಿಸುವುದಿಲ್ಲ. ಬುದ್ಧಿವಂತರಿಗೂ ಮೂರ್ಖರಿಗೂ ಇರುವ ವಿಶೇಷವು ಇದೇ ಎಂದು ಹೇಳಿದೆ.

**ನ ಸ್ವಲ್ಪಸ್ಯ ಕೃತೇ ಭೂರಿ ನಾಶಯೇನ್ಮತಿಮಾನ್ ನರಃ ।**
**ಏತದೇವಾತ್ರಪಾಂಡಿತ್ಯಂ ಯತ್ಸ್ವಲ್ಪಾದ್ಭೂರಿರಕ್ಷಣಮ್ ॥** ೫೪

-ಪಂಚತಂತ್ರ, ಮಿತ್ರಭೇದ-೧೯

ಬುದ್ಧಿವಂತನಾದ ಮನುಷ್ಯ ಸ್ವಲ್ಪ ಪ್ರಯೋಜನಕ್ಕಾಗಿ ದೊಡ್ಡದನ್ನು ನಾಶಮಾಡಿಕೊಳ್ಳಬಾರದು. ಸ್ವಲ್ಪವನ್ನು ಬಿಟ್ಟುಕೊಟ್ಟು ಹೆಚ್ಚಾದುದನ್ನು ಕಾಪಾಡಿಕೊಳ್ಳುವುದೇ ಇಲ್ಲಿ ಪಾಂಡಿತ್ಯ.

**ನಾಪ್ರಾಪ್ಯಮಭಿವಾಂಛಂತಿ ನಷ್ಟಂ ನೇಚ್ಛಂತಿ ಶೋಚಿತುಂ ।**
**ಆಪತ್ಸು ಚ ನ ಮುಹ್ಯಂತಿ ನರಾಃ ಪಂಡಿತಬುದ್ಧಯಃ ॥** ೫೫

-ಮಹಾಭಾರತ, ಉದ್ಯೋಗ. ೩೩-೨೩

ವಿವೇಕಶಾಲಿಗಳಾದ ವಿದ್ವಾಂಸರು ಅಲಭ್ಯವಾದುದನ್ನು ಬಯಸುವುದಿಲ್ಲ. ನಷ್ಟವಾದ್ದಕ್ಕೆ ವ್ಯಥೆಪಡುವುದಿಲ್ಲ. ಆಪತ್ಕಾಲದಲ್ಲಿ ಮೋಹಗೊಳ್ಳುವುದೂ ಇಲ್ಲ.

**ನಾಸ್ತಿ ವಿದ್ಯಾಸಮಂ ಚಕ್ಷುರ್ನಾಸ್ತಿ ಸತ್ಯಸಮಂ ತಪಃ ।**
**ನಾಸ್ತಿ ರಾಗಸಮಂ ದುಃಖಂ ನಾಸ್ತಿ ತ್ಯಾಗಸಮಂ ಸುಖಮ್ ॥** ೫೬

-ಮಹಾಭಾರತ, ಶಾಂತಿ. ೧೭೫-೩೫

ವಿದ್ಯೆಗೆ ಸಮವಾದ ಇನ್ನೊಂದು ಕಣ್ಣು ಇಲ್ಲ. ಸತ್ಯಕ್ಕೆ ಸಮವಾದ ತಪಸ್ಸಿಲ್ಲ. ಆಸಕ್ತಿಗೆ ಸಮವಾದ ದುಃಖವಿಲ್ಲ. ತ್ಯಾಗಕ್ಕೆ ಸಮವಾದ ಸುಖವಿಲ್ಲ.

ನಿತ್ಯಂ ಕೋಪಾತ್ತಪೋ ರಕ್ಷೇಚ್ಛ್ರಿಯಂ ರಕ್ಷೇಚ್ಚ ಮತ್ಸರಾತ್ ।
ವಿದ್ಯಾಂ ಮಾನಾವಮಾನಾಭ್ಯಾಮಾತ್ಮಾನಾಂ ಚ ಪ್ರಮಾದತಃ ॥ ೫೭

-ಸುಭಾಷಿತಸುಧಾನಿಧಿ

ಯಾವಾಗಲೂ ತಪಸ್ಸನ್ನು ಕೋಪದಿಂದ ಕೆಡದಂತೆ ಕಾಪಾಡಿಕೊಳ್ಳಬೇಕು. ಮಾತ್ಸರ್ಯದಿಂದ ಐಶ್ವರ್ಯವನ್ನೂ ಮಾನ ಮತ್ತು ಅಪಮಾನಗಳಿಂದ ವಿದ್ಯೆಯನ್ನೂ, ಎಚ್ಚರಗೇಡಿತನದಿಂದ ತನ್ನನ್ನೂ ಕಾಪಾಡಿಕೊಳ್ಳಬೇಕು.

ಪ್ರಜ್ಞಾಗುಪ್ತಶರೀರಸ್ಯ ಕಿಂ ಕರಿಷ್ಯಂತಿ ಸಂಗತಾಃ ।
ಗೃಹೀತಚ್ಛತ್ರಹಸ್ತಸ್ಯ ವಾರಿಧಾರಾ ಇವಾರಯಃ ॥ ೫೮

-ಸುಭಾಷಿತಸುಧಾನಿಧಿ

ಬುದ್ಧಿಯಿಂದ ಶರೀರವನ್ನು ಕಾಪಾಡಿಕೊಂಡಿರುವವನನ್ನು ಒಗ್ಗಟ್ಟಾಗಿ ಕೂಡಿದ ಶತ್ರುಗಳು, ಕೊಡೆಹಿಡಿದವನನ್ನು ಮಳೆಯಧಾರೆಯಂತೆ ಏನನ್ನು ತಾನೇ ಮಾಡಿಯಾರು?

ಪ್ರಜ್ಞಾವಿವೇಕಂ ಲಭತೇ ಭಿನ್ನೈರಾಗಮದರ್ಶನೈಃ ।
ಕಿಯದ್ವಾ ಶಕ್ಯಮುನ್ನೇತುಂ ಸ್ವಯತ್ನಮನುಧಾವತಾ ॥ ೫೯

-ವಾಕ್ಯಪದೀಯ, ೨-೪೯೩

ಬೇರೆ ಬೇರೆ ಶಾಸ್ತ್ರಗಳನ್ನು ಓದುವುದರಿಂದ ಜಾಣ್ಮೆಯನ್ನೂ ವಿವೇಕವನ್ನೂ ಪಡೆಯುತ್ತಾನೆ. ಕೇವಲ ತನ್ನ ಪ್ರಯತ್ನದಿಂದಲೇ ಎಷ್ಟು ವಿಷಯವನ್ನು ತಾನೇ ತಿಳಿಯಲು ಸಾಧ್ಯ?

ಪ್ರಜ್ಞಯಾ ಮಾನಸಂ ದುಃಖಂ ಹನ್ಯಾಚ್ಛಾರೀರಮೌಷಧೈಃ ।
ಏತದ್ವಿಜ್ಞಾನಸಾಮರ್ಥ್ಯಂ ನ ಬಾಲೈಃ ಸಮತಾಮಿಯಾತ್ ॥ ೬೦

-ಮಹಾಭಾರತ, ಸ್ತ್ರೀ. ೨-೩೧

ಪ್ರಜ್ಞಾಶಕ್ತಿಯಿಂದ ಮಾನಸ ದುಃಖವನ್ನೂ ಔಷಧಗಳಿಂದ ಶರೀರ ದುಃಖವನ್ನೂ ಹೋಗಲಾಡಿಸಿಕೊಳ್ಳಬೇಕು. ಜ್ಞಾನದ ಸಾಮರ್ಥ್ಯವೆಂದರೆ ಇದೇ. ಅದನ್ನು ಬಿಟ್ಟು ಮಕ್ಕಳಂತೆ ಇರಬಾರದು.

ಪ್ರಸ್ತಾವಸದೃಶಂ ವಾಕ್ಯಂ ಸದ್ಭಾವಸದೃಶಂ ಪ್ರಿಯಮ್ ।
ಆತ್ಮಶಕ್ತಿಸಮಂ ಕೋಪಂ ಯೋ ಜಾನಾತಿ ಸ ಪಂಡಿತಃ ॥ ೬೧

-ಹಿತೋಪದೇಶ, ಸುಹೃದ್ಭೇದ-೪೪

ಸಂದರ್ಭಕ್ಕೆ ತಕ್ಕ ಮಾತು, ಒಳ್ಳೆಯ ಭಾವಕ್ಕೆ ತಕ್ಕ ಪ್ರಿಯಕಾರ್ಯ, ತನ್ನ ಶಕ್ತಿಗನುಗುಣವಾದ ಕೋಪ-ಇವುಗಳನ್ನು ಯಾರು ತಿಳಿಯುವವನೋ ಅವನೇ ಪಂಡಿತ.

**ಪ್ರಾಜ್ಞೋಽಪಿ ಜಲ್ಪತಾಂ ಪುಂಸಾಂ ಶ್ರುತ್ವಾ ವಾಚಃ ಶುಭಾಶುಭಾಃ ।**
**ಗುಣವದ್ವಾಕ್ಯಮಾದತ್ತೇ ಹಂಸಃ ಕ್ಷೀರಮಿವಾಂಭಸಃ ॥ ೬೨**

-ಸುಭಾಷಿತಸುಧಾನಿಧಿ

ಮಾತಾಳಿಗಳಿಂದ ಮನುಷ್ಯರ ಒಳ್ಳೆಯ ಹಾಗೂ ಕೆಟ್ಟ ಮಾತುಗಳನ್ನೆಲ್ಲಾ ಕೇಳಿ ಅವುಗಳಲ್ಲಿ ಗುಣಸಹಿತವಾದ ಮಾತನ್ನು ಪ್ರಾಜ್ಞನಾದವನು, ನೀರಿನಿಂದ ಹಾಲನ್ನು ಹಂಸವು ಹೇಗೋ ಹಾಗೆ, ಆರಿಸಿಕೊಳ್ಳುತ್ತಾನೆ.

**ಪಾಂಡಿತ್ಯೇನ ಪ್ರಚಂಡೇನ ಯೇನ ಮಾದ್ಯಂತಿ ದುರ್ಜನಾಃ ।**
**ತೇನೈವ ಸಜ್ಜನಾ ರೂಢಾಂ ಯಾಂತಿ ಶಾಂತಿಮನುತ್ತಮಾಮ್ ॥ ೬೩**

-ರಸಗಂಗಾಧರ

ಯಾವ ಉದ್ದಾಮ ಪಾಂಡಿತ್ಯದಿಂದ ದುರ್ಜನರು ಗರ್ವದಿಂದ ಮೆರೆಯುತ್ತಾರೋ, ಅದೇ ಪಾಂಡಿತ್ಯದಿಂದ ಸಜ್ಜನರು ಸ್ಥಿರವೂ ಶ್ರೇಷ್ಠವೂ ಆದ ಶಾಂತಿಯನ್ನು ಪಡೆಯುತ್ತಾರೆ.

**ಪ್ರಾಣಾಘಾತಾನ್ನಿವೃತ್ತಿಃ ಪರಧನಹರಣೇ ಸಂಯಮಃ ಸತ್ಯವಾಕ್ಯಂ**
**ಕಾಲೇ ಶಕ್ತ್ಯಾ ಪ್ರದೇಯಂ ಯುವತಿಜನಕಥಾಮೂಕಭಾವಃ ಪರೇಷಾಂ ।**
**ತೃಷ್ಣಾಸ್ರೋತೋವಿಬಂಧೋ ಗುರುಷು ಚ ವಿನತಿಃ ಸರ್ವಭೂತಾನುಕಂಪಾ**
**ಸಾಮಾನ್ಯಂ ಸರ್ವಶಾಸ್ತ್ರೇಷ್ವನುಪಹತವಿಧಿಃ ಶ್ರೇಯಸಾಮೇಷಮಾರ್ಗಃ ॥ ೬೪**

-ಯಶಸ್ತಿಲಕ-೪ (ವರರುಚಿಯದೆಂದು ಉದ್ಧೃತ)

ಪ್ರಾಣಹಿಂಸೆ ಮಾಡದಿರುವುದು, ಪರಧನಾಪಹಾರದ ವಿಷಯದಲ್ಲಿ ನಿಗ್ರಹ, ಸತ್ಯವಚನ, ಸಮಯದಲ್ಲಿ ಯಥಾಶಕ್ತಿ ದಾನ, ಪರಸ್ತ್ರೀಯರ ವಿಚಾರದಲ್ಲಿ ಮೌನ, ಆಸೆಯ ಪ್ರವಾಹವನ್ನು ತಡಗಟ್ಟುವುದು, ಹಿರಿಯರಲ್ಲಿ ನಮ್ರತೆ, ಸರ್ವಭೂತಗಳಲ್ಲಿ ದಯೆ-ಇವು ಎಲ್ಲಾ ಶಾಸ್ತ್ರಗಳಲ್ಲಿಯೂ ಒಪ್ಪಿರುವ ಅಂಶ. ಶ್ರೇಯಸ್ಸಿಗೆ ಇದು ಮಾರ್ಗ.

**ಪ್ರಿಯಂ ಬ್ರೂಯಾದಕೃಪಣಃ ಶೂರಃ ಸ್ಯಾದವಿಕತ್ಥನಃ ।**
**ದಾತಾ ನಾಪಾತ್ರವರ್ಷೀ ಸ್ಯಾತ್ಪ್ರಗಲ್ಭಃ ಸ್ಯಾದನಿಷ್ಠುರಃ ॥ ೬೫**

-ಹಿತೋಪದೇಶ, ವಿಗ್ರಹ-೧೦೦

ದೀನನಲ್ಲದವನು ಪ್ರಿಯವನ್ನು ಮಾತಾಡಬೇಕು ; ಶೂರನಾದವನು ಬಡಾಯಿ ಕೊಚ್ಚಿಕೊಳ್ಳಬಾರದು ; ದಾನಿ ಅಯೋಗ್ಯರಿಗೆ ದಾನಮಾಡಬಾರದು; ಪಂಡಿತನಾದವನು ನಿಷ್ಠುರನಾಗಿರಬಾರದು.

ಪುರಾ ವಿದ್ವತ್ತಾಸೀದುಪಶಮವತಾಂ ಕ್ಲೇಶಹತಯೇ
ಗತಾ ಕಾಲೇನಾಸೌ ವಿಷಯಸುಖಸಿದ್ಧ್ಯೈ ವಿಷಯಿಣಾಂ ।
ಇದಾನೀಂ ತು ಪ್ರೇಕ್ಷ್ಯಕ್ಷಿತಿತಲಭುಜಃ ಶಾಸ್ತ್ರವಿಮುಖಾ-
ನಹೋ ಕಷ್ಟಂ ಸಾಪಿ ಪ್ರತಿದಿನಮಧೋಽಧಃ ಪ್ರವಿಶತಿ ॥೬೬
-ವೈರಾಗ್ಯಶತಕ-೨೭

ಪೂರ್ವದಲ್ಲಿ ಶಾಂತಿಯಿದ್ದವರಿಗೆ ವಿದ್ಯೆ ಇತ್ತು. ಆ ವಿದ್ಯೆಯು ಸಂಸಾರದಲ್ಲಿ ಬರುವ ಕಷ್ಟಗಳನ್ನು ನಾಶಮಾಡುವುದರಲ್ಲಿ ಸಮರ್ಥವಾಗಿತ್ತು. ಕಾಲಕ್ರಮೇಣ ಅದು ವಿಷಯ ಸುಖಗಳ ಸಿದ್ಧಿಗಾಗಿ ಆಯಿತು. ಈಗಲಾದರೋ ಶಾಸ್ತ್ರಪರಾಙ್ಮುಖರಾಗಿರುವ ರಾಜರನ್ನು ನೋಡಿ ಅದು ಪ್ರತಿದಿನವೂ ಕೆಳಕ್ಕೇ ಇಳಿಯುತ್ತಿದೆ.

ಬಂಧುಸ್ತ್ರೀಭೃತ್ಯವರ್ಗಸ್ಯ ಬುದ್ಧೇಃ ಸತ್ವಸ್ಯ ಚಾತ್ಮನಃ ।
ಆಪನ್ನಿಕಷಪಾಷಾಣೇ ನರೋ ಜಾನಾತಿ ಸಾರತಾಮ್ ॥ ೬೭
-ಹಿತೋಪದೇಶ, ಸುಹೃದ್ಭೇದ-೭೨

ನೆಂಟನ, ಸ್ತ್ರೀಯರ, ಸೇವಕವರ್ಗದ, ಬುದ್ಧಿಯ ಮತ್ತು ತನ್ನ ಧೈರ್ಯದ ಯೋಗ್ಯತೆಯನ್ನು ಮನುಷ್ಯನು ಆಪತ್ತಿನ ಒರೆಗಲ್ಲಿನಲ್ಲಿ ಹಚ್ಚಿ ತಿಳಿಯುತ್ತಾನೆ.

ಬಲೀಯಸಾ ಹೀನಬಲೋ ವಿರೋಧಂ
ನ ಭೂತಿಕಾಮೋ ಮನಸಾಪಿ ವಾಂಛೇತ್ ।
ನ ವಧ್ಯತೇತ್ಯಂತಬಲೋ ಹಿ ಯಸ್ಮಾ-
ದ್ವ್ಯಕ್ತಂ ಪ್ರಣಾಶೋಽಸ್ತಿ ಪತಂಗವೃತ್ತೇಃ ॥ ೬೮
-ಪಂಚತಂತ್ರ, ಕಾಕೋಲೂಕೀಯ-೧೨೬

ಏಳಿಗೆಯನ್ನು ಬಯಸುವ ದುರ್ಬಲನೊಬ್ಬನು ಬಲಿಷ್ಠರೊಡನೆ ಮನಸ್ಸಿನಲ್ಲಿಯೂ ವಿರೋಧವನ್ನು ಕಟ್ಟಿಕೊಳ್ಳಕೂಡದು. ಏಕೆಂದರೆ ಅತ್ಯಂತ ಬಲಶಾಲಿ ನಾಶಕ್ಕೊಳಗಾಗುವುದಿಲ್ಲ. ಚಿಟ್ಟೆಯ ನಡತೆಯನ್ನು ನಡೆಯುವವನಿಗೇ ವಿನಾಶವು ಸ್ಪಷ್ಟವಾಗಿದೆ.

ಬಹವೋ ನ ವಿರೋದ್ಧವ್ಯಾ ದುರ್ಜಯಾ ಹಿ ಮಹಾಜನಾಃ ।
ಸ್ಫುರಂತಮಪಿ ನಾಗೇಂದ್ರಂ ಭಕ್ಷಯಂತಿ ಪಿಪೀಲಿಕಾಃ ॥ ೬೯
ಪಂಚತಂತ್ರ, ಕಾಕೋಲೂಕೀಯ-೧೧೯

ಅನೇಕರೊಡನೆ ವಿರೋಧ ಸಲ್ಲದು. ಮಹಾಜನರನ್ನು ಗೆಲ್ಲುವುದು ಕಷ್ಟ. ಕೆರಳಿ ಏಳುವ ಸರ್ಪವನ್ನೂ ಒಟ್ಟಾದ ಇರುವೆಗಳು ತಿಂದುಹಾಕುತ್ತವೆ.

ಬಾಲಾದಪಿ ಗ್ರಹೀತವ್ಯಂ ಯುಕ್ತಮುಕ್ತಂ ಮನೀಷಿಭಿಃ ।
ರವೇರವಿಷಯೇ ಕಿಂ ನ ಪ್ರದೀಪಸ್ಯ ಪ್ರಕಾಶನಮ್ ॥ ೭೦

-ಹಿತೋಪದೇಶ, ಸುಹೃದ್ಭೇದ-೭೧

ಯುಕ್ತವಾಗಿ ಹೇಳಿದ ಮಾತನ್ನು ಮಕ್ಕಳಿಂದಲೂ ಸಹ ಬುದ್ಧಿವಂತರಾದವರು ತೆಗೆದುಕೊಳ್ಳಬೇಕು. ಸೂರ್ಯನಿಗೆ ಅವಕಾಶವಿಲ್ಲದ ಕಡೆ ದೀಪದ ಬೆಳಕು ಹರಡುವುದಿಲ್ಲವೇನು?

ಬಾಲಸ್ಯಾಪಿ ರವೇಃ ಪಾದಾಃ ಪತಂತ್ಯುಪರಿ ಭೂಭೃತಾಂ ।
ತೇಜಸಾ ಸಹ ಜಾತಾನಾಂ ವಯಃ ಕುತ್ರೋಪಯುಜ್ಯತೇ ॥ ೭೧

ಪಂಚತಂತ್ರ, ಮಿತ್ರಭೇದ-೩೫೭

ಬಾಲಸೂರ್ಯನ ಪಾದಗಳು (ಕಿರಣಗಳು) ಬೆಟ್ಟಗಳ ಮೇಲೆ ಅಡಿಯಿಡುತ್ತವೆ. ತೇಜಸ್ಸಿನೊಡನೆಯೇ ಹುಟ್ಟಿದವರಿಗೆ ವಯಸ್ಸಿನ ಅವಶ್ಯಕತೆ ಏನಿದೆ?

ಬುದ್ಧಿವೃದ್ಧಿಕರಾಣ್ಯಾಶು ಧನಾನಿ ಚ ಹಿತಾನಿ ಚ ।
ನಿತ್ಯಂ ಶಾಸ್ತ್ರಾಣ್ಯವೇಕ್ಷೇತ ನಿಗಮಾಂಶ್ಚೈವ ವೈದಿಕಾನ್ ॥ ೭೨

-ಮನುಸ್ಮೃತಿ, ೩-೧೯

ಬುದ್ಧಿಯನ್ನು ಹೆಚ್ಚಿಸುವ, ವೇದಗಳಿಗೆ ವಿರುದ್ಧವಲ್ಲದ, ವ್ಯಾಕರಣ ಮೀಮಾಂಸಾ ಮೊದಲಾದ ಶಾಸ್ತ್ರಗಳನ್ನೂ, ಹಣವನ್ನು ತರುವ ಅರ್ಥಶಾಸ್ತ್ರ ಮೊದಲಾದುವುಗಳನ್ನೂ, ಜನರಿಗೆ ಉಪಕಾರವಾಗುವ ವೈದ್ಯ, ಜ್ಯೋತಿಷ್ಯ ಮೊದಲಾದುವುಗಳನ್ನೂ, ವೇದಾರ್ಥವನ್ನು ತಿಳಿಸುವ ಶಾಸ್ತ್ರಗಳನ್ನೂ ನಿತ್ಯವೂ ಓದಬೇಕು.

ಭಯೇ ವಾ ಯದಿ ವಾ ಹರ್ಷೇ ಸಂಪ್ರಾಪ್ತೇ ಯೋ ವಿಮರ್ಶಯೇತ್
ಕೃತ್ಯಂ ನ ಕುರುತೇ ವೇಗಾನ್ನ ಸ ಸಂತಾಪಮಾಪ್ನುಯಾತ್ ॥ ೭೩

-ಸುಭಾಷಿತರತ್ನಭಾಂಡಾಗಾರ

ಭಯವೋ ಸಂತೋಷವೋ ಉಂಟಾದಾಗ ಯಾರು ವಿಮರ್ಶೆಮಾಡುತ್ತಾರೆಯೋ ಮತ್ತು ದುಡುಕಿ ಕೆಲಸ ಮಾಡುವುದಿಲ್ಲವೋ ಅವನು ದುಃಖಕ್ಕೊಳಗಾಗುವುದಿಲ್ಲ.

ಭಾಗ್ಯೋದಯೇನ ಬಹುಜನ್ಮಸಮಾರ್ಜಿತೇನ
ಸತ್ಸಂಗಮಂ ಚ ಲಭತೇ ಪುರುಷೋ ಯದಾ ವೈ ।
ಅಜ್ಞಾನಹೇತುಕೃತಮೋಹಮದಾಂಧಕಾರ
ನಾಶಂ ವಿಧಾಯ ಹಿ ತದೋದಯತೇ ವಿವೇಕಃ ॥ ೭೪

-ಭಾಗವತಮಾಹಾತ್ಮ್ಯ, ೨-೭೫

ಯಾವಾಗ ಮನುಷ್ಯನು ಅನೇಕ ಜನ್ಮಗಳಿಂದ ಸಂಪಾದಿಸಿದ ಭಾಗ್ಯದಿಂದ ಸತ್ಸಹವಾಸ ವನ್ನು ಹೊಂದುತ್ತಾನೆಯೋ, ಆಗ ಅಜ್ಞಾನದ ದೆಸೆಯಿಂದುಂಟಾದ ಮೋಹ, ಮದವೆಂಬ ಕತ್ತಲು ನಾಶವಾಗಿ, ಅವನಲ್ಲಿ ವಿವೇಕವು ಹುಟ್ಟುತ್ತದೆ.

**ಭಾರೋಽವಿವೇಕಿನಃ ಶಾಸ್ತ್ರಂ ಭಾರೋ ಜ್ಞಾನಂ ಚ ರಾಗಿಣಃ ।**
**ಅಶಾಂತಸ್ಯ ಮನೋ ಭಾರೋ ಭಾರೋಽನಾತ್ಮವಿದೋ ವಪುಃ ॥ ೭೫**

-ಯೋಗವಾಸಿಷ್ಠ, ವೈರಾಗ್ಯ. ೧೩-೧೩

ವಿಚಾರವಿಲ್ಲದ ಅವಿವೇಕಿಗೆ ಶಾಸ್ತ್ರವು ಹೊರೆ. ಸಂಸಾರದ ವ್ಯಾಮೋಹ ಇರತಕ್ಕವನಿಗೆ ತತ್ವಜ್ಞಾನ ಹೊರೆ. ಶಾಂತಿಯಿಲ್ಲದವನಿಗೆ ಮನಸ್ಸೇ ಹೊರೆ. ಆತ್ಮಜ್ಞಾನಿಯಲ್ಲದವನಿಗೆ ದೇಹವೇ ಹೊರೆ.

**ಮಹತಾಂ ಯೋಽಪರಾಧ್ಯೇತ ದೂರಸ್ಥೋಽಸ್ಮೀತಿ ನಾಶ್ವಸೇತ್ ।**
**ದೀರ್ಘೌ ಬುದ್ಧಿಮತೋ ಬಾಹೂ ತಾಭ್ಯಾಂ ಹಿಂಸತಿ ಹಿಂಸಕಮ್ ॥ ೭೬**

-ಪಂಚತಂತ್ರ, ಮಿತ್ರಭೇದ-೩೩೧

ದೊಡ್ಡವರಲ್ಲಿ ಅಪರಾಧವೆಸಗಿದವನು 'ನಾನು ದೂರದಲ್ಲಿದ್ದೇನೆ' ಎಂದು ಸಮಾಧಾನ ಮಾಡಿಕೊಳ್ಳಕೂಡದು. ಬುದ್ಧಿವಂತರ ತೋಳುಗಳು ಬಹಳ ಉದ್ದವಾಗಿವೆ! ಅವುಗಳಿಂದ ಅವನು ಹಿಂಸೆ ಮಾಡಿದವನನ್ನು ಹಿಂಸಿಸುತ್ತಾನೆ.

**ಮಾತಾ ಶತ್ರುಃ ಪಿತಾ ವೈರೀ ಬಾಲೋ ಯೇನ ನ ಪಾಠಿತಃ ।**
**ನ ಶೋಭತೇ ಸಭಾ ಮಧ್ಯೇ ಹಂಸಮಧ್ಯೇ ಬಕೋ ಯಥಾ ॥ ೭೭**

-ಹಿತೋಪದೇಶ ೧-೨೫

ಮಗುವಿಗೆ ವಿದ್ಯಾಭ್ಯಾಸ ಮಾಡಿಸದ ತಾಯಿ ಶತ್ರು ; ತಂದೆ ವೈರಿ. ಹಂಸಗಳ ನಡುವೆ ಬಕ ಹೇಗೋ ಹಾಗೆ ಅಂಥವನು ತಿಳಿದವರ ಮಧ್ಯೆ ಶೋಭಿಸುವುದಿಲ್ಲ.

**ಮಾತೃವತ್ಪರದಾರೇಷು ಪರದ್ರವ್ಯೇಷು ಲೋಷ್ಠವತ್ ।**
**ಆತ್ಮವತ್ಸರ್ವಭೂತೇಷು ಯಃ ಪಶ್ಯತಿ ಸ ಪಂಡಿತಃ ॥ ೭೮**

-ಹಿತೋಪದೇಶ, ಸಂಧಿ-೧೩೨

ಪರಸ್ತ್ರೀಯರನ್ನು ತಾಯಿಯಂತೆಯೂ, ಇತರರ ಪದಾರ್ಥವನ್ನು ಮಣ್ಣಿನ ಹೆಂಟೆಯಂತೆಯೋ, ಇತರ ಪ್ರಾಣಿಗಳನ್ನು ತನ್ನಂತೆಯೂ ಯಾವಾತನು ಕಾಣುವನೋ ಅವನೇ ಪಂಡಿತ.

ಮಾನಾದ್ವಾ ಯದಿ ವಾ ಲೋಭಾತ್ ಕ್ರೋಧಾದ್ವಾ ಯದಿ ವಾ ಭಯಾತ್ ।
ಯೋ ನ್ಯಾಯಮನ್ಯಥಾ ಬ್ರೂತೇ ಸ ಯಾತಿ ನರಕಂ ನರಃ ॥ ೭೯

-ಪಂಚತಂತ್ರ, ಕಾಕೋಲೂಕೀಯ-೧೦೬

ಅಹಂಕಾರದಿಂದಾಗಲೀ, ಆಸೆಯಿಂದಾಗಲೀ, ಕೋಪದಿಂದಾಗಲೀ, ಭಯದಿಂದಾಗಲೀ, ಯಾವ ಮನುಷ್ಯನು ನ್ಯಾಯವನ್ನು ಬೇರೆ ರೀತಿಯಲ್ಲಿ ಹೇಳುವನೋ ಅವನು ನರಕಕ್ಕೆ ಹೋಗುತ್ತಾನೆ.

ಯಚ್ಚ ಕಾಮಸುಖಂ ಲೋಕೇ ಯಚ್ಚ ದಿವ್ಯಂ ಮಹತ್ ಸುಖಂ ।
ತೃಷ್ಣಾಕ್ಷಯಸುಖಸ್ಯೈತೇ ನಾರ್ಹತಃ ಷೋಡಶೀಂ ಕಲಾಮ್ ॥ ೮೦

-ಧ್ವನ್ಯಾಲೋಕ-೩

ಲೋಕದಲ್ಲಿ ಕಾಮಸುಖವೆಂಬುದೇನುಂಟೋ, ಮಹತ್ತರವಾದ ಸ್ವರ್ಗಸುಖವೆಂಬುದೇನುಂಟೋ ಅವೆರಡೂ, ಆಸೆಯನ್ನು ತೊರೆಯುವುದರಿಂದಾಗುವ ಸುಖದ ಹದಿನಾರನೆಯ ಒಂದಂಶವಾಗುವುದಿಲ್ಲ.

ಯತ್ರ ವಿದ್ವಜ್ಜನೋ ನಾಸ್ತಿ ಶ್ಲಾಘ್ಯಸ್ತತ್ರಾಲ್ಪಧೀರಪಿ ।
ನಿರಸ್ತಪಾದಪೇ ದೇಶೇ ಏರಂಡೋಽಪಿ ದ್ರುಮಾಯತೇ ॥ ೮೧

-ಸುಭಾಷಿತರತ್ನಸಮುಚ್ಚಯ

ಎಲ್ಲಿ ವಿದ್ವಾಂಸರಿಲ್ಲವೋ ಅಲ್ಲಿ ಸಾಮಾನ್ಯನೂ ಸಹ ಪ್ರಶಂಸಾರ್ಹನಾಗುತ್ತಾನೆ. ಮರಗಳಿಲ್ಲದ ದೇಶದಲ್ಲಿ ಹರಳು ಗಿಡವೂ ಮರವೆನಿಸುತ್ತದೆ.

ಯತ್ ಶ್ರುತಂ ನ ವಿರಾಗಾಯ ನ ಧರ್ಮಾಯ ನ ಶಾಂತಯೇ ।
ಸುಬದ್ಧಮಪಿ ಶಬ್ದೇನ ಕಾಕವಾಶಿತಮೇವ ತತ್ ॥ ೮೨

ಮಹಾಭಾರತ

ವೈರಾಗ್ಯ, ಧರ್ಮ ಅಥವಾ ಶಾಂತಿಗೆ ಉಪಯುಕ್ತವಾಗದ ವಿಚಾರವು ಎಷ್ಟು ಶಬ್ದಜಾಲದಿಂದ ರಚಿತವಾಗಿದ್ದರೂ ಅದು ಕಾಗೆಯ ಕೂಗೇ ಸರಿ.

ಯತ್ನೇನಾನುಮಿತೋಽಪ್ಯರ್ಥಃ ಕುಶಲೈರನುಮಾತೃಭಿಃ ।
ಅಭಿಯುಕ್ತತರೈರನ್ಯೈರನ್ಯಥೈವೋಪಪಾದ್ಯತೇ ॥ ೮೩

-ವಾಕ್ಯಪದೀಯ, ೧-೩೪

ತರ್ಕಜ್ಞಾನವುಳ್ಳ ಜಾಣರು ಎಷ್ಟು ಪ್ರಯತ್ನದಿಂದ ಒಂದು ವಿಷಯವನ್ನು ಊಹಿಸಿ ನಿಲ್ಲಿಸಿರಲಿ, ಇನ್ನೂ ಹೆಚ್ಚಿನ ಬುದ್ಧಿಶಾಲಿಗಳು ಅದನ್ನು ಇನ್ನೊಂದು ಬಗೆಯಲ್ಲಿ ಊಹಿಸಿ ಉಪಪಾದನೆ ಮಾಡಿಬಿಡುತ್ತಾರೆ.

**ಯಥಾ ಯಥಾ ಹಿ ಪುರುಷಃ ಶಾಸ್ತ್ರಂ ಸಮಧಿಗಚ್ಛತಿ ।**
**ತಥಾ ತಥಾ ವಿಜಾನಾತಿ ವಿಜ್ಞಾನಾಂ ಚಾಸ್ಯ ರೋಚತೇ ॥ ೮೪**

-ಮನುಸ್ಮೃತಿ, ೩-೨೦

ಪುರುಷನು ಶಾಸ್ತ್ರಗಳನ್ನು ನಿತ್ಯವೂ ಓದಿದಂತೆಲ್ಲಾ ಅವನ ಜ್ಞಾನವು ವಿಸ್ತಾರವಾಗುತ್ತದೆ. ಮತ್ತು ಹೆಚ್ಚು ತಿಳಿಯಬೇಕೆಂಬ ಆಸೆಯೂ ಉಂಟಾಗುತ್ತದೆ.

**ಯಥಾ ಖನನ್ ಖನಿತ್ರೇಣ ನರೋ ವಾರ್ಯಧಿಗಚ್ಛತಿ ।**
**ತಥಾ ಗುರುಗತಾಂ ವಿದ್ಯಾಂ ಶುಶ್ರೂಷುರಧಿಗಚ್ಛತಿ ॥ ೮೫**

-ಮನುಸ್ಮೃತಿ, ೨-೨೧೮

ಗುದ್ದಲಿಯಿಂದ ಕಷ್ಟಪಟ್ಟು ಅಗೆಯುತ್ತಾ ಮನುಷ್ಯನು ಹೇಗೆ ನೀರನ್ನು ಹೊಂದುತ್ತಾನೆಯೋ, ಅದರಂತೆಯೇ ಸೇವೆ ಮಾಡುತ್ತಾ ಮಾಡುತ್ತಾ ಗುರುವಿನಲ್ಲಿರುವ ವಿದ್ಯೆಯನ್ನು ಪಡೆಯುತ್ತಾನೆ.

**ಯದಧ್ರುವಸ್ಯ ದೇಹಸ್ಯ ಸಾನುಬಂಧಸ್ಯ ದುರ್ಮತಿಃ ।**
**ಧ್ರುವಾಣಿ ಮನ್ಯತೇ ಮೋಹಾದ್ ಗೃಹಕ್ಷೇತ್ರವಸೂನಿ ಚ ॥ ೮೬**

-ಭಾಗವತ, ೩-೩೦-೩

ವಿವೇಕವಿಲ್ಲದ ಮನುಷ್ಯನು ಅಶಾಶ್ವತವಾದ ಮತ್ತು ಅನೇಕ ಬಂಧನಗಳಿಂದ ಕೂಡಿದ ಈ ಶರೀರಕ್ಕೆ ಸಂಬಂಧಿಸಿದ ಮನೆ, ಭೂಮಿ, ಹಣ ಮೊದಲಾದವುಗಳನ್ನು ಮೋಹದಿಂದ ಶಾಶ್ವತವೆಂದು ತಿಳಿಯುತ್ತಾನೆ.

**ಯದಾಸೀದಜ್ಞಾನಂ ಸ್ಮರತಿಮಿರಸಂಸ್ಕಾರಜನಿತಂ**
**ತದಾ ದೃಷ್ಟಂ ನಾರೀಮಯಮಿದಮಶೇಷಂ ಜಗದಪಿ ।**
**ಇದಾನೀಮಸ್ಮಾಕಂ ಪಟುತರವಿವೇಕಾಂಜನಜುಷಾಂ**
**ಸಮೀಭೂತಾದೃಷ್ಟಿಸ್ತ್ರಿಭುವನಮಪಿ ಬ್ರಹ್ಮ ತನುತೇ ॥ ೮೭**

-ವೈರಾಗ್ಯಶತಕ-೮೨

ಕಾಮಾಂಧಕಾರದಿಂದುಂಟಾದ ಅಜ್ಞಾನವಿದ್ದಾಗ ಈ ಎಲ್ಲಾ ಪ್ರಪಂಚವೂ ಹೆಂಗಸಿನಮಯವಾಗಿತ್ತು. ಈಗ ವಿವೇಕಾಂಜನದಿಂದ ದೃಷ್ಟಿಯು ಸಮತ್ವವನ್ನು ಪಡೆದು ಮೂರು ಲೋಕಗಳೂ ಬ್ರಹ್ಮಮಯವಾಗಿವೆ.

**ಯಸ್ಯ ಕೃತ್ಯಂ ನ ವಿಘ್ನಂತಿ ಶೀತಮುಷ್ಣಂ ಭಯಂ ರತಿಃ।**
**ಸಮೃದ್ಧಿರಸಮೃದ್ಧಿರ್ವಾ ಸ ವೈ ಪಂಡಿತ ಉಚ್ಯತೇ ॥ ೮೮**

-ಮಹಾಭಾರತ, ಉದ್ಯೋಗ. ೩೩-೨೦

ಯಾರ ಕೆಲಸಕ್ಕೆ ಚಳಿ, ಸೆಕೆ, ಭಯ, ಪ್ರೀತಿ, ಸಂಪತ್ತು, ಬಡತನ ಇವು ಯಾವುವೂ ಅಡ್ಡಿಯಾಗವೋ, ಅವನನ್ನು ಪಂಡಿತನೆನ್ನುತ್ತಾರೆ.

**ಯಸ್ತು ಸಂಚರತೇ ದೇಶಾನ್ ಯಸ್ತು ಸೇವೇತ ಪಂಡಿತಾನ್**
**ತಸ್ಯ ವಿಸ್ತಾರಿತಾ ಬುದ್ಧಿಃ ತೈಲಬಿಂದುರಿವಾಂಭಸಿ ॥** ೮೯

-ಸಮಯೋಚಿತ ಪದ್ಯಮಾಲಿಕಾ

ಯಾವನು ದೇಶಸಂಚಾರ ಮಾಡುತ್ತಾನೋ, ಪಂಡಿತರನ್ನು ಸೇವಿಸುತ್ತಾನೋ ಅವನ ಬುದ್ಧಿ, ನೀರಿನಲ್ಲಿ ಎಣ್ಣೆಹನಿಯಂತೆ, ವಿಸ್ತೃತವಾಗುತ್ತದೆ.

**ಯಸ್ಯ ನಾಸ್ತಿ ಸ್ವಯಂ ಪ್ರಜ್ಞಾ ಶಾಸ್ತ್ರಂ ತಸ್ಯ ಕರೋತಿ ಕಿಂ ।**
**ಲೋಚನಾಭ್ಯಾಂ ವಿಹೀನಸ್ಯ ದರ್ಪಣಃ ಕಿಂ ಕರಿಷ್ಯತಿ ॥** ೯೦

-ಹಿತೋಪದೇಶ, ವಿಗ್ರಹ-೧೧೫

ಯಾರಿಗೆ ಸ್ವಂತ ಬುದ್ಧಿ ಇಲ್ಲವೋ ಅವನಿಗೆ ಶಾಸ್ತ್ರವೇನನ್ನು ಮಾಡುತ್ತದೆ? ಎರಡು ಕಣ್ಣು ಇಲ್ಲದವನಿಗೆ ಕನ್ನಡಿ ಏನನ್ನು ಮಾಡಬಲ್ಲದು?

**ಯಸ್ಯ ನಾಸ್ತಿ ಸ್ವಯಂ ಪ್ರಜ್ಞಾ ಕೇವಲಂ ತು ಬಹುಶ್ರುತಃ ।**
**ನ ಸ ಜಾನಾತಿ ಶಾಸ್ತ್ರಾರ್ಥಂ ದರ್ವೀ ಸೂಪರಸಾನಿವ ॥** ೯೧

-ಮಹಾಭಾರತ, ಸಭಾ. ೫೫-೧

ಯಾವಾತನು ಸ್ವಯಂ ವಿಚಾರಶಕ್ತಿ ಇಲ್ಲದೆ ಬರಿಯ ಪಂಡಿತನು ಮಾತ್ರ ಮಾಗಿರುವನೋ, ಅವನಿಗೆ ಶಾಸ್ತ್ರದ ರಹಸ್ಯಾರ್ಥವು ತಿಳಿಯುವುದಿಲ್ಲ. ಸೌಟಿಗೆ ಅಡಿಗೆಯ ರುಚಿ ತಿಳಿಯದಿರುವಂತೆ.

**ಯಃ ಸತತಂ ಪರಿಪೃಚ್ಛತಿ ಶೃಣೋತಿ ಸಂಧಾರಯತ್ಯನಿಶಂ ।**
**ತಸ್ಯ ದಿವಾಕರಕಿರಣೈರ್ನಲಿನೀವ ವಿವರ್ಧತೇ ಬುದ್ಧಿಃ ॥** ೯೨

-ಪಂಚತಂತ್ರ, ಅಪರೀಕ್ಷಿತಕಾರಕ-೮೭

ಯಾವನು ಯಾವಾಗಲೂ ಪ್ರಶ್ನೆಮಾಡುತ್ತಾನೋ, ಕಿವಿಗೊಟ್ಟು ಕೇಳುತ್ತಾನೋ ಮತ್ತು ಯಾವಾಗಲೂ ಚೆನ್ನಾಗಿ ಮನದಟ್ಟುಮಾಡಿಟ್ಟುಕೊಳ್ಳುತ್ತಾನೆಯೋ ಅವನ ಬುದ್ಧಿಯು ಸೂರ್ಯಕಿರಣಗಳಿಂದ ತಾವರೆಯು ಹೇಗೋ ಹಾಗೆ ಬೆಳೆಯುತ್ತದೆ.

**ಯಾವತ್ಸ್ವಸ್ಥಮಿದಂ ಕಲೇಬರಗೃಹಂ ಯಾವಚ್ಚ ದೂರೇ ಜರಾ**
**ಯಾವಚ್ಚೇಂದ್ರಿಯಶಕ್ತಿರಪ್ರತಿಹತಾ ಯಾವತ್ ಕ್ಷಯೋ ನಾಯುಷಃ ।**

ಆತ್ಮಶ್ರೇಯಸಿ ತಾವದೇವ ವಿದುಷಾ ಕಾರ್ಯಃ ಪ್ರಯತ್ನೋ ಮಹಾ-
ನ್ಸೋದ್ದೀಪ್ತೇ ಭವನೇ ತು ಕೂಪಖನನಂ ಪ್ರತ್ಯುದ್ಯಮಃ ಕೀದೃಶಃ॥ ೯೩
-ವೈರಾಗ್ಯಶತಕ-೮೬

ಯಾವತ್ತಿನವರೆಗೂ ಈ ದೇಹವೆಂಬ ಮನೆಯು ಚೆನ್ನಾಗಿದೆಯೋ, ಎಲ್ಲಿಯವರೆಗೂ ಮುಪ್ಪು ದೂರವಾಗಿದೆಯೋ, ಎಲ್ಲಿಯವರೆಗೂ ಇಂದ್ರಿಯಗಳ ಶಕ್ತಿ ಕುಗ್ಗಿಲ್ಲವೋ, ಮತ್ತು ಆಯುಸ್ಸಿನ ಕ್ಷೀಣದೆಶೆಯುಂಟಾಗಿಲ್ಲವೋ ಆಗಲೇ ವಿದ್ವಾಂಸನಿಂದ ಆತ್ಮಶ್ರೇಯಸ್ಸಿಗೋಸ್ಕರ ಮಹಾಪ್ರಯತ್ನವು ಮಾಡಲ್ಪಡಬೇಕು. ಹಾಗಲ್ಲದೆ ಮನೆಗೆ ಬೆಂಕಿ ಬಿದ್ದು ಉರಿಯುತ್ತಿರುವಾಗ ಭಾವಿಯನ್ನಗೆಯುವ ಉದ್ಯೋಗವು ಯಾವ ರೀತಿಯದು?

ಯೋ ನ ವೇತ್ತಿ ಗುಣಾನ್ಯಸ್ಯ ನ ತಂ ಸೇವೇತ ಪಂಡಿತಃ ।
ನ ಹಿ ತಸ್ಮಾತ್ಫಲಂ ಕಿಂಚಿತ್ಸುಕೃಷ್ಟಾದೂಷರಾದಿವ ॥ ೯೪
-ಪಂಚತಂತ್ರ, ಮಿತ್ರಭೇದ-೨೮೧

ಪಂಡಿತನಾದವನು ತನ್ನ ಗುಣಗಳನ್ನರಿಯಲಾರದವನನ್ನು ಸೇವಿಸಬಾರದು. ಚೆನ್ನಾಗಿ ಉಳುಮೆ ಮಾಡಿದ ಮರುಭೂಮಿಯಿಂದ ಹೇಗೋ ಹಾಗೆ ಅವನಿಂದ ಯಾವ ಪ್ರಯೋಜನವೂ ಉಂಟಾಗದು.

ಯೋ ಯತ್ರ ಕುಶಲಃ ಕಾರ್ಯೇ ತಂ ತತ್ರ ವಿನಿಯೋಜಯೇತ್ ।
ಕರ್ಮಸ್ವದೃಷ್ಟಕರ್ಮಾ ಯಚ್ಛಾಸ್ತ್ರಜ್ಞೋಽಪಿ ವಿಮುಹ್ಯತಿ ॥ ೯೫
-ಹಿತೋಪದೇಶ, ವಿಗ್ರಹ-೫೨

ಯಾರು ಯಾವ ಕೆಲಸದಲ್ಲಿ ನಿಪುಣನೋ ಅವನನ್ನು ಆ ಕೆಲಸದಲ್ಲಿ ನೇಮಿಸಬೇಕು. ತಾನು ಶಾಸ್ತ್ರಜ್ಞನಾಗಿದ್ದರೂ ತನಗೆ ಪರಿಚಯವಿಲ್ಲದ ಕೆಲಸಗಳಲ್ಲಿ ಒಬ್ಬನು ದಾರಿ ತಪ್ಪುತ್ತಾನೆ.

ವ್ಯಸನೇಷ್ವೇವ ಸರ್ವೇಷು ಯಸ್ಯ ಬುದ್ಧಿರ್ನ ಹೀಯತೇ ।
ಸ ತೇಷಾಂ ಪಾರಮಭ್ಯೇತಿ ತತ್ಪ್ರಭಾವಾದಸಂಶಯಮ್ ॥ ೯೬
-ಪಂಚತಂತ್ರ, ಮಿತ್ರಸಂಪ್ರಾಪ್ತಿ-೬೦

ಎಂಥ ದುಃಖಗಳಲ್ಲಿಯೂ ಸಹ ಯಾರ ಬುದ್ಧಿಯು ಕುಂದುವುದಿಲ್ಲವೋ ಅಂಥವನು ಅದರ ಪ್ರಭಾವದಿಂದಲೇ ಅವುಗಳನ್ನೆಲ್ಲಾ ದಾಟುತ್ತಾನೆ. ಇದರಲ್ಲಿ ಸಂಶಯವಿಲ್ಲ.

ವಾಕ್ಸಾಯಕಾ ವದನಾನ್ನಿಷ್ಪತಂತಿ
ಯೈರಾಹತಃ ಶೋಚತಿ ರಾತ್ರ್ಯಹಾನಿ ।

**ಪರಸ್ಪರಂ ಮರ್ಮಸು ತೇ ಪತಂತಿ**
**ತಾನ್ ಪಂಡಿತೋ ನಾಪಸೃಜೇತ್ಪರೇಷು ॥** ೯೭

-ಸುಭಾಷಿತಸುಧಾನಿಧಿ

ಮಾತಿನ ಬಾಣಗಳು ಬಾಯಿಂದ ಹೊರಬೀಳುತ್ತವೆ. ಅವುಗಳಿಂದ ಹೊಡೆಯಲ್ಪಟ್ಟವನು ರಾತ್ರಿಯೂ ಹಗಲೂ ದುಃಖಿಸುತ್ತಾನೆ. ಅವು ಒಬ್ಬರಿಂದೊಬ್ಬರ ಮರ್ಮಸ್ಥಾನಕ್ಕೆ ಬೀಳುತ್ತದೆ. ತಿಳಿದವನು ಅವುಗಳನ್ನು ಇತರರ ಮೇಲೆ ಬಿಡಬಾರದು.

**ವಿತರತಿ ಗುರುಃ ಪ್ರಾಜ್ಞೇ ವಿದ್ಯಾಂ ಯಥೈವ ತಥಾ ಜಡೇ**
**ನ ತು ಖಲು ತಯೋರ್ಜ್ಞಾನೇ ಶಕ್ತಿಂ ಕರೋತ್ಯಪಹಂತಿ ವಾ ।**
**ಭವತಿ ಹಿ ಪುನರ್ಭೂಯಾನ್ ಭೇದಃ ಫಲಂ ಪ್ರತಿ ತದ್ಯಥಾ**
**ಪ್ರಭವತಿ ಶುಚಿರ್ಬಿಂಬಗ್ರಾಹೇ ಮಣಿರ್ನ ಮೃದಾದಯಃ ॥** ೯೮

-ಉತ್ತರರಾಮಚರಿತ, ೨-೪

ಗುರುವು ದಡ್ಡನಿಗೂ ಬುದ್ಧಿವಂತನಿಗೂ ಸಮಾನವಾಗಿ ಬೋಧಿಸುತ್ತಾನೆ. ಅವರ ಜ್ಞಾನ ಹೆಚ್ಚಲು ಅಥವಾ ಕಡಿಮೆಯಾಗಲು ಯಾವ ವಿಶೇಷ ಯತ್ನವೂ ಇಲ್ಲ. ಆದರೆ ಪರಿಣಾಮದಲ್ಲಿ ಬಹಳ ಅಂತರ ಕಂಡುಬರುತ್ತದೆ. ಶುಭ್ರವಾದ ಮಣಿಯು ಪ್ರತಿಬಿಂಬವನ್ನು ಗ್ರಹಿಸುತ್ತದೆ. ಮಣ್ಣು ಗ್ರಹಿಸಲಾರದು.

**ವಿತ್ತಂ ಬಂಧುರ್ವಯಃ ಕರ್ಮ ವಿದ್ಯಾ ಭವತಿ ಪಂಚಮೀ ।**
**ಏತಾನಿ ಮಾನ್ಯಸ್ಥಾನಾನಿ ಗರೀಯೋ ಯದ್ಯದುತ್ತರಮ್ ॥** ೯೯

-ಮನುಸ್ಮೃತಿ, ೨-೧೩೬

ಹಣವುಳ್ಳವನು, ನೆಂಟ, ವಯಸ್ಸು, ಉತ್ತಮವಾದ ಕೆಲಸ, ಒಳ್ಳೆಯ ವಿದ್ಯೆ ಇವುಗಳು ಗೌರವಕ್ಕೆ ಯೋಗ್ಯ. ಹಿಂದುಹಿಂದಿನದಕ್ಕಿಂತ ಮುಂದುಮುಂದಿನದು ಶ್ರೇಷ್ಠ.

**ವಿದ್ಯಾ ಶಸ್ತ್ರಸ್ಯ ಶಾಸ್ತ್ರಸ್ಯ ದ್ವೇ ವಿದ್ಯೇ ಪ್ರತಿಪತ್ತಯೇ ।**
**ಆದ್ಯಾ ಹಾಸ್ಯಾಯ ವೃದ್ಧತ್ವೇ ದ್ವಿತೀಯಾದ್ರಿಯತೇ ಸದಾ ॥** ೧೦೦

-ಹಿತೋಪದೇಶ, ೧-೬

ಶಸ್ತ್ರದ ವಿದ್ಯೆ ಮತ್ತು ಶಾಸ್ತ್ರದ ವಿದ್ಯೆ ಇವೆರಡು ವಿದ್ಯೆಗಳೂ ಆದರಿಸಲ್ಪಡತಕ್ಕವೇ ಸರಿ ; ಮುದಿತನ ಬಂದರೆ ಮೊದಲನೆಯದು ಪರಿಹಾಸ್ಯಕ್ಕೀಡಾಗುವುದು ; ಆದರೆ ಎರಡನೆಯದಕ್ಕೆ ಯಾವಾಗಲೂ ಗೌರವಿದ್ದೇ ಇರುತ್ತದೆ.

**ವಿದ್ಯಾವಿನಯೋಪೇತಾ ಹರತಿ ನ ಚೇತಾಂಸಿ ಕಸ್ಯ ಮನುಜಸ್ಯ ।**
**ಮಣಿಕಾಂಚನಸಂಯೋಗೋ ಜನಯತಿ ಲೋಕಸ್ಯ ಲೋಚನಾನಂದಮ್ ॥೧೦೧**

-ಹರಿಹರಸುಭಾಷಿತ, ೩-೧೦

ವಿನಯೋಪೇತವಾದ ವಿದ್ಯೆ ಯಾರ ಮನಸ್ಸನ್ನು ಆಕರ್ಷಿಸದೆ ಇದ್ದೀತು? ಚಿನ್ನವೂ ರತ್ನವೂ ಸೇರಿದ ಒಡವೆ ಜನರ ಕಣ್ಣಿಗೆ ಆನಂದವನ್ನು ಬೀರುತ್ತದೆ.

**ವಿದ್ಯಾ ದದಾತಿ ವಿನಯಂ ವಿನಯಾದ್ಯಾತಿಪಾತ್ರತಾಂ ।**
**ಪಾತ್ರತ್ವಾದ್ಧನಮಾಪ್ನೋತಿ ಧನಾದ್ಧರ್ಮಂ ತತಃ ಸುಖಮ್ ॥ ೧೦೨**

-ಹಿತೋಪದೇಶ, ೧-೫

ವಿದ್ಯೆ ವಿನಯವನ್ನು ಕೊಡುತ್ತದೆ. ವಿನಯದಿಂದ ಅರ್ಹತೆ ಬರುತ್ತದೆ. ಅರ್ಹತೆಯ ಕಾರಣ ಹಣ ಪಡೆಯುತ್ತಾನೆ. ಹಣದಿಂದ ಧರ್ಮವೂ ಅದರಿಂದ ಸುಖವೂ ಉಂಟಾಗುತ್ತದೆ.

**ವಿದ್ಯಾ ನಾಮ ನರಸ್ಯ ರೂಪಮಧಿಕಂ ಪ್ರಚ್ಛನ್ನಗುಪ್ತಂ ಧನಂ**
**ವಿದ್ಯಾ ಭೋಗಕರೀ ಯಶಸ್ಸುಖಕರೀ ವಿದ್ಯಾ ಗುರೂಣಾಂ ಗುರುಃ ।**
**ವಿದ್ಯಾ ಬಂಧುಜನೋ ವಿದೇಶಗಮನೇ ವಿದ್ಯಾ ಪರಾ ದೇವತಾ**
**ವಿದ್ಯಾ ರಾಜಸು ಪೂಜಿತಾ ನ ತು ಧನಂ ವಿದ್ಯಾವಿಹೀನಃ ಪಶುಃ ॥ ೧೦೩**

-ನೀತಿಶತಕ-೧೮

ವಿದ್ಯೆಯೆಂಬುದು ಮನುಷ್ಯನ ವಿಶೇಷವಾದ ರೂಪ ; ಮತ್ತು ಅದು ಅವನ ಬಚ್ಚಿಟ್ಟು ಕಾಪಾಡಲ್ಪಟ್ಟ ಹಣ. ವಿದ್ಯೆಯು ಅವನಿಗೆ ಸುಖಸಂತೋಷಗಳನ್ನೂ ಕೀರ್ತಿಯನ್ನೂ ಉಂಟುಮಾಡುತ್ತದೆ. ಅದು ಅವನ ಗುರುಗಳಿಗೆ ಗುರು. ಪರದೇಶಕ್ಕೆ ಹೊರಟಾಗ ಅದೇ ಅವನ ಬಂಧು. ಅದೇ ಅವನಿಗೆ ಪರದೈವ. ಅದು ರಾಜರಲ್ಲಿ ಪೂಜಿಸಲ್ಪಟ್ಟಿದೆ; ಹಣವಲ್ಲ. ವಿದ್ಯೆಯಿಲ್ಲದವನು ಪಶು.

**ವಿದ್ವತ್ತ್ವಂ ಚ ನೃಪತ್ವಂ ಚ ನೈವ ತುಲ್ಯಂ ಕದಾಚನ ।**
**ಸ್ವದೇಶೇ ಪೂಜ್ಯತೇ ರಾಜಾ ವಿದ್ವಾನ್ ಸರ್ವತ್ರ ಪೂಜ್ಯತೇ ॥ ೧೦೪**

-ಸುಭಾಷಿತರತ್ನಭಾಂಡಾಗಾರ

ವಿದ್ವತ್ತು ಮತ್ತು ರಾಜತ್ವಗಳು ಎಂದಿಗೂ ಸಮಾನವಲ್ಲ. ರಾಜನು ತನ್ನ ದೇಶದಲ್ಲಿ ಮಾತ್ರ ಪೂಜಿತನಾಗುತ್ತಾನೆ. ವಿದ್ವಾಂಸನು ಎಲ್ಲ ದೇಶಗಳಲ್ಲಿಯೂ ಪೂಜಿತನಾಗುತ್ತಾನೆ.

**ವಿದ್ವಾನೇವ ವಿಜಾನಾತಿ ವಿದ್ವಜ್ಜನಪರಿಶ್ರಮಂ ।**
**ನ ಹಿ ವಂಧ್ಯಾ ವಿಜಾನಾತಿ ಗುರ್ವೀಂ ಪ್ರಸವವೇದನಾಮ್ ॥ ೧೦೫**

-ಕುವಲಯಾನಂದ

ವಿದ್ವಾಂಸರ ಪರಿಶ್ರಮವನ್ನು ವಿದ್ವಾಂಸನೇ ಬಲ್ಲನು. ಬಂಜೆಗೆ ತೀವ್ರವಾದ ಪ್ರಸವ ವೇದನೆಯೇನೆಂಬುದು ತಿಳಿಯದು.

**ವಿವೇಕಃ ಸಹ ಸಂಯತ್ಯಾ ವಿನಯೋ ವಿದ್ಯಯಾ ಸಹ ।**
**ಪ್ರಭುತ್ವಂ ಪ್ರಶ್ರಯೋಪೇತಂ ಚಿಹ್ನಮೇತನ್ಮಹಾತ್ಮನಾಮ್ ॥ ೧೦೬**

-ಸುಭಾಷಿತರತ್ನಭಾಂಡಾಗಾರ

ಆತ್ಮಸಂಯಮದಿಂದ ಕೂಡಿದ ವಿವೇಕ, ವಿನಯದಿಂದ ಕೂಡಿದ ವಿದ್ಯೆ, ಸರಳತೆಯಿಂದ ಕೂಡಿದ ಅಧಿಕಾರ ಇವು ಮಹಾತ್ಮರ ಲಕ್ಷಣ.

**ವಿಷಮಾಂ ಹಿ ದಶಾಂ ಪ್ರಾಪ್ಯ ದೈವಂ ಗರ್ಹಯತೇ ನರಃ ।**
**ಆತ್ಮನಃ ಕರ್ಮದೋಷಾಂಸ್ತು ನೈವ ಜಾನಾತ್ಯಪಂಡಿತಃ ॥ ೧೦೭**

-ಹಿತೋಪದೇಶ, ಸಂಧಿ-೩

ದುಃಖದ ಸಿಸ್ಥಿತಿಯನ್ನು ಹೊಂದಿದಾಗ ಮನುಷ್ಯನು ದೈವವನ್ನು ಹಳಿಯುತ್ತಾನೆ. ಅಜ್ಞಾನಿಗೆ ತಾನು ಮಾಡಿದ ಕರ್ಮಗಳ ದೋಷಗಳು ತಿಳಿಯುವುದೇ ಇಲ್ಲ.

**ಶ್ರದ್ಧಧಾನಃ ಶುಭಾಂ ವಿದ್ಯಾಮಾದದೀತಾವರಾದಪಿ ।**
**ಅಂತ್ಯಾದಪಿ ಪರಂ ಧರ್ಮಂ ಸ್ತ್ರೀರತ್ನಂ ದುಷ್ಕುಲಾದಪಿ ॥ ೧೦೮**

-ಮನುಸ್ಮೃತಿ, ೨-೨೩೮

ತನಗಿಂತ ಕಡಿಮೆಯಾದವನಿಂದಲೂ ಒಳ್ಳೆಯ ವಿದ್ಯೆಯನ್ನು ಶ್ರದ್ಧೆಯಿಂದ ಕಲಿಯಬೇಕು. ಬಹಳ ಸಾಮಾನ್ಯರಿಂದಲೂ ಶ್ರೇಷ್ಠವಾದ ಧರ್ಮವನ್ನು ತಿಳಿಯಬಹುದು. ಕೆಟ್ಟ ವಂಶದಲ್ಲಿದ್ದರೂ ಶ್ರೇಷ್ಠಳಾದ ಸ್ತ್ರೀಯನ್ನು ತಂದುಕೊಳ್ಳಬಹುದು.

**ಶಬ್ದಜಾಲಂ ಮಹಾರಣ್ಯಂ ಚಿತ್ತಭ್ರಮಣಕಾರಣಂ ।**
**ಅತಃ ಪ್ರಯತ್ನಾಜ್ಜ್ಞಾತವ್ಯಂ ತತ್ತ್ವಜ್ಞಾತ್ತತ್ತ್ವಮಾತ್ಮನಃ ॥ ೧೦೯**

-ವಿವೇಕಚೂಡಾಮಣಿ-೬೦

ಶಬ್ದಜಾಲವೆಂಬುದು ದೊಡ್ಡ ಅರಣ್ಯ. ಬುದ್ಧಿಯು ದಾರಿತಪ್ಪಿ ಭ್ರಮಿಸುವುದಕ್ಕೆ ಅದು ಕಾರಣವಾಗಿದೆ. ಆದ್ದರಿಂದ ತತ್ತ್ವವನ್ನರಿತ ಗುರುವಿನಿಂದ ಆತ್ಮತತ್ತ್ವವನ್ನು ಪ್ರಯತ್ನಪೂರ್ವಕವಾಗಿ ತಿಳಿದುಕೊಳ್ಳಬೇಕು.

ಶಾಸ್ತ್ರಾಣ್ಯಧೀತ್ಯಾಪಿ ಭವಂತಿ ಮೂರ್ಖಾಃ
ಯಸ್ತು ಕ್ರಿಯಾವಾನ್ ಪುರುಷಃ ಸ ವಿದ್ವಾನ್ ।
ಸುಚಿಂತಿತಂ ಚೌಷಧಮಾತುರಾಣಾಂ
ನ ನಾಮಮಾತ್ರೇಣ ಕರೋತ್ಯರೋಗಮ್ ॥ ೧೧೦

-ಹಿತೋಪದೇಶ, ಮಿತ್ರಲಾಭ-೧೨೮

ಶಾಸ್ತ್ರಗಳನ್ನು ಅಧ್ಯಯನ ಮಾಡಿದಮೇಲೂ ಜನ ಮೂರ್ಖರಾಗುತ್ತಾರೆ. ಆದರೆ ಯಾವನು ಅದರಂತೆ ಆಚರಿಸುವವನೋ ಆ ಮನುಷ್ಯನೇ ವಿದ್ವಾಂಸ. ಬಹಳ ಚೆನ್ನಾಗಿ ಯೋಚಿಸಿ ನಿಶ್ಚಯಿಸಿದ ಔಷಧಿಯೂ ಸಹ ಹೆಸರು ಹೇಳಿದುದರಿಂದಲೇ ರೋಗಿಗಳ ರೋಗವನ್ನು ಪರಿಹರಿಸುವುದಿಲ್ಲ.

ಶ್ಲಿಷ್ಟಾ ಕ್ರಿಯಾ ಕಸ್ಯಚಿದಾತ್ಮಸಂಸ್ಥಾ
ಸಂಕ್ರಾಂತಿರನ್ಯಸ್ಯ ವಿಶೇಷಯುಕ್ತಾ ।
ಯಸ್ಯೋಭಯಂ ಸಾಧು ಸ ಶಿಕ್ಷಕಾಣಾಂ
ಧುರಿ ಪ್ರತಿಷ್ಠಾಪಯಿತವ್ಯ ಏವ ॥ ೧೧೧

-ಮಾಲವಿಕಾಗ್ನಿಮಿತ್ರ, ೧-೧೬

ಕೆಲವರು ಸ್ವತಃ ನಾಟ್ಯವನ್ನು ಚೆನ್ನಾಗಿ ಅಭಿನಯಿಸುತ್ತಾರೆ. ಕೆಲವರು ಬೇರೆಯವರಿಗೆ ಅದನ್ನು ಚೆನ್ನಾಗಿ ಕಲಿಸಬಲ್ಲರು. ಯಾರಲ್ಲಿ ಕಲಾಕುಶಲತೆಯೂ, ಹೇಳಿಕೊಡುವ ಜಾಣ್ಮೆಯೂ ಇರುತ್ತವೆಯೋ, ಅವರೇ ಅಧ್ಯಾಪಕವರ್ಗದಲ್ಲಿ ಶ್ರೇಷ್ಠರು.

ಶೀತವಾತಾತಪಕ್ಲೇಶಾನ್ ಸಹಂತೇ ಯೇ ಪರಾಶ್ರಿತಾಃ ।
ತದಂಶೇನಾಪಿ ಮೇಧಾವೀ ತಪಸ್ತಪ್ತ್ವಾ ಸುಖೀ ಭವೇತ್ ॥ ೧೧೨

-ಹಿತೋಪದೇಶ, ಸುಹೃದ್ಭೇದ-೧೮

ಮತ್ತೊಬ್ಬರನ್ನಾಶ್ರಯಿಸಿದವನು ಯಾವ ಶೈತ್ಯ, ಗಾಳಿ, ಬಿಸಿಲು ಮೊದಲಾದ ಕಷ್ಟಗಳನ್ನು ಸಹಿಸಿಕೊಳ್ಳುವರೋ ಅದರಲ್ಲಿ ಒಂದು ಭಾಗದಿಂದಲಾದರೂ ಬುದ್ಧಿವಂತನಾದವನು ತಪಸ್ಸು ಮಾಡಿ ಸುಖಿಯಾಗಬಹುದು.

ಶೋಕಸ್ಥಾನಸಹಸ್ರಾಣಿ ದುಃಖಸ್ಥಾನಶತಾನಿ ಚ ।
ದಿವಸೇ ದಿವಸೇ ಮೂಢಮಾವಿಶಂತಿ ನ ಪಂಡಿತಮ್ ॥ ೧೧೩

-ಮಹಾಭಾರತ, ಅರಣ್ಯ. ೨-೧೬

ವ್ಯಥೆಪಡಲು ಸಾವಿರಾರು ವಿಷಯಗಳೂ ದುಃಖಿಸಲು ನೂರಾರು ಸಂದರ್ಭಗಳೂ ಪ್ರತಿದಿನವೂ ಒದಗುತ್ತವೆ. ಅವು ಮೂಢನಿಗೆ, ಪಂಡಿತನಿಗಲ್ಲ.

**ಷಟ್ಕರ್ಣೋ ಭಿದ್ಯತೇ ಮಂತ್ರಶ್ಚತುಷ್ಕರ್ಣಃ ಸ್ಥಿರೋ ಭವೇತ್ ।**
**ತಸ್ಮಾತ್ಸರ್ವಪ್ರಯತ್ನೇನ ಷಟ್ಕರ್ಣಂ ವರ್ಜಯೇತ್ಸುಧೀಃ ॥ ೧೧೪**

-ಪಂಚತಂತ್ರ, ಮಿತ್ರಭೇದ-೧೦೮

ಆರು ಕಿವಿಗಳಿಗೆ ಬಿದ್ದ ಮಾತು ರಟ್ಟಾಗುತ್ತದೆ. ಆದರೆ ನಾಲ್ಕು ಕಿವಿಗಳಿಗೆ ಬಿದ್ದುದು ಗಟ್ಟಿಯಾಗಿ ಗುಟ್ಟಾಗಿರುತ್ತದೆ. ಆದುದರಿಂದ ಬುದ್ಧಿವಂತನಾದವನು ಮಾಡುವ ಪ್ರಯತ್ನವನ್ನೆಲ್ಲಾ ಮಾಡಿ ಆರು ಕಿವಿಗಳನ್ನು ತಪ್ಪಿಸಬೇಕು.

**ಸಕೃದಪಿ ದೃಷ್ಟ್ವಾ ಪುರುಷಂ ವಿಬುಧಾ ಜಾನಂತಿ ಸಾರತಾಂ ತಸ್ಯ ।**
**ಹಸ್ತತುಲಯಾಪಿ ನಿಪುಣಾಃ ಪಲಪ್ರಮಾಣಂ ವಿಜಾನಂತಿ ॥ ೧೧೫**

-ಪಂಚತಂತ್ರ, ಮಿತ್ರಸಂಪ್ರಾಪ್ತಿ-೮೬

ಬುದ್ಧಿವಂತರಾದವರು ಪುರುಷನನ್ನು ಒಮ್ಮೆ ಮಾತ್ರ ನೋಡಿದುದರಿಂದಲೇ ಅವನ ತಿರುಳನ್ನು ತಿಳಿಯುತ್ತಾರೆ. ನಿಪುಣರಾದವರು ಕೈಯಲ್ಲಿ ತೂಗುವುದರಿಂದಲೇ ಗುಂಜಿಯ (ಪ್ರಮಾಣವನ್ನು) ತೂಕವನ್ನು ಅರಿಯುತ್ತಾರೆ.

**ಸಂಗಮಯತಿ ವಿದ್ಯೈವ ನೀಚಗಾಪಿ ನರಂ ಸರಿತ್ ।**
**ಸಮುದ್ರಮಪಿ ದುರ್ದರ್ಶಂ ನೃಪಂ ಭಾಗ್ಯಮತಃ ಪರಮ್ ॥ ೧೧೬**

-ಹಿತೋಪದೇಶ, ೧-೭

ಹಳ್ಳಕ್ಕೆ ಹರಿಯುವ ನದಿ ಸಮುದ್ರವನ್ನು ಸೇರುವಂತೆ ನೀಚನನ್ನು ಸೇರಿದ ವಿದ್ಯೆಯೇ ಅವನನ್ನು ದೃಷ್ಟಿದೂರನಾದ ರಾಜನೊಡನೆ ಸೇರಿಸುವುದು. ಅನಂತರ ಅತ್ಯಧಿಕವಾದ ಭಾಗ್ಯವೇ ಲಭಿಸುವುದು.

**ಸಂರೋಹತಿ ಶರೈರ್ವಿದ್ಧಂ ವರಂ ಪರಶುನಾ ಹತಂ ।**
**ವಾಚಾ ದುರುಕ್ತಂ ಭೀಭತ್ಸಂ ಸಂರೋಹತಿ ವಾಕ್‌ಕ್ಷತಮ್ ॥ ೧೧೭**

-ಸುಭಾಷಿತಸುಧಾನಿಧಿ

ಬಾಣಗಳಿಂದ ಹೊಡೆಯಲ್ಪಟ್ಟಿದ್ದು, ಕೊಡಲಿಯಿಂದ ಕತ್ತರಿಸಲ್ಪಟ್ಟಿದ್ದು, ಮತ್ತೆ ಚೆನ್ನಾಗಿ ಬೆಳೆಯುತ್ತದೆ. ಆದರೆ ಮಾತಿನಿಂದ ಕಟುವಾಗಿ ಹೇಳಿದ ಜುಗುಪ್ಸಾಹವವಾದ ಮಾತಿನ ಘಾಯ ಮತ್ತೆ ಚಿಗುರುವುದಿಲ್ಲ.

**ಸರ್ವದ್ರವ್ಯೇಷು ವಿದ್ಯೈವ ದ್ರವ್ಯಮಾಹುರನುತ್ತಮಂ ।**
**ಅಹಾರ್ಯತ್ವಾದನರ್ಘ್ಯತ್ವಾದಕ್ಷಯತ್ವಾಚ್ಚ ಸರ್ವದಾ ॥ ೧೧೮**

-ಹಿತೋಪದೇಶ, ೧-೪

ಎಂದೆಂದೂ ಅಪಹರಿಸುವುದಕ್ಕಾಗದ ಕಾರಣ, ಬೆಲೆ ಕುಂದದ ಕಾರಣ, ನಾಶವಾಗದ ಕಾರಣ ವಿದ್ಯೆಯನ್ನು ದ್ರವ್ಯಗಳೆಲ್ಲೆಲ್ಲಾ ಶ್ರೇಷ್ಠವಾದ ದ್ರವ್ಯವೆಂದು ಹೇಳುತ್ತಾರೆ.

**ಸರ್ವನಾಶೇ ಸಮುತ್ಪನ್ನೇ ಹ್ಯರ್ಧಂ ತ್ಯಜತಿ ಪಂಡಿತಃ ।**
**ಅರ್ಧೇನ ಕುರುತೇ ಕಾರ್ಯಂ ಸರ್ವನಾಶಃ ಸುದುಃಸಹಃ ॥ ೧೧೯**

-ಸುಭಾಷಿತರತ್ನಸಮುಚ್ಚಯ

ಸರ್ವನಾಶವು ಪ್ರಾಪ್ತವಾಗಿರುವಾಗ ಪಂಡಿತನಾದವನು ಅರ್ಧವನ್ನು ತ್ಯಜಿಸುತ್ತಾನೆ. ಉಳಿದ ಅರ್ಧದಿಂದಲೇ ತನ್ನ ಕಾರ್ಯವನ್ನು ನಡೆಸಿಕೊಳ್ಳುತ್ತಾನೆ. ಸರ್ವನಾಶವನ್ನು ತಡೆದು ಕೊಳ್ಳುವುದು ಕಷ್ಟ.

**ಸರ್ವೇಷಾಮಪ್ಯಘವತಾಮಿದಮೇವ ಸುನಿಷ್ಕೃತಂ ।**
**ನಾಮವ್ಯಾಹರಣಂ ವಿಷ್ಣೋರ್ಯತಸ್ತದ್ವಿಷಯಾ ಮತಿಃ ॥ ೧೨೦**

-ಭಾಗವತ, ೬-೨-೧೦

ಪರಮಾತ್ಮನ ನಾಮೋಚ್ಚಾರಣೆಯೇ ಎಲ್ಲಾ ವಿಧವಾದ ಪಾಪಗಳನ್ನು ಮಾಡಿದವರಿಗೆ ಒಳ್ಳೆಯ ಪರಿಹಾರವನ್ನು ನೀಡುತ್ತದೆ. ಏಕೆಂದರೆ ಬುದ್ಧಿಯು ಆಗ ಪರಮಾತ್ಮನನ್ನು ಸ್ಮರಿಸುತ್ತದೆ.

**ಸ್ಥಾನೇಷು ಶಿಷ್ಯನಿವಹೈರ್ವಿನಿಯುಜ್ಯಮಾನಾ**
**ವಿದ್ಯಾ ಗುರುಂ ಹಿ ಗುಣವತ್ತರಮಾತನೋತಿ ।**
**ಆದಾಯ ಶುಕ್ತಿಷು ಬಲಾಹಕವಿಪ್ರಕೀರ್ಣೈಃ**
**ರತ್ನಾಕರೋ ಭವತಿ ವಾರಿಭಿರಂಬುರಾಶಿಃ ॥ ೧೨೧**

-ಅನರ್ಘರಾಘವ, ೨-೯

ಶಿಷ್ಯರು ಸತ್ಪಾತ್ರದಲ್ಲಿ ಉಪಯೋಗಿಸಿದ ವಿದ್ಯೆಯು ಅವರ ಆಚಾರ್ಯರ ಪಾಂಡಿತ್ಯವನ್ನು ತಿಳಿಸುತ್ತದೆ. ಮೋಡಗಳಿಂದ ಸುರಿದ ನೀರಿನ ಬಿಂದುಗಳನ್ನು ಮುತ್ತಿನ ಚಿಪ್ಪಿನಲ್ಲಿ ಸಂಗ್ರಹಿಸಿ ಸಮುದ್ರವು ರತ್ನಾಕರವೆನಿಸಿದೆ.

**ಸುಖಾರ್ಥಿನಃ ಕುತೋ ವಿದ್ಯಾ ನಾಸ್ತಿ ವಿದ್ಯಾರ್ಥಿನಃ ಸುಖಂ ।**
**ಸುಖಾರ್ಥೀ ವಾ ತ್ಯಜೇದ್ವಿದ್ಯಾಂ ವಿದ್ಯಾರ್ಥೀ ವಾ ತ್ಯಜೇತ್ ಸುಖಮ್ ॥ ೧೨೨**

-ಮಹಾಭಾರತ, ಉದ್ಯೋಗ

ಸುಖಾಪೇಕ್ಷಿಗೆ ವಿದ್ಯೆ ಹೇಗೆ ಬಂದೀತು? ವಿದ್ಯಾಪೇಕ್ಷಿಗೆ ಸುಖ ಇರುವುದಿಲ್ಲ. ಆದ್ದರಿಂದ ಸುಖ ಬೇಕಾದರೆ ವಿದ್ಯೆಯನ್ನೂ ವಿದ್ಯೆ ಬೇಕಾದರೆ ಸುಖವನ್ನೂ ತ್ಯಜಿಸಬೇಕು.

ಸುಜೀರ್ಣಮನ್ನಂ ಸುವಿಚಕ್ಷಣಃ ಸುತಃ
 ಸುಶಾಸಿತಾ ಸ್ತ್ರೀ ನೃಪತಿಃ ಸುಸೇವಿತಃ ।
ಸುಚಿಂತ್ಯ ಚೋಕ್ತಂ ಸುವಿಚಾರ್ಯ ಯತ್ಕೃತಂ
 ಸುದೀರ್ಘಕಾಲೇ ನ ಹಿ ಯಾತಿ ವಿಕ್ರಿಯಾಮ್ ॥ ೧೨೩

-ಹಿತೋಪದೇಶ, ಮಿತ್ರಲಾಭ-೧೬

ಚೆನ್ನಾಗಿ ಜೀರ್ಣವಾದ ಅನ್ನ, ಒಳ್ಳೆಯ ಸಾಮರ್ಥ್ಯವುಳ್ಳ ಮಗ, ಚೆನ್ನಾಗಿ ವಶಪಡಿಸಲ್ಪಟ್ಟ ಹೆಂಗುಸು, ಚೆನ್ನಾಗಿ ಸೇವಿಸಲ್ಪಟ್ಟ ರಾಜ, ಚೆನ್ನಾಗಿ ಯೋಚಿಸಿ ಹೇಳಲ್ಪಟ್ಟ ಮಾತು, ಚೆನ್ನಾಗಿ ವಿಚಾರಮಾಡಿ ಮಾಡಿದ ಕೆಲಸ-ಇವು ಬಹಳ ಕಾಲವಾದ ಮೇಲೂ ಬದಲಾವಣೆ ಹೊಂದುವುದಿಲ್ಲ.

ಸುಹೃದ್ಭಿರಾಪ್ತೈರಸಕೃದ್ವಿಚಾರಿತಂ
 ಸ್ವಯಂ ಚ ಬುದ್ಧ್ಯಾ ಪ್ರವಿಚಾರಿತಾಶ್ರಯಂ ।
ಕರೋತಿ ಕಾರ್ಯಂ ಖಲು ಯಃ ಸ ಬುದ್ಧಿಮಾನ್
 ಸ ಏವ ಲಕ್ಷ್ಮ್ಯಾ ಯಶಸಾಂ ಚ ಭಾಜನಮ್ ॥ ೧೨೪

-ಪಂಚತಂತ್ರ, ಕಾಕೋಲೂಕೀಯ-೧೧೩

ತನ್ನ ಆಪ್ತಮಿತ್ರರು ಅನೇಕ ಸಲ ವಿಚಾರಮಾಡಿರುವಂಥದೂ, ತಾನೂ ಸಹ ತನ್ನ ಸ್ವಂತ ಬುದ್ಧಿಯಿಂದ ಚೆನ್ನಾಗಿ ಯೋಚಿಸಿರುವಂಥದೂ ಆದ ಕೆಲಸವನ್ನು ಬುದ್ಧಿವಂತನಾದ ಯಾವನು ಮಾಡುತ್ತಾನೋ ಅವನು ಸಂಪತ್ತಿಗೂ ಯಶಸ್ಸಿಗೂ ಪಾತ್ರನಾಗುತ್ತಾನೆ.

ಹತಂ ಜ್ಞಾನಂ ಕ್ರಿಯಾಶೂನ್ಯಂ ಹತಾ ಚಾಜ್ಞಾನಿನಃ ಕ್ರಿಯಾ ।
ಧಾವನ್ನಪ್ಯಂಧಕೋ ನಷ್ಟಃ ಪಶ್ಯನ್ನಪಿ ಚ ಪಂಗುಕಃ ॥ ೧೨೫

-ಯಶಸ್ತಿಲಕ, ૩-೫

ಕ್ರಿಯೆಯಿಲ್ಲದ ಬರಿಯ ತಿಳಿವು ನಷ್ಟವಾದಂತೆ (ವ್ಯರ್ಥ). ತಿಳಿವಿಲ್ಲದವನ ಕ್ರಿಯೆಯೂ ನಷ್ಟವೇ. ಕುರುಡನು ಓಡಿದರೂ ಫಲವಿಲ್ಲ. ಕುಂಟನು ನೋಡುತ್ತಿದ್ದರೂ ಫಲವಿಲ್ಲ. (ಅವರಿಬ್ಬರೂ ನಷ್ಟರೇ).

ಹರ್ತುರ್ಯಾತಿ ನ ಗೋಚರಂ ಕಿಮಪಿ ಶಂ ಪುಷ್ಣಾತಿ ಯತ್ಸರ್ವದಾ
ಹ್ಯರ್ಥಿಭ್ಯಃ ಪ್ರತಿಪಾದ್ಯಮಾನಮನಿಶಂ ಪ್ರಾಪ್ನೋತಿ ವೃದ್ಧಿಂ ಪರಾಂ ।
ಕಲ್ಪಾಂತೇಷ್ವಪಿ ನ ಪ್ರಯಾತಿ ನಿಧನಂ ವಿದ್ಯಾಖ್ಯಮಂತರ್ಧನಂ
ಯೇಷಾಂ ತಾನ್ ಪ್ರತಿ ಮಾನಮುಜ್ಝತ ನೃಪಾಃ ಕಸ್ತೈಃ ಸಹ ಸ್ಪರ್ಧತೇ ॥

-ನೀತಿಶತಕ-೧೪

ವಿದ್ಯೆಯೆಂಬ ಗುಟ್ಟಾಗಿರುವ ಹಣ ಅಪಹರಿಸುವವನ ಕಣ್ಣಿಗೆ ಬೀಳುವುದಿಲ್ಲ. ಯಾವಾಗಲೂ ಸುಖವನ್ನು ಬೆಳೆಸುತ್ತದೆ. ಬೇಡತಕ್ಕವರಿಗೆ ಯಾವಾಗಲೂ ಕೊಡಲ್ಪಡುತ್ತಿದ್ದರೂ, ವೃದ್ಧಿಯನ್ನು ಹೊಂದುತ್ತದೆ. ಕಲ್ಪಾಂತರಗಳಲ್ಲೂ ನಾಶಹೊಂದುವುದಿಲ್ಲ. ಇಂತಹ ವಿದ್ಯೆಯೆಂಬ ಹಣವಿರುವವರ ವಿಷಯದಲ್ಲಿ ಎಲೈ ರಾಜರೇ ನಿಮ್ಮ ಗರ್ವವನ್ನು ಬಿಡಿ. ಅವರೊಡನೆ ಯಾರು ತಾನೇ ಸ್ಪರ್ಧಿಸಬಲ್ಲರು?

**ಹಸ್ತೀ ಸ್ಥೂಲತರಃ ಸ ಚಾಂಕುಶವಶಃ ಕಿಂ ಹಸ್ತಿಮಾತ್ರೋಽಂಕುಶಃ**
**ದೀಪೇ ಪ್ರಜ್ವಲಿತೇ ಪ್ರಣಶ್ಯತಿ ತಮಃ ಕಿಂ ದೀಪಮಾತ್ರಂ ತಮಃ ।**
**ವಜ್ರೇಣಾಪಿ ಹತಾಃ ಪತಂತಿ ಗಿರಯಃ ಕಿಂ ವಜ್ರಮಾತ್ರೋ ಗಿರಿಃ**
**ತೇಜೋ ಯಸ್ಯ ವಿರಾಜತೇ ಸ ಬಲವಾನ್ ಸ್ಥೂಲೇಷು ಕಃ ಪ್ರತ್ಯಯಃ ॥೧೨೭**

-ಪಂಚತಂತ್ರ, ಮಿತ್ರಭೇದ-೩೫೮

ಆನೆಯು ಬಹಳ ದೊಡ್ಡದು. ಅದು ಅಂಕುಶಕ್ಕೆ ವಶವಾಗುವುದು. ಆ ಅಂಕುಶ ಆನೆಯಷ್ಟೇ ದೊಡ್ಡ ಪ್ರಮಾಣದಲ್ಲಿದೆಯೇ? ದೀಪವು ಪ್ರಜ್ವಲಿಸಿದಾಗ ಕತ್ತಲೆ ಅಳಿಯುವುದು. ಕತ್ತಲೆ ದೀಪದಷ್ಟೇ ಇದೆಯೇ? ವಜ್ರಾಯುಧದ ಪೆಟ್ಟಿಗೆ ಬೆಟ್ಟಗಳು ಒಡೆದು ಬೀಳುತ್ತವೆ. ಬೆಟ್ಟ ವಜ್ರಾಯುಧದಷ್ಟೇ ಇದೆಯೇ? ಯಾವನು ತೇಜಸ್ಸಿನಿಂದ ಬೆಳಗುವನೋ ಅವನು ಬಲಯುತನು. ಸ್ಥೂಲವಾಗಿರುವುದರಲ್ಲಿ ಯಾವ ನೆಚ್ಚಿಕೆ?



## ೧೨. ವೈರಾಗ್ಯ

**ಅಕಾಂಡಪಾತಜಾತಾನಾಮಾರ್ದ್ರಾಣಾಂ ಮರ್ಮಭೇದಿನಾಂ ।**
**ಗಾಢಶೋಕಪ್ರಹಾರಾಣಾಮಚಿಂತೈವ ಮಹೌಷಧಿಃ ॥** ೧

ಅಕಾಲದಲ್ಲಿ ಅಕಸ್ಮಾತ್ತಾಗಿ ಒದಗಿಬಂದವೂ, ಹಚ್ಚ ಹಸಿಯವೂ ಮರ್ಮಭೇದಕಗಳೂ ಆದ ತೀವ್ರವಾದ ಶೋಕದ ಹೊಡೆತಗಳಿಗೆ ಅವನ್ನು ಸ್ಮರಿಸದಿರುವುದೊಂದೇ ದೊಡ್ಡ ಔಷಧ.

**ಅಗ್ರೇ ಗೀತಂ ಸರಸಕವಯಃ ಪಾರ್ಶ್ವಯೋರ್ದಾಕ್ಷಿಣಾತ್ಯಾಃ**
**ಪಶ್ಚಾಲ್ಲೀಲಾವಲಯರಣಿತಂ ಚಾಮರಗ್ರಾಹಿಣೀನಾಮ್ ।**
**ಯದ್ಯಸ್ತ್ಯೇವಂ ಕುರು ಭವರಸಾಸ್ವಾದನೇ ಲಂಪಟತ್ವಂ**
**ನೋಚೇಚ್ಚೇತಃ ಪ್ರವಿಶ ಸಹಸಾ ನಿರ್ವಿಕಲ್ಪೇ ಸಮಾಧೌ ॥** ೨

- ವೈರಾಗ್ಯಶತಕ - ೬೦

ಎಲೈ ಮನಸ್ಸೇ ! ಎದುರಿಗೆ ಸಂಗೀತ. ರಸಾಸ್ವಾದನಪಟುಗಳಾದ ದಾಕ್ಷಿಣಾತ್ಯ ಕವಿಗಳು ಪಕ್ಕಗಳಲ್ಲಿ. ಹಿಂದುಗಡೆ ಚಾಮರಗಳನ್ನು ಹಿಡಿದಿರುವ ಹೆಂಗಸರ ಸುಂದರವಾದ ಬಳೆಗಳ ಶಬ್ದ. ಇವೆಲ್ಲವೂ ಇದ್ದರೆ ಸಂಸಾರದಲ್ಲಿ ಆಸಕ್ತನಾಗು. ಇಲ್ಲದಿದ್ದರೆ ನಿರ್ವಿಕಲ್ಪ ಸಮಾಧಿಯಲ್ಲಿ ಪ್ರವೇಶಿಸಿಬಿಡು.

**ಅತಸ್ಕರಕರಗ್ರಾಹ್ಯಮರಾಜಕವಶಂವದಂ ।**
**ಅದಾಯಾದವಿಭಾಗಾರ್ಹಂ ಧನಮಾರ್ಜಯ ಸುಸ್ಥಿರಮ್ ॥** ೩

ಕಳ್ಳರು ಕದಿಯಲಾಗದ, ರಾಜರು ವಶಪಡಿಸಿಕೊಳ್ಳಲಾಗದ, ದಾಯಾದಿಗಳು ಹಂಚಿಕೊಳ್ಳಲಾಗದ ಸುಸ್ಥಿರವಾದ ವಿದ್ಯೆಯೆಂಬ ಐಶ್ವರ್ಯವನ್ನು ಸಂಪಾದಿಸು.

**ಅತ್ಯಂತಮತಿಮೇಧಾವೀ ತ್ರಯಾಣಾಂ ಏಕಮಶ್ನುತೇ ।**
**ಅಲ್ಪಾಯುರ್ವಾ ದರಿದ್ರೋ ವಾ ಹ್ಯನಪತ್ಯೋ ನ ಸಂಶಯಃ ॥** ೪

ಅತ್ಯಂತ ಬುದ್ಧಿಶಾಲಿಯಾದವನಿಗೆ ಈ ಮೂರರಲ್ಲಿ ಯಾವುದಾದರೂ ಒಂದಿರುತ್ತೆ - ಅಲ್ಪಾಯುಸ್ಸು, ಬಡತನ, ಅಥವಾ ಮಕ್ಕಳಿಲ್ಲದಿರುವಿಕೆ. ಇದಕ್ಕೆ ಸಂಶಯವಿಲ್ಲ.

**ಅರ್ಥೀ ಕರೋತಿ ದೈನ್ಯಂ ಲಬ್ಧಾರ್ಥೋ ಗರ್ವಮಪರಿತೋಷಂ ಚ ।**
**ನಷ್ಟಧನೋಽಸ್ತಿ ಸಶೋಕಃ ಸುಖಮಾಸ್ತೇ ನಿಃಸ್ಪೃಹಃ ಪುರುಷಃ ॥** ೫

- ಸುಭಾಷಿತರತ್ನ ಸಮುಚ್ಚಯ

ಹಣವನ್ನು ಬೇಡತಕ್ಕವನು ದೈನ್ಯವನ್ನು ತೋರಿಸುತ್ತಾನೆ. ಹಣವು ದೊರಕಿದ ಮೇಲೆ ಗರ್ವವೂ ಅತೃಪ್ತಿಯೂ ಉಂಟಾಗುತ್ತವೆ. ಹಣವನ್ನು ಕಳೆದುಕೊಂಡಮೇಲೆ ಶೋಕಿಸುತ್ತಾನೆ. ನಿಸ್ಪೃಹನಾದವನು ಸುಖಿಯಾಗಿ ಇರುತ್ತಾನೆ.

**ಅಧ್ರುವೇ ಹಿ ಶರೀರೇ ಯೋ ನ ಕರೋತಿ ತಪೋಽರ್ಜನಂ ।**
**ಸ ಪಶ್ಚಾತ್ತಾಪ್ಯತೇ ಮೂಢೋ ಮೃತೋ ದೃಷ್ಟ್ವಾತ್ಮನೋ ಗತಿಮ್ ॥ ೬**

- ರಾಮಾಯಣ, ಉತ್ತರ. ೫-೨೨.

ಶರೀರವು ಅಸ್ಥಿರವೆಂದರಿತು ಯಾವನು ತಪೋನಿಷ್ಠೆಯಿಂದ ಶ್ರೇಯಸ್ಸನ್ನು ಸಂಪಾದಿಸಿಕೊಳ್ಳುವುದಿಲ್ಲವೋ ಆ ಮೂಢನು ಮೃತನಾದ ಮೇಲೆ ತನ್ನ ದುಃಸ್ಥಿತಿಗೆ ತಾನೇ ಮರುಗಬೇಕಾಗುತ್ತದೆ.

**ಅನಾಹೂತಃ ಪ್ರವಿಶತಿ ಅಪೃಷ್ಟೋ ಬಹು ಭಾಷತೇ ।**
**ಅವಿಶ್ವಸ್ತೇ ವಿಶ್ವಸಿತಿ ಮೂಢಚೇತಾ ನರಾಧಮಃ ॥ ೭**

- ಮಹಾಭಾರತ, ಉದ್ಯೋಗ. ೩೩-೩೬

ಮೂಢನಾದ ನೀಚನು ತನ್ನನ್ನು ಕರೆಯದಿದ್ದರೂ ಹೋಗುತ್ತಾನೆ. ಕೇಳದಿದ್ದರೂ ಬಹಳ ಮಾತಾಡುತ್ತಾನೆ. ನಂಬಿಕೆಗೆ ಅನರ್ಹನಲ್ಲಿ ನಂಬಿಕೆ ಇಡುತ್ತಾನೆ.

**ಅನುಗಂತುಂ ಸತಾಂ ವರ್ತ್ಮ ಯದಿ ಕೃತ್ಸ್ನಂ ನ ಶಕ್ಯತೇ ।**
**ಸ್ವಲ್ಪಮಪ್ಯನುಗಂತವ್ಯಂ ಮಾರ್ಗಸ್ಥೋ ನಾವಸೀದತಿ ॥ ೮**

- ಸುಭಾಷಿತ ಸುಧಾನಿಧಿ

ಸಜ್ಜನರ ಮಾರ್ಗವನ್ನು ಪೂರ್ಣವಾಗಿ ಅನುಸರಿಸಲು ಒಂದು ವೇಳೆ ಶಕ್ಯವಾಗದೆ ಹೋದರೆ ಸ್ವಲ್ಪವನ್ನಾದರೂ ಅನುಸರಿಸಬೇಕು. ಸರಿಯಾದ ಹಾದಿಯಲ್ಲಿರುವವನು ನಾಶ ಹೊಂದುವುದಿಲ್ಲ.

**ಅನೇಕದೋಷೋದುಷ್ಟೋಽಪಿ ಕಾಯಃ ಕಸ್ಯ ನ ವಲ್ಲಭಃ ।**
**ಕುರ್ವನ್ನಪಿ ವ್ಯಲೀಕಾನಿ ಯಃ ಪ್ರಿಯಃ ಪ್ರಿಯ ಏವ ಸಃ ॥ ೯**

- ಪಂಚತಂತ್ರ, ಮಿತ್ರಭೇದ - ೨೬೫

ಅನೇಕಾನೇಕ ದೋಷಗಳಿಂದ ಶರೀರವು ಕೆಟ್ಟುದಾಗಿದ್ದರೂ ಯಾರಿಗೆ ತಾನೇ ಪ್ರಿಯವಾಗಿಲ್ಲ? ಪ್ರಿಯನಾದವನು ಎಷ್ಟೇ ಅನುಚಿತ ಕಾರ್ಯಗಳನ್ನು ಮಾಡಿದರೂ ಪ್ರಿಯನೇ ಆಗಿರುತ್ತಾನೆ!

**ಅಭಾವಾವಧಯೋ ಭಾವಾ ನಿಧನಾವಧಿ ಜೀವಿತಂ ।**
**ಅವಿವೇಕಸ್ತ್ವನವಧಿರ್ಯೇನಾಯಂ ಜಾಯತೇ ಭ್ರಮಃ ॥ ೧೦**

- ರಾಮಾಯಣ ಮಂಜರೀ, ಅರಣ್ಯ - ೨೪೨

ಸಕಲ ವಸ್ತುಗಳಿಗೂ ನಾಶವೇ ಅವಧಿ. ಜೀವಿತಕ್ಕೆ ಸಾವು ಅವಧಿ. ಆದರೆ ಅವಿವೇಕಕ್ಕೆ ಅವಧಿಯೇ ಇಲ್ಲ! ಅದರಿಂದಲೇ (ಈ ಬಗೆಯ) ಭ್ರಮೆ ಹುಟ್ಟುತ್ತದೆ.

**ಅವಗಚ್ಛತಿ ಮೂಢಚೇತನಃ ಪ್ರಿಯನಾಶಂ ಹೃದಿ ಶಲ್ಯಮರ್ಪಿತಂ ।**
**ಸ್ಥಿರಧೀಸ್ತು ತದೇವ ಮನ್ಯತೇ ಕುಶಲದ್ವಾರತಯಾ ಸಮುದ್ಧೃತಮ್ ॥೧೧**

- ರಘುವಂಶ, ೮-೮೮

ಪ್ರಿಯರಾದವವು ಸತ್ತರೆ ಮೂರ್ಖನಾದವನು ಎದೆಯಲ್ಲಿ ಮುಳ್ಳುಮುರಿದಂತೆ ವ್ಯಥೆ ಪಡುತ್ತಾನೆ. ಆದರೆ ತತ್ತ್ವಜ್ಞಾನಿಯು 'ಇದು ನನ್ನ ಆಧ್ಯಾತ್ಮಿಕ ಉನ್ನತಿಗೆ ಆಯಿತು. ಮುಳ್ಳನ್ನು ತೆಗೆದಾಯಿತು' ಎಂದು ತಿಳಿದು ಶಾಂತಿಯನ್ನು ಪಡೆಯುತ್ತಾನೆ.

**ಅವಶ್ಯಂ ಯಾತಾರಶ್ಚಿರತರಮುಷಿತ್ವಾಪಿ ವಿಷಯಾ**
**ವಿಯೋಗೇ ಕೋ ಭೇದಃ ತ್ಯಜತಿಹಿ ಜನೋಽಯತ್ಸ್ವಯಮಮೂನ್**
**ವ್ರಜಂತಃ ಸ್ವಾತಂತ್ರ್ಯಾದತುಲಪರಿತಾಪಾಯ ಮನಸಃ**
**ಸ್ವಯಂ ತ್ಯಕ್ತ್ವಾ ಹ್ಯೇತೇ ಶಮಸುಖಮನಂತಂ ವಿದಧತಿ ॥ ೧೨**

- ವೈರಾಗ್ಯ ಶತಕ - ೧೬

ಬಹಳ ಕಾಲವಿದ್ದರೂ ವಿಷಯಸುಖಗಳು ಖಂಡಿತವಾಗಿಯೂ ಹೋಗುವಂತಹವು. ಆದುದರಿಂದ ಅವುಗಳನ್ನು ನಾವೇ ತ್ಯಜಿಸಿದಲ್ಲಿ ಆಗುವ ವ್ಯತ್ಯಾಸವೇನು? ಮನುಷ್ಯರು ತಾವಾಗಿಯೇ ಅವುಗಳನ್ನು ಬಿಡದಿದ್ದರೆ, ತಾವೇ ಬಿಡುತ್ತಾ ಮನಸ್ಸಿಗೆ ಬಹಳ ದುಃಖ ಕೊಡುತ್ತವೆ. ತಾನೇ ಬಿಟ್ಟರೆ ಮಿತಿಯಿಲ್ಲದ ಆನಂದವನ್ನು ಕೊಡುತ್ತವೆ.

**ಅಶ್ನೀಮಹಿ ವಯಂ ಭಿಕ್ಷಾಂ ಆಶಾವಾಸೋ ವಸೀಮಹಿ ।**
**ಶಯೀಮಹಿ ಮಹೀಪೃಷ್ಠೇ ಕುರ್ವೀಮಹಿ ಕಿಮೀಶ್ವರೈಃ ॥ ೧೩**

- ವೈರಾಗ್ಯಶತಕ - ೩೦

ಭಿಕ್ಷಾನ್ನವನ್ನು ತಿನ್ನೋಣ. ದಿಗಂಬರರಾಗಿರೋಣ. ಭೂಮಿಯುಮೇಲೆ ಮಲಗೋಣ. ಪ್ರಭುಗಳಿಂದ ನಮಗೇನಾಗಬೇಕು?

**ಅಸಾರೇ ಖಲು ಸಂಸಾರೇ ಸುಖಭ್ರಾಂತಿಃ ಶರೀರಿಣಾಂ ।**
**ಲಾಲಾಪಾನಮಿವಾಂಗುಷ್ಠೇ ಬಾಲಾನಾಂ ಸ್ತನ್ಯವಿಭ್ರಮಃ ॥ ೧೪**

- ಸಮಯೋಚಿತಪದ್ಯಮಾಲಿಕಾ

ಅಸಾರವಾದ ಸಂಸಾರದಲ್ಲಿ ಜನರಿಗೆ ಸುಖಭ್ರಾಂತಿ ಇದೆ, ಮಕ್ಕಳು ಅಂಗುಷ್ಠದಲ್ಲಿ ಜೊಲ್ಲನ್ನು ಹೀರುತ್ತ ಸ್ತನ್ಯವೆಂದು ಭ್ರಮಿಸುತ್ತಾರೆ.

**ಅಹನ್ಯಹನಿ ಭೂತಾನಿ ಗಚ್ಛಂತೀಹ ಯಮಾಲಯಂ ।**
**ಶೇಷಾಃ ಸ್ಥಾವರಮಿಚ್ಛಂತಿ ಕಿಮಾಶ್ಚರ್ಯಮತಃಪರಮ್ ॥ ೧೫**

ಮಹಾಭಾರತ, ವನ. ೩೧೩-೧೧೬

ಪ್ರತಿದಿನವೂ ಪ್ರಾಣಿಗಳು ಯಮನ ಮನೆಗೆ ಹೋಗುತ್ತಲೇ ಇದ್ದಾರೆ. ಆದರೂ ಉಳಿದವರು ಶಾಶ್ವತವಾಗಿರಲು ಬಯಸುತ್ತಾರೆ. ಇದಕ್ಕಿಂತ ಹೆಚ್ಚಿನ ಆಶ್ಚರ್ಯ ಯಾವುದು?

**ಅಹೋರಾತ್ರಾಣಿ ಗಚ್ಛಂತಿ ಸರ್ವೇಷಾಂ ಪ್ರಾಣಿನಾಮಿಹ ।**
**ಆಯೂಂಷಿ ಕ್ಷಪಯಂತ್ಯಾಶು ಗ್ರೀಷ್ಮೇ ಜಲಮಿವಾಂಶವಃ ॥ ೧೬**

- ರಾಮಾಯಣ, ಅಯೋಧ್ಯಾ. ೧೦೫-೨೦

ಸಕಲ ಪ್ರಾಣಿಗಳಿಗೂ ಹಗಲು ರಾತ್ರಿಗಳು ಕಳೆಯುತ್ತಲೇ ಇವೆ. ಬೇಸಿಗೆಯಲ್ಲಿ ಸೂರ್ಯಕಿರಣಗಳು ನೀರನ್ನು ಹೀರುವಂತೆ, ಇವು ಆಯುಸ್ಸನ್ನು ಒಂದೇ ಸಮನಾಗಿ ಹೀರುತ್ತಿವೆ.

**ಅಹೌ ವಾ ಹಾರೇ ವಾ ಬಲವತಿ ರಿಪೌ ವಾ ಸುಹೃದಿ ವಾ**
**ಮಣೌ ವಾ ಲೋಷ್ಠೇ ವಾ ಕುಸುಮಶಯನೇ ವಾ ದೃಷದಿ ವಾ ।**
**ತೃಣೇ ವಾ ಸ್ತ್ರೈಣೇ ವಾ ಮಮ ಸಮದೃಶೋ ಯಾಂತು ದಿವಸಾಃ**
**ಸದಾ ಪುಣ್ಯೇಽರಣ್ಯೇ ಶಿವ ಶಿವ ಶಿವೇತಿ ಪ್ರಜಪತಃ ॥ ೧೭**

- ವೈರಾಗ್ಯಶತಕ - ೪೦

ಪರಮಪಾವನವಾದ ಕಾಡಿನಲ್ಲಿ ಶಿವ, ಶಿವ, ಶಿವ ಎಂದು ಯಾವಾಗಲೂ ಜಪಿಸುತ್ತಿರುವ ನನಗೆ ಹಾವಿನಲ್ಲಿ ಅಥವಾ ಹಾರದಲ್ಲಿ, ಬಲಿಷ್ಠನಾದ ಶತ್ರುವಿನಲ್ಲಿ ಅಥವಾ ಸ್ನೇಹಿತನಲ್ಲಿ, ರತ್ನದಲ್ಲಿ ಅಥವಾ ಮಣ್ಣಿನಲ್ಲಿ, ಹೂವಿನ ಹಾಸಿಗೆಯಲ್ಲಿ ಅಥವಾ ಕಲ್ಲಿನಲ್ಲಿ, ಹುಲ್ಲಿನಲ್ಲಿ ಅಥವಾ ಸ್ತ್ರೀಯರಲ್ಲಿ ಒಂದೇ ಭಾವನೆಯುಂಟಾಗಿ ದಿನಗಳು ಕಳೆಯಲಿ.

**ಆತ್ಮಾನಮನುಶೋಚ ತ್ವಂ ಕಿಮನ್ಯಮನುಶೋಚಸಿ ।**
**ಆಯುಸ್ತೇ ಕ್ಷೀಯತೇ ಯಸ್ಯ ಸ್ಥಿತಸ್ಯ ಚ ಗತಸ್ಯ ಚ ॥ ೧೮**

- ರಾಮಾಯಣ, ಅಯೋಧ್ಯಾ. ೧೦೫-೨೧

ನಿನಗಾಗಿ ನೀನು ಪಶ್ಚಾತ್ತಾಪಪಡು. ಇತರರಿಗಾಗಿ ನೀನು ಶೋಕಿಸುವುದೇಕೆ ? ನೀನು ಸುಮ್ಮನೆ ಕುಳಿತಿದ್ದರೂ ಕೆಲಸ ಮಾಡುತ್ತಿದ್ದರೂ ನಿನ್ನ ಆಯುಸ್ಸು ಕ್ಷಯಿಸುತ್ತಲೇ ಇದೆಯಲ್ಲ.

**ಆತ್ಮಾನಮನಭಿಜ್ಞಾಯ ವಿವೇಕ್ತುಂ ಯೋಽನ್ಯದಿಚ್ಛತಿ ।**
**ತೇನ ಭೌತೇನ ಕಿಂ ವಾಚ್ಯಂ ಪೃಶ್ನೇಽಸ್ಮಿನ್ ಕೋ ಭವಾನಿತಿ ॥೧೯**

- ಅಭಿನವಗುಪ್ತ (ಈಶ್ವರಪ್ರತ್ಯಭಿಜ್ಞಾವಿವೃತಿ ವಿಮರ್ಶಿನೀ)

ತಾನು ಯಾರೆಂಬುದನ್ನೇ ತಿಳಿಯದೆ ಬಾಹ್ಯ ವಸ್ತುವನ್ನು ವಿವೇಚಿಸಲು ಯಾವನು ಯತ್ನಿಸುವನೋ, ಅಂಥ ಪ್ರಾಣಿಯನ್ನು ಕುರಿತು ನೀನು ಯಾರು ? ಎಂದು ಕೇಳಿದರೆ, ಏನು ಹೇಳಿಯಾನು?

**ಆಧಿವ್ಯಾಧಿಪರಿತಾಪಾದದ್ಯ ಶ್ವೋ ವಾ ವಿನಾಶಿನೇ ।**
**ಕೋ ಹಿ ನಾಮ ಶರೀರಾಯ ಧರ್ಮಾಪೇತಂ ಸಮಾಚರೇತ್ ॥ ೨೦**

- ಹಿತೋಪದೇಶ, ಸಂಧಿ-೧೩೩

ಮನಸ್ಸಿನ ಖಾಯಿಲೆ, ದೇಹದ ರೋಗಗಳು ಇವುಗಳ ಪೀಡೆಯಿಂದ ಇಂದೋ ನಾಳೆಯೋ ನಾಶವಾಗುವ ಶರೀರಕ್ಕಾಗಿ ಯಾರು ತಾನೇ ಅಧರ್ಮವನ್ನು ಆಚರಿಸಿಯಾರು?

**ಆಯುಃ ಕಲ್ಲೋಲಲೋಲಂ ಕತಿಪಯದಿವಸಸ್ಥಾಯಿನೀ ಯೌವನಶ್ರೀ-**
**ರರ್ಥಾಃ ಸಂಕಲ್ಪಕಲ್ಪಾ ಘನಸಮಯತಡಿದ್ವಿಭ್ರಮಾ ಭೋಗಪೂರಾಃ ।**
**ಕಂಠಾಶ್ಲೇಷೋಪಗೂಢಂ ತದಪಿ ಚ ನ ಚಿರಂ ಯತ್ಪ್ರಿಯಾಭಿಃ ಪ್ರಣೀತಂ**
**ಬ್ರಹ್ಮಣ್ಯಾಸಕ್ತಚಿತ್ತಾ ಭವತ ಭವಭಯಾಂಭೋಧಿಪಾರಂ ತರೀತುಮ್ ॥ ೨೧**

- ವೈರಾಗ್ಯಶತಕ - ೩೬

ಆಯುಸ್ಸು ನೀರಿನ ಅಲೆಗಳಂತೆ ಚಂಚಲ, ಯೌವನದ ಸೊಬಗು ಸ್ವಲ್ಪ ದಿವಸಗಳೇ ಇರುವಂಥದ್ದು, ಹಣವೂ ಬರೀ ಆಸೆ ಮಾತ್ರ. ಭೋಗಗಳು ಮಳೆಗಾಲದ ಮಿಂಚಿನಂತೆ ಅತಿ ಚಂಚಲ. ಪ್ರಿಯೆಯರಿಂದ ಕೊಡಲ್ಪಟ್ಟ ಆಲಿಂಗನಾದಿಗಳೂ ಕೂಡ ಅಸ್ಥಿರ. ಆದುದರಿಂದ ಸಂಸಾರ ಭಯಸಾಗರವನ್ನು ದಾಟಲು ಪರಬ್ರಹ್ಮನಲ್ಲಿ ನೆಟ್ಟಮನಸ್ಸುಳ್ಳವರಾಗಿರಿ.

**ಆಯುಃಕ್ಷಣಲವಮಾತ್ರಂ ನ ಲಭ್ಯತೇ ಹೇಮಕೋಟಿಭಿಃ ಕ್ವಾಪಿ ।**
**ತಚ್ಚೇದ್ಗಚ್ಛತಿ ಸರ್ವಂ ಮೃಷಾ ತತಃ ಕಾಽಧಿಕಾ ಹಾನಿಃ ॥ ೨೨**

- ಪ್ರಬೋಧಸುಧಾಕರ - ೧೬

ಕೋಟಿ ಸುವರ್ಣ ನಾಣ್ಯಗಳನ್ನು ಸುರಿದರೂ ಆಯುಸ್ಸಿನ ಒಂದು ಕ್ಷಣಮಾತ್ರವೂ ಲಭಿಸುವುದಿಲ್ಲ. ಹೀಗಿರುವಾಗ ಸಂಪೂರ್ಣ ಆಯುಸ್ಸೇ ವ್ಯರ್ಥವಾಗಿ ಕಳೆದರೆ ಅದಕ್ಕಿಂತ ಹೆಚ್ಚಿನ ಹಾನಿ ಯಾವುದು?

**ಆಯುರ್ನಶ್ಯತಿ ಪಶ್ಯತಾಂ ಪ್ರತಿದಿನಂ ಯಾತಿ ಕ್ಷಯಂ ಯೌವನಂ**
**ಪ್ರತ್ಯಾಯಾಂತಿ ಗತಾಃ ಪುನರ್ನ ದಿವಸಾಃ ಕಾಲೋ ಜಗದ್ಭಕ್ಷಕಃ ।**
**ಲಕ್ಷ್ಮೀಸ್ತೋಯತರಂಗಭಂಗಚಪಲಾ ವಿದ್ಯುಚ್ಚಲಂ ಜೀವಿತಂ**
**ತಸ್ಮಾನ್ಮಾಂ ಶರಣಾಗತಂ ಕರುಣಯಾ ತ್ವ ರಕ್ಷ ರಕ್ಷಾಧುನಾ ॥ ೨೩**

- ಶಿವಾಪರಾಧ ಕ್ಷಮಾಪಣಸ್ತೋತ್ರ-೧೫

ನೋಡುನೋಡುತ್ತಿರುವಂತೆಯೇ ಪ್ರತಿದಿನವೂ ಆಯುಸ್ಸು ಕ್ಷಯಿಸುತ್ತದೆ. ಯೌವನ ಕಳೆಯುತ್ತದೆ. ಕಳೆದುಹೋದ ದಿನಗಳು ಎಂದಿಗೂ ಹಿಂದಿರುಗುವುದಿಲ್ಲ. ಲಕ್ಷ್ಮಿಯು ನೀರಿನ ಅಲೆಯಂತೆ ಚಂಚಲಳು. ಜೀವನವು ಮಿಂಚಿನಂತೆ ಕ್ಷಣಿಕ. ಆದ್ದರಿಂದ, ಹೇ ಸ್ವಾಮಿ, ಶರಣಾಗತನಾದ ನನ್ನನ್ನು ಈಗಲೇ ರಕ್ಷಿಸು, ರಕ್ಷಿಸು.

**ಇಂದ್ರಿಯಾಣಿ ಪುರಾ ಜಿತ್ವಾ ಜಿತಂ ತ್ರಿಭುವನಂ ತ್ವಯಾ ।**
**ಸ್ಮರದ್ಭಿರಿವ ತದ್ವೈರಮಿಂದ್ರಿಯೈರೇವ ನಿರ್ಜಿತಃ ॥ ೨೪**

- ರಾಮಾಯಣ, ಯುದ್ಧ. ೧೧೪-೧೮

ಹಿಂದೆ ನೀನು ಇಂದ್ರಿಯಗಳನ್ನು ಗೆದ್ದು ಮೂರು ಲೋಕಗಳನ್ನೂ ಜಯಿಸಿದೆ. ಪೂರ್ವವೈರವನ್ನು ಸ್ಮರಿಸಿಕೊಂಡವೋ ಎಂಬಂತೆ ಆ ಇಂದ್ರಿಯಗಳೇ ನಿನ್ನನ್ನೀಗ ಜಯಿಸಿ ಬಿಟ್ಟವು ! (ಹತನಾದ ರಾವಣನನ್ನು ನೋಡಿ ಮಂಡೋದರಿಯ ವಿಲಾಪ)

**ಇಂದ್ರಿಯಾಣಾಂ ವಿಚರತಾಂ ವಿಷಯೇಷ್ವಪಹಾರಿಷು ।**
**ಸಂಯಮೇ ಯತ್ನಮಾತಿಷ್ಠೇದ್ವಿದ್ವಾನ್ ಯಂತೇವ ವಾಜಿನಾಮ್ ॥ ೨೫**

- ಮನುಸ್ಮೃತಿ, ೨-೮೮

ಸೆಳೆಯುವ ವಿಷಯಸುಖಗಳಲ್ಲಿ ಆಸಕ್ತವಾಗುವ ಸ್ವಭಾವವುಳ್ಳ ಇಂದ್ರಿಯಗಳನ್ನು, ಸಾರಥಿಯು ಕುದುರೆಗಳನ್ನು ಹತೋಟಿಯಲ್ಲಿಡುವಂತೆ, ವಿದ್ವಾಂಸನು ನಿಗ್ರಹಿಸಬೇಕು.

**ಇಂದ್ರಿಯಾಣಾಂ ಪ್ರಸಂಗೇನ ದೋಷಮೃಚ್ಛತ್ಯಸಂಶಯಂ ।**
**ಸಂನಿಯಮ್ಯ ತು ತಾನ್ಯೇವ ತತಃ ಸಿದ್ಧಿಂ ನಿಯಚ್ಛತಿ ॥ ೨೬**

- ಮನುಸ್ಮೃತಿ, ೨-೯೩

ಇಂದ್ರಿಯಗಳ ಸೆಳೆತಕ್ಕೆ ಒಳಗಾದವನು ಪಾಪವನ್ನು ಮಾಡುತ್ತಾನೆ. ಅವುಗಳನ್ನು ನಿಗ್ರಹಿಸಿದವನು ಉತ್ತಮ ಫಲವನ್ನು ಪಡೆಯುತ್ತಾನೆ.

**ಇಂದ್ರಿಯಾಣಾಂ ಜಯೇ ಯೋಗಂ ಸಮಾತಿಷ್ಠೇದ್ದಿವಾನಿಶಂ ।**
**ಜಿತೇಂದ್ರಿಯೋ ಹಿ ಶಕ್ನೋತಿ ವಶೇ ಸ್ಥಾಪಯಿತುಂ ಪ್ರಜಾಃ ॥೨೭**

- ಮನುಸ್ಮೃತಿ, ೭-೪೪

ಹಗಲಿರುಳೂ ಯೋಗ ಸಾಧನೆ ಮಾಡಿ ಇಂದ್ರಿಯಗಳನ್ನು ವಶದಲ್ಲಿಡಬೇಕು. ಜಿತೇಂದ್ರಿಯನಾದ ಅರಸ ಪ್ರಜೆಗಳನ್ನು ಚೆನ್ನಾಗಿ ಆಳಬಲ್ಲ.

**ಇಂದ್ರಿಯಾಣ್ಯೇವ ತತ್ಸರ್ವಂ ಯತ್ಸ್ವರ್ಗನರಕಾವುಭೌ ।**
**ನಿಗೃಹೀತವಿಸೃಷ್ಟಾನಿ ಸ್ವರ್ಗಾಯ ನರಕಾಯ ಚ ॥ ೨೮**

- ಸುಭಾಷಿತ ಸುಧಾನಿಧಿ

ಸ್ವರ್ಗ ಮತ್ತು ನರಕ ಎಂಬುದೆಲ್ಲವೂ ಇಂದ್ರಿಯಗಳೇ. ಅವುಗಳನ್ನು ಅಡಗಿಸಿದರೆ ಸ್ವರ್ಗಕ್ಕೆ ಸಾಧನಗಳು ; ಹಾಗಲ್ಲದೆ ಹರಿಯಬಿಟ್ಟರೆ ನರಕಕ್ಕೂ ಸಾಧನಗಳು.

**ಏಕಃ ಕ್ಷಮಾವತಾಂ ದೋಷೋ ದ್ವಿತೀಯೋ ನೋಪಪದ್ಯತೇ ।**
**ಯದೇನಂ ಕ್ಷಮಯಾ ಯುಕ್ತಮಶಕ್ತಂ ಮನ್ಯತೇ ಜನಃ ॥**
**ಸೋಽಸ್ಯ ದೋಷೋ ನ ಮಂತವ್ಯಃ ಕ್ಷಮಾ ಹಿ ಪರಮಂ ಬಲಂ ।**
**ಕ್ಷಮಾ ಗುಣೋ ಹ್ಯಶಕ್ತಾನಾಂ ಶಕ್ತಾನಾಂ ಭೂಷಣಂ ಕ್ಷಮಾ ॥ ೨೯**

- ಮಹಾಭಾರತ, ಉದ್ಯೋಗ. ೩೩-೪೮, ೪೯

ಕ್ಷಮಾಶೀಲರಲ್ಲಿ ಒಂದು ದೋಷ ಉಂಟು ; ಇನ್ನೊಂದಿಲ್ಲ. ಏನೆಂದರೆ, ಕ್ಷಮಾಶೀಲನನ್ನು ಜನರು ಅಸಮರ್ಥನೆಂದು ತಿಳಿಯುತ್ತಾರೆ.

ಆದರೆ ಈ ದೋಷವು ಗಣನಾರ್ಹವಲ್ಲ. ಕ್ಷಮೆಯೇ ಉತ್ತಮ ಬಲ. ಅಶಕ್ತರಿಗೆ ಅದು ಗುಣ. ಶಕ್ತರಿಗೆ ಭೂಷಣ.

**ಏಕಸ್ಯಾಪಿ ನ ಯಃ ಶಕ್ತೋ ಮನಸಃ ಸಂನಿಬರ್ಹಣೇ ।**
**ಮಹೀಂ ಸಾಗರಪರ್ಯಂತಾಂ ಸ ಕಥಂ ವಿಜಿಗೀಷತೇ ॥ ೩೦**

- ಸುಭಾಷಿತಸುಧಾನಿಧಿ

ಮನಸ್ಸೆಂಬುವ ಒಂದನ್ನು ಚೆನ್ನಾಗಿ ಅಡಗಿಸಲು ಯಾವನು ಸಮರ್ಥನಲ್ಲವೋ ಅವನು ಸಮುದ್ರದಿಂದ ಸುತ್ತುವರಿಯಲ್ಪಟ್ಟ (ಸಮಸ್ತ) ಭೂಮಿಯನ್ನು ಹೇಗೆ ಗೆಲ್ಲುತ್ತಾನೆ?

**ಏಕಾಕೀ ನಿಸ್ಪೃಹಃ ಶಾಂತಃ ಪಾಣಿಪಾತ್ರೋ ದಿಗಂಬರಃ ।**
**ಕದಾ ಶಂಭೋ ಭವಿಷ್ಯಾಮಿ ಕರ್ಮನಿರ್ಮೂಲನಕ್ಷಮಃ ॥ ೩೧**

- ವೈರಾಗ್ಯ ಶತಕ,-೭೦

ಹೇ ಸ್ವಾಮಿ, ಒಬ್ಬೊಂಟಿಗನಾಗಿ, ಆಸೆಗಳನ್ನೆಲ್ಲಾ ತೊರೆದವನಾಗಿ, ಕೈಯನ್ನೇ ಪಾತ್ರೆಯಾಗಿಟ್ಟುಕೊಂಡು ದಿಗಂಬರನಾಗಿ, ಎಲ್ಲ ಕರ್ಮಗಳನ್ನೂ ನಿರ್ಮೂಲಮಾಡುವ ಶಕ್ತಿಯನ್ನು ಎಂದಿಗೆ ನಾನು ಪಡೆಯುವೆನು?

**ಏತಸ್ಮಾದ್ವಿರಮೇಂದ್ರಿಯಾರ್ಥಗಹನಾದಾಯಾಸದಾದಾಶು ಚ**
**ಶ್ರೇಯೋಮಾರ್ಗಮಶೇಷದುಃಖಶಮನವ್ಯಾಪಾರದಕ್ಷಂ ಕ್ಷಣಂ ।**
**ಶಾಂತಂ ಭಾವಮುಪೈಹಿ ಸಂತ್ಯಜ ನಿಜಾಂ ಕಲ್ಲೋಲಲೋಲಾಂ ಮತಿಂ**
**ಭೂಯೋ ಮಾ ಭಜ ಭಂಗುರಾಂ ಭವರತಿಂ ಚೇತಃ ಪ್ರಸೀದಾಧುನಾ ॥೩೨**

- ವೈರಾಗ್ಯಶತಕ - ೫೭

ಎಲೈ ಮನಸ್ಸೇ, ಈ ಆಯಾಸವನ್ನು ಕೊಡುವ ವಿಷಯಸುಖವೆಂಬ ಕಾಡಿನಿಂದ ನಿವೃತ್ತನಾಗು. ಎಲ್ಲಾ ದುಃಖಗಳನ್ನೂ ಉಪಶಮನ ಮಾಡುವುದರಲ್ಲಿ ಸಮರ್ಥವಾದ ಶಾಂತವಾದ ಶ್ರೇಯಸ್ಸಿನ ದಾರಿಯನ್ನು ಕ್ಷಣಕಾಲ ಹೊಂದು. ಅಲೆಗಳಂತೆ ಚಂಚಲವಾದ ನಿನ್ನ ಬುದ್ಧಿಯನ್ನು ಬಿಡು. ಈಗಲೇ ಪ್ರಸನ್ನತೆಯನ್ನು ಹೊಂದು ; ಮತ್ತೆ ಸಂಸಾರದಲ್ಲಿ ಆಸೆಯನ್ನಿಟ್ಟುಕೊಳ್ಳಬೇಡ.

**ಕಃ ಕಂ ಶಕ್ತೋ ರಕ್ಷಿತುಂ ಮೃತ್ಯು ಕಾಲೇ**
**ರಜ್ಜುಚ್ಛೇದೇ ಕೇ ಘಟಂ ಧಾರಯಂತಿ ।**
**ಏವಂ ಲೋಕಸ್ತುಲ್ಯಧರ್ಮೋ ವನಾನಾಂ**
**ಕಾಲೇ ಕಾಲೇ ಛಿದ್ಯತೇ ರುಹ್ಯತೇ ಚ ॥ ೩೩**

- ಸ್ವಪ್ನವಾಸವದತ್ತ, ೬ ೧೦

ಸಾವು ಬಂದಾಗ ಯಾರು ಯಾರನ್ನೂ ಕಾಪಾಡಲು ಸಾಧ್ಯವಿಲ್ಲ. ಹಗ್ಗವು ತುಂಡಾದಾಗ ಬಾವಿಯಲ್ಲಿ ಮೇಲಕ್ಕೆ ಸೆಳೆಯಲ್ಪಡುತ್ತಿರುವ ಬಿಂದಿಗೆಯನ್ನು ಹಿಡಿಯಲು ಆದೀತೆ ? ಈ ಲೋಕವೂ ಅರಣ್ಯವೂ ಈ ವಿಷಯದಲ್ಲಿ ಸಮಾನ. ಆಯಾ ಕಾಲದಲ್ಲಿ ಸಾವು ಜನನವೂ ಆಗುತ್ತಿರುತ್ತದೆ. ಕಾಡಿನಲ್ಲಿ ದೊಡ್ಡ ಮರಗಳನ್ನು ಕಡಿಯುತ್ತಾರೆ. ಚಿಗುರು ಬೆಳೆಯುತ್ತದೆ.

**ಕಃ ಕೇನ ಹನ್ಯತೇ ಜಂತುರ್ಜಂತುಃ ಕಃ ಕೇನ ರಕ್ಷ್ಯತೇ ।**
**ಹಂತಿ ರಕ್ಷತಿ ಚೈವಾತ್ಮಾ ಹ್ಯಸತ್ಸಾಧು ಸಮಾಚರನ್ ॥ ೩೪**

- ವಿಷ್ಣುಪುರಾಣ, ೧-೧೮-೩೧

ಯಾವ ಪ್ರಾಣಿಯೂ ಬೇರೆ ಪ್ರಾಣಿಯನ್ನು ಕೊಲ್ಲಲಾರದು, ರಕ್ಷಿಸಲೂ ಆರದು. ತಾನು ಮಾಡಿದ ಒಳ್ಳೆಯ ಮತ್ತು ಕೆಟ್ಟ ಕಾರ್ಯಗಳೇ ನಮ್ಮನ್ನು ರಕ್ಷಿಸುತ್ತವೆ ಮತ್ತು ಕೊಲ್ಲುತ್ತವೆ.

**ಕದಾಚಿತ್ ಪ್ರಾಸಾದೇ ಕ್ವಚಿದಪಿ ಚ ಸೌಧೇಷು ಧನಿನಾಂ**
**ಕದಾಚಿತ್ ಶೈಲೇಷು ಕ್ವಚಿದಪಿ ಚ ಕೂಲೇಷು ಸರಿತಾಂ ।**
**ಕುಟೀರೇ ದಾಂತಾನಾಂ ಮುನಿಜನವರಾಣಾಮಪಿ ವಸನ್**
**ಮುನಿರ್ನ ವ್ಯಾಮೋಹಂ ಭಜತಿ ಗುರುದೀಕ್ಷಾಕ್ಷತತಮಾಃ ॥ ೩೫**

- ಜೀವನ್ಮುಕ್ತಾನಂದಲಹರೀ - ೩

ಒಮ್ಮೆ ಅರಮನೆಯಲ್ಲಿ, ಇನ್ನೊಮ್ಮೆ ಧನಿಕರ ಸೌಧಗಳಲ್ಲಿ, ಮತ್ತೊಮ್ಮೆ ಪರ್ವತದಲ್ಲಿ, ಮಗದೊಮ್ಮೆ ನದೀತೀರಗಳಲ್ಲಿ, ಇನ್ನೊಮ್ಮೆ ಜಿತೇಂದ್ರಿಯರಾದ ಮುನಿಶ್ರೇಷ್ಠರ ಕುಟೀರಗಳಲ್ಲಿ ವಾಸಮಾಡುತ್ತಿದ್ದರೂ ಗುರುವಿನಿಂದ ಉಪದೇಶವನ್ನು ಪಡೆದು ಅಜ್ಞಾನವನ್ನು ಹೋಗಲಾಡಿಸಿಕೊಂಡಿರುವ ಮುನಿಯು ವ್ಯಾಮೋಹವನ್ನು ಹೊಂದುವುದಿಲ್ಲ.

**ಕ್ವ ಶರೀರಮಶೇಷಾಣಾಂ ಶ್ಲೇಷ್ಮಾದೀನಾಂ ಮಹಾಚಯಃ ।**
**ಕ್ವ ಕಾಂತಿಶೋಭಾಸೌಂದರ್ಯರಮಣೀಯಾದಯೋ ಗುಣಾಃ ॥೩೬**

- ವಿಷ್ಣುಪುರಾಣ, ೧-೧೭-೬೨

ಶ್ಲೇಷ್ಮ ಮೊದಲಾದ ಎಲ್ಲಾ ಬಗೆಯ ಕೊಳೆಯಿಂದ ತುಂಬಿದ ಶರೀರಕ್ಕೂ ಕಾಂತಿ, ಶೋಭೆ, ಸೌಂದರ್ಯ, ರಮಣೀಯತೆ ಮೊದಲಾದ ಗುಣಗಳಿಗೂ ಒಂದಕ್ಕೊಂದು ಸಂಬಂಧವೇ ಇಲ್ಲ.

**ಕ್ಷಮಾ ಧನುಃ ಕರೇ ಯಸ್ಯ ದುರ್ಜನಃ ಕಿಂ ಕರಿಷ್ಯತಿ ।**
**ಅತೃಣೇ ಪತಿತೋ ವಹ್ನಿಃ ಸ್ವಯಮೇವೋಪಶಾಮ್ಯತಿ ॥ ೩೭**

- ಸಮಯೋಚಿತಪದ್ಯಮಾಲಿಕಾ

ತಾಳ್ಮೆಯೆಂಬ ಧನುಸ್ಸು ಯಾರ ಕೈಯಲ್ಲಿರುವುದೋ ಅವನನ್ನು ದುರ್ಜನನು ಏನು ಮಾಡಿಯಾನು ? ಹುಲ್ಲು ಇಲ್ಲದ ಸ್ಥಳದಲ್ಲಿ ಬಿದ್ದ ಬೆಂಕಿ ತಾನೇ ಆರಿಹೋಗುತ್ತದೆ.

**ಕಾಮಂ ಕ್ರೋಧಂ ಮೋಹಂ ಲೋಭಂ**
**ತ್ಯಕ್ತ್ವಾತ್ಮಾನಂ ಭಾವಯ ಕೋಽಹಂ ।**
**ಆತ್ಮಜ್ಞಾನವಿಹೀನಾ ಮೂಢಾ -**
**ಸ್ತೇ ಪಚ್ಯಂತೇ ನರಕನಿಗೂಢಾಃ ॥ ೩೮**

- ಭಜಗೋವಿಂದಸ್ತೋತ್ರ

**ಏಕಾಕೀ ನಿಸ್ಪೃಹಃ ಶಾಂತಃ ಪಾಣಿಪಾತ್ರೋ ದಿಗಂಬರಃ ।**
**ಕದಾ ಶಂಭೋ ಭವಿಷ್ಯಾಮಿ ಕರ್ಮನಿರ್ಮೂಲನಕ್ಷಮಃ ॥ ೩೧**

- ವೈರಾಗ್ಯ ಶತಕ,-೭೦

ಹೇ ಸ್ವಾಮಿ, ಒಬ್ಬೊಂಟಿಗನಾಗಿ, ಆಸೆಗಳನ್ನೆಲ್ಲಾ ತೊರೆದವನಾಗಿ, ಕೈಯನ್ನೇ ಪಾತ್ರೆಯಾಗಿಟ್ಟುಕೊಂಡು ದಿಗಂಬರನಾಗಿ, ಎಲ್ಲ ಕರ್ಮಗಳನ್ನೂ ನಿರ್ಮೂಲಮಾಡುವ ಶಕ್ತಿಯನ್ನು ಎಂದಿಗೆ ನಾನು ಪಡೆಯುವೆನು?

**ಏತಸ್ಮಾದ್ವಿರಮೇಂದ್ರಿಯಾರ್ಥಗಹನಾದಾಯಾಸದಾದಾಶು ಚ**
**ಶ್ರೇಯೋಮಾರ್ಗಮಶೇಷದುಃಖಶಮನವ್ಯಾಪಾರದಕ್ಷಂ ಕ್ಷಣಂ ।**
**ಶಾಂತಂ ಭಾವಮುಪೈಹಿ ಸಂತ್ಯಜ ನಿಜಾಂ ಕಲ್ಲೋಲಲೋಲಾಂ ಮತಿಂ**
**ಭೂಯೋ ಮಾ ಭಜ ಭಂಗುರಾಂ ಭವರತಿಂ ಚೇತಃ ಪ್ರಸೀದಾಧುನಾ ॥೩೨**

- ವೈರಾಗ್ಯಶತಕ - ೫೭

ಎಲೈ ಮನಸ್ಸೇ, ಈ ಆಯಾಸವನ್ನು ಕೊಡುವ ವಿಷಯಸುಖವೆಂಬ ಕಾಡಿನಿಂದ ನಿವೃತ್ತನಾಗು. ಎಲ್ಲಾ ದುಃಖಗಳನ್ನೂ ಉಪಶಮನ ಮಾಡುವುದರಲ್ಲಿ ಸಮರ್ಥವಾದ ಶಾಂತವಾದ ಶ್ರೇಯಸ್ಸಿನ ದಾರಿಯನ್ನು ಕ್ಷಣಕಾಲ ಹೊಂದು. ಅಲೆಗಳಂತೆ ಚಂಚಲವಾದ ನಿನ್ನ ಬುದ್ಧಿಯನ್ನು ಬಿಡು. ಈಗಲೇ ಪ್ರಸನ್ನತೆಯನ್ನು ಹೊಂದು ; ಮತ್ತೆ ಸಂಸಾರದಲ್ಲಿ ಆಸೆಯನ್ನಿಟ್ಟುಕೊಳ್ಳಬೇಡ.

**ಕಃ ಕಂ ಶಕ್ತೋ ರಕ್ಷಿತುಂ ಮೃತ್ಯು ಕಾಲೇ**
**ರಜ್ಜುಚ್ಛೇದೇ ಕೇ ಘಟಂ ಧಾರಯಂತಿ ।**
**ಏವಂ ಲೋಕಸ್ತುಲ್ಯಧರ್ಮೋ ವನಾನಾಂ**
**ಕಾಲೇ ಕಾಲೇ ಛಿದ್ಯತೇ ರುಹ್ಯತೇ ಚ ॥ ೩೩**

- ಸ್ವಪ್ನವಾಸವದತ್ತ, ೬ ೧೦

ಸಾವು ಬಂದಾಗ ಯಾರು ಯಾರನ್ನೂ ಕಾಪಾಡಲು ಸಾಧ್ಯವಿಲ್ಲ. ಹಗ್ಗವು ತುಂಡಾದಾಗ ಬಾವಿಯಲ್ಲಿ ಮೇಲಕ್ಕೆ ಸೆಳೆಯಲ್ಪಡುತ್ತಿರುವ ಬಿಂದಿಗೆಯನ್ನು ಹಿಡಿಯಲು ಆದೀತೆ ? ಈ ಲೋಕವೂ ಅರಣ್ಯವೂ ಈ ವಿಷಯದಲ್ಲಿ ಸಮಾನ. ಆಯಾ ಕಾಲದಲ್ಲಿ ಸಾವು ಜನನವೂ ಆಗುತ್ತಿರುತ್ತದೆ. ಕಾಡಿನಲ್ಲಿ ದೊಡ್ಡ ಮರಗಳನ್ನು ಕಡಿಯುತ್ತಾರೆ. ಚಿಗುರು ಬೆಳೆಯುತ್ತದೆ.

**ಕಃ ಕೇನ ಹನ್ಯತೇ ಜಂತುರ್ಜಂತುಃ ಕಃ ಕೇನ ರಕ್ಷ್ಯತೇ ।**
**ಹಂತಿ ರಕ್ಷತಿ ಚೈವಾತ್ಮಾ ಹ್ಯಸತ್ಸಾಧು ಸಮಾಚರನ್ ॥ ೩೪**

- ವಿಷ್ಣುಪುರಾಣ, ೧-೧೮-೩೧

ಯಾವ ಪ್ರಾಣಿಯೂ ಬೇರೆ ಪ್ರಾಣಿಯನ್ನು ಕೊಲ್ಲಲಾರದು, ರಕ್ಷಿಸಲೂ ಆರದು. ತಾನು ಮಾಡಿದ ಒಳ್ಳೆಯ ಮತ್ತು ಕೆಟ್ಟ ಕಾರ್ಯಗಳೇ ನಮ್ಮನ್ನು ರಕ್ಷಿಸುತ್ತವೆ ಮತ್ತು ಕೊಲ್ಲುತ್ತವೆ.

**ಕದಾಚಿತ್ ಪ್ರಾಸಾದೇ ಕ್ವಚಿದಪಿ ಚ ಸೌಧೇಷು ಧನಿನಾಂ**
**ಕದಾಚಿತ್ ಶೈಲೇಷು ಕ್ವಚಿದಪಿ ಚ ಕೂಲೇಷು ಸರಿತಾಂ ।**
**ಕುಟೀರೇ ದಾಂತಾನಾಂ ಮುನಿಜನವರಾಣಾಮಪಿ ವಸನ್**
**ಮುನಿರ್ನ ವ್ಯಾಮೋಹಂ ಭಜತಿ ಗುರುದೀಕ್ಷಾಕ್ಷತತಮಾಃ ॥ ೩೫**

- ಜೀವನ್ಮುಕ್ತಾನಂದಲಹರೀ - ೩

ಒಮ್ಮೆ ಅರಮನೆಯಲ್ಲಿ, ಇನ್ನೊಮ್ಮೆ ಧನಿಕರ ಸೌಧಗಳಲ್ಲಿ, ಮತ್ತೊಮ್ಮೆ ಪರ್ವತದಲ್ಲಿ, ಮಗದೊಮ್ಮೆ ನದೀತೀರಗಳಲ್ಲಿ, ಇನ್ನೊಮ್ಮೆ ಜಿತೇಂದ್ರಿಯರಾದ ಮುನಿಶ್ರೇಷ್ಠರ ಕುಟೀರಗಳಲ್ಲಿ ವಾಸಮಾಡುತ್ತಿದ್ದರೂ ಗುರುವಿನಿಂದ ಉಪದೇಶವನ್ನು ಪಡೆದು ಅಜ್ಞಾನವನ್ನು ಹೋಗಲಾಡಿಸಿಕೊಂಡಿರುವ ಮುನಿಯು ವ್ಯಾಮೋಹವನ್ನು ಹೊಂದುವುದಿಲ್ಲ.

**ಕ್ವ ಶರೀರಮಶೇಷಾಣಾಂ ಶ್ಲೇಷ್ಮಾದೀನಾಂ ಮಹಾಚಯಃ ।**
**ಕ್ವ ಕಾಂತಿಶೋಭಾಸೌಂದರ್ಯರಮಣೀಯಾದಯೋ ಗುಣಾಃ ॥೩೬**

- ವಿಷ್ಣುಪುರಾಣ, ೧-೧೭-೬೨

ಶ್ಲೇಷ್ಮ ಮೊದಲಾದ ಎಲ್ಲಾ ಬಗೆಯ ಕೊಳೆಯಿಂದ ತುಂಬಿದ ಶರೀರಕ್ಕೂ ಕಾಂತಿ, ಶೋಭೆ, ಸೌಂದರ್ಯ, ರಮಣೀಯತೆ ಮೊದಲಾದ ಗುಣಗಳಿಗೂ ಒಂದಕ್ಕೊಂದು ಸಂಬಂಧವೇ ಇಲ್ಲ.

**ಕ್ಷಮಾ ಧನುಃ ಕರೇ ಯಸ್ಯ ದುರ್ಜನಃ ಕಿಂ ಕರಿಷ್ಯತಿ ।**
**ಅತೃಣೇ ಪತಿತೋ ವಹ್ನಿಃ ಸ್ವಯಮೇವೋಪಶಾಮ್ಯತಿ ॥ ೩೭**

- ಸಮಯೋಚಿತಪದ್ಯಮಾಲಿಕಾ

ತಾಳ್ಮೆಯೆಂಬ ಧನುಸ್ಸು ಯಾರ ಕೈಯಲ್ಲಿರುವುದೋ ಅವನನ್ನು ದುರ್ಜನನು ಏನು ಮಾಡಿಯಾನು ? ಹುಲ್ಲು ಇಲ್ಲದ ಸ್ಥಳದಲ್ಲಿ ಬಿದ್ದ ಬೆಂಕಿ ತಾನೇ ಆರಿಹೋಗುತ್ತದೆ.

**ಕಾಮಂ ಕ್ರೋಧಂ ಮೋಹಂ ಲೋಭಂ**
**ತ್ಯಕ್ತ್ವಾತ್ಮಾನಂ ಭಾವಯ ಕೋಽಹಂ ।**
**ಆತ್ಮಜ್ಞಾನವಿಹೀನಾ ಮೂಢಾ -**
**ಸ್ತೇ ಪಚ್ಯಂತೇ ನರಕನಿಗೂಢಾಃ ॥ ೩೮**

- ಭಜಗೋವಿಂದಸ್ತೋತ್ರ

ಕಾಮ, ಕ್ರೋಧ, ಮೋಹ, ಲೋಭಗಳನ್ನು ತೊರೆದು 'ನಾನು ಯಾರು?' ಎಂದು ನಿನ್ನನ್ನು ವಿಚಾರ ಮಾಡು. ಆತ್ಮಜ್ಞಾನವಿಲ್ಲದ ಮೂಢರು ನರಕದಲ್ಲಿ ಬಿದ್ದು ನರಳುತ್ತಾರೆ.

**ಕಾಯಃ ಸನ್ನಿಹಿತಾಪಾಯಃ ಸಂಪದಃ ಕ್ಷಣಭಂಗುರಾಃ ।**
**ಸಮಾಗಮಾಃ ಸಾಪಗಮಾಃ ಸರ್ವೇಷಾಮೇವ ದೇಹಿನಾಮ್ ॥ ೩೯**

- ಪಂಚತಂತ್ರ, ಮಿತ್ರಸಂಪ್ರಾಪ್ತಿ - ೧೯೧

ಶರೀರಕ್ಕೆ ಅಪಾಯ ಎಂದೂ ಹತ್ತಿರದಲ್ಲೇ ಇದೆ ; ಐಶ್ವರ್ಯಗಳೆಲ್ಲಾ ಕ್ಷಣಕಾಲವಿದ್ದು ನಾಶವಾಗತಕ್ಕವು ; ಜೀವಿಗಳಿಗೆಲ್ಲಾ ಉಂಟಾಗುವ ಸಮಾಗಮಗಳಿಗೆ ಅಗಲಿಕೆಗಳಿದ್ದೇ ಇವೆ.

**ಕಿಂ ಕಂದಾಃ ಕಂದರೇಭ್ಯಃ ಪ್ರಳಯಮುಪಗತಾ ನಿರ್ಝರಾ ವಾ ಗಿರಿಭ್ಯಃ**
**ಪ್ರಧ್ವಸ್ತಾ ವಾ ತರುಭ್ಯಃ ಸರಸಫಲಭೃತೋ ವಲ್ಕಲಿನ್ಯಶ್ಚ ಶಾಖಾಃ ।**
**ವೀಕ್ಷ್ಯಂತೇ ಯನ್ಮುಖಾನಿ ಪ್ರಸಭಮುಪಗತಪ್ರಶ್ರಯಾಣಾಂ ಖಲಾನಾಂ**
**ದುಃಖೋಪಾತ್ತಾಲ್ಪವಿತ್ತಸ್ಮಯವಶಪವನಾನರ್ತಿತಭ್ರೂಲತಾನಿ ॥ ೪೦**

- ವೈರಾಗ್ಯಶತಕ, - ೬೭

ಬೆಟ್ಟಗಳ ಕಣಿವೆಗಳಲ್ಲಿ ಗೆಡ್ಡೆ ಗೆಣಸುಗಳು ಹಾಳಾದುವೇನು ; ಬೆಟ್ಟಗಳಲ್ಲಿ ಬರುವ ಪ್ರವಾಹಗಳು ಹಾಳಾದುವೇನು ; ಅಥವಾ ಮರಗಳಲ್ಲಿದ್ದ ರಸಭರಿತವಾದ ಹಣ್ಣುಗಳೂ ಬಟ್ಟೆಗೆ ಬರುವ ನಾರೂ ಹಾಳಾದುವೇ ? ಏನೋ ಸ್ವಲ್ಪ ಹಣವಿದೆಯೆಂದು ಬೀಗುತ್ತ ಗರ್ವದಿಂದ ಹುಬ್ಬು ಕುಣಿಸುತ್ತಿರುವ, ವಿನಯರಹಿತರಾದ ಖೂಳರ ಮುಖಗಳನ್ನು ಜನರು ನೋಡುತ್ತ ಇರುವರಲ್ಲ !

**ಕಿಂ ತೀರ್ಥಂ ? ಹರಿಪಾದಪದ್ಮಭಜನಂ, ಕಿಂ ರತ್ನಂ ? ಅಚ್ಛಾ ಮತಿಃ ।**
**ಕಿಂ ಶಾಸ್ತ್ರಂ ? ಶ್ರವಣೇನ ಯಸ್ಯ ಗಲತಿ ದ್ವೈತಾಂಧಕಾರೋದಯಃ ।**
**ಕಿಂ ಮಿತ್ರಂ ? ಸತತೋಪಕಾರರಸಿಕಂ ತತ್ತ್ವಾವಬೋಧಃ ಸಖೇ ।**
**ಕಃ ಶತ್ರುರ್ವದ ಖೇದದಾನಕುಶಲೋ ದುರ್ವಾಸನಾನಾಂ ಚಯಃ ॥ ೪೧**

- ಭಾಮಿನೀವಿಲಾಸ, ೧-೮೧

ಯಾವುದು ಪುಣ್ಯವನ್ನು ಕೊಡುತ್ತದೆ ? ವಿಷ್ಣುವಿನ ತಾವರೆಯಂತಹ ಪಾದಗಳನ್ನು ಸೇವೆ ಮಾಡುವುದು. ಶ್ರೇಷ್ಠವಾದ ವಸ್ತು ಯಾವುದು ? ಶುದ್ಧವಾದ ಮನಸ್ಸು. ಶಾಸ್ತ್ರವು ಯಾವುದು ? ಕೇಳುವುದರಿಂದ ದ್ವೈತವೆಂಬ ಕತ್ತಲೆಯು ಹೋಗುತ್ತದೆಯೋ ಅದು. ಗೆಳೆಯನಾರು ? ಯಾವಾಗಲೂ ಉಪಕಾರ ಮಾಡುವವನು ಮತ್ತು ಸತ್ಯದ ಅರಿವು. ಶತ್ರುವು ಯಾರು ? ಯಾವಾಗಲೂ ನೋವನ್ನುಂಟುಮಾಡುವ ಕೆಟ್ಟ ಅಭ್ಯಾಸಗಳು.

ಕಿಂ ವೇದೈಃ ಸ್ಮೃತಿಭಿಃ ಪುರಾಣಪಠನೈಃ ಶಾಸ್ತ್ರೈರ್ಮಹಾವಿಸ್ತರೈಃ
ಸ್ವರ್ಗಗ್ರಾಮಕುಟೀನಿವಾಸಫಲದೈಃ ಕರ್ಮಕ್ರಿಯಾವಿಭ್ರಮೈಃ ।
ಮುಕ್ತ್ವೈಕಂ ಭವಬಂಧದುಃಖರಚನಾವಿಧ್ವಂಸಕಾಲಾನಲಂ
ಸ್ವಾತ್ಮಾನಂದಪದಪ್ರವೇಶಕಲನಂ ಶೇಷಾ ವಣಿಗ್ವೃತ್ತಯಃ ॥ ೪೨

- ವೈರಾಗ್ಯ ಶತಕ-೭೯

ವೇದಗಳನ್ನು, ಪುರಾಣಗಳನ್ನು, ಶಾಸ್ತ್ರಗಳನ್ನು ಓದುವುದರಿಂದ ಏನು? ಯಾವ ಕರ್ಮಗಳನ್ನು ಮಾಡುವುದರಿಂದ ಸ್ವರ್ಗದ ಹಳ್ಳಿಯ ಒಂದು ಗುಡಿಸಲಿನ ವಾಸ ಲಭಿಸುತ್ತದೆಯೋ ಅವುಗಳಿಂದೇನು ಪ್ರಯೋಜನ ? ಯಾವುದು ಸಂಸಾರಬಂಧನದ ದುಃಖ ನಿರ್ಮೂಲನ ಮಾಡಿ ಆತ್ಮಾನಂದವನ್ನುಂಟುಮಾಡುವುದೋ ಅದನ್ನೇ ಅವಲಂಬಿಸಬೇಕು. ಉಳಿದವಗಳು ವ್ಯಾಪಾರ ಮನೋಭಾವದ ವೃತ್ತಿಗಳು.

ಕುತ್ರ ವಿಷಂ ದುಷ್ಟಜನೇ
ಕಿಮಿಹಾಶೌಚಂ ಭವೇದೃಣಂ ನೃಣಾಂ ।
ಕಿಮಭಯಮಿಹ ವೈರಾಗ್ಯಂ
ಭಯಮಪಿ ಕಿಂ ವಿತ್ತಮೇವ ಸರ್ವೇಷಾಂ ॥ ೪೩

- ಪ್ರಶ್ನೋತ್ತರ ರತ್ನಮಾಲಿಕಾ

ವಿಷ ಎಲ್ಲಿರುವುದು ? ದುಷ್ಟರಲ್ಲಿ. ಮನುಷ್ಯರಿಗೆ ಅಶೌಚ ಯಾವುದು ? ಸಾಲ. ನಿರ್ಭಯವಾದ ವಸ್ತು ಯಾವುದು ? ವೈರಾಗ್ಯ. ಭಯಕ್ಕೆ ಕಾರಣ ಯಾವುದು ? ಎಲ್ಲರಿಗೂ ಹಣವೇ ಕಾರಣ.

ಕ್ರುದ್ಧಃ ಪಾಪಂ ನ ಕುರ್ಯಾತ್ ಕಃ ಕ್ರುದ್ಧೋ ಹನ್ಯಾದ್ಗುರೂನಪಿ ।
ಕ್ರುದ್ಧಃ ಪರುಷಯಾ ವಾಚಾ ನರಃ ಸಾಧೂನಧಿಕ್ಷಿಪೇತ್ ? ೪೪

- ರಾಮಾಯಣ, ಸುಂದರ. ೫೫-೫

ಕೋಪಬಂದಾಗ ಪಾಪಕೃತ್ಯವನ್ನು ಮಾಡದವನಾರು ? ಕೋಪಬಂದವನು ಹಿರಿಯರನ್ನೂ ಕೊಂದಾನು. ಸಜ್ಜನರನ್ನೂ ಸಹ ಕೆಟ್ಟ ಮಾತುಗಳಿಂದ ನಿಂದಿಸಿಯಾನು.

ಕುಮುದಾನ್ಯೇವ ಶಶಾಂಕಃ ಸವಿತಾ ಬೋಧಯತಿ ಪಂಕಜಾನ್ಯೇವ
ವಶಿನಾಂ ಹಿ ಪರಪರಿಗ್ರಹಸಂಶ್ಲೇಷಪರಾಙ್ಮುಖೀ ವೃತ್ತಿಃ ॥ ೪೫

- ಅಭಿಜ್ಞಾನಶಾಂಕುತಲ, ೫-೨೮

ಚಂದ್ರನು ಕನ್ನೈದಿಲೆಗಳನ್ನೇ ಅರಳಿಸುತ್ತಾನೆ. ಸೂರ್ಯನು ತಾವರೆಗಳನ್ನೇ

ಅರಳಿಸುತ್ತಾನೆ. ಶಿಸ್ತಿನಿಂದ ಕೂಡಿದ ಜಿತೇಂದ್ರಿಯರು ಪರಸ್ತ್ರೀಯರ ವಿಷಯದಲ್ಲಿ ಉದಾಸೀನರಾಗಿರುತ್ತಾರೆ.

**ಕುಲಕ್ಷಯೇ ಪ್ರಣಶ್ಯಂತಿ ಕುಲಧರ್ಮಾಃ ಸನಾನತನಾಃ ।**
**ಧರ್ಮೇ ನಷ್ಟೇ ಕುಲಂ ಕೃತ್ಸ್ನಮಧರ್ಮೋಽಭಿಭವತ್ಯುತ ॥ ४६**

- ಭಗವದ್ಗೀತಾ, ೧-೪೦

ಕುಲಕ್ಷಯವಾದರೆ ಸನಾತನವಾದ ಕುಲಧರ್ಮಗಳು ನಷ್ಟವಾಗುತ್ತವೆ. ಕುಲ ಧರ್ಮವು ನಷ್ಟವಾದರೆ ಅಂಥ ಕುಲವೆಲ್ಲವನ್ನೂ ಅಧರ್ಮವು ಆಕ್ರಮಿಸಿ ಮನೆಮಾಡಿಕೊಳ್ಳುತ್ತದೆ.

**ಕೇಶಾವಧಿ ನಖರಾಗ್ರಾದಿದಮಂತಃ ಪೂತಿಗಂಧಸಂಪೂರ್ಣಂ ।**
**ಬಹಿರಪಿ, ಜಾನನ್ ಚಂದನಕರ್ಪೂರಾದ್ಯೈರ್ವಿಲೇಪಯತಿ ॥ ೪೭**

- ಪ್ರಬೋಧಸುಧಾಕರ - ೨೨

ತಲೆಕೂದಲಿಂದ ಉಗುರಿನವರೆಗೆ ದೇಹವು ಒಳಗಡೆ ದುರ್ಗಂಧದಿಂದ ತುಂಬಿದೆ. ಹೊರಗಡೆಯೂ ಅಷ್ಟೆ. ಇದು ಗೊತ್ತಿದ್ದರೂ ಚಂದನ ಕರ್ಪೂರ ಮೊದಲಾದುವುಗಳಿಂದ ಹೊರಗಡೆ ಲೇಪನ ಮಾಡಿಕೊಳ್ಳುತ್ತಾನೆ !

**ಕ್ರೋಡೀಕರೋತಿ ಪ್ರಥಮಂ ಜಾತಂ ನಿತ್ಯಮನಿತ್ಯತಾ ।**
**ಧಾತ್ರೀವ ಜನನೀ ಪಶ್ಚಾತ್ತದಾ ಶೋಕಸ್ಯ ಕಃ ಕ್ರಮಃ ॥ ೪೮**

- ನಾಗಾನಂದ, ೪-೮

ಹುಟ್ಟಿದೊಡನೆಯೇ ಮೊದಲು ಅನಿತ್ಯತೆಯು ದಾದಿಯಂತೆ ಮಗುವನ್ನಪ್ಪುತ್ತದೆ. ಆಮೇಲೆ ತಾಯಿ. ಹೀಗಿರಲು ಶೋಕಿಸುವುದು ಏಕೆ ?

**ಗರ್ಭೇ ವ್ಯಾಧೌ ಶ್ಮಶಾನೇ ಚ ಪುರಾಣೇ ಯಾ ಮತಿರ್ಭವೇತ್ ।**
**ಸಾ ಯದಿ ಸ್ಥಿರತಾಂ ಯಾತಿ ಕೋ ನ ಮುಚ್ಯೇತ ಬಂಧನಾತ್ ॥ ೪೯**

- ಗರುಡಪುರಾಣ, ೬-೨೫

ಗರ್ಭದಲ್ಲಿರುವಾಗ ರೋಗಾವಸ್ಥೆಯಲ್ಲಿ, ಶ್ಮಶಾನದಲ್ಲಿ, ಪುರಾಣ ಕೇಳುವಾಗ ಯಾವ ಶುದ್ಧ ಭಾವನೆಗಳು ಬರುತ್ತವೆಯೋ, ಅವುಗಳೇ ಯಾವಾಗಲೂ ಇದ್ದರೆ ಎಲ್ಲರೂ ಮೋಕ್ಷ ಪಡೆಯಬಹುದಾಗಿತ್ತು.

**ಗಾತ್ರೇಷು ವಲಯಃ ಪ್ರಾಪ್ತಾಃ ಶ್ವೇತಾಶ್ಚೈವ ಶಿರೋರುಹಾಃ ।**
**ಜರಯಾ ಪುರುಷೋ ಜೀರ್ಣಃ ಕಿಂ ಹಿ ಕೃತ್ವಾ ಪ್ರಭಾವಯೇತ್ ॥ ೫೦**

- ರಾಮಾಯಣ, ಅಯೋಧ್ಯಾ. ೧೦೫-೨೩

ಅವಯವಗಳು ಸುಕ್ಕುಗಟ್ಟುತ್ತವೆ. ಕೂದಲು ಬೆಳ್ಳಗಾಗುತ್ತದೆ. ಮುಪ್ಪಿನಿಂದ ಮನುಷ್ಯನು ಜೀರ್ಣನಾಗುತ್ತಾನೆ. ಅದನ್ನು ತಡೆಯಲು ಯಾವ ಪ್ರಭಾವ ಅಲ್ಲಿ ನಡೆದೀತು?

**ಗಿರೀಂದ್ರಶಿಖರಾಕಾರೋ ಲೀಲಯೋನ್ಮೂಲಿತದ್ರುಮಃ ।**
**ಕರಿಣೀಸ್ಪರ್ಶಸಂಮೋಹಾದಾಲಾನಂ ಯಾತಿ ವಾರಣಃ ॥ ೫೧**

- ಸುಭಾಷಿತಸುಧಾನಿಧಿ

ಪರ್ವತಶಿಖರದಂತೆ ಆಕಾರವುಳ್ಳ, ವಿನೋದದಲ್ಲಿ ಹೆಮ್ಮರವನ್ನು ಬುಡಸಹಿತ ಕಿತ್ತು ಹಾಕುವ ಮದ್ದಾನೆಯು, ಹೆಣ್ಣಾನೆಯ ಸ್ಪರ್ಶಕ್ಕೆ ಮನಸೋತು ಕಂಭದಲ್ಲಿ ಬಂಧನಕ್ಕೊಳಗಾಗುತ್ತದೆ.

**ಚಲಂತಿ ಗಿರಿಯಃ ಕಾಮಂ ಯುಗಾಂತಪವನಾಹತಾಃ ।**
**ಕೃಚ್ಛ್ರೇಽಪಿ ನ ಚಲತ್ಯೇವ ಧೀರಣಾಂ ನಿಶ್ಚಲಂ ಮನಃ ॥ ೫೨**

- ಚಂಡಕೌಶಿಕ, ೪-೩೪

ಪ್ರಳಯಮಾರುತಗಳು ಬೀಸಿ ಬಡಿದಾಗ ಬೆಟ್ಟಗಳೂ ಅಲ್ಲಾಡಿಹೋಗುತ್ತವೆ. ಆದರೆ ಎಂತಹ ಕಷ್ಟದಲ್ಲಿಯೂ ಧೀರರ ನಿಶ್ಚಲವಾದ ಮನಸ್ಸು ಅಲ್ಲಾಡುವುದಿಲ್ಲ.

**ಚಾಂಡಾಲಃ ಕಿಮಯಂ ದ್ವಿಜಾತಿರಥವಾ ಶೂದ್ರೋಽಥ ಕಿಂ ತಾಪಸಃ**
**ಕಿಂ ವಾ ತತ್ತ್ವವಿವೇಕಪೇಶಲಮತಿರ್ಯೋಗೀಶ್ವರಃ ಕೋಽಪಿ ಕಿಂ ।**
**ಇತ್ಯುತ್ಪನ್ನ ವಿಕಲ್ಪ ಜಲ್ಪ ಮುಖರೈಃ ಸಂಭಾಷ್ಯಮಾಣಾ ಜನೈ -**
**ರ್ನ ಕ್ರುದ್ಧಾಃ ಪಥಿ ನೈವ ತುಷ್ಟಮನಸೋ ಯಾಂತಿ ಸ್ವಯಂ ಯೋಗಿನಃ ॥೫೩**

- ವೈರಾಗ್ಯಶತಕ - ೫೬

ಇವನು ಚಂಡಾಲನೇ, ಬ್ರಾಹ್ಮಣನೇ, ಶೂದ್ರನೇ, ತಪಸ್ವಿಯೇ, ಅಥವಾ ತತ್ತ್ವ ವಿಚಾರಗಳಲ್ಲಿ ನಿಪುಣನಾದ ಯೋಗೀಶ್ವರನೇ, ಈರೀತಿಯಾಗಿ ಜನರಿಂದ ವಿಚಿತ್ರವಾದ ಮಾತುಗಳಿಂದ ಸಂಭಾಷಿಸಲ್ಪಡುತ್ತಿದರೂ, ನಿಜವಾದ ಯೋಗಿಗಳು ಕೋಪಗೊಳ್ಳದೆಯೂ, ಸಂತೋಷಪಡದೆಯೂ ನಿರ್ವಿಕಾರಭಾವನೆಯಿಂದ ದಾರಿಯಲ್ಲಿ ಹೋಗುತ್ತಾರೆ.

**ಚೀರಾಣಿ ಕಿಂ ಪಥಿ ನ ಸಂತಿ ದಿಶಂತಿ ಭಿಕ್ಷಾಂ**
**ನೈವಾಂಘ್ರಿಪಾಃ ಪರಭೃತಃ ಸರಿತೋಽಪ್ಯಶುಷ್ಯನ್ ।**
**ರುದ್ಧಾ ಗುಹಾಃ ಕಿಮಜಿತೋಽವತಿ ನೋಪಸನ್ನಾನ್**
**ಕಸ್ಮಾದ್ ಭಜಂತಿ ಕವಯೋ ಧನದುರ್ಮದಾಂಧಾನ್ ॥ ೫೪**

- ಭಾಗವತ, ೨-೨-೫

ಹರಕುಬಟ್ಟೆಗಳು ದಾರಿಯಲ್ಲಿ ಬಿದ್ದಿರುವುದಿಲ್ಲವೇನು ? ಮರಗಳು ಭಿಕ್ಷೆಯನ್ನು ನೀಡುವುದಿಲ್ಲವೇ ? ಒಳ್ಳೆಯದನ್ನು ಮಾಡುವ ನದಿಗಳು ಒಣಗಿಹೋಗಿವೆಯೇನು? ಗುಹೆಗಳು ಮುಚ್ಚಲ್ಪಟ್ಟಿವೆಯೇನು ? ಮರೆಹೊಕ್ಕವರನ್ನು ಪರಮಾತ್ಮನು ಕಾಪಾಡುವುದಿಲ್ಲವೇನು? ಹೀಗಿರುವಾಗ ವಿದ್ವಾಂಸರು ಏತಕ್ಕಾಗಿ ಹಣದಿಂದ ಕೊಬ್ಬಿ ಕುರುಡಾಗಿರುವವರನ್ನು ಆಶ್ರಯಿಸಬೇಕು?

**ಚೇತಶ್ಚಿಂತಯ ಮಾ ರಮಾಂ ಸಕೃದಿಮಾಮಸ್ಥಾಯಿನೀಮಾಸ್ಥಯಾ**
**ಭೂಪಾಲಭ್ರುಕುಟೀಕುಟೀವಿಹರಣವ್ಯಾಪಾರಪಣ್ಯಾಂಗನಾಂ ।**
**ಕಂಥಾಕಂಚುಕಿತಾಃ ಪ್ರವಿಶ್ಯ ಭವನದ್ವಾರಾಣಿ ವಾರಾಣಸೀ**
**ರಥ್ಯಾಪಂಕ್ತಿಷು ಪಾಣಿಪಾತ್ರಪತಿತಾಂ ಭಿಕ್ಷಾಮಪೇಕ್ಷಾಮಹೇ ॥ ೫೫**

- ವೈರಾಗ್ಯಶತಕ - ೬೫

ಎಲೈ ಮನಸ್ಸೇ, ರಾಜರ ಹುಬ್ಬುಗಳಲ್ಲಿ ಚಂಚಲತೆಯಿಂದ ಕುಣಿಯುವ ಅಸ್ಥಿರವಾದ ಈ ಲಕ್ಷ್ಮಿಯನ್ನು ಒಂದು ಸಲವೂ ಚಿಂತಿಸಬೇಡ. ಕಾಶೀಪಟ್ಟಣದ ಬೀದಿಗಳ ಸಾಲುಗಳಲ್ಲಿರುವ ಗೃಹದ್ವಾರಗಳನ್ನು ಚಿಂದಿಬಟ್ಟೆಯನ್ನು ಹೊದ್ದುಕೊಂಡು ಪ್ರವೇಶಿಸಿ, ಕೈಯಲ್ಲಿರುವ ಪಾತ್ರೆಯಲ್ಲಿ ಬಿದ್ದ ಭಿಕ್ಷೆಯನ್ನು ಮಾತ್ರ ನಾವು ಇಚ್ಛಿಸುತ್ತೇವೆ.

**ಜನ್ಮೇದಂ ವಂಧ್ಯತಾಂ ನೀತಂ ಭವಭೋಗೋಪಲಿಪ್ಸಯಾ ।**
**ಕಾಚಮೂಲ್ಯೇನ ವಿಕ್ರೀತೋ ಹಂತ ಚಿಂತಾಮಣಿರ್ಮಯಾ ॥ ೫೬**

- ಶಾಂತಿಶತಕ

ಸಂಸಾರದಲ್ಲಿ ವಿಷಯಭೋಗದ ಬಯಕೆಯಿಂದ ಈ ಜನ್ಮವನ್ನು ವ್ಯರ್ಥ ಮಾಡಿದೆನು. ಅಯ್ಯೋ, ಚಿಂತಾಮಣಿಯನ್ನು ಗಾಜಿನ ಬೆಲೆಗೆ ಮಾರಿಬಿಟ್ಟೆನು.

**ಜ್ಞಾತ್ವಾ ಬುದ್ಬುದಭಂಗುರಂ ಧನಮಿದಂ ದೀಪಪ್ರಕಂಪಂ ವಪುಃ**
**ತಾರುಣ್ಯಂ ತರಲೇಕ್ಷಣಾಕ್ಷಿತರಲಂ ವಿದ್ಯುಚ್ಚಲಂ ದೋರ್ಬಲಂ ।**
**ರೇ ರೇ ಜೀವ ಗುರುಪ್ರಸಾದವಶತಃ ಕಿಂಚಿದ್ವಿಧೇಹಿ ದ್ರುತಂ**
**ದಾನಧ್ಯಾನತಪೋವಿಧಾನವಿಷಯಂ ಪುಣ್ಯಂ ಪವಿತ್ರೋಚಿತಮ್ ॥ ೫೭**

- (ಪದ್ಮನಂದನ) ವೈರಾಗ್ಯಶತಕ

ಐಶ್ವರ್ಯವು ನೀರಿನ ಗುಳ್ಳೆಯಂತೆ ಭಂಗುರ. ದೇಹವು ದೀಪದಂತೆ ಅಸ್ಥಿರ. ತಾರುಣ್ಯವು ಯುವತಿಯ ನೋಟದಂತೆ ಚಂಚಲ. ಭುಜಬಲವು ಮಿಂಚಿನಂತೆ ಕ್ಷಣದಲ್ಲಿ ನಶಿಸತಕ್ಕದ್ದು. ಎಲೈ ಜೀವವೆ, ಗುರುವಿನ ಅನುಗ್ರಹವನ್ನು ಪಡೆದು ಏನಾದರೂ ಪುಣ್ಯ ಕಾರ್ಯವನ್ನು ಬೇಗನೆ ಮಾಡು. ದಾನ, ಧ್ಯಾನ, ತಪಸ್ಸು- ಇತ್ಯಾದಿ ಪವಿತ್ರ ಕಾರ್ಯವನ್ನು ಮಾಡು.

ಜಿತೇಂದ್ರಿಯಸ್ಯ ಯುಕ್ತಸ್ಯ ಜಿತಶ್ವಾಸಸ್ಯ ಯೋಗಿನಃ ।
ಮಯಿ ಧಾರಯತಶ್ಚೇತಃ ಉಪತಿಷ್ಠಂತಿ ಸಿದ್ಧಯಃ ॥ ೫೮

- ಭಾಗವತ, ೧೧-೧೫-೧

ಇಂದ್ರಿಯಗಳನ್ನು ಗೆದ್ದವನಿಗೆ, ಸಮವಾದ ವ್ಯವಹಾರವುಳ್ಳವನಿಗೆ, ಪ್ರಾಣಾಯಾಮ ದಲ್ಲಿ ನಿರತನಾದ ಯೋಗಿಗೆ ಮತ್ತು ನನ್ನಲ್ಲಿ (ಪರಮಾತ್ಮನಲ್ಲಿ) ಮನಸ್ಸನ್ನು ನೆಟ್ಟಿರುವವನಿಗೆ ಸಿದ್ಧಿಗಳುಂಟಾಗುವುವು.

ಜೇಯಂತಾಂ ದುರ್ಜಯಾ ದೇಹೇ ರಿಪವಶ್ಚಕ್ಷುರಾದಯಃ ।
ಜಿತೇಷು ನನು ಲೋಕೋಽಯಂ ತೇಷುಕೃತ್ಸ್ನಸ್ತ್ವಯಾ ಜಿತಃ ॥ ೫೯

- ಕಿರಾತಾರ್ಜುನೀಯ, ೧೧-೩೨

ಶರೀರದಲ್ಲಿರುವ ಶತ್ರುಗಳಾದ ಕಣ್ಣು ಮೊದಲಾದ ಇಂದ್ರಿಯಗಳನ್ನು ಗೆಲ್ಲಬೇಕು. ಇಂದ್ರಿಯಗಳನ್ನು ಗೆದ್ದವನು ಲೋಕವನ್ನೇ ಗೆದ್ದಹಾಗೆ.

ತ್ಯಕ್ತವ್ಯೋ ಮಮಕಾರಸ್ತ್ಯಕ್ತುಂ ಯದಿ ಶಕ್ಯತೇ ನಾಸೌ ।
ಕರ್ತವ್ಯೋ ಮಮಕಾರಃ ಕಿಂ ತು ಸ ಸರ್ವತ್ರ ಕರ್ತವ್ಯಃ ॥ ೬೦

- (ಅಪ್ಪಯ್ಯದೀಕ್ಷಿತರ) ವೈರಾಗ್ಯಶತಕ

ನನ್ನದು ಎಂಬ ಮಮಕಾರವನ್ನ ತ್ಯಜಿಸಬೇಕು. ಒಂದು ವೇಳೆ ಅದನ್ನು ತ್ಯಜಿಸಲು ಸಾಧ್ಯವಾಗದಿದ್ದರೆ ಮಮಕಾರವನ್ನು ಇಡಬಹುದು. ಆದರೆ ಅದನ್ನು ಎಲ್ಲರ ವಿಷಯ ದಲ್ಲಿಯೂ ಇಡಬೇಕು.

ತಜ್ಜ್ಞಾನಂ ಪ್ರಶಮಕರಂ ಯದಿಂದ್ರಿಯಾಣಾಂ
ತಜ್ಜ್ಞೇಯಂ ಯದುಪನಿಷತ್ಸು ನಿಶ್ಚಿತಾರ್ಥಂ ।
ತೇ ಧನ್ಯಾ ಭುವಿ ಪರಮಾರ್ಥನಿಶ್ಚಿತೇಹಾಃ
ಶೇಷಾಸ್ತು ಭ್ರಮನಿಲಯೇ ಪರಿಭ್ರಮಂತಃ ॥ ೬೧

- ಶ್ರೀ ಶಂಕರಾಚಾರ್ಯ

ಇಂದ್ರಿಯಗಳ ವೇಗವನ್ನು ಶಾಂತಗೊಳಿಸತಕ್ಕದ್ದು ಮಾತ್ರವೇ ಜ್ಞಾನ. ಉಪನಿಷತ್ತುಗಳಲ್ಲಿ ನಿಶ್ಚಿತವಾದ ಬ್ರಹ್ಮವಸ್ತುವೇ ಜ್ಞೇಯ. ಪರಮಾರ್ಥವನ್ನು ತಿಳಿದವರೇ ಲೋಕದಲ್ಲಿ ಧನ್ಯರು. ಉಳಿದವರೆಲ್ಲರೂ ಭ್ರಮೆಯಲ್ಲಿ ಸಿಕ್ಕಿಕೊಂಡು ಅಲೆಯತಕ್ಕವರು.

ತಸ್ಮಾದನಂತಮಜರಂ ಪರಮಂ ವಿಕಾಸಿ
ತದ್ಬ್ರಹ್ಮಚಿಂತಯ ಕಿಮೇಭಿರಸದ್ವಿಕಲ್ಪೈಃ ।

**ಯಸ್ಯಾನುಷಂಗಿಣ ಇಮೇ ಭುವನಾಧಿಪತ್ಯ -**
**ಭೋಗಾದಯಃ ಕೃಪಣಲೋಕಮತಾ ಭವಂತಿ ॥ ೬೨**

- ವೈರಾಗ್ಯಶತಕ - ೭೪

ಆದುದರಿಂದ ಕೊನೆಯಿಲ್ಲದ ಮುಪ್ಪನ್ನು ಪಡೆಯದ, ಸದಾ ಪ್ರಕಾಶಿಸುವ ಪರಬ್ರಹ್ಮವನ್ನು ಧ್ಯಾನಮಾಡು. ಈ ನಶ್ವರವಾದ ಐಹಿಕ ಸುಖಗಳಿಂದೇನು ಪ್ರಯೋಜನ? ಪ್ರಪಂಚ ಸಾಮ್ರಾಜ್ಯದ ಭೋಗಗಳೇ ಮೊದಲಾದವು ಬಹಳ ತುಚ್ಛ, ಸಾಮಾನ್ಯ ಜನರು ಅದನ್ನು ಆಶಿಸುತ್ತಾರೆ.

**ತ್ರಯಾಣಾಮೇಕಭಾವಾನಾಂ ಯೋ ನ ಪಶ್ಯತಿ ವೈ ಭಿದಾಂ ।**
**ಸರ್ವಭೂತಾತ್ಮನಾಂ ಬ್ರಹ್ಮನ್ ಸ ಶಾಂತಿಮಧಿಗಚ್ಛತಿ ॥ ೬೩**

- ಭಾಗವತ, ೪-೭-೭೪

ಎಲ್ಲಾ ಪ್ರಾಣಿಗಳಿಗೂ ಆತ್ಮಸ್ವರೂಪರಾದ ಬ್ರಹ್ಮ ವಿಷ್ಣು, ಮಹೇಶ್ವರರಲ್ಲಿ ಯಾರು ಭೇದವನ್ನೆಣಿಸುವುದಿಲ್ಲವೋ ಅವರು ಶಾಂತಿಯನ್ನು ಹೊಂದುತ್ತಾರೆ.

**ತಸ್ಮಾತ್ ಪುತ್ರೇಷು ದಾರೇಷು ಮಿತ್ರೇಷು ಚ ಧನೇಷು ಚ ।**
**ನಾತಿಪ್ರಸಂಗಃ ಕರ್ತವ್ಯೋ ವಿಪ್ರಯೋಗೋ ಹಿ ತೈರ್ಧ್ರುವಮ್ ॥ ೬೪**

- ರಾಮಾಯಣ, ಉತ್ತರ. ೫೩-೧೨

ಮಕ್ಕಳು, ಹೆಂಡತಿಯರು, ಮಿತ್ರರು ಮತ್ತು ಧನಗಳಲ್ಲಿ ಅತ್ಯಂತ ವ್ಯಾಮೋಹ ವನ್ನಿಡಬಾರದು. ಅವರ ಅಗಲಿಕೆ ನಿಶ್ಚಿತ.

**ತೃಷ್ಣಾಸೂಚೀವಿನಿರ್ಭಿನ್ನಂ ಸಿಕ್ತಂ ವಿಷಯಸರ್ಪಿಷಾ ।**
**ರಾಗದ್ವೇಷಾನಲೇ ಪಕ್ವಂ ಮೃತ್ಯುರಶ್ನಾತಿ ಮಾನವಮ್ ॥ ೬೫**

- ಗರುಡಪುರಾಣ, ೧೬-೪೩

ಆಶೆಯೆಂಬ ಸೂಜಿಗಳಿಂದ ಚುಚ್ಚಲ್ಪಟ್ಟ, ವಿಷಯವೆಂಬ ತುಪ್ಪದಿಂದ ನೆನೆದ, ಆಸಕ್ತಿ, ದ್ವೇಷ ಎಂಬ ಬೆಂಕಿಯಲ್ಲಿ ಬೆಂದ ಮಾನವನನ್ನು ಮಾಂಸದಂತೆ ಮೃತ್ಯುವು ತಿನ್ನುತ್ತದೆ.

**ದಾರಾಃ ಪುತ್ರೇಷು ರತಾಃ ಪುತ್ರಾಃ ಪಿತೃಧನಪರಿಗ್ರಹವ್ಯಗ್ರಾಃ ।**
**ರೋದನಶರಣಾ ಜನನೀ ಪರಲೋಕಗತಸ್ಯ ಕೋ ಬಂಧುಃ ॥೬೬**

- (ಅಪ್ಪಯ್ಯದೀಕ್ಷಿತರ) ವೈರಾಗ್ಯಶತಕ - ೨೯

ಹೆಂಡಿರು ತಮ್ಮ ಮಕ್ಕಳಲ್ಲಿ ಆಸಕ್ತರು. ಮಕ್ಕಳು ತಂದೆಯ ಆಸ್ತಿಯನ್ನು

ಪಡೆಯುವುದರಲ್ಲಿ ತೊಡಗಿರತಕ್ಕವರು. ತಾಯಿಗೆ ಅಳುವುದೇ ಗತಿ. ಪರಲೋಕಕ್ಕೆ ಹೋದವನಿಗೆ ಬಂಧು ಯಾರು ?

**ದುರ್ಲಭಂ ತ್ರಯಮೇವೈತದ್ದೈವಾನುಗ್ರಹಹೇತುಕಂ ।**
**ಮನುಷ್ಯತ್ವಂ ಮುಮುಕ್ಷುತ್ವಂ ಮಹಾಪುರುಷಸಂಶ್ರಯಃ ॥ ೬೭**

- ವಿವೇಕಚೂಡಮಣಿ-೩

ಮನುಷ್ಯಜನ್ಮ, ಮೋಕ್ಷೇಚ್ಛೆ, ಮಹಾಜನರ ಸಹವಾಸ - ಇವು ಮೂರು ದುರ್ಲಭ. ದೈವಾನುಗ್ರಹದಿಂದಲೇ ಇವು ದೊರೆಯುತ್ತವೆ.

**ದುಷ್ಪ್ರಾಪಂ ಮಕರಾಕರೇ ಕರತಲಾದ್ರತ್ನಂ ನಿಮಗ್ನಂ ಯಥಾ**
**ಸಂಸಾರೇಽತ್ರ ತಥಾ ನರತ್ವಮಥ ತತ್ಪ್ರಾಪ್ತಂ ಮಯಾ ನಿರ್ಮಲಂ ।**
**ಭ್ರಾತಃ ಪಶ್ಯ ವಿಮೂಢತಾಂ ಮಮ ಹಹಾ ನೀತಂ ಯದೇತನ್ಮುದಾ**
**ಕಾಮಕ್ರೋಧ ಕುಬೋಧ ಮತ್ಸರ ಕುಧೀಮಾಯಾಮಹಾಮೋಹತಃ ॥೬೮**

- (ಪದ್ಮನಂದನ) ವೈರಾಗ್ಯಶತಕ- ೪೦

ಕೈಯಲ್ಲಿರುವ ರತ್ನ ಸಮುದ್ರದಲ್ಲಿ ಬಿದ್ದು ಹೋದರೆ ಅದು ಸಿಗುವುದು ಅಸಾಧ್ಯ. ಆ ರೀತಿಯಲ್ಲಿ ಉತ್ತಮವಾದ ಮನುಷ್ಯಜನ್ಮ ಈ ಸಂಸಾರದಲ್ಲಿ ದುರ್ಲಭ. ಅದು ಹೇಗೋ ಬಂದಿದೆ. ಆದರೆ, ತಮ್ಮ! ನನ್ನ ಮೂಢತನವನ್ನು ನೋಡು. ಕಾಮ, ಕ್ರೋಧ, ತಪ್ಪು ತಿಳಿವಳಿಕೆ, ಹೊಟ್ಟೆಕಿಚ್ಚು, ದುರ್ಬುದ್ಧಿಗಳ ಮಾಯೆಗೆ ಸಿಕ್ಕಿ ಈ ನರಜನ್ಮವನ್ನು ಅಯ್ಯೊ, ಹಾಳುಮಾಡಿಕೊಂಡೆನು.

**ದೃಶ್ಯಂತೇ ಬಹವಃ ಕಲಾಸು ಕುಶಲಾಸ್ತೇ ಚ ಸ್ಫುರತ್ಕೀರ್ತಯೇ**
**ಸರ್ವಸ್ವಂ ವಿತರಂತಿ ಯೇ ತೃಣಮಿವ ಕ್ಷುದ್ರೈರಪಿ ಪ್ರಾರ್ಥಿತಾಃ ।**
**ಧೀರಾಸ್ತೇಽಪಿ ಚ ಯೇ ತ್ಯಜಂತಿ ಝುಟಿತಿ ಪ್ರಾಣಾನ್ ಕೃತೇ ಸ್ವಾಮಿನೋ**
**ದ್ವಿತ್ರಾಸ್ತೇ ತು ನರಾ ಮನಃ ಸಮರಸಂ ಯೇಷಾಂ ಸುಹೃದ್ವೈರಿಣೋಃ ॥ ೬೯**

- (ಪದ್ಮನಂದನ) ವೈರಾಗ್ಯಶತಕ - ೨೬

ನಾನಾ ಕಲೆಗಳಲ್ಲಿ ಕುಶಲರಾದ ಬಹುಮಂದಿ ಕಾಣಸಿಗುತ್ತಾರೆ. ಅಲ್ಪರು ಕೇಳಿದರೂ ಸಹ, ಹುಲ್ಲುಕಡ್ಡಿಯೋ ಎಂಬಂತೆ ಸರ್ವಸ್ವವನ್ನೂ ಕೊಡತಕ್ಕವರಿದ್ದಾರೆ. ತನ್ನ ಒಡೆಯನಿಗಾಗಿ ಪ್ರಾಣವನ್ನೂ ಒಪ್ಪಿಸುವ ಧೀರರಿದ್ದಾರೆ. ಅವರೆಲ್ಲ ಕೀರ್ತಿಗಾಗಿ ಹಾಗೆ ಮಾಡುತ್ತಾರೆ. ಆದರೆ ಮಿತ್ರ ಶತ್ರುಗಳಲ್ಲಿ ಸಮರಸವಾದ ಮನಸ್ಸುಳ್ಳವರು ದುರ್ಲಭ. ಎಲ್ಲಿಯೋ ಎರಡು ಮೂರು ಜನರಿದ್ದಾರು.

**ದೇಹಿನೋಽಸ್ಮಿನ್ ಯಥಾ ದೇಹೇ ಕೌಮಾರಂ ಯೌವನಂ ಜರಾ ।**
**ತಥಾ ದೇಹಾಂತರಪ್ರಾಪ್ತಿರ್ಧೀರಸ್ತತ್ರ ನ ಮುಹ್ಯತಿ ॥ ೭೦**

- ಭಗವದ್ಗೀತಾ, ೨-೧೩

ದೇಹಧಾರಿಯಾದ ಮನುಷ್ಯನಿಗೆ ಈ ದೇಹದಲ್ಲಿ ಬಾಲ್ಯ, ಯೌವನ, ಮುಪ್ಪು - ಇವು ಹೇಗೆ ಬರುತ್ತವೆಯೋ ಹಾಗೆಯೇ ಇನ್ನೊಂದು ದೇಹವು ಪ್ರಾಪ್ತಿಯಾಗುತ್ತದೆ. ಈ ವಿಷಯದಲ್ಲಿ ಧೀರನು (ಜ್ಞಾನಿಯು) ಮೋಹವಶನಾಗುವುದಿಲ್ಲ.

**ದೇಹೇಽಸ್ಥಿಮಾಂಸರುಧಿರೇಽಭಿಮತಿಂ ತ್ಯಜ ತ್ವಂ**
**ಜಾಯಾಸುತಾದಿಷು ಸದಾ ಮಮತಾಂ ವಿಮುಂಚ ।**
**ಪಶ್ಯಾನಿಶಂ ಜಗದಿದಂ ಕ್ಷಣಭಂಗನಿಷ್ಠಂ**
**ವೈರಾಗ್ಯರಾಗರಸಿಕೋ ಭವ ಭಕ್ತಿನಿಷ್ಠಃ ॥ ೭೧**

- ಭಾಗವತಮಾಹಾತ್ಮ್ಯ, ೪-೭೯

ಮೂಳೆ, ಮಾಂಸ, ರಕ್ತಗಳಿಂದ ತುಂಬಿದ ಈ ಶರೀರದಲ್ಲಿ ಅಭಿಮಾನವನ್ನು ಬಿಡು ; ಹೆಂಡತಿ, ಮಕ್ಕಳು ಮೊದಲಾದುವುಗಳಲ್ಲಿ ಮಮತೆಯನ್ನು ಬಿಡು. ಯಾವಾಗಲೂ ಈ ಪ್ರಪಂಚವನ್ನು ಕ್ಷಣಿಕವೆಂದು ಕಾಣು. ಭಕ್ತಿಯಿಂದ ಕೂಡಿದವನಾಗಿ ವಿರಕ್ತಿಭಾವವನ್ನು ಹೊಂದು.

**ಧನ್ಯಾನಾಂ ಗಿರಿಕಂದರೇ ನಿವಸತಾಂ ಜ್ಯೋತಿಃ ಪರಂ ಧ್ಯಾಯತಾಂ**
**ಆನಂದಾಶ್ರುಜಲಂ ಪಿಬಂತಿ ಶಕುನಾ ನಿಶ್ಶಂಕಮಂಕೇಶಯಾಃ ।**
**ಅಸ್ಮಾಕಂ ತು ಮನೋರಥೋಪರಚಿತಪ್ರಾಸಾದವಾಪೀತಟ-**
**ಕ್ರೀಡಾಕಾನನಕೇಳಿಕೌತುಕಜುಷಾಮಾಯುಃ ಪರಂ ಕ್ಷೀಯತೇ ॥ ೭೨**

- ವೈರಾಗ್ಯಶತಕ - ೧೦೨

ಬೆಟ್ಟದ ಗುಹೆಗಳಲ್ಲಿ ವಾಸಮಾಡುತ್ತಾ ಪರಂಜ್ಯೋತಿಯನ್ನು ಧ್ಯಾನಿಸುತ್ತಿರುವ ಮಹಾತ್ಮರ ಕಣ್ಣುಗಳಿಂದ ಉದುರುವ ಆನಂದಬಾಷ್ಪಗಳನ್ನು ಅವರ ತೊಡೆಯ ಮೇಲೆ ನಿರ್ಭಯವಾಗಿ ಕುಳಿತ ಹಕ್ಕಿಗಳು ಕುಡಿಯುತ್ತವೆ. ಅವರೇ ಧನ್ಯರು. ನಾವಾದರೋ ಮನೋರಥದಿಂದಲೇ ಕಲ್ಪಿಸಿಕೊಂಡಿರುವ ಅರಮನೆ, ಕೊಳ, ಉಪವನಗಳಲ್ಲಿ ವಿಹರಿಸುತ್ತಿದ್ದೇವೆ. ನಮ್ಮ ಆಯುಸ್ಸು ವ್ಯರ್ಥವಾಗಿ ಕ್ಷೀಣಿಸುತ್ತಿದೆ.

**ಧರ್ಮಾರ್ಥಂ ಯಸ್ಯ ವಿತ್ತೇಹಾ ವರಂ ತಸ್ಯ ನಿರೀಹತಾ ।**
**ಪ್ರಕ್ಷಾಲನಾದ್ಧಿ ಪಂಕಸ್ಯ ಶ್ರೇಯೋ ನ ಸ್ಪರ್ಶನಂ ನೃಣಾಮ್ ॥ ೭೩**

- ಮಹಾಭಾರತ, ಅರಣ್ಯ, ೨-೪೯

ಧರ್ಮಕಾರ್ಯವನ್ನು ಮಾಡುವುದಕ್ಕಾಗಿ ಯಾರಿಗೆ ಹಣದ ಆಸೆಯುಂಟೋ, ಅವರು ಆಸೆಯನ್ನು ತ್ಯಜಿಸುವುದೇ ಒಳಿತು. ಏಕೆಂದರೆ, ಕೆಸರನ್ನು ತೊಳೆದುಕೊಳ್ಳುವುದಕ್ಕಿಂತ ಅದನ್ನು ಮುಟ್ಟದಿರುವುದೇ ಒಳ್ಳೆಯದು.

ಧರ್ಮೇ ಮತಿರ್ಭವತು ವಃ ಸತತೋತ್ಥಿತಾನಾಂ
ಸ ಹ್ಯೇಕ ಏವ ಪರಲೋಕಗತಸ್ಯ ಬಂಧುಃ ।
ಅರ್ಥಾಃ ಸ್ತ್ರಿಯಶ್ಚ ನಿಪುಣೈರಪಿ ಸೇವ್ಯಮಾನಾ
ನೈವಾಪ್ತಭಾವಮುಪಯಾಂತಿ ನ ಚ ಸ್ಥಿರತ್ವಂ ॥ ೭೪

- ಮಹಾಭಾರತ, ಆದಿ. ೨-೩೯೧

ಯಾವಾಗಲೂ ಎಚ್ಚರದಲ್ಲಿರುವ ನಿಮಗೆ ಧರ್ಮದಲ್ಲಿ ಆಸಕ್ತಿ ಇರಲಿ. ಧರ್ಮ ಒಂದೇ ಪರಲೋಕವನ್ನು ಸೇರಿದವನಿಗೆ ಬಂಧು. ಎಷ್ಟು ಜಾಣತನದಿಂದ ಸೇವಿಸಿದರೂ ಹಣವಾಗಲಿ ಹೆಂಗಸರಾಗಲಿ ಎಂದಿಗೂ ಆಪ್ತರಾಗಲಾರರು. ಅವರು ಸ್ಥಿರವಾಗಿ ಉಳಿಯುವುದೂ ಇಲ್ಲ.

ಧ್ಯಾಯತೋ ವಿಷಯಾನ್ ಪುಂಸಃ ಸಂಗಸ್ತೇಷೂಪಜಾಯತೇ ।
ಸಂಗಾತ್ ಸಂಜಾಯತೇ ಕಾಮಃ ಕಾಮಾತ್ ಕ್ರೋಧೋऽಭಿಜಾಯತೇ ॥
ಕ್ರೋಧಾದ್ಭವತಿ ಸಂಮೋಹಃ ಸಂಮೋಹಾತ್ ಸ್ಮೃತಿವಿಭ್ರಮಃ ।
ಸ್ಮೃತಿಭ್ರಂಶಾದ್ಬುದ್ಧಿನಾಶೋ ಬುದ್ಧಿನಾಶಾತ್ ಪ್ರಣಶ್ಯತಿ ॥ ೭೫

- ಭಗವದ್ಗೀತಾ, ೨-೬೨, ೬೩

ವಿಷಯಗಳನ್ನೇ ಚಿಂತಿಸತಕ್ಕ ಮನುಷ್ಯನಿಗೆ ಅವುಗಳಲ್ಲಿ ಆಸಕ್ತಿ ಉಂಟಾಗುತ್ತದೆ. ಆಸಕ್ತಿಯಿಂದ ಅದನ್ನು ಪಡೆಯಬೇಕೆಂಬ ಆಸೆ ಹುಟ್ಟುತ್ತದೆ. ಆಸೆಯಿಂದ (ಅದಕ್ಕೆ ಅಡ್ಡಿಯಾದರೆ) ಕೋಪ ಜನಿಸುತ್ತದೆ. ಕ್ರೋಧದಿಂದ ಅವಿವೇಕ ಹುಟ್ಟುತ್ತದೆ. ಅದರಿಂದ ಸ್ಮರಣಶಕ್ತಿ ನಷ್ಟವಾಗುತ್ತದೆ. ಅದರಿಂದ ಬುದ್ಧಿಗೆಟ್ಟು ಮನುಷ್ಯನು ನಷ್ಟವಾಗಿ ಹೋಗುತ್ತಾನೆ.

ಧಿಗ್ಬಲಂ ಕ್ಷತ್ರಿಯಬಲಂ ಬ್ರಹ್ಮತೇಜೋ ಬಲಂ ಬಲಂ ।
ಏಕೇನ ಬ್ರಹ್ಮದಂಡೇನ ಸರ್ವಾಸ್ತ್ರಾಣಿ ಹತಾನಿ ಮೇ ॥ ೭೬

- ರಾಮಾಯಣ, ಬಾಲ. ೫೬-೨೩

ಕ್ಷತ್ರಿಯಬಲಕ್ಕೆ ಧಿಕ್ಕಾರ ! ಬ್ರಹ್ಮತೇಜಸ್ಸಿನ ಬಲವೇ ಬಲ. ಒಂದು ಬ್ರಹ್ಮದಂಡವು ನನ್ನ ಸರ್ವಾಸ್ತ್ರಗಳನ್ನೂ ನುಂಗಿ ನೊಣೆಯಿತು ! (ವಸಿಷ್ಠರ ಬ್ರಹ್ಮದಂಡದಿಂದ ಪರಾಜಿತನಾದ ವಿಶ್ವಾಮಿತ್ರನ ಉದ್ಗಾರ).

ನ ಜಾತು ಕಾಮಃ ಕಾಮಾನಾಮುಪಭೋಗೇನ ಶಾಮ್ಯತಿ ।
ಹವಿಷಾ ಕೃಷ್ಣವರ್ತ್ಮೇವ ಭೂಯ ಏವಾಭಿವರ್ಧತೇ ॥ ೭೭

- ಮಹಾಭಾರತ, ಆದಿ. ೭೫-೫೦

ಕಾಮವು ವಿಷಯೋಪಭೋಗದಿಂದ ಎಂದಿಗೂ ಶಾಂತವಾಗುವುದಿಲ್ಲ. ತುಪ್ಪದ ಹವಿಸ್ಸಿನಿಂದ ಬೆಂಕಿಯು ಹೆಚ್ಚುವಂತೆ, ಅದು ಇನ್ನೂ ಪ್ರಬಲವಾಗುತ್ತದೆ.

ನ ಜೀವನಾಶೋಽಸ್ತಿ ಹಿ ದೇಹಭೇದೇ
ಮಿಥ್ಯೈತದಾಹುರ್ಮ್ರಿಯತೇ ಕಿಲೇತಿ ।
ಜೀವಸ್ತು ದೇಹಾಂತರಿತಃ ಪ್ರಯಾತಿ
ದಶಾರ್ಧತೈವಾಸ್ಯ ಶರೀರಭೇದಃ ॥ ೭೮

- ಮಹಾಭಾರತ, ವನ. ೨೧೯-೨೬

ದೇಹವು ನಾಶವಾದರೂ ಜೀವಕ್ಕೆ ನಾಶವಿಲ್ಲ. ಸತ್ತುಹೋಗುತ್ತಾನೆಂದು ಹೇಳುವುದು ಸರಿಯಲ್ಲ. ಜೀವವು ಬೇರೆ ದೇಹವನ್ನು ಪಡೆಯುತ್ತದೆ. ಶರೀರವು ಪಂಚಭೂತಗಳಲ್ಲಿ ಸೇರಿಹೋಗುವುದೇ ಶರೀರಭೇದ- ಮರಣ.

ನಂದಂತಿ ಮಂದಾಃ ಶ್ರಿಯಮಪ್ಯನಿತ್ಯಾಂ
ಪರಂ ವಿಷೀದಂತಿ ವಿಪದ್ಗೃಹೀತಾಃ ।
ವಿವೇಕದೃಷ್ಟ್ಯಾ ಚರತಾಂ ನರಾಣಾಂ
ಶ್ರಿಯೋ ನ ಕಿಂಚಿತ್ ವಿಪದೋ ನ ಕಿಂಚಿತ್ ॥ ೭೯

ಮೂಢರು ಅನಿತ್ಯವಾದ ಐಶ್ವರ್ಯವನ್ನು ಪಡೆದರೂ ಸಂತೋಷಿಸುತ್ತಾರೆ. ಕಷ್ಟಗಳಿಗೆ ಸಿಲುಕಿದಾಗ ದುಃಖಿಸುತ್ತಾರೆ. ಆದರೆ ವಿವೇಕದಿಂದ ನಡೆಯುವ ಮನುಷ್ಯರಿಗೆ ಐಶ್ವರ್ಯವೂ ಲೆಕ್ಕಕ್ಕಿಲ್ಲ. ವಿಪತ್ತುಗಳೂ ಲೆಕ್ಕಕ್ಕಿಲ್ಲ.

ನಂದಂತ್ಯುದಿತ ಆದಿತ್ಯೇ ನಂದಂತ್ಯಸ್ತಮಿತೇ ರವೌ ।
ಆತ್ಮನೋ ನಾವಬುಧ್ಯಂತೇ ಮನುಷ್ಯಾ ಜೀವಿತಕ್ಷಯಮ್ ॥ ೮೦

- ರಾಮಾಯಣ. ಅಯೋಧ್ಯಾ - ೧೦೫-೨೪

ಸೂರ್ಯನು ಉದಯಿಸಿದನೆಂದು ಜನರು ಆನಂದಿಸುತ್ತಾರೆ. ಅಸ್ತಮಿಸಿದನೆಂದೂ ಆನಂದಿಸುತ್ತಾರೆ. ತಮ್ಮ ಆಯುಸ್ಸು ಕ್ಷಯಿಸಿಹೋಗುತ್ತದೆಯೆಂಬುದನ್ನು ಮಾತ್ರ ಅವರು ಗಮನಿಸುವುದಿಲ್ಲ.

ನ ನಟಾ ನ ವಿಟಾ ನ ಗಾಯಕಾ ನ ಚ ಸಭ್ಯೇತರವಾದಚುಂಚವಃ ।
ನೃಪಮೀಕ್ಷಿತುಮತ್ರ ಕೇ ವಯಂ ಸ್ತನಭಾರಾನಮಿತಾ ನ ಯೋಷಿತಃ ॥ ೮೧

- ವೈರಾಗ್ಯಶತಕ - ೨೬

ನಾವು ನಟರಲ್ಲ, ವಿಟರಲ್ಲ, ಸಂಗೀತಗಾರರಲ್ಲ, ವಿತಂಡವಾದ ಮಾಡುವವರಲ್ಲ ಮತ್ತು ಭಾರವಾದ ವಕ್ಷಃಸ್ಥಲದಿಂದ ಬಗ್ಗಿರುವ ಹೆಂಗಸರೂ ಅಲ್ಲ. ಆದುದರಿಂದ ನಾವು ಏತಕ್ಕೆ ಪ್ರಭುವನ್ನು ನೋಡಬೇಕು ?

**ನಯಸ್ಯ ವಿನಯೋ ಮೂಲಂ ವಿನಯಃ ಶಾಸ್ತ್ರನಿಶ್ಚಯಃ ।**
**ವಿನಯೋ ಹೀಂದ್ರಿಯಜಯಸ್ತದ್ಯುಕ್ತಃ ಶಾಸ್ತ್ರಮೃಚ್ಛತಿ ॥ ೮೨**

- ಸುಭಾಷಿತಸುಧಾನಿಧಿ

ನೀತಿಗೆ ಮೂಲ ವಿನಯ ; ವಿನಯವೆಂದರೆ ಶಾಸ್ತ್ರಗಳ ಖಚಿತವಾದ ಅರಿವು. ವಿನಯವೆಂದರೆ ಇಂದ್ರಿಯ ಜಯವೂ ಹೌದು. ಅದನ್ನುಳ್ಳವನು ಶಾಸ್ತ್ರವನ್ನು ತಿಳಿಯುತ್ತಾನೆ.

**ನಾದಾತವ್ಯಂ ನ ದಾತವ್ಯಂ ನ ಕರ್ತವ್ಯಂ ಚ ಕಿಂಚನ ।**
**ಸಾಂತ್ವಮೇಕಂ ಪ್ರಯೋಕ್ತವ್ಯಂ ಸರ್ವಂ ತಸ್ಯ ವಶೇ ಜಗತ್ ॥ ೮೩**

- ಸಭಾರಂಜನಶತಕ - ೨೫

ತೆಗೆದುಕೊಳ್ಳಬೇಕಾದ್ದಿಲ್ಲ, ಕೊಡಬೇಕಾದ್ದಿಲ್ಲ, ಮಾಡಬೇಕಾದದ್ದು ಏನೂ ಇಲ್ಲ! ಒಳ್ಳೆಯ ಮಾತಾಡುತ್ತಿದ್ದರೆ ಜಗತ್ತೇ ಅವನ ವಶವಾಗಿರುತ್ತದೆ !

**ನಾಪತ್ಯಾನಿ ನ ವಿತ್ತಾನಿ ನ ಸೌಧಾನಿ ಭವಂತ್ಯಹೋ ।**
**ಮೃತ್ಯುನಾ ನೀಯಮಾನಸ್ಯ ಪುಣ್ಯಪಾಪೇ ಪರಂ ಪುರಃ ॥ ೮೪**

- (ಪದ್ಮನಂದನ) ವೈರಾಗ್ಯ ಶತಕ - ೩೫

ಮೃತ್ಯುವು ಬಂದು ಎಳೆದೊಯ್ಯುವಾಗ ಮಕ್ಕಳೂ ಇಲ್ಲ, ಹಣವೂ ಇಲ್ಲ, ಸೌಧಗಳೂ ಇಲ್ಲ. ಯಾವುದೂ ಜೊತೆಗೆ ಬರದು. ತನ್ನ ಪುಣ್ಯ ಪಾಪಗಳೆರಡೇ ಎದುರಿಗೆ ಬರುತ್ತವೆ.

**ನಾಭಿನಂದೇತ ಮರಣಂ ನಾಭಿನಂದೇತ ಜೀವಿತಂ ।**
**ಕಾಲಮೇವ ಪ್ರತೀಕ್ಷೇತ ನಿದೇಶಂ ಭೃತಕೋ ಯಥಾ ॥ ೮೫**

- ಮಹಾಭಾರತ, ಶಾಂತಿ. ೨೫೫-೧೫

ಸಾವನ್ನಾಗಲೀ, ಬದುಕನ್ನಾಗಲೀ, ಅಭಿನಂದಿಸಬಾರದು. ಹೇಗೆ ಸೇವಕನು ಆಜ್ಞೆಯನ್ನು ಪಾಲಿಸುತ್ತಾನೋ ಹಾಗೆ ಕಾಲವನ್ನೇ ಎದುರುನೋಡುತ್ತಿರಬೇಕು.

**ನಾಯಮತ್ಯಂತಸಂವಾಸಃ ಕಸ್ಯಚಿತ್ ಕೇನಚಿತ್ ಸಹ ।**
**ಅಪಿ ಸ್ವಸ್ಯ ಶರೀರೇಣ ಕಿಮುತಾನ್ಯೈಃ ಪೃಥಗ್ಜನೈಃ ॥ ೮೬**

- ಗರುಡಪುರಾಣ, ೧೧-೯

ಯಾರಿಗೂ ಯಾರೊಡನೆಯೂ ಹೆಚ್ಚು ನಿಕಟ ಸಂಬಂಧ ಇರುವುದು ಸಾಧ್ಯವಿಲ್ಲ. ತನ್ನ ಶರೀರದ ಸಂಬಂಧವೇ ನಿತ್ಯವಲ್ಲ. ಅಂದಮೇಲೆ ಬೇರೆಯವರೊಡನೆ ನಮ್ಮ ಸಂಬಂಧವು ಎಂತಹುದು ?

**ನಾಯಂ ತೇ ಸಮಯೋ ರಹಸ್ಯಮಧುನಾ ನಿದ್ರಾತಿ ನಾಥೋ ಯದಿ**
**ಸ್ಥಿತ್ವಾ ದ್ರಕ್ಷ್ಯತಿ ಕುಪ್ಯತಿ ಪ್ರಭುರಿತಿ ದ್ವಾರೇಷು ಯೇಷಾಂ ವಚಃ ।**
**ಚೇತಸ್ತಾನಪಹಾಯ ಯಾಹಿ ಭವನಂ ದೇವಸ್ಯ ವಿಶ್ವೇಶಿತುಃ**
**ನಿರ್ದೌವಾರಿಕನಿರ್ದಯೋಕ್ತ್ಯಪುರುಷಂ ನಿಸ್ಸೀಮಶರ್ಮಪ್ರದಮ್ ॥ ೮೭**

- ವೈರಾಗ್ಯಶತಕ - ೯೬

ಎಲೈ ಮನಸ್ಸೇ ! ಯಾವ ಪ್ರಭುಗಳ ಬಾಗಿಲಲ್ಲಿ ನಿಂತರೆ, 'ಇದು ನಿನಗೆ ಸಮಯುವಲ್ಲ, ಈಗ ಏಕಾಂತದಲ್ಲಿ ಒಡೆಯನು ಮಲಗಿದ್ದಾನೆ, ನೋಡಿದರೆ ಕೋಪಿಸಿಕೊಳ್ಳುತ್ತಾನೆ' ಎಂಬ ಮಾತುಗಳು ಕೇಳುತ್ತವೆಯೋ ಅವುಗಳನ್ನು ಬಿಟ್ಟು ದ್ವಾರಪಾಲಕರಿಲ್ಲದ, ಕ್ರೂರವಾದ ಮಾತುಗಳು ಕೇಳಿಸದ, ಎಲ್ಲೆಯಿಲ್ಲದ ಸುಖವನ್ನು ಕೊಡುವ ವಿಶ್ವೇಶ್ವರನ ದೇವಾಲಯಕ್ಕೆ ಹೋಗು !

**ನೇಹ ಚಾತ್ಯಂತಸಂವಾಸಃ ಕರ್ಹಿಚಿತ್ ಕೇನಚಿತ್ ಸಹ ।**
**ರಾಜನ್ ಸ್ವೇನಾಪಿ ದೇಹೇನ ಕಿಮು ಜಾಯಾತ್ಮಜಾದಿಭಿಃ ॥ ೮೮**

- ಭಾಗವತ, ೧೦-೪೯-೨೦

ಎಲೈ ರಾಜನೇ ಈ ಲೋಕದಲ್ಲಿ ಯಾರಿಗಾದರೂ, ಯಾರೊಡನೆಯೂ ಬಹಳ ಕಾಲ ಸಹವಾಸವಿರುವುದಿಲ್ಲ. ತನ್ನ ಸ್ವಂತ ದೇಹದಿಂದಲೂ ಕೂಡ ಸಹವಾಸ ಬಹಳ ಕಾಲವಿರುವುದಿಲ್ಲ. ಹೀಗಿರುವಾಗ ಹೆಂಡತಿ ಮಕ್ಕಳು ಮೊದಲಾದವರೊಡನೆ ಇನ್ನೇನು ?

**ಪಂಕೈರ್ವಿನಾ ಸರೋ ಭಾತಿ ಸದಃ ಖಲಜನೈರ್ವಿನಾ ।**
**ಕಟುವರ್ಣೈರ್ವಿನಾ ಕಾವ್ಯಂ ಮಾನಸಂ ವಿಷಯೈರ್ವಿನಾ ॥ ೮೯**

- ರಸಗಂಗಾಧರ

ಕೆಸರಿಲ್ಲದ ಸರೋವರವೂ ಖಳರಿಲ್ಲದ ಸಭೆಯೂ ಒರಟಾದ ಅಕ್ಷರಗಳಿಲ್ಲದ ಕಾವ್ಯವೂ ಶೋಭಿಸುತ್ತವೆ. ವಿಷಯವಾಸನೆಗಳಿಲ್ಲದಿದ್ದಲ್ಲಿ ಮನಸ್ಸು ಶೋಭಿಸುತ್ತದೆ.

**ಪ್ರಕೀರ್ಣೇ ವಿಷಯಾರಣ್ಯೇ ಧಾವಂತಂ ವಿಪ್ರಮಾಥಿನಂ ।**
**ಜ್ಞಾನಾಂಕುಶೇನ ಕುರ್ವೀತ ವಶ್ಯಮಿಂದ್ರಿಯದಂತಿನಮ್ ॥ ೯೦**

- ಸುಭಾಷಿತ ಸುಧಾನಿಧಿ

ಹರಡಿಕೊಂಡಿರುವ ವಿಷಯಗಳೆಂಬ ಕಾಡಿನಲ್ಲಿ ಧಾವಿಸುತ್ತಾ ನಾಶಪಡಿಸುತ್ತಿರುವ ಇಂದ್ರಿಯವೆಂಬ ಆನೆಯನ್ನು ಜ್ಞಾನವೆಂಬ ಅಂಕುಶದಿಂದ ಹತೋಟಿಗೆ ತಂದುಕೊಳ್ಳಬೇಕು.

**ಪಂಚಭಿಃ ಸಹ ಗಂತವ್ಯಂ ಸ್ಥಾತವ್ಯಂ ಪಂಚಭಿಸ್ಸಹ ।**
**ಪಂಚಭಿಃ ಸಹ ವಕ್ತವ್ಯಂ ನ ದುಃಖಂ ಪಂಚಭಿಸ್ಸಹ ॥ ೯೧**

ಐದು ಜನರೊಡನೆ ನಡೆಯಬೇಕು ; ನಿಲ್ಲಬೇಕು ; ಮಾತಾಡಬೇಕು. ಐವರೊಡನೆ ಇದ್ದಾಗ ದುಃಖವಿರದು.

**ಪಂಚೇಂದ್ರಿಯಸ್ಯ ಮರ್ತ್ಯಸ್ಯ ಛಿದ್ರಂ ಚೇದೇಕಮಿಂದ್ರಿಯಂ ।**
**ತತೋಽಸ್ಯ ಸ್ರವತಿ ಪ್ರಜ್ಞಾ ದೃತೇಃ ಪಾತ್ರಾದಿವೋದಕಮ್ ॥ ೯೨**

- ಮಹಾಭಾರತ, ಉದ್ಯೋಗ. ೩೩-೭೭

ಐದು ಇಂದ್ರಿಯಗಳಿರುವ ಮನುಷ್ಯನಿಗೆ ಒಂದು ಇಂದ್ರಿಯವು ಹರುಕಾದರೆ ಸಾಕು, ಅವನ ಪ್ರಜ್ಞಾಶಕ್ತಿ, ಚರ್ಮದ ಚೀಲದ ಒಂದು ತೂತಿನಿಂದ ನೀರು ಸುರಿದಂತೆ ಸೋರಿಹೋಗುವುದು.

**ಪಂಡಿತೇ ಚೈವ ಮೂರ್ಖೇ ಚ ಬಲವತ್ಯಪಿ ದುರ್ಬಲೇ ।**
**ಈಶ್ವರೇ ಚ ದರಿದ್ರೇ ಚ ಮೃತ್ಯೋಃ ಸರ್ವತ್ರ ತುಲ್ಯತಾ ॥ ೯೩**

- ಭೋಜಪ್ರಬಂಧ

ಪಂಡಿತನಾಗಲಿ - ಮೂರ್ಖನಾಗಲಿ, ಬಲಶಾಲಿಯಾಗಲಿ - ದುರ್ಬಲನಾಗಲಿ, ಹಣವಂತನಾಗಲಿ - ಬಡವನಾಗಲಿ, ಮೃತ್ಯುವಿಗೆ ಎಲ್ಲರೂ ಸಮಾನರು.

**ಪತತು ನಭಃ ಸ್ಫುಟತು ಮಹೀ ಚಲಂತು ಗಿರಯೋ ಮಿಲಂತು ವಾರಿಧಯಃ ।**
**ಅಧರೋತ್ತರಮಸ್ತು ಜಗತ್ ಕಾ ಹಾನಿರ್ವೀತರಾಗಸ್ಯ ॥ ೯೪**

- (ಅಪ್ಪಯ್ಯದೀಕ್ಷಿತರ) ವೈರಾಗ್ಯಶತಕ

ಆಕಾಶಬೀಳಲಿ, ನೆಲ ಸಿಡಿಯಲಿ, ಬೆಟ್ಟಗಳು ಚಲಿಸಲಿ, ಸಾಗರಗಳು ಒಂದಾಗಲಿ, ಲೋಕ ಬುಡಮೇಲಾಗಲಿ, ಆಸೆಯಿಲ್ಲದವನಿಗೆ ಅದರಿಂದ ಏನು ಹಾನಿ ?

**ಪಥಿ ಪತಿತಮಸ್ಥಿ ದೃಷ್ಟ್ವಾ ಸ್ಪರ್ಶಭಯಾದನ್ಯಮಾರ್ಗತೋ ಯಾತಿ ।**
**ನೋ ಪಶ್ಯತಿ ನಿಜದೇಹಂ ಚಾಸ್ಥಿ ಸಹಸ್ರಾವೃತಂ ಪರಿತಃ ॥ ೯೫**

- ಪ್ರಬೋಧಸುಧಾಕರ - ೨೧

ದಾರಿಯಲ್ಲಿ ಬಿದ್ದ ಮೂಳೆಯನ್ನು ನೋಡಿ ಸ್ಪರ್ಶವಾದೀತೆಂದು ಹೆದರಿ ಬೇರೆ

ಯಾರಿಗೂ ಯಾರೊಡನೆಯೂ ಹೆಚ್ಚು ನಿಕಟ ಸಂಬಂಧ ಇರುವುದು ಸಾಧ್ಯವಿಲ್ಲ. ತನ್ನ ಶರೀರದ ಸಂಬಂಧವೇ ನಿತ್ಯವಲ್ಲ. ಅಂದಮೇಲೆ ಬೇರೆಯವರೊಡನೆ ನಮ್ಮ ಸಂಬಂಧವು ಎಂತಹುದು ?

**ನಾಯಂ ತೇ ಸಮಯೋ ರಹಸ್ಯಮಧುನಾ ನಿದ್ರಾತಿ ನಾಥೋ ಯದಿ**
**ಸ್ಥಿತ್ವಾ ದ್ರಕ್ಷ್ಯತಿ ಕುಪ್ಯತಿ ಪ್ರಭುರಿತಿ ದ್ವಾರೇಷು ಯೇಷಾಂ ವಚಃ ।**
**ಚೇತಸ್ತಾನಪಹಾಯ ಯಾಹಿ ಭವನಂ ದೇವಸ್ಯ ವಿಶ್ವೇಶಿತುಃ**
**ನಿರ್ದೌವಾರಿಕನಿರ್ದಯೋಕ್ತ್ಯಪುರುಷಂ ನಿಸ್ಸೀಮಶರ್ಮಪ್ರದಮ್ ॥ ೮೭**

- ವೈರಾಗ್ಯಶತಕ - ೯೬

ಎಲೈ ಮನಸ್ಸೇ ! ಯಾವ ಪ್ರಭುಗಳ ಬಾಗಿಲಲ್ಲಿ ನಿಂತರೆ, 'ಇದು ನಿನಗೆ ಸಮಯುವಲ್ಲ, ಈಗ ಏಕಾಂತದಲ್ಲಿ ಒಡೆಯನು ಮಲಗಿದ್ದಾನೆ, ನೋಡಿದರೆ ಕೋಪಿಸಿಕೊಳ್ಳುತ್ತಾನೆ' ಎಂಬ ಮಾತುಗಳು ಕೇಳುತ್ತವೆಯೋ ಅವುಗಳನ್ನು ಬಿಟ್ಟು ದ್ವಾರಪಾಲಕರಿಲ್ಲದ, ಕ್ರೂರವಾದ ಮಾತುಗಳು ಕೇಳಿಸದ, ಎಲ್ಲೆಯಿಲ್ಲದ ಸುಖವನ್ನು ಕೊಡುವ ವಿಶ್ವೇಶ್ವರನ ದೇವಾಲಯಕ್ಕೆ ಹೋಗು !

**ನೇಹ ಚಾತ್ಯಂತಸಂವಾಸಃ ಕರ್ಹಿಚಿತ್ ಕೇನಚಿತ್ ಸಹ ।**
**ರಾಜನ್ ಸ್ವೇನಾಪಿ ದೇಹೇನ ಕಿಮು ಜಾಯಾತ್ಮಜಾದಿಭಿಃ ॥ ೮೮**

- ಭಾಗವತ, ೧೦-೪೯-೨೦

ಎಲೈ ರಾಜನೇ ಈ ಲೋಕದಲ್ಲಿ ಯಾರಿಗಾದರೂ, ಯಾರೊಡನೆಯೂ ಬಹಳ ಕಾಲ ಸಹವಾಸವಿರುವುದಿಲ್ಲ. ತನ್ನ ಸ್ವಂತ ದೇಹದಿಂದಲೂ ಕೂಡ ಸಹವಾಸ ಬಹಳ ಕಾಲವಿರುವುದಿಲ್ಲ. ಹೀಗಿರುವಾಗ ಹೆಂಡತಿ ಮಕ್ಕಳು ಮೊದಲಾದವರೊಡನೆ ಇನ್ನೇನು ?

**ಪಂಕೈರ್ವಿನಾ ಸರೋ ಭಾತಿ ಸದಃ ಖಲಜನೈರ್ವಿನಾ ।**
**ಕಟುವರ್ಣೈರ್ವಿನಾ ಕಾವ್ಯಂ ಮಾನಸಂ ವಿಷಯೈರ್ವಿನಾ ॥ ೮೯**

- ರಸಗಂಗಾಧರ

ಕೆಸರಿಲ್ಲದ ಸರೋವರವೂ ಖಳರಿಲ್ಲದ ಸಭೆಯೂ ಒರಟಾದ ಅಕ್ಷರಗಳಿಲ್ಲದ ಕಾವ್ಯವೂ ಶೋಭಿಸುತ್ತವೆ. ವಿಷಯವಾಸನೆಗಳಿಲ್ಲದಿದ್ದಲ್ಲಿ ಮನಸ್ಸು ಶೋಭಿಸುತ್ತದೆ.

**ಪ್ರಕೀರ್ಣೇ ವಿಷಯಾರಣ್ಯೇ ಧಾವಂತಂ ವಿಪ್ರಮಾಥಿನಂ ।**
**ಜ್ಞಾನಾಂಕುಶೇನ ಕುರ್ವೀತ ವಶ್ಯಮಿಂದ್ರಿಯದಂತಿನಮ್ ॥ ೯೦**

- ಸುಭಾಷಿತ ಸುಧಾನಿಧಿ

ಹರಡಿಕೊಂಡಿರುವ ವಿಷಯಗಳೆಂಬ ಕಾಡಿನಲ್ಲಿ ಧಾವಿಸುತ್ತಾ ನಾಶಪಡಿಸುತ್ತಿರುವ ಇಂದ್ರಿಯವೆಂಬ ಆನೆಯನ್ನು ಜ್ಞಾನವೆಂಬ ಅಂಕುಶದಿಂದ ಹತೋಟಿಗೆ ತಂದುಕೊಳ್ಳಬೇಕು.

**ಪಂಚಭಿಃ ಸಹ ಗಂತವ್ಯಂ ಸ್ಥಾತವ್ಯಂ ಪಂಚಭಿಸ್ಸಹ ।**
**ಪಂಚಭಿಃ ಸಹ ವಕ್ತವ್ಯಂ ನ ದುಃಖಂ ಪಂಚಭಿಸ್ಸಹ ॥ ೯೧**

ಐದು ಜನರೊಡನೆ ನಡೆಯಬೇಕು ; ನಿಲ್ಲಬೇಕು ; ಮಾತಾಡಬೇಕು. ಐವರೊಡನೆ ಇದ್ದಾಗ ದುಃಖವಿರದು.

**ಪಂಚೇಂದ್ರಿಯಸ್ಯ ಮರ್ತ್ಯಸ್ಯ ಛಿದ್ರಂ ಚೇದೇಕಮಿಂದ್ರಿಯಂ ।**
**ತತೋಽಸ್ಯ ಸ್ರವತಿ ಪ್ರಜ್ಞಾ ದೃತೇಃ ಪಾತ್ರಾದಿವೋದಕಮ್ ॥ ೯೨**

- ಮಹಾಭಾರತ, ಉದ್ಯೋಗ. ೩೩-೭೭

ಐದು ಇಂದ್ರಿಯಗಳಿರುವ ಮನುಷ್ಯನಿಗೆ ಒಂದು ಇಂದ್ರಿಯವು ಹರುಕಾದರೆ ಸಾಕು, ಅವನ ಪ್ರಜ್ಞಾಶಕ್ತಿ, ಚರ್ಮದ ಚೀಲದ ಒಂದು ತೂತಿನಿಂದ ನೀರು ಸುರಿದಂತೆ ಸೋರಿಹೋಗುವುದು.

**ಪಂಡಿತೇ ಚೈವ ಮೂರ್ಖೇ ಚ ಬಲವತ್ಯಪಿ ದುರ್ಬಲೇ ।**
**ಈಶ್ವರೇ ಚ ದರಿದ್ರೇ ಚ ಮೃತ್ಯೋಃ ಸರ್ವತ್ರ ತುಲ್ಯತಾ ॥ ೯೩**

- ಭೋಜಪ್ರಬಂಧ

ಪಂಡಿತನಾಗಲಿ - ಮೂರ್ಖನಾಗಲಿ, ಬಲಶಾಲಿಯಾಗಲಿ - ದುರ್ಬಲನಾಗಲಿ, ಹಣವಂತನಾಗಲಿ - ಬಡವನಾಗಲಿ, ಮೃತ್ಯುವಿಗೆ ಎಲ್ಲರೂ ಸಮಾನರು.

**ಪತತು ನಭಃ ಸ್ಫುಟತು ಮಹೀ ಚಲಂತು ಗಿರಯೋ ಮಿಲಂತು ವಾರಿಧಯಃ ।**
**ಅಧರೋತ್ತರಮಸ್ತು ಜಗತ್ ಕಾ ಹಾನಿರ್ವೀತರಾಗಸ್ಯ ॥ ೯೪**

- (ಅಪ್ಪಯ್ಯದೀಕ್ಷಿತರ) ವೈರಾಗ್ಯಶತಕ

ಆಕಾಶಬೀಳಲಿ, ನೆಲ ಸಿಡಿಯಲಿ, ಬೆಟ್ಟಗಳು ಚಲಿಸಲಿ, ಸಾಗರಗಳು ಒಂದಾಗಲಿ, ಲೋಕ ಬುಡಮೇಲಾಗಲಿ, ಆಸೆಯಿಲ್ಲದವನಿಗೆ ಅದರಿಂದ ಏನು ಹಾನಿ ?

**ಪಥಿ ಪತಿತಮಸ್ಥಿ ದೃಷ್ಟ್ವಾ ಸ್ಪರ್ಶಭಯಾದನ್ಯಮಾರ್ಗತೋ ಯಾತಿ ।**
**ನೋ ಪಶ್ಯತಿ ನಿಜದೇಹಂ ಚಾಸ್ಥಿ ಸಹಸ್ರಾವೃತಂ ಪರಿತಃ ॥ ೯೫**

- ಪ್ರಬೋಧಸುಧಾಕರ - ೨೧

ದಾರಿಯಲ್ಲಿ ಬಿದ್ದ ಮೂಳೆಯನ್ನು ನೋಡಿ ಸ್ಪರ್ಶವಾದೀತೆಂದು ಹೆದರಿ ಬೇರೆ

ಯಾರಿಗೂ ಯಾರೊಡನೆಯೂ ಹೆಚ್ಚು ನಿಕಟ ಸಂಬಂಧ ಇರುವುದು ಸಾಧ್ಯವಿಲ್ಲ. ತನ್ನ ಶರೀರದ ಸಂಬಂಧವೇ ನಿತ್ಯವಲ್ಲ. ಅಂದಮೇಲೆ ಬೇರೆಯವರೊಡನೆ ನಮ್ಮ ಸಂಬಂಧವು ಎಂತಹುದು ?

**ನಾಯಂ ತೇ ಸಮಯೋ ರಹಸ್ಯಮಧುನಾ ನಿದ್ರಾತಿ ನಾಥೋ ಯದಿ**
**ಸ್ಥಿತ್ವಾ ದ್ರಕ್ಷ್ಯತಿ ಕುಪ್ಯತಿ ಪ್ರಭುರಿತಿ ದ್ವಾರೇಷು ಯೇಷಾಂ ವಚಃ ।**
**ಚೇತಸ್ತಾನಪಹಾಯ ಯಾಹಿ ಭವನಂ ದೇವಸ್ಯ ವಿಶ್ವೇಶಿತುಃ**
**ನಿರ್ದೌವಾರಿಕನಿರ್ದಯೋಕ್ತ್ಯಪುರುಷಂ ನಿಸ್ಸೀಮಶರ್ಮಪ್ರದಮ್ ॥ ೮೭**

- ವೈರಾಗ್ಯಶತಕ - ೯೬

ಎಲೈ ಮನಸ್ಸೇ ! ಯಾವ ಪ್ರಭುಗಳ ಬಾಗಿಲಲ್ಲಿ ನಿಂತರೆ, 'ಇದು ನಿನಗೆ ಸಮಯುವಲ್ಲ, ಈಗ ಏಕಾಂತದಲ್ಲಿ ಒಡೆಯನು ಮಲಗಿದ್ದಾನೆ, ನೋಡಿದರೆ ಕೋಪಿಸಿಕೊಳ್ಳುತ್ತಾನೆ' ಎಂಬ ಮಾತುಗಳು ಕೇಳುತ್ತವೆಯೋ ಅವುಗಳನ್ನು ಬಿಟ್ಟು ದ್ವಾರಪಾಲಕರಿಲ್ಲದ, ಕ್ರೂರವಾದ ಮಾತುಗಳು ಕೇಳಿಸದ, ಎಲ್ಲೆಯಿಲ್ಲದ ಸುಖವನ್ನು ಕೊಡುವ ವಿಶ್ವೇಶ್ವರನ ದೇವಾಲಯಕ್ಕೆ ಹೋಗು !

**ನೇಹ ಚಾತ್ಯಂತಸಂವಾಸಃ ಕರ್ಹಿಚಿತ್ ಕೇನಚಿತ್ ಸಹ ।**
**ರಾಜನ್ ಸ್ವೇನಾಪಿ ದೇಹೇನ ಕಿಮು ಜಾಯಾತ್ಮಜಾದಿಭಿಃ ॥ ೮೮**

- ಭಾಗವತ, ೧೦-೪೯-೨೦

ಎಲೈ ರಾಜನೇ ಈ ಲೋಕದಲ್ಲಿ ಯಾರಿಗಾದರೂ, ಯಾರೊಡನೆಯೂ ಬಹಳ ಕಾಲ ಸಹವಾಸವಿರುವುದಿಲ್ಲ. ತನ್ನ ಸ್ವಂತ ದೇಹದಿಂದಲೂ ಕೂಡ ಸಹವಾಸ ಬಹಳ ಕಾಲವಿರುವುದಿಲ್ಲ. ಹೀಗಿರುವಾಗ ಹೆಂಡತಿ ಮಕ್ಕಳು ಮೊದಲಾದವರೊಡನೆ ಇನ್ನೇನು ?

**ಪಂಕೈರ್ವಿನಾ ಸರೋ ಭಾತಿ ಸದಃ ಖಲಜನೈರ್ವಿನಾ ।**
**ಕಟುವರ್ಣೈರ್ವಿನಾ ಕಾವ್ಯಂ ಮಾನಸಂ ವಿಷಯೈರ್ವಿನಾ ॥ ೮೯**

- ರಸಗಂಗಾಧರ

ಕೆಸರಿಲ್ಲದ ಸರೋವರವೂ ಖಳರಿಲ್ಲದ ಸಭೆಯೂ ಒರಟಾದ ಅಕ್ಷರಗಳಿಲ್ಲದ ಕಾವ್ಯವೂ ಶೋಭಿಸುತ್ತವೆ. ವಿಷಯವಾಸನೆಗಳಿಲ್ಲದಿದ್ದಲ್ಲಿ ಮನಸ್ಸು ಶೋಭಿಸುತ್ತದೆ.

**ಪ್ರಕೀರ್ಣೇ ವಿಷಯಾರಣ್ಯೇ ಧಾವಂತಂ ವಿಪ್ರಮಾಥಿನಂ ।**
**ಜ್ಞಾನಾಂಕುಶೇನ ಕುರ್ವೀತ ವಶ್ಯಮಿಂದ್ರಿಯದಂತಿನಮ್ ॥ ೯೦**

- ಸುಭಾಷಿತ ಸುಧಾನಿಧಿ

ಹರಡಿಕೊಂಡಿರುವ ವಿಷಯಗಳೆಂಬ ಕಾಡಿನಲ್ಲಿ ಧಾವಿಸುತ್ತಾ ನಾಶಪಡಿಸುತ್ತಿರುವ ಇಂದ್ರಿಯವೆಂಬ ಆನೆಯನ್ನು ಜ್ಞಾನವೆಂಬ ಅಂಕುಶದಿಂದ ಹತೋಟಿಗೆ ತಂದುಕೊಳ್ಳಬೇಕು.

**ಪಂಚಭಿಃ ಸಹ ಗಂತವ್ಯಂ ಸ್ಥಾತವ್ಯಂ ಪಂಚಭಿಸ್ಸಹ ।**
**ಪಂಚಭಿಃ ಸಹ ವಕ್ತವ್ಯಂ ನ ದುಃಖಂ ಪಂಚಭಿಸ್ಸಹ ॥ ೯೧**

ಐದು ಜನರೊಡನೆ ನಡೆಯಬೇಕು ; ನಿಲ್ಲಬೇಕು ; ಮಾತಾಡಬೇಕು. ಐವರೊಡನೆ ಇದ್ದಾಗ ದುಃಖವಿರದು.

**ಪಂಚೇಂದ್ರಿಯಸ್ಯ ಮರ್ತ್ಯಸ್ಯ ಛಿದ್ರಂ ಚೇದೇಕಮಿಂದ್ರಿಯಂ ।**
**ತತೋಽಸ್ಯ ಸ್ರವತಿ ಪ್ರಜ್ಞಾ ದೃತೇಃ ಪಾತ್ರಾದಿವೋದಕಮ್ ॥ ೯೨**

- ಮಹಾಭಾರತ, ಉದ್ಯೋಗ. ೩೩-೭೭

ಐದು ಇಂದ್ರಿಯಗಳಿರುವ ಮನುಷ್ಯನಿಗೆ ಒಂದು ಇಂದ್ರಿಯವು ಹರುಕಾದರೆ ಸಾಕು, ಅವನ ಪ್ರಜ್ಞಾಶಕ್ತಿ, ಚರ್ಮದ ಚೀಲದ ಒಂದು ತೂತಿನಿಂದ ನೀರು ಸುರಿದಂತೆ ಸೋರಿಹೋಗುವುದು.

**ಪಂಡಿತೇ ಚೈವ ಮೂರ್ಖೇ ಚ ಬಲವತ್ಯಪಿ ದುರ್ಬಲೇ ।**
**ಈಶ್ವರೇ ಚ ದರಿದ್ರೇ ಚ ಮೃತ್ಯೋಃ ಸರ್ವತ್ರ ತುಲ್ಯತಾ ॥ ೯೩**

- ಭೋಜಪ್ರಬಂಧ

ಪಂಡಿತನಾಗಲಿ - ಮೂರ್ಖನಾಗಲಿ, ಬಲಶಾಲಿಯಾಗಲಿ - ದುರ್ಬಲನಾಗಲಿ, ಹಣವಂತನಾಗಲಿ - ಬಡವನಾಗಲಿ, ಮೃತ್ಯುವಿಗೆ ಎಲ್ಲರೂ ಸಮಾನರು.

**ಪತತು ನಭಃ ಸ್ಫುಟತು ಮಹೀ ಚಲಂತು ಗಿರಯೋ ಮಿಲಂತು ವಾರಿಧಯಃ ।**
**ಅಧರೋತ್ತರಮಸ್ತು ಜಗತ್ ಕಾ ಹಾನಿರ್ವೀತರಾಗಸ್ಯ ॥ ೯೪**

- (ಅಪ್ಪಯ್ಯದೀಕ್ಷಿತರ) ವೈರಾಗ್ಯಶತಕ

ಆಕಾಶಬೀಳಲಿ, ನೆಲ ಸಿಡಿಯಲಿ, ಬೆಟ್ಟಗಳು ಚಲಿಸಲಿ, ಸಾಗರಗಳು ಒಂದಾಗಲಿ, ಲೋಕ ಬುಡಮೇಲಾಗಲಿ, ಆಸೆಯಿಲ್ಲದವನಿಗೆ ಅದರಿಂದ ಏನು ಹಾನಿ ?

**ಪಥಿ ಪತಿತಮಸ್ಥಿ ದೃಷ್ಟ್ವಾ ಸ್ಪರ್ಶಭಯಾದನ್ಯಮಾರ್ಗತೋ ಯಾತಿ ।**
**ನೋ ಪಶ್ಯತಿ ನಿಜದೇಹಂ ಚಾಸ್ಥಿ ಸಹಸ್ರಾವೃತಂ ಪರಿತಃ ॥ ೯೫**

- ಪ್ರಬೋಧಸುಧಾಕರ - ೨೧

ದಾರಿಯಲ್ಲಿ ಬಿದ್ದ ಮೂಳೆಯನ್ನು ನೋಡಿ ಸ್ಪರ್ಶವಾದೀತೆಂದು ಹೆದರಿ ಬೇರೆ

ದಾರಿಯಲ್ಲಿ ಹೋಗುತ್ತಾನೆ. ತನ್ನ ದೇಹವು ಸಾವಿರಾರು ಮೂಳೆಗಳಿಂದ ತುಂಬಿದೆಯೆಂಬುದನ್ನು ಕಾಣುವುದಿಲ್ಲ !

**ಪರಿವ್ರಾಟ್ ಕಾಮುಕಶುನಾಮೇಕಸ್ಯಾಂ ಪ್ರಮದಾತನೌ ।**
**ಕುಣಪಃ ಕಾಮಿನೀ ಭಕ್ಷ್ಯಮಿತಿ ತಿಸ್ರೋ ವಿಕಲ್ಪನಾಃ ॥ ೯೬**

- ಸುಭಾಷಿತರತ್ನಭಾಂಡಾಗಾರ

ಒಂದೇ ಸ್ತ್ರೀಶರೀರವನ್ನು ಸನ್ಯಾಸಿಯು ಹೆಣವೆಂದೂ, ಕಾಮುಕನು ಭೋಗ್ಯ ವಸ್ತುವೆಂದೂ, ನಾಯಿಯು ಮಾಂಸವೆಂದು ತಿಳಿಯುತ್ತಾರೆ.

**ಪರೇಷಾಂ ಚೇತಾಂಸಿ ಪ್ರತಿದಿವಸಮಾರಾಧ್ಯ ಬಹುಧಾ**
**ಪ್ರಸಾದಂ ಕಿಂ ನೇತುಂ ವಿಶಸಿ ಹೃದಯಕ್ಲೇಶಕಲಿಲಂ ।**
**ಪ್ರಸನ್ನೇ ತ್ವಯ್ಯಂತಃ ಸ್ವಯಮುದಿತಚಿಂತಾಮಣಿಗುಣೋ**
**ವಿವಿಕ್ತಃ ಸಂಕಲ್ಪಃ ಕಿಮಭಿಲಷಿತಂ ಪುಷ್ಯತಿ ನ ತೇ ॥ ೯೭**

- ವೈರಾಗ್ಯಶತಕ - ೭೧

ಎಲೈ ಮನಸ್ಸೇ, ಇತರರ ಮನಸ್ಸನ್ನು ನಾನಾಪ್ರಕಾರವಾಗಿ ಒಲಿಸಿ, ಅವರ ಪ್ರಸಾದಕ್ಕಾಗಿ ಏಕೆ ಹಂಬಲಿಸುವೆ ? ನೀನು ಪ್ರಸನ್ನವಾದರೆ ಸಾಕು. ನಿನ್ನ ಇಚ್ಛೆ ಚಿಂತಾಮಣಿಗೆ ಸಮಾನವಾಗಿ ನಿಷ್ಕಳಂಕವಾಗುತ್ತದೆ. ಅದು ಏನನ್ನು ದೊರಕಿಸಿಕೊಡದೆ ಇದ್ದೀತು ?

**ಪಶ್ಯನ್ನಪಿ ಪ್ರಸ್ಖಲತಿ ಶೃಣ್ವನ್ನಪಿ ನ ಬುಧ್ಯತಿ ।**
**ಪಠನ್ನಪಿ ನ ಜಾನಾತಿ ದೇವಮಾಯಾವಿಮೋಹಿತಃ ॥ ೯೮**

- ಗರುಡಪುರಾಣ, ೧೭-೩೪

ನೋಡುತ್ತಿದ್ದರೂ ಎಡವುತ್ತಾನೆ. ಕೇಳುತ್ತಿದ್ದರೂ ತಿಳಿಯಲಾರ. ಓದುತ್ತಿದ್ದರೂ ಅರ್ಥವಾಗುವುದಿಲ್ಲ. ಇದೆಲ್ಲಾ ದೇವಮಾಯೆಯ ಪ್ರಭಾವ.

**ಪ್ರಶಾಂತಶಾಸ್ತ್ರಾರ್ಥವಿಚಾರಚಾಪಲಂ**
**ನಿವೃತ್ತನಾನಾರಸಕಾವ್ಯಕೌತುಕಂ ।**
**ನಿರಸ್ತನಿಃಶೇಷವಿಕಲ್ಪವಿಪ್ಲವಂ**
**ಪ್ರಪತ್ತುಮನ್ವಿಚ್ಛತಿ ಶೂಲಿನಂ ಮನಃ ॥ ೯೯**

- ವೈರಾಗ್ಯಶತಕ - ೧೧೫

ಶಾಸ್ತ್ರಗಳ ಅರ್ಥವನ್ನು ತಿಳಿದು ವಿಚಾರಮಾಡಬೇಕೆಂಬ ಆಸೆಯಿಲ್ಲ. ನವರಸಗಳಿಂದ ತುಂಬಿದ ಕಾವ್ಯವನ್ನು ಓದಿ ಆನಂದಿಸಬೇಕೆಂಬ ಕುತೂಹಲವಿಲ್ಲ. ಎಲ್ಲ ಬಗೆಯ ಸಂದೇಹ ಗಳೂ ದೂರವಾಗಿವೆ. ಈಗ ನಾನು ಶಿವನಲ್ಲಿ ಶರಣುಹೋಗಲು ಇಷ್ಟಪಡುತ್ತೇನೆ.

ಪ್ರಾಣಾನಾಮನಿಲೇನ ವೃತ್ತಿರುಚಿತಾ ಸತ್ಕಲ್ಪವೃಕ್ಷೇ ವನೇ
ತೋಯೇ ಕಾಂಚನಪದ್ಮರೇಣುಕಪಿಶೇ ಧರ್ಮಾಭಿಷೇಕಕ್ರಿಯಾ ।
ಧ್ಯಾನಂ ರತ್ನಶಿಲಾತಲೇಷು ವಿಬುಧಸ್ತ್ರೀಸಂನಿಧೌ ಸಂಯಮಃ
ಯತ್ಕಾಂಕ್ಷಂತಿ ತಪೋಭಿರನ್ಯಮುನಯಃ ತಸ್ಮಿಂಸ್ತಪಸ್ಯಂತ್ಯಮೀ ॥ ೧೦೦

- ಅಭಿಜ್ಞಾನ ಶಾಕುಂತಲ, ೭-೧೨

ಬೇಕಾದ ಇಷ್ಟಾರ್ಥಗಳನ್ನು ಕೊಡುವ ಕಲ್ಪವೃಕ್ಷವಿರುವೆಡೆಯಲ್ಲಿ ಕೇವಲ ಪ್ರಾಣಾಯಾಮ ಮಾಡುತ್ತಾ ಕುಳಿತಿದ್ದಾರೆ. ಚಿನ್ನದ ಬಣ್ಣದ ಕಮಲದ ಪರಾಗಗಳಿಂದ ಹಳದಿಯಾದ ನೀರಿನಲ್ಲಿ ಇವರು ನಿತ್ಯವೂ ಮಂತ್ರಸ್ನಾನಮಾಡುತ್ತಾರೆ. ಅದ್ಭುತ ರೂಪವತಿಯರಾದ ದೇವತಾ ಸ್ತ್ರೀಯರ ಎದುರಿಗೆ ಜಿತೇಂದ್ರಿಯರಾಗಿದ್ದಾರೆ. ಬೇರೆ ಕಡೆ ಇರುವ ಮುನಿಗಳು ತಪಸ್ಸಿನಿಂದ ಏನನ್ನು ಬೇಡುತ್ತಾರೆಯೋ ಅವುಗಳ ಮಧ್ಯದಲ್ಲಿ ಇವರು ತಪಸ್ಸು ಮಾಡುತ್ತಿದ್ದಾರೆ.

ಪ್ರಾಪ್ತಾ ಶ್ರಿಯಃ ಸಕಲಕಾಮದುಘಾಸ್ತತಃ ಕಿಂ
ನ್ಯಸ್ತಂ ಪದಂ ಶಿರಸಿ ವಿದ್ವಿಷತಾಂ ತತಃ ಕಿಂ ।
ಸಂಪಾದಿತಾಃ ಪ್ರಣಯಿನೋ ವಿಭವೈಸ್ತತಃ ಕಿಂ
ಕಲ್ಪಂ ಸ್ಥಿತಂ ತನುಭೃತಾಂ ತನುಭಿಸ್ತತಃ ಕಿಮ್ ॥ ೧೦೧

- ವೈರಾಗ್ಯಶತಕ - ೬೭

ಎಲ್ಲಾ ಆಸೆಗಳನ್ನೂ ನೆರವೇರಿಸುವ ಸಂಪತ್ತುಗಳೂ ದೊರೆತವು. ಅದರಿಂದ ಬಂದ ಲಾಭವೇನು ? ಶತ್ರುಗಳ ತಲೆಯಲ್ಲಿ ಕಾಲನ್ನಿಟ್ಟಾಯಿತು. ಆದರೆ ಏನು ? ಬಹಳ ಸಿರಿತನದಿಂದ ಸ್ನೇಹಿತರು ಸಂಪಾದಿಸಲ್ಪಟ್ಟರೂ ಏನಾಯಿತು ? ಈ ದೇಹಗಳು ಬಹಳ ಕಾಲ ಬದುಕಿದವು. ಅದರಿಂದ ಏನು ಲಾಭ ?

ಪ್ರಾಯೋ ಮುಮುಕ್ಷವಸ್ತೇಷಾಂ ಕೇಚನೈವ ದ್ವಿಜೋತ್ತಮ ।
ಮುಮುಕ್ಷೂಣಾಂ ಸಹಸ್ರೇಷು ಕಶ್ಚಿನ್ಮುಚ್ಯೇತ ಸಿಧ್ಯತಿ ॥ ೧೦೨

- ಭಾಗವತ, ೬-೧೪-೪

ಎಲೈ ಬ್ರಾಹ್ಮಣನೇ, ಪ್ರಾಯಶಃ ಆ ಮನುಷ್ಯರೇ ಮೊದಲಾದವರಲ್ಲಿ ಮೋಕ್ಷವನ್ನು ಆಶಿಸುವವರು ಕೆಲವರೇ ! ಮೋಕ್ಷವನ್ನು ಬಯಸುವ ಸಾವಿರಾರು ಮಂದಿಗಳಲ್ಲಿ ಯಾವನೋ ಒಬ್ಬನು ಮುಕ್ತನಾಗುತ್ತಾನೆ ; ಸಿದ್ಧಿ ಪಡೆಯುತ್ತಾನೆ.

ಪ್ರಾರಬ್ಧವ್ಯೇ ನಿರುದ್ಯೋಗಃ ಜಾಗರ್ತವ್ಯೇ ಪ್ರಸುಪ್ತಕಃ ।
ವಿಶ್ವಸ್ತವ್ಯೇ ಭಯಸ್ಥಾನೇ ಹಾ ನರಃ ಕೋ ನ ಹನ್ಯತೇ ॥ ೧೦೩

- ಗರುಡಪುರಾಣ, ೧೬-೩೧

ಮಾಡಬೇಕಾದ ಕೆಲಸ ಮಾಡುವುದಿಲ್ಲ. ಎಚ್ಚರವಾಗಿರಬೇಕಾದಾಗ ನಿದ್ರಿಸುತ್ತಾನೆ. ಭಯಕ್ಕೆ ಕಾರಣವಾದ್ದನ್ನು ನಂಬುತ್ತಾನೆ. ಹೀಗಿರುವ ಯಾವ ಮನುಷ್ಯನಿಗೆ ತಾನೇ ಹಾನಿಯಾಗುವುದಿಲ್ಲ ? ಸಾವು ಬರುವುದಿಲ್ಲ.

**ಪುಣ್ಯೈರ್ಮೂಲಫಲೈಃ ಪ್ರಿಯೇ ಪ್ರಣಯಿನಿ ಪ್ರೀತಿಂ ಕುರುಷ್ವಾಧುನಾ**
**ಭೂಶಯ್ಯಾ ನವವಲ್ಕಲೈರಕರಣೈರುತ್ತಿಷ್ಠ ಯಾವೋ ವನಂ ।**
**ಕ್ಷುದ್ರಾಣಾಮವಿವೇಕಮೂಢಮನಸಾಂ ಯತ್ರೇಶ್ವರಾಣಾಂ ಸದಾ**
**ಚಿತ್ತವ್ಯಾಧ್ಯವಿವೇಕವಿಹ್ವಲಗಿರಾಂ ನಾಮಾಪಿ ನ ಶ್ರೂಯತೇ ॥ ೧೦೪**

- ವೈರಾಗ್ಯಶತಕ - ೫೮

ಪ್ರೀತಿಯುಳ್ಳ ಪ್ರಿಯಮನೋವೃತ್ತಿಯೇ, ಪವಿತ್ರವಾದ ಬೇರುಗಳಿಂದಲೂ, ಹಣ್ಣುಗಳಿಂದಲೂ ಅಕೃತ್ರಿಮವಾದ ನಾರುಬಟ್ಟೆಗಳಿಂದಲೂ ಸಂತೋಷಪಡು. ಭೂಮಿಯೇ ಹಾಸಿಗೆ. ಎದ್ದೇಳು, ಕಾಡಿಗೆ ಹೋಗೋಣ. ಎಲ್ಲಿ ನೀಚರಾದ, ಅವಿವೇಕಿಗಳಾದ, ಮನೋವ್ಯಾಧಿಯಿಂದ ಬಡಬಡಿಸುವ ಮಾತುಗಳುಳ್ಳ ಪ್ರಭುಗಳ ಹೆಸರು ಕೇಳುವುದಿಲ್ಲವೋ ಅಲ್ಲಿಗೆ ಹೋಗೋಣ.

**ಪುತ್ರಮಿತ್ರವಸುಬಂಧುಪುರಂಧ್ರೀ-**
**ಗ್ರಾಮಧಾಮರಹಿತಾಃ ಕಿಲ ಲೋಕಾಃ ।**
**ಹಂತ ತೇಽಪಿ ನ ಭವಂತಿ ವಿರಕ್ತಾಃ**
**ತೇನ ಮೇ ಭವತಿ ಚೇತಸಿ ಚಿತ್ರಮ್ ॥ ೧೦೫**

- (ಜನಾರ್ದನಭಟ್ಟನ) ವೈರಾಗ್ಯಶತಕ - ೪೦

ಕೆಲವು ಜನರಿಗೆ ಮಕ್ಕಳು, ಸ್ನೇಹಿತರು, ಹಣ, ಬಂಧುಗಳು, ಹೆಂಡತಿ, ಊರು, ಮನೆ ಯಾವುದೂ ಇರುವುದಿಲ್ಲ. ಆದರೂ ಅವರಿಗೆ ವೈರಾಗ್ಯ ಹುಟ್ಟದು. ಅದನ್ನು ಕಂಡು ನನಗೆ ವಿಸ್ಮಯವಾಗುತ್ತದೆ !

**ಪೂರ್ವೇ ವಯಸಿ ಯಃ ಶಾಂತಃ ಸ ಶಾಂತ ಇತಿ ಮೇ ಮತಿಃ ।**
**ಧಾತುಷು ಕ್ಷೀಯಮಾಣೇಷು ಶಮಃ ಕಸ್ಯ ನ ಜಾಯತೇ ॥ ೧೦೬**

- ಪಂಚತಂತ್ರ, ಮಿತ್ರಭೇದ- ೧೭೬

ಚಿಕ್ಕ ವಯಸ್ಸಿನಲ್ಲಿ ಯಾವಾತನು ಶಾಂತನಾಗಿರುವನೊ ಅವನೀಗ ಶಾಂತನೆಂದು ನನ್ನ ಭಾವನೆ. ಏಕೆಂದರೆ ದೇಹದೊಳಗಿನ ರಸಗಳೆಲ್ಲಾ (ಸಪ್ತಧಾತು) ಕ್ಷಯಹೊಂದುತ್ತಿರುವಾಗ ಯಾರಿಗೆ ತಾನೇ ಶಾಂತಿ ಉಂಟಾಗುವುದಿಲ್ಲ?

**ಪೃಥಿವೀ ರತ್ನಸಂಪೂರ್ಣಾ ಹಿರಣ್ಯಂ ಪಶವಃ ಸ್ತ್ರಿಯಃ ।**
**ನಾಲಮೇಕಸ್ಯ ತತ್‌ಸರ್ವಮಿತಿ ಮತ್ವಾ ಶಮಂ ವ್ರಜೇತ್ ॥೧೦೭**

- ಮಹಾಭಾರತ, ಆದಿ. ೭೫-೫೧

ರತ್ನಪೂರ್ಣವಾದ ಈ ಪೃಥ್ವಿ, (ಜಗತ್ತಿನಲ್ಲಿರುವ) ಚಿನ್ನ, ಪಶು, ಸ್ತ್ರೀಯರು ಇವೆಲ್ಲವು ದೊರಕಿದರೂ ಮನುಷ್ಯನಿಗೆ 'ಸಾಕು' ಎನಿಸಲಾರವು. ಇದನ್ನರಿತು ಮನುಷ್ಯನು ಶಾಂತನಾಗಬೇಕು.

**ಪೃಥುಶಾಸ್ತ್ರಕಥಾಕಂಥಾರೋಮಂಥೇನ ವೃಥೈವ ಕಿಂ ।**
**ಅನ್ವೇಷ್ಟವ್ಯಂ ಪ್ರಯತ್ನೇನ ತತ್ತ್ವಜ್ಞೈರ್ಜ್ಯೋತಿರಾಂತರಮ್ ॥ ೧೦೮**

-ಕವಿಕಂಠಾಭರಣ (ಚಿತ್ರಭಾರತ ನಾಟಕದಿಂದ ಉದ್ಧೃತ)

ನೀರಸವಾದ ದೊಡ್ಡ ದೊಡ್ಡ ಶಾಸ್ತ್ರಗಳನ್ನು ವ್ಯರ್ಥವಾಗಿ ಮೆಲುಕುಹಾಕುವುದರಿಂದ ಏನಾದೀತು ? ತತ್ತ್ವಜ್ಞರು ಹೃದಯವರ್ತಿಯಾದ ಜ್ಯೋತಿಯನ್ನು ಯತ್ನದಿಂದ ಹುಡುಕಬೇಕು.

**ಫಲಮಲಮಶನಾಯ ಸ್ವಾದುಪಾನಾಯ ತೋಯಂ**
**ಕ್ಷಿತಿರಪಿ ಶಯನಾರ್ಥಂ ವಾಸಸೇ ವಲ್ಕಲಂ ಚ ।**
**ನವಧನಮಧುಪಾನಭ್ರಾಂತಸರ್ವೇಂದ್ರಿಯಾಣಾ**
**ಮವಿನಯಮನುಮಂತುಂ ನೋತ್ಸಹೇ ದುರ್ಜನಾನಾಮ್ ॥ ೧೦೯**

- ವೈರಾಗ್ಯಶತಕ - ೨೧

ಭೋಜನಕ್ಕೆ ಹಣ್ಣು ಸಾಕು ; ಕುಡಿಯುವುದಕ್ಕೆ ರುಚಿಕರವಾದ ನೀರು ಸಾಕು ; ಮಲಗಲು ನೆಲ ಸಾಕು ; ಉಡಲು ನಾರುಬಟ್ಟೆಯಿದೆ. ಹಣ ಮತ್ತು ಮಧುಪಾನಗಳಿಂದ ಇಂದ್ರಿಯಗಳ ಮೇಲೆ ಹತೋಟಿಯಿಲ್ಲದ ದುಷ್ಟಜನರ ಆಶ್ರಯವನ್ನು ಮಾನವನು ಏತಕ್ಕಾಗಿ ಬೇಡಬೇಕು ?

**ಬದ್ಧಶ್ಚೇಚ್ಚಿತ್ತಮಾತಂಗಃ ಸ್ಮೃತಿರಜ್ಜ್ವಾ ಸಮಂತತಃ ।**
**ಭಯಮಸ್ತಂಗತಂ ಸರ್ವಂ ಕೃತ್ಸ್ನಂ ಕಲ್ಯಾಣಮಾಗತಮ್ ॥ ೧೧೦**

- ಬೋಧಿಚರ್ಯಾವತಾರ -೯೬

ಧ್ಯಾನವೆಂಬ ಹಗ್ಗದಿಂದ ಎಲ್ಲ ಕಡೆಯಿದ್ದರೂ ಮನಸ್ಸೆಂಬ ಆನೆಯನ್ನು ಕಟ್ಟಿಹಾಕಿದರೆ ಎಲ್ಲ ಹೆದರಿಕೆಗಳೂ ಹೋಗುವುವು. ಎಲ್ಲ ಮಂಗಳವೂ ಉಂಟಾಗುವುವು.

**ಬಾಲಸ್ತಾವತ್ ಕ್ರೀಡಾಸಕ್ತಸ್ತರುಣಸ್ತಾವತ್ತರುಣೀಸಕ್ತಃ ।**
**ವೃದ್ಧಸ್ತಾವಚ್ಚಿಂತಾಸಕ್ತಃ ಪರೇ ಬ್ರಹ್ಮಣಿ ಕೋಽಪಿ ನ ಸಕ್ತಃ ॥ ೧೧೧**

- ಭಜಗೋವಿಂದ ಸ್ತೋತ್ರ

ಬಾಲಕನು ಆಟದಲ್ಲಿ ಆಸಕ್ತ. ತರುಣನು ತರುಣಿಯಲ್ಲಿ ಆಸಕ್ತ. ವೃದ್ಧನು ಚಿಂತೆಯಲ್ಲಿ ಆಸಕ್ತ. ಪರಬ್ರಹ್ಮದಲ್ಲಿ ಆಸಕ್ತಿಯುಳ್ಳವನು ಒಬ್ಬನೂ ಇಲ್ಲ.

**ಬಾಲಾಂಶ್ಚ ಯೌವನಸ್ಥಾಂಶ್ಚ ವೃದ್ಧಾನ್ ಗರ್ಭಗತಾನಪಿ ।**
**ಸರ್ವಾನಾವಿಶತೇ ಮೃತ್ಯುಃ ಏವಂ ಭೂತಮಿದಂ ಜಗತ್ ॥** ೧೧೨

- ಗರುಡಪುರಾಣ, ೧೬-೪೪

ಹುಡುಗರನ್ನೂ, ತರುಣರನ್ನೂ, ಮುದುಕರನ್ನೂ, ಗರ್ಭದಲ್ಲಿರುವ ಶಿಶುಗಳನ್ನೂ ಯಾವ ಅವಸ್ಥೆಯಲ್ಲಿದ್ದರೂ ಸಾವು ಬರುತ್ತದೆ. ಈ ಜಗತ್ತೇ ಹೀಗೆ.

**ಬಾಹ್ಯಮಾಧ್ಯಾತ್ಮಿಕಂ ವಾಽಪಿ ದುಃಖಮುತ್ಪಾದ್ಯತೇ ಪರೈಃ ।**
**ನ ಕುಪ್ಯತಿ ನ ಚಾಹಂತಿ ದಮ ಇತ್ಯಭಿಧೀಯತೇ ॥** ೧೧೩

- ಅತ್ರಿಸಂಹಿತಾ, ೧-೩೯

ಬೇರೆಯುವರು ಹೊರಗಿನಿಂದ ತೊಂದರೆ ಕೊಡಬಹುದು. ಶರೀರಕ್ಕೂ ತೊಂದರೆಯಾಗಬಹುದು. ಆದರೂ ಸಿಟ್ಟಾಗದೆ ಪ್ರತೀಕಾರ ಮಾಡದೆ ಇರುವುದಕ್ಕೆ ದಮವೆಂದು ಹೆಸರು.

**ಭಕ್ತಿರ್ಭವೇ ಮರಣಜನ್ಮಭಯಂ ನ ಚಿತ್ತೇ**
**ಸ್ನೇಹೋ ನ ಬಂಧುಷು ನ ಮನ್ಮಥಜಾ ವಿಕಾರಾಃ ।**
**ಸಂಸರ್ಗದೋಷರಹಿತಾ ವಿಜನಾ ವನಾಂತಾ**
**ವೈರಾಗ್ಯಮಸ್ತಿ ಕಿಮಿತಃ ಪರಮರ್ಥನೀಯಮ್ ॥** ೧೧೪

- ವೈರಾಗ್ಯ ಶತಕ - ೭೩

ಶಿವನಲ್ಲಿ ಭಕ್ತಿ ಇದೆ, ಮನಸ್ಸಿನಲ್ಲಿ ಸಾವು ಹುಟ್ಟುಗಳ ಭಯವಿಲ್ಲ, ಬಂಧುಗಳಲ್ಲಿ ಪ್ರೀತಿಯ ವ್ಯಾಮೋಹವಿಲ್ಲ, ಕಾಮವಿಕಾರಗಳಿಲ್ಲ. ಸಂಗದೋಷವಿಲ್ಲದಿರುವ ನಿರ್ಜನವಾದ ಕಾಡು ಇದೆ. ವೈರಾಗ್ಯವಿದೆ. ಇನ್ನು ಬೇಡತಕ್ಕದ್ದು ಯಾವುದು ?

**ಭಾರ್ಯೇಯಂ ಮಧುರಾಕೃತಿರ್ಮಮ ಮಮ ಪ್ರೀತ್ಯಾನ್ವಿತೋಽಯಂ ಸುತಃ**
**ಸ್ವರ್ಣಸ್ಯೈಷ ಮಹಾನಿಧಿರ್ಮಮ ಮಮಾಸೌ ಬಂಧುರೋ ಬಾಂಧವಃ ।**
**ರಮ್ಯಂ ಹರ್ಮ್ಯಮಿದಂ ಮಮೇತ್ಥಮನಯಾ ವ್ಯಾಮೋಹಿತೋ ಮಾಯಯಾ**
**ಮೃತ್ಯುಂ ಪಶ್ಯತಿ ನೈವ ದೈವಹತಕಃ ಕ್ರುದ್ಧಂ ಪುರಶ್ಚಾರಿಣಮ್ ॥** ೧೧೫

- (ಪದ್ಮನಂದನ) ವೈರಾಗ್ಯಶತಕ-೩೦

ಇವಳು ನನ್ನ ಹೆಂಡತಿ ಸುಂದರಿ. ಇವನು ನನ್ನ ಪ್ರೀತಿಯ ಮಗ. ಈ ಚಿನ್ನದ

ನಿಧಿಯೇ ನನ್ನದು. ಇವನು ನನ್ನ ಉತ್ತಮನಾದ ಬಾಂಧವ. ಈ ಸೊಗಸಾದ ಬಂಗಲೆ ನನ್ನದು ಹೀಗೆ ಹೇಳಿಕೊಳ್ಳುವ ಮಾಯಾಮೋಹಿತನಾದ ದುರ್ವ್ಯಿ ಮನುಷ್ಯನಿಗೆ ಎದುರಿಗೇ ಕೋಪದಿಂದ ನಿಂತಿರುವ ಮೃತ್ಯುವು ಕಾಣಿಸುವುದಿಲ್ಲ!

**ಭುಕ್ತಾ ಬಹವೋ ದಾರಾ ಲಬ್ಧಾಃ ಪುತ್ರಾಶ್ಚ ಪೌತ್ರಾಶ್ಚ ।**
**ನೀತಂ ಶತಮಪ್ಯಾಯುಃ ಸತ್ಯಂ ವದ ಮರ್ತುಮಸ್ತಿ ಮನಃ ॥೧೧೬**

- (ಅಪ್ಪಯ್ಯದೀಕ್ಷಿತರ) ವೈರಾಗ್ಯಶತಕ

ಎಷ್ಟೋ ಮಡದಿಯರನ್ನು ಅನುಭವಿಸಿದ್ದಾಯಿತು. ಮಕ್ಕಳೂ ಮೊಮ್ಮಕ್ಕಳೂ ಹುಟ್ಟಿದರು. ನೂರು ವರ್ಷದ ಆಯುಸ್ಸನ್ನೂ ಕಳೆದದ್ದಾಯಿತು. ಸತ್ಯವನ್ನು ಹೇಳು. ನಿನಗೆ ಸಾಯಲು ಮನಸ್ಸಿದೆಯೇ?

**ಭೂಯೋ ವಿನಯಮಾಸ್ಥಾಯ ಭವ ನಿತ್ಯಂ ಜಿತೇಂದ್ರಿಯಃ ।**
**ಕಾಮಕ್ರೋಧಸಮುತ್ಥಾನಿ ತ್ಯಜೇಥಾ ವ್ಯಸನಾನಿ ಚ ॥ ೧೧೭**

- ರಾಮಾಯಣ, ಅಯೋಧ್ಯಾ. ೩-೪೩

ಹೆಚ್ಚು ವಿನಯಸಂಪನ್ನನಾಗಿ ಯಾವಾಗಲೂ ಇಂದ್ರಿಯಗಳನ್ನು ಸ್ವಾಧೀನದಲ್ಲಿ ಇಟ್ಟುಕೊ. ಕಾಮಕ್ರೋಧಗಳಿಂದ ಸಂಭವಿಸುವ (ಮದ್ಯಮೃಗಯಾದಿ) ವ್ಯಸನಗಳನ್ನು ಹತ್ತಿರ ಸೇರಿಸಬೇಡ. (ದಶರಥನು ಶ್ರೀರಾಮನಿಗೆ ಹೇಳಿದ್ದು)

**ಭೇತವ್ಯಂ ನ ತಥಾ ಶತ್ರೋರ್ನಾಗ್ನೇರ್ನಾಹೇರ್ನ ಚಾಶನೇಃ ।**
**ಇಂದ್ರಿಯೇಭ್ಯೋ ಯಥಾ ಸ್ವೇಭ್ಯಸ್ತೈರಜಸ್ರಂ ಹಿ ಹನ್ಯತೇ ॥ ೧೧೮**

- ಸೌಂದರನಂದ, ೧೩-೩೧

ಶತ್ರುವಿಗಾಗಲಿ, ಬೆಂಕಿಗಾಗಲಿ, ಸರ್ಪಕ್ಕಾಗಲಿ, ಸಿಡಿಲಿಗಾಗಲಿ ಅಷ್ಟು ಹೆದರಬೇಕಾಗಿಲ್ಲ. ತನ್ನ ಇಂದ್ರಿಯಗಳಿಗೆ ಹೆಚ್ಚು ಹೆದರಬೇಕಾಗಿದೆ. ಏಕೆಂದರೆ, ಅವು ಸದಾ ಇವನನ್ನು ಪೀಡಿಸುತ್ತಲೇ ಇರುತ್ತವೆ.

**ಭೋಗಾ ಮೇಘವಿತಾನಮಧ್ಯವಿಲಸತ್ಸೌದಾಮಿನೀಚಂಚಲಾ**
**ಆಯುರ್ವಾಯುವಿಘಟ್ಟಿತಾಭ್ರಪಟಲೀ ಲೀನಾಂಬುವದ್ಭಂಗುರಂ ।**
**ಲೋಲಾ ಯೌವನಲಾಲಸಾ ತನುಭೃತಾಮಿತ್ಯಾಕಲಯ್ಯ ದ್ರುತಂ**
**ಯೋಗೇ ಧೈರ್ಯಸಮಾಧಿಸಿದ್ಧಿಸುಲಭೇ ಬುದ್ಧಿಂ ವಿದಧ್ವಂ ಬುಧಾಃ ॥ ೧೧೯**

- ವೈರಾಗ್ಯಶತಕ - ೫೩

ವಿಷಯಸುಖಗಳು ಮೇಘಮಂಡಲದ ಮಧ್ಯದಲ್ಲಿ ಪ್ರಕಾಶಿಸುವ ಮಿಂಚಿನ ಹಾಗೆ

ಚಂಚಲ. ಆಯಸ್ಸು ಗಾಳಿಯಿಂದ ಚದುರಿಸಲ್ಪಟ್ಟ ಮೋಡಗಳ ಸಮೂಹದದಲ್ಲಡಗಿರುವ ನೀರಿನಂತೆ ಅಸ್ಥಿರ. ಮಾನವರಿಗೆ ಯೌವನಲಾಲಸೆಯೂ ಚಂಚಲ ಎಂದು ಬೇಗ ಅರಿತುಕೊಂಡು, ಪಂಡಿತರೆ, ಯೋಗದಲ್ಲಿ ಧೈರ್ಯದಿಂದ ಮನಸ್ಸನ್ನು ಇಡಿರಿ.

**ಭೋಗೇ ರೋಗಭಯಂ ಕುಲೇ ಚ್ಯುತಿಭಯಂ ವಿತ್ತೇ ನೃಪಾಲಾದ್ಭಯಂ**
**ಶಾಸ್ತ್ರೇ ವಾದಿಭಯಂ ಬಲೇ ರಿಪುಭಯಂ ಕಾಯೇ ಕೃತಾಂತಾದ್ಭಯಂ ।**
**ಮಾನೇ ದೈನ್ಯಭಯಂ ಗುಣೇ ಖಲಭಯಂ ರೂಪೇ ಜರಾಯಾ ಭಯಂ**
**ಸರ್ವಂ ವಸ್ತು ಭಯಾನ್ವಿತಂ ಭುವಿ ನೃಣಾಂ ವೈರಾಗ್ಯಮೇವಾಭಯಮ್ ॥೧೨೦**

- ವೈರಾಗ್ಯಶತಕ - ೧೧೬

ಸುಖದಲ್ಲಿ ರೋಗಗಳ ಭಯವಿದೆ. ಕುಲದಲ್ಲಿ ಕೆಟ್ಟ ಹೆಸರಿನ ಭಯವುಂಟು. ಹಣವಿದ್ದರೆ ರಾಜನ ಭಯ ; ಶಾಸ್ತ್ರದಲ್ಲಿ ಪ್ರತಿವಾದಿಗಳ ಭಯ ; ಬಲಪರಾಕ್ರಮದಲ್ಲಿ ಶತ್ರುಗಳ ಭಯ. ದೇಹಕ್ಕೆ ಯಮನ ಭಯ; ಮಾನದಲ್ಲಿ ದೈನ್ಯತೆಯ ಭಯ ; ಗುಣದಲ್ಲಿ ದುಷ್ಟರ ಭಯ ; ರೂಪದಲ್ಲಿ ಮುಪ್ಪಿನ ಭಯ. ಈ ಭೂಮಿಯಲ್ಲಿ ಮನುಷ್ಯರಿಗೆ ಎಲ್ಲ ವಸ್ತುಗಳಲ್ಲಿಯೂ ಭಯವಿದೆ. ಆದರೆ ವೈರಾಗ್ಯವೇ ಭಯವಿಲ್ಲದ್ದು.

**ಮನೋ ನ ವೈರಾಗ್ಯತರಂಗಿತಂ ಚೇತ್**
**ವೃಥಾ ತದಾ ದಾನತಪಃ ಪ್ರಯಾಸಃ ।**
**ಲಾವಣ್ಯಮಂಗೇ ಯದಿ ನಾಂಗನಾನಾಂ**
**ಮುಧಾ ತದಾ ವಿಭ್ರಮವಲ್ಗಿತಾನಿ ॥** ೧೨೧

- (ಪದ್ಮನಂದನ) ವೈರಾಗ್ಯಶತಕ - ೮೮

ಮನಸ್ಸಿನಲ್ಲಿ ವೈರಾಗ್ಯವಿಲ್ಲದಿದ್ದರೆ ದಾನ ತಪಸ್ಸುಗಳಲ್ಲಿ ಪ್ರಯಾಸ ಫಲವಿಲ್ಲದ್ದು. ಸ್ತ್ರೀಯರಿಗೆ ಲಾವಣ್ಯವಿಲ್ಲದಿದ್ದರೆ ವೈಯಾರ ವಿಲಾಸಗಳು ವ್ಯರ್ಥ.

**ಮನೋ ಹಿ ಹೇತುಃ ಸರ್ವೇಷಾಮಿಂದ್ರಿಯಾಣಾಂ ಪ್ರವರ್ತನೇ ।**
**ಶುಭಾಶುಭಾಸ್ವವಸ್ಥಾಸು ತಚ್ಚ ಮೇ ಸುವ್ಯವಸ್ಥಿತಮ್ ॥** ೧೨೨

- ರಾಮಾಯಣ, ಸುಂದರ. ೧೧-೪೩

ಇಂದ್ರಿಯಗಳ ಪ್ರವೃತ್ತಿಗೆ ಮನಸ್ಸೇ ಮೂಲಕಾರಣ. ಪಾಪಪುಣ್ಯಗಳಿಗೆ ಅದೇ ನಿಮಿತ್ತ. ಈ ಮನಸ್ಸು ಪೂರ್ಣವಾಗಿ ನನ್ನ ಸ್ವಾಧೀನದಲ್ಲಿರುವಾಗ ಪಾಪವೇಕೆ ಬರುತ್ತದೆ? (ರಾವಣಾಂತಃಪುರಸ್ತ್ರೀಯರನ್ನು ನೋಡಿದ ಹನುಮಂತನ ಆಲೋಚನೆ)

**ಮರಣಂ ಪ್ರಕೃತಿಃ ಶರೀರಿಣಾಂ ವಿಕೃತಿರ್ಜೀವಿತಮುಚ್ಯತೇ ಬುಧೈಃ ।**
**ಕ್ಷಣಮಪ್ಯವತಿಷ್ಠತೇ ಶ್ವಸನ್ ಯದಿ ಜನ್ತುರ್ನನು ಲಾಭವಾನಸೌ ॥** ೧೨೩

- ರಘುವಂಶ, ೮-೮೭

ಶರೀರವನ್ನು ಪಡೆದ ಪ್ರಾಣಿಗಳಿಗೆ ಸಾವು ಸ್ವಾಭಾವಿಕ. ಬದುಕಿರುವುದೇ ಅಸ್ವಾಭಾವಿಕ ಅಥವಾ ಕೃತ್ರಿಮ. ಒಂದು ಪ್ರಾಣಿಯು ಉಸಿರಾಡುತ್ತಾ ಒಂದು ಕ್ಷಣವಿದ್ದರೂ ಅದೇ ಲಾಭವೆನ್ನಬೇಕು.

**ಮಹೀ ರಮ್ಯಾ ಶಯ್ಯಾ ವಿಪುಲಮುಪಧಾನಂ ಭುಜಲತಾ**
**ವಿತಾನಂ ಚಾಕಾಶಂ ವ್ಯಜನಮನುಕೂಲೋಽಯಮನಿಲಃ ।**
**ಸ್ಫುರದ್ದೀಪಶ್ಚಂದ್ರೋ ವಿರತಿವನಿತಾಸಂಗಮುದಿತಃ**
**ಸುಖಂ ಶಾಂತಃ ಶೇತೇ ಮುನಿರತನುಭೂತಿರ್ನೃಪ ಇವ ॥ ೧೨೪**

- ವೈರಾಗ್ಯಶತಕ - ೭೭

ಭೂಮಿಯೇ ಸೊಗಸಾದ ಹಾಸಿಗೆ ; ಭುಜವೇ ವಿಸ್ತಾರವಾದ ದಿಂಬು. ಆಕಾಶವೇ ಹೊದಿಕೆ, ಅನುಕೂಲವಾದ ಗಾಳಿಯೇ ಬೀಸಣಿಗೆ, ಚಂದ್ರನೇ ಉರಿಯುವ ದೀಪ, ವೈರಾಗ್ಯವನಿತೆಯ ಸಹವಾಸದಿಂದ ಸಂತುಷ್ಟನಾಗಿ, ಮುನಿಯು ಶಾಂತತೆಯಿಂದ ಮಹೈಶ್ವರ್ಯವುಳ್ಳ ರಾಜನಂತೆ ಮಲಗುತ್ತಾನೆ.

**ಮಾರ್ಜಾಲಭಕ್ಷಿತೇ ದುಃಖಂ ಯಾದೃಶಂ ಗೃಹಕುಕ್ಕುಟೇ ।**
**ನ ತಾದೃಙ್ ಮಮತಾಶೂನ್ಯೇ ಕಲವಿಂಕೇಽಥ ಮೂಷಕೇ ॥೧೨೫**

- ಪ್ರಬೋಧಚಂದ್ರೋದಯ, ೫-೨೦

ಮನೆಯ ಕೋಳಿಯನ್ನು ಬೆಕ್ಕು ತಿಂದಾಗ, ಎಷ್ಟು ದುಃಖವಾಗುತ್ತದೆಯೋ ಅಷ್ಟು ದುಃಖ, ಗುಬ್ಬಿಯನ್ನೋ ಇಲಿಯನ್ನೋ ಬೆಕ್ಕು ತಿಂದಾಗ ಜನರಿಗೆ ಆಗುವುದಿಲ್ಲ. ಮಮತೆಯಿಲ್ಲದಿರುವುದೇ ಅದಕ್ಕೆ ಕಾರಣ.

**ಮಾತರ್ಮೇದಿನಿ ತಾತ ಮಾರುತ ಸಖೇ ತೇಜಃ ಸುಬಂಧೋ ಜಲ**
**ಭ್ರಾತರ್ವ್ಯೋಮ ನಿಬದ್ಧ ಏಷ ಭವತಾಮಗ್ರೇ ಪ್ರಣಾಮಾಂಜಲಿಃ ।**
**ಯುಷ್ಮತ್ಸಂಗವಶೋಪಜಾತಸುಕೃತೋದ್ರೇಕಸ್ಫುರನ್ನಿರ್ಮಲ-**
**ಜ್ಞಾನಾಪಾಸ್ತಸಮಸ್ತಮೋಹಮಹಿಮಾ ಲೀಯೇ ಪರೇ ಬ್ರಹ್ಮಣಿ ॥ ೧೨೬**

- ವೈರಾಗ್ಯಶತಕ - ೮೫

ಎಲೈ ಭೂಮಿತಾಯಿಯೇ, ತಂದೆಯಾದ ಗಾಳಿಯೇ, ಸ್ನೇಹಿತನಾದ ಅಗ್ನಿಯೇ, ಒಳ್ಳೆಯ ಬಂಧುವಾದ ನೀರೆ, ಸಹೋದರನಾದ ಆಕಾಶವೇ, ನಿಮ್ಮೆಲ್ಲರಿಗೂ ಕೈಮುಗಿಯುತ್ತೇನೆ. ನಿಮ್ಮೆಲ್ಲರ ಸಹವಾಸದ ಪರಿಣಾಮವಾಗಿ ಉಂಟಾದ ನಿರ್ಮಲ ಜ್ಞಾನದಿಂದ ಮೋಹವನ್ನು ಕಳೆದು ನಾನು, ಪರಬ್ರಹ್ಮನಲ್ಲಿ ಐಕ್ಯವಾಗುವೆ.

**ಮಾತೃಪಿತೃಸುತಭ್ರಾತೃಬಂಧುದಾರಾದಿಸಂಗಮಃ ।**
**ಪ್ರಪಾಯಾಮಿವ ಜಂತೂನಾಂ ನದ್ಯಾಂ ಕಾಷ್ಠೌಘವಚ್ಚಲಃ ॥ ೧೨೭**

- ಗರುಡಪುರಾಣ, ೮-೧೦೫

ತಾಯಿ, ತಂದೆ, ಮಗ, ಸಹೋದರ, ನೆಂಟರು ಇವರ ಸೇರುವಿಕೆಯು ಶಾಶ್ವತವಲ್ಲ. ಅರವಟ್ಟಿಗೆಗೆ ನೀರು ಕುಡಿಯಲು ಬಂದ ಜನರಂತೆ ನದಿಯಲ್ಲಿ ತೇಲುತ್ತಿರುವ ಮರದ ತುಂಡುಗಳಂತೆ ಕ್ಷಣಿಕ.

**ಮಾತಾಪಿತೃಸಹಸ್ರಾಣಿ ಪುತ್ರದಾರಶತಾನಿ ಚ ।**
**ಸಂಸಾರೇಷ್ವನುಭೂತಾನಿ ಕಸ್ಯ ತೇ ಕಸ್ಯ ವಾ ವಯಮ್ ॥ ೧೨೮**

- ಮಹಾಭಾರತ, ಸ್ತ್ರೀ. ೨-೨೧, ಶಾಂತಿ. ೨೮-೨೯

ಸಾವಿರಾರು ತಂದೆ ತಾಯಿಗಳೂ ನೂರಾರು ಹೆಂಡಿರು ಮಕ್ಕಳೂ ಈ ಸಂಸಾರದಲ್ಲಿ ಆಗಿಹೋದರು. ಹೀಗಿರುವಾಗ ಅವರು ಯಾರ ಸಂಬಂಧಿಗಳು ? ನಾವು ಯಾರ ಸಂಬಂಧಿಗಳು ?

**ಮಾತ್ರಾ ಸ್ವಸ್ರಾ ದುಹಿತ್ರಾ ವಾ ನಾವಿವಿಕ್ತಾಸನೋ ಭವೇತ್ ।**
**ಬಲವಾನಿಂದ್ರಿಯಗ್ರಾಮೋ ವಿದ್ವಾಂಸಮಪಿ ಕರ್ಷತಿ ॥ ೧೨೯**

- ಭಾಗವತ, ೯-೧೯-೧೭

ತಾಯಿಯೊಡನೆಯಾಗಲಿ, ಸಹೋದರಿಯೊಡನೆಯಾಗಲಿ, ಮಗಳೊಡನೆ ಯಾಗಲಿ, ಏಕಾಂತದಲ್ಲಿ ಕುಳಿತುಕೊಳ್ಳಬಾರದು. ಇಂದ್ರಿಯಗಳು ಬಲಿಷ್ಠವಾಗಿವೆ. ವಿದ್ವಾಂಸನನ್ನು ಸಹ ಎಳೆಯುತ್ತದೆ.

**ಮಾನುಷ್ಯಂ ನಾವಮಾಸಾದ್ಯ ತರ ದುಃಖಮಹಾನದೀಂ ।**
**ಮೂಢ! ಕಾಲೋ ನ ನಿದ್ರಾಯಾ ಇಯಂ ನೌರ್ದುರ್ಲಭಾ ಪುನಃ ॥ ೩೦**

- ಬೋಧಿಚರ್ಯಾವತಾರ

ಮನುಷ್ಯಜನ್ಮವೆಂಬ ದೋಣಿ ಸಿಕ್ಕಿರುವಾಗ, ದುಃಖದ ಮಹಾನದಿಯನ್ನು ದಾಟಿಬಿಡು. ಎಲೈ ಮೂಢ, ಇದು ನಿದ್ರಿಸುವ ಕಾಲವಲ್ಲ. ಈ ದೋಣಿ ಮತ್ತೆ ಸಿಗಲಾರದು.

**ಮುಕ್ತಿಮಿಚ್ಛಸಿ ಚೇತ್ತಾತ ವಿಷಯಾನ್ ವಿಷವತ್ತ್ಯಜೇಃ ।**
**ಕ್ಷಮಾರ್ಜವದಯಾ ಶೌಚಂ ಸತ್ಯಂ ಪೀಯೂಷವತ್ ಪಿಬೇಃ ॥ ೧೩೧**

- ಅಷ್ಟಾವಕ್ರಗೀತೆ

ಅಯ್ಯಾ, ಮೋಕ್ಷದಲ್ಲಿ ನಿನಗೆ ಆಶೆ ಇರುವುದಾದರೆ ವಿಷಯಸುಖಗಳನ್ನು ವಿಷದಂತೆ

ತಿಳಿದು ತ್ಯಾಗಮಾಡು. ಹಾಗೆಯೇ ಕ್ಷಮೆ, ಸರಳತೆ, ದಯೆ, ಪವಿತ್ರತೆ, ಸತ್ಯ - ಇವುಗಳನ್ನು ಅಮೃತಸಮಾನವೆಂದು ತಿಳಿದು ಪಾನಮಾಡು.

**ಮೂಢ ಜಹೀಹಿ ಧನಾಗಮತೃಷ್ಣಾಂ**
**ಕುರು ಸದ್ಬುದ್ಧಿಂ ಮನಸಿ ವಿತೃಷ್ಣಾಂ ।**
**ಯಲ್ಲಭಸೇ ನಿಜಕರ್ಮೋಪಾತ್ತಂ**
**ವಿತ್ತಂ ತೇನ ವಿನೋದಯ ಚಿತ್ತಮ್ ॥** ೧೩೨

- ಮೋಹಮುದ್ಗರಸ್ತೋತ್ರ

ಎಲೈ ಮೂಢ, ಧನಸಂಪಾದನೆಯ ಲೋಭವನ್ನು ಬಿಡು. ಸತ್ ಎನಿಸಿದ ಈಶ್ವರನಲ್ಲಿ ಬುದ್ಧಿಯನ್ನಿಡು. ಆ ಬುದ್ಧಿ ಆಶಾರಹಿತವಾಗಿರಲಿ. ನಿನ್ನ ಕರ್ಮಾನುಗುಣವಾಗಿ ಎಷ್ಟು ಹಣವನ್ನು ಪಡೆಯುವೆಯೋ ಅಷ್ಟರಿಂದ ಮನಸ್ಸನ್ನು ಸಂತೋಷಪಡಿಸಿಕೊ.

**ಯತ್ಪ್ರಾತಃ ಸಂಸ್ಕೃತಂ ಭೋಜ್ಯಂ ಸಾಯಂ ತಚ್ಚ ವಿನಶ್ಯತಿ ।**
**ತದನ್ನರಸಸಂಪುಷ್ಟೇ ಕಾಯೇ ಕಾ ನಾಮ ನಿತ್ಯತಾ ॥** ೧೩೩

- ಗರುಢ ಪುರಾಣ ೧೧-೧೧

ಬೆಳಗ್ಗೆ ಅಡಿಗೆ ಮಾಡಿದ ಆಹಾರವು ಹಳಸಿಹೋಗುತ್ತದೆ. ಹೀಗಿರುವಾಗ ಅದೇ ಅನ್ನರಸದಿಂದ ಬೆಳೆದ ದೇಹವು ಹೇಗೆ ನಿತ್ಯವಾದೀತು.

**ಯಥಾ ತಾಲಂ ವಿನಾ ರಾಗಃ ಯಥಾ ಮಾನಂ ವಿನಾ ನೃಪಃ ।**
**ಯಥಾ ದಾನಂ ವಿನಾ ಹಸ್ತೀ ತಥಾ ಜ್ಞಾನಂ ವಿನಾ ಯತಿಃ ॥** ೧೩೪

ತಾಳವಿಲ್ಲದ ರಾಗ ಹೇಗೋ, ಮಾನವಿಲ್ಲದ ರಾಜ ಹೇಗೋ, ಮದೋದಕವಿಲ್ಲದ ಆನೆ ಹೇಗೋ, ಹಾಗೆ ಜ್ಞಾನವಿಲ್ಲದ ಯತಿ.

**ಯಥಾ ಕಾಷ್ಠಂ ಚ ಕಾಷ್ಠಂ ಚ ಸಮೇಯಾತಾಂ ಮಹಾರ್ಣವೇ ।**
**ಸಮೇತ್ಯ ಚ ವ್ಯಪೇಯಾತಾಂ ಕಾಲಮಾಸಾದ್ಯ ಕಂಚನ ॥**
**ಏವಂ ಭಾರ್ಯಾಶ್ಚ ಪುತ್ರಾಶ್ಚ ಜ್ಞಾತಯಶ್ಚ ಧನಾನಿ ಚ ।**
**ಸಮೇತ್ಯ ವ್ಯವಧಾವಂತಿ ಧ್ರುವೋ ಹ್ಯೇಷಾಂ ವಿನಾ ಭವಃ ॥** ೧೩೫

- ರಾಮಾಯಣ, ಅಯೋಧ್ಯಾ. ೧೦೫-೨೭

ಮಹಾಸಾಗರದಲ್ಲಿ ತೇಲುವ ಕಡ್ಡಿಗಳು ಅಕಸ್ಮಾತ್ತಾಗಿ ಒಂದನ್ನೊಂದು ಸೇರುತ್ತವೆ. ಸ್ವಲ್ಪಹೊತ್ತಿನಲ್ಲಿ ಮತ್ತೆ ಅಗಲಿಹೋಗುತ್ತವೆ.

ಹಾಗೆಯೇ ಹೆಂಡತಿ, ಮಕ್ಕಳು, ಬಂಧುಗಳು, ಐಶ್ವರ್ಯ - ಎಲ್ಲವೂ ಒಂದು ಕಾಲದಲ್ಲಿ ಬಂದು ಸೇರುತ್ತವೆ. ಆಮೇಲೆ ಬಿಟ್ಟು ಓಡುತ್ತವೆ. ಇವು ಅಗಲಿಹೋಗುವುದು ನಿಶ್ಚಯ.

**ಯಥಾಂಭಸಿ ಪ್ರಸನ್ನೇ ತು ರೂಪಂ ಪಶ್ಯತಿ ಚಕ್ಷುಷಾ ।**
**ತದ್ವತ್ ಪ್ರಸನ್ನೇಂದ್ರಿಯವಾನ್ ಜ್ಞೇಯಂ ಜ್ಞಾನೇನ ಪಶ್ಯತಿ ॥೧೩೬**

- ಸುಭಾಷಿತಸುಧಾನಿಧಿ

ನೀರು ತಿಳಿಯಾಗಿ ಪ್ರಸನ್ನವಾಗಿದ್ದಾಗ ತನ್ನ ರೂಪವನ್ನು ಅದರಲ್ಲಿ ಕಣ್ಣಿಂದ ಹೇಗೆ ಕಾಣಬಹುದೋ ಹಾಗೆಯೇ ಇಂದ್ರಿಯಗಳೆಲ್ಲಾ ಶಾಂತವಾಗಿರುವಾಗ ಜ್ಞಾನದ ಮೂಲಕ ತಿಳಿಯಲ್ಪಡಬೇಕಾದ ತತ್ತ್ವವನ್ನು ಕಾಣುತ್ತಾನೆ.

**ಯಥಾಮಯೋऽಸಾಧುಚಿಕಿತ್ಸಿತೋ ನೃಣಾಂ**
**ಪುನಃ ಪುನಃ ಸಂತುದತಿ ಪ್ರರೋಹನ್ ।**
**ಏವಂ ಮನೋऽಪಕ್ವಕಷಾಯಕರ್ಮ**
**ಕುಯೋಗಿನಂ ವಿಧ್ಯತಿ ಸರ್ವಸಂಗಮ್ ॥ ೧೩೭**

- ಭಾಗವತ, ೧೧-೨೮-೨೮

ಹೇಗೆ ಚೆನ್ನಾಗಿ ಚಿಕಿತ್ಸೆ ಮಾಡಲ್ಪಡದೇ ಇರುವ ರೋಗವು ಮನುಷ್ಯರಲ್ಲಿ ಮತ್ತೆ ಮತ್ತೆ ಬೆಳೆಯುತ್ತಾ ಪೀಡಿಸುತ್ತದೆಯೋ ಹಾಗೆಯೇ ಎಲ್ಲಾ ಸಹವಾಸವನ್ನಿಟ್ಟು ಕೊಂಡಿರುವ ಕೆಟ್ಟ ಯೋಗಿಯನ್ನು ಉಳಿದ ಪ್ರಾರಬ್ಧಕರ್ಮವುಳ್ಳ ಮನಸ್ಸು ಬಾಧಿಸುತ್ತದೆ.

**ಯಥಾ ಹಿ ಪಥಿಕಃ ಕಶ್ಚಿಚ್ಛಾಯಾಮಾಶ್ರಿತ್ಯ ವಿಶ್ರಮೇತ್ ।**
**ವಿಶ್ರಮ್ಯ ಚ ಪುನರ್ಗಚ್ಛೇತ್ ತದ್ವದ್ಭೂತಸಮಾಗಮಃ ॥ ೧೩೮**

- ಗರುಡಪುರಾಣ, ೧೧-೧೦

ದಾರಿ ನಡೆಯುವವನು ನೆರಳನ್ನು ಆಶ್ರಯಿಸಿ ದಣಿವಾರಿಸಿಕೊಳ್ಳುತ್ತಾನೆ. ಆಮೇಲೆ ಮತ್ತೆ ಪ್ರಯಾಣದಲ್ಲಿ ತೊಡಗುತ್ತಾನೆ. ಅದೇ ರೀತಿ ಪ್ರಾಣಿಗಳ ಪರಸ್ಪರ ಸೇರುವಿಕೆಯೂ ಕ್ಷಣಿಕ.

**ಯದಿ ನಾಮಾಸ್ಯ ಕಾಯಸ್ಯ ಯದಂತಸ್ತದ್ಬಹಿರ್ಭವೇತ್ ।**
**ದಂಡಮಾದಾಯ ಲೋಕೋऽಯಂ ಶುನಃ ಕಾಕಾಂಶ್ಚ ವಾರಯೇತ್ ॥ ೧೩೯**

- ಲೋಚನ - ೧

ಈ ದೇಹದೊಳಗಿರುವ ವಸ್ತುಗಳೆಲ್ಲವೂ ಹೊರಗೆ ಬಂದು ಕಾಣಿಸುತ್ತಿದ್ದರೆ,

ಜನರೆಲ್ಲರೂ ದೊಣ್ಣೆಯನ್ನು ಹಿಡಿದುಕೊಂಡು ನಾಯಿಗಳನ್ನು ಕಾಗೆಗಳನ್ನೂ ಓಡಿಸುತ್ತಾ ಇರಬೇಕಾಗುತ್ತಿತ್ತು.

**ಯಃ ಸಮುತ್ಪತಿತಂ ಕ್ರೋಧಂ ನಿಗೃಹ್ಣಾತಿ ಹಯಂ ಯಥಾ ।**
**ಸ ಯಂತೇತ್ಯುಚ್ಯತೇ ಸದ್ಭಿರ್ನ ಯೋ ರಶ್ಮಿಷು ಸಜ್ಜತೇ ॥ ೧೪೦**

- ಮಹಾಭಾರತ, ಆದಿ. ೭೯-೨

ಸಿಡಿಯುವ ಕೋಪವನ್ನು ಯಾವನು ಕುದುರೆಯಂತೆ ಹತೋಟಿಗೆ ತರುವನೋ, ಅವನಿಗೆ ಸಾರಥಿ ಎಂದು ಹೆಸರು. ಸಾರಥಿಯೆಂದರೆ ಕುದುರೆಯ ಲಗಾಮನ್ನು ಹಿಡಿಯುವವನು ಮಾತ್ರವಲ್ಲ.

**ಯಃ ಸಮುತ್ಪಿತಂ ಕ್ರೋಧಂ ಕ್ಷಮಯೈವ ನಿರಸ್ಯತಿ ।**
**ಯಥೋರಗಸ್ತ್ವಚಂ ಜೀರ್ಣಾಂ ಸ ವೈ ಪುರುಷ ಉಚ್ಯತೇ ॥ ೧೪೧**

- ರಾಮಾಯಣ, ಸುಂದರ. ೫೫-೭

ಸರ್ಪವು ಜೀರ್ಣವಾದ ಪೊರೆಯನ್ನು ಬಿಸುಡುವಂತೆ, ಯಾವನು ತಾಳ್ಮೆಯಿಂದ ಕೋಪವನ್ನು ದೂರಮಾಡುವನೋ ಅವನೇ ಮನುಷ್ಯ.

**ಯಾವಂತೋ ವಿಷಯಾಃ ಪ್ರೇಷ್ಠಾಸ್ತ್ರಿಲೋಕ್ಯಾಮಜಿತೇಂದ್ರಿಯಂ ।**
**ನ ಶಕ್ನುವಂತಿ ತೇ ಸರ್ವೇ ಪ್ರತಿಪೂರಯಿತುಂ ನೃಪ ॥ ೧೪೨**

- ಭಾಗವತ, ೮-೧೯-೨೧

ಸುಖಸಾಧನಗಳಾದ ಪ್ರಿಯ ವಿಷಯಗಳು ಈ ಮೂರು ಲೋಕದಲ್ಲಿ ಎಷ್ಟಿವೆಯೋ ಅವೆಲ್ಲವೂ ಸೇರಿದರೂ, ಇಂದ್ರಿಯಗಳ ಸೆಳೆತಕ್ಕೆ ಒಳಗಾದವನನ್ನು ತೃಪ್ತಿಪಡಿಸಲಾರವು.

**ಯಾವದ್ವಿತ್ತೋಪಾರ್ಜನಸಕ್ತಃ**
**ತಾವನ್ನಿಜಪರಿವಾರೋ ರಕ್ತಃ ।**
**ಪಶ್ಚಾಜ್ಜರ್ಜರಭೂತೇ ದೇಹೇ**
**ವಾರ್ತಾಂ ಕೋಽಪಿ ನ ಪೃಚ್ಛತಿ ಗೇಹೇ ॥ ೧೪೩**

- ಭಜಗೋವಿಂದಸ್ತೋತ್ರ

ಹಣದ ಸಂಪಾದನೆಯಲ್ಲಿ ತೊಡಗಿರುವವರೆಗೂ ಕುಟುಂಬದವರು ಅವನಲ್ಲಿ ಪ್ರೀತಿಯಿಂದಿರುತ್ತಾರೆ. ಆಮೇಲೆ ದೇಹವು ಜೀರ್ಣವಾಗಲು ಮನೆಯಲ್ಲಿ ಯಾರೂ ಇವನ ಸುದ್ದಿಯನ್ನೂ ಕೇಳುವುದಿಲ್ಲ.

ಯುಜ್ಯತೇ ವೇಷ್ಟನಂ ವಾಯೋಃ ಆಕಾಶಸ್ಯ ಚ ಖಂಡನಂ ।
ಗ್ರಥನಂ ಚ ತರಂಗಾಣಾಂ ಆಸ್ಥಾ ನಾಯುಷಿ ಯುಜ್ಯತೇ ॥ ೧೪೪

- ಗರುಡಪುರಾಣ, ೧೬-೩೭

ಗಾಳಿಯನ್ನು ಸುತ್ತಿ ಬಂಧಿಸಬಹುದು. ಆಕಾಶವನ್ನಾದರೂ ಕತ್ತರಿಸಬಹುದು. ಅಲೆಗಳನ್ನೂ ಪೋಣಿಸಬಹುದು. ಆದರೆ ಆಯುಸ್ಸಿನಲ್ಲಿ ನಂಬಿಕೆ ಇಡುವುದಕ್ಕಾಗುವುದಿಲ್ಲ.

ರಮ್ಯಂ ಹರ್ಮ್ಯತಲಂ ನ ಕಿಂ ವಸತಯೇ ಶ್ರಾವ್ಯಂ ನ ಗೇಯಾದಿಕಂ
ಕಿಂ ವಾ ಪ್ರಾಣಸಮಾಸಮಾಗಮಸುಖಂ ನೈವಾಧಿಕಂ ಪ್ರೀತಯೇ ।
ಕಿಂ ತೂದ್ಭ್ರಾಂತಪತತ್ಪತಂಗಪವನವ್ಯಾಲೋಲದೀಪಾಂಕುರ
ಚ್ಛಾಯಾಚಂಚಲಮಾಕಲಯ್ಯ ಸಕಲಂ ಸಂತೋ ವನಾಂತಂ ಗತಾಃ ॥೧೪೫

- ವೈರಾಗ್ಯಶತಕ - ೬೬

ಮನೆಯಲ್ಲಿ ವಾಸಮಾಡುವುದು ಸೊಗಸಲ್ಲವೇ ? ಸಂಗೀತ ಮೊದಲಾದವುಗಳು ಇಂಪಲ್ಲವೇ ? ಪ್ರಾಣಪ್ರಿಯಳ ಸಹವಾಸದ ಸುಖ ಹೆಚ್ಚು ಪ್ರೀತಿಯನ್ನುಂಟು ಮಾಡುವುದಿಲ್ಲವೇ ? ಆದರೂ ಸತ್ಪುರುಷರು ಬೀಳುತ್ತಿರುವ ಪತಂಗಹುಳುಗಳಿಂದ ಚಂಚಲವಾದ ದೀಪದ ಸೊಡರಿನಂತೆ, ಎಲ್ಲವೂ ಅಸ್ಥಿರವೆಂದು ಬಗೆದು ಕಾಡಿಗೆ ಹೊರಟು ಹೋದರು.

ರಮ್ಯಾಶ್ಚಂದ್ರಮರೀಚಯಸ್ತೃಣವತೀ ರಮ್ಯಾ ವನಾಂತಸ್ಥಲೀ
ರಮ್ಯಂ ಸಾಧುಸಮಾಗಮೋದ್ಭವಸುಖಂ ಕಾವ್ಯೇಷು ರಮ್ಯಾಃ ಕಥಾಃ ।
ಕೋಪೋಪಾಹಿತಬಾಷ್ಪಬಿಂದುತರಳಂ ರಮ್ಯಂ ಪ್ರಿಯಾಯಾ ಮುಖಂ
ಸರ್ವಂ ರಮ್ಯಮನಿತ್ಯತಾಮುಪಗತೇ ಚಿತ್ತೇ ನ ಕಿಂಚಿತ್ಪುನಃ ॥ ೧೪೬

- ವೈರಾಗ್ಯಶತಕ - ೮೩

ಚಂದ್ರನ ಕಿರಣಗಳು ಸುಂದರವಾಗಿವೆ. ಹಸುರುಹುಲ್ಲಿನಿಂದ ಕೂಡಿದ ಅರಣ್ಯ ಪ್ರದೇಶ ಬಹು ಸೊಗಸು. ಸಾಧುಗಳ ಆಗಮನದಿಂದುಂಟಾಗುವ ಸುಖವು ಬಹಳ ಚೆನ್ನಾಗಿರುತ್ತದೆ. ಕಾವ್ಯಗಳಲ್ಲಿ ಕಥೆಗಳು ಸೊಗಸು. ಕೋಪಿಸಿಕೊಂಡ ಪ್ರಿಯಳ ಕಣ್ಣೀರಿನಿಂದ ಚಂಚಲವಾದ ಮುಖವು ಬಹಳ ರಮಣೀಯ. ಆದರೆ ಇವೆಲ್ಲವೂ ಶಾಶ್ವತವಲ್ಲವೆಂದರಿತ ಮನಸ್ಸಿನಲ್ಲಿ ಯಾವುದೂ ಸುಂದರವಲ್ಲ.

ರಾಮೇ ಪ್ರವ್ರಜನಂ ಬಲೇರ್ನಿಯಮನಂ ಪಾಂಡೋಃ ಸುತಾನಾಂ ವನಂ
ವೃಷ್ಣೀನಾಂ ನಿಧನಂ ನಲಸ್ಯ ನೃಪತೇ ರಾಜ್ಯಾತ್ ಪರಿಭ್ರಂಶನಂ ।
ಕಾರಾಗಾರನಿಷೇವಣಂ ಚ ಮರಣಂ ಸಂಚಿಂತ್ಯ ಲಂಕೇಶ್ವರೇ
ಸರ್ವಃ ಕಾಲವಶೇನ ನಶ್ಯತಿ ನರಃ ಕೋ ವಾ ಪರಿತ್ರಾಯತೇ ॥ ೧೪೭

- ಭೋಜಪ್ರಬಂಧ

ರಾಮನು ಅರಣ್ಯಕ್ಕೆ ಹೋದನು. ಬಲಿಯು ಪಾತಾಳಕ್ಕೆ ತುಳಿಯಲ್ಪಟ್ಟನು. ಪಾಂಡವರು ಅರಣ್ಯದಲ್ಲಿ ಕಾಲ ಕಳೆಯಬೇಕಾಯಿತು. ಯಾದವರು ಪರಸ್ಪರ ಹೊಡೆದಾಡಿ ಸತ್ತರು. ನಳನು ರಾಜ್ಯವನ್ನು ಕಳೆದುಕೊಂಡನು. ಲಂಕಾಧಿಪತಿಯಾದ ರಾವಣನು ಸೆರೆಮನೆಯಲ್ಲಿರಬೇಕಾಯಿತು. ಕೊನೆಗೆ ಸತ್ತೂ ಹೋದನು. ಇದೆಲ್ಲವನ್ನೂ ಗಂಭೀರವಾಗಿ ಯೋಚಿಸಿದರೆ ಎಲ್ಲರೂ ಕಾಲಾಧೀನರಾಗಿ ನಾಶವಾಗುತ್ತಾರೆ. ಯಾರನ್ನು ಯಾರೂ ಕಾಪಾಡಲಾರರು.

**ರುಧಿರತ್ರಿಧಾತುಮಜ್ಜಾಮೇದೋಮಾಂಸಾಸ್ಥಿಸಂಹತಿರ್ದೇಹಃ ।**
**ಸ ಬಹಿಸ್ತ್ವಚಾ ಪಿನದ್ಧಸ್ತಸ್ಮಾನ್ನೋ ಭಕ್ಷ್ಯತೇ ಕಾಕೈಃ ॥** ೧೪೮

- ಪ್ರಬೋಧಸುಧಾಕರ - ೧೯

ಈ ದೇಹವು ರಕ್ತ, ವಾತ, ಪಿತ್ತ, ಕಫ, ಮಜ್ಜೆ, ಮೇದಸ್ಸು, ಮಾಂಸ, ಮೂಳೆಗಳ ಸಮೂಹ. ಹೊರಗಡೆ ಚರ್ಮವು ಇವನ್ನು ಮುಚ್ಚಿಕೊಂಡಿದೆಯಾದ್ದರಿಂದ ಕಾಗೆಗಳು ತಿನ್ನುತ್ತಿಲ್ಲ !

**ಲಬ್ಧ್ವಾಽಪಿ ಸುಬಹೂನ್ ಲಾಭಾನ್ ಚಿರಂ ಭುಕ್ತ್ವಾ ಸುಖಾನ್ಯಪಿ ।**
**ರಿಕ್ತಹಸ್ತಶ್ಚ ನಗ್ನಶ್ಚ ಯಾಸ್ಯಾಮಿ ಮುಷಿತೋ ಯಥಾ ॥** ೧೪೯

-ಬೋಧಿಚರ್ಯಾವತಾರ - ೨೦೧

ಅನೇಕ ಲಾಭಗಳನ್ನು ಪಡೆದು, ಬಹಳ ಕಾಲ ಸುಖಗಳನ್ನನುಭವಿಸಿ, ಕಡೆಗೆ ಬರಿಗೈಯಲ್ಲಿ ಬೆತ್ತಲೆಯಾಗಿ ಎಲ್ಲವನ್ನೂ ಕಳೆದುಕೊಂಡು ದೋಚಿಹೋದವನಂತೆ ಹೋಗುವೆನು !

**ಲಬ್ಧ್ವಾ ಸುದುರ್ಲಭತರಂ ನರಜನ್ಮ ಜಂತುಃ**
**ತತ್ರಾಪಿ ಪೌರುಷಮತಃ ಸದಸದ್ವಿವೇಕಂ ।**
**ಸಂಪ್ರಾಪ್ಯ ಚೈಹಿಕಸುಖಾಭಿರತೋ ಯದಿ ಸ್ಯಾತ್**
**ಧಿಕ್ ತಸ್ಯ ಜನ್ಮ ಕುಮತೇಃ ಪುರುಷಾಧಮಸ್ಯ ॥** ೧೫೦

- ಶ್ರೀಶಂಕರಾಚಾರ್ಯ

ಅತ್ಯಂತ ದುರ್ಲಭವಾದ ಮನುಷ್ಯಜನ್ಮವನ್ನು ಪಡೆದು, ಅದರಲ್ಲಿಯೂ ಗಂಡಸಾಗಿ ಹುಟ್ಟಿ, ಒಳ್ಳೆಯದು - ಕೆಟ್ಟದು ಎಂಬ ವಿವೇಚನಾಶಕ್ತಿಯನ್ನು ಪಡೆದಿದ್ದರೂ ಐಹಿಕ ಸುಖದಲ್ಲಿಯೇ ಮುಳುಗಿದವನು ದುರ್ಬುದ್ಧಿಯುಳ್ಳವನು. ಆ ಪುರುಷಾಧಮನ ಜನ್ಮಕ್ಕೆ ಧಿಕ್ಕಾರವಿರಲಿ.

**ಲಬ್ಧ್ವೇಹ ಮಾನುಷೀಂ ಯೋನಿಂ ಜ್ಞಾನವಿಜ್ಞಾನಸಂಭವಾಂ ।**
**ಆತ್ಮಾನಂ ಯೋ ನ ಬುದ್ಧ್ಯೇತ ನ ಕ್ವಚಿಚ್ಛಮಮಾಪ್ನುಯಾತ್ ॥** ೧೫೧

- ಭಾಗವತ, ೬-೧೬-೫೮

ಈ ಲೋಕದಲ್ಲಿ ಮನುಷ್ಯ ಜನ್ಮವನ್ನು ಪಡೆದು ಒಳ್ಳೆಯ ತಿಳಿವಳಿಕೆಯಿಂದ ಯಾವನು ಆತ್ಮವನ್ನು ಅಂದರೆ ತನ್ನನ್ನು ಅರಿತುಕೊಳ್ಳುವುದಿಲ್ಲವೋ ಅಂತಹವನು ಎಲ್ಲಿಯೂ ಶಾಂತಿಯನ್ನು ಹೊಂದಲಾರನು.

**ಲೋಭಮೂಲಾನಿ ಪಾಪಾನಿ ವ್ಯಾಧಯೋ ರಸಮೂಲಕಾಃ ।**
**ಸ್ನೇಹಮೂಲಾನಿ ದುಃಖಾನಿ ತ್ರೀಣಿ ತ್ಯಕ್ತ್ವಾ ಸುಖೀ ಭವೇತ್ ॥** ೧೫೨

- ಅಭಿನವಪಾಠಾವಲಿ-೧

ಪಾಪಗಳಿಗೆ ಆಸೆ ಮೂಲ. ರೋಗಗಳಿಗೆ ರಸವು ಮೂಲ. ದುಃಖಕ್ಕೆ ಆಸಕ್ತಿಯೇ ಮೂಲ. ಆದ್ದರಿಂದ ಈ ಮೂರನ್ನೂ ತ್ಯಜಿಸಿ ಸುಖಿಯಾಗಬೇಕು.

**ವಂಗಾಃ ಕಥಮಂಗಾಃ ಕಥಮಿತ್ಯನುಯುಂಕ್ತೇ ವೃಥಾ ದೇಶಾನ್ ।**
**ಕೀದೃಕ್ ಕೃತಾಂತಪುರಮಿತಿ ಕೋಽಪಿ ನ ಜಿಜ್ಞಾಸತೇ ಲೋಕಃ ॥** ೧೫೩

- (ಅಪ್ಪಯ್ಯ ದೀಕ್ಷಿತರ) ವೈರಾಗ್ಯಶತಕ

"ವಂಗದೇಶ ಹೇಗಿದೆ ? ಅಂಗದೇಶ ಹೇಗಿದೆ?" ಎಂದು ಜನರು ವ್ಯರ್ಥವಾಗಿ ದೇಶಾಂತರಗಳನ್ನು ಕುರಿತು ಪ್ರಶ್ನೆಹಾಕುತ್ತಾರೆ. 'ಯಮನಗರಿ ಹೇಗಿದೆ?' ಎಂದು ಯಾರೂ ತಿಳಿಯಲು ಬಯಸುವುದಿಲ್ಲ!

**ವರ್ಜಯೇತ್ ಪ್ರಮದಾಗಾಥಾಮಗೃಹಸ್ಥೋ ಬೃಹದ್ವ್ರತಃ ।**
**ಇಂದ್ರಿಯಾಣಿ ಪ್ರಮಾಥೀನಿ ಹರಂತ್ಯಪಿ ಯತೇರ್ಮನಃ ॥** ೧೫೪

- ಭಾಗವತ, ೭-೧೨-೭

ಗೃಹಸ್ಥನಲ್ಲದವನು, ದೊಡ್ಡ ವ್ರತ ಕೈಕೊಂಡಿರುವವನು, ಹೆಂಗಸರ ವಿಷಯವಾಗಿ ಮಾತನ್ನು ಆಡುವದನ್ನು ಬಿಟ್ಟುಬಿಡಬೇಕು, ಇಂದ್ರಿಯಗಳು ಮನುಷ್ಯನ ಮನಸ್ಸನ್ನು ಕಡೆಯುತ್ತವೆ. ಯತಿಯ ಮನಸ್ಸನ್ನೂ ಕೂಡ ಅಪಹರಿಸುತ್ತವೆ.

**ವಪುಃ ಕುಬ್ಜೀಭೂತಂ ಗತಿರಪಿ ತಥಾ ಯಷ್ಟಿಶರಣಾ**
**ವಿಶೀರ್ಣಾ ದಂತಾಲಿಃ ಶ್ರವಣವಿಕಲಂ ಶ್ರೋತ್ರಯುಗಲಂ ।**
**ಶಿರಃ ಶುಕ್ಲಂ ಚಕ್ಷುಸ್ತಿಮಿರಪಟಲೈರಾವೃತಮಹೋ**
**ಮನೋ ಮೇ ನಿರ್ಲಜ್ಜಂ ತದಪಿ ವಿಷಯೇಭ್ಯಃ ಸ್ಪೃಹಯತಿ ॥** ೧೫೫

ಶರೀರ ಗೂನಾಗಿ ಬಾಗಿತು. ನಡಗೆಗೆ ಕೋಲನ್ನಾಶ್ರಯಿಸಬೇಕಾಯಿತು. ಹಲ್ಲುಗಳೆಲ್ಲಾ ಬಿದ್ದುಹೋದುವು. ಕಿವಿಗಳೆರಡೂ ಶಬ್ದ ಕೇಳದಂತಾದವು. ತಲೆ ನರೆತಿತು. ಕಣ್ಣುಗಳು ಪೊರೆ ಮುಚ್ಚಿತು. ಇಷ್ಟಾದರೂ ನನ್ನ ನಾಚಿಕೆಗೆಟ್ಟ ಮನಸ್ಸು ವಿಷಯ ಸುಖವನ್ನು ಬಯಸುತ್ತಿದ್ದೆಯಲ್ಲಾ! ಇದು ಆಶ್ಚರ್ಯ!

**ವಯಸಃ ಕರ್ಮಣೋಽರ್ಥಸ್ಯ ಶ್ರುತಸ್ಯಾಭಿಜನಸ್ಯ ಚ ।**
**ವೇಷವಾಗ್ವೃತ್ತಿ ಸಾರೂಪ್ಯಮಾಚರನ್ವಿಚರೇದಿಹ ॥** ೧೫೬

ವಯಸ್ಸು, ಕೈಕೊಂಡ ವೃತ್ತಿ, ಇರುವ ಧನಾನುಕೂಲ, ವಿದ್ಯೆ, ಕುಲ ಇವುಗಳಿಗೆ ತಕ್ಕಹಾಗೆ ಉಡುಪು, ಮಾತು ಮತ್ತು ನಡತೆಯನ್ನು ಕೂಡಿಸಿಕೊಂಡು ಇಲ್ಲಿ ನಡೆಯಬೇಕು.

**ವಾಗ್ವೈಖರೀ ಶಬ್ದಝರೀ ಶಾಸ್ತ್ರವ್ಯಾಖ್ಯಾನಕೌಶಲಂ ।**
**ವೈದುಷ್ಯಂ ವಿದುಷಾಂ ತದ್ವದ್ ಭುಕ್ತಯೇ ನ ತು ಮುಕ್ತಯೇ ॥** ೧೫೭

- ವಿವೇಕಚೂಡಾಮಣಿ

ಮಾತಿನಲ್ಲಿ ಚಾತುರ್ಯ, ಒಳ್ಳೆಯ ಶಬ್ದ ಪ್ರವಾಹ, ಶಾಸ್ತ್ರಕ್ಕೆ ಅರ್ಥ ಹೇಳುವ ಜಾಣ್ಮೆ ಹಾಗೆಯೇ ವಿದ್ವಾಂಸರ ಶಾಸ್ತ್ರಪಾಂಡಿತ್ಯ - ಇವೆಲ್ಲವೂ ಭುಕ್ತಿಗೆ, ಮುಕ್ತಿಗಲ್ಲ.

**ವಾಚ್ಯಾವಾಚ್ಯಂ ಪ್ರಕುಪಿತೋ ನ ವಿಜಾನಾತಿ ಕರ್ಹಿಚಿತ್ ।**
**ನಾಕಾರ್ಯಮಸ್ತಿ ಕ್ರುದ್ಧಸ್ಯ ನಾವಾಚ್ಯಂ ವಿದ್ಯತೇ ಕ್ವಚಿತ್ ॥** ೧೫೮

- ರಾಮಾಯಣ, ಯುದ್ಧ-೫೫-೬

ಕೋಪಗೊಂಡವನಿಗೆ ಇದು ಹೇಳತಕ್ಕದ್ದು ಇದು ಹೇಳಬಾರದ್ದು - ಎಂಬ ಅರಿವೇ ಇರುವುದಿಲ್ಲ. ಅವನು ಮಾಡದಿರುವ ಕೆಲಸವಿಲ್ಲ ; ಆಡದಿರುವ ಮಾತಿಲ್ಲ.

**ವಾಸಾಂಸಿ ಜೀರ್ಣಾನಿ ಯಥಾ ವಿಹಾಯ**
**ನವಾನಿ ಗೃಹ್ಣಾತಿ ನರೋಽಪರಾಣಿ ।**
**ತಥಾ ಶರೀರಾಣಿ ವಿಹಾಯ ಜೀರ್ಣಾ-**
**ನ್ಯನ್ಯಾನಿ ಸಂಯಾತಿ ನರೋಽಪರಾಣಿ ॥** ೧೫೯

- ಭಗವದ್ಗೀತಾ, ೨-೨೨

ಮನುಷ್ಯನು ಹಳೆಯ ಬಟ್ಟೆಗಳನ್ನು ತೆಗೆದೊಗೆದು ಬೇರೆ ಹೊಸ ಬಟ್ಟೆಗಳನ್ನು ತೆಗೆದುಕೊಳ್ಳುವಂತೆ, ಜೀವಾತ್ಮನು ಮುದಿಯಾದ ಶರೀರವನ್ನು ಬಿಟ್ಟು ಬೇರೆ ಹೊಸ ಶರೀರವನ್ನು ಪಡೆಯುತ್ತಾನೆ.

**ವಿದ್ಯಾನಾಧಿಗತಾ ಕಲಂಕರಹಿತಾ ವಿತ್ತಂ ಚ ನೋಪಾರ್ಜಿತಂ**
**ಶುಶ್ರೂಷಾಪಿ ಸಮಾಹಿತೇನ ಮನಸಾ ಪಿತ್ರೋರ್ನ ಸಂಪಾದಿತಾ ।**
**ರಾಮಾಪೀನಪಯೋಧರೋರುಯುಗಲಂ ಸ್ವಪ್ನೇಽಪಿ ನಾಲಿಂಗಿತಂ**
**ಮಾತುಃ ಕೇವಲಮೇವ ಯೌವನವನಚ್ಛೇದೇ ಕುಠಾರಾ ವಯಮ್ ॥**೧೬೦

- ವೈರಾಗ್ಯಶತಕ - ೪೭

ಪರಿಶುದ್ಧವಾದ ವಿದ್ಯೆಯನ್ನು ಅಭ್ಯಾಸ ಮಾಡಲಿಲ್ಲ ; ಹಣವನ್ನೂ ಸಂಪಾದಿಸಲಿಲ್ಲ; ಅಥವಾ ನಿರ್ಮಲವಾದ ಮನಸ್ಸಿನಿಂದ ತಾಯಿತಂದೆಗಳ ಸೇವೆ ಮಾಡಲಿಲ್ಲ ; ಸುಂದರ ಸ್ತ್ರೀಯರ ಆಲಿಂಗನಸುಖಗಳನ್ನು ಸ್ವಪ್ನದಲ್ಲಿಯೂ ಅನುಭವಿಸಲಿಲ್ಲ. ಆದರೆ ನಾವು ಹೆತ್ತ ತಾಯಿಯ ಯೌವನವೆಂಬ ವನವನ್ನು ಕತ್ತರಿಸುವುದರಲ್ಲಿ ಮಾತ್ರ ಕತ್ತಿಗಳಂತೆ ಕೆಲಸ ಮಾಡಿದ್ದೇವೆ.

**ವಿಪ್ರಾಸ್ಮಿನ್ನಗರೇ ಮಹಾನ್ ಕಥಯ ಕಸ್ತಾಲದ್ರುಮಾಣಾಂ ಗಣಃ**
**ಕೋ ದಾತಾ, ರಜಕೋ ದದಾತಿ ವಸನಂ ಪ್ರಾತರ್ಗೃಹೀತ್ವಾ ನಿಶಿ ।**
**ಕೋ ದಕ್ಷಃ, ಪರದಾರವಿತ್ತಹರಣೇ ಸರ್ವೋಽಪಿ ದಕ್ಷೋ ಜನಃ**
**ಕಸ್ಮಾಜ್ಜೀವಸಿ ಹೇ ಸಖೇ, ವಿಷಕೃಮಿನ್ಯಾಯೇನ ಜೀವಾಮ್ಯಹಮ್ ॥ ೧೬೧**

- ವೃದ್ಧಚಾಣಕ್ಯ

ಪ್ರಶ್ನೆ - ಅಯ್ಯಾ ಬ್ರಾಹ್ಮಣ ! ಈ ಊರಲ್ಲಿ ದೊಡ್ಡವರಾರು ? ಹೇಳು! ಉತ್ತರ - ತಾಲವೃಕ್ಷಗಳು. ಪ್ರಶ್ನೆ - ಇಲ್ಲಿ ದಾತೃಗಳು ಯಾರು ? ಉತ್ತರ - ಅಗಸನು ಬೆಳಗ್ಗೆ ತೆಗೆದುಕೊಂಡ ಬಟ್ಟೆಗಳನ್ನು ರಾತ್ರಿಕೊಡುತ್ತಾನೆ. ಪ್ರಶ್ನೆ - ಇಲ್ಲಿಯಾರು ಸಮರ್ಥರು ? ಉತ್ತರ - ಎಲ್ಲರೂ ಇತರರ ಹೆಂಡತಿ ಹಣಗಳನ್ನು ಅಪಹರಿಸುವುದರಲ್ಲಿ ಗಟ್ಟಿಗರು. ಪ್ರಶ್ನೆ - ಹಾಗಾದರೆ ನೀನು ಹೇಗೆ ಬದುಕ್ಕಿದೀಯೆ ? ಉತ್ತರ - ವಿಷದಲ್ಲಿ ಹುಳುವಿನಂತೆ ಇಲ್ಲಿ ಬದುಕಿದ್ದೇನೆ !

**ವಿಕೀರ್ಣೇ ಸರ್ವಸ್ವೇ ಕರುಣಕರುಣಾಪೂರ್ಣಹೃದಯಾಃ**
**ಸ್ಮರಂತಃ ಸಂಸಾರೇ ವಿಗುಣಪರಿಣಾಮಾವಧಿಗತಿಂ ।**
**ವಯಂ ಪುಣ್ಯೇಽರಣ್ಯೇ ಪರಿಣತಶರಚ್ಚಂದ್ರ ಕಿರಣೈ**
**ಸ್ತ್ರಿಯಾಮಾಂ ನೇಷ್ಯಾಮೋ ಹರಚರಣಚಿತ್ತೈಕಶರಣಾಃ ॥ ೧೬೨**

- ವೈರಾಗ್ಯ ಶತಕ - ೪೮

ನಮ್ಮಲ್ಲಿದ್ದ ಹಣವನ್ನೆಲ್ಲಾ ತ್ಯಾಗಮಾಡಿ, ದಯೆಯಿಂದ ತುಂಬಿದ ಮನಸ್ಸುಳ್ಳವರಾ , ಸಂಸಾರದಲ್ಲಿರುವ ದೋಷಗಳನ್ನೂ ಮತ್ತು ಅದರ ಅಸ್ಥಿರತೆಯನ್ನೂ ಸ್ಮರಿಸುತ್ತಾ ಪವಿತ್ರವಾದ ಅರಣ್ಯ ಪ್ರದೇಶದಲ್ಲಿ, ಶಿವನ ಪಾದಗಳನ್ನು ಮರೆಹೊಕ್ಕು, ಧ್ಯಾನಿಸುತ್ತಾ ಶರತ್ಕಾಲದ ಬೆಳದಿಂಗಳಲ್ಲಿ ರಾತ್ರಿಯನ್ನು ಕಳೆಯುವೆವು.

**ವಿಷಯಾನನುಕೂಲಯಿತುಂ**
**ವಿಷಯಿಣಿ ಹೃದಯೇ ವಿಧೀಯತಾಂ ಯತ್ನಃ ।**
**ದೃಶಿ ದೇಯಮೌಷಧಂ ಕೋ**
**ದೃಶ್ಯೇ ದತ್ವಾ ಸುಖೀ ಭವತಿ ॥ ೧೬೩**

- (ಅಪ್ಪಯ್ಯ ದೀಕ್ಷಿತರ) ವೈರಾಗ್ಯಶತಕ - ೨೮

ಶಬ್ದಾದಿ ಬಾಹ್ಯವಿಷಯಗಳನ್ನು ನಮಗೆ ಅನುಕೂಲವಾಗಿ ಮಾಡಿಕೊಳ್ಳಬೇಕಾದರೆ, ಆ ವಿಷಯಗಳನ್ನು ಗ್ರಹಿಸುವ ಹೃದಯವನ್ನು ಸ್ವಚ್ಛಗೊಳಿಸಲು ಯತ್ನಿಸಬೇಕು. ಕಣ್ಣಿಗೆ ಹಾಕುವ ಔಷಧವನ್ನು ಕಣ್ಣಿಗೆ ಕಾಣುವ ಬಾಹ್ಯವಸ್ತುವಿಗೆ ಹಾಕಿದರೆ ಯಾವನು ಸುಖಿಯಾದಾನು?

**ಶಬ್ದಃ ಸ್ಪರ್ಶಶ್ಚ ರೂಪಂ ಚ ರಸೋ ಗಂಧಶ್ಚ ಪಂಚಮಃ ।**
**ಏಕೈಕಮಲಮೇತೇಷಾಂ ವಿನಾಶಪ್ರತಿಪತ್ತಯೇ ॥** ೧೬೪

- ಸುಭಾಷಿತಸುಧಾನಿಧಿ

ಶಬ್ದ, ಸ್ಪರ್ಶ, ರೂಪ, ರಸ ಮತ್ತು ಐದನೆಯದಾದ ಗಂಧ ಇವುಗಳಲ್ಲಿ ಒಂದೊಂದೇ ಪೂರ್ಣ ವಿನಾಶವೊದಗಿಸಲು ಸಾಕು.

**ಶಬ್ದಾದಿಭಿಃ ಪಂಚಭಿರೇವ ಪಂಚಪಂಚತ್ವಮಾಪುಃ ಸ್ವಗುಣೇನ ಬದ್ಧಾಃ ।**
**ಕುರಂಗ - ಮಾತಂಗ - ಪತಂಗ - ಮೀನ**
**ಭೃಂಗಾ ನರಃ ಪಂಚಭಿರಂಚಿತಃ ಕಿಮ್ ॥** ೧೬೫

- ವಿವೇಕಚೂಡಾಮಣಿ - ೭೬

ಶಬ್ದ, ಸ್ಪರ್ಶ, ರೂಪ, ರಸ, ಗಂಧ - ಈ ಐದರಲ್ಲಿ ಒಂದೊಂದು ಗುಣಕ್ಕೆ ವಶವಾದ ಐವರೂ ಮರಣವನ್ನು ಹೊಂದಿದರು. ಯಾರೆಂದರೆ, ಕ್ರಮವಾಗಿ ಜಿಂಕೆ, ಆನೆ, ಪತಂಗ, ಮೀನು ಮತ್ತು ದುಂಬಿ. ಹೀಗಿರಲು ಈ ಐದು ಗುಣಗಳಿಗೆ ಬದ್ಧನಾದ ಮನುಷ್ಯನ ಪಾಡನ್ನು ಹೇಳಬೇಕಾದ್ದೇನು ?

**ಶಮಾರ್ಥಂ ಸರ್ವಶಾಸ್ತ್ರಾಣಿ ವಿಹಿತಾನಿ ಮನೀಷಿಭಿಃ ।**
**ಸ ಏವ ಸರ್ವಶಾಸ್ತ್ರಜ್ಞಃ ಯಸ್ಯ ಶಾಂತಂ ಮನಃ ಸದಾ ॥** ೧೬೬

- ಮಹಾಭಾರತ

ಸಕಲಶಾಸ್ತ್ರಗಳನ್ನೂ ವಿದ್ವಾಂಸರು ರಚಿಸಿರುವುದು ಮನಃಶಾಂತಿ ಲಭಿಸಲೆಂದು. ಯಾರ ಮನಸ್ಸು ಶಾಂತವಾಗಿದೆಯೋ ಅವನೇ ಸರ್ವಶಾಸ್ತ್ರಜ್ಞ.

**ಶರೀರಸ್ಯ ಗುಣಾನಾಂ ಚ ದೂರಮತ್ಯಂತಮಂತರಂ ।**
**ಶರೀರಂ ಕ್ಷಣವಿಧ್ವಂಸಿ ಕಲ್ಪಾಂತಸ್ಥಾಯಿನೋ ಗುಣಾಃ ॥** ೧೬೭

- ಹಿತೋಪದೇಶ, ಮಿತ್ರಲಾಭ-೩೬

ಶರೀರಕ್ಕೂ ಗುಣಗಳಿಗೂ ಇರುವ ವ್ಯತ್ಯಾಸ ಬಹಳ ದೊಡ್ಡದು. ಶರೀರ ಕ್ಷಣಿಕ ; ಆದರೆ ಗುಣಗಳಾದರೋ ಕಲ್ಪಾಂತದವರೆಗೂ ನಿಲ್ಲತಕ್ಕವು.

**ಶರೀರ ಪೋಷಣಾರ್ಥೀ ಸನ್ ಯ ಆತ್ಮಾನಂ ದಿದೃಕ್ಷತಿ ।**
**ಗ್ರಾಹಂ ದಾರುಧಿಯಾ ಧೃತ್ವಾ ನದೀಂ ತುರ್ತುಂ ಸ ಗಚ್ಛತಿ ॥ ೧೬೮**

- ವಿವೇಕಚೂಡಾಮಣಿ - ೮೪

ಯಾವನು ಶರೀರ ಪೋಷಣೆಯಲ್ಲಿ ಆಸಕ್ತಿಯುಳ್ಳವನಾಗಿ ಆತ್ಮದರ್ಶನವನ್ನು ಬಯಸುತ್ತಾನೋ, ಅವನು ಮೊಸಳೆಯನ್ನು ಮರದ ತುಂಡೆಂದು ಹಿಡಿದುಕೊಂಡು ನದಿಯನ್ನು ದಾಟಲು ಬಯಸುತ್ತಾನೆ!

**ಶಾಂತಿಖಡ್ಗಃ ಕರೇ ಯಸ್ಯ ದುರ್ಜನಃ ಕಿಂ ಕರಿಷ್ಯತಿ ।**
**ಅತೃಣೇ ಪತಿತೋ ವಹ್ನಿಃ ಸ್ವಯಮೇವೋಪಶಾಮ್ಯತಿ ॥ ೧೬೯**

- ಮಹಾಭಾರತ, ಉದ್ಯೋಗ. ೩೯-೫೦

ಶಾಂತಿಯೆಂಬ ಕತ್ತಿ ಯಾರ ಕೈಯಲ್ಲಿದೆಯೋ ಅವನಿಗೆ ದುಷ್ಟನು ಏನನ್ನು ಮಾಡಿಯಾನು ? ಬೆಂಕಿ ಹುಲ್ಲಿನಮೇಲೆ ಬೀಳಿದಿದ್ದಾಗ ತಾನಾಗಿಯೇ ಶಾಂತ ವಾಗುವುದು.

**ಶುಚಿರ್ಬಾಲತೃಣಾಹಾರೋ ವಿದೂರಕ್ರಮಣಕ್ಷಮಃ ।**
**ಲುಬ್ಧಕಾದ್ಗೀತಲೋಭೇನ ಮೃಗೋ ಮೃಗಯತೇ ವಧಮ್ ॥ ೧೭೦**

- ಸುಭಾಷಿತಸುಧಾನಿಧಿ

ಶುದ್ಧವಾದುದೂ, ಎಳೆಯ ಹುಲ್ಲನ್ನು ತಿನ್ನುವುದೂ, ಬಹಳ ದೂರ ಓಡಲು ಶಕ್ತವಾದುದೂ ಆದ ಜಿಂಕೆ ಬೇಡರವನು ಹಾಡಿದ ಹಾಡಿನ ಆಶೆಗೆ ತುತ್ತಾಗಿ ಸಾವನ್ನರಸು ತ್ತದೆ.

**ಶ್ರುತಮಪ್ಯಧಿಗಮ್ಯ ಯೇ ರಿಪೂನ್**
**ವಿನಯಂತೇ ನ ಶರೀರಜನ್ಮನಃ ।**
**ಜನಯಂತ್ಯಚಿರಾಯ ಸಂಪದಾಂ**
**ಅಯಶಸ್ತೇ ಖಲು ಚಾಪಲಾಶ್ರಯಮ್ ॥ ೧೭೧**

- ಕಿರಾತಾರ್ಜುನೀಯ, ೨-೪೧

ಶಾಸ್ತ್ರಗಳನ್ನು ಓದಿದ್ದರೂ ಸಹ ಯಾರು ಶರೀರದಲ್ಲಿದ್ದು ಶತ್ರುಗಳಾಗಿರುವ ಇಂದ್ರಿಯಗಳನ್ನು ಜಯಿಸಲಿಲ್ಲವೋ, ಅವರಲ್ಲಿ ಸಂಪತ್ತು ಉಳಿಯದೆ "ಸಂಪತ್ತು ಚಂಚಲ" ಎಂಬ ಅಪಕೀರ್ತಿಯನ್ನು ಪಡೆಯುವಂತೆ ಆಗುತ್ತದೆ.

ಸ್ವರ್ಣಂ ಯಥಾ ಗ್ರಾವಸು ಹೇಮಕಾರಃ
ಕ್ಷೇತ್ರೇಷು ಯೋಗೈಸ್ತದಭಿಜ್ಞ ಆಪ್ನುಯಾತ್ ।
ಕ್ಷೇತ್ರೇಷು ದೇಹೇಷು ತಥಾತ್ಮಯೋಗೈಃ
ಅಧ್ಯಾತ್ಮವಿದ್ಬ್ರಹ್ಮಗತಿಂ ಲಭೇತ ॥ ೧೭೨

- ಭಾಗವತ, ೭-೭-೨೧

ಚಿನ್ನವನ್ನು ಸಂಪಾದಿಸುವ ನಿಪುಣನಾದ ಅಕ್ಕಸಾಲಿಗನು ಕಲ್ಲಿನ ನೆಲದಲ್ಲಿ ತನ್ನ ಅರಿವಿನಿಂದ ಹೇಗೆ ಚಿನ್ನವನ್ನು ಪಡೆಯುವನೋ, ಹಾಗೆ ಆತ್ಮನಿಷ್ಠನು ಈ ದೇಹದಲ್ಲಿ ಅಧ್ಯಾತ್ಮಮಾರ್ಗಗಳಿಂದ ಬ್ರಹ್ಮಜ್ಞಾನವನ್ನು ಪಡೆಯುತ್ತಾನೆ.

ಸರ್ವೇ ಕ್ಷಯಾಂತಾ ನಿಚಯಾಃ ಪತನಾಂತಾಃ ಸಮುಚ್ಛ್ರಯಾಃ ।
ಸಂಯೋಗಾ ವಿಪ್ರಯೋಗಾಂತಾ ಮರಣಾಂತಂ ಚ ಜೀವಿತಮ್ ॥ ೧೭೩

- ರಾಮಾಯಣ, ಅಯೋಧ್ಯಾ. ೧೦೫-೧೬

ಐಶ್ವರ್ಯದ ಎಲ್ಲ ರಾಶಿಗೂ ನಾಶವುಂಟು. ಉನ್ನತವಾದ ಅಧಿಕಾರಕ್ಕೂ ಪತನವುಂಟು. ಪತ್ನೀಪುತ್ರಾದಿ ಸಂಯೋಗವು ವಿಯೋಗದಲ್ಲಿ ಕೊನೆಗೊಳ್ಳುತ್ತದೆ.

ಸಹೈವ ಮೃತ್ಯುರ್ವ್ರಜತಿ ಸಹ ಮೃತ್ಯುರ್ನಿಷೀದತಿ ।
ಗತ್ವಾ ಸುದೀರ್ಘಮಧ್ವಾನಂ ಸಹ ಮೃತ್ಯುರ್ನಿವರ್ತತೇ ॥ ೧೭೪

- ರಾಮಾಯಣ, ಅಯೋಧ್ಯಾ. ೧೦೫-೨೨

ಹೋಗುತ್ತಿದ್ದರೆ ಜೊತೆಯಲ್ಲಿಯೇ ಮೃತ್ಯು ಹಿಂಬಾಲಿಸಿ ಬರುತ್ತದೆ. ಕುಳಿತರೆ ಅದೂ ಪಕ್ಕದಲ್ಲಿ ಕುಳಿತಿರುತ್ತದೆ. ದೂರದ ದಾರಿಯವರೆಗೂ ಮೃತ್ಯುವು ಬಂದು, ತಾನು ಹೋಗುವಾಗ ಜೊತೆಯಲ್ಲಿ ಕರೆದುಕೊಂಡುಹೋಗುತ್ತದೆ!

ಸ್ವಶರೀರಶರೀರಿಣಾವಪಿ
ಶ್ರುತಸಂಯೋಗವಿಪರ್ಯಯೌ ಯದಿ ।
ವಿರಹಃ ಕಿಮಿವಾನುತಾಪಯೇ-
ದ್ವದ ಬಾಹ್ಯೈರ್ವಿಷಯೈರ್ವಿಪಶ್ಚಿತಾಮ್ ॥ ೧೭೫

- ರಘುವಂಶ, ೮-೮೯

ನಮ್ಮ ಶರೀರ ಜೀವಾತ್ಮಗಳೇ ಬಹಳ ಕಾಲ ಸೇರಿದ್ದು ಮತ್ತೆ ಅಗಲುತ್ತವೆ. ಅಂದಮೇಲೆ ಹೊರಗಿನ ಪದಾರ್ಥಗಳ ಅಗಲಿಕೆಯಾದರೆ ವಿದ್ವಾಂಸನು ಏಕೆ ವ್ಯಥೆಪಡಬೇಕು?

ಸ್ಥಿತಿಃ ಪುಣ್ಯಾರಣ್ಯೇ ಸಹ ಪರಿಚಯೋ ಹಂತ ಹರಿಣೈಃ
ಫಲೈರ್ಮೇಧ್ಯಾ ವೃತ್ತಿಃ ಪ್ರತಿದಿವಸತಲ್ಪಾನಿ ದೃಷದಃ ।
ಇತೀಯಂ ಸಾಮಗ್ರೀ ಭವತಿ ಹರಭಕ್ತಿಂ ಸ್ಪೃಹಯತಾಂ
ವನಂ ವಾ ಗೇಹಂ ವಾ ಸದೃಶಮುಪಶಾಂತ್ಯೈಕಮನಸಾಮ್ ॥ ೧೭೬

- ವೈರಾಗ್ಯಶತಕ - ೩೩

ಪುಣ್ಯವಾದ ಕಾಡಿನಲ್ಲಿ ವಾಸ, ಜಿಂಕೆಗಳೊಡನೆ ಸಹವಾಸ, ಹಣ್ಣುಗಳಿಂದ ಪವಿತ್ರವಾದ ಬಾಳು, ಪ್ರತಿನಿತ್ಯವೂ ಕಲ್ಲುಗಳೇ ಹಾಸಿಗೆಗಳು, ಶಿವನಲ್ಲಿ ಭಕ್ತಿಯನ್ನಿಟ್ಟವರಿಗೆ ಮತ್ತು ಶಾಂತಹೃದಯರಿಗೆ ಕಾಡೂ, ಮನೆ ಎರಡೂ ಒಂದೇ.



## ೧೩. ಭಕ್ತಿ

**ಅಕೃಪಣಮರುಕ್ಶ್ರಾಂತಂ ಜೀವ್ಯಾಜ್ಜನಃ ಪುರುಷಾಯುಷಂ**
**ಭವತು ಭಗವದ್ಭಕ್ತಿಃ ದ್ವೈತಂ ವಿನಾ ಪುರುಷೋತ್ತಮೇ ।**
**ದಯಿತಭುವನೋ ವಿದ್ವದ್ಬಂಧುರ್ಗುಣೇಷು ವಿಶೇಷವಿತ್**
**ಸತತಸುಕೃತೀ ಭೂಯಾದ್ಭೂಪಃ ಪ್ರಸಾಧಿತಮಂಡಲಃ ॥ ೧**

- ವೇಣೀಸಂಹಾರ, ೬-೪೬

ಜನರು ರೋಗವಿಲ್ಲದೆ ಆಯಾಸವಿಲ್ಲದೆ ಪೂರ್ಣ ಆಯುಸ್ಸು ಹೊಂದಿ ಬಾಳಲಿ. ಎರಡೆಂಬ ಭಾವನೆಯಿಲ್ಲದೆ ವಿಷ್ಣುವಿನಲ್ಲಿ ಭಕ್ತಿಯು ಬೆಳೆಯಲಿ. ಅರಸನು ಪಂಡಿತರಿಗೆ ಆಸರೆಯಾಗಿ, ವಿಶೇಷ ಅರ್ಹತೆಯನ್ನರಿತು ಯಾವಾಗಲೂ ಒಳ್ಳೆಯದನ್ನೇ ಮಾಡುತ್ತಾ ರಾಜ್ಯವನ್ನು ಆನಂದಗೊಳಿಸಲಿ.

**ಅಂಕೋಲಂ ನಿಜಬೀಜಸಂತತಿರಯಸ್ಕಾಂತೋಪಲಂ ಸೂಚಿಕಾ**
**ಸಾಧ್ವೀ ನೈಜವಿಭುಂ ಲತಾ ಕ್ಷಿತಿರುಹಂ ಸಿಂಧುಃ ಸರಿದ್ವಲ್ಲಭಂ ।**
**ಪ್ರಾಪ್ನೋತೀಹ ಯಥಾ ತಥಾ ಪಶುಪತೇಃ ಪಾದಾರವಿಂದದ್ವಯಂ**
**ಚೇತೋವೃತ್ತಿರುಪೇತ್ಯ ತಿಷ್ಠತಿ ಸದಾ ಸಾ ಭಕ್ತಿರಿತ್ಯುಚ್ಯತೇ ॥ ೨**

- ಶಿವಾನಂದಲಹರೀ

ಅಂಕೋಲೆ ಮರದ ಬೀಜಗಳು ಆ ಮರವನ್ನು ಹೇಗೋ, ಸೂಜಿ ಸೂಜಿಗಲ್ಲನ್ನೂ, ಪತಿವ್ರತೆ ತನ್ನ ಪತಿಯನ್ನೂ, ಬಳ್ಳಿ ಮರವನ್ನೂ, ನದಿ ಸಾಗರವನ್ನೂ, ಹೇಗೆ ಸೇರುವುವೋ ಹಾಗೆ ನನ್ನ ಚಿತ್ತವೃತ್ತಿಯೂ ಸಹ, ಹೇ ಪಶುಪತೇ, ನಿನ್ನ ಪಾದಕಮಲಗಳನ್ನು ಸೇರಿ ಎಂದೆಂದೂ ಅಲ್ಲೇ ನಿಲ್ಲುತ್ತದೆ. ಅದನ್ನೇ ಭಕ್ತಿ ಎನ್ನುತ್ತಾರೆ.

**ಅಚ್ಯುತಾನಂತಗೋವಿಂದನಾಮೋಚ್ಚಾರಣಭೇಷಜಾತ್ ।**
**ನಶ್ಯಂತಿ ಸಕಲಾಃ ರೋಗಾಃ ಸತ್ಯಂ ಸತ್ಯಂ ಬ್ರವೀಮ್ಯಹಮ್ ॥ ೩**

- ಸಮಯೋಚಿತಪದ್ಯಮಾಲಿಕಾ

ಅಚ್ಯುತ, ಅನಂತ, ಗೋವಿಂದ - ಈ ನಾಮೋಚ್ಚಾರಣೆಯೆಂಬ ಔಷಧದಿಂದ ಸಕಲ ರೋಗಗಳೂ ನಾಶವಾಗುತ್ತವೆ. ನಾನು ಹೇಳುತ್ತೇನೆ, ಇದು ಸತ್ಯ, ಸತ್ಯ.

**ಅಜ್ಞಾನಾದಥವಾ ಜ್ಞಾನಾದುತ್ತಮಶ್ಲೋಕನಾಮ ಯತ್ ।**
**ಸಂಕೀರ್ತಿತಮಘಂ ಪುಂಸೋ ದಹೇದೇಧೋ ಯಥಾನಲಃ ॥ ೪**

- ಭಾಗವತ, ೬-೨-೧೮

ತಿಳಿದೋ ತಿಳಿಯದೆಯೋ ಭಗವಂತನ ನಾಮವನ್ನುಚ್ಚರಿಸಿದರೆ, ಬೆಂಕಿ ಸೌದೆಯನ್ನು ಸುಡುವಂತೆ ಅದು ಮನುಷ್ಯನ ಪಾಪವನ್ನು ನಾಶಮಾಡುತ್ತದೆ.

**ಆತ್ಮಾತ್ವಂ ಗಿರಿಜಾ ಮತಿಃ ಪರಿಜನಾಃ ಪ್ರಾಣಾಃ ಶರೀರಂ ಗೃಹಂ**
**ಪೂಜಾ ತೇ ವಿಷಯೋಪಭೋಗರಚನಾ ನಿದ್ರಾಸಮಾಧಿಸ್ಥಿತಿಃ ।**
**ಸಂಚಾರಸ್ತು ಪದೋಃ ಪ್ರದಕ್ಷಿಣವಿಧಿಃ ಸ್ತೋತ್ರಾಣಿ ಸರ್ವಾ ಗಿರೋ**
**ಯದ್ಯತ್ಕರ್ಮ ಕರೋಮಿ ತತ್ತದಖಿಲಂ ಶಂಭೋ ತವಾರಾಧನಮ್ ॥ ೫**

- ಅಪರಾಧಕ್ಷಮಾಪಣಸ್ತೋತ್ರ

ಹೇ ಶಂಭೋ, ನನ್ನ ಆತ್ಮವೇ ನೀನು. ನನ್ನ ಬುದ್ಧಿಯೇ ಪಾರ್ವತಿ. ಪ್ರಾಣಾದಿ ವಾಯುಗಳೇ ಪರಿವಾರದೇವತೆಗಳು. ಶರೀರವೇ ನಿನ್ನ ಮಂದಿರ. ವಿಷಯಭೋಗಗಳೇ ನಿನ್ನ ಪೂಜೆ. ನಿದ್ರೆಯೇ (ನಿನ್ನ ಧ್ಯಾನದಲ್ಲಿ ಮುಳುಗಿದ) ಸಮಾಧಿ. ಪಾದಸಂಚಾರವೆಲ್ಲ ನಿನ್ನ ಪ್ರದಕ್ಷಿಣೆ. ನನ್ನ ಮಾತುಗಳೆಲ್ಲವೂ ನಿನ್ನ ಸ್ತುತಿಗಳೇ. ನಾನು ಮಾಡುವ ಕೆಲಸವೆಲ್ಲವೂ ನಿನ್ನ ಆರಾಧನೆ.

**ಅಯಮುತ್ತಮೋಽಯಮಧಮೋ**
**ಜಾತ್ಯಾ ರೂಪೇಣ ಸಂಪದಾ ವಯಸಾ ।**
**ಶ್ಲಾಘ್ಯೋಽಶ್ಲಾಘ್ಯೋ ವೇತ್ಥಂ**
**ನ ವೇತ್ತಿ ಭಗವಾನನುಗ್ರಹಾವಸರೇ ॥ ೬**

- ಪ್ರಬೋಧಸುಧಾಕರ

ಜಾತಿಯಿಂದ, ರೂಪದಿಂದ, ಹಣದಿಂದ, ವಯಸ್ಸಿನಿಂದ ಇವನು ಉತ್ತಮ, ಇವನು ಶ್ರೇಷ್ಠ, ಇವನು ಕನಿಷ್ಠ ಎಂದು ದಯೆ ತೋರುವ ಸಮಯದಲ್ಲಿ ಭಗವಂತ ವಿಚಾರಿಸುವುದಿಲ್ಲ.

**ಅರೇ ಭಜ ಹರೇರ್ನಾಮ ಕ್ಷೇಮಧಾಮ ಕ್ಷಣೇ ಕ್ಷಣೇ ।**
**ಬಹಿಸ್ಸರತಿ ನಿಃಶ್ವಾಸೇ ವಿಶ್ವಾಸಃ ಕಃ ಪ್ರವರ್ತತೇ ॥ ೭**

- ಗುರುಕೌಮುದೀ

ಅಯ್ಯಾ, ಮಂಗಳಾಯತನನಾದ ಶ್ರೀಹರಿಯ ನಾಮವನ್ನು ಪ್ರತಿಕ್ಷಣವೂ ಭಜಿಸು. ಹೊರಗೆ ಹೊರಟ ಉಸಿರು ಮತ್ತೆ ಒಳಗೆ ಬರುತ್ತದೆ ಎಂಬ ನಂಬಿಕೆ ಎಲ್ಲಿದೆ ?

**ಅಲಂ ವ್ರತೈರಲಂ ತೀರ್ಥೈರಲಂ ಯೋಗೈರಲಂ ಮಖೈಃ ।**
**ಅಲಂ ಜ್ಞಾನಕಥಾಲಾಪೈರ್ಭಕ್ತಿರೇಕೈವ ಮುಕ್ತಿದಾ ॥ ೮**

- ಭಾಗವತಮಾಹಾತ್ಮ್ಯ, ೨-೨೧

ವ್ರತಗಳಿಂದಾಗಲೀ, ತೀರ್ಥಸ್ನಾನಗಳಿಂದಾಗಲೀ, ಯೋಗಗಳಿಂದಾಗಲೀ, ಯಜ್ಞಗಳಿಂದಾಗಲೀ, ಜ್ಞಾನಕಥಾಲಾಪಗಳಿಂದಾಗಲೀ ಏನಾದೀತು? ಭಗವಂತನಲ್ಲಿ ದೃಢಭಕ್ತಿಯೊಂದೇ ಮುಕ್ತಿಯನ್ನು ಕೊಡುತ್ತದೆ.

**ಅವಧಾರಯ ಧರ್ಮೇಷು ಪ್ರಧಾನಮವಧಾನತಃ ।**
**ನಿರ್ಭರಾನಂದಕಂದಾಯ ಗೋವಿಂದಾಯ ಮನೋಽರ್ಪಯ ॥ ೯**

- ಹರಿಹರಸುಭಾಷಿತ, ೧೨-೫೩

ಧರ್ಮದಲ್ಲಿ ಮುಖ್ಯವಾದದ್ದನ್ನು ಗಮನವಿಟ್ಟು ಕೇಳು : 'ಆನಂದ ನಿಧಿಯಾದ ಗೋವಿಂದನಿಗೆ ಮನಸನ್ನರ್ಪಿಸು'.

**ಅವಿದ್ಯೇಯಂ ವಿದ್ಯಾ ಭವತಿ ಭಗವದ್ಭಕ್ತಿರಹಿತಾ**
**ನ ಚೇದ್ವಿಷ್ಣೋಃ ಪ್ರೇಮ ಪ್ರಸೃಮರಮಹಾನಂದಮಹಿತಾ ।**
**ನ ತಾವಚ್ಚಾಂಚಲ್ಯಂ ತ್ಯಜತಿ ಚ ಮನೋವೃತ್ತಿ ವಿಹಗೀ**
**ನ ಯಾವಚ್ಛ್ರೀಕೃಷ್ಣಸ್ಮರಣರಸಸಿಂಧೌ ನಿಪತತಿ ॥ ೧೦**

- ಮನೋದೂತ - ೧೯೪

ಭಗವತ್ಪ್ರೇಮದ ಆನಂದದಿಂದ ತುಂಬಿರದೆ ಭಕ್ತಿರಹಿತವಾಗಿರುವ ವಿದ್ಯೆ ಅವಿದ್ಯೆಯೇ ಸರಿ. ಶ್ರೀಕೃಷ್ಣನ ಸ್ಮರಣೆಯೆಂಬ ರಸಸಮುದ್ರದಲ್ಲಿ ಮನಸ್ಸೆಂಬ ಹಕ್ಕಿ ಮುಳುಗದ ಹೊರತು ತನ್ನ ಚಾಪಲ್ಯವನ್ನು ಅದು ಬಿಡುವುದಿಲ್ಲ.

**ಅವಿವೇಕಘನಾಂಧದಿಙ್ಮುಖೇ**
**ಬಹುಧಾ ಸಂತತದುಃಖವರ್ಷಿಣಿ ।**
**ಭಗವನ್ ಭವದುರ್ದಿನೇ ಪಥ-**
**ಸ್ಖಲಿತಂ ಮಾಮವಲೋಕಯಾಚ್ಯುತ ॥ ೧೧**

- ಸ್ತೋತ್ರರತ್ನ

ಅಜ್ಞಾನವೆಂಬ ದಟ್ಟವಾದ ಕತ್ತಲೆಯ ದಾರಿಯಲ್ಲಿ ಅನೇಕ ರೀತಿಯಾಗಿ ಸಂತತವಾಗಿ ದುಃಖದ ಮಳೆ ಸುರಿಯುತ್ತಿರುವ, ಸಂಸಾರವೆಂಬ ಈ ಮೋಡ ಮುಚ್ಚಿದ ದಿನದಂದು ದಾರಿತಪ್ಪಿದ ನನ್ನನ್ನು, ಹೇ ಅಚ್ಯುತ, ಭಗವನ್, ದಯೆಯಿಟ್ಟು ಕಟಾಕ್ಷಿಸು.

**ಅಜ್ಞಾನಾದಥವಾ ಜ್ಞಾನಾದುತ್ತಮಶ್ಲೋಕನಾಮ ಯತ್ ।**
**ಸಂಕೀರ್ತಿತಮಘಂ ಪುಂಸೋ ದಹೇದೇಧೋ ಯಥಾನಲಃ ॥ ೪**

- ಭಾಗವತ, ೬-೨-೧೮

ತಿಳಿದೋ ತಿಳಿಯದೆಯೋ ಭಗವಂತನ ನಾಮವನ್ನುಚ್ಚರಿಸಿದರೆ, ಬೆಂಕಿ ಸೌದೆಯನ್ನು ಸುಡುವಂತೆ ಅದು ಮನುಷ್ಯನ ಪಾಪವನ್ನು ನಾಶಮಾಡುತ್ತದೆ.

**ಆತ್ಮಾತ್ವಂ ಗಿರಿಜಾ ಮತಿಃ ಪರಿಜನಾಃ ಪ್ರಾಣಾಃ ಶರೀರಂ ಗೃಹಂ**
**ಪೂಜಾ ತೇ ವಿಷಯೋಪಭೋಗರಚನಾ ನಿದ್ರಾಸಮಾಧಿಸ್ಥಿತಿಃ ।**
**ಸಂಚಾರಸ್ತು ಪದೋಃ ಪ್ರದಕ್ಷಿಣವಿಧಿಃ ಸ್ತೋತ್ರಾಣಿ ಸರ್ವಾ ಗಿರೋ**
**ಯದ್ಯತ್ಕರ್ಮ ಕರೋಮಿ ತತ್ತದಖಿಲಂ ಶಂಭೋ ತವಾರಾಧನಮ್ ॥ ೫**

- ಅಪರಾಧಕ್ಷಮಾಪಣಸ್ತೋತ್ರ

ಹೇ ಶಂಭೋ, ನನ್ನ ಆತ್ಮವೇ ನೀನು. ನನ್ನ ಬುದ್ಧಿಯೇ ಪಾರ್ವತಿ. ಪ್ರಾಣಾದಿ ವಾಯುಗಳೇ ಪರಿವಾಗದೇವತೆಗಳು. ಶರೀರವೇ ನಿನ್ನ ಮಂದಿರ. ವಿಷಯಭೋಗಗಳೇ ನಿನ್ನ ಪೂಜೆ. ನಿದ್ರೆಯೇ (ನಿನ್ನ ಧ್ಯಾನದಲ್ಲಿ ಮುಳುಗಿದ) ಸಮಾಧಿ. ಪಾದಸಂಚಾರವೆಲ್ಲ ನಿನ್ನ ಪ್ರದಕ್ಷಿಣೆ. ನನ್ನ ಮಾತುಗಳೆಲ್ಲವೂ ನಿನ್ನ ಸ್ತುತಿಗಳೇ. ನಾನು ಮಾಡುವ ಕೆಲಸವೆಲ್ಲವೂ ನಿನ್ನ ಆರಾಧನೆ.

**ಅಯಮುತ್ತಮೋಽಯಮಧಮೋ**
**ಜಾತ್ಯಾ ರೂಪೇಣ ಸಂಪದಾ ವಯಸಾ ।**
**ಶ್ಲಾಘ್ಯೋಽಶ್ಲಾಘ್ಯೋ ವೇತ್ಥಂ**
**ನ ವೇತ್ತಿ ಭಗವಾನನುಗ್ರಹಾವಸರೇ ॥ ೬**

- ಪ್ರಬೋಧಸುಧಾಕರ

ಜಾತಿಯಿಂದ, ರೂಪದಿಂದ, ಹಣದಿಂದ, ವಯಸ್ಸಿನಿಂದ ಇವನು ಉತ್ತಮ, ಇವನು ಶ್ರೇಷ್ಠ, ಇವನು ಕನಿಷ್ಠ ಎಂದು ದಯೆ ತೋರುವ ಸಮಯದಲ್ಲಿ ಭಗವಂತ ವಿಚಾರಿಸುವುದಿಲ್ಲ.

**ಅರೇ ಭಜ ಹರೇರ್ನಾಮ ಕ್ಷೇಮಧಾಮ ಕ್ಷಣೇ ಕ್ಷಣೇ ।**
**ಬಹಿಸ್ಸರತಿ ನಿಃಶ್ವಾಸೇ ವಿಶ್ವಾಸಃ ಕಃ ಪ್ರವರ್ತತೇ ॥ ೭**

- ಗುರುಕೌಮುದೀ

ಅಯ್ಯಾ, ಮಂಗಳಾಯತನನಾದ ಶ್ರೀಹರಿಯ ನಾಮವನ್ನು ಪ್ರತಿಕ್ಷಣವೂ ಭಜಿಸು. ಹೊರಗೆ ಹೊರಟ ಉಸಿರು ಮತ್ತೆ ಒಳಗೆ ಬರುತ್ತದೆ ಎಂಬ ನಂಬಿಕೆ ಎಲ್ಲಿದೆ ?

**ಅಲಂ ವ್ರತೈರಲಂ ತೀರ್ಥೈರಲಂ ಯೋಗೈರಲಂ ಮಖೈಃ ।**
**ಅಲಂ ಜ್ಞಾನಕಥಾಲಾಪೈರ್ಭಕ್ತಿರೇಕೈವ ಮುಕ್ತಿದಾ ॥ ೮**

- ಭಾಗವತಮಾಹಾತ್ಮ್ಯ, ೨-೨೧

ವ್ರತಗಳಿಂದಾಗಲೀ, ತೀರ್ಥಸ್ನಾನಗಳಿಂದಾಗಲೀ, ಯೋಗಗಳಿಂದಾಗಲೀ, ಯಜ್ಞಗಳಿಂದಾಗಲೀ, ಜ್ಞಾನಕಥಾಲಾಪಗಳಿಂದಾಗಲೀ ಏನಾದೀತು? ಭಗವಂತನಲ್ಲಿ ದೃಢಭಕ್ತಿಯೊಂದೇ ಮುಕ್ತಿಯನ್ನು ಕೊಡುತ್ತದೆ.

**ಅವಧಾರಯ ಧರ್ಮೇಷು ಪ್ರಧಾನಮವಧಾನತಃ ।**
**ನಿರ್ಭರಾನಂದಕಂದಾಯ ಗೋವಿಂದಾಯ ಮನೋಽರ್ಪಯ ॥ ೯**

- ಹರಿಹರಸುಭಾಷಿತ, ೧೨-೫೩

ಧರ್ಮದಲ್ಲಿ ಮುಖ್ಯವಾದದ್ದನ್ನು ಗಮನವಿಟ್ಟು ಕೇಳು : 'ಆನಂದ ನಿಧಿಯಾದ ಗೋವಿಂದನಿಗೆ ಮನಸನ್ನರ್ಪಿಸು'.

**ಅವಿದ್ಯೇಯಂ ವಿದ್ಯಾ ಭವತಿ ಭಗವದ್ಭಕ್ತಿರಹಿತಾ**
**ನ ಚೇದ್ವಿಷ್ಣೋಃ ಪ್ರೇಮ ಪ್ರಸೃಮರಮಹಾನಂದಮಹಿತಾ ।**
**ನ ತಾವಚ್ಚಾಂಚಲ್ಯಂ ತ್ಯಜತಿ ಚ ಮನೋವೃತ್ತಿ ವಿಹಗೀ**
**ನ ಯಾವಚ್ಛ್ರೀಕೃಷ್ಣಸ್ಮರಣರಸಸಿಂಧೌ ನಿಪತತಿ ॥ ೧೦**

- ಮನೋದೂತ - ೧೯೪

ಭಗವತ್ಪ್ರೇಮದ ಆನಂದದಿಂದ ತುಂಬಿರದೆ ಭಕ್ತಿರಹಿತವಾಗಿರುವ ವಿದ್ಯೆ ಅವಿದ್ಯೆಯೇ ಸರಿ. ಶ್ರೀಕೃಷ್ಣನ ಸ್ಮರಣೆಯೆಂಬ ರಸಸಮುದ್ರದಲ್ಲಿ ಮನಸ್ಸೆಂಬ ಹಕ್ಕಿ ಮುಳುಗದ ಹೊರತು ತನ್ನ ಚಾಪಲ್ಯವನ್ನು ಅದು ಬಿಡುವುದಿಲ್ಲ.

**ಅವಿವೇಕಘನಾಂಧದಿಙ್ಮುಖೇ**
**ಬಹುಧಾ ಸಂತತದುಃಖವರ್ಷಿಣಿ ।**
**ಭಗವನ್ ಭವದುರ್ದಿನೇ ಪಥ-**
**ಸ್ಖಲಿತಂ ಮಾಮವಲೋಕಯಾಚ್ಯುತ ॥ ೧೧**

- ಸ್ತೋತ್ರರತ್ನ

ಅಜ್ಞಾನವೆಂಬ ದಟ್ಟವಾದ ಕತ್ತಲೆಯ ದಾರಿಯಲ್ಲಿ ಅನೇಕ ರೀತಿಯಾಗಿ ಸಂತತವಾಗಿ ದುಃಖದ ಮಳೆ ಸುರಿಯುತ್ತಿರುವ, ಸಂಸಾರವೆಂಬ ಈ ಮೋಡ ಮುಚ್ಚಿದ ದಿನದಂದು ದಾರಿತಪ್ಪಿದ ನನ್ನನ್ನು, ಹೇ ಅಚ್ಯುತ, ಭಗವನ್, ದಯೆಯಿಟ್ಟು ಕಟಾಕ್ಷಿಸು.

**ಇದಂ ಶರೀರಂ ಪರಿಣಾಮಪೇಶಲಂ**
**ಪತತ್ಯವಶ್ಯಂ ಶ್ಲಥಸಂಧಿಜರ್ಝರಂ ।**
**ಕಿಮೌಷಧೈಃ ಕ್ಲಿಶ್ಯಸಿ ಮೂಢ ದುರ್ಮತೇ**
**ನಿರಾಮಯಂ ಕೃಷ್ಣರಸಾಯನಂ ಪಿಬ ॥** ೧೨

- ಮುಕುಂದಮಾಲಾಸ್ತೋತ್ರ

ಈ ಶರೀರ ಕೃಶವಾಗಿಹೋಗುವುದೇ ನಿಜ. ಸುಖಸಂಸಾರಗಳೆಲ್ಲಾ ಜರ್ಝರವಾಗಿ ಒಂದು ದಿನ ಇದು ಖಂಡಿತ ಬಿದ್ದುಹೋಗತಕ್ಕದ್ದೇ. ಆದುದರಿಂದ, ಅಯ್ಯಾ ಮೂಢನೆ, ಏಕೆ ಸುಮ್ಮನೇ ಔಷಧಗಳಿಂದ ಕ್ಲೇಶಪಡುವೆ ? ಎಲ್ಲ ರೋಗವನ್ನೂ ಕಳೆಯುವ ಕೃಷ್ಣನಾಮ ರಸಾಯನವನ್ನು ಪಾನಮಾಡು.

**ಉಪಾಧ್ಯಾಯಂ ಪಿತರಂ ಮಾತರಂ ಚ**
**ಯೇಽಭಿದ್ರುಹ್ಯಂತೇ ಮನಸಾ ಕರ್ಮಣಾ ವಾ ।**
**ತೇಷಾಂ ಪಾಪಂ ಭ್ರೂಣಹತ್ಯಾ ವಿಶಿಷ್ಟಂ**
**ತಸ್ಮಾನ್ನಾನ್ಯಃ ಪಾಪಕೃದಸ್ತಿ ಲೋಕೇ ॥** ೧೩

- ಮಹಾಭಾರತ, ಶಾಂತಿ. ೧೦೮-೩೦

ಉಪಾಧ್ಯಾಯ, ತಂದೆ, ತಾಯಿ - ಇವರಿಗೆ ಯಾರು ಮನಸ್ಸಿನಿಂದಲೂ ಆಚರಣೆಯಿಂದಲೂ ದ್ರೋಹಮಾಡುತ್ತಾರೋ ಅವರ ಪಾಪವು ಭ್ರೂಣಹತ್ಯೆಗಿಂತಲೂ ಹೆಚ್ಚಿನದು. ಅಂತಹವನಿಗಿಂತ ಹೆಚ್ಚಿನ ಪಾಪಿ ಈ ಲೋಕದಲ್ಲಿಲ್ಲ.

**ಏತಾವಾನೇವ ಲೋಕೇಽಸ್ಮಿನ್ ಪುಂಸಾಂ ಧರ್ಮಃ ಪರಃ ಸ್ಮೃತಃ ।**
**ಭಕ್ತಿಯೋಗೋ ಭಗವತಿ ತನ್ನಾಮಗ್ರಹಣಾದಿಭಿಃ ॥** ೧೪

- ಭಾಗವತ, ೬-೩-೨೨

ಪರಮಾತ್ಮನಲ್ಲಿ ಅವನ ಹೆಸರನ್ನು ಉಚ್ಚರಿಸುವುದೇ ಮೊದಲಾದುವುಗಳಿಂದ ಉಂಟಾಗುವ ಭಕ್ತಿಯೋಗವೇ ಈ ಲೋಕಲ್ಲಿ ಶ್ರೇಷ್ಠವಾದ ಮನುಷ್ಯರ ಧರ್ಮವೆಂದು ಹೇಳಲ್ಪಟ್ಟಿದೆ.

**ಕ್ವಚಿದ್ರುದಂತ್ಯಚ್ಯುತಚಿಂತಯಾ ಕ್ವಚಿದ್**
**ಹಸಂತಿ ನಂದಂತಿ ವದಂತ್ಯಲೌಕಿಕಾಃ ।**
**ನೃತ್ಯಂತಿ ಗಾಯಂತ್ಯನುಶೀಲಯಂತ್ಯಜಂ**
**ಭವಂತಿ ತೂಷ್ಣೀಂ ಪರಮೇತ್ಯನಿರ್ವೃತಾಃ ॥** ೧೫

- ಭಾಗವತ, ೧೧-೩-೩೨

ಅಲೌಕಿಕರಾದ ಭಗವದ್ಭಕ್ತರು ಪರಮಾತ್ಮನ ಚಿಂತೆಯಿಂದ ಕೆಲವೆಡೆಗಳಲ್ಲಿ

ಅಳುತ್ತಾರೆ, ನಗುತ್ತಾರೆ, ಸಂತೋಷಪಡುತ್ತಾರೆ, ಮಾತನಾಡುತ್ತಾರೆ, ಕುಣಿಯುತ್ತಾರೆ, ದೇವರನ್ನು ವರ್ಣಿಸುತ್ತಾರೆ, ಪರಮಾತ್ಮನನ್ನು ಹೊಂದಿ, ಸುಖಿಗಳಾಗಿ ಮೌನವನ್ನು ಹೊಂದುತ್ತಾರೆ.

**ಕಾ ದುರ್ಲಭಾ ನರಾಣಾಂ**
**ಹರಿಭಕ್ತಿಃ, ಪಾತಕಂ ಚ ಕಿಂ ಹಿಂಸಾ ।**
**ಕೋ ಹಿ ಭಗವತ್ಪ್ರಿಯಃ ಸ್ಯಾತ್**
**ಯೋಽನ್ಯಂ ನೋದ್ವೇಜಯೇದನುದ್ವಿಗ್ನಃ ॥** ೧೬

- ಪ್ರಶ್ನೋತ್ತರ. ಮಾ.

ಜನರಿಗೆ ಯಾವುದು ದುರ್ಲಭ ? ಹರಿಭಕ್ತಿ. ಯಾವುದು ಪಾಪಜನಕ ? ಹಿಂಸೆ. ಯಾವನು ಭಗವಂತನಿಗೆ ಪ್ರಿಯನಾಗುತ್ತಾನೆ ? ಯಾವನು ಸ್ವಯಂ ಉದ್ವೇಗಗೊಳ್ಳದೆ ಇನ್ನೊಬ್ಬರಿಗೂ ಉದ್ವೇಗವನ್ನುಂಟುಮಾಡುವುದಿಲ್ಲವೋ ಅವನು.

**ಕಿಂ ಕಿಂ ನ ಜೀರ್ಯತಿ ಮುಕುಂದಪದಾರವಿಂದ-**
**ದ್ವಂದ್ವಾಭಿವಂದನಕೃತಾಮಿಹ ದೇಹಭಾಜಾಂ ।**
**ಅತ್ಯದ್ಭುತೌಷಧವಿಶೇಷನಿಷೇವಕಾಣಾ-**
**ಮಾಪಾದಯೇತ ಕಿಮನರ್ಥಮಪಥ್ಯಸೇವಾ ॥** ೧೭

- ವಿಶ್ವಗುಣಾದರ್ಶ - ೪೪೦

ಭಗವಂತನ ಪಾದಕಮಲಗಳಿಗೆರಗುವ ಮನುಷ್ಯರಿಗೆ ಯಾವ ಪಾಪ ತಾನೇ ನಾಶವಾಗುವುದಿಲ್ಲ. ಅದ್ಭುತವಾದ ಔಷಧವಿಶೇಷವನ್ನು ಸೇವಿಸುವವರಿಗೆ ಅಪಥ್ಯವು ಅನರ್ಥವನ್ನು ಹೇಗೆತಾನೇ ಉಂಟುಮಾಡೀತು ?

**ಕಿಂ ತರ್ಕೇಣ ವಿತರ್ಕಿತೇನ ಶತಶೋ ಜ್ಞಾತೇನ ಕಿಂ ಛಂದಸಾ**
**ಕಿಂ ಪೀತೇನ ಸುಧಾರಸೇನ ಬಹುಧಾ ಸ್ವಾಧ್ಯಾಯಪಾಠೇನ ಕಿಂ ।**
**ಅಭ್ಯಸ್ತೇನ ಚ ಲಕ್ಷಣೇನ ಕಿಮಹೋ ಧ್ಯಾನಂ ನ ಚೇತ್ ಸರ್ವಥಾ**
**ಲೋಕಾಲೋಕವಿಲೋಕನೈಕಕುಶಲಜ್ಞಾನೇ ಹೃದಿ ಬ್ರಹ್ಮಣಃ ॥** ೧೮

- (ಪದ್ಮನಂದನ) ವೈರಾಗ್ಯಶತಕ - ೫೯

ವಾದಕ್ಕಾಗಿ ಹೂಡುವ ತರ್ಕದಿಂದೇನು ? ನೂರಾರು ಬಗೆಯಲ್ಲಿ ಛಂಧಃಶಾಸ್ತ್ರವನ್ನು ತಿಳಿದಿದ್ದರಿಂದೇನು. ಅಮೃತರಸವನ್ನು ಕುಡಿದರೂ ಆಗುವುದೇನು ? ಮತ್ತೆ ಮತ್ತೆ ವೇದವನ್ನು ಪಾರಾಯಣ ಮಾಡಿದ್ದರಿಂದ ಆಗುವುದೇನು ? ಲಕ್ಷಣಶಾಸ್ತ್ರವನ್ನು ಕಲಿತದ್ದರಿಂದಾದರೂ ಏನಾದೀತು ? ಸಕಲವನ್ನೂ ತಿಳಿದುಕೊಳ್ಳಬಲ್ಲ ಹೃದಯದಲ್ಲಿ ಬ್ರಹ್ಮವಸ್ತುವಿನ ಧ್ಯಾನವಿಲ್ಲದಿದ್ದರೆ, ಉಳಿದುದೆಲ್ಲವೂ ವ್ಯರ್ಥವೇ.

**ಕಿಂ ಮಿತ್ರಮಂತೇ ಸುಕೃತಂ ನ ಲೋಕಾಃ**
**ಕಿಂ ಧ್ಯೇಯಮೀಶಸ್ಯ ಪದಂ ನ ಶೋಕಾಃ ।**
**ಕಿಂ ಕಾಮ್ಯಮವ್ಯಾಜಸುಖಂ ನ ಭೋಗಾಃ**
**ಕಿಂ ಜಲ್ಪನೀಯಂ ಹರಿನಾಮ ನಾನ್ಯತ್ ॥** ೧೯

- ರಸಗಂಗಾಧರ

ಕಡೆಗಾಲದಲ್ಲಿ ಸ್ನೇಹಿತ ಯಾರು? ಪುಣ್ಯ, ಜನರಲ್ಲ. ಧ್ಯಾನಿಸಬೇಕಾದ್ದು ಯಾವುದು? ಈಶ್ವರನ ಪಾದ, ಶೋಕವಲ್ಲ. ಬಯಸಬೇಕಾದ್ದು ಯಾವುದು ? ಅವ್ಯಾಜವಾದ ಮೋಕ್ಷಸುಖ, ಭೋಗಗಳಲ್ಲ. ಉಚ್ಚರಿಸಬೇಕಾದದ್ದು ಯಾವುದು ? ಹರಿಯ ನಾಮ, ಬೇರೇನೂ ಅಲ್ಲ.

**ಗಭೀರೇ ಕಾಸಾರೇ ವಿಶತಿ ವಿಜನೇ ಘೋರವಿಪಿನೇ**
**ವಿಶಾಲೇ ಶೈಲೇ ಚ ಭ್ರಮತಿ ಕುಸುಮಾರ್ಥಂ ಜಡಮತಿಃ ।**
**ಸಮರ್ಪ್ಯೈಕಂ ಚೇತಃ ಸರಸಿಜಮುಮಾನಾಥ ಭವತೋ**
**ಸುಖೇನಾವಸ್ಥಾತುಂ ಜನ ಇಹ ನ ಜಾನಾತಿ ಕಿಮಹೋ ॥** ೨೦

- ಶಿವಾನಂದಲಹರೀ

ನಿನ್ನ ಪೂಜೆಗೆ ಹೂ ತರಲು ಆಳವಾದ ಸರೋವರನ್ನೋ ನಿರ್ಜನವಾದ ಕಾಡನ್ನೋ ವಿಶಾಲವಾದ ಬೆಟ್ಟವನ್ನೋ ಹೊಕ್ಕು ತಿಳಿಗೇಡಿಗಳು ಅಲೆಯುತ್ತಾರೆ. ಎಲೈ ಪಾರ್ವತೀ ಪತಿಯೇ, ತಮ್ಮ ಮನಸ್ಸೆಂಬ ಅದ್ವಿತೀಯವಾದ ಕಮಲವನ್ನು ನಿನಗೆ ಸಮರ್ಪಿಸಿ ಸುಖವಾಗಿರಲು ಇವರಿಗೆ ತಿಳಿಯುವುದಿಲ್ಲವಲ್ಲಾ! ಏನಾಶ್ಚರ್ಯವಿದು!

**ಗೀರ್ಭಿರ್ಗುರೂಣಾಂ ಪರುಷಾಕ್ಷರಾಭಿಃ**
**ತಿರಸ್ಕೃತಾ ಯಾಂತಿ ನರಾ ಮಹತ್ತ್ವಂ ।**
**ಅಲಬ್ಧಶಾಣೋತ್ಕಷಣಾ ನರಾಣಾಂ**
**ನ ಜಾತು ಮೌಲೌ ಮಣಯೋ ವಸಂತಿ ॥** ೨೧

- ರಸಗಂಗಾಧರ

ಗುರುಗಳ ನಿಷ್ಠುರನುಡಿಗಳಿಂದ ಬಯ್ಯಲ್ಪಟ್ಟ ಜನರು ಮಹತ್ತ್ವವನ್ನೇ ಪಡೆಯುತ್ತಾರೆ. ಸಾಣೆಯಲ್ಲಿ ತೀಡಲ್ಪಡದ ರತ್ನಗಳು ಜನರ ಶಿರಸ್ಸಿನಲ್ಲಿ ಎಂದಿಗೂ ನೆಲಸಲಾರವು.

**ಗುರುವೋ ಬಹವಃ ಸಂತಿ ಶಿಷ್ಯವಿತ್ತಾಪಹಾರಕಾಃ ।**
**ದುರ್ಲಭಃ ಸ ಗುರುರ್ಲೋಕೇ ಶಿಷ್ಯಚಿತ್ತಾಪಹಾರಕಃ ॥** ೨೨

- ಸಮಯೋಚಿತಪದ್ಯಮಾಲಿಕಾ

ಶಿಷ್ಯರ ಹಣವನ್ನು ಅಪಹರಿಸುವ ಗುರುಗಳು ಬಹಳ ಮಂದಿ ಇದ್ದಾರೆ. ಶಿಷ್ಯರ ಚಿತ್ತವನ್ನು ಸೆಳೆಯುವ ಗುರು ಲೋಕದಲ್ಲಿ ದುರ್ಲಭ.

**ಗೋಪಾಲ ಇತಿ ಮತ್ವಾ ತ್ವಾಂ ಪ್ರಚುರಕ್ಷೀರವಾಂಛಯಾ ।**
**ಶ್ರಿತೋ ಮಾತುಃ ಸ್ತನಕ್ಷೀರಮಪಿ ಲಬ್ಧುಂ ನ ಶಕ್ನುಯಾಮ್ ॥ ೨೩**

ನೀನು ಗೋಪಾಲನೆಂದು ತಿಳಿದು ಸಮೃದ್ಧಿಯಾಗಿ ಹಾಲು ಕುಡಿಯಬಹುದೆಂಬ ಆಸೆಯಿಂದ ನಿನ್ನನ್ನು ಆಶ್ರಯಿಸಿದೆ. ಆದರೆ ತಾಯಿಯ ಎದೆ ಹಾಲನ್ನೂ ನಾನು ಕುಡಿಯುವುದು ಅಸಂಭವವಾಯಿತು ! (ಮೋಕ್ಷ ದೊರಕಿದ್ದರಿಂದ ಪುನರ್ಜನ್ಮವಿಲ್ಲ.)

**ಜನಿತಾ ಚೋಪನೇತಾ ಚ ಯಶ್ಚ ವಿದ್ಯಾಂ ಪ್ರಯಚ್ಛತಿ ।**
**ಅನ್ನದಾತಾ ಭಯತ್ರಾತಾ ಪಂಚೈತೇ ಪಿತರಃ ಸ್ಮೃತಾಃ ॥ ೨೪**

- ಸಮಯೋಚಿತಪದ್ಯಮಾಲಿಕಾ

ಹಡೆದವನು, ಉಪನಯನ ಮಾಡಿದವನು, ವಿದ್ಯೆಯನ್ನು ಕಲಿಸಿದವನು, ಅನ್ನ ಹಾಕಿದವನು, ಭಯದಿಂದ ರಕ್ಷಿಸಿದವನು - ಈ ಐವರು ತಂದೆಗಳೆಂದು ಸ್ಮೃತರಾಗಿದ್ದಾರೆ.

**ಜನ್ಮೈಶ್ವರ್ಯಶ್ರುತಶ್ರೀಭಿರೇಧಮಾನಮದಃ ಪುಮಾನ್ ।**
**ನೈವಾರ್ಹತ್ಯಭಿಧಾತುಂ ವೈ ತ್ವಾಮಕಿಂಚನಗೋಚರಮ್ ॥ ೨೫**

- ಭಾಗವತ, ೧-೮-೨೬

ಹುಟ್ಟು, ಐಶ್ವರ್ಯ, ವಿದ್ಯೆ, ಹಣಗಳಿಂದ ಮದವೇರಿದ ಮನುಷ್ಯನು, ಭಗವಂತನ ನಾಮವನ್ನು ಹೇಳಲು ಯೋಗ್ಯನಲ್ಲ. ಏಕೆಂದರೆ ಅವನು ಬಡವರಿಗೆ ಮಾತ್ರ ಗೋಚರಿಸತಕ್ಕವನು.

**ಜೀರ್ಣಾ ಏವ ಮನೋರಥಾಃ ಸ್ವಹೃದಯೇ ಯಾತಂ ಚ ತದ್ಯೌವನಂ**
**ಹಂತಾಂಗೇಷು ಗುಣಾಶ್ಚ ವಂಧ್ಯಫಲತಾಂ ಯಾತಾ ಗುಣಜ್ಞೈರ್ವಿನಾ ।**
**ಕಿಂ ಯುಕ್ತಂ ಸಹಸಾಭ್ಯುಪೈತಿ ಬಲವಾನ್ ಕಾಲಃ ಕೃತಾಂತೋಽಕ್ಷಮೀ**
**ಹಾ ಜ್ಞಾತಂ ಸ್ಮರಶಾಸನಾಂಘ್ರಿಯುಗಳಂ ಮುಕ್ತ್ವಾಽಸ್ತಿ ನಾನ್ಯಾ ಗತಿಃ ॥ ೨೬**

- ವೈರಾಗ್ಯಶತಕ -೯೦

ಆಸೆಗಳು ಮನಸ್ಸಿನಲ್ಲಿಯೇ ಮುಪ್ಪನ್ನು ಹೊಂದಿದವು ; ಯೌವನವು ಹೋಯಿತ್ತು; ಅವಯವಗಳಲ್ಲಿರುವ ಪರಾಕ್ರಮವೇ ಮೊದಲಾದ ಗುಣಗಳು, ಗುಣಜ್ಞರಿಲ್ಲದೆ ವ್ಯರ್ಥವಾದವು. ಬಲಿಷ್ಠನಾದ ಯಮನ ರೂಪದಲ್ಲಿರುವ ಕಾಲನು ಹಠಾತ್ತಾಗಿ ಬರುತ್ತಾನೆ ಮತ್ತು ಕ್ಷಮಿಸುವುದಿಲ್ಲ. ಓಹೋ ಈಗ ತಿಳಿಯಿತು, ದೇವದೇವನಾದ ಮದನಾಂತಕನಾದ ಶಿವನ ಪಾದಯುಗಳವನ್ನು ಬಿಟ್ಟರೆ ಬೇರೆ ಗತಿಯಿಲ್ಲ.

ಜೀರ್ಣಾ ತರಿಃ ಸರಿದಿಯಂ ಚ ಗಭೀರನೀರಾ
ನಕ್ರಾಕುಲಾ ವಹತಿ ವಾಯುರತಿಪ್ರಚಂಡಃ ।
ತಾರ್ಯಾ ಸ್ತ್ರಿಯಶ್ಚ ಶಿಶವಶ್ಚ ತಥೈವ ವೃದ್ಧಾಃ
ತತ್ಕರ್ಣಧಾರಭುಜಯೋರ್ಬಲಮಾಶ್ರಯಾಮಃ ॥ ೨೭

ಈ ನೌಕೆ ಮುರಿದಿದೆ. ಈ ನದಿಯೋ ಮೊಸಳೆಗಳಿಂದ ತುಂಬಿ ಆಳವಾಗಿ ಭಯಂಕರವಾಗಿದೆ. ಪ್ರಚಂಡವಾದ ಬಿರುಗಾಳಿ ಬೇರೆ ಬೀಸುತಿದೆ. ಹೆಂಗಸರು, ಎಳೆಯ ಮಕ್ಕಳು ಮತ್ತು ಮುದುಕರನ್ನು ನದಿ ದಾಟಿಸಬೇಕಾಗಿದೆ. ಆದುದರಿಂದ ಅಂಬಿಗನ (ಕೃಷ್ಣನ) ಭುಜಬಲವನ್ನು ನಾವು ಆಶ್ರಯಿಸೋಣ.

ಜ್ಯೇಷ್ಠೋ ಭ್ರಾತಾ ಪಿತಾ ಚೈವ ಯಶ್ಚ ವಿದ್ಯಾಂ ಪ್ರಯಚ್ಛತಿ ।
ತ್ರಯಸ್ತೇ ಪಿತರೋ ಜ್ಞೇಯಾ ಧರ್ಮೇ ವರ್ತ್ಮನಿ ವರ್ತಿನಃ ॥ ೨೮

- ರಾಮಾಯಣ, ಕಿಷ್ಕಿಂಧಾ. ೧೮-೧೩

ಧರ್ಮಮಾರ್ಗದಲ್ಲಿರತಕ್ಕವನು ತನ್ನ ಅಣ್ಣ, ತಂದೆ, ವಿದ್ಯೆಯನ್ನು ಕಲಿಸಿದ ಗುರು - ಈ ಮೂವರನ್ನೂ ತಂದೆಯೆಂದು ಗೌರವಿಸಬೇಕು.

ತ್ಯಜೇತ್ ಕುಲಾರ್ಥೇ ಪುರುಷಂ ಗ್ರಾಮಸ್ಯಾರ್ಥೇ ಕುಲಂ ತ್ಯಜೇತ್ ।
ಗ್ರಾಮಂ ಜನಪದಸ್ಯಾರ್ಥೇ ಆತ್ಮಾರ್ಥೇ ಪೃಥಿವೀಂ ತ್ಯಜೇತ್ ॥ ೨೯

- ಮಹಾಭಾರತ, ಉದ್ಯೋಗ. ೩೭-೧೭

ಕುಲದ ಹಿತಕ್ಕಾಗಿ ಒಬ್ಬ ಮನುಷ್ಯನನ್ನೂ, ಗ್ರಾಮಕ್ಕಾಗಿ ಕುಲವನ್ನೂ, ರಾಷ್ಟ್ರಕ್ಕಾಗಿ ಗ್ರಾಮವನ್ನೂ ತ್ಯಜಿಸಬಹುದು. 'ಆತ್ಮ'ನಿಗಾಗಿ ಜಗತ್ತನ್ನೇ ತ್ಯಜಿಸಬೇಕು.

ತದಶ್ಮಸಾರಂ ಹೃದಯಂ ಬತೇದಂ
ಯದ್ಗೃಹ್ಯಮಾಣೈರ್ಹರಿನಾಮಧೇಯೈಃ ।
ನ ವಿಕ್ರಿಯೇತಾಥ ಯದಾ ವಿಕಾರೋ
ನೇತ್ರೇ ಜಲಂ ಗಾತ್ರರುಹೇಷು ಹರ್ಷಃ ॥ ೩೦

- ಭಾಗವತ, ೨-೩-೨೪

ಭಗವಂತನ ನಾಮಾವಳಿಯನ್ನು ಪಠಿಸುವಾಗ ಯಾರ ಕಣ್ಣಿನಲ್ಲಿ ಆನಂದಬಾಷ್ಪ ಸುರಿಯದೋ, ರೋಮಾಂಚವಾಗದೋ ಅವನ ಹೃದಯ ಕಗ್ಗಲ್ಲೇ ಸರಿ.

ತ್ರಯೀ ಸಾಂಖ್ಯಂ ಯೋಗಃ ಪಶುಪತಿಮತಂ ವೈಷ್ಣವಮಿತಿ
ಪ್ರಭಿನ್ನೇ ಪ್ರಸ್ಥಾನೇ ಪರಮಿದಮದಃ ಪಥ್ಯಮಿತಿ ಚ ।

**ರುಚೀನಾಂ ವೈಚಿತ್ರ್ಯಾತ್ ಋಜುಕುಟಿಲನಾನಾಪಥಜುಷಾಂ**
**ನೃಣಾಮೇಕೋ ಗಮ್ಯಸ್ತ್ವಮಸಿ ಪಯಸಾಮರ್ಣವ ಇವ ॥ ೩೧**

- ಮಹಿಮ್ನಃಸ್ತೋತ್ರ-೭

ಹೇ ಪರಮೇಶ್ವರ, ವೇದಗಳು, ಸಾಂಖ್ಯ, ಯೋಗ, ಪಾಶುಪತ ಮತ್ತು ವೈಷ್ಣವ ಇತ್ಯಾದಿ ಮತಗಳು 'ಇದು ಸರಿ, ಅದು ಸರಿ' ಎಂದು ವಿಭಿನ್ನ ಪ್ರಸ್ಥಾನಗಳನ್ನು ತೋರಿಸಿವೆ. ರುಚಿಭೇದದಿಂದ ಜನರು ಇವುಗಳಲ್ಲಿ ನೇರವಾದ ಮತ್ತು ಬಳಸಾದ ನಾನಾ ಮಾರ್ಗಗಳನ್ನು ಹಿಡಿದಿರುತ್ತಾರೆ. ಅವರೆಲ್ಲರಿಗೂ ನೀನೇ ಗಮ್ಯಸ್ಥಾನ. ವಿಭಿನ್ನ ನದಿಗಳ ನೀರಿಗೆ ಸಮುದ್ರವಿರುವಂತೆ.

**ತ್ವಯಿ ರಕ್ಷತಿ ರಕ್ಷಕೈಃ ಕಿಮನ್ಯೈಃ**
**ತ್ವಯಿ ಚಾರಕ್ಷತಿ ರಕ್ಷಕೈಃ ಕಿಮನ್ಯೈಃ ।**
**ಇತಿ ನಿಶ್ಚಿತಧೀಃ ಶ್ರಯಾಮಿ ನಿತ್ಯಂ**
**ನೃಹರೇ ವೇಗವತೀತಟಾಶ್ರಯಂ ತ್ವಾಮ್ ॥ ೩೨**

- ವೇದಾಂತದೇಶಿಕರು

ನೀನು ರಕ್ಷಿಸಿದರೆ ಇತರ ರಕ್ಷಕರಿಂದೇನು ? ನೀನು ರಕ್ಷಿಸದಿದ್ದರೆ ಇತರ ರಕ್ಷಕರಿಂದೇನು ? ಹೀಗೆ ನಿಶ್ಚಯಿಸಿಕೊಂಡು ಎಲೈ ವೇಗವತೀ ನದಿಯ ದಡದಲ್ಲಿ ನೆಲಸಿರುವ ನರಸಿಂಹನೇ, ನಿನ್ನನ್ನು ಆಶ್ರಯಿಸುತ್ತೇನೆ.

**ತಾರ್ಕಿಕಾ ಘಟಪಟೇತಿ ರಟೇಯುಃ**
**ಶಾಬ್ದಿಕಾಃ ಖಫಛಠೇತಿ ಪಠೇಯುಃ ।**
**ಮಾದೃಶಾಂ ತು ಸತತಂ ಸ್ಮರಣೀಯೌ**
**ಚಂದ್ರಚೂಡಚರಣೌ ರಮಣೀಯೌ ॥ ೩೩**

- ಗೋರಕ್ಷಸಿದ್ಧಾಂತಸಂಗ್ರಹ (ಭರ್ತೃಹರಿ) -೭೯

ತಾರ್ಕಿಕರು ಘಟ-ಪಟ ಎಂದು ಕರ್ಕಶವಾಗಿ ಹೇಳುತ್ತಿರಲಿ. ವೈಯಾಕರಣರು ಖ ಫ ಛ ಠ ಎಂದು ಪಠಿಸುತ್ತಿರಲಿ. ನನ್ನಂಥವರಿಗೆ ಪರಮೇಶ್ವರನ ರಮಣೀಯ ಪಾದಗಳು ಸದಾ ಸ್ಮರಣೀಯವಾಗಿವೆ.

**ತಾವದ್ರಾಗಾದಯಃಸ್ತೇನಾಸ್ತಾವತ್ಕಾರಾಗೃಹಂ ಗೃಹಂ ।**
**ತಾವನ್ಮೋಹೋಽಂಘ್ರಿನಿಗಡೋ ಯಾವತ್ಕೃಷ್ಣ ನ ತೇ ಜನಾಃ ॥ ೩೪**

ಎಲೈ ಕೃಷ್ಣ, ಎಲ್ಲಿಯವರೆಗೆ ಜನರು ನಿನ್ನವರಾಗುವುದಿಲ್ಲವೋ ಅಲ್ಲಿಯವರೆಗೆ ರಾಗವೇ ಮೊದಲಾದ ಕಳ್ಳರು ; ಅಲ್ಲಿಯವರೆಗೇ ಮನೆ ಸೆರಮನೆ ; ಅಲ್ಲಿಯವರೆಗೇ ಮೋಹದ ಕಾಲ್ಸಂಕೋಲೆ !

**ತೇ ಸಭಾಗ್ಯಾ ಮನುಷ್ಯೇಷು ಕೃತಾರ್ಥಾ ನೃಪ ನಿಶ್ಚಿತಂ ।**
**ಸ್ಮರಂತಿ ಯೇ ಸ್ಮಾರಯಂತಿ ಹರೇರ್ನಾಮ ಕಲೌಯುಗೇ ॥ ೩೫**

ಎಲೈ ಮಹಾರಾಜ, ಕಲಿಯುಗದಲ್ಲಿ ಯಾರು ಹರಿಸ್ಮರಣೆ ಮಾಡುತ್ತಾರೋ, ಅಥವಾ ಮಾಡಿಸುತ್ತಾರೆಯೋ ಅವರೇ ಭಾಗ್ಯಶಾಲಿಗಳು ಹಾಗೂ ಕೃತಾರ್ಥರು.

**ದಯಯಾ ಸರ್ವಭೂತೇಷು ಸಂತುಷ್ಟ್ಯಾ ಯೇನಕೇನ ವಾ ।**
**ಸರ್ವೇಂದ್ರಿಯೋಪಶಾಂತ್ಯಾ ಚ ತುಷ್ಯತ್ಯಾಶು ಜನಾರ್ದನಃ ॥ ೩೬**

- ಭಾಗವತ, ೪-೩೧-೧೯

ಎಲ್ಲಾ ಪ್ರಾಣಿಗಳಲ್ಲಿಯೂ ದಯೆ ತೋರಿಸುವುದರಿಂದ, ಯಾವ ಪ್ರಕಾರ ದಿಂದಲಾದರೂ ತೃಪ್ತಿಹೊಂದುವುದರಿಂದ, ಎಲ್ಲಾ ಇಂದ್ರಿಯಗಳ ಉಪಶಾಂತಿಯಿಂದ, ಭಗವಂತನು ಬೇಗನೇ ಸಂತೋಷಿಸುತ್ತಾನೆ.

**ದೇಹೇಂದ್ರಿಯಪ್ರಾಣಮನೋಧಿಯಾಂ ಯೋ**
**ಜನ್ಮಾಪ್ಯಯಕ್ಷುದ್ಭಯತರ್ಷಕೃಚ್ಛ್ರೈಃ ।**
**ಸಂಸಾರಧರ್ಮೈರವಿಮುಹ್ಯಮಾನಃ**
**ಸ್ಮೃತ್ಯಾ ಹರೇರ್ಭಾಗವತ ಪ್ರಧಾನಃ ॥ ೩೭**

- ಭಾಗವತ, ೧೧-೨-೪೯

ಯಾರು ಹುಟ್ಟು, ಸಾವು, ಹಸಿವು, ಭಯ, ಬಾಯಾರಿಕೆ ಮೊದಲಾದ ಕಷ್ಟಗಳಿಂದ ಕೂಡಿದ ಸಂಸಾರ ಧರ್ಮಗಳಿಂದ, ಶರೀರ, ಇಂದ್ರಿಯ, ಪ್ರಾಣ, ಮನಸ್ಸು ಬುದ್ಧಿಗಳ ಮೋಹವನ್ನು ಹೊಂದದೇ ಪರಮಾತ್ಮನ ನಾಮಸ್ಮರಣೆಯನ್ನು ಮಾಡುತ್ತಾನೆಯೋ ಅವನೇ ಭಾಗವತಶ್ರೇಷ್ಠನು.

**ದುಃಖಂ ಚ ಜನ್ಮದುರಿತಂ ಚ ದೃಢಾಮವಿದ್ಯಾಂ**
**ಹಾ ಹಂತ ಹಂತಿ ಪರಮಾ ಹರಿಭಕ್ತಿರೇಕಾ ।**
**ಏಕೋऽಪಿ ರಾಘವಶರಃ ಕಿಲ ಸಪ್ತ ಸಾಲಾನ್**
**ಶೈಲಂ ರಸಾತಲಮಪಿ ತ್ವರಯಾ ಬಿಭೇದ ॥ ೩೮**

-ವಿಶ್ವಗುಣಾದರ್ಶ -೧೫೦

ಭಗವಂತನಲ್ಲಿ ಸರ್ವಶ್ರೇಷ್ಠವಾದ ಭಕ್ತಿಯೊಂದೇ ದುಃಖವನ್ನೂ, ಹುಟ್ಟನ್ನೂ, ಪಾಪಗಳನ್ನೂ ಮತ್ತು ಸುತ್ತಲೂ ಕವಿದಿರುವ ಅಜ್ಞಾನವನ್ನೂ ನಾಶಮಾಡುತ್ತದೆ. ಹೇಗೆಂದರೆ ಶ್ರೀರಾಮನ ಒಂದೇ ಬಾಣವು ಏಳು ಸಾಲ ವೃಕ್ಷಗಳನ್ನೂ, ಬೆಟ್ಟವನ್ನೂ, ಪಾತಾಲವನ್ನೂ ಬೇಗನೇ ಒಂದೇ ಸಲ ಭೇದಿಸಿಬಿಟ್ಟಿತು.

**ದ್ರುತಸ್ಯ ಭಗವದ್ಧರ್ಮಾತ್ ಧಾರಾವಾಹಿಕತಾಂ ಗತಾ ।**
**ಸರ್ವೇಶೇ ಮನಸೋ ವೃತ್ತಿಃ ಭಕ್ತಿರಿತ್ಯಭಿಧೀಯತೇ ॥ ೩೯**

- ಭಕ್ತಿರಸಾಯನ

ಭಗವಂತನ ಅಪಾರ ಕಾರುಣ್ಯಾದಿಗಳನ್ನು ಸ್ಮರಿಸಿಕೊಂಡು ಕರಗಿಹೋದ ಚಿತ್ತವೃತ್ತಿಯು ಆತನಲ್ಲಿಯೇ ಧಾರಾಕಾರವಾಗಿ ಹರಿಯುತ್ತಿದ್ದರೆ, ಆ ಚಿತ್ತವೃತ್ತಿಯು ಭಕ್ತಿ ಎನಿಸಿಕೊಳ್ಳುತ್ತದೆ.

**ದೋಷೇಭ್ಯೋ ನೈವ ಭೇತವ್ಯಂ ದೃಢಾ ಚೇದ್ಭಕ್ತಿರಚ್ಯುತೇ ।**
**ತಿಮಿರೇಭ್ಯೋ ನ ಹಿ ಭಯಂ ದೀಪಶ್ಚೇಲ್ಲಭ್ಯತೇ ಮಹಾನ್ ॥೪೦**

- ವಿಶ್ವಗುಣಾದರ್ಶ - ೧೪೯

ಭಗವಂತನಲ್ಲಿ ಭಕ್ತಿಯು ದೃಢವಾಗಿದ್ದಲ್ಲಿ ದೋಷಗಳ ದೆಸೆಯಿಂದ ಹೆದರ ಬೇಕಾಗಿಲ್ಲ. ಉಜ್ವಲವಾದ ದೀಪವು ಸಿಕ್ಕಿದ್ದೇ ಆದರೆ ಅಂಧಕಾರದ ದೆಸೆಯಿಂದ ಭಯವಿಲ್ಲ.

**ದೌರ್ಭಾಗ್ಯಮಿಂದ್ರಿಯಾಣಾಂ ಕೃಷ್ಣೇ ವಿಷಯೇ ಹಿ ಶಾಶ್ವತಿಕೇ ।**
**ಕ್ಷಣಿಕೇಷು ಪಾಪಕರಣೇಷ್ವಪಿ ಸಜ್ಜಂತೇ ಯದನ್ಯವಿಷಯೇಷು ॥ ೪೧**

- ಭಕ್ತಿರಸಾಯನ

ಶಾಶ್ವತನಾದ ಶ್ರೀಕೃಷ್ಣನು ವಿಷಯವಾಗಿದ್ದರೂ, ಇಂದ್ರಿಯಗಳು ಕ್ಷಣಿಕಗಳೂ ಪಾಪಸಾಧನಗಳೂ ಆದ ಇತರ ಶಬ್ದಾದಿವಿಷಯಗಳಲ್ಲಿ ಅನುರಕ್ತವಾಗುತ್ತವೆಯಲ್ಲ; ಇದು ಇಂದ್ರಿಯಗಳ ದೌರ್ಭಾಗ್ಯ!

**ಧರ್ಮಂ ಭಜಸ್ವ ಸತತಂ ತ್ಯಜ ಲೋಕಧರ್ಮಾನ್**
**ಸೇವಸ್ವ ಸಾಧುಪುರುಷಾನ್ ಜಹಿ ಕಾಮತೃಷ್ಣಾಂ ।**
**ಅನ್ಯಸ್ಯ ದೋಷಗುಣಚಿಂತನಮಾಶು ಮುಕ್ತ್ವಾ**
**ಸೇವಾಕಥಾರಸಮಹೋ ನಿತರಾಂ ಪಿಬ ತ್ವಮ್ ॥ ೪೨**

- ಭಾಗವತಮಾಹಾತ್ಮ್ಯ, ೪-೮೦

ಧರ್ಮವನ್ನು ಆಚರಿಸು, ಲೋಕಧರ್ಮಗಳನ್ನು ಯಾವಾಗಲೂ ಬಿಡು, ಸತ್ಪುರುಷರನ್ನು ಸೇವಿಸು, ಕಾಮಪಿಪಾಸೆಯನ್ನು ನಾಶಮಾಡು, ಇನ್ನೊಬ್ಬರ ಗುಣದೋಷಗಳ ಬಗ್ಗೆ ಚಿಂತಿಸುವುದನ್ನು ಬಿಟ್ಟು ಸೇವೆ ಮತ್ತು ಭಗವಂತನ ಕಥೆಗಳನ್ನು ಕೇಳುವುದರಲ್ಲಿ ನೀನು ಆಸಕ್ತಿ ವಹಿಸು.

**ಧರ್ಮಾರ್ಥಕಾಮಮೋಕ್ಷೇಷು ನೇಚ್ಛಾ ಮಮ ಕದಾಚನ ।**
**ತ್ವತ್ಪಾದಪಂಕಜಾಸ್ವಾದಜೀವಿತಂ ದೀಯತಾಂ ಮಮ ॥** ೪೩

- ಚಿಂತಾಸ್ತೋತ್ರ

ಧರ್ಮ, ಅರ್ಥ, ಕಾಮ ಅಥವಾ ಮೋಕ್ಷ ಇವುಗಳಲ್ಲಿ ಯಾವುದರಲ್ಲಿಯೂ ಯಾವಾಗಲೂ ನನಗೆ ಇಚ್ಛೆ ಇಲ್ಲ. ನಿನ್ನ ಪಾದ ಪದ್ಮಗಳ ಆಸ್ವಾದದಿಂದ ನಾನು ಬದುಕುವಂತೆ ಅನುಗ್ರಹ ಮಾಡು.

**ಧುನೋತಿ ನಿಬಿಡಂ ತಮಃ ಪರಿಲುನಾತಿ ಪಾಪಾಟವೀಂ**
**ತನೋತಿ ಚ ಮನೋರಥಾನುಪಚಿನೋತಿ ನಾನೋತ್ಸವಾನ್ ।**
**ಅನಕ್ತಿ ಚ ಪುನಃ ಪುನರ್ನನು ಮನಃ ಸುಧಾನಿರ್ಝರೈಃ**
**ವ್ಯನಕ್ತಿ ಪರಿಪಕ್ತ್ರಿಮಂ ವೃಷಗಿರೀಶಭಕ್ತಿಃ ಶುಭಮ್ ॥** ೪೪

- ವಿಶ್ವಗುಣಾದರ್ಶ - ೧೫೧

ಭಗವಂತನಲ್ಲಿ ದೃಢವಾದ ಭಕ್ತಿಯು ದಟ್ಟವಾದ ಅಂಧಕಾರವನ್ನು ಹೋಗಲಾಡಿಸುತ್ತದೆ. ಪಾಪಗಳ ಕಾಡನ್ನು ಕತ್ತರಿಸುತ್ತದೆ. ಮನೋರಥಗಳನ್ನು ವಿಸ್ತರಿಸುತ್ತದೆ. ನಾನಾ ಬಗೆಯ ಉತ್ಸವಗಳನ್ನುಂಟುಮಾಡುತ್ತದೆ. ಮತ್ತೆ ಮತ್ತೆ ಮನಸ್ಸನ್ನು ಅಮೃತ ಪ್ರವಾಹಗಳಿಂದ ಲೇಪಿಸುತ್ತದೆ. ಶುಭಫಲಗಳನ್ನು ಕೊಡುತ್ತದೆ.

**ನ ಕಾಮಕರ್ಮಬಿಜಾನಾಂ ಯಸ್ಯ ಚೇತಸಿ ಸಂಭವಃ ।**
**ವಾಸುದೇವೈಕನಿಲಯಃ ಸ ವೈ ಭಾಗವತೋತ್ತಮಃ ॥** ೪೫

- ಭಾಗವತ, ೧೧-೨-೫೦

ಯಾರ ಮನಸ್ಸಿನಲ್ಲಿ ಕಾಮ, ಕರ್ಮಗಳ ಬೀಜಗಳು ಮೊಳೆಯುವುದಿಲ್ಲವೋ ಮತ್ತು ಯಾರು ಸದಾ ಪರಮಾತ್ಮನ ಧ್ಯಾನದಲ್ಲಿ ಲೀನನಾಗಿರುತ್ತಾನೆಯೋ ಅವನೇ ಭಗವಂತನ ಭಕ್ತರಲ್ಲಿ ಶ್ರೇಷ್ಠನು.

**ನ ಕಿಂಚಿತ್ ಸಾಧವೋ ಧೀರಾ ಭಕ್ತಾ ಹ್ಯೇಕಾಂತಿನೋ ಮಮ ।**
**ವಾಂಛಂತ್ಯಪಿ ಮಯಾ ದತ್ತಂ ಕೈವಲ್ಯಮಪುನರ್ಭವಮ್ ॥** ೪೬

- ಭಾಗವತ, ೧೧-೨೯-೩೪

ಧೀರರೂ ಸಾಧುಗಳೂ ಪರಮೈಕಾಂತಿಗಳೂ ಆದ ನನ್ನ ಭಕ್ತರೂ ಏನನ್ನೂ ಇಚ್ಛಿಸುವುದಿಲ್ಲ. ನನ್ನಿಂದ ಕೊಡಲ್ಪಟ್ಟ ಮುಕ್ತಿಯನ್ನಾಗಲಿ, ಜನನರಾಹಿತ್ಯವನ್ನಾಗಲಿ ಆಶಿಸುವುದಿಲ್ಲ.

ನ ತಥಾ ಹ್ಯಘವಾನ್ ರಾಜನ್ ಪೂಯೇತ ತಪ ಆದಿಭಿಃ ।
ಯಥಾ ಕೃಷ್ಣಾರ್ಪಿತಪ್ರಾಣಸ್ತತ್ಪೂರುಷನಿಷೇವಯಾ ॥ ೪೭

- ಭಾಗವತ, ೬-೧-೧೬

ಎಲೈ ರಾಜನೇ, ಪಾಪಿಯಾದ ಮನುಷ್ಯನು ಪರಮಾತ್ಮನಲ್ಲಿಟ್ಟ ಪ್ರಾಣವುಳ್ಳವನಾಗಿ, ಅವನ ಭಕ್ತರ ಸೇವೆಯಿಂದ ಹೇಗೆ ಶುದ್ಧಿ ಹೊಂದುವನೋ ಹಾಗೆ ತಪಸ್ಸೇ ಮೊದಲಾದವುಗಳಿಂದಲೂ ಶುದ್ಧನಾಗಲಾರನು.

ನ ದಾನಂ ನ ತಪೋ ನೇಜ್ಯಾ ನ ಶೌಚಂ ನ ವ್ರತಾನಿ ಚ ।
ಪ್ರೀಯತೇಽಮಲಯಾ ಭಕ್ತ್ಯಾ ಹರಿರನ್ಯದ್ ವಿಡಂಬನಮ್ ॥ ೪೮

- ಭಾಗವತ, ೭-೭-೫೨

ಪರಮಾತ್ಮನನ್ನು ದಾನವಾಗಲೀ, ತಪಸ್ಸಾಗಲೀ, ಯಜ್ಞವಾಗಲೀ, ಶುಚಿತ್ವವಾಗಲೀ, ವ್ರತಗಳಾಗಲೀ ಸಂತೋಷಪಡಿಸುವುದಿಲ್ಲ. ನಿರ್ಮಲವಾದ ಭಕ್ತಿಯಿಂದಲೇ ಅವನು ಸಂತುಷ್ಟನಾಗುತ್ತಾನೆ. ಬೇರೆ ಎಲ್ಲಾ ಹಾಸ್ಯಾಸ್ಪದ.

ನಮೋ ನೇದಿಷ್ಠಾಯ ಪ್ರಿಯದವ ದವಿಷ್ಠಾಯ ಚ ನಮೋ
ನಮಃ ಕ್ಷೋದಿಷ್ಠಾಯ ಸ್ಮರಹರ ಮಹಿಷ್ಠಾಯ ಚ ನಮಃ ।
ನಮೋ ವರ್ಷಿಷ್ಠಾಯ ತ್ರಿನಯನ ಯವಿಷ್ಠಾಯ ಚ ನಮೋ
ನಮಃ ಸರ್ವಸ್ಮೈ ತೇ ತದಿದಮತಿಸರ್ವಾಯ ಚ ನಮಃ ॥ ೪೯

- ಮಹಿಮ್ನಃಸ್ತೋತ್ರ-೧೪

ವನಪ್ರಿಯನಾದ ಪರಮೇಶ್ವರ, ಬಹಳ ಹತ್ತಿರದಲ್ಲಿಯೂ ಮತ್ತು ಬಹಳ ದೂರದಲ್ಲಿಯೂ ಇರುವ ನಿನಗೆ ನಮಸ್ಕಾರ. ಕಾಮಾಂತಕ, ಅತ್ಯಂತ ಸೂಕ್ಷ್ಮನೂ ಅತ್ಯಂತ ದೊಡ್ಡವನೂ ಆದ ನಿನಗೆ ನಮಸ್ಕಾರ. ತ್ರಿನಯನ, ತುಂಬ ಹಿರಿಯನೂ ತುಂಬ ಕಿರಿಯನೂ ಆದ ನಿನಗೆ ನಮಸ್ಕಾರ. ಈ ಎಲ್ಲವೂ ಆಗಿರುವ ಮತ್ತು ಎಲ್ಲವನ್ನೂ ಮೀರಿರುವ ನಿನಗೆ ನಮಸ್ಕಾರ.

ನ ಹ್ಯತೋಽನ್ಯಃ ಶಿವಃ ಪಂಥಾ ವಿಶತಃ ಸಂಸೃತಾವಿಹ ।
ವಾಸುದೇವೇ ಭಗವತಿ ಭಕ್ತಿಯೋಗೋ ಯತೋ ಭವೇತ್ ॥ ೫೦

- ಭಾಗವತ, ೨-೨-೩೩

ಯಾವುದರಿಂದ ಭಗವಂತನಾದ ವಾಸುದೇವನಲ್ಲಿ ಭಕ್ತಿಯೋಗವುಂಟಾಗುವುದೋ, ಅದಕ್ಕಿಂತ ಮಂಗಳಕರವಾದ ಬೇರೊಂದು ಮಾರ್ಗ ಸಂಸಾರಿಗಳಿಗೆ ಇಲ್ಲಿಲ್ಲ.

ನಾರಾಯಣಪರಾಃ ಸರ್ವೇ ನ ಕುತಶ್ಚನ ಬಿಭ್ಯತಿ ।
ಸ್ವರ್ಗಾಪವರ್ಗನರಕೇಷ್ವಪಿ ತುಲ್ಯಾರ್ಥದರ್ಶಿನಃ ॥ ೫೧

- ಭಾಗವತ, ೬-೧೭-೨೮

ಪರಮಾತ್ಮನ ಭಕ್ತರೆಲ್ಲಾ ಯಾವುದರ ದೆಸೆಯಿಂದಲೂ ಹೆದರುವುದಿಲ್ಲ. ಸ್ವರ್ಗ, ಮೋಕ್ಷ, ನರಕಗಳಲ್ಲಿಯೂ ಕೂಡ ಸಮದೃಷ್ಟಿಯುಳ್ಳವರಾಗಿರುತ್ತಾರೆ.

ನಿವಸ್ತಾಂ ವಾ ಕೃತ್ತಿಂ ನಿವಸತು ಚಿರಂ ವಾ ಪಿತೃವನೇ
ಶಿವಸ್ತಾವದ್ಧತ್ತಾಮಹಿಗಣಮಥಾಪ್ಯೇಷ ಸುಭಗಃ ।
ಪರೀತಂ ಶೈವಾಲೈರುಷಿತಮಪಿ ಪಂಕೇಷು ಮಲಿನಾ
ಮಲೀನಾಂ ಬಿಭ್ರಾಣಂ ಕಿಮಿಹ ಕಮನೀಯಂ ನ ಕಮಲಮ್ ॥ ೫೨

- ವಿಶ್ವಗುಣಾದರ್ಶ - ೩೧೬

ಶಿವನು ಚರ್ಮವನ್ನುಡಲಿ ಅಥವಾ ಶ್ಮಶಾನದಲ್ಲಿ ಬಹುಕಾಲ ಇರಲಿ, ಹಾವುಗಳನ್ನು ಧರಿಸಲಿ ಆದರೂ ಮಂಗಳಕರನೇ. ಪಾಚಿಯಿಂದ ಸುತ್ತಲ್ಪಟ್ಟಿದ್ರೂ ಕೆಸರಿನಲ್ಲಿ ಇದ್ದರೂ, ದುಂಬಿಗಳ ಕೊಳಕನ್ನು ಧರಿಸಿದ್ದರೂ, ಕಮಲವು ಸುಂದರವಲ್ಲವೇ?

ನಿದ್ರಾತಿ ಸ್ನಾತಿ ಭುಂಕ್ತೇ ಚಲತಿ ಕಚಭರಂ ಶೋಷಯತ್ಯಂತರಾಸ್ತೇ
ದೀವ್ಯತ್ಯಕ್ಷೈರ್ನ ಚಾಯಂ ಗದಿತುಮವಸರೋ ಭೂಯ ಆಯಾಹಿ ಯಾಹಿ
ಇತ್ಯುದ್ದಂಡೈಃ ಪ್ರಭೂಣಾಮಸಕೃದಧಿಕೃತೈರ್ವಾರಿತಾನ್ ದ್ವಾರಿ ದೀನಾನ್
ಅಸ್ಮಾನ್ ಪಶ್ಯಾಬ್ಧಿಕನ್ಯೇ ಸರಸಿಹರುಚಾಮಂತರಂಗೈರಪಾಂಗೈಃ ॥ ೫೩

- ಕುವಲಯಾನಂದ

ಹೇ ಲಕ್ಷ್ಮೀದೇವಿ, ನಾವು ಪ್ರಭುಗಳ ಮನೆಗೆ ಹೋದಾಗ ಉದ್ಧತರಾದ ಅಧಿಕಾರಿಗಳು ನಮ್ಮನ್ನು ಬಾಗಿಲಲ್ಲಿ ತಡೆದು "ಯಜಮಾನನು ಈಗ ನಿದ್ರಿಸುತ್ತಿದ್ದಾನೆ, ಸ್ನಾನ ಮಾಡುತ್ತಿದ್ದಾನೆ, ಊಟ ಮಾಡುತ್ತಿದ್ದಾನೆ, ಈಗ ಶತಪಥ ತಿರುಗಾಡುತ್ತಿದ್ದಾನೆ, ತಲೆಗೂದಲನ್ನು ಒಣಗಿಸಿಕೊಳ್ಳುತ್ತಿದ್ದಾನೆ, ಈಗ ಒಳಗಿದ್ದಾನೆ, ಪಗಡೆಯಾಡುತ್ತಿದ್ದಾನೆ, ಇದು ಮಾತನಾಡುವ ಸಮಯವಲ್ಲ. ಇನ್ನೊಮ್ಮೆ ಬಾ, ಹೋಗು" ಎಂದು ಹೇಳುತ್ತಿದ್ದಾರೆ. ದೀನರಾದ ನಮ್ಮನ್ನು ತಾವರೆಹೂಗಳ ಸೊಬಗಳನ್ನೊಳಗೊಂಡ ಅಪಾಂಗ ವೀಕ್ಷಣಗಳಿಂದ ನೋಡು.

ನಿಧ್ಯಾಯಸಿ ವಿಷಯಸುಖಂ ನ ಧ್ಯಾಯಸಿ ವಿಷಮಮಸ್ಯ ಪರಿಪಾಕಂ ।
ಬಂಧುಂ ತಮೇವ ಚಿಂತಯ ಬಂಧುಂ ಮೋಕ್ತುಂ ಚ ಯಃ ಕ್ಷಮತೇ ॥ ೫೪

- (ಅಪ್ಪಯ್ಯ ದೀಕ್ಷಿತರ) ವೈರಾಗ್ಯಶತಕ

ಎಲೈ ವಿಷಯಸುಖವನ್ನೇ ಆಲೋಚಿಸುತ್ತೀಯೆ. ಅದರ ಪರಿಪಾಕ ಎಷ್ಟು ವಿಷಮವೆಂದು ಆಲೋಚಿಸುವುದಿಲ್ಲ. ಬಂಧಿಸುವುದಕ್ಕೂ ಬಿಡುಗಡೆ ಮಾಡುವುದಕ್ಕೂ ಸಮರ್ಥನಾದ ಆ ಬಂಧುವನ್ನೇ (ಪರಮಾತ್ಮನನ್ನೇ) ಚಿಂತಿಸು.

**ನೃಣಾಂ ನಿಃಶ್ರೇಯಸಾರ್ಥಾಯ ವ್ಯಕ್ತಿರ್ಭಗವತೋ ನೃಪ ।**
**ಅವ್ಯಯಸ್ಯಾಪ್ರಮೇಯಸ್ಯ ನಿರ್ಗುಣಸ್ಯ ಗುಣಾತ್ಮನಃ ॥** ೫೫

- ಭಾಗವತ, ೧೦-೨೯-೧೪

ಎಲೈ ರಾಜನೇ, ಪರಮಪೂಜ್ಯನಾದ, ನಾಶವಿಲ್ಲದ, ಅಳೆಯಲಸಾಧ್ಯನಾದ, ನಿರ್ಗುಣನಾದ, ಪರಮಾತ್ಮನ ವ್ಯಕ್ತವಾದ ಸಗುಣಮೂರ್ತಿಯ ರೂಪ ಜನರ ಕಲ್ಯಾಣಕ್ಕೋಸ್ಕರವಾಗಿಯೇ.

**ನೃಣಾಂ ಜನ್ಮಸಹಸ್ರೇಣ ಭಕ್ತೌ ಪ್ರೀತಿರ್ಹಿ ಜಾಯತೇ ।**
**ಕಲೌ ಭಕ್ತಿಃ ಕಲೌ ಭಕ್ತಿಃ ಭಕ್ತ್ಯಾ ಕೃಷ್ಣಃ ಪುರಃ ಸ್ಥಿತಃ ॥** ೫೬

- ಭಾಗವತಮಾಹಾತ್ಮ್ಯ, ೨-೧೯

ಸಹಸ್ರಾರು (ಪುಣ್ಯ) ಜನ್ಮಗಳ ನಂತರ ಭಕ್ತಿಯಲ್ಲಿ ಆಸಕ್ತಿ ಉಂಟಾಗುವುದು. ಕಲಿಯುಗದಲ್ಲಿ ಭಕ್ತಿಯೇ ಮುಖ್ಯ; ಭಕ್ತಿಯೇ ಮುಖ್ಯ; ಭಕ್ತಿಯಿಂದಲೇ ಕೃಷ್ಣ ಕಣ್ಣ ಮುಂದೆ ನಿಂತಿದ್ದಾನೆ.

**ಪತ್ರಂ ಪುಷ್ಪಂ ಫಲಂ ತೋಯಂ ಯೋ ಮೇ ಭಕ್ತ್ಯಾ ಪ್ರಯಚ್ಛತಿ ।**
**ತದಹಂ ಭಕ್ತ್ಯುಪಹೃತಮಶ್ನಾಮಿ ಪ್ರಯತಾತ್ಮನಃ ॥** ೫೭

- ಭಗವದ್ಗೀತಾ, ೯-೨೬

ಎಲೆ, ಹೂ, ಹಣ್ಣು ಅಥವಾ ನೀರು - ಯಾವುದನ್ನಾಗಲಿ ಪರಿಶುದ್ಧಚಿತ್ತನು ಭಕ್ತಿಯಿಂದ ಸಮರ್ಪಿಸಿದರೆ, ಅದನ್ನು ನಾನು ಸ್ವೀಕರಿಸುತ್ತೇನೆ.

**ಪಥಿ ಧಾವನ್ನಿಹ ಪತಿತೋ ರೋದಿಷ್ಯಂಬಾಕರಾವಲಂಬಾಯ ।**
**ಪತಿತೋದ್ಧಾರಣಸಮಯೇ ಕಿಂ ನ ಸ್ಮರಸಿ ತ್ವಮಾತ್ಮಾನಮ್ ॥** ೫೮

ಅಯ್ಯಾ ಕಪಟಕೃಷ್ಣ, ದಾರಿಯಲ್ಲಿ ಓಡಿಬಿದ್ದಾಗ ಬಿದ್ದುಬಿಟ್ಟು ತಾಯಿ ಬಂದು ಕೈ ಹಿಡಿಯಲೆಂದ ಅಳುತ್ತಿರುವೆಯಲ್ಲಾ ! ಸಂಸಾರದಲ್ಲಿ ಬಿದ್ದವರನ್ನು ಉದ್ಧಾರ ಮಾಡುವಾಗ ಈ ನಿನ್ನ ಅವಸ್ಥೆಯನ್ನು ಯಾಕೆ ನೆನೆಸಿಕೊಳ್ಳುವುದಿಲ್ಲ!

ನಾರಾಯಣಪರಾಃ ಸರ್ವೇ ನ ಕುತಶ್ಚನ ಬಿಭ್ಯತಿ ।
ಸ್ವರ್ಗಾಪವರ್ಗನರಕೇಷ್ವಪಿ ತುಲ್ಯಾರ್ಥದರ್ಶಿನಃ ॥ ೫೧

- ಭಾಗವತ, ೬-೧೭-೨೮

ಪರಮಾತ್ಮನ ಭಕ್ತರೆಲ್ಲಾ ಯಾವುದರ ದೆಸೆಯಿಂದಲೂ ಹೆದರುವುದಿಲ್ಲ. ಸ್ವರ್ಗ, ಮೋಕ್ಷ, ನರಕಗಳಲ್ಲಿಯೂ ಕೂಡ ಸಮದೃಷ್ಟಿಯುಳ್ಳವರಾಗಿರುತ್ತಾರೆ.

ನಿವಸ್ತಾಂ ವಾ ಕೃತ್ತಿಂ ನಿವಸತು ಚಿರಂ ವಾ ಪಿತೃವನೇ
ಶಿವಸ್ತಾವದ್ಧತ್ತಾಮಹಿಗಣಮಥಾಪ್ಯೇಷ ಸುಭಗಃ ।
ಪರೀತಂ ಶೈವಾಲೈರುಷಿತಮಪಿ ಪಂಕೇಷು ಮಲಿನಾ
ಮಲೀನಾಂ ಬಿಭ್ರಾಣಂ ಕಿಮಿಹ ಕಮನೀಯಂ ನ ಕಮಲಮ್ ॥ ೫೨

- ವಿಶ್ವಗುಣಾದರ್ಶ - ೩೧೬

ಶಿವನು ಚರ್ಮವನ್ನುಡಲಿ ಅಥವಾ ಶ್ಮಶಾನದಲ್ಲಿ ಬಹುಕಾಲ ಇರಲಿ, ಹಾವುಗಳನ್ನು ಧರಿಸಲಿ ಆದರೂ ಮಂಗಳಕರನೇ. ಪಾಚಿಯಿಂದ ಸುತ್ತಲ್ಪಟ್ಟಿದ್ದೂ ಕೆಸರಿನಲ್ಲಿ ಇದ್ದರೂ, ದುಂಬಿಗಳ ಕೊಳಕನ್ನು ಧರಿಸಿದ್ದರೂ, ಕಮಲವು ಸುಂದರವಲ್ಲವೇ?

ನಿದ್ರಾತಿ ಸ್ನಾತಿ ಭುಂಕ್ತೇ ಚಲತಿ ಕಚಭರಂ ಶೋಷಯತ್ಯಂತರಾಸ್ತೇ
ದೀವ್ಯತ್ಯಕ್ಷೈರ್ನ ಚಾಯಂ ಗದಿತುಮವಸರೋ ಭೂಯ ಆಯಾಹಿ ಯಾಹಿ
ಇತ್ಯುದ್ದಂಡೈಃ ಪ್ರಭೂಣಾಮಸಕೃದಧಿಕೃತೈರ್ವಾರಿತಾನ್ ದ್ವಾರಿ ದೀನಾನ್
ಅಸ್ಮಾನ್ ಪಶ್ಯಾಬ್ಧಿಕನ್ಯೇ ಸರಸಿಹರುಚಾಮಂತರಂಗೈರಪಾಂಗೈಃ ॥ ೫೩

- ಕುವಲಯಾನಂದ

ಹೇ ಲಕ್ಷ್ಮೀದೇವಿ, ನಾವು ಪ್ರಭುಗಳ ಮನೆಗೆ ಹೋದಾಗ ಉದ್ಧತರಾದ ಅಧಿಕಾರಿಗಳು ನಮ್ಮನ್ನು ಬಾಗಿಲಲ್ಲಿ ತಡೆದು "ಯಜಮಾನನು ಈಗ ನಿದ್ರಿಸುತ್ತಿದ್ದಾನೆ, ಸ್ನಾನ ಮಾಡುತ್ತಿದ್ದಾನೆ, ಊಟ ಮಾಡುತ್ತಿದ್ದಾನೆ, ಈಗ ಶತಪಥ ತಿರುಗಾಡುತ್ತಿದ್ದಾನೆ, ತಲೆಗೂದಲನ್ನು ಒಣಗಿಸಿಕೊಳ್ಳುತ್ತಿದ್ದಾನೆ, ಈಗ ಒಳಗಿದ್ದಾನೆ, ಪಗಡೆಯಾಡುತ್ತಿದ್ದಾನೆ, ಇದು ಮಾತನಾಡುವ ಸಮಯವಲ್ಲ. ಇನ್ನೊಮ್ಮೆ ಬಾ, ಹೋಗು" ಎಂದು ಹೇಳುತ್ತಿದ್ದಾರೆ. ದೀನರಾದ ನಮ್ಮನ್ನು ತಾವರೆಹೂಗಳ ಸೊಬಗಳನ್ನೊಳಗೊಂಡ ಅಪಾಂಗ ವೀಕ್ಷಣಗಳಿಂದ ನೋಡು.

ನಿಧ್ಯಾಯಸಿ ವಿಷಯಸುಖಂ ನ ಧ್ಯಾಯಸಿ ವಿಷಮಮಸ್ಯ ಪರಿಪಾಕಂ ।
ಬಂಧುಂ ತಮೇವ ಚಿಂತಯ ಬಂಧುಂ ಮೋಕ್ತುಂ ಚ ಯಃ ಕ್ಷಮತೇ ॥ ೫೪

- (ಅಪ್ಪಯ್ಯ ದೀಕ್ಷಿತರ) ವೈರಾಗ್ಯಶತಕ

ಎಲೈ ವಿಷಯಸುಖವನ್ನೇ ಆಲೋಚಿಸುತ್ತೀಯೆ. ಅದರ ಪರಿಪಾಕ ಎಷ್ಟು ವಿಷಮವೆಂದು ಆಲೋಚಿಸುವುದಿಲ್ಲ. ಬಂಧಿಸುವುದಕ್ಕೂ ಬಿಡುಗಡೆ ಮಾಡುವುದಕ್ಕೂ ಸಮರ್ಥನಾದ ಆ ಬಂಧುವನ್ನೇ (ಪರಮಾತ್ಮನನ್ನೇ) ಚಿಂತಿಸು.

**ನೃಣಾಂ ನಿಃಶ್ರೇಯಸಾರ್ಥಾಯ ವ್ಯಕ್ತಿರ್ಭಗವತೋ ನೃಪ ।**
**ಅವ್ಯಯಸ್ಯಾಪ್ರಮೇಯಸ್ಯ ನಿರ್ಗುಣಸ್ಯ ಗುಣಾತ್ಮನಃ ॥ ೫೫**

- ಭಾಗವತ, ೧೦-೨೯-೧೪

ಎಲೈ ರಾಜನೇ, ಪರಮಪೂಜ್ಯನಾದ, ನಾಶವಿಲ್ಲದ, ಅಳೆಯಲಸಾಧ್ಯನಾದ, ನಿರ್ಗುಣನಾದ, ಪರಮಾತ್ಮನ ವ್ಯಕ್ತವಾದ ಸಗುಣಮೂರ್ತಿಯ ರೂಪ ಜನರ ಕಲ್ಯಾಣಕ್ಕೋಸ್ಕರವಾಗಿಯೇ.

**ನೃಣಾಂ ಜನ್ಮಸಹಸ್ರೇಣ ಭಕ್ತೌ ಪ್ರೀತಿರ್ಹಿ ಜಾಯತೇ ।**
**ಕಲೌ ಭಕ್ತಿಃ ಕಲೌ ಭಕ್ತಿಃ ಭಕ್ತ್ಯಾ ಕೃಷ್ಣಃ ಪುರಃ ಸ್ಥಿತಃ ॥ ೫೬**

- ಭಾಗವತಮಾಹಾತ್ಮ್ಯ, ೨-೧೯

ಸಹಸ್ರಾರು (ಪುಣ್ಯ) ಜನ್ಮಗಳ ನಂತರ ಭಕ್ತಿಯಲ್ಲಿ ಆಸಕ್ತಿ ಉಂಟಾಗುವುದು. ಕಲಿಯುಗದಲ್ಲಿ ಭಕ್ತಿಯೇ ಮುಖ್ಯ; ಭಕ್ತಿಯೇ ಮುಖ್ಯ; ಭಕ್ತಿಯಿಂದಲೇ ಕೃಷ್ಣ ಕಣ್ಣ ಮುಂದೆ ನಿಂತಿದ್ದಾನೆ.

**ಪತ್ರಂ ಪುಷ್ಪಂ ಫಲಂ ತೋಯಂ ಯೋ ಮೇ ಭಕ್ತ್ಯಾ ಪ್ರಯಚ್ಛತಿ ।**
**ತದಹಂ ಭಕ್ತ್ಯುಪಹೃತಮಶ್ನಾಮಿ ಪ್ರಯತಾತ್ಮನಃ ॥ ೫೭**

- ಭಗವದ್ಗೀತಾ, ೯-೨೬

ಎಲೆ, ಹೂ, ಹಣ್ಣು ಅಥವಾ ನೀರು - ಯಾವುದನ್ನಾಗಲಿ ಪರಿಶುದ್ಧಚಿತ್ತನು ಭಕ್ತಿಯಿಂದ ಸಮರ್ಪಿಸಿದರೆ, ಅದನ್ನು ನಾನು ಸ್ವೀಕರಿಸುತ್ತೇನೆ.

**ಪಥಿ ಧಾವನ್ನಿಹ ಪತಿತೋ ರೋದಿಷ್ಯಂಬಾಕರಾವಲಂಬಾಯ ।**
**ಪತಿತೋದ್ಧಾರಣಸಮಯೇ ಕಿಂ ನ ಸ್ಮರಸಿ ತ್ವಮಾತ್ಮಾನಮ್ ॥ ೫೮**

ಅಯ್ಯಾ ಕಪಟಕೃಷ್ಣ, ದಾರಿಯಲ್ಲಿ ಓಡಿಬಿದ್ದಾಗ ಬಿದ್ದುಬಿಟ್ಟು ತಾಯಿ ಬಂದು ಕೈ ಹಿಡಿಯಲೆಂದ ಅಳುತ್ತಿರುವೆಯಲ್ಲಾ ! ಸಂಸಾರದಲ್ಲಿ ಬಿದ್ದವರನ್ನು ಉದ್ಧಾರ ಮಾಡುವಾಗ ಈ ನಿನ್ನ ಅವಸ್ಥೆಯನ್ನು ಯಾಕೆ ನೆನೆಸಿಕೊಳ್ಳುವುದಿಲ್ಲ!

ನಾರಾಯಣಪರಾಃ ಸರ್ವೇ ನ ಕುತಶ್ಚನ ಬಿಭ್ಯತಿ ।
ಸ್ವರ್ಗಾಪವರ್ಗನರಕೇಷ್ವಪಿ ತುಲ್ಯಾರ್ಥದರ್ಶಿನಃ ॥ ೫೧

- ಭಾಗವತ, ೬-೧೭-೨೮

ಪರಮಾತ್ಮನ ಭಕ್ತರೆಲ್ಲಾ ಯಾವುದರ ದೆಸೆಯಿಂದಲೂ ಹೆದರುವುದಿಲ್ಲ. ಸ್ವರ್ಗ, ಮೋಕ್ಷ, ನರಕಗಳಲ್ಲಿಯೂ ಕೂಡ ಸಮದೃಷ್ಟಿಯುಳ್ಳವರಾಗಿರುತ್ತಾರೆ.

ನಿವಸ್ತಾಂ ವಾ ಕೃತ್ತಿಂ ನಿವಸತು ಚಿರಂ ವಾ ಪಿತೃವನೇ
ಶಿವಸ್ತಾವದ್ಧತ್ತಾಮಹಿಗಣಮಥಾಪ್ಯೇಷ ಸುಭಗಃ ।
ಪರೀತಂ ಶೈವಾಲ್ಯೈರುಷಿತಮಪಿ ಪಂಕೇಷು ಮಲಿನಾ
ಮಲೀನಾಂ ಬಿಭ್ರಾಣಂ ಕಿಮಿಹ ಕಮನೀಯಂ ನ ಕಮಲಮ್ ॥ ೫೨

- ವಿಶ್ವಗುಣಾದರ್ಶ - ೩೧೬

ಶಿವನು ಚರ್ಮವನ್ನುಡಲಿ ಅಥವಾ ಶ್ಮಶಾನದಲ್ಲಿ ಬಹುಕಾಲ ಇರಲಿ, ಹಾವುಗಳನ್ನು ಧರಿಸಲಿ ಆದರೂ ಮಂಗಳಕರನೇ. ಪಾಚಿಯಿಂದ ಸುತ್ತಲ್ಪಟ್ಟಿದ್ದೂ ಕೆಸರಿನಲ್ಲಿ ಇದ್ದರೂ, ದುಂಬಿಗಳ ಕೊಳಕನ್ನು ಧರಿಸಿದ್ದರೂ, ಕಮಲವು ಸುಂದರವಲ್ಲವೇ?

ನಿದ್ರಾತಿ ಸ್ನಾತಿ ಭುಂಕ್ತೇ ಚಲತಿ ಕಚಭರಂ ಶೋಷಯತ್ಯಂತರಾಸ್ತೇ
ದೀವ್ಯತ್ಯಕ್ಷೈರ್ನ ಚಾಯಂ ಗದಿತುಮವಸರೋ ಭೂಯ ಆಯಾಹಿ ಯಾಹಿ
ಇತ್ಯುದ್ದಂಡೈಃ ಪ್ರಭೂಣಾಮಸಕೃದಧಿಕೃತೈರ್ವಾರಿತಾನ್ ದ್ವಾರಿ ದೀನಾನ್
ಅಸ್ಮಾನ್ ಪಶ್ಯಾಬ್ಧಿಕನ್ಯೇ ಸರಸಿಹರುಚಾಮಂತರಂಗೈರಪಾಂಗೈಃ ॥ ೫೩

- ಕುವಲಯಾನಂದ

ಹೇ ಲಕ್ಷ್ಮೀದೇವಿ, ನಾವು ಪ್ರಭುಗಳ ಮನೆಗೆ ಹೋದಾಗ ಉದ್ಧತರಾದ ಅಧಿಕಾರಿಗಳು ನಮ್ಮನ್ನು ಬಾಗಿಲಲ್ಲಿ ತಡೆದು "ಯಜಮಾನನು ಈಗ ನಿದ್ರಿಸುತ್ತಿದ್ದಾನೆ, ಸ್ನಾನ ಮಾಡುತ್ತಿದ್ದಾನೆ, ಊಟ ಮಾಡುತ್ತಿದ್ದಾನೆ, ಈಗ ಶತಪಥ ತಿರುಗಾಡುತ್ತಿದ್ದಾನೆ, ತಲೆಗೂದಲನ್ನು ಒಣಗಿಸಿಕೊಳ್ಳುತ್ತಿದ್ದಾನೆ, ಈಗ ಒಳಗಿದ್ದಾನೆ, ಪಗಡೆಯಾಡುತ್ತಿದ್ದಾನೆ, ಇದು ಮಾತನಾಡುವ ಸಮಯವಲ್ಲ. ಇನ್ನೊಮ್ಮೆ ಬಾ, ಹೋಗು" ಎಂದು ಹೇಳುತ್ತಿದ್ದಾರೆ. ದೀನರಾದ ನಮ್ಮನ್ನು ತಾವರೆಹೂಗಳ ಸೊಬಗಳನ್ನೊಳಗೊಂಡ ಅಪಾಂಗ ವೀಕ್ಷಣಗಳಿಂದ ನೋಡು.

ನಿಧ್ಯಾಯಸಿ ವಿಷಯಸುಖಂ ನ ಧ್ಯಾಯಸಿ ವಿಷಮಮಸ್ಯ ಪರಿಪಾಕಂ ।
ಬಂಧುಂ ತಮೇವ ಚಿಂತಯ ಬಂಧುಂ ಮೋಕ್ತುಂ ಚ ಯಃ ಕ್ಷಮತೇ ॥ ೫೪

- (ಅಪ್ಪಯ್ಯ ದೀಕ್ಷಿತರ) ವೈರಾಗ್ಯಶತಕ

ಎಲ್ಲೈ ವಿಷಯಸುಖವನ್ನೇ ಆಲೋಚಿಸುತ್ತೀಯೆ. ಅದರ ಪರಿಪಾಕ ಎಷ್ಟು ವಿಷಮವೆಂದು ಆಲೋಚಿಸುವುದಿಲ್ಲ. ಬಂಧಿಸುವುದಕ್ಕೂ ಬಿಡುಗಡೆ ಮಾಡುವುದಕ್ಕೂ ಸಮರ್ಥನಾದ ಆ ಬಂಧುವನ್ನೇ (ಪರಮಾತ್ಮನನ್ನೇ) ಚಿಂತಿಸು.

**ನೃಣಾಂ ನಿಃಶ್ರೇಯಸಾರ್ಥಾಯ ವ್ಯಕ್ತಿರ್ಭಗವತೋ ನೃಪ ।**
**ಅವ್ಯಯಸ್ಯಾಪ್ರಮೇಯಸ್ಯ ನಿರ್ಗುಣಸ್ಯ ಗುಣಾತ್ಮನಃ ॥ ೫೫**

- ಭಾಗವತ, ೧೦-೨೯-೧೪

ಎಲ್ಲೈ ರಾಜನೇ, ಪರಮಪೂಜ್ಯನಾದ, ನಾಶವಿಲ್ಲದ, ಅಳೆಯಲಸಾಧ್ಯನಾದ, ನಿರ್ಗುಣನಾದ, ಪರಮಾತ್ಮನ ವ್ಯಕ್ತವಾದ ಸಗುಣಮೂರ್ತಿಯ ರೂಪ ಜನರ ಕಲ್ಯಾಣಕ್ಕೋಸ್ಕರವಾಗಿಯೇ.

**ನೃಣಾಂ ಜನ್ಮಸಹಸ್ರೇಣ ಭಕ್ತೌ ಪ್ರೀತಿರ್ಹಿ ಜಾಯತೇ ।**
**ಕಲೌ ಭಕ್ತಿಃ ಕಲೌ ಭಕ್ತಿಃ ಭಕ್ತ್ಯಾ ಕೃಷ್ಣಃ ಪುರಃ ಸ್ಥಿತಃ ॥ ೫೬**

- ಭಾಗವತಮಾಹಾತ್ಮ್ಯ, ೨-೧೯

ಸಹಸ್ರಾರು (ಪುಣ್ಯ) ಜನ್ಮಗಳ ನಂತರ ಭಕ್ತಿಯಲ್ಲಿ ಆಸಕ್ತಿ ಉಂಟಾಗುವುದು. ಕಲಿಯುಗದಲ್ಲಿ ಭಕ್ತಿಯೇ ಮುಖ್ಯ; ಭಕ್ತಿಯೇ ಮುಖ್ಯ; ಭಕ್ತಿಯಿಂದಲೇ ಕೃಷ್ಣ ಕಣ್ಣ ಮುಂದೆ ನಿಂತಿದ್ದಾನೆ.

**ಪತ್ರಂ ಪುಷ್ಪಂ ಫಲಂ ತೋಯಂ ಯೋ ಮೇ ಭಕ್ತ್ಯಾ ಪ್ರಯಚ್ಛತಿ ।**
**ತದಹಂ ಭಕ್ತ್ಯುಪಹೃತಮಶ್ನಾಮಿ ಪ್ರಯತಾತ್ಮನಃ ॥ ೫೭**

- ಭಗವದ್ಗೀತಾ, ೯-೨೬

ಎಲೆ, ಹೂ, ಹಣ್ಣು ಅಥವಾ ನೀರು - ಯಾವುದನ್ನಾಗಲಿ ಪರಿಶುದ್ಧಚಿತ್ತನು ಭಕ್ತಿಯಿಂದ ಸಮರ್ಪಿಸಿದರೆ, ಅದನ್ನು ನಾನು ಸ್ವೀಕರಿಸುತ್ತೇನೆ.

**ಪಥಿ ಧಾವನ್ನಿಹ ಪತಿತೋ ರೋದಿಷ್ಯಂಬಾಕರಾವಲಂಬಾಯ ।**
**ಪತಿತೋದ್ಧಾರಣಸಮಯೇ ಕಿಂ ನ ಸ್ಮರಸಿ ತ್ವಮಾತ್ಮಾನಮ್ ॥ ೫೮**

ಅಯ್ಯಾ ಕಪಟಕೃಷ್ಣ, ದಾರಿಯಲ್ಲಿ ಓಡಿಬಿದ್ದಾಗ ಬಿದ್ದುಬಿಟ್ಟು ತಾಯಿ ಬಂದು ಕೈ ಹಿಡಿಯಲೆಂದ ಅಳುತ್ತಿರುವೆಯಲ್ಲಾ ! ಸಂಸಾರದಲ್ಲಿ ಬಿದ್ದವರನ್ನು ಉದ್ಧಾರ ಮಾಡುವಾಗ ಈ ನಿನ್ನ ಅವಸ್ಥೆಯನ್ನು ಯಾಕೆ ನೆನೆಸಿಕೊಳ್ಳುವುದಿಲ್ಲ!

**ನಾರಾಯಣಪರಾಃ ಸರ್ವೇ ನ ಕುತಶ್ಚನ ಬಿಭ್ಯತಿ ।**
**ಸ್ವರ್ಗಾಪವರ್ಗನರಕೇಷ್ವಪಿ ತುಲ್ಯಾರ್ಥದರ್ಶಿನಃ ॥ ೫೧**

- ಭಾಗವತ, ೬-೧೭-೨೮

ಪರಮಾತ್ಮನ ಭಕ್ತರೆಲ್ಲಾ ಯಾವುದರ ದೆಸೆಯಿಂದಲೂ ಹೆದರುವುದಿಲ್ಲ. ಸ್ವರ್ಗ, ಮೋಕ್ಷ, ನರಕಗಳಲ್ಲಿಯೂ ಕೂಡ ಸಮದೃಷ್ಟಿಯುಳ್ಳವರಾಗಿರುತ್ತಾರೆ.

**ನಿವಸ್ತಾಂ ವಾ ಕೃತ್ತಿಂ ನಿವಸತು ಚಿರಂ ವಾ ಪಿತೃವನೇ**
**ಶಿವಸ್ತಾವದ್ಧತ್ತಾಮಹಿಗಣಮಥಾಪ್ಯೇಷ ಸುಭಗಃ ।**
**ಪರೀತಂ ಶೈವಾಲೈರುಷಿತಮಪಿ ಪಂಕೇಷು ಮಲಿನಾ**
**ಮಲೀನಾಂ ಬಿಭ್ರಾಣಂ ಕಿಮಿಹ ಕಮನೀಯಂ ನ ಕಮಲಮ್ ॥ ೫೨**

- ವಿಶ್ವಗುಣಾದರ್ಶ - ೩೧೬

ಶಿವನು ಚರ್ಮವನ್ನುಡಲಿ ಅಥವಾ ಶ್ಮಶಾನದಲ್ಲಿ ಬಹುಕಾಲ ಇರಲಿ, ಹಾವುಗಳನ್ನು ಧರಿಸಲಿ ಆದರೂ ಮಂಗಳಕರನೇ. ಪಾಚಿಯಿಂದ ಸುತ್ತಲ್ಪಟ್ಟಿದ್ದೂ ಕೆಸರಿನಲ್ಲಿ ಇದ್ದರೂ, ದುಂಬಿಗಳ ಕೊಳಕನ್ನು ಧರಿಸಿದ್ದರೂ, ಕಮಲವು ಸುಂದರವಲ್ಲವೇ?

**ನಿದ್ರಾತಿ ಸ್ನಾತಿ ಭುಂಕ್ತೇ ಚಲತಿ ಕಚಭರಂ ಶೋಷಯತ್ಯಂತರಾಸ್ತೇ**
**ದೀವ್ಯತ್ಯಕ್ಷೈರ್ನ ಚಾಯಂ ಗದಿತುಮವಸರೋ ಭೂಯ ಆಯಾಹಿ ಯಾಹಿ**
**ಇತ್ಯುದ್ದಂಡೈಃ ಪ್ರಭೂಣಾಮಸಕೃದಧಿಕೃತೈರ್ವಾರಿತಾನ್ ದ್ವಾರಿ ದೀನಾನ್**
**ಅಸ್ಮಾನ್ ಪಶ್ಯಾಬ್ಧಿಕನ್ಯೇ ಸರಸಿಹರುಚಾಮಂತರಂಗೈರಪಾಂಗೈಃ ॥ ೫೩**

- ಕುವಲಯಾನಂದ

ಹೇ ಲಕ್ಷ್ಮೀದೇವಿ, ನಾವು ಪ್ರಭುಗಳ ಮನೆಗೆ ಹೋದಾಗ ಉದ್ಧತರಾದ ಅಧಿಕಾರಿಗಳು ನಮ್ಮನ್ನು ಬಾಗಿಲಲ್ಲಿ ತಡೆದು "ಯಜಮಾನನು ಈಗ ನಿದ್ರಿಸುತ್ತಿದ್ದಾನೆ, ಸ್ನಾನ ಮಾಡುತ್ತಿದ್ದಾನೆ, ಊಟ ಮಾಡುತ್ತಿದ್ದಾನೆ, ಈಗ ಶತಪಥ ತಿರುಗಾಡುತ್ತಿದ್ದಾನೆ, ತಲೆಗೂದಲನ್ನು ಒಣಗಿಸಿಕೊಳ್ಳುತ್ತಿದ್ದಾನೆ, ಈಗ ಒಳಗಿದ್ದಾನೆ, ಪಗಡೆಯಾಡುತ್ತಿದ್ದಾನೆ, ಇದು ಮಾತನಾಡುವ ಸಮಯವಲ್ಲ. ಇನ್ನೊಮ್ಮೆ ಬಾ, ಹೋಗು" ಎಂದು ಹೇಳುತ್ತಿದ್ದಾರೆ. ದೀನರಾದ ನಮ್ಮನ್ನು ತಾವರೆಹೂಗಳ ಸೊಬಗಳನ್ನೊಳಗೊಂಡ ಅಪಾಂಗ ವೀಕ್ಷಣಗಳಿಂದ ನೋಡು.

**ನಿಧ್ಯಾಯಸಿ ವಿಷಯಸುಖಂ ನ ಧ್ಯಾಯಸಿ ವಿಷಮಮಸ್ಯ ಪರಿಪಾಕಂ ।**
**ಬಂಧುಂ ತಮೇವ ಚಿಂತಯ ಬಂಧುಂ ಮೋಕ್ತುಂ ಚ ಯಃ ಕ್ಷಮತೇ ॥ ೫೪**

- (ಅಪ್ಪಯ್ಯ ದೀಕ್ಷಿತರ) ವೈರಾಗ್ಯಶತಕ

ಎಲೈ ವಿಷಯಸುಖವನ್ನೇ ಆಲೋಚಿಸುತ್ತೀಯೆ. ಅದರ ಪರಿಪಾಕ ಎಷ್ಟು ವಿಷಮವೆಂದು ಆಲೋಚಿಸುವುದಿಲ್ಲ. ಬಂಧಿಸುವುದಕ್ಕೂ ಬಿಡುಗಡೆ ಮಾಡುವುದಕ್ಕೂ ಸಮರ್ಥನಾದ ಆ ಬಂಧುವನ್ನೇ (ಪರಮಾತ್ಮನನ್ನೇ) ಚಿಂತಿಸು.

**ನೃಣಾಂ ನಿಃಶ್ರೇಯಸಾರ್ಥಾಯ ವ್ಯಕ್ತಿರ್ಭಗವತೋ ನೃಪ ।**
**ಅವ್ಯಯಸ್ಯಾಪ್ರಮೇಯಸ್ಯ ನಿರ್ಗುಣಸ್ಯ ಗುಣಾತ್ಮನಃ ॥ ೫೫**

- ಭಾಗವತ, ೧೦-೨೯-೧೪

ಎಲೈ ರಾಜನೇ, ಪರಮಪೂಜ್ಯನಾದ, ನಾಶವಿಲ್ಲದ, ಅಳೆಯಲಸಾಧ್ಯನಾದ, ನಿರ್ಗುಣನಾದ, ಪರಮಾತ್ಮನ ವ್ಯಕ್ತವಾದ ಸಗುಣಮೂರ್ತಿಯ ರೂಪ ಜನರ ಕಲ್ಯಾಣಕ್ಕೋಸ್ಕರವಾಗಿಯೇ.

**ನೃಣಾಂ ಜನ್ಮಸಹಸ್ರೇಣ ಭಕ್ತೌ ಪ್ರೀತಿರ್ಹಿ ಜಾಯತೇ ।**
**ಕಲೌ ಭಕ್ತಿಃ ಕಲೌ ಭಕ್ತಿಃ ಭಕ್ತ್ಯಾ ಕೃಷ್ಣಃ ಪುರಃ ಸ್ಥಿತಃ ॥ ೫೬**

- ಭಾಗವತಮಾಹಾತ್ಮ್ಯ, ೨-೧೯

ಸಹಸ್ರಾರು (ಪುಣ್ಯ) ಜನ್ಮಗಳ ನಂತರ ಭಕ್ತಿಯಲ್ಲಿ ಆಸಕ್ತಿ ಉಂಟಾಗುವುದು. ಕಲಿಯುಗದಲ್ಲಿ ಭಕ್ತಿಯೇ ಮುಖ್ಯ; ಭಕ್ತಿಯೇ ಮುಖ್ಯ; ಭಕ್ತಿಯಿಂದಲೇ ಕೃಷ್ಣ ಕಣ್ಣ ಮುಂದೆ ನಿಂತಿದ್ದಾನೆ.

**ಪತ್ರಂ ಪುಷ್ಪಂ ಫಲಂ ತೋಯಂ ಯೋ ಮೇ ಭಕ್ತ್ಯಾ ಪ್ರಯಚ್ಛತಿ ।**
**ತದಹಂ ಭಕ್ತ್ಯುಪಹೃತಮಶ್ನಾಮಿ ಪ್ರಯತಾತ್ಮನಃ ॥ ೫೭**

- ಭಗವದ್ಗೀತಾ, ೯-೨೬

ಎಲೆ, ಹೂ, ಹಣ್ಣು ಅಥವಾ ನೀರು - ಯಾವುದನ್ನಾಗಲಿ ಪರಿಶುದ್ಧಚಿತ್ತನು ಭಕ್ತಿಯಿಂದ ಸಮರ್ಪಿಸಿದರೆ, ಅದನ್ನು ನಾನು ಸ್ವೀಕರಿಸುತ್ತೇನೆ.

**ಪಥಿ ಧಾವನ್ನಿಹ ಪತಿತೋ ರೋದಿಷ್ಯಂಬಾಕರಾವಲಂಬಾಯ ।**
**ಪತಿತೋದ್ಧಾರಣಸಮಯೇ ಕಿಂ ನ ಸ್ಮರಸಿ ತ್ವಮಾತ್ಮಾನಮ್ ॥ ೫೮**

ಅಯ್ಯಾ ಕಪಟಕೃಷ್ಣ, ದಾರಿಯಲ್ಲಿ ಓಡಿಬಿದ್ದಾಗ ಬಿದ್ದುಬಿಟ್ಟು ತಾಯಿ ಬಂದು ಕೈ ಹಿಡಿಯಲೆಂದ ಅಳುತ್ತಿರುವೆಯಲ್ಲಾ ! ಸಂಸಾರದಲ್ಲಿ ಬಿದ್ದವರನ್ನು ಉದ್ಧಾರ ಮಾಡುವಾಗ ಈ ನಿನ್ನ ಅವಸ್ಥೆಯನ್ನು ಯಾಕೆ ನೆನೆಸಿಕೊಳ್ಳುವುದಿಲ್ಲ!

ನಾರಾಯಣಪರಾಃ ಸರ್ವೇ ನ ಕುತಶ್ಚನ ಬಿಭ್ಯತಿ ।
ಸ್ವರ್ಗಾಪವರ್ಗನರಕೇಷ್ವಪಿ ತುಲ್ಯಾರ್ಥದರ್ಶಿನಃ ॥ ೫೧

- ಭಾಗವತ, ೬-೧೭-೨೮

ಪರಮಾತ್ಮನ ಭಕ್ತರೆಲ್ಲಾ ಯಾವುದರ ದೆಸೆಯಿಂದಲೂ ಹೆದರುವುದಿಲ್ಲ. ಸ್ವರ್ಗ, ಮೋಕ್ಷ, ನರಕಗಳಲ್ಲಿಯೂ ಕೂಡ ಸಮದೃಷ್ಟಿಯುಳ್ಳವರಾಗಿರುತ್ತಾರೆ.

ನಿವಸ್ತಾಂ ವಾ ಕೃತ್ತಿಂ ನಿವಸತು ಚಿರಂ ವಾ ಪಿತೃವನೇ
ಶಿವಸ್ತಾವದ್ಧತ್ತಾಮಹಿಗಣಮಥಾಪ್ಯೇಷ ಸುಭಗಃ ।
ಪರೀತಂ ಶೈವಾಲೈರುಷಿತಮಪಿ ಪಂಕೇಷು ಮಲಿನಾ
ಮಲೀನಾಂ ಬಿಭ್ರಾಣಂ ಕಿಮಿಹ ಕಮನೀಯಂ ನ ಕಮಲಮ್ ॥ ೫೨

- ವಿಶ್ವಗುಣಾದರ್ಶ - ೩೧೬

ಶಿವನು ಚರ್ಮವನ್ನುಡಲಿ ಅಥವಾ ಶ್ಮಶಾನದಲ್ಲಿ ಬಹುಕಾಲ ಇರಲಿ, ಹಾವುಗಳನ್ನು ಧರಿಸಲಿ ಆದರೂ ಮಂಗಳಕರನೇ. ಪಾಚಿಯಿಂದ ಸುತ್ತಲ್ಪಟ್ಟಿದ್ದೂ ಕೆಸರಿನಲ್ಲಿ ಇದ್ದರೂ, ದುಂಬಿಗಳ ಕೊಳಕನ್ನು ಧರಿಸಿದ್ದರೂ, ಕಮಲವು ಸುಂದರವಲ್ಲವೇ?

ನಿದ್ರಾತಿ ಸ್ನಾತಿ ಭುಂಕ್ತೇ ಚಲತಿ ಕಚಭರಂ ಶೋಷಯತ್ಯಂತರಾಸ್ತೇ
ದೀವ್ಯತ್ಯಕ್ಷೈರ್ನ ಚಾಯಂ ಗದಿತುಮವಸರೋ ಭೂಯ ಆಯಾಹಿ ಯಾಹಿ
ಇತ್ಯುದ್ದಂಡೈಃ ಪ್ರಭೂಣಾಮಸಕೃದಧಿಕೃತೈರ್ವಾರಿತಾನ್ ದ್ವಾರಿ ದೀನಾನ್
ಅಸ್ಮಾನ್ ಪಶ್ಯಾಬ್ಧಿಕನ್ಯೇ ಸರಸಿಹರುಚಾಮಂತರಂಗೈರಪಾಂಗೈಃ ॥ ೫೩

- ಕುವಲಯಾನಂದ

ಹೇ ಲಕ್ಷ್ಮೀದೇವಿ, ನಾವು ಪ್ರಭುಗಳ ಮನೆಗೆ ಹೋದಾಗ ಉದ್ಧತರಾದ ಅಧಿಕಾರಿಗಳು ನಮ್ಮನ್ನು ಬಾಗಿಲಲ್ಲಿ ತಡೆದು "ಯಜಮಾನನು ಈಗ ನಿದ್ರಿಸುತ್ತಿದ್ದಾನೆ, ಸ್ನಾನ ಮಾಡುತ್ತಿದ್ದಾನೆ, ಊಟ ಮಾಡುತ್ತಿದ್ದಾನೆ, ಈಗ ಶತಪಥ ತಿರುಗಾಡುತ್ತಿದ್ದಾನೆ, ತಲೆಗೂದಲನ್ನು ಒಣಗಿಸಿಕೊಳ್ಳುತ್ತಿದ್ದಾನೆ, ಈಗ ಒಳಗಿದ್ದಾನೆ, ಪಗಡೆಯಾಡುತ್ತಿದ್ದಾನೆ, ಇದು ಮಾತನಾಡುವ ಸಮಯವಲ್ಲ. ಇನ್ನೊಮ್ಮೆ ಬಾ, ಹೋಗು" ಎಂದು ಹೇಳುತ್ತಿದ್ದಾರೆ. ದೀನರಾದ ನಮ್ಮನ್ನು ತಾವರೆಹೂಗಳ ಸೊಬಗಳನ್ನೊಳಗೊಂಡ ಅಪಾಂಗ ವೀಕ್ಷಣಗಳಿಂದ ನೋಡು.

ನಿಧ್ಯಾಯಸಿ ವಿಷಯಸುಖಂ ನ ಧ್ಯಾಯಸಿ ವಿಷಮಮಸ್ಯ ಪರಿಪಾಕಂ ।
ಬಂಧುಂ ತಮೇವ ಚಿಂತಯ ಬಂಧುಂ ಮೋಕ್ತುಂ ಚ ಯಃ ಕ್ಷಮತೇ ॥ ೫೪

- (ಅಪ್ಪಯ್ಯ ದೀಕ್ಷಿತರ) ವೈರಾಗ್ಯಶತಕ

ಎಲೈ ವಿಷಯಸುಖವನ್ನೇ ಆಲೋಚಿಸುತ್ತೀಯೆ. ಅದರ ಪರಿಪಾಕ ಎಷ್ಟು ವಿಷಮವೆಂದು ಆಲೋಚಿಸುವುದಿಲ್ಲ. ಬಂಧಿಸುವುದಕ್ಕೂ ಬಿಡುಗಡೆ ಮಾಡುವುದಕ್ಕೂ ಸಮರ್ಥನಾದ ಆ ಬಂಧುವನ್ನೇ (ಪರಮಾತ್ಮನನ್ನೇ) ಚಿಂತಿಸು.

**ನೃಣಾಂ ನಿಃಶ್ರೇಯಸಾರ್ಥಾಯ ವ್ಯಕ್ತಿರ್ಭಗವತೋ ನೃಪ ।**
**ಅವ್ಯಯಸ್ಯಾಪ್ರಮೇಯಸ್ಯ ನಿರ್ಗುಣಸ್ಯ ಗುಣಾತ್ಮನಃ ॥ ೫೫**

- ಭಾಗವತ, ೧೦-೨೯-೧೪

ಎಲೈ ರಾಜನೇ, ಪರಮಪೂಜ್ಯನಾದ, ನಾಶವಿಲ್ಲದ, ಅಳೆಯಲಸಾಧ್ಯನಾದ, ನಿರ್ಗುಣನಾದ, ಪರಮಾತ್ಮನ ವ್ಯಕ್ತವಾದ ಸಗುಣಮೂರ್ತಿಯ ರೂಪ ಜನರ ಕಲ್ಯಾಣಕ್ಕೋಸ್ಕರವಾಗಿಯೇ.

**ನೃಣಾಂ ಜನ್ಮಸಹಸ್ರೇಣ ಭಕ್ತೌ ಪ್ರೀತಿರ್ಹಿ ಜಾಯತೇ ।**
**ಕಲೌ ಭಕ್ತಿಃ ಕಲೌ ಭಕ್ತಿಃ ಭಕ್ತ್ಯಾ ಕೃಷ್ಣಃ ಪುರಃ ಸ್ಥಿತಃ ॥ ೫೬**

- ಭಾಗವತಮಾಹಾತ್ಮ್ಯ, ೨-೧೯

ಸಹಸ್ರಾರು (ಪುಣ್ಯ) ಜನ್ಮಗಳ ನಂತರ ಭಕ್ತಿಯಲ್ಲಿ ಆಸಕ್ತಿ ಉಂಟಾಗುವುದು. ಕಲಿಯುಗದಲ್ಲಿ ಭಕ್ತಿಯೇ ಮುಖ್ಯ; ಭಕ್ತಿಯೇ ಮುಖ್ಯ; ಭಕ್ತಿಯಿಂದಲೇ ಕೃಷ್ಣ ಕಣ್ಣ ಮುಂದೆ ನಿಂತಿದ್ದಾನೆ.

**ಪತ್ರಂ ಪುಷ್ಪಂ ಫಲಂ ತೋಯಂ ಯೋ ಮೇ ಭಕ್ತ್ಯಾ ಪ್ರಯಚ್ಛತಿ ।**
**ತದಹಂ ಭಕ್ತ್ಯುಪಹೃತಮಶ್ನಾಮಿ ಪ್ರಯತಾತ್ಮನಃ ॥ ೫೭**

- ಭಗವದ್ಗೀತಾ, ೯-೨೬

ಎಲೆ, ಹೂ, ಹಣ್ಣು ಅಥವಾ ನೀರು - ಯಾವುದನ್ನಾಗಲಿ ಪರಿಶುದ್ಧಚಿತ್ತನು ಭಕ್ತಿಯಿಂದ ಸಮರ್ಪಿಸಿದರೆ, ಅದನ್ನು ನಾನು ಸ್ವೀಕರಿಸುತ್ತೇನೆ.

**ಪಥಿ ಧಾವನ್ನಿಹ ಪತಿತೋ ರೋದಿಷ್ಯಂಬಾಕರಾವಲಂಬಾಯ ।**
**ಪತಿತೋದ್ಧಾರಣಸಮಯೇ ಕಿಂ ನ ಸ್ಮರಸಿ ತ್ವಮಾತ್ಮಾನಮ್ ॥ ೫೮**

ಅಯ್ಯಾ ಕಪಟಕೃಷ್ಣ, ದಾರಿಯಲ್ಲಿ ಓಡಿಬಿದ್ದಾಗ ಬಿದ್ದುಬಿಟ್ಟು ತಾಯಿ ಬಂದು ಕೈ ಹಿಡಿಯಲೆಂದ ಅಳುತ್ತಿರುವೆಯಲ್ಲಾ ! ಸಂಸಾರದಲ್ಲಿ ಬಿದ್ದವರನ್ನು ಉದ್ಧಾರ ಮಾಡುವಾಗ ಈ ನಿನ್ನ ಅವಸ್ಥೆಯನ್ನು ಯಾಕೆ ನೆನೆಸಿಕೊಳ್ಳುವುದಿಲ್ಲ!

ಪಾತಾಲಮಾವಿಶಸಿ ಯಾಸಿ ನಭೋ ವಿಲಂಘ್ಯ
ದಿಙ್ಮಂಡಲಂ ಭ್ರಮಸಿ ಮಾನಸ (ವ) ಚಾಪಲೇನ ।
ಭ್ರಾಂತ್ಯಾಪಿ ಜಾತು ವಿಮಲಂ ಕಥಯಾತ್ಮನೀನಂ
ತದ್ಬ್ರಹ್ಮ ನ ಸ್ಮರಸಿ ನಿರ್ವೃತಿಮೇಷಿ ಯೇನ ॥ ೫೯

- ವೈರಾಗ್ಯಶತಕ - ೭೫

ಎಲೈ ಮನಸ್ಸೇ (ಮಾನವನೇ) ! ನೀನು ಚಾಪಲ್ಯದಿಂದ ಪಾತಾಳಕ್ಕೆ ಹೋಗುತ್ತೀಯೆ. ಆಕಾಶವನ್ನು ದಾಟಿ ದಿಙ್ಮಂಡಲದಲ್ಲಿ ಅಲೆದಾಡುತ್ತೀ. ಆದರೂ ನೀನು ಒಂದು ಸಲವಾದರೂ ನಿನ್ನಲ್ಲಿಯೇ ಬೆಳಗುತ್ತಿರುವುದೂ ಮತ್ತು ಸ್ಮರಿಸಿದರೆ ಸುಖವನ್ನು ಕೊಡುವುದೂ ಆದ ಆ ಪರಬ್ರಹ್ಮವಸ್ತುವನ್ನು ಮಾತ್ರ ಸ್ಮರಿಸುವುದಿಲ್ಲ.

ಪುನರಪಿ ಜನನಂ ಪುನರಪಿ ಮರಣಂ
ಪುನರಪಿ ಜನನೀಜಠರೇ ಶಯನಂ ।
ಇಹ ಸಂಸಾರೇ ಬಹು ದುಸ್ತಾರೇ
ಕೃಪಯಾಽಪಾರೇ ಪಾಹಿ ಮುರಾರೇ ॥ ೬೦

- ಭಜಗೋವಿಂದಸ್ತೋತ್ರ

ಮತ್ತೆ ಜನನ, ಮತ್ತೆ ಮರಣ, ಮತ್ತೆ ತಾಯಿಯ ಗರ್ಭದಲ್ಲಿ ಶಯನ. ದುಸ್ತರವಾದ ಈ ಸಂಸಾರದಲ್ಲಿ ಸಿಕ್ಕಿರುವ ನನ್ನನ್ನು, ಹೇ ಮುರಾರೇ, ಕಾರುಣ್ಯದಿಂದ ಸಲಹು.

ಭಗವದ್ಗೀತಾ ಕಿಂಚಿದಧೀತಾ
ಗಂಗಾಜಲಲವಕಣಿಕಾ ಪೀತಾ ।
ಸಕೃದಪಿ ಯಸ್ಯ ಮುರಾರಿಸಮರ್ಚಾ
ಕುರುತೇ ತಸ್ಯ ಯಮೋಽಪಿ ನ ಚರ್ಚಾಮ್ ॥ ೬೧

- ಭಜಗೋವಿಂದಸ್ತೋತ್ರ

ಭಗವದ್ಗೀತೆಯನ್ನು ಸ್ವಲ್ಪ ಓದಿದರೆ ಸಾಕು, ಗಂಗಾಜಲದ ಹನಿಯನ್ನು ಕುಡಿದರೆ ಸಾಕು, ವಿಷ್ಣುವನ್ನು ಒಮ್ಮೆ ಪೂಜಿಸಿದರೆ ಸಾಕು, ಯಮನು ಅವನ ವಿಷಯದಲ್ಲಿ ಚರ್ಚೆ ಮಾಡುವುದಿಲ್ಲ (ಅವನ ಗೊಡವೆಗೆ ಬರುವುದಿಲ್ಲ).

ಭಗವಾನೇಕ ಏವೈಷ ಸರ್ವ ಕ್ಷೇತ್ರೇಷ್ವವಸ್ಥಿತಃ ।
ಅಮುಷ್ಯ ದುರ್ಭಗತ್ವಂ ವಾ ಕ್ಲೇಶೋ ವಾ ಕರ್ಮಭಿಃ ಕುತಃ ॥೬೨

- ಭಾಗವತ, ೩-೭-೬

ದೇವರು ಒಬ್ಬನೇ, ಅವನು ಎಲ್ಲ ಚರಾಚರವಸ್ತುಗಳಲ್ಲಿಯೂ ಇದ್ದಾನೆ. ಅವನಿಗೆ ದೌರ್ಭಾಗ್ಯವಾಗಲೀ, ಕರ್ಮಗಳ ಕ್ಲೇಶವಾಗಲೀ ಎಲ್ಲಿಯದು ?

**ಭವ್ಯಮಭವ್ಯಂ ವಾ ನಃ ಪ್ರಲಿಖತು ವೇಧಾಃ ಸುದುರ್ಮೇಧಾಃ ।**
**ಸವ್ಯಮಸವ್ಯಂ ವಾ ನಃ ಶರಣಂ ಚರಣಂ ಮಹೇಶಸ್ಯ ॥ ೬೩**

- (ಅಯ್ಯಪ್ಪ ದೀಕ್ಷಿತರ) ವೈರಾಗ್ಯಶತಕ

ಛಲಗಾರನಾದ ಬ್ರಹ್ಮನು ನಮಗೆ ಒಳ್ಳೆಯದನ್ನಾದರೂ ಬರೆದಿಡಲಿ, ಕೆಟ್ಟದ್ದನ್ನದಾರೂ ಬರೆದಿಡಲಿ. ಮಹೇಶ್ವರನ ವಾಮಪಾದವೋ ದಕ್ಷಿಣಪಾದವೋ ನಮಗೆ ಶರಣು. (ವಾಮಪಾದ=ಪಾರ್ವತಿ ; ದಕ್ಷಿಣಪಾದ = ಶಿವ).

**ಭೂಯೋ ದೋಷೈರಪಿ ಪರಿವೃತಃ ಪೂರುಷಃ ಸಾತ್ತ್ವಿಕಾನಾಂ**
**ಪ್ರಾಯಃ ಪೂಜ್ಯೋ ಭವತಿ ಭಗವದ್ಭಕ್ತಿಮಾಸಾದ್ಯ ಹೃದ್ಯಾಮ್ ।**
**ಆಕ್ರಾಂತಾಪಿ ಪ್ರಬಲಭುಜಗೈಃ ಕಂಟಕೈರಪ್ಯನಲ್ಪೈಃ**
**ಕಿಂ ನಾದೃತ್ಯಾ ಸುರಭಿಕುಸುಮಾ ಕೇತಕೀ ಭಾಗ್ಯಭಾಜಾಮ್ ॥ ೬೪**

- ವಿಶ್ವಗುಣಾದರ್ಶ - ೫೦೬

ಮನುಷ್ಯನು ಅನೇಕ ದೋಷಗಳಿಂದ ಕೂಡಿದ್ದರೂ ಭಗವಂತನಲ್ಲಿ ಮನಃಪೂರ್ವಕವಾದ ಭಕ್ತಿಯನ್ನು ಹೊಂದಿ, ಸಾತ್ತ್ವಿಕರಿಗೆ ಪರಮಪೂಜ್ಯನಾಗುತ್ತಾನೆ. ಭಯಂಕರವಾದ ಹಾವುಗಳಿಂದಲೂ ಮುಳ್ಳುಗಳಿಂದಲೂ ಆವರಿಸಲ್ಪಟ್ಟಿದ್ದರೂ ಸುಗಂಧ ಭರಿತವಾದ ಹೂಗಳುಳ್ಳ ತಾಳೆ ಗಿಡವು ಭಾಗ್ಯವಂತರಿಂದ ಆದರಿಸಲ್ಪಡುವುದಿಲ್ಲವೇ ?

**ಮಹೇಶ್ವರೇ ವಾ ಜಗತಾಮಧೀಶ್ವರೇ**
**ಜನಾರ್ದನೇ ವಾ ಜಗದಂತರಾತ್ಮನಿ ।**
**ನ ವಸ್ತುಭೇದ ಪ್ರತಿಪತ್ತಿರಸ್ತಿ ಮೇ**
**ತಥಾಪಿ ಭಕ್ತಿಸ್ತರುಣೇಂದುಶೇಖರೇ ॥ ೬೫**

- ವೈರಾಗ್ಯಶತಕ - ೮೪

ಜಗದೀಶ್ವರನಾದ ಶಿವನಲ್ಲಾಗಲಿ ಜಗತ್ತಿಗೆ ಅಂತರಾತ್ಮನಾದ ವಿಷ್ಣುವಿನಲ್ಲಾಗಲಿ - ಇವರಿಬ್ಬರು ಬೇರೆ ಬೇರೆ ಎಂಬ ಭೇದಬುದ್ಧಿ ನನಗಿಲ್ಲ. ಆದರೂ ಬಾಲೇಂದುವನ್ನು ಶಿರಸ್ಸಿನಲ್ಲಿ ಧರಿಸಿರುವ ಶಿವನಲ್ಲಿ ನನಗೆ ಭಕ್ತಿ.

**ಮಂತ್ರೇ ತೀರ್ಥೇ ದ್ವಿಜೇ ದೈವೇ ದೈವಜ್ಞೇ ಭೇಷಜೇ ಗುರೌ ।**
**ಯಾದೃಶೀಂ ಭಾವನಾಂ ಕುರ್ಯಾತ್ ಸಿದ್ಧಿರ್ಭವತಿ ತಾದೃಶೀ ॥ ೬೬**

- ಸಮಯೋಚಿತಪದ್ಯಮಾಲಿಕಾ

ಮಂತ್ರ, ತೀರ್ಥಕ್ಷೇತ್ರ, ವಿಪ್ರ, ದೇವರು, ಜ್ಯೋತಿಷಿಕ, ವೈದ್ಯ, ಗುರು ಇವರ

ವಿಷಯದಲ್ಲಿ ಯಾವ ಬಗೆಯ ಭಾವನೆಯನ್ನು ಮಾಡಿದರೆ ಆ ಬಗೆಯ ಸಿದ್ಧಿ ದೊರೆಯುತ್ತದೆ.

**ಮಾ ಕಂಚನ ಶುಚೋ ರಾಜನ್ ಯದೀಶ್ವರವಶಂ ಜಗತ್ ।**
**ಲೋಕಾಃ ಸಪಾಲಾ ಯಸ್ಯೇಮೇ ವಹಂತಿ ಬಲಿಮೀಶಿತುಃ ।**
**ಸ ಸಂಯುನಕ್ತಿ ಭೂತಾನಿ ಸ ಏವ ವಿಯುನಕ್ತಿ ಚ ।** ೬೭

- ಭಾಗವತ, ೧-೧೩-೪೦

ಎಲೈ ರಾಜನೇ ! ಈ ಪ್ರಪಂಚವೆಲ್ಲಾ ಭಗವಂತನ ಅಧೀನ. ಆದುದರಿಂದ ನೀನು ಯಾರಿಗಾಗಿಯೂ ದುಃಖಪಡಬೇಡ. ಅವನೇ ಪ್ರಾಣಿಗಳನ್ನು ಸೇರಿಸುತ್ತಾನೆ ; ಅವನೇ ಬೇರ್ಪಡಿಸುತ್ತಾನೆ. ಒಡೆಯನಾದ ಅವನಿಗೆ ಎಲ್ಲ ಲೋಕಗಳೂ ಆಯಾ ಒಡೆಯರ ಸಹಿತ ಪೂಜೆ ಸಲ್ಲಿಸುತ್ತವೆ.

**ಮಾ ಗಚ್ಛ ತ್ವಮಿತಸ್ತತೋ ಗಿರಿಶ ಭೋ ಮಯ್ಯೇವ ವಾಸಂ ಕುರು**
**ಸ್ವಾಮಿನ್ನಾದಿಕಿರಾತ ಮಾಮಕಮನಃಕಾಂತಾರಸೀಮಾಂತರೇ ।**
**ವರ್ತಂತೇ ಬಹುಶೋ ಮೃಗಾ ಮದಜುಷೋ**
**ಮಾತ್ಸರ್ಯಮೋಹಾದಯಃ**
**ತಾನ್ಹತ್ವಾ ಮೃಗಯಾವಿನೋದರುಚಿತಾಲಾಭಂ ಚ ಸಂಪ್ರಾಪ್ಸ್ಯಸಿ ॥** ೬೮

- ಶಿವಾನಂದಲಹರೀ

ಎಲೈ ಪರಮೇಶ್ವರನೇ, ಇಲ್ಲಿಂದ ಬೇರೆಡೆಗೆ ನೀನು ಹೋಗಬೇಡ. ನನ್ನಲ್ಲೇ ನೀನು ವಾಸಿಸು. ಅಯ್ಯಾ, ಆದಿಕಿರಾತ, ನನ್ನ ಮನಸ್ಸೆಂಬ ಕಾಡಿನೊಳಗೆ ಮದಿಸಿದ ಮಾತ್ಸರ್ಯ, ಮೋಹ ಮೊದಲಾದ ಕಾಡುಮೃಗಗಳು ಲೆಕ್ಕವಿಲ್ಲದಷ್ಟಿವೆ. ಅವುಗಳನ್ನು ನೀನು ಬೇಟೆಯಾಡಿ ಮೃಗಯಾವಿಹಾರದ ಸಂತೋಷವನ್ನು ಪಡುವುದು ಖಂಡಿತ.

**ಮುಕುಂದ ಮೂರ್ಧ್ನಾ ಪ್ರಣಿಪತ್ಯ ಯಾಚೇ**
**ಭವಂತಮೇಕಾಂತಮಿಯಂತಮರ್ಥಂ ।**
**ಅವಿಸ್ಮೃತಿಸ್ತ್ವಚ್ಚರಣಾರವಿಂದೇ**
**ಭವೇ ಭವೇ ಮೇಽಸ್ತು ಭವತ್ಪ್ರಸಾದಾತ್ ॥** ೬೯

- ಮುಕುಂದಮಾಲಾ

ಹೇ ಮುಕುಂದ, ನಿನಗೆ ತಲೆಬಾಗಿ ನಮಸ್ಕರಿಸಿ ಒಂದು ಮುಖ್ಯವಾದ ವಿಷಯವನ್ನು ನಿನ್ನಲ್ಲಿ ಬೇಡಿಕೊಳ್ಳುತ್ತಿದ್ದೇನೆ. ಏನೆಂದರೆ, ನಿನ್ನ ಅನುಗ್ರಹದಿಂದ ಜನ್ಮಜನ್ಮಾಂತರದಲ್ಲಿಯೂ ನಿನ್ನ ಚರಣಾರವಿಂದದ ಮರೆವು ನನಗೆ ಆಗದಿರಲಿ.

**ಮೃದ್ವೀಕಾ ರಸಿತಾ ಸಿತಾ ಸಮಶಿತಾ ಸ್ಫೀತಂ ನಿಪೀತಂ ಪಯಃ**
**ಸ್ವರ್ಯಾತೇನ ಸುಧಾಪ್ಯಧಾಯಿ ಕತಿಧಾ ರಂಭಾಧರಃ ಖಂಡಿತಃ ।**
**ತತ್ತ್ವಂ ಬ್ರೂಹಿ ಮದೀಯಜೀವ ಭವತಾ ಭೂಯೋ ಭವೇ ಭ್ರಾಮ್ಯತಾ**
**ಕೃಷ್ಣೇತ್ಯಕ್ಷರಯೋರಯಂ ಮಧುರಿಮೋದ್ಗಾರಃ ಕ್ವಚಿಲ್ಲಕ್ಷಿತಃ ॥ ೭೦**

- ರಸಗಂಗಾಧರ

ಎಲೈ ನನ್ನ ಜೀವವೆ, ನೀನು ದ್ರಾಕ್ಷೆಯ ರುಚಿ ನೋಡಿದ್ದೀಯೆ. ಸಕ್ಕರೆಯನ್ನು ತಿಂದಿದ್ದೀಯೆ. ಕೆನೆಹಾಲನ್ನು ಕುಡಿದಿದ್ದೀಯೆ. ಸ್ವರ್ಗಕ್ಕೆ ಹೋದಾಗ ಅಮೃತವನ್ನೂ ಕುಡಿದಿದ್ದೀಯೆ. ಎಷ್ಟೋ ಸಲ ರಂಭೆಯ ಅಧರವನ್ನು ಕಚ್ಚಿದ್ದೀಯೆ ! ಈ ಸಂಸಾರದಲ್ಲಿ ಬೇಕಾದಷ್ಟು ಅಲೆದಿರುವೆಯಲ್ಲ, ಸತ್ಯವನ್ನು ಹೇಳು : 'ಕೃಷ್ಣ' ಎಂಬ ಎರಡಕ್ಷರಗಳ ಮಾಧುರ್ಯವನ್ನು ನೀನು ಎಲ್ಲಾದರೂ ಕಂಡಿರುವೆಯಾ ?

**ಯಜ್ಜಾತೀಯೋ ಯಾದೃಶೋ ಯತ್ಸ್ವಭಾವಃ**
**ಪಾದಾಚ್ಛಾಯಂ ಸಂಶ್ರಿತೋ ಯೋಽಪಿ ಕೋಽಪಿ ।**
**ತಜ್ಜಾತೀಯಸ್ತಾದೃಶಸ್ತತ್ಸ್ವಭಾವಃ**
**ಶ್ಲಿಷ್ಯತ್ಯೇನಂ ಸುಂದರೋ ವತ್ಸಲತ್ವಾತ್ ॥ ೭೧**

- ಸುಂದರಬಾಹುಸ್ತವ

ಯಾವ ರೀತಿಯ ಯಾವ ಸ್ವಭಾವದ ಯಾವ ಜಾತಿಯವನು ಯಾರೇ ಆಗಲಿ ತನ್ನ ಪಾದಗಳ ನೆರಳನ್ನು ಆಶ್ರಯಿಸಿದರೆ ವತ್ಸಲನಾದ, ಸುಂದರ ಬಾಹುಗಳ ಭಗವಂತನು ಆ ರೀತಿಯ ಆ ಸ್ವಭಾವದ ಆ ಜಾತಿಯವನೇ ಆಗಿ ಅಪ್ಪಿಕೊಳ್ಳುತ್ತಾನೆ.

**ಯತ್ರಕುತ್ರ ಕುಲೇ ವಾಸೋ ಯೇಷು ಕೇಷು ಭವೋಽಸ್ತು ಮೇ ।**
**ತವ ದಾಸ್ಯೈಕಭಾವೇ ಸ್ಯಾತ್ ಸದಾ ಸರ್ವತ್ರ ಮೇ ರತಿಃ ॥ ೭೨**

- ಜಿತಂತಾಸ್ತೋತ್ರ

ಯಾವ ಕುಲದಲ್ಲಾದರೂ ನನ್ನ ವಾಸ ಆಗಲಿ. ಯಾವ ಜನ್ಮದಲ್ಲಾದರೂ ನನ್ನ ಜನನ ಆಗಲಿ. ಆದರೆ ಮಾತ್ರ, ನನ್ನ ಸಂತೋಷವು ಯಾವಾಗಲೂ ಎಲ್ಲೆಲ್ಲಿಯೂ ನಿನ್ನ ದಾಸ್ಯಭಾವವೊಂದರಲ್ಲಿಯೇ ಹೊಮ್ಮಲಿ.

**ಯತ್ರ ನಿರ್ಮಲಭಾವೇನ ಸಂಸಾರೇ ವರ್ತತೇ ಗೃಹೀ ।**
**ಧರ್ಮಂ ಚರತಿ ನಿಷ್ಕಾಮಂ ತತ್ರೈವ ರಮತೇ ಹರಿಃ ॥ ೭೩**

ಗೃಹಸ್ಥನಾದವನು ಸಂಸಾರದಲ್ಲಿದ್ದ ಹಾಗೆಯೇ ನಿರ್ಲಿಪ್ತ ಭಾವದಿಂದ ಎಲ್ಲಿ ಧರ್ಮಾಚರಣೆ ಮಾಡುವನೋ ಅಲ್ಲಿ ಶ್ರೀಹರಿಯು ನಲಿಯುತ್ತಾನೆ.

**ಯಥಾ ತರೋರ್ಮೂಲನಿಷೇಚನೇನ**
**ತೃಪ್ಯಂತಿ ತತ್ಸ್ಕಂಧಭುಜೋಪಶಾಖಾಃ ।**
**ಪ್ರಾಣೋಪಹಾರಾಚ್ಚ ಯಥೇಂದ್ರಿಯಣಾಂ**
**ತಥೈವ ಸರ್ವಾರ್ಹಣಮಚ್ಯುತೇಜ್ಯಾ ॥** ೭೪

- ಭಾಗವತ, ೪-೩೧-೧೪

ಹೇಗೆ ಮರದ ಬೇರಿಗೆ ನೀರೆರೆಯುವುದರಿಂದ ಅದರ ಕೊಂಬೆಗಳು, ಎಲೆಗಳು ಮೊದಲಾದುವು ತೃಪ್ತಿ ಹೊಂದುತ್ತವೆಯೋ, ಹೇಗೆ ಪ್ರಾಣೋಪಹಾರದಿಂದ ಇಂದ್ರಿಯಗಳ ತೃಪ್ತಿಯಾಗುತ್ತದೆಯೋ ಹಾಗೆಯೇ ಪರಮಾತ್ಮನೊಬ್ಬನ ಪೂಜೆ ಮಾಡಿದರೆ ಎಲ್ಲಾ ಪೂಜೆಗಳನ್ನೂ ಮಾಡಿದಂತಾಗುತ್ತದೆ.

**ಯಥಾಗ್ನಿಃ ಸುಸಮೃದ್ಧಾರ್ಚಿಃ ಕರೋತ್ಯೇಧಾಂಸಿ ಭಸ್ಮಸಾತ್ ।**
**ತಥಾ ಮದ್ವಿಷಯಾ ಭಕ್ತಿರುದ್ಧವೈನಾಂಸಿ ಕೃತ್ಸ್ನಶಃ ॥** ೭೫

- ಭಾಗವತ, ೧೧-೧೪-೧೯

ಹೇಗೆ ಚೆನ್ನಾಗಿ ಉರಿಯುತ್ತಿರುವ ಬೆಂಕಿಯು ಸೌದೆಗಳನ್ನು ಬೂದಿ ಮಾಡುತ್ತದೆಯೋ ಹಾಗೆಯೇ ನನ್ನಲ್ಲಿ (ಪರಮಾತ್ಮನಲ್ಲಿ)ಟ್ಟಿರುವ ಭಕ್ತಿಯು ಸಂಪೂರ್ಣವಾಗಿ ಪಾಪಗಳನ್ನು ನಿರ್ಮೂಲ ಮಾಡುತ್ತದೆ.

**ಯಥಾ ದಾರುಮಯೀ ನಾರೀ ಯಥಾ ಯಂತ್ರಮಯೋ ಮೃಗಃ ।**
**ಏವಂ ಭೂತಾನಿ ಮಘವನ್ನೀಶತಂತ್ರಾಣಿ ವಿದ್ಧಿ ಭೋಃ ॥** ೭೬

- ಭಾಗವತ, ೬-೧೨-೧೦

ಎಲೈ ಇಂದ್ರನೇ, ಹೇಗೆ ಮರದಿಂದ ಮಾಡಿದ ಪ್ರತಿಮೆಯ ಹೆಂಗಸೂ, ಯಂತ್ರದಿಂದ ಮಾಡಲ್ಪಟ್ಟ ಮೃಗವೂ, ಒಡೆಯನಿಂದ ನಡೆಸಲ್ಪಡುವುವೋ ಹಾಗೆಯೇ ಈ ಲೋಕದ ಪ್ರಾಣಿಗಳೆಲ್ಲಾ ಪರಮಾತ್ಮನ ವಶದಲ್ಲಿವೆ. ಅವನು ನಡೆಸಿದ ಹ ಗೆ ನಡೆಯುತ್ತವೆ.

**ಯಥಾ ಪುಮಾನ್ನ ಸ್ವಾಂಗೇಷು ಶಿರಃ ಪಾಣ್ಯಾದಿಷು ಕ್ವಚಿತ್ ।**
**ಪಾರಕ್ಯಬುದ್ಧಿಂ ಕುರುತೇ ಏವಂ ಭೂತೇಷು ಮತ್ಪರಃ ॥** ೭೭

- ಭಾಗವತ, ೪-೭-೫೩

ಹೇಗೆ ಮನುಷ್ಯನು ತಲೆ, ಕೈ ಮೊದಲಾದ ತನ್ನ ಅವಯವಗಳಲ್ಲಿ ಯಾವಾಗಲೂ ಪರಕೀಯ ಭಾವನೆಯನ್ನು ಮಾಡುವುದಿಲ್ಲವೋ ಹಾಗೆಯೇ ಪರಮಾತ್ಮನ ಭಕ್ತನು ಈ ಲೋಕದಲ್ಲಿರುವ ಪ್ರಾಣಿಗಳಲ್ಲಿ ಭೇದವನ್ನೆಣಿಸುವುದಿಲ್ಲ.

**ಯಥಾ ನದೀನಾಂ ಪ್ರಭವಃ ಸಮುದ್ರಃ**
**ಯಥಾऽऽಹುತೀನಾಂ ಪ್ರಭವಃ ಹುತಾಶನಃ ।**
**ಯಥೇಂದ್ರಿಯಾಣಾಂ ಪ್ರಭವಂ ಮನೋऽಪಿ**
**ತಥಾ ಪ್ರಭುರ್ನೋ ಭಗವಾನುಪೇಂದ್ರಃ ॥** ೭೮

- ಮಧ್ಯಮವ್ಯಾಯೋಗ, ೩-೫೨

ಎಲ್ಲ ನದಿಗಳ ಹರಿಯುವಿಕೆಯು ಸಮುದ್ರದಲ್ಲಿ ಮುಕ್ತಾಯವಾಗುತ್ತದೆ. ಎಲ್ಲ ಆಹುತಿಗಳೂ ಯಜ್ಞೇಶ್ವರನನ್ನು ಸೇರುತ್ತವೆ. ಎಲ್ಲ ಇಂದ್ರಿಯಗಳ ಕಾರ್ಯವೂ ಮನಸ್ಸನ್ನು ಕೇಂದ್ರ ಮಾಡಿಕೊಂಡಿದೆ. ಅದೇ ರೀತಿ ನಮ್ಮ ಎಲ್ಲರ ಚಟುವಟಿಕೆಗಳಿಗೂ ಪೂಜ್ಯನಾದ 'ಉಪೇಂದ್ರ' ಅಂದರೆ ವಿಷ್ಣುವೇ ಆಧಾರ.

**ಯಥಾ ಹ್ಯವಹಿತೋ ವಹ್ನಿರ್ದಾರುಷ್ವೇಕಃ ಸ್ವಯೋನಿಷು ।**
**ನಾನೇವ ಭಾತಿ ವಿಶ್ವಾತ್ಮಾ ಭೂತೇಷು ಚ ತಥಾ ಪುಮಾನ್ ॥**೭೯

- ಭಾಗವತ, ೧-೨-೩೨

ಹೇಗೆ ಬೆಂಕಿಯು ತನಗೆ ಆಶ್ರಯವಾದ ಕಟ್ಟಿಗೆಗಳಲ್ಲಿ ಅಡಗಿ ಒಂದೇ ಆಗಿರುತ್ತದೆಯೋ, ಹಾಗೆಯೇ ಪರಮಾತ್ಮನೂ ಸಹ ಪ್ರಪಂಚದ ಜೀವ ರಾಶಿಯಲ್ಲಿ ಒಬ್ಬನೇ ಇದ್ದರೂ ನಾನಾ ವಿಧವಾಗಿ ಪ್ರಕಾಶಿಸುತ್ತಾನೆ.

**ಯನ್ಮಾತಾಪಿತರೌ ವೃತ್ತಂ ತನಯೇ ಕುರುತಃ ಸದಾ ।**
**ನ ಸುಪ್ರತಿಕರಂ ತತ್ತು ಮಾತ್ರಾ ಪಿತ್ರಾ ಚ ಯತ್ಕೃತಮ್ ॥** ೮೦

- ರಾಮಾಯಣ, ಅಯೋಧ್ಯಾ ೧೧೧-೯

ತಾಯಿ ತಂದೆಗಳು ಮಕ್ಕಳನ್ನು ಸಲಹುವುದಕ್ಕಾಗಿ ಎಷ್ಟು ಕಷ್ಟಪಡುತ್ತಾರೆಂಬುದನ್ನು ಗಮನಿಸಿದರೆ, ಯಾವ ಮಗನಿಗೂ ತಾಯಿತಂದೆಗಳ ಉಪಕಾರವನ್ನು ತೀರಿಸಲು ಸಾಧ್ಯವಾಗದು.

**ಯಶೋದಯಾ ಸಮಾ ಕಾಪಿ ದೇವತಾನಾಂತು ಭೂತಲೇ**
**ಉಲೂಖಲೇ ಯಯಾ ಬದ್ಧೋ ಮುಕ್ತಿದೋ ಮುಕ್ತಿಮಿಚ್ಛತಿ ॥** ೮೧

ಯಶೋದೆಗೆ ಸಮನಾದ ದೇವತೆ ಮತ್ತಾರೂ ಈ ಲೋಕದಲ್ಲಿಲ್ಲ. ಒರಳಿನಲ್ಲಿ ಕಟ್ಟಿಹಾಕಲ್ಪಟ್ಟ ಎಲ್ಲರಿಗೂ ಮೋಕ್ಷ ಕೊಡುವ ಆ ದೇವನು ಅವಳಿಂದ ಬಿಡುಗಡೆಯನು ಬಯಸುತ್ತಿದ್ದಾನೆ !

**ಯಸ್ಯ ಭಕ್ತಿರ್ಭಗವತಿ ಹರೌ ನಿಃಶ್ರೇಯಸೇಶ್ವರೇ ।**
**ವಿಕ್ರೀಡತೋಽಮೃತಾಂಭೋಧೌ ಕಿಂ ಕ್ಷುದ್ರೈಃ ಖಾತಕೋದಕೈಃ ॥ ೮೨**

- ಭಾಗವತ, ೬-೧೨-೨೨

ಮೋಕ್ಷವನ್ನು ಅನುಗ್ರಹಿಸುವ ಪೂಜ್ಯನಾದ ಪರಮಾತ್ಮ ಹರಿಯಲ್ಲಿ ಯಾರಿಗೆ ಭಕ್ತಿಯಿದೆಯೋ ಅವನು ಅಮೃತಸಾಗರದಲ್ಲಿ ಆಟವಾಡುವವನಿಗೆ ಸಮ. ಅಲ್ಪವಾದ ಬಾವಿಗಳ ನೀರಿನಿಂದ ಅವನಿಗೇನಾಗಬೇಕು ?

**ಯಾ ಸೃಷ್ಟಿಃ ಸ್ರಷ್ಟುರಾದ್ಯಾ ವಹತಿ ವಿಧಿಹುತಂ ಯಾ ಹವಿರ್ಯಾ ಚ ಹೋತ್ರೀ**
**ಯೇ ದ್ವೇ ಕಾಲಂ ವಿಧತ್ತಃ ಶ್ರುತಿವಿಷಯಗುಣಾ ಯಾಃ ಸ್ಥಿತಾ ವ್ಯಾಪ್ಯ ವಿಶ್ವಂ ।**
**ಯಾಮಾಹುಃ ಸರ್ವಬೀಜಪ್ರಕೃತಿರಿತಿ ಯಯಾ ಪ್ರಾಣಿನಃ ಪ್ರಾಣವಂತಃ**
**ಪ್ರತ್ಯಕ್ಷಾಭಿಃ ಪ್ರಪನ್ನಃ ತನುಭಿರವತು ವಸ್ತಾಭಿರಷ್ಟಾಭಿರೀಶಃ ॥ ೮೩**

- ಶಾಕುಂತಲ

ಯಾವುದು ಬ್ರಹ್ಮನ ಮೊದಲನೆಯ ಸೃಷ್ಟಿಯೋ - ನೀರು ; ಯಾವುದು ವಿಧಿವತ್ತಾಗಿ ಕೊಟ್ಟ ಆಹುತಿಗಳನ್ನು ಒಯ್ಯುವುದೋ - ಅಗ್ನಿ ; ಯಾವುದು ತಾನೇ ಯಜಮಾನನೋ, ಎಲ್ಲಕ್ಕೂ ಒಡೆಯನೋ - ಶಕ್ತಿ ; ಯಾವುವು ಹಗಲು ರಾತ್ರಿಗಳನ್ನು ಬೇರ್ಪಡಿಸುತ್ತವೆಯೋ - ಸೂರ್ಯ ಮತ್ತು ಚಂದ್ರ ; ಕಿವಿಯಿಂದ ತಿಳಿಯಬಹುದಾದ ಶಬ್ದವೇ ಯಾವುದರ ಗುಣವೋ ಮತ್ತು ಯಾವುದು ಇಡೀ ಜಗತ್ತನ್ನೇ ವ್ಯಾಪಿಸಿದೆಯೋ - ಆಕಾಶ ; ಯಾವುದು ಎಲ್ಲ ಬೀಜಗಳು ಮೊಳೆಯುವುದಕ್ಕೆ ಕಾರಣವೋ - ಭೂಮಿ ; ಯಾವುದರಿಂದ ಪ್ರಾಣಿಗಳು ಉಸಿರಾಡುತ್ತವೆಯೋ - ವಾಯು ; ಈ ಎಂಟು ಅಂಶಗಳಿಂದ ಕೂಡಿದ ಶರೀರವುಳ್ಳ ಈಶನು ನಮ್ಮನ್ನೆಲ್ಲಾ ಕಾಪಾಡಲಿ.

**ಯೇಷಾಂ ಚಿತ್ತೇ ವಸೇದ್ಭಕ್ತಿಃ ಸರ್ವದಾ ಪ್ರೇಮರೂಪಿಣೀ ।**
**ನ ತೇ ಪಶ್ಯಂತಿ ಕೀನಾಶಂ ಸ್ವಪ್ನೇಽಪ್ಯಮಲಮೂರ್ತಯಃ ॥ ೮೪**

- ಭಾಗವತಮಾಹಾತ್ಮ್ಯ, ೨-೧೬

ಯಾರ ಮನಸ್ಸಿನಲ್ಲಿ ಯಾವಾಗಲೂ ಪ್ರೇಮರೂಪಿಣಿಯಾದ ಭಕ್ತಿಯು ಇರುತ್ತದೆಯೋ ಆ ನಿರ್ಮಲ ಮೂರ್ತಿಗಳು ಸ್ವಪ್ನದಲ್ಲಿಯೂ ಕೂಡ ಯಮನನ್ನು ನೋಡುವುದಿಲ್ಲ.

**ರಸನೇ ತ್ವಂ ರಸಜ್ಞೇತಿ ವೃಥೈವ ಸ್ತೂಯಸೇ ಬುಧೈಃ ।**
**ಅಪಾರಮಾಧುರೀಧಾಮರಾಮನಾಮಪರಾಙ್ಮುಖೀ ॥ ೮೫**

ಅಯ್ಯೋ ನಾಲಗೆಯೇ, ಅಪಾರವಾದ ಮಾಧುರ್ಯಕ್ಕೆ ತವರಾದ ರಾಮನಾಮದಲ್ಲಿ ವಿಮುಖಳಾದ ನಿನ್ನನ್ನು ಪಂಡಿತರು ರಸಜ್ಞೆ (ರಸವನ್ನು ಅರಿಯುವವಳು) ಎಂದು ಹೊಗಳುವುದು ವ್ಯರ್ಥವೇ ಸರಿ.

ವಾಸುದೇವೇ ಭಗವತಿ ಭಕ್ತಿಮುದ್ವಹತಾಂ ನೃಣಾಮ್ ।
ಜ್ಞಾನವೈರಾಗ್ಯವೀರ್ಯಾಣಾಂ ನೇಹ ಕಶ್ಚಿದ್ವ್ಯಪಾಶ್ರಯಃ ॥ ೮೬

- ಭಾಗವತ, ೬-೧೭-೩೧

ಭಗವಂತನಲ್ಲಿ ದೃಢವಾದ ಭಕ್ತಿಯಿಟ್ಟಿರುವ ಮನುಷ್ಯರು ಜ್ಞಾನ, ವೈರಾಗ್ಯ, ಶಕ್ತಿಯುಳ್ಳವರು. ಅವರಿಗೆ ಇಲ್ಲಿ ಯಾರ ಆಶ್ರಯವೂ ಬೇಕಿಲ್ಲ.

ವಿಪದಃ ಸಂತು ನಃ ಶಶ್ವತ್ತತ್ರ ತತ್ರ ಜಗದ್ಗುರೋ ।
ಭವತೋ ದರ್ಶನಂ ಯತ್ಸ್ಯಾದಪುನರ್ಭವದರ್ಶನಮ್ ॥ ೮೭

- ಭಾಗವತ, ೧-೮-೨೫

ಹೇ ಸ್ವಾಮಿಯೆ, ನಮಗೆ ಯಾವಾಗಲೂ ಕಷ್ಟಗಳೇ ಬರುತ್ತಿರಲಿ. ಏಕೆಂದರೆ, ಆಗ ನಿನ್ನ ದರ್ಶನ ನಮಗಾಗುತ್ತದೆ. ಆದರಿಂದ ನಮ್ಮ ಪುನರ್ಜನ್ಮ ನೀಗುತ್ತದೆ.

ವಿಪದೋ ನೈವ ವಿಪದಃ ಸಂಪದೋ ನೈವ ಸಂಪದಃ ।
ವಿಪದ್ವಿಸ್ಮರಣಂ ವಿಷ್ಣೋಃ ಸಂಪನ್ನಾರಾಯಣಸ್ಮೃತಿಃ ॥ ೮೮

ವಿಪತ್ತುಗಳು ವಿಪತ್ತುಗಳಲ್ಲ ; ಐಶ್ವರ್ಯಗಳು ಐಶ್ವರ್ಯಗಳಲ್ಲ ; ವಿಷ್ಣುವನ್ನು ಮರೆಯುವುದೇ ವಿಪತ್ತು ; ಸ್ಮರಿಸಿಕೊಳ್ಳುವುದೇ ಸಂಪತ್ತು.

ವಿವಿಧನಿಗಮಸಾರೇ ವಿಶ್ವರಕ್ಷೈಕಧೀರೇ
ವೃಷಶಿಖರಿವಿಹಾರೇ ವಕ್ಷಸಾಶ್ಲಿಷ್ಟದಾರೇ ।
ಭಗವತಿ ಯದುವೀರೇ ಭಕ್ತಬುದ್ಧೇರದೂರೇ
ಭವತು ಚಿರಮುದಾರೇ ಭಾವನಾ ನಿರ್ವಿಕಾರೇ ॥ ೮೯

- ವಿಶ್ವಗುಣಾದರ್ಶ - ೧೯೩

ಎಲ್ಲಾ ಬಗೆಯ ವೇದಶಾಸ್ತ್ರಗಳ ಸಾರವಾದ, ಪ್ರಪಂಚಕ್ಕೆಲ್ಲಾ ಏಕೈಕ ರಕ್ಷಕನಾದ, ಶೇಷಶೈಲದಲ್ಲಿ ವಿಹರಿಸುತ್ತಿರುವ, ಲಕ್ಷ್ಮಿಯನ್ನು ವಕ್ಷಃಸ್ಥಲದಲ್ಲಿಟ್ಟುಕೊಂಡಿರುವ, ಭಕ್ತರ ಬುದ್ಧಿಗೆ ಹತ್ತಿರವಿರುವ, ಭಗವಂತನಾದ ಉದಾರಿಯಾದ ನಿರ್ವಿಕಾರನಾದ ಶ್ರೀಕೃಷ್ಣನಲ್ಲಿ ನಮ್ಮ ಭಾವನೆಯು ಶಾಶ್ವತವಾಗಿರಲಿ.

**ವಿಷಯಾನ್ ಧ್ಯಾಯತಶ್ಚಿತ್ತಂ ವಿಷಯೇಷು ವಿಷಜ್ಜತೇ ।**
**ಮಾಮನುಸ್ಮರ ತಚ್ಚಿತ್ತಂ ಮಯ್ಯೇವ ಪ್ರವಿಲೀಯತೇ ॥ ೯೦**

- ಭಾಗವತ, ೧೧-೧೪-೨೭

ವಿಷಯಸುಖಗಳನ್ನು ಧ್ಯಾನಮಾಡುವವನ ಮನಸ್ಸು ಆ ವಿಷಯಸುಖಗಳಲ್ಲಿಯೇ ವಿಶೇಷ ಆಸಕ್ತಿಯನ್ನು ತೋರಿಸುತ್ತದೆ. ನನ್ನನ್ನು (ಪರಮಾತ್ಮನನ್ನು) ನೆನೆಯುವ ಮನಸ್ಸು, ನನ್ನಲ್ಲಿಯೇ (ಪರಮಾತ್ಮನಲ್ಲಿಯೇ) ಸೇರಿಹೋಗುತ್ತದೆ.

**ವೇದಾಂತೇಷು ಯಮಾಹುರೇಕಪುರುಷಂ ವ್ಯಾಪ್ಯ ಸ್ಥಿತಂ ರೋದಸೀ**
**ಯಸ್ಮಿನ್ನೀಶ್ವರ ಇತ್ಯನನ್ಯವಿಷಯಃ ಶಬ್ದೋ ಯಥಾರ್ಥಾಕ್ಷರಃ ।**
**ಅಂತರ್ಯಶ್ಚ ಮುಮುಕ್ಷುಭಿರ್ನಿಯಮಿತಪ್ರಾಣಾದಿಭಿರ್ಮೃಗ್ಯತೇ**
**ಸಸ್ಥಾಣುಃ ಸ್ಥಿರಭಕ್ತಿಯೋಗಸುಲಭೋ ನಿಃಶ್ರೇಯಸಾಯಾಸ್ತು ವಃ ॥ ೯೧**

- ವಿಕ್ರಮೋರ್ವಶೀಯ

ಭೂಮ್ಯಾಕಾಶಗಳನ್ನು ವ್ಯಾಪಿಸಿರುವ ಯಾರನ್ನು ಉಪನಿಷತ್ತುಗಳು ಒಬ್ಬನೇ ಪುರುಷನೆಂದು ಹೇಳುವುವೋ, ಯಾರಲ್ಲಿ 'ಈಶ್ವರ'ನೆಂಬ ಶಬ್ದವು ಇನ್ನೊಬ್ಬರಿಗೆ ಅನ್ವಯಿಸದೆ, ಸಾರ್ಥಕವಾಗಿದೆಯೋ, ಮೋಕ್ಷ ಬಯಸುವವರು ಪ್ರಾಣಗಳನ್ನು ನಿಗ್ರಹಿಸಿ ಯಾರನ್ನು ಹೃದಯದಲ್ಲಿ ಕಾಣಲು ಯತ್ನಿಸುತ್ತಾರೆಯೋ, ದೃಢವಾದ ಭಕ್ತಿಗೆ ಸಿಲುಕುವ ಆ ಈಶನು ನಮಗೆ ಮೋಕ್ಷ ನೀಡಲಿ.

**ಶರೀರಂ ಜ್ಞಾನಜನನಂ ರೋಗೋ ವಿಷ್ಣುಸ್ಮೃತಿಪ್ರದಃ ।**
**ವಿಪದ್ವೈರಾಗ್ಯಜನನೀ ತ್ರಯಂ ಸುಖಕರಂ ಸತಾಮ್ ॥ ೯೨**

- ರಸಗಂಗಾಧರ

ಜ್ಞಾನಜನಕವಾದ ಶರೀರ, ವಿಷ್ಣು ಸ್ಮರಣೆಯನ್ನುಂಟುಮಾಡುವ ರೋಗ, ವೈರಾಗ್ಯವನ್ನು ತರುವ ವಿಪತ್ತು - ಇವು ಮೂರು ಸಜ್ಜನರಿಗೆ ಸುಖಪ್ರದ.

**ಶ್ವಃ ಶ್ವಃ ಪ್ರಾಣಪ್ರಯಾಣೇಽಪಿ ನ ಸ್ಮರಂತಿ ಸ್ಮರದ್ವಿಷಃ ।**
**ಮಗ್ನಾಃ ಕುಟುಂಬಜಂಬಾಲೇ ಬಾಲಿಶಾ ಯದುಪಾಸಿನಃ ॥ ೯೩**

- ನೈಷಧೀಯಚರಿತ, ೧೭-೩೦

ನಾಳೆಯೋ ನಾಳಿದ್ದೋ ಪ್ರಾಣ ಹೋಗುವಂತಿದ್ದರೂ ಈಶ್ವರನನ್ನು ಸ್ಮರಿಸದೆ, ಮೋಹಕ್ಕೆ ಒಳಗಾಗಿ ಮೂರ್ಖರು ಸಂಸಾರದ ಕೆಸರಿನಲ್ಲಿ ಮುಳುಗಿರುತ್ತಾರೆ.

ಶಾಸ್ತ್ರಾಯ ಗುರುಸಂಯೋಗಃ ಶಾಸ್ತ್ರಂ ವಿನಯವೃದ್ಧಯೇ ।
ವಿದ್ಯಾವಿನೀತೋ ನೃಪತಿರ್ನ ಕೃಚ್ಛ್ರೇಷ್ವವಸೀದತಿ ॥ ೯೪

-ಸುಭಾಷಿತ ಸುಧಾನಿಧಿ

ಶಾಸ್ತ್ರವನ್ನರಿಯಲು ಗುರುವಿನ ಬಳಿ ಹೋಗಬೇಕು. ಶಾಸ್ತ್ರವಾದರೋ ವಿನಯವನ್ನು ಬೆಳೆಸಿಕೊಳ್ಳುವುದಕ್ಕೆ. ವಿದ್ಯೆಯಿಂದ ವಿನಯವನ್ನು ಪಡೆದು ರಾಜನು ಎಂಥ ಕಷ್ಟಗಳಲ್ಲಿಯೂ ನಾಶವಾಗುವುದಿಲ್ಲ.

ಶ್ರೀರಂಗೇ ಶೋಭತೇ ಯಸ್ಯ ಶ್ರೀರಂಗೇ ಶೋಭತೇ ಚ ಯಾ ।
ನಮೋಽಹಂ ಕಲಯೇ ತಸ್ಮೈ ನ ಮೋಹಂ ಕಲಯೇ ತತಃ ॥ ೯೫

- ವಿಶ್ವಗುಣಾದರ್ಶ - ४೦೦

ಯಾರ ಶರೀರದಲ್ಲಿ ಲಕ್ಷ್ಮಿಯು ಬೆಳಗುತ್ತಾಳೋ ಮತ್ತು ಯಾರು ಶ್ರೀರಂಗದಲ್ಲಿ ಬೆಳಗುತ್ತಾನೋ ಆ ದೇವರಿಗೆ ನಾನು ನಮಸ್ಕಾರ ಮಾಡುತ್ತೇನೆ. ಆಮೇಲೆ ನನ್ನಲ್ಲಿ ಮೋಹವೇ ಇರುವುದಿಲ್ಲ.

ಶುಧ್ಯತಿ ಹಿ ನಾಂತರಾತ್ಮಾ ಕೃಷ್ಣಪದಾಂಭೋಜಭಕ್ತಿಮೃತೇ ।
ವಸನಮಿವ ಕ್ಷಾರೋದ್ಯೈಃ ಭಕ್ತ್ಯಾ ಪ್ರಕ್ಷಾಲ್ಯತೇ ಚೇತಃ ॥ ೯೬

- ಪ್ರಬೋಧಸುಧಾಕರ

ಶ್ರೀಕೃಷ್ಣನ ಪಾದಪದ್ಮದಲ್ಲಿ ಭಕ್ತಿ ಮಾಡದೇ ಚಿತ್ತಶುದ್ಧಿ ಆಗುವುದಿಲ್ಲ. ಚೌಳುಪ್ಪು ಬಟ್ಟೆಯನ್ನು ಹೇಗ ತೊಳೆಯುವುದೋ ಹಾಗೆ ಭಕ್ತಿ ಚಿತ್ತವನ್ನು ಶುದ್ಧಮಾಡುತ್ತದೆ.

ಶೈವಾ ವಯಂ ನ ಖಲು ತತ್ರ ವಿಚಾರಣೀಯಂ
ಪಂಚಾಕ್ಷರೀಜಪಪರಾ ನಿತರಾಂ ತಥಾಪಿ ।
ಚೇತೋ ಮದೀಯಮತಸೀಕುಸುಮಾವಭಾಸಂ
ಸ್ಮೇರಾನನಂ ಸ್ಮರತಿ ಗೋಪವಧೂಕಿಶೋರಮ್ ॥ ೯೭

ನಾವು ಶೈವರು, ಅದರಲ್ಲಿ ಸಂದೇಹವಿಲ್ಲ. ವಿಶೇಷವಾಗಿ ಪಂಚಾಕ್ಷರಿಯನ್ನು ಜಪಿಸತಕ್ಕವರು. ಆದರೂ ಸಹ ನನ್ನ ಮನಸ್ಸು ಅತಸೀಕುಸುಮದಂತೆ ಶ್ಯಾಮಲವರ್ಣನೂ ಸ್ಮಿತಮುಖನೂ ಆದ ಗೋಪವಧೂಬಾಲಕ ಶ್ರೀಕೃಷ್ಣನನ್ನು ಸ್ಮರಿಸುತ್ತದೆ.

ಸ ಗಂಗಾ ಸ ಗಯಾ ಸೇತುಸ್ಸ ಕಾಶೀ ಸ ಚ ಪುಷ್ಕರಂ ।
ಜಿಹ್ವಾಗ್ರೇ ವರ್ತತೇ ಯಸ್ಯ ಹರಿರಿತ್ಯಕ್ಷರದ್ವಯಮ್ ॥ ೯೮

- ಹರ್ಯಷ್ಟಕ

ಯಾರ ನಾಲಗೆಯ ತುದಿಯಲ್ಲಿ 'ಹರಿ' ಎಂಬ ಎರಡಕ್ಷರ ಇರುವುದೋ ಅವನೇ ಗಂಗೆ, ಗೆಯ, ಸೇತು, ಕಾಶಿ ಮತ್ತು ಪುಷ್ಕರ.

**ಸಂಗಃ ಸತ್ಸು ವಿಧೀಯತಾಂ ಭಗವತೋ ಭಕ್ತಿರ್ದೃಢಾ ಧೀಯತಾಂ**
**ಶಾಂತ್ಯಾದಿಃ ಪರಿಚೀಯತಾಂ ದೃಢತರಂ ಕರ್ಮಾಶು ಸಂತ್ಯಜ್ಯತಾಂ ।**
**ಸದ್ವಿದ್ವಾನುಪಸರ್ಪ್ಯತಾಂ ಪ್ರತಿದಿನಂ ತತ್ಪಾದುಕಾ ಸೇವ್ಯತಾಂ**
**ಬ್ರಹ್ಮೈಕಾಕ್ಷರಮರ್ಥ್ಯತಾಂ ಶ್ರುತಿಶಿರೋವಾಕ್ಯಂ ಸಮಾಕರ್ಣ್ಯತಾಮ್ ॥ ೯೯**

- ಉಪದೇಶಪಂಚಕಂ

ಸಜ್ಜನರ ಸಹವಾಸ ಮಾಡು. ಭಗವಂತನಲ್ಲಿ ದೃಢವಾದ ಭಕ್ತಿ ಇಡು. ಶಾಂತಿ ಮೊದಲಾದ ಗುಣಗಳನ್ನು ತುಂಬಿಕೋ. ಬಲವಾದ ಕರ್ಮಗಳನ್ನೆಲ್ಲಾ ಬೇಗ ಕಿತ್ತೊಗೆ. ಒಳ್ಳೆಯ ವಿದ್ವಾಂಸನನ್ನು ದಿನದಿನವೂ ಅನುಸರಿಸು. ಅವನ ಪಾದುಕೆಗಳನ್ನು ಸೇವಿಸು. ವೇದಾಂತ ವಾಕ್ಯಗಳನ್ನು ಆದರಿಂದ ಕೇಳು. 'ಬ್ರಹ್ಮ' ಎಂಬ ಒಂದು ಅಕ್ಷರ ವಸ್ತುವನ್ನು ಹುಡುಕು.

**ಸ್ವರ್ಗೋ ಧನಂ ವಾ ಧಾನ್ಯಂ ವಾ ವಿದ್ಯಾಃ ಪುತ್ರಾಸ್ಸುಖಾನಿ ಚ ।**
**ಗುರುವೃತ್ತ್ಯನುರೋಧೇನ ನ ಕಿಂಚಿದಪಿ ದುರ್ಲಭಮ್ ॥ ೧೦೦**

- ಸುಭಾಷಿತಸುಧಾನಿಧಿ

ಸ್ವರ್ಗವಾಗಲೀ, ಹಣವಾಗಲೀ, ಧಾನ್ಯವಾಗಲೀ, ವಿದ್ಯೆಯಾಗಲೀ, ಮಕ್ಕಳಾಗಲೀ, ಸುಖವಾಗಲೀ ಯಾವುದೇ ಆಗಲೀ ಗುರುಭಕ್ತಿಯುಳ್ಳವನಿಗೆ ದುರ್ಲಭವಲ್ಲ.

**ಸ್ವರ್ಗಾಪವರ್ಗಯೋಃ ಪುಂಸಾಂ ರಸಾಯಾಂ ಭುವಿ ಸಂಪಾದಮ್ ।**
**ಸರ್ವಾಸಾಮಪಿ ಸಿದ್ಧೀನಾಂ ಮೂಲಂ ತಚ್ಚರಣಾರ್ಚನಮ್ ॥ ೧೦೧**

- ಭಾಗವತ, ೧೦-೮೧-೧೯

ಈ ಭೂಮಿಯಲ್ಲಿ ಮನುಷ್ಯರಿಗೆ, ಸ್ವರ್ಗಮೋಕ್ಷಗಳಿಗೂ, ಎಲ್ಲಾ ಸಂಪತ್ತುಗಳಿಗೂ, ಸಿದ್ಧಿಗಳಿಗೂ ಮೂಲ, ಆ ಪರಮಾತ್ಮನ ಪಾದಪೂಜೆಯಲ್ಲದೆ ಬೇರೆ ಇನ್ನೊಂದಿಲ್ಲ.

**ಸತ್ಯಪಿ ಭೇದಾಪಗಮೇ ನಾಥ ತವಾಹಂ ನ ಮಾಮಕೀನಸ್ತ್ವಂ ।**
**ಸಾಮುದ್ರೋ ಹಿ ತರಂಗಃ ಕ್ವಚನ ಸಮುದ್ರೋ ನ ತಾರಂಗಃ ॥ ೧೦೨**

- ವಿಷ್ಣುಷಟ್ಪದೀ

ಹೇ ಸ್ವಾಮಿ, (ನನಗೂ ನಿನಗೂ) ಭೇದವಿಲ್ಲದಿದ್ದರೂ ನಾನು ನಿನಗೆ ಸೇರಿದವನು - ನಿನಗೆ ಅಧೀನ. ನೀನು ನನಗೆ ಸೇರಿದವನಲ್ಲ (ನನಗೆ ಅಧೀನನಲ್ಲ). ಅಲೆ ಸಮುದ್ರಕ್ಕೆ ಸೇರಿದ್ದು. ಸಮುದ್ರವು ಅಲೆಗೆ ಸೇರಿದ್ದಲ್ಲ.

**ಸ್ಮರ್ತವ್ಯಃ ಸತತಂ ಕೃಷ್ಣೋ ವಿಸ್ಮರ್ತವ್ಯೋ ನ ಜಾತುಚಿತ್ ।**
**ಸರ್ವೇ ವಿಧಿನಿಷೇಧಾಃ ಸ್ಯುರೇತಯೋರೇವ ಕಿಂಕರಾಃ ॥ ೧೦೩**

- ಭಕ್ತಿರಸಾಯನ

"ಶ್ರೀಕೃಷ್ಣನನ್ನು ಸದಾ ಸ್ಮರಿಸುತ್ತಿರಬೇಕು. ಯಾವ ಸಮಯದಲ್ಲೂ ಮರೆಯಬಾರದು". ಸಮಸ್ತ ವಿಧಿನಿಷೇಧಗಳೂ ಈ ಎರಡು ವಿಧಿನಿಷೇಧಗಳ ಸೇವಕರು.

**ಸಂಪದಾ ಸಂಪರಿಷ್ವಕ್ತೋ ವಿದ್ಯಯಾ ಚಾನವದ್ಯಯಾ ॥**
**ನರೋ ನ ಶೋಭತೇ ಲೋಕೇ ಹರಿಭಕ್ತಿರಸಂ ವಿನಾ ॥ ೧೦೪**

- ರಸಗಂಗಾಧರ

ಸಂಪತ್ತು, ಶ್ರೇಷ್ಠವಾದ ವಿದ್ಯೆ - ಇವು ತುಂಬಿದ್ದರೂ ಸಹ ಹರಿಭಕ್ತಿರಸವಿಲ್ಲದಿದ್ದರೆ ಮನುಷ್ಯನು ಜಗತ್ತಿನಲ್ಲಿ ಶೋಭಿಸುವುದಿಲ್ಲ.

**ಸಂಪ್ರಸನ್ನೇ ಭಗವತಿ ಪುರುಷಃ ಪ್ರಾಕೃತೈರ್ಗುಣೈಃ ।**
**ವಿಮುಕ್ತೋ ಜೀವನಿರ್ಮುಕ್ತೋ ಬ್ರಹ್ಮನಿರ್ವಾಣಮೃಚ್ಛತಿ ॥ ೧೦೫**

- ಭಾಗವತ, ೪-೧೧-೧೪

ಭಗವಂತನು ಪ್ರಸನ್ನನಾಗಲಾಗಿ ಮನುಷ್ಯನು ತನ್ನ ಪ್ರಾಕೃತಗುಣಗಳಿಂದ ಬಿಡಲ್ಪಟ್ಟವನಾಗಿ, ಜೀವಭಾವವನ್ನು ತೊರೆದು ಪರಬ್ರಹ್ಮಸ್ವರೂಪವಾದ ಮೋಕ್ಷವನ್ನು ಸೇರುತ್ತಾನೆ.

**ಸರ್ವಭೂತೇಷು ಯಃ ಪಶ್ಯೇದ್ಭಗವದ್ಭಾವಮಾತ್ಮನಃ ।**
**ಭೂತಾನಿ ಭಗವತ್ಯಾತ್ಮನ್ಯೇಷ ಭಾಗವತೋತ್ತಮಃ ॥ ೧೦೬**

- ಭಾಗವತ, ೧೧-೨-೪೫

ಯಾರು ಎಲ್ಲ ಪ್ರಾಣಿಗಳಲ್ಲಿಯೂ ಭಗವಂತನ ಭಾವನೆಯಿಂದ ನೋಡುತ್ತಾನೆಯೋ ಮತ್ತು ಭಗವಂತನಲ್ಲಿ ಎಲ್ಲಾ ಪ್ರಾಣಿಗಳನ್ನೂ ನೋಡುತ್ತಾನೆಯೋ ಅವನೇ ಭಗವದ್ಭಕ್ತರಲ್ಲಿ ಶ್ರೇಷ್ಠನು.

**ಸ್ವಾಧೀನಂ ಸಮತಿಕ್ರಮ್ಯ ಮಾತರಂ ಪಿತರಂ ಗುರುಂ ।**
**ಅಸ್ವಾಧೀನಂ ಕಥಂ ದೈವಂ ಪ್ರಕಾರೈರಭಿರಾಧ್ಯತೇ ॥ ೧೦೭**

ತಾಯಿ, ತಂದೆ, ಗುರು - ಈ ಮೂವರು ಪ್ರತ್ಯಕ್ಷವಾಗಿರುವ ದೇವರು. ಇವರನ್ನು ಉಲ್ಲಂಘಿಸಿ ಕಣ್ಣಿಗೆ ಕಾಣದ ದೇವರನ್ನು ಆರಾಧಿಸುವ ಪ್ರಕಾರವಾದರೂ ಯಾವುದು?

**ಸಾ ರಸನಾ ತೇ ನಯನೇ ತಾವೇವ ಕರೌ ಸ ಏವ ಕೃತಕೃತ್ಯಃ ।**
**ಯಾ ಯೇ ಯೌ ಯೋ ಭರ್ಗಂ ವದತೀಕ್ಷೇತೇ ಸದಾರ್ಚತಃ ಸ್ಮರತಿ ॥೧೦೮**

- ಶಿವಾನಂದಲಹರೀ

ಯಾವುದು ಪರಮೇಶ್ವರನ ನಾಮಗಳನ್ನು ನುಡಿಯುವುದೋ ಅದು ನಾಲಗೆ ! ಅವನನ್ನು ಯಾವೆರಡು ಕಾಣುವುವೋ ಅವು ಕಣ್ಣುಗಳು ! ಯಾವುವು ಅವನನ್ನು ಪೂಜಿಸುವುವೋ ಅವೇ ಕೈಗಳು. ಯಾವಾತನು ಅವನನ್ನು ಸ್ಮರಿಸುವನೋ ಅವನೇ ಕೃತಕೃತ್ಯನು!

**ಸೇವಧ್ವಂ ವಿಬುಧಾಸ್ತಮಂಧಕರಿಪುಂ ಮಾಕ್ಲಿಶ್ಯತಾನ್ಯಶ್ರುತೇ**
**ಯಸ್ಮಾದತ್ರ ಪರತ್ರ ಚ ತ್ರಿಜಗತಿ ತ್ರಾತಾ ಸ ಏಕಃ ಶಿವಃ ।**
**ಆಯಾತೇ ನಿಯತೇರ್ವಶಾತ್ ಸ್ವವಿಷಯೇ ಕಾಲಾತ್ ಕರಾಲಾದ್ಭಯೇ**
**ಕುತ್ರ ವ್ಯಾಕರಣಂ ಕ್ವ ತರ್ಕಕಲಹಃ ಕಾವ್ಯಶ್ರಮಃ ಕ್ವಾಪಿ ವಾ ॥ ೧೦೯**

ಎಲೈ ವಿದ್ವಾಂಸರೇ, ಅಂಧಕಾರಿಯಾದ ಆ ಮಹಾದೇವನನ್ನು ಸೇವಿಸಿ. ಬೇರೆ ಶಾಸ್ತ್ರಗಳಲ್ಲಿ ಕ್ಲೇಶಪಡಬೇಡಿ. ಏಕೆಂದರೆ ಆ ಶಿವನೊಬ್ಬನೇ ಇಲ್ಲಿ, ಪರಲೋಕದಲ್ಲಿ ಮತ್ತು ಮೂರು ಲೋಕಗಳಲ್ಲಿಯೂ ರಕ್ಷಕ. ವಿಧಿನಿಯಮದಂತೆ ಭಯಂಕರನಾದ ಯಮ ಭಯ ಪಡಿಸಿದಾಗ ವ್ಯಾಕರಣ ಎಲ್ಲೋ ? ತರ್ಕಶಾಸ್ತ್ರದ ಜಗಳ ಮತ್ತೆಲ್ಲೋ ? ಕಾವ್ಯರಚನೆಯ ಪರಿಶ್ರಮ ಎಲ್ಲೋ ?

**ರೇ ಕಂದರ್ಪ ಕರಂ ಕದರ್ಥಯಸಿ ಕಿಂ ಕೋದಂಡಟಂಕಾರಿತೈಃ**
**ರೇ ರೇ ಕೋಕಿಲ ಕೋಮಲೈಃ ಕಲರವೈಃ ಕಿಂ ತ್ವಂ ವೃಥಾ ಜಲ್ಪಸಿ ।**
**ಮುಗ್ಧೇ ಸ್ನಿಗ್ಧವಿದಗ್ಧಮುಗ್ಧಮಧುರೈರ್ಲೋಲೈಃ ಕಟಾಕ್ಷೈರಲಂ**
**ಚೇತಶ್ಚುಂಬಿತಚಂದ್ರಚೂಡಚರಣಧ್ಯಾನಾಮೃತಂ ವರ್ತತೇ ॥ ೧೧೦**

- ವೈರಾಗ್ಯಶತಕ ೯೯

ಎಲೈ ಮನ್ಮಥನೇ, ನಿನ್ನ ಬಿಲ್ಲಿನ ಠೇಂಕಾರಗಳಿಂದ ಕೈಯನ್ನು ಏಕೆ ನೋಯಿಸಿ ಕೊಳ್ಳುವೆ? ಎಲೈ ಕೋಗಿಲೆಯೆ, ಏಕೆ ನೀನು ಇಂಪಾಗಿ ವೃಥಾ ಹಾಡುವೆ. ಎಲೈ ಸುಂದರಿ, ನೀನು ಚಂಚಲವಾದ ಕಡೆಗಣ್ಣಿನ ನೋಟಗಳಿಂದ ನೋಡುವುದನ್ನು ಸಾಕುಮಾಡು. ಏಕೆಂದರೆ, ನನ್ನ ಮನಸ್ಸು ಚಂದ್ರಶೇಖರನ ಪಾದಕಮಲಗಳ ಧ್ಯಾನಾಮೃತವನ್ನು ಸೇವಿಸುತ್ತಿದೆ. (ನನಗೆ ನಿಮ್ಮಿಂದ ಏನೂ ಆಗದು).

**ದೃಷ್ಟಃ ಸಪ್ರೇಮದೇವ್ಯಾ ಕಿಮಿದಮಿತಿ, ಭಯಾತ್ಸಂಭ್ರಮಾಚ್ಚಾಸುರೀಭಿಃ**
**ಶಾಂತಾಂತಸ್ತತ್ತ್ವಸಾರೈಃ ಸಕರುಣಮೃಷಿಭಿರ್ವಿಷ್ಣುನಾ ಸಸ್ಮಿತೇನ ।**

**ಆಕೃಷ್ಟಾಸ್ತ್ರಂ ಸಗರ್ವೈರುಪಶಮಿತವಧೂಸಂಭ್ರಮೈರ್ದೈತ್ಯವೀರೈಃ ।**
**ಸಾನಂದಂ ದೇವತಾಭಿರ್ಮಯಪುರದಹನೇ ಧೂರ್ಜಟಿಃ ಪಾತು ಯುಷ್ಮಾನ್**
**೧೧೧**

- ವೇಣೀಸಂಹಾರ, ೧-೩

ಮಯನು ನಿರ್ಮಿಸಿದ ತ್ರಿಪುರಾಸುರರ ನಗರಗಳನ್ನು ಸುಡಲು ಸಿದ್ಧನಾದ ಮಹಾದೇವನನ್ನು ಪಾರ್ವತಿಯು ಪ್ರೇಮದಿಂದಲೂ, ರಾಕ್ಷಸಿಯರು ಹೆದರಿಕೆ ಗಾಬರಿಗಳಿಂದಲೂ, ಬ್ರಹ್ಮಜ್ಞಾನದಿಂದ ಶಾಂತರಾದ ಋಷಿಗಳು ಕರುಣೆಯಿಂದಲೂ, ವಿಷ್ಣುವು ನಗುತ್ತಲೂ, ರಾಕ್ಷಸವೀರರು ತಮ್ಮ ಪತ್ನಿಯರನ್ನು ಸಮಾಧಾನಗೊಳಿಸಿ ಗರ್ವದಿಂದ ಅಸ್ತ್ರವನ್ನು ಸೆಳೆದೂ, ದೇವತೆಗಳು ಆನಂದದಿಂದಲೂ, ನೋಡಿದರು. ಆ ಮಹಾದೇವನು ನಮ್ಮೆಲ್ಲರನ್ನೂ ರಕ್ಷಿಸಲಿ.

**ಶರೀರಪತನಾವಧಿ ಪ್ರಭುನಿಷೇವಣಾಪಾದನಾತ್**
**ಅಬಿಂಧನಧನಂಜಯಪ್ರಶಮದಂ ಧನಂ ದಂಧನಮ್ ।**
**ಧನಂಜಯವಿವರ್ಧನಂ ಧನಮುದೂಢಗೋವರ್ಧನಂ**
**ಸುಸಾಧನಮಬಾಧನಂ ಸುಮನಸಾಂ ಸಮಾರಾಧನಮ್ ॥ ೧೧೨**

- ವೇದಾಂತದೇಶಿಕ

ಶರೀರ ಬೀಳುವವರೆಗೂ ಅರಸರನ್ನಾಶ್ರಯಿಸಿ ಹಸಿವನ್ನಾರಿಸಲು ಸಂಪಾದಿಸಿದ ಹಣ ವ್ಯರ್ಥ. ಅರ್ಜುನನನ್ನು ಪೋಷಿಸಿದ, ಗೋವರ್ಧನ ಪರ್ವತವನ್ನೆತ್ತಿದ, ಒಳ್ಳೆಯ ಸಾಧನವೆನಿಸಿದ, ಎಲ್ಲಾ ಬಾಧೆಗಳನ್ನು ಪರಿಹರಿಸುವ, ಜ್ಞಾನಿಗಳಿಗೆ ತೃಪ್ತಿಯನ್ನುಂಟು ಮಾಡುವ ವಿಷ್ಣುವೆಂಬ ಧನವೇ ನಿಜವಾದ ಧನ.

**ಶಿಲಂ ಕಿಮನಲಂ ಭವೇದನಲಮೌದರಂ ಬಾಧಿತುಂ**
**ಪಯಃ ಪ್ರಸೃತಿಪೂರಕಂ ಕಿಮುನ ಧಾರಕಂ ಸಾರಸಂ ।**
**ಅಯತ್ನ ಮಲವಲ್ಲಿಕಂ ಪಥಿಪಟಚ್ಚರಂ ಕಚ್ಚರಂ**
**ಭಜಂತಿ ವಿಬುಧಾ ಮುಧಾ ಹ್ಯಹಹ ಕುಕ್ಷಿತಃ ಕುಕ್ಷಿತಃ ॥ ೧೧೩**

- ವೇದಾಂತದೇಶಿಕ

ಹೊಟ್ಟೆಯ ಹಸಿವಿನ ಬೆಂಕಿಯನ್ನಾರಿಸಲು ಆರಿಸಿದ ಕಾಳುಗಳು ಸಾಲವೇ ? ಸರೋವರದ ಬೊಗಸೆ ನೀರು ಶರೀರವನ್ನು ಕಾಪಾಡಲಾರದೇ ! ದಾರಿಯಲ್ಲಿ ಸಿಕ್ಕುವ ಚಿಂದಿ ಬಟ್ಟೆಗಳು ಸುಲಭವಾಗಿ ಕೌಪೀನವಾಗಲಾರವೆ! ಪಂಡಿತರು ಹೊಟ್ಟೆಗಾಗಿ ರಾಜರನ್ನು ವ್ಯರ್ಥವಾಗಿ ಆಶ್ರಯಿಸುತ್ತಾರಲ್ಲಾ. ಅಯ್ಯೋ.

**ಕ್ಷೋಣೀಕೋಣಶತಾಂಶಪಾಲನಕಲಾದುರ್ವಾರಗರ್ವಾನಲ**
**ಕ್ಷುಭ್ಯತ್ ಕ್ಷುದ್ರನರೇಂದ್ರಚಾಟುರಚನಾಧನ್ಯಾನ್ ನ ಮನ್ಯಾಮಹೇ ।**

**ದೇವಂ ಸೇವಿತುಮೇವ ನಿಶ್ಚಿನುಮಹೇ ಯೋಽಸೌ ದಯಾಳುಃ ಪುರಾ**
**ಧಾನಾಮುಷ್ಟಿಮುಚೇ ಕುಚೇಲಮುನಯೇ ದತ್ತೇ ಸ್ಮ ವಿತ್ತೇಶತಾಮ್ ॥ ೧೧೪**

- ವೇದಾಂತದೇಶಿಕ

ವಿಸ್ತಾರವಾದ ಭೂಮಿಯ ಒಂದು ಮೂಲೆಯನ್ನು ಆಳುತ್ತಾ ಗರ್ವದಿಂದ ಬೀಗುತ್ತಿರುವ ಅರಸರನ್ನು ಹೊಗಳಿ ತೃಪ್ತಿಹೊಂದುವ ಜನರನ್ನು ನಾವು ಲೆಕ್ಕಿಸುವುದಿಲ್ಲ. ಯಾವ ಪರಮಾತ್ಮನು ಒಂದು ಮುಷ್ಟಿ ಅವಲಕ್ಕಿಯನ್ನು ಕೊಟ್ಟ ಕುಚೇಲನಿಗೆ ಕುಬೇರನ ಐಶ್ವರ್ಯವನ್ನೇ ಕೊಟ್ಟನೋ ಆ ಪರಮಾತ್ಮನನ್ನೇ ಸೇವಿಸಬೇಕೆಂದು ನಿಶ್ಚೈಸಿದ್ದೇವೆ.

**ದಿನಮಪಿ ರಜನೀ ಸಾಯಂಪ್ರಾತಃ**
**ಶಿಶಿರವಸಂತೌ ಪುನರಾಯಾತಃ ।**
**ಕಾಲಃ ಕ್ರೀಡತಿ ಗಚ್ಛತ್ಯಾಯುಃ**
**ತದಪಿ ನ ಮುಂಚತ್ಯಾಶಾವಾಯುಃ ॥ ೧೧೫**

- ಮೋಹಮುದ್ಗರ

ಹಗಲು ರಾತ್ರಿ ಸಂಜೆ ಬೆಳಗ್ಗೆ ಶಿಶಿರ, ವಸಂತ ಬಂದು ಬಂದು ಹೋಗುತ್ತವೆ. ಕಾಲವು ಆಟವಾಡುತ್ತದೆ. ಆಯುಸ್ಸು ಕಳೆದುಹೋಗುತ್ತದೆ. ಆದರೂ ಆಶೆಯು ಬಿಡುವುದಿಲ್ಲ.

**ಏಕೈಶ್ವರ್ಯೇ ಸ್ಥಿತೋಽಪಿ ಪ್ರಣತಬಹುಫಲೇ ಯಃ ಸ್ವಯಂ ಕೃತ್ತಿವಾಸಾಃ**
**ಕಾಂತಾಸಂಮಿಶ್ರದೇಹೋಽಪ್ಯವಿಷಯಮನಸಾಂ ಯಃಪರಸ್ತಾದ್ಯತೀನಾಂ ।**
**ಅಷ್ಟಾಭಿರ್ಯಸ್ಯ ಕೃತ್ಸ್ನಂ ಜಗದಪಿ ತನುಭಿರ್ಬಿಭ್ರತೋ ನಾಭಿಮಾನಃ**
**ಸನ್ಮಾರ್ಗಾಲೋಕನಾಯ ವ್ಯಪನಯತು ಸ ವಸ್ತಾಮಸೀಂ ವೃತ್ತಿಮೀಶಃ ॥ ೧೧೬**

- ಮಾಳವಿಕಾಗ್ನಿಮಿತ್ರ

ನಮಸ್ಕರಿಸಿ ಆಶ್ರಯಿಸಿದವರಿಗೆ ಬೇಕಾದಷ್ಟು ಫಲ ನೀಡುವಷ್ಟು ಸಂಪತ್ತಿದ್ದರೂ ತಾನು ಕೇವಲ ಚರ್ಮವನ್ನೇ ಉಟ್ಟಿದ್ದಾನೆ. ಪಾರ್ವತಿಗೆ ಅರ್ಧಶರೀರವನ್ನು ಹಂಚಿದ್ದರೂ, ಜಿತೇಂದ್ರಿಯರಾದ ಯತಿಗಳೆಲ್ಲರೂ ಶ್ರೇಷ್ಠನಾಗಿದ್ದಾನೆ. ಚಂದ್ರ, ಸೂರ್ಯ, ಅಗ್ನಿ, ಗಾಳಿ, ನೆಲ, ಜಲ, ಆಕಾಶ, ತನ್ನ ಶಕ್ತಿ ಎಂಬ ಎಂಟು ಅಂಶಗಳಿಂದ ಜಗತ್ತನ್ನು ರಕ್ಷಿಸುತ್ತಿದ್ದರೂ ಅಭಿಮಾನವಿಲ್ಲ. ಆ ಈಶ್ವರನು ಮೋಕ್ಷಮಾರ್ಗವನ್ನು ಕಾಣಲು ಅನುಕೂಲವಾಗುವಂತೆ ನಮ್ಮ ತಮಸ್ಸನ್ನು ಹೋಗಲಾಡಿಸಲಿ.

**ವಾಚಾ ನಿರ್ಮಲಯಾ ಸುಧಾಮಧುರಯಾ ಯಾಂ ನಾಥ ಶಿಕ್ಷಾಮದಾಃ**
**ತಾಂ ಸ್ವಪ್ನೇಽಪಿ ನ ಸಂಸ್ಮರಾಮ್ಯಹಮಹಂಭಾವಾವೃತೋ ನಿಸ್ತ್ರಪಃ ।**

**ಇತ್ಯಾಗಃಶತಶಾಲಿನಂ ಪುನರಪಿ ಸ್ವೀಯೇಷು ಮಾಂ ಬಿಭ್ರತಃ**
**ತ್ವತ್ತೋ ನಾಸ್ತಿ ದಯಾನಿಧಿರ್ಯದುಪತೇ ಮತ್ತೋ ನ ಮತ್ತಃ ಪರಃ ॥ ೧೧೭**

- ಕರುಣಾಲಹರಿ

ಸ್ವಚ್ಛವಾದ, ಅಮೃತದಂತೆ ರುಚಿಯಾದ ಮಾತುಗಳಿಂದ ನೀನು ಕಲಿಸಿದ್ದೆಲ್ಲವನ್ನೂ ಮರೆತು ಅಹಂಕಾರದಿಂದ ನಾಚಿಕೆಯಿಲ್ಲದೆ ನೂರಾರು ತಪ್ಪುಗಳನ್ನು ಮಾಡಿದರೂ ನೀನು ದಯೆಯಿಂದ ನನ್ನನ್ನು ತನ್ನವರಲ್ಲಿ ಸೇರಿಸಿಕೊಂಡಿರುವೆ. ಇದನ್ನು ಯೋಚಿಸಿದರೆ ನಿನಗಿಂತಲೂ ಕರುಣಾಳುಗಳಿಲ್ಲ ; ನನಗಿಂತಲು ಕೊಬ್ಬಿದವರಿಲ್ಲ.

**ಸಂತೋಷಾರ್ಥಂ ವಿಮೃಶತಿ ಮುಹುಃ ಸದ್ಭಿರಧ್ಯಾತ್ಮವಿದ್ಯಾಂ**
**ನಿತ್ಯಂ ಬ್ರೂತೇ ನಿಶಮಯತಿ ಚ ಸ್ವಾದುಸುವ್ಯಾಹೃತಾನಿ ।**
**ಅಂಗೀಕುರ್ವನ್ನನಘಲಲಿತಾಂ ವೃತ್ತಿಮಾದೇಹಪಾತಾತ್**
**ದೃಷ್ಟಾದೃಷ್ಟಸ್ವಭರವಿಗಮೇ ದತ್ತದೃಷ್ಟಿಃ ಪ್ರಸನ್ನಃ ॥ ೧೧೯**

- ವೇದಾಂತದೇಶಿಕ

ದೇವರಲ್ಲಿ ಮರೆಹೊಕ್ಕ ಭಕ್ತನು ಸಂತೋಷಕ್ಕಾಗಿ ಪಂಡಿತರೊಡನೆ ಆಧ್ಯಾತ್ಮ ವಿದ್ಯೆಯನ್ನು ಕುರಿತು ಚರ್ಚಿಸುತ್ತಾನೆ. ಒಳ್ಳೆಯ ಮಾತುಗಳನ್ನು ಹೇಳುತ್ತಾನೆ ಮತ್ತು ಕೇಳುತ್ತಾನೆ. ಈ ಲೋಕದ ಅಥವಾ ಇತರ ಲೋಕದ ಸುಖಗಳಲ್ಲಿ ಆಸೆಪಡದೆ ಸಾಯುವ ವರೆಗೆ ಪಾಪಕರವಲ್ಲದ, ಭಗವದಾರಾಧನರೂಪವಾದ ಕೆಲಸಗಳನ್ನು ಮಾಡುತ್ತಾನೆ.

**ಧ್ಯಾನಾಭ್ಯಾಸವಶೀಕೃತೇನ ಮನಸಾ ತನ್ನಿರ್ಗುಣಂ ನಿಷ್ಕ್ರಿಯಂ**
**ಜ್ಯೋತಿಃ ಕಿಂಚನ ಯೋಗಿನೋ ಯದಿ ಪರಂ ಪಶ್ಯಂತಿ ಪಶ್ಯಂತು ತೇ ।**
**ಅಸ್ಮಾಕಂ ತು ತದೇವ ಲೋಚನಚಮತ್ಕಾರಾಯ ಭೂಯಾಚ್ಚಿರಂ**
**ಕಾಲಿಂದೀಪುಲಿನೋದರೇ ಕಿಮಪಿ ಯನ್ನೀಲಂ ಮಹೋ ಧಾವತಿ ॥ ೧೨೦**

- ಮಧುಸೂದನಸರಸ್ವತೀ

ಧ್ಯಾನವನ್ನು ಅಭ್ಯಾಸಮಾಡಿ ಪಳಗಿದ ಮನಸ್ಸಿನಿಂದ ಯೋಗಿಗಳು ನಿರ್ಗುಣವೂ ನಿಷ್ಕ್ರಿಯವೂ ಆದ ಪರಂಜ್ಯೋತಿಯನ್ನು ಸಾಕ್ಷಾತ್ಕರಿಸಿಕೊಳ್ಳಲಿ. ಆದರೆ ನಮ್ಮ ಪಾಲಿಗೆ, ಯಮುನೆಯ ಮರಳಿನ ಮೇಲೆ ಓಡಾಡುವ ನೀಲಕಾಂತಿಯ ಶ್ರೀಕೃಷ್ಣನೇ ಬಹಳಕಾಲ ಕಣ್ಣುಗಳಿಗೆ ಆನಂದವನ್ನುಂಟುಮಾಡಲಿ.



## ೧೪. ಸಾಮಾನ್ಯ ನೀತಿ

**ಅಕಾಮಸ್ಯ ಕ್ರಿಯಾ ಕಾಚಿದ್ದೃಶ್ಯತೇ ನೇಹ ಕರ್ಹಿಚಿತ್ ।**
**ಯದ್ಯದ್ಧಿ ಕುರುತೇ ಕಿಂಚಿತ್ ತತ್ತತ್ ಕಾಮಸ್ಯ ಚೇಷ್ಟಿತಂ ॥ ೧**

- ಮನುಸ್ಮೃತಿ, ೨-೪

ಆಸೆಯಿಲ್ಲದೆ ಯಾವ ಕೆಲಸವೂ ಎಲ್ಲಿಯೂ ಇಲ್ಲ. ಮನುಷ್ಯನು ಮಾಡುವ ಪ್ರತಿಯೊಂದು ಕೆಲಸವೂ ಆಸೆಯಿಂದಾದುದು.

**ಅಕಾರ್ಯಕರಣಾದ್ಭೀತಃ ಕಾರ್ಯಾಣಾಂ ಚ ವಿವರ್ಜನಾತ್ ।**
**ಅಕಾಲೇ ಮಂತ್ರಭೇದಾಚ್ಚ ಯೇನ ಮಾದ್ಯೇನ್ನ ತತ್ಪಿಬೇತ್ ॥ ೨**

- ಸುಭಾಷಿತಸುಧಾನಿಧಿ

ಮಾಡಬಾರದುದನ್ನು ಮಾಡಿಯೇನೆಂಬ ಭಯದಿಂದ, ಮಾಡಬೇಕಾದುದನ್ನು ಬಿಟ್ಟುಬಿಡುವ ಕಾರಣದಿಂದ, ಅಕಾಲದಲ್ಲಿ ರಹಸ್ಯವನ್ನು ಹೊರಗೆಡಹುವ ಕಾರಣದಿಂದ- ಈ ಕಾರಣಗಳಿಗಾಗಿ ಮದವನ್ನುಂಟುಮಾಡುವ ಮದ್ಯವನ್ನು ಕುಡಿಯಬಾರದು.

**ಅಕಾರ್ಯವಾರಣೋದ್ಯುಕ್ತೋ ಮೂಢೇ ಯಃ ಪರಿಖಿದ್ಯತೇ ।**
**ವಾಗ್ವಿಸ್ತರೋ ವೃಥಾ ತಸ್ಯ ಭಸ್ಮನ್ಯಾಜ್ಯಾಹುತಿರ್ಯಥಾ ॥ ೩**

- ಉಪಮಿತಿಭವಪ್ರಪಂಚಕಥಾ - ೨೪೦

ಅಕಾರ್ಯವನ್ನು ಮಾಡದಿರಲೆಂದು ಮೂಢನಿಗೆ ಎಷ್ಟು ವಿಧವಾಗಿ ಉಪದೇಶ ಮಾಡಿದರೂ, ತೊಂದರೆ ತೆಗೆದುಕೊಂಡರೂ, ಬೂದಿಯಲ್ಲಿ ತುಪ್ಪವನ್ನು ಸುರಿದಂತೆ ವ್ಯರ್ಥ.

**ಅಕೃತ್ವಾ ಪೌರುಷಂ ಯಾ ಶ್ರೀರ್ವಿಕಾಸಿನ್ಯಪಿ ಕಿಂ ತಯಾ ।**
**ಜರದ್ಗವೋಽಪಿ ಚಾಶ್ನಾತಿ ದೈವಾದುಪಗತಂ ತೃಣಮ್ ॥ ೪**

- ಸುಭಾಷಿತ ರತ್ನಭಾಂಡಾಗಾರ

ಪುರುಷಪ್ರಯತ್ನಮಾಡದೆ ಬಂದ ಐಶ್ವರ್ಯ ಬೆಳೆಯುತ್ತಿದ್ದರೆ ತಾನೇ ಅದರಿಂದೇನು ಪ್ರಯೋಜನ ? ಅದೃಷ್ಟವಶಾತ್ ದೊರಕಿದ ಹುಲ್ಲನ್ನು ಮುದಿ ಎತ್ತೂ ಸಹ ಮೇಯುತ್ತದೆ.

**ಅರ್ಕೇ ಚೇನ್ಮಧು ವಿಂದೇತ ಕಿಮರ್ಥಂ ಪರ್ವತಂ ವ್ರಜೇತ್ ।**
**ಇಷ್ಟಸ್ಯಾರ್ಥಸ್ಯ ಸಂಸಿದ್ಧೌ ಕೋ ವಿದ್ವಾನ್ ಯತ್ನಮಾಚರೇತ್ ॥ ೫**

- ಶಾಬರಭಾಷ್ಯ, ೧-೨-೪

ದಾರಿಯಲ್ಲಿ ಎಕ್ಕದ ಗಿಡದಲ್ಲಿಯೇ ಜೇನು ಸಿಕ್ಕಿದರೆ ಬೆಟ್ಟದವರೆಗೂ ಏತಕ್ಕೆ ನಡೆಯಬೇಕು? ಬೇಕಾದ ಪದಾರ್ಥವು ಸಿಕ್ಕಿದಮೇಲೆ ವಿದ್ವಾಂಸನು ಯಾರೂ ಪ್ರಯತ್ನಮಾಡುವುದಿಲ್ಲ.

**ಅಕ್ಷರದ್ವಯಮಭ್ಯಸ್ತಂ ನಾಸ್ತಿ ನಾಸ್ತೀತಿ ಯತ್ಪುರಾ ।**
**ತದಿದಂ ದೇಹಿ ದೇಹೀತಿ ವಿಪರೀತಮುಪಸ್ಥಿತಮ್ ॥ ೬**

- ಸುಭಾಷಿತರತ್ನಭಾಂಡಾಗಾರ

ಹಿಂದೆ 'ಇಲ್ಲ, ಇಲ್ಲ' ಎಂದು ಹೇಳಿ ಅಭ್ಯಾಸಮಾಡಿದರೋ ಅದೇ ಈಗ ವಿಪರೀತವಾಗಿ 'ನೀಡು ನೀಡು' ಎಂದು ಬೇಡಬೇಕಾಯಿತು.

**ಅಗುಣಸ್ಯ ಹತಂ ರೂಪಂ ಅಶೀಲಸ್ಯ ಹತಂ ಕುಲಂ ।**
**ಅಸಿದ್ಧೇಸ್ತು ಹತಾ ವಿದ್ಯಾ ಅಭೋಗಸ್ಯ ಹತಂ ಧನಮ್ ॥ ೭**

- ಸುಭಾಷಿತರತ್ನಭಾಂಡಾಗಾರ

ಗುಣವಿಲ್ಲದವನ ರೂಪ, ಶೀಲವಿಲ್ಲದವನ ಕುಲ, ಸಿದ್ಧಿ ಪಡೆಯದವನ ವಿದ್ಯೆ, ಅನುಭವಿಸದೆ ಇರುವ ಹಣ- ಇವು ನಾಲ್ಕೂ ಹತವಾದಂತೆಯೇ.

**ಅಚಿರಾಧಿಷ್ಠಿತರಾಜ್ಯಃ ಶತ್ರುಃ ಪ್ರಕೃತಿಷ್ವರೂಢಮೂಲತ್ವಾತ್ ।**
**ನವಸಂರೋಪಣಶಿಥಿಲಸ್ತರುರಿವ ಸುಕರಃ ಸಮುದ್ಧರ್ತುಮ್ ॥ ೮**

- ಮಾಲವಿಕಾಗ್ನಿಮಿರ, ೧-೮

ಹೊಸದಾಗಿ ರಾಜ್ಯವನ್ನು ಪಡೆದು ಆಳುತ್ತಿರುವ ಶತ್ರುವು ಇನ್ನೂ ಪ್ರಜೆಗಳ ಅನುರಾಗವನ್ನು ಬೆಳೆಸಿಕೊಂಡಿರುವುದಿಲ್ಲ. ಆದುದರಿಂದ ಆಗತಾನೆ ನೆಟ್ಟಿರುವ ಗಿಡವನ್ನು ಸುಲಭವಾಗಿ ತೆಗೆಯುವುದು ಸಾಧ್ಯವಾದಂತೆ ಅಂತಹ ಶತ್ರುವನ್ನೂ ಸೋಲಿಸುವುದು ಸುಲಭ.

**ಅಜ್ಞಾನಾತ್ ಯಾ ಮಯಾ ಪೂರ್ವಂ ಶಾಖಾಪತ್ರೈರ್ವಿಯೋಜಿತಾ।**
**ಛಾಯಾರ್ಥೀ ಗ್ರೀಷ್ಮಸಂತಪ್ತಸ್ತಾಮೇವ ಪುನರಾಶ್ರಿತಃ ॥ ೯**

- ಚಾರುದತ್ತ, ೪-೫

ತಿಳಿವಳಿಕೆಯಿಲ್ಲದೆ ಯಾವ ಮರದಕೊಂಬೆಯ ಎಲೆಗಳನ್ನುದುರಿಸಿ ಬರಡು

ಮಾಡಿದೆನೋ, ಬಿಸಿಲಿನ ತಾಪದಿಂದ ಬಳಲಿ ನೆರಳಿಗೋಸ್ಕರ ಅದೇ ಮರದ ಬುಡಕ್ಕೆ ಬಂದೆನು.

**ಅಣುಭ್ಯಶ್ಚ ಮಹದ್ಭ್ಯಶ್ಚ ಶಾಸ್ತ್ರೇಭ್ಯಃ ಕುಶಲೋ ನರಃ ।**
**ಸರ್ವತಃ ಸಾರಮಾದದ್ಯಾತ್ ಪುಷ್ಪೇಭ್ಯ ಇವ ಷಟ್ಪದಃ ॥ ೧೦**

- ಭಾಗವತ, ೧೧-೮-೧೦

ಶಾಸ್ತ್ರಗಳು ಚಿಕ್ಕವಿರಲಿ ದೊಡ್ಡವಿರಲಿ ಅವೆಲ್ಲವುಗಳಿಂದಲೂ ಸಾರವಾದ ಭಾಗವನ್ನು, ದುಂಬಿಯು ಹೂಗಳಿಂದ ಮಧುವನ್ನು ಹೀರುವಂತೆ, ಬುದ್ಧಿವಂತನು ಸ್ವೀಕರಿಸಬೇಕು.

**ಅತಃ ಪರೀಕ್ಷ್ಯ ಕರ್ತವ್ಯಂ ವಿಶೇಷಾತ್ಸಂಗತಂ ರಹಃ।**
**ಅಜ್ಞಾತಹೃದಯೇಷ್ವೇವಂ ವೈರೀಭವತಿ ಸೌಹೃದಮ್ ॥ ೧೧**

- ಅಭಿಜ್ಞಾನಶಾಕುಂತಲ, ೫-೨೪

ಏಕಾಂತದಲ್ಲಿ ಗಂಡು ಹೆಣ್ಣು ಮದುವೆಯಾಗಬೇಕಾದರೆ ಚೆನ್ನಾಗಿ ಪರೀಕ್ಷಿಸಿರಬೇಕು. ಸ್ವಭಾವ ತಿಳಿಯದ ಮನುಷ್ಯರಲ್ಲಿ ಪ್ರೇಮವೂ ಹಗೆತನವಾಗಿ ಪರಿಣಮಿಸುತ್ತದೆ.

**ಅತ್ಯಂತಮಲಿನಃ ಕಾಯಃ ನವಚ್ಛಿದ್ರಸಮನ್ವಿತಃ ।**
**ಸ್ರವತ್ಯೇಷ ದಿವಾರಾತ್ರಂ ಪ್ರಾತಃಸ್ನಾನೇನ ಶುದ್ಧ್ಯತಿ ॥ ೧೨**

- ಬೃಹತ್‌ಪರಾಶರಸ್ಮೃತಿ, ೨-೯೫

ಶರೀರವು ನವದ್ವಾರಗಳಿಂದ ಕೂಡಿದೆ. ಹಗಲೂ ರಾತ್ರಿ ಕೊಳೆಯು ಬರುತ್ತದೆ. ಆದುದರಿಂದ ಇದು ಬಹಳ ಮಲಿನ. ಪ್ರತಿದಿನ ಬೆಳಗ್ಗೆ ಸ್ನಾನದಿಂದ ಮನುಷ್ಯನು ಶುದ್ಧನಾಗುತ್ತಾನೆ.

**ಅತ್ಯಾದರೋ ಭವೇದ್ಯತ್ರ ಕಾರ್ಯಕಾರಣವರ್ಜಿತಃ ।**
**ತತ್ರ ಶಂಕಾ ಪ್ರಕರ್ತವ್ಯಾ ಪರಿಣಾಮೇ ಸುಖಾವಹಾ ॥ ೧೩**

- ಪಂಚತಂತ್ರಮಿತ್ರಭೇದ - ೪೪೬

ಎಲ್ಲಿ ಯಾವ ಕಾರಣವಾಗಲೀ ಕಾರ್ಯವಾಗಲೀ ಇಲ್ಲದೆ ಬಹಳ ಹೆಚ್ಚಾದ ಆದರ ತೋರಿಸುವರೋ ಅಲ್ಲಿ ಸಂದೇಹ ಪಡಲೇಬೇಕು. ಅದು ಕೊನೆಯಲ್ಲಿ ಸುಖಕರವೇ ಆಗುತ್ತದೆ.

**ಅತ್ರಾಮೋದಮರಂದಯೋರ್ನ ಕಣಿಕಾ ಕೋಷಾಂತರಸ್ಥಾಯಿನೀ**
**ಪತ್ರಚ್ಛತ್ರಪರಂಪರಾಽಪಿ ವಿಫಲಾರಂಭಾ ಕಿಯದ್ವರ್ಣ್ಯತಾಂ ।**
**ಏತತ್ಸರ್ವಮಪೂರ್ವಶಿಲ್ಪಿರಚನಾಚಾತುರ್ಯಮುಚ್ಚಾವಚಂ**
**ಕಿಂ ಮೋಹಾದಳಿಪುತ್ರ ಚಿತ್ರಕಮಲೇ ಭೂಯಃ ಪರಿಭ್ರಾಮ್ಯಸಿ ॥ ೧೪**

- ಅನ್ಯೋಕ್ತಿಸ್ತಬಕ - ೬೭

ಅಯ್ಯಾ ಭ್ರಮರ, ನೀನು ಇನ್ನೂ ಚಿಕ್ಕವ, ಏನೂ ತಿಳಿಯದು. ಇದು ಚಿತ್ರದಲ್ಲಿ ಬರೆದಿರುವ ಕಮಲ. ಇದರಲ್ಲಿ ವಾಸನೆಯಾಗಲೀ ಮಕರಂದವಾಗಲೀ ಲವಲೇಶವೂ ಇಲ್ಲ. ದಳಗಳೂ ಇಲ್ಲ. ನಿನ್ನ ಯತ್ನವೂ ವ್ಯರ್ಥವೆಂದು ಎಷ್ಟು ಬಣ್ಣಿಸಲಿ. ಇದು ಕೇವಲ ಒಬ್ಬ ಶಿಲ್ಪಿಯ ನಾನಾ ವಿಧವಾದ ರಚನಾ ಕೌಶಲ ಮಾತ್ರ. ಸುಮ್ಮನಾಗು.

**ಅತಿಕ್ರಾಂತಸುಖಾಃ ಕಾಲಾಃ ಪ್ರತ್ಯುಪಸ್ಥಿತದಾರುಣಾಃ ।**
**ಶ್ವಃ ಶ್ವಃ ಪಾಪೀಯದಿವಸಾ ಪೃಥಿವೀ ಗತಯೌವನಾ ॥ ೧೫**

- (ವ್ಯಾಸವಚನ) ಧ್ವನ್ಯಾಲೋಕ - ೩

(ಈ ಕಲಿಯುಗದಲ್ಲಿ) ಸುಖದ ಕಾಲ ಕಳೆದುಹೋಯಿತು. ಕ್ರೂರವಾದ ಶೋಕಪ್ರಸಂಗಗಳು ಒದಗುತ್ತವೆ. ನಾಳೆ ನಾಳೆಯೆಂಬುದು ಕ್ರಮವಾಗಿ ಪಾಪೀಯವಾಗುತ್ತ ಹೋಗುತ್ತದೆ. ಪೃಥ್ವಿಯ ಯೌವನ ಕಳೆದುಹೋಯಿತು.

**ಅತಿಪರಿಚಯಾದವಜ್ಞಾ ಸಂತತಗಮನಾದನಾದರೋ ಭವತಿ ।**
**ಮಲಯೇ ಭಿಲ್ಲಪುರಂಧ್ರೀ ಚಂದನತರುಕಾಷ್ಠಮಿಂಧನಂ ಕುರುತೇ ॥ ೧೬**

- ಸಮಯೋಚಿತಪದ್ಯಮಾಲಿಕಾ

ಪರಿಚಯವು ಅತಿಯಾದರೆ ಉಪೇಕ್ಷೆಯುಂಟಾಗುತ್ತದೆ. ಯಾವಾಗಲೂ ಹೋಗುತ್ತಿದ್ದರೆ ಆದರವಿರುವುದಿಲ್ಲ. ಮಲಯಗಿರಿಯಲ್ಲಿ ಬೇಡಿತಿ ಶ್ರೀಗಂಧದ ಮರವನ್ನು ಸೌದೆಯಾಗಿ ಬಳಸುತ್ತಾಳೆ.

**ಅತಿರೂಪಾದ್ ಹೃತಾ ಸೀತಾಽತಿಗರ್ವಾದ್ರಾವಣೋ ಹತಃ ।**
**ಅತಿದಾನಾದ್ ಬಲಿರ್ಬದ್ಧಃ ಅತಿ ಸರ್ವತ್ರ ವರ್ಜಯೇತ್ ॥ ೧೭**

- ಸಮಯೋಚಿತಪದ್ಯಮಾಲಿಕಾ

ಅತಿಯಾದ ಸೌಂದರ್ಯವಿದ್ದುದರಿಂದ ಸೀತೆ ಅಪಹೃತಳಾದಳು. ಅತಿ ಗರ್ವದಿಂದ ರಾವಣನು ಹತನಾದನು. ಅತಿದಾನದಿಂದ ಬಲಿಚಕ್ರವರ್ತಿ ಬಂಧನಕ್ಕೊಳಗಾದನು. ಆದ್ದರಿಂದ ಎಲ್ಲ ವಿಷಯದಲ್ಲಿಯೂ 'ಅತಿ' ಮಾಡಬಾರದು.

**ಅತ್ಯೇತಿ ರಜನೀ ಯಾತು ಸಾ ನ ಪ್ರತಿನಿವರ್ತತೇ ।**
**ಯಾತ್ಯೇವ ಯಮುನಾ ಪೂರ್ಣಾ ಸಮುದ್ರಂ ಲವಣಾರ್ಣವಮ್ ॥ ೧೮**

- ರಾಮಾಯಣ, ಅಯೋಧ್ಯಾ. ೧೦೫-೧೯

ಕಳೆದುಹೋದ ರಾತ್ರಿ ಪುನಃ ಬರುವುದಿಲ್ಲ. ತುಂಬಿ ಹರಿಯುವ ಯಮುನೆ ಸಮುದ್ರವನ್ನು ಸೇರುವುದೇ ಹೊರತು ಪುನಃ ಹಿಂದಿರುಗುವುದಿಲ್ಲ.

**ಅರ್ಥನಾಶಂ ಮನಸ್ತಾಪಂ ಗೃಹೇ ದುಶ್ಚರಿತಾನಿ ಚ ।**
**ವಂಚನಂ ಚಾಪಮಾನಂ ಚ ಮತಿಮಾನ್ನ ಪ್ರಕಾಶಯೇತ್ ॥ ೧೯**

- ಸುಭಾಷಿತರತ್ನಭಾಂಡಾಗಾರ

ಹಣ ನಷ್ಟವಾದದ್ದು, ದ್ವೇಷ ಮನೆಯಲ್ಲಿ ನಡೆಯುವ ಕೆಟ್ಟ ಕೆಲಸ, ಮೋಸ ಹೋದದ್ದು, ಅಪಮಾನವಾದದ್ದು ಇವುಗಳನ್ನು ಬುದ್ಧಿವಂತನಾದವನು ಬಹಿರಂಗ ಪಡಿಸಬಾರದು.

**ಅರ್ಥಾನಾಮರ್ಜನಂ ಕಾರ್ಯಂ ವರ್ಧನಂ ರಕ್ಷಣಂ ತಥಾ ।**
**ಭಕ್ಷ್ಯಮಾಣೋ ನಿರಾದಾಯಃ ಸುಮೇರುರಪಿ ಹೀಯತೇ ॥ ೨೦**

- ಸುಭಾಷಿತರತ್ನಭಾಂಡಾಗಾರ

ಹಣ ಸಂಪಾದಿಸಬೇಕು. ಅಷ್ಟೇ ಅಲ್ಲ, ಬೆಳೆಸಬೇಕು ಮತ್ತು ಕಾಪಾಡಬೇಕು. ಆದಾಯವಿಲ್ಲದೆ ತಿಂದುಹಾಕುತ್ತಿದ್ದರೆ ಮೇರು ಪರ್ವತವೂ ಕರಗಿಹೋಗುತ್ತದೆ.

**ಅದ್ಭಿರ್ಗಾತ್ರಾಣಿ ಶುಧ್ಯಂತಿ ಮನಃ ಸತ್ಯೇನ ಶುಧ್ಯತಿ ।**
**ವಿದ್ಯಾತಪೋಭ್ಯಾಂ ಭೂತಾತ್ಮಾ ಬುದ್ಧಿರ್ಜ್ಞಾನೇನ ಶುಧ್ಯತಿ ॥ ೨೧**

- ಮನುಸ್ಮೃತಿ, ೫-೧೦೯

ಅವಯವಗಳು ನೀರಿನಿಂದ ನಿರ್ಮಲವಾಗುತ್ತವೆ. ಸತ್ಯದಿಂದ ಮನಸ್ಸು ಶುದ್ಧವಾಗುತ್ತದೆ. ವಿದ್ಯೆಯಿಂದಲೂ ತಪಸ್ಸಿನಿಂದಲೂ ಜೀವಾತ್ಮನೂ, ಜ್ಞಾನದಿಂದ ಬುದ್ಧಿಯೂ ಸ್ವಚ್ಛವಾಗುತ್ತವೆ.

**ಅದ್ಭಿಃ ಶುಧ್ಯಂತಿ ಗಾತ್ರಾಣಿ ಬುದ್ಧಿರ್ಜ್ಞಾನೇನ ಶುಧ್ಯತಿ ।**
**ಅಹಿಂಸಯಾ ಚ ಭೂತಾತ್ಮಾ ಮನಃ ಸತ್ಯೇನ ಶುಧ್ಯತಿ ॥ ೨೨**

- ಬೋಧಾಯನಧರ್ಮಸೂತ್ರ - ವಿವರಣ, ೧-೫-೩

ದೇಹವು ನೀರಿನಿಂದಲೂ ಬುದ್ಧಿಯು ತತ್ತ್ವಜ್ಞಾನದಿಂದಲೂ ಕರ್ತನಾದ ಮನುಷ್ಯನು ಅಹಿಂಸೆಯಿಂದಲೂ ಪರಿಶುದ್ಧರಾಗುತ್ತಾನೆ.

**ಅದೃಢಂ ಚ ಹತಂ ಜ್ಞಾನಂ ಪ್ರಮಾದೇನ ಹತಂ ಶ್ರುತಮ್ ।**
**ಸಂದಿಗ್ಧೋ ಹಿ ಹತೋ ಮಂತ್ರೋ ವ್ಯಗ್ರಚಿತ್ತೋ ಹತೋ ಜಪಃ ॥ ೨೩**

- ಭಾಗವತಮಾಹಾತ್ಮ್ಯ, ೫-೭೩

ದೃಢವಲ್ಲದ ಜ್ಞಾನ ಪ್ರಯೋಜನವಿಲ್ಲ; ಹಾಗೆಯೇ ಪ್ರಮಾದವಶದಿಂದ ವಿದ್ಯೆಯು ಹಾಳಾಗುತ್ತದೆ. ಸಂದೇಹದಿಂದ ಮಂತ್ರವು ಸಿದ್ಧಿಸುವುದಿಲ್ಲ, ಕಳವಳಗೊಂಡ ಮನಸ್ಸಿನಿಂದ ಮಾಡಿದ ಜಪವು ಫಲಿಸುವುದಿಲ್ಲ.

**ಅಧೀಯಾನಃ ಪಂಡಿತಂ ಮನ್ಯಮಾನೋ**
**ಯೋ ವಿದ್ಯಯಾ ಹಂತಿ ಯಶಃ ಪರೇಷಾಂ ।**
**ತಸ್ಯಾಂತವಂತಶ್ಚ ಭವಂತಿ ಲೋಕಾ**
**ನ ಚಾಸ್ಯ ತದ್ ಬ್ರಹ್ಮ ಫಲಂ ದದಾತಿ ॥ ೨೪**

- ಮಹಾಭಾರತ, ಆದಿ. ೯೦-೨೩

ವಿದ್ಯಾರ್ಜನೆ ಮಾಡತಕ್ಕ ಯಾವನು ತಾನು ಪಂಡಿತನೆಂದು ತಿಳಿದು ಪರರ ಕೀರ್ತಿಯನ್ನು ತನ್ನ ವಿದ್ಯೆಯಿಂದ ನಾಶಪಡಿಸುವನೋ, ಅವನಿಗೆ ದೊರೆಯುವ ಲೋಕವು ಶಾಶ್ವತವಲ್ಲ. ಅವನು ಕಲಿತ ವೇದವು ಫಲವನ್ನು ಕೊಡುವುದಿಲ್ಲ.

**ಅಧೋಽಧಃ ಪಶ್ಯತಃ ಕಸ್ಯ ಮಹಿಮಾ ನೋಪಚೀಯತೇ ।**
**ಉಪರ್ಯುಪರಿ ಪಶ್ಯಂತಃ ಸರ್ವ ಏವ ದರಿದ್ರತಿ ॥ ೨೫**

- ಸಮಯೋಚಿತಪದ್ಯಮಾಲಿಕಾ

ನಮಗಿಂತ ಕೆಳಮಟ್ಟದವರನ್ನು ನೋಡುತ್ತ ಹೋದರೆ ಯಾರ ಮಹಿಮೆ ತಾನೆ ಹೆಚ್ಚುವುದಿಲ್ಲ. ಮೇಲ್ಮಟ್ಟದವರನ್ನು ನೋಡುತ್ತ ಹೋದರೆ ಎಲ್ಲರೂ ದರಿದ್ರರೇ ಆಗುತ್ತಾರೆ.

**ಅನಲ್ಪಕಂ ಧರಾಯಾಂ ಹಿ ಸರ್ವಜ್ಞಸ್ಯಾಪಿ ದಾರುಣಾಃ ।**
**ಆರೋಪಯಂತಿ ಮಾಲಿನ್ಯಂ ಕಾಕೋಲಾ ಇವ ತೇ ಖಲಾಃ ॥೨೬**

- ವಿಶ್ವಗುಣಾದರ್ಶ - ೨೩೮

ಈ ಲೋಕದಲ್ಲಿ ಕ್ರೂರಸ್ವಭಾವದ ದುಷ್ಟರು ಸರ್ವಜ್ಞನಿಗೂ ಸಹ (ಶಿವನಿಗೂ ಸಹ) ಕಾಲಕೂಟವಿಷದಂತೆ ಮಾಲಿನ್ಯವನ್ನು ಹೊರಿಸುತ್ತಾರೆ.

**ಅನ್ಯಥಾ ಪರಮಂ ತತ್ತ್ವಂ ಜನಾಃ ಕ್ಲಿಶ್ಯಂತಿ ಚಾನ್ಯಥಾ ।**
**ಅನ್ಯಥಾ ಶಾಸ್ತ್ರಸದ್ಭಾವೋ ವ್ಯಾಖ್ಯಾಂ ಕುರ್ವಂತಿ ಚಾನ್ಯಥಾ ॥ ೨೭**

- ಗರುಡಪುರಾಣ, ೧೬-೭೬

**ಅತ್ಯೇತಿ ರಜನೀ ಯಾತು ಸಾ ನ ಪ್ರತಿನಿವರ್ತತೇ ।**
**ಯಾತ್ಯೇವ ಯಮುನಾ ಪೂರ್ಣಾ ಸಮುದ್ರಂ ಲವಣಾರ್ಣವಮ್ ॥ ೧೮**

- ರಾಮಾಯಣ, ಅಯೋಧ್ಯಾ. ೧೦೫-೧೯

ಕಳೆದುಹೋದ ರಾತ್ರಿ ಪುನಃ ಬರುವುದಿಲ್ಲ. ತುಂಬಿ ಹರಿಯುವ ಯಮುನೆ ಸಮುದ್ರವನ್ನು ಸೇರುವುದೇ ಹೊರತು ಪುನಃ ಹಿಂದಿರುಗುವುದಿಲ್ಲ.

**ಅರ್ಥನಾಶಂ ಮನಸ್ತಾಪಂ ಗೃಹೇ ದುಶ್ಚರಿತಾನಿ ಚ ।**
**ವಂಚನಂ ಚಾಪಮಾನಂ ಚ ಮತಿಮಾನ್ನ ಪ್ರಕಾಶಯೇತ್ ॥ ೧೯**

- ಸುಭಾಷಿತರತ್ನಭಾಂಡಾಗಾರ

ಹಣ ನಷ್ಟವಾದದ್ದು, ದ್ವೇಷ ಮನೆಯಲ್ಲಿ ನಡೆಯುವ ಕೆಟ್ಟ ಕೆಲಸ, ಮೋಸ ಹೋದದ್ದು, ಅಪಮಾನವಾದದ್ದು ಇವುಗಳನ್ನು ಬುದ್ಧಿವಂತನಾದವನು ಬಹಿರಂಗ ಪಡಿಸಬಾರದು.

**ಅರ್ಥಾನಾಮರ್ಜನಂ ಕಾರ್ಯಂ ವರ್ಧನಂ ರಕ್ಷಣಂ ತಥಾ ।**
**ಭಕ್ಷ್ಯಮಾಣೋ ನಿರಾದಾಯಃ ಸುಮೇರುರಪಿ ಹೀಯತೇ ॥ ೨೦**

- ಸುಭಾಷಿತರತ್ನಭಾಂಡಾಗಾರ

ಹಣ ಸಂಪಾದಿಸಬೇಕು. ಅಷ್ಟೇ ಅಲ್ಲ. ಬೆಳೆಸಬೇಕು ಮತ್ತು ಕಾಪಾಡಬೇಕು. ಆದಾಯವಿಲ್ಲದೆ ತಿಂದುಹಾಕುತ್ತಿದ್ದರೆ ಮೇರು ಪರ್ವತವೂ ಕರಗಿಹೋಗುತ್ತದೆ.

**ಅದ್ಭಿರ್ಗಾತ್ರಾಣಿ ಶುಧ್ಯಂತಿ ಮನಃ ಸತ್ಯೇನ ಶುಧ್ಯತಿ ।**
**ವಿದ್ಯಾತಪೋಭ್ಯಾಂ ಭೂತಾತ್ಮಾ ಬುದ್ಧಿರ್ಜ್ಞಾನೇನ ಶುಧ್ಯತಿ ॥ ೨೧**

- ಮನುಸ್ಮೃತಿ, ೫-೧೦೯

ಅವಯವಗಳು ನೀರಿನಿಂದ ನಿರ್ಮಲವಾಗುತ್ತವೆ. ಸತ್ಯದಿಂದ ಮನಸ್ಸು ಶುದ್ಧವಾಗುತ್ತದೆ. ವಿದ್ಯೆಯಿಂದಲೂ ತಪಸ್ಸಿನಿಂದಲೂ ಜೀವಾತ್ಮನೂ, ಜ್ಞಾನದಿಂದ ಬುದ್ಧಿಯೂ ಸ್ವಚ್ಛವಾಗುತ್ತವೆ.

**ಅದ್ಭಿಃ ಶುಧ್ಯಂತಿ ಗಾತ್ರಾಣಿ ಬುದ್ಧಿರ್ಜ್ಞಾನೇನ ಶುಧ್ಯತಿ ।**
**ಅಹಿಂಸಯಾ ಚ ಭೂತಾತ್ಮಾ ಮನಃ ಸತ್ಯೇನ ಶುಧ್ಯತಿ ॥ ೨೨**

- ಬೋಧಾಯನಧರ್ಮಸೂತ್ರ - ವಿವರಣ, ೧-೫-೩

ದೇಹವು ನೀರಿನಿಂದಲೂ ಬುದ್ಧಿಯು ತತ್ತ್ವಜ್ಞಾನದಿಂದಲೂ ಕರ್ತನಾದ ಮನುಷ್ಯನು ಅಹಿಂಸೆಯಿಂದಲೂ ಪರಿಶುದ್ಧರಾಗುತ್ತಾನೆ.

**ಅದೃಢಂ ಚ ಹತಂ ಜ್ಞಾನಂ ಪ್ರಮಾದೇನ ಹತಂ ಶ್ರುತಮ್ ।**
**ಸಂದಿಗ್ಧೋ ಹಿ ಹತೋ ಮಂತ್ರೋ ವ್ಯಗ್ರಚಿತ್ತೋ ಹತೋ ಜಪಃ ॥ ೨೩**

- ಭಾಗವತಮಾಹಾತ್ಮ್ಯ, ೫-೭೩

ದೃಢವಲ್ಲದ ಜ್ಞಾನ ಪ್ರಯೋಜನವಿಲ್ಲ; ಹಾಗೆಯೇ ಪ್ರಮಾದವಶದಿಂದ ವಿದ್ಯೆಯು ಹಾಳಾಗುತ್ತದೆ. ಸಂದೇಹದಿಂದ ಮಂತ್ರವು ಸಿದ್ಧಿಸುವುದಿಲ್ಲ, ಕಳವಳಗೊಂಡ ಮನಸ್ಸಿನಿಂದ ಮಾಡಿದ ಜಪವು ಫಲಿಸುವುದಿಲ್ಲ.

**ಅಧೀಯಾನಃ ಪಂಡಿತಂ ಮನ್ಯಮಾನೋ**
**ಯೋ ವಿದ್ಯಯಾ ಹಂತಿ ಯಶಃ ಪರೇಷಾಂ ।**
**ತಸ್ಯಾಂತವಂತಶ್ಚ ಭವಂತಿ ಲೋಕಾ**
**ನ ಚಾಸ್ಯ ತದ್ ಬ್ರಹ್ಮ ಫಲಂ ದದಾತಿ ॥ ೨೪**

- ಮಹಾಭಾರತ, ಆದಿ. ೯೦-೨೩

ವಿದ್ಯಾರ್ಜನೆ ಮಾಡತಕ್ಕ ಯಾವನು ತಾನು ಪಂಡಿತನೆಂದು ತಿಳಿದು ಪರರ ಕೀರ್ತಿಯನ್ನು ತನ್ನ ವಿದ್ಯೆಯಿಂದ ನಾಶಪಡಿಸುವನೋ, ಅವನಿಗೆ ದೊರೆಯುವ ಲೋಕವು ಶಾಶ್ವತವಲ್ಲ. ಅವನು ಕಲಿತ ವೇದವು ಫಲವನ್ನು ಕೊಡುವುದಿಲ್ಲ.

**ಅಧೋಽಧಃ ಪಶ್ಯತಃ ಕಸ್ಯ ಮಹಿಮಾ ನೋಪಚೀಯತೇ ।**
**ಉಪರ್ಯುಪರಿ ಪಶ್ಯಂತಃ ಸರ್ವ ಏವ ದರಿದ್ರತಿ ॥ ೨೫**

- ಸಮಯೋಚಿತಪದ್ಯಮಾಲಿಕಾ

ನಮಗಿಂತ ಕೆಳಮಟ್ಟದವರನ್ನು ನೋಡುತ್ತ ಹೋದರೆ ಯಾರ ಮಹಿಮೆ ತಾನೆ ಹೆಚ್ಚುವುದಿಲ್ಲ. ಮೇಲ್ಮಟ್ಟದವರನ್ನು ನೋಡುತ್ತ ಹೋದರೆ ಎಲ್ಲರೂ ದರಿದ್ರರೇ ಆಗುತ್ತಾರೆ.

**ಅನಲ್ಪಕಂ ಧರಾಯಾಂ ಹಿ ಸರ್ವಜ್ಞಸ್ಯಾಪಿ ದಾರುಣಾಃ ।**
**ಆರೋಪಯಂತಿ ಮಾಲಿನ್ಯಂ ಕಾಕೋಲಾ ಇವ ತೇ ಖಲಾಃ ॥೨೬**

- ವಿಶ್ವಗುಣಾದರ್ಶ - ೨೩೮

ಈ ಲೋಕದಲ್ಲಿ ಕ್ರೂರಸ್ವಭಾವದ ದುಷ್ಟರು ಸರ್ವಜ್ಞನಿಗೂ ಸಹ (ಶಿವನಿಗೂ ಸಹ) ಕಾಲಕೂಟವಿಷದಂತೆ ಮಾಲಿನ್ಯವನ್ನು ಹೊರಿಸುತ್ತಾರೆ.

**ಅನ್ಯಥಾ ಪರಮಂ ತತ್ತ್ವಂ ಜನಾಃ ಕ್ಲಿಶ್ಯಂತಿ ಚಾನ್ಯಥಾ ।**
**ಅನ್ಯಥಾ ಶಾಸ್ತ್ರಸದ್ಭಾವೋ ವ್ಯಾಖ್ಯಾಂ ಕುರ್ವಂತಿ ಚಾನ್ಯಥಾ ॥ ೨೭**

- ಗರುಡಪುರಾಣ, ೧೬-೭೬

ಶ್ರೇಷ್ಠವಾದ ತತ್ತ್ವವೇ ಬೇರೆ. ಅದನ್ನರಿಯದೆ ಜನರು ಬೇರೆ ರೀತಿಯಲ್ಲಿ ಕಷ್ಟಪಡುತ್ತಾರೆ. ಶಾಸ್ತ್ರವು ಹೇಳಿರುವ ರೀತಿಯೇ ಬೇರೆ. ವಿಧವಿಧವಾಗಿ ವ್ಯಾಖ್ಯಾನ ಮಾಡುತ್ತಾರೆ.

**ಅನ್ಯಮಾಶ್ರಯತೇ ಲಕ್ಷ್ಮೀಸ್ತ್ವನ್ಯಮನ್ಯಂ ಚ ಮೇದಿನೀ ।**
**ಅನನ್ಯಗಾಮಿನೀ ಪುಂಸಾಂ ಕೀರ್ತಿರೇಕಾ ಪತಿವ್ರತಾ ॥ ೨೮**

- ಸುಭಾಷಿತರತ್ನಭಾಂಡಾಗಾರ

ಐಶ್ವರ್ಯ ಮತ್ತೊಬ್ಬನನ್ನು ಆಶ್ರಯಿಸುತ್ತದೆ. ಭೂಮಿ ಒಬ್ಬನಿಂದ ಒಬ್ಬನನ್ನು ಸೇರುತ್ತದೆ. ಆದರೆ ಮನುಷ್ಯರಿಗೆ ಕೀರ್ತಿ ಎಂಬುದು ಒಂದೇ. ಮತ್ತೊಬ್ಬರನ್ನೂ ಸೇರದ ಪತಿವ್ರತೆಯಂತೆ ನಿಷ್ಠೆ ಹೊಂದಿರುತ್ತೆ.

**ಅನಿಷ್ಟಾದಿಷ್ಟಲಾಭೇಽಪಿ ನಾಯತಿರ್ಜಾಯತೇ ಶುಭಾ ।**
**ಯತ್ರಾಸ್ತಿ ವಿಷಸಂಸರ್ಗೋಽಮೃತಂ ತದಪಿ ಮೃತ್ಯವೇ ॥ ೨೯**

- ಹಿತೋಪದೇಶ, ಮಿತ್ರಲಾಭ - ೫

ಅನಿಷ್ಟ ವಸ್ತುವಿನಿಂದ ಇಷ್ಟಪ್ರಾಪ್ತಿಯಾದಾಗಲೂ ಭವಿಷ್ಯ ಒಳ್ಳೆಯದಾಗುವುದಿಲ್ಲ. ವಿಷಸಂಪರ್ಕವಿರುವ ಅಮೃತವೂ ಕೂಡ ಸಾವಿಗೆ ಕಾರಣವಾಗುತ್ತದೆ.

**ಅನಿತ್ಯೋ ವಿಜಯೋ ಯಸ್ಮಾತ್ ದೃಶ್ಯತೇ ಯುಧ್ಯಮಾನಯೋಃ ।**
**ಪರಾಜಯಶ್ಚ ಸಂಗ್ರಾಮೇ ತಸ್ಮಾದ್ಯುದ್ಧಂ ವಿವರ್ಜಯೇತ್ ॥ ೩೦**

- ಮನುಸ್ಮೃತಿ, ೭-೧೯೯

ಯುದ್ಧದಲ್ಲಿ ಭಾಗವಹಿಸಿದ ಇಬ್ಬರಲ್ಲಿ ಯಾರು ಗೆಲ್ಲುವರು ಸೋಲುವರು ಹೇಳಲಾಗುವುದಿಲ್ಲ. ವಿಜಯ, ಪರಾಜಯ, ಅನಿತ್ಯ. ಆದುದರಿಂದ ಯುದ್ಧ ಮಾಡಬಾರದು.

**ಅನುಗಂತುಂ ಸತಾಂ ಧರ್ಮ ಕೃತ್ಸ್ನಂ ಯದಿ ನ ಶಕ್ಯತೇ ।**
**ಸ್ವಲ್ಪಮಪ್ಯನುಗಂತವ್ಯಂ ಮಾರ್ಗಸ್ಥೋ ನಾವಸೀದತಿ ॥ ೩೧**

ಸಜ್ಜನರ ಧರ್ಮವನ್ನು ಪೂರ್ಣವಾಗಿ ಅನುಸರಿಸಲು ಆಗದೇ ಹೋದರೆ ಸ್ವಲ್ಪವನ್ನಾದರೂ ನಡೆಯಬೇಕು. ಆ ದಾರಿಯಲ್ಲಿ ನಡೆಯುವವನು ನಾಶ ವಾಗುವುದಿಲ್ಲ.

**ಅನೃತಂ ಚಾಟುವಾದಶ್ಚ ಧನಯೋಗೋ ಮಹಾನಯಂ ।**
**ಸತ್ಯಂ ವೈದುಷ್ಯಮಿತ್ಯೇಷ ಯೋಗೋ ದಾರಿದ್ರ್ಯಕಾರಕಃ ॥ ೩೨**

- ಕಲಿವಿಡಂಬನ - ೩೨

ಸುಳ್ಳು ಮತ್ತು ಮುಖಸ್ತುತಿಗಳು ಧನಯೋಗವನ್ನು ಕೊಡುತ್ತವೆ ! ಸತ್ಯ ಮತ್ತು ಪಾಂಡಿತ್ಯಗಳು ದಾರಿದ್ರ್ಯಯೋಗವನ್ನು ಕೊಡುತ್ತವೆ!

**ಅನಿರ್ಲೋಡಿತಕಾರ್ಯಸ್ಯ ವಾಗ್ಜಾಲಂ ವಾಗ್ಮಿನೋ ವೃಥಾ ।**
**ನಿಮಿತ್ತಾದಪರಾದ್ಧೇಷೋರ್ಧಾನುಷ್ಕಸ್ಯೇವ ವಲ್ಗಿತಮ್ ॥ ೩೩**

- ಶಿಶುಪಾಲವಧ, ೨-೨೭

ಯಾರು ವಿಷಯವನ್ನು ಅಥವಾ ಮಾಡಬೇಕಾದ ಕೆಲಸವನ್ನು ಚೆನ್ನಾಗಿ ತಿಳಿಯದೆ ಮಾತನಾಡುತ್ತಾನೆಯೋ ಅವನು ಎಷ್ಟೇ ಉತ್ತಮ ಮಾತುಗಾರನಾಗಿರಲಿ ಅವನ ಮಾತು ವ್ಯರ್ಥ. ಗುರಿಯನ್ನು ತಪ್ಪಿದ ಬಾಣ ಬಿಟ್ಟ ಬಿಲ್ಲುಗಾರನ ಜಂಭದ ಮಾತುಗಳಿಗೆ ಅವುಗಳನ್ನು ಹೋಲಿಸಬಹುದು.

**ಅನೇಕಾನಿ ಚ ಶಾಸ್ತ್ರಾಣಿ ಸ್ವಲ್ಪಾಯುರ್ವಿಘ್ನಕೋಟಯಃ ।**
**ತಸ್ಮಾತ್ಸಾರಂ ವಿಜಾನೀಯಾತ್ ಕ್ಷೀರಂ ಹಂಸ ಇವಾಂಭಸಿ ॥ ೩೪**

- ಗರುಡಪುರಾಣ, ೧೬-೮೪

ಶಾಸ್ತ್ರಗಳು ಅನೇಕ. ಆಯಸ್ಸು ಸ್ವಲ್ಪ. ವಿಘ್ನಗಳು ಅನೇಕ. ಆದುದರಿಂದ ಹಂಸವು ನೀರನ್ನು ಬಿಟ್ಟು ಹಾಲನ್ನು ಮಾತ್ರ ಗ್ರಹಿಸುವಂತೆ ಸಾರವನ್ನು ತಿಳಿಯಬೇಕು.

**ಅಪ್ರಕಟೀಕೃತಶಕ್ತಿಃ ಶಕ್ತೋಽಪಿ ಜನಸ್ತಿರಸ್ಕ್ರಿಯಾಂ ಲಭತೇ ।**
**ನಿವಸನ್ನಂತರ್ದಾರುಣಿ ಲಂಘ್ಯೋ ವಹ್ನಿರ್ನ ತು ಜ್ವಲಿತಃ ॥ ೩೫**

- ಪಂಚತಂತ್ರ, ಮಿತ್ರಭೇದ - ೩೨

ಶಕ್ತನಾಗಿದ್ದರೂ ತನ್ನ ಶಕ್ತಿಯನ್ನು ತೋರದಿದ್ದರೆ ಜನರ ತಿರಸ್ಕಾರಕ್ಕೆ ಒಳಗಾಗುತ್ತಾನೆ. ಮರದೊಳಗೆ ಮರೆಯಾಗಿರುವ ಬೆಂಕಿಯನ್ನು ದಾಟಬಹುದು ; ಆದರೆ ಅದು ಪ್ರಜ್ವಲಿಸುವಾಗ ದಾಟಲು ಆಗಲಾರದು.

**ಅಪ್ರಗಲ್ಭಸ್ಯ ಯಾ ವಿದ್ಯಾಕೃಪಣಸ್ಯ ಚ ಯದ್ಧನಂ ।**
**ಯಚ್ಚ ಬಾಹುಬಲಂ ಭೀರೋರ್ವ್ಯರ್ಥಮೇತತ್ತ್ರಯಂ ಭುವಿ ॥೩೬**

- ಭೋಜಪ್ರಬಂಧ

ಧೀರನೂ ಸಮರ್ಥನೂ ಅಲ್ಲದವನ ವಿದ್ಯೆ, ಜಿಪುಣನ ಹಣ, ಹೇಡಿಯ ಭುಜ ಪರಾಕ್ರಮ - ಈ ಮೂರೂ ಲೋಕದಲ್ಲಿ ವ್ಯರ್ಥ.

**ಅಪರಾಧಂ ಸಹೇತಾಲ್ಪಂ ತುಷ್ಯೇದಲ್ಪೇಽಪಿ ಚೋದಯೇ ।**
**ಮಹೋಪಕಾರಾಂಶ್ಚಾಧ್ಯಕ್ಷಾನ್ ಪ್ರಗ್ರಹೇಣಾಭಿಪೂಜಯೇತ್ ॥ ೩೭**

- ಕೌಟಿಲ್ಯ

ಸಣ್ಣ ತಪ್ಪುಗಳನ್ನು ಸಹಿಸಬೇಕು. ಸ್ವಲ್ಪ ಏಳಿಗೆಯಾದರೂ ಸಂತೋಷ ಪಡಬೇಕು. ಪ್ರತ್ಯಕ್ಷವಾಗಿ ಹೆಚ್ಚು ಉಪಕಾರ ಮಾಡಿದವರನ್ನು ಆತ್ಮೀಯತೆಯಿಂದ ಗೌರವಿಸಬೇಕು.

**ಅಪ್ರಾಜ್ಞೇನ ಚ ಕಾತರೇಣ ಚ ಗುಣಃ ಸ್ಯಾದ್ಭಕ್ತಿಯುಕ್ತೇನ ಕಃ**
**ಪ್ರಜ್ಞಾವಿಕ್ರಮಶಾಲಿನೋಽಪಿ ಹಿ ಭವೇತ್ ಕಿಂ ಭಕ್ತಿಹೀನಾತ್ಫಲಂ ।**
**ಪ್ರಜ್ಞಾವಿಕ್ರಮಭಕ್ತಯಃ ಸಮುದಿತಾಃ ಯೇಷಾಂ ಗುಣಾ ಭೂತಯೇ**
**ತೇ ಭೃತ್ಯಾ ನೃಪತೇಃ ಕಲತ್ರಮಿತರೇ ಸಂಪತ್ಸು ಚಾಪತ್ಸು ಚ ॥ ೩೮**

- ಮುದ್ರಾರಾಕ್ಷಸ, ೧-೧೫

ಬುದ್ಧಿಯಿಲ್ಲದವನೂ ಹೇಡಿಯೂ ಒಂದು ವೇಳೆ ಸ್ವಾಮಿ ಭಕ್ತಿಯಿಂದ ಕೂಡಿದ್ದರೂ ಏನೂ ಸಹಾಯ ಮಾಡಲಾರ. ಜಾಣತನ ಪರಾಕ್ರಮವಿದ್ದರೂ ಭಕ್ತಿಯಿಲ್ಲದವನೂ ಸಹ ಸಹಾಯಮಾಡಲಾರ. ಯಾರಲ್ಲಿ ಜಾಣತನ, ಪರಾಕ್ರಮ, ಭಕ್ತಿ ಮೂರೂ ಒಟ್ಟಿಗೆ ಇವೆಯೋ ಅವರು ನಿಜವಾಗಿಯೂ ರಾಜನ ಏಳಿಗೆಗೆ ಕಾರಣರು. ಇತರರು ಎಲ್ಲ ಕಾಲಗಳಲ್ಲಿಯೂ ಬರಿಯ ಪೋಷ್ಯವರ್ಗದವರು.

**ಅಪೂಜ್ಯಾ ಯತ್ರ ಪೂಜ್ಯಂತೇ ಪೂಜ್ಯಾನಾಂ ತು ವಿಮಾನನಾ ।**
**ತ್ರೀಣಿ ತತ್ರ ಪ್ರವರ್ತಂತೇ ದುರ್ಭಿಕ್ಷಂ ಮರಣಂ ಭಯಮ್ ॥ ೩೯**

- ಪಂಚತಂತ್ರ, ಕಾಕೋಲೂಕೀಯ - ೧೯೦

ಪೂಜ್ಯರಲ್ಲದವರಿಗೆ ಎಲ್ಲಿ ಪೂಜೆ ಸಲ್ಲುತ್ತದೋ ಹಾಗೆಯೇ ಪೂಜ್ಯರಾದವರಿಗೆ ಎಲ್ಲಿ ಅಪಮಾನವಾಗುತ್ತದೋ ಅಲ್ಲಿ ದುರ್ಭಿಕ್ಷ, ಸಾವು ಮತ್ತು ಭಯ ಇವು ಮೂರೂ ಉಂಟಾಗುತ್ತವೆ.

**ಅಬ್ರುವನ್ ಕಸ್ಯಚಿನ್ನಿಂದಾಮಾತ್ಮಪೂಜಾಮವರ್ಣಯನ್ ।**
**ನ ಕಶ್ಚಿದ್ ಗುಣಸಂಪನ್ನಃ ಪ್ರಕಾಶೋ ಭುವಿ ದೃಶ್ಯತೇ ॥ ೪೦**

- ಮಹಾಭಾರತ, ವನ. ೨೦೭-೫೦

ಇನ್ನೊಬ್ಬರನ್ನು ನಿಂದಿಸದೆ, ತನ್ನನ್ನು ಹೊಗಳಿಕೊಳ್ಳದೆ ಇರುವ ಒಬ್ಬ ಗುಣಶಾಲಿಯೂ ಲೋಕದಲ್ಲಿ ಸ್ಪಷ್ಟವಾಗಿ ಗೋಚರಿಸುವುದಿಲ್ಲ.

**ಅಭ್ಯಸ್ಯ ವೇದಶಾಸ್ತ್ರಾಣಿ ತತ್ತ್ವಂ ಜ್ಞಾತ್ವಾಽಥ ಬುದ್ಧಿಮಾನ್ ।**
**ಪಲಾಲಮಿವ ಧಾನ್ಯಾರ್ಥೀ ಸರ್ವಶಾಸ್ತ್ರಾಣಿ ಸಂತ್ಯಜೇತ್ ॥ ೪೧**

- ಗರುಡಪುರಾಣ, ೧೬-೮೫

ವೇದಗಳನ್ನೂ ಶಾಸ್ತ್ರಗಳನ್ನೂ ಅಭ್ಯಾಸಮಾಡಿ, ತತ್ತ್ವವನ್ನು ತಿಳಿದಮೇಲೆ ಬುದ್ಧಿವಂತನಾದವನು ಕಾಳುಗಳನ್ನು ಸಂಗ್ರಹಿಸಿ ಹೊಟ್ಟನ್ನು ಬಿಸಾಡುವಂತೆ ಎಲ್ಲಾ ಶಾಸ್ತ್ರಗಳನ್ನೂ ಬಿಡಬೇಕು.

**ಅಮಂತ್ರಮಕ್ಷರಂ ನಾಸ್ತಿ ವನಸ್ಪತಿರನೌಷಧಂ ।**
**ಅಯೋಗ್ಯಃ ಪುರುಷೋ ನಾಸ್ತಿ ಯೋಜಕಸ್ತತ್ರ ದುರ್ಲಭಃ ॥ ೪೨**

- ಸಮಯೋಚಿತಪದ್ಯಮಾಲಿಕಾ

ಮಂತ್ರವಲ್ಲದ ಅಕ್ಷರವಿಲ್ಲ, ಔಷಧವಲ್ಲದ ಮೂಲಿಕೆ ಇಲ್ಲ. ಅಯೋಗ್ಯನಾದ ಮನುಷ್ಯನೂ ಇಲ್ಲ. ಏನೆಂದರೆ, ಹೊಂದಾಣಿಕೆ ಮಾಡತಕ್ಕ ಯೋಜಕನು ದುರ್ಲಭ.

**ಅಮೃತಂ ಶಿಶಿರೇ ವಹ್ನಿರಮೃತಂ ಪ್ರಿಯದರ್ಶನಂ ।**
**ಅಮೃತಂ ರಾಜಸಂಮಾನಂ ಅಮೃತಂ ಕ್ಷೀರಭೋಜನಮ್ ॥ ೪೩**

- ಪಂಚತಂತ್ರ, ಮಿತ್ರಭೇದ - ೧೩೯

ಚಳಿಗಾಲದಲ್ಲಿ ಬೆಂಕಿ ಅಮೃತಸಮಾನ ; ಇಷ್ಟವಾದವರ ಸಂದರ್ಶನ ಅಮೃತ ಸಮಾನ ; ರಾಜಗೌರವ ಅಮೃತ ಸಮಾನ ; ಕ್ಷೀರಾನ್ನ ಭೋಜನ ಅಮೃತ ಸಮಾನ.

**ಅಯಶಃ ಪ್ರಾಪ್ಯತೇ ಯೇನ ಯೇನ ಚಾಪಗತಿರ್ಭವೇತ್ ।**
**ಸ್ವರ್ಗಾಚ್ಚ ಭ್ರಶ್ಯತೇ ಯೇನ ತತ್ಕರ್ಮ ನ ಸಮಾಚರೇತ್ ॥ ೪೪**

- ಸುಭಾಷಿತರತ್ನಭಾಂಡಾಗಾರ

ಯಾವುದರಿಂದ ಅಪಯಶಸ್ಸು, ದುರ್ಗತಿ ಹಾಗೂ ಸ್ವರ್ಗನಾಶವುಂಟಾಗುವುವೋ ಅಂಥ ಕೆಲಸವನ್ನು ಮಾಡಬಾರದು.

**ಅಯಶಸ್ಯಮನಾಯುಷ್ಯಂ ಪರದಾರಾಭಿಮರ್ಶನಂ ।**
**ಅರ್ಥಕ್ಷಯಕರಂ ಘೋರಂ ಪಾಪಸ್ಯ ಚ ಪುನರ್ಭವಮ್ ॥ ೪೫**

- ರಾಮಾಯಣ, ಯುದ್ಧ, ೯-೧೫

ಪರಸ್ತ್ರೀಯನ್ನು ಮುಟ್ಟುವುದು ಅಪಕೀರ್ತಿಗೆ ದಾರಿ. ಅದರಿಂದ ಆಯಸ್ಸು ಕ್ಷೀಣಿಸುವುದು. ಭಾಗ್ಯ ಹಾನಿಯಾಗುವುದು. ಪರಸ್ತ್ರೀಸ್ಪರ್ಶವು ಘೋರಪಾಪದ ಇನ್ನೊಂದು ರೂಪ.

**ಅರಕ್ಷಿತಾರೋ ಹರ್ತಾರಶ್ಶುಲ್ಕವ್ಯಾಜೇನ ಪಾರ್ಥಿವಾಃ ।**
**ಹಾರಿಣೋ ಜನವಿತ್ತಾನಾಂ ಸಂಪ್ರಾಪ್ತೇ ತು ಕಲೌ ಯುಗೇ ॥ ೪೬**

- ವಿಷ್ಣುಪುರಾಣ, ೬-೧-೩೪

ಕಲಿಯುಗದಲ್ಲಿ ಕಂದಾಯದ ನೆಪದಿಂದ ಜನರ ಹಣವನ್ನು ಅರಸರು ಸುಲಿಗೆ ಮಾಡುತ್ತಾರೆ. ರಕ್ಷಣೆ ಮಾಡುವುದಿಲ್ಲ.

**ಅವಿದ್ಯಮಾನೋಽಪ್ಯವಭಾತಿ ಹಿ ದ್ವಯೋ**
**ಧ್ಯಾತುರ್ಧಿಯಾ ಸ್ವಪ್ನಮನೋರಥೌ ಯಥಾ ।**
**ತತ್ಕರ್ಮಸಂಕಲ್ಪವಿಕಲ್ಪಕಂ ಮನೋ**
**ಬುಧೋ ನಿರುಂಧ್ಯಾದಭಯಂ ತತಃ ಸ್ಯಾತ್ ॥ ೪೭**

- ಭಾಗವತ, ೧೧-೨-೩೮

ಎರಡು ಎನ್ನುವುದು ಇಲ್ಲದಿದ್ದರೂ ಕೂಡ, ಧ್ಯಾನ ಮಾಡುವವನ ಬುದ್ಧಿಯಿಂದ ಸ್ವಪ್ನ ಮನೋರಥಗಳಂತೆ, ಎರಡಿರುವಂತೆ ಭಾಸವಾಗುತ್ತದೆ. ಆದುದರಿಂದ ಪಂಡಿತನಾದವನು ಸಂಕಲ್ಪವಿಕಲ್ಪಗಳಿಂದ ಕೂಡಿದ ಮನಸ್ಸನ್ನು ತಡೆಯಬೇಕು. ಆಗಲೇ ಭಯವಿಲ್ಲದಿರುವಿಕೆಯು ಉಂಟಾದೀತು !

**ಅವೈಷ್ಣವೋ ಹತೋ ದೇಶೋ ಹತಂ ಶ್ರಾದ್ಧಮಪಾತ್ರಕಮ್ ।**
**ಹತಮಶ್ರೋತ್ರಿಯೇ ದಾನಮನಾಚಾರಂ ಹತಂ ಕುಲಮ್ ॥ ೪೮**

- ಭಾಗವತಮಾಹಾತ್ಮ್ಯ, ೫-೭೪

ಭಗವದ್ಭಕ್ತರಿಲ್ಲದ ದೇಶ ಹಾಳು ; ಯೋಗ್ಯರು ದೊರೆಯದ ಶ್ರಾದ್ಧ ಹಾಳು ; ಶ್ರೋತ್ರಿಯನಲ್ಲದವನಲ್ಲಿ ದಾನಾದಿಗಳು ವ್ಯರ್ಥ ; ಆಚಾರವಿಲ್ಲದ ಕುಲವೂ ಹಾಳು.

**ಅಶುಭಪುಷಿ ಕಲಾವಪ್ಯಪ್ರಮತ್ತಾಃ ಸ್ವಧರ್ಮಾ**
**ದನುದಿನಮುಪಕಾರಾನಾಚರಂತೋ ಬುಧಾನಾಂ ।**
**ಬಹುಜನಪರಿಪುಷ್ಟ್ಯೈ ಬದ್ಧದೀಕ್ಷಾಸ್ತ ಏತೇ**
**ತನುಸುಖಮಪಿ ಹಿತ್ವಾ ತನ್ವತೇ ದೇಶಸೇವಾಮ್ ॥ ೪೯**

- ವಿಶ್ವಗುಣಾದರ್ಶ - ೫೮೦

ಪಾಪಗಳನ್ನು ಬೆಳೆಸುವ ಈ ಕಲಿಕಾಲದಲ್ಲಿಯೂ ಕೂಡ, ಸ್ವಧರ್ಮವನ್ನು ಬಿಡದೆ, ಪಂಡಿತರ ಸೇವೆಯನ್ನು ಪ್ರತಿದಿನವೂ ಮಾಡುತ್ತಾ, ಬಹುಜನರ ಪೋಷಣೆಯಲ್ಲಿ ಬದ್ಧಕಂಕಣರಾಗಿ, ತಮ್ಮ ದೇಹ ಸುಖವನ್ನು ಲೆಕ್ಕಿಸದೆ ಕೆಲವರು ದೇಶಸೇವೆಯನ್ನು ಮಾಡುತ್ತಾರೆ.

**ಅಶೋಚನ್ ಪ್ರತಿಕುರ್ವೀತ ಯದಿ ಪಶ್ಯೇತ್ ಪರಾಕ್ರಮಂ ।**
**ಭೈಷಜ್ಯಮೇತದ್ದುಃಖಸ್ಯ ಯದೇತನ್ನಾನುಚಿಂತಯೇತ್ ॥ ೫೦**

- ಮಹಾಭಾರತ, ಸ್ತ್ರೀ. ೨೦೨೭

ದಿಟ್ಟತನವಿದ್ದರೆ ಶೋಕಮಾಡದೆ ಆಪತ್ತಿಗೆ ಪ್ರತೀಕಾರವನ್ನು ಕೈಗೊಳ್ಳಬೇಕು. ಚಿಂತಿಸದಿರುವುದೇ ದುಃಖಕ್ಕೆ ಔಷಧ.

**ಅಸಂಕಲ್ಪಾಜ್ಜಯೇತ್ ಕಾಮಂ ಕ್ರೋಧಂ ಕಾಮವಿವರ್ಜನಾತ್ ।**
**ಅರ್ಥಾನರ್ಥೇಕ್ಷಯಾ ಲೋಭಂ ಭಯಂ ತತ್ತ್ವಾವಮರ್ಶನಾತ್ ॥ ೫೧**

- ಭಾಗವತ, ೭-೧೫-೨೨

ಪಡೆಯಬೇಕೆಂಬ ನಿರ್ಧಾರಮಾಡದೆ ಕಾಮವನ್ನು ಗೆಲ್ಲಬೇಕು. ಕಾಮವನ್ನು ಬಿಟ್ಟುಬಿಟ್ಟು ಕೋಪವನ್ನು ಗೆಲ್ಲಬೇಕು. ಹಣದಿಂದ ಕೆಡುಕು ಆಗುವುದೆಂದು ತಿಳಿದು ಲೋಭ ಬಿಡಬೇಕು. ತತ್ತ್ವಸ್ವರೂಪವನ್ನು ವಿಮರ್ಶಿಸಿ ಭಯ ಬಿಡಬೇಕು.

**ಅಸಂತೋ ನಾಭ್ಯಾರ್ಥ್ಯಾಃ ಸುಹೃದಪಿ ನ ಯಾಚ್ಯಃ ಕೃಶಧನಃ**
**ಪ್ರಿಯಾ ನ್ಯಾಯ್ಯಾ ವೃತ್ತಿರ್ಮಲಿನಮಸುಭಂಗೇಪ್ಯಸುಕರಂ ।**
**ವಿಪದ್ಯುಚ್ಚೈಃ ಸ್ಥೇಯಂ ಪದಮನುವಿಧೇಯಂ ಚ ಮಹತಾಂ**
**ಸತಾಂ ಕೇನೋದ್ದಿಷ್ಟಂ ವಿಷಮಮಸಿಧಾರಾವ್ರತಮಿದಮ್ ॥ ೫೨**

- ನೀತಿಶತಕ - ೨೬

ದುರ್ಜನರನ್ನು ಬೇಡಬಾರದು, ಬಡವನಾದ ಸ್ನೇಹಿತನಲ್ಲಿಯೂ ಯಾಚನೆ ಕೂಡದು, ನ್ಯಾಯವಾದ ಜೀವನ ಕ್ರಮದಲ್ಲಿ ಪ್ರೀತಿ ಇಡುವುದು, ಪ್ರಾಣ ಹೋಗುವಂಥ ಸಂದರ್ಭದಲ್ಲಿಯೂ ಕೆಟ್ಟ ಕೆಲಸ ಮಾಡದಿರುವುದು. ಕಷ್ಟದಲ್ಲಿಯೂ ಉದಾತ್ತನಾಗಿರುವುದು, ಮಹಾತ್ಮರ ಮಾರ್ಗವನ್ನನುಸರಿಸುವುದು - ಕತ್ತಿಯ ಅಲಗಿನ ಮೇಲೆ ನಡೆಯುವಂಥ ಈ ಕಠಿಣ ವ್ರತವನ್ನು ಸಜ್ಜನರಿಗೆ ಯಾರು ತೋರಿಕೊಟ್ಟರು ?

**ಅಸಂಮಾನೇ ತಪೋವೃದ್ಧಿಃ ಸಂಮಾನಾಚ್ಚ ತಪಃಕ್ಷಯಃ ।**
**ಪೂಜಯಾ ಪುಣ್ಯಹಾನಿಃ ಸ್ಯಾನ್ನಿಂದಯಾ ಸದ್ಗತಿರ್ಭವೇತ್ ॥ ೫೩**

- ಸುಭಾಷಿತರತ್ನಭಾಂಡಾಗಾರ

ಸನ್ಮಾನ ಪಡೆಯದೆ ಇದ್ದಷ್ಟೂ ತಪಸ್ಸು ಹೆಚ್ಚುತ್ತದೆ. ಸನ್ಮಾನದಿಂದ ತಪಸ್ಸು ಕುಗ್ಗುತ್ತದೆ. ಪೂಜೆ ನಡೆದಷ್ಟೂ ಪುಣ್ಯ ನಷ್ಟವಾಗುತ್ತದೆ. ನಿಂದೆಯಿಂದ ಒಳ್ಳೆಯ ಗತಿ ಬರುತ್ತದೆ.

**ಅಸ್ತಿ ಪುತ್ರೋ ವಶೀ ಯಸ್ಯ ಭೃತ್ಯೋ ಭಾರ್ಯಾ ತಥೈವ ಚ ।**
**ಅಭಾವೇ ಸತಿ ಸಂತೋಷಃ ಸ್ವರ್ಗಸ್ಥೋಽಸೌ ಮಹೀತಲೇ ॥ ೫೪**

- ಸುಭಾಷಿತರತ್ನಭಾಂಡಾಗಾರ

ಯಾರ ಮಗ ವಿಧೇಯನೋ ಹಾಗೆಯೇ ಯಾರಿಗೆ ಸೇವಕ ಮತ್ತು ಹೆಂಡತಿಯೂ ಅನುಕೂಲರೋ ; ಯಾರಿಗೆ ಪದಾರ್ಥಗಳು ದೊರಕದಿದ್ದರೂ ಸಂತೋಷವಿರುವುದೋ ಅಂಥವನು ಭೂಮಿಯ ಮೇಲಿದ್ದರೂ ಸ್ವರ್ಗದಲ್ಲಿದ್ದಂತೆಯೇ !

**ಆಕಾರಶ್ಛಾದ್ಯಮಾನೋಽಪಿ ನ ಶಕ್ಯೋ ವಿನಿಗೂಹಿತುಂ ।**
**ಬಲಾದ್ಧಿ ವಿವೃಣೋತ್ಯೇವ ಭಾವಮಂತರ್ಗತಂ ನೃಣಾಮ್ ॥ ೫೫**

- ರಾಮಾಯಣ, ಯುದ್ಧ. ೧೭-೬೪

ಮುಚ್ಚಲು ಯತ್ನಿಸಿದರೂ ಮುಖಾಕೃತಿಯನ್ನು ಅಡಗಿಸಲು ಸಾಧ್ಯವಾಗದು. ಮನುಷ್ಯರ ಅಂತರಂಗದ ಭಾವವನ್ನು ಅದು ಹೇಗಾದರೂ ಬಯಲಿಗೆಳೆಯುತ್ತದೆ.

**ಕಿಂ ವಾಸಸೈವಂ ನ ವಿಚಾರಣೀಯಂ**
**ವಾಸಃ ಪ್ರಧಾನಂ ಖಲು ಯೋಗ್ಯತಾಯಾಃ ।**
**ಪೀತಾಂಬರಂ ವೀಕ್ಷ್ಯ ದದೌ ತನೂಜಾಂ**
**ದಿಗಂಬರಂ ವೀಕ್ಷ್ಯ ವಿಷಂ ಸಮುದ್ರಃ ॥ ೫೬**

ಯಾವ ಬಟ್ಟೆ ಹಾಕಿಕೊಂಡರೇನು ಎಂದು ವಿಮರ್ಶಿಸಬಾರದು. ಬಟ್ಟೆಯು ಮಾನವನ ಯೋಗ್ಯತೆಯನ್ನು ನಿರ್ಣಯಿಸುತ್ತದೆ. ಪೀತಾಂಬರನಾದ ವಿಷ್ಣುವಿಗೆ ಸಮುದ್ರರಾಜನು ಮಗಳನ್ನು ಕೊಟ್ಟನು. ದಿಗಂಬರನಾದ ಶಿವನಿಗೆ ವಿಷವನ್ನು ಕೊಟ್ಟನು.

**ಆಕಾರೈರಿಂಗಿತೈರ್ಗತ್ಯಾ ಚೇಷ್ಟಯಾ ಭಾಷಣೇನ ಚ ।**
**ನೇತ್ರವಕ್ತ್ರವಿಕಾರೈಶ್ಚ ಲಕ್ಷ್ಯತೇಽಂತರ್ಗತಂ ಮನಃ ॥ ೫೭**

- ಪಂಚತಂತ್ರ, ಮಿತ್ರಭೇದ-೪೫

ಮನುಷ್ಯನ ಒಳಗಿರುವ ಮನಸ್ಸು ಅವನ ರೂಪ, ಇಚ್ಛೆ, ನಡೆ, ಕೆಲಸ, ಮಾತು, ಕಣ್ಣಿನ ಹಾಗೂ ಮುಖದ ಬದಲಾವಣೆಗಳು ಇವುಗಳಿಂದ ಕಂಡುಬರುತ್ತದೆ.

**ಆಘ್ರಾತಂ ಮರಣೇನ ಜನ್ಮ ಜರಯಾ ವಿದ್ಯುಚ್ಚಲಂ ಯೌವನಂ ।**
**ಸಂತೋಷೋ ಧನಲಿಪ್ಸಯಾ ಶಮಸುಖಂ ಪ್ರೌಢಾಂಗನಾವಭ್ರಮೈಃ ।**

ಲೋಕೈರ್ಮತ್ಸರಿಭಿರ್ಗುಣಾ ವನಭುವೋ ವ್ಯಾಲೈರ್ನೃಪಾ ದುರ್ಜನೈಃ
ಅಸ್ಥೈರ್ಯೇಣ ಧೃತಿರ್ಜಗತ್ಕಪಹೃತಾ ಗ್ರಸ್ತಂ ನ ಕಿಂ ಕೇನ ವಾ ॥ ೫೮

- ವೈರಾಗ್ಯಶತಕ - ೧೦೩

ಹುಟ್ಟು ಸಾವಿನಿಂದ ಆಕ್ರಮಿಸಲ್ಪಟ್ಟಿದೆ. ಹಾಗೆಯೇ ಮಿಂಚಿನಂತೆ ಚಂಚಲವಾದ ಯೌವನವು ಮುಪ್ಪಿನಿಂದಲೂ, ಸಂತೋಷವು ಹಣದಾಸೆಯಿಂದಲೂ, ಶಾಂತಿ ಸುಖವು ಯುವತಿಯರ ವಿಲಾಸಗಳಿಂದಲೂ, ಗುಣಗಳು ಅಸಹನೆಯಿಂದ ಕೂಡಿದ ಜನಗಳಿಂದಲೂ, ಕಾಡುಪ್ರದೇಶಗಳು ದುಷ್ಟ ಮೃಗಗಳಿಂದಲೂ, ರಾಜರು ದುಷ್ಟರಿಂದಲೂ ಧೈರ್ಯವು ಅಸ್ವಸ್ಥತೆಯಿಂದಲೂ ಆವರಿಸಲ್ಪಟ್ಟಿದೆ. ಈ ಜಗತ್ತಿನಲ್ಲಿ ಯಾವುದನ್ನು ಯಾವುದು ಆಕ್ರಮಿಸದೆ ಇಲ್ಲ ?

ಆಚಾರ್ಯಶ್ಚ ಪಿತಾ ಚೈವ ಮಾತಾ ಭ್ರಾತಾ ಚ ಪೂರ್ವಜಃ ।
ನಾರ್ತೇ ನಾಪ್ಯವಮಂತವ್ಯಾ ಸಜ್ಜನೇನ ವಿಶೇಷತಃ ॥ ೫೯

- ಮನುಸ್ಮೃತಿ, ೨-೨೨೫

ತಾನು ಎಷ್ಟೇ ಕಷ್ಟದಲ್ಲಿದ್ದರೂ ಸಹ, ಆಚಾರ್ಯರನ್ನು, ತಂದೆ, ತಾಯಿ, ಅಣ್ಣ ಇವರನ್ನು ಅಲ್ಲಗಳೆಯಬಾರದು. ಸಜ್ಜನನ ವಿಚಾರದಲ್ಲಿ ಈ ಮಾತನ್ನು ಹೇಳಬೇಕಾದ್ದೇ ಇಲ್ಲ.

ಆಜನ್ಮನಃ ಶಾಠ್ಯಮಶಿಕ್ಷಿತೋ ಯಃ
ತಸ್ಯಾಪ್ರಮಾಣಂ ವಚನಂ ಜನಸ್ಯ ।
ಪರಾತಿಸಂಧಾನಮಧೀಯತೇ ಯೈಃ
ವಿದ್ಯೇತಿ ತೇ ಸಂತು ಕಿಲಾಪ್ತವಾಚಃ ॥ ೬೦

- ಅಭಿಜ್ಞಾನಶಾಕುಂತಲ, ೫-೧೫

ಹುಟ್ಟಿದಾಗಿನಿಂದಲೂ ಮೋಸವೆಂದರೆ ತಿಳಿಯದೇ ಇರುವ ಆಶ್ರಮವಾಸಿಗಳಾದ ಋಷಿಗಳ ಮಾತು ಜನರಿಗೆ ಪ್ರಮಾಣವಲ್ಲ. ಬೇರೆಯವರಿಗೆ ಮೋಸ ಮಾಡುವ ಕಲೆಯನ್ನೇ ವಿದ್ಯೆಯೆಂದು ಕಲಿತವರು ಸತ್ಯ ನುಡಿಯುವವರಲ್ಲವೇ !

ಆಜ್ಞಾ ಕೀರ್ತಿಃ ಪಾಲನಂ ಬ್ರಾಹ್ಮಣಾನಾಂ
ದಾನಂ ಭೋಗೋ ಮಿತ್ರಸಂರಕ್ಷಣಂ ಚ ।
ಯೇಷಾಮೇತೇ ಷಡ್ಗುಣಾ ನ ಪ್ರವೃತ್ತಾಃ
ಕೋಽರ್ಥಸ್ತೇಷಾಂ ಪಾರ್ಥಿವೋಪಾಶ್ರಯೇಣ ॥ ೬೧

- ನೀತಿಶತಕ - ೩೯

ಎಲೈ ರಾಜನೆ, ಯಾರಲ್ಲಿ ಆಜ್ಞೆ ಮಾಡುವ ಶಕ್ತಿ, ಕೀರ್ತಿ, ಬ್ರಾಹ್ಮಣಪಾಲನೆ, ದಾನ, ಭೋಗ, ಮಿತ್ರರಕ್ಷಣೆ ಎಂಬ ಆರು ಗುಣಗಳಿಲ್ಲವೋ ಅಂಥ ರಾಜರನ್ನು ಆಶ್ರಯಿಸಿಕೊಂಡಿರುವುದರಿಂದ ಪ್ರಯೋಜನವೇನು?

**ಆತ್ಮಜಾಯಾಸುತಾಗಾರಪಶುದ್ರವಿಣಬಂಧುಷು ।**
**ನಿರೂಢಮೂಲಹೃದಯ ಆತ್ಮಾನಂ ಬಹು ಮನ್ಯತೇ ॥ ೬೨**

- ಭಾಗವತ, ೩-೩೦-೬

ಮನುಷ್ಯನು ತನ್ನಲ್ಲಿ, ತನ್ನ ಹೆಂಡತಿ, ಮಕ್ಕಳು, ಮನೆ, ದನ, ಹಣ, ಬಂಧುಗಳು ಮೊದಲಾದುವುಗಳಲ್ಲಿ, ಗಾಢವಾಗಿ ನೆಟ್ಟ ಮನಸ್ಸುಳ್ಳವನಾಗಿ ತನ್ನನ್ನೆ ಬಹಳ ದೊಡ್ಡವನೆಂದು ಭಾವಿಸುತ್ತಾನೆ.

**ಆತ್ಮನಾಶೇ ಧರ್ಮನಾಶೇ ವ್ಯಸನೇ ಸುಮಹತ್ಯಪಿ ।**
**ದೋಷಾಯ ನಾನೃತವಚೋ ಭವತೀ ಹ ನ ಸಂಶಯಃ ॥ ೬೩**

- ಆಶ್ಚರ್ಯಚೂಡಾಮಣಿ ವ್ಯಾಖ್ಯಾ

ಮರಣಭಯ, ಧರ್ಮನಾಶ ಮಹತ್ತರವಾದ ವಿಪತ್ತು ಇವು ಸಂಭವಿಸಿದಾಗ ಸುಳ್ಳು ಹೇಳುವುದು ದೋಷಾವಹವಿಲ್ಲ. ಇದರಲ್ಲಿ ಸಂದೇಹವಿಲ್ಲ.

**ಆತ್ಮನೋ ಮುಖದೋಷೇಣ ಬಧ್ಯಂತೇ ಶುಕಸಾರಿಕಾಃ ।**
**ಬಕಾಸ್ತತ್ರ ನ ಬಧ್ಯಂತೇ ಮೌನಂ ಸರ್ವಾರ್ಥಸಾಧನಮ್ ॥ ೬೪**

- ಸುಭಾಷಿತರತ್ನಸಮುಚ್ಚಯ

ಗಿಳಿ, ಸಾರಿಕೆ ಮೊದಲಾದುವು ತಮ್ಮ ಬಾಯಿ ಚಾಪಲ್ಯದಿಂದ ಸಿಕ್ಕಿ ಸೆರೆಯಾಗುತ್ತವೆ. ಕೊಕ್ಕರೆಗಳನ್ನು ಯಾರೂ ಹಿಡಿದು ಸೆರೆಯಲ್ಲಿಡುವುದಿಲ್ಲ. ಮೌನವೇ ಸರ್ವಾರ್ಥಸಾಧನ.

**ಆರ್ತೋ ಹಿ ಭಿಷಜಂ ಪೃಷ್ಟ್ವಾ ತದುಕ್ತಮನುತಿಷ್ಠತೇ ।**
**ತಸ್ಮಿನ್ ಸವಿಚಿಕಿತ್ಸಸ್ತು ವ್ಯಾಧೇರಾಧಿಕ್ಯಮಾಪ್ನುಯಾತ್ ॥ ೬೫**

- ನ್ಯಾಯಮಂಜರೀ, ೧-೨೩

ರೋಗಿಯು ವೈದ್ಯರಸಲಹೆಯನ್ನ ಕೇಳಿ ಅವರು ಹೇಳಿದಂತೆ ನಡೆದುಕೊಳ್ಳುತ್ತಾನೆ. ವೈದ್ಯರ ಮಾತಿನಲ್ಲಿಯೂ ಸಂದೇಹವುಂಟಾದರೆ ರೋಗವು ಹೆಚ್ಚುತ್ತದೆ.

**ಆದಿತ್ಯಸ್ಯೋದಯಂ ತಾತ ತಾಂಬೂಲಂ ಭಾರತೀಕಥಾ ।**
**ಇಷ್ಟಾ ಭಾರ್ಯಾ ಸಮಿತ್ರಂ ಚ ಅಪೂರ್ವಾಣಿ ದಿನೇದಿನೇ ॥ ೬೬**

- ಪಂಚತಂತ್ರ, ಮಿತ್ರಸಂಪ್ರಾಪ್ತಿ - ೧೮

ಅಪ್ಪಾ ! ಮಗು ಸೂರ್ಯೋದಯ, ತಾಂಬೂಲ, ಭಾರತದ ಕಥೆ, ಇಷ್ಟಳಾದ ಹೆಂಡತಿ, ಒಳ್ಳೆಯ ಸ್ನೇಹಿತ ಇವು ದಿನದಿನವೂ ಹೊಚ್ಚ ಹೊಸದಾಗಿರುತ್ತವೆ.

**ಅಪತ್ಕಾಲೇ ತು ಸಂಪ್ರಾಪ್ತೇ ಶೌಚಾಚಾರಂ ನ ಚಿಂತಯೇತ್ ।**
**ಸ್ವಯಂ ಸಮುದ್ಧರೇತ್ ಪಶ್ಚಾತ್ ಸ್ವಸ್ಥೋ ಧರ್ಮಂ ಸಮಾಚರೇತ್ ॥ ೬೭**

- ಪರಾಶರಸ್ಮೃತಿ, ೭-೪೨

ಕಷ್ಟಕಾಲ ಬಂದಾಗ ಶೌಚ ಆಚಾರಗಳನ್ನು ಚಿಂತಿಸಬಾರದು. ಮೊದಲು ತನ್ನನ್ನು ತಾನು ಕಾಪಾಡಿಕೊಂಡು ಆಮೇಲೆ ಧರ್ಮಾಚರಣೆ ಮಾಡಬಹುದು.

**ಆಪದ್ಯುನ್ಮಾರ್ಗಗಮನೇ ಕಾರ್ಯಕಾಲಾತ್ಯಯೇಷು ಚ ।**
**ಅಪೃಷ್ಟೇನಾಪಿ ವಕ್ತವ್ಯಂ ಭೃತ್ಯೇನ ಹಿತಮಿಚ್ಛತಾ ॥ ೬೮**

- ಹಿತೋಪದೇಶ, ಸುಹೃದ್ಭೇದ - ೫೭

ಆಪತ್ತಿಗೊಳಪಡಿಸುವ ದುರ್ಮಾರ್ಗದಲ್ಲಿ ಹೋದಾಗ, ಹಾಗೆಯೇ ಮಾಡಬೇಕಾದ ಕೆಲಸ ಕಾಲಮೀರಿದಾಗ ಹಿತವನ್ನು ಬಯಸುವ ಸೇವಕನು ತನ್ನನ್ನು ಕೇಳದಿದ್ದರೂ ಬುದ್ಧಿವಾದ ಹೇಳಬೇಕು.

**ಆಮ್ರಂ ಛಿತ್ವಾ ಕುಠಾರೇಣ ನಿಂಬಂ ಪರಿಚರೇತ್ತು ಯಃ ।**
**ಯಶ್ಚೈವಂ ಪಯಸಾ ಸಿಂಚೇನ್ನೈವಾಸ್ಯ ಮಧುರೋ ಭವೇತ್ ॥೬೯**

- ರಾಮಾಯಣ, ಅಯೋಧ್ಯಾ. ೩೫ -೧೪

ಮಾವಿನ ಗಿಡವನ್ನು ಕೊಡಲಿಯಿಂದ ಕಡಿದು ಬೇವಿನಗಿಡಕ್ಕೆ ಹಾಲೆರದು ಉಪಚಾರ ಮಾಡಿದರೆ, ಅದರ ಹಣ್ಣು ಎಂದಿಗೂ ಸಿಹಿಯಾಗಲಾರದು.

**ಆಯುಃ ಶ್ರಿಯಂ ಯಶೋ ಧರ್ಮಂ ಲೋಕಾನಾಶಿಷ ಏವ ಚ ।**
**ಹಂತಿ ಶ್ರೇಯಾಂಸಿ ಸರ್ವಾಣಿ ಪುಂಸೋ ಮಹದತಿಕ್ರಮಃ ॥ ೭೦**

- ಭಾಗವತ, ೧೦-೪-೪೬

ಮನುಷ್ಯನು ಮಹಾತ್ಮರನ್ನು ಅವಮಾನಗೊಳಿಸಿದರೆ ಅದು ಅವನ ಆಯಸ್ಸನ್ನು, ಲಕ್ಷ್ಮಿಯನ್ನು, ಯಶಸ್ಸನ್ನು, ಧರ್ಮವನ್ನು ಲೋಕಗಳನ್ನು, ಆಸೆಗಳನ್ನು ಮತ್ತು ಎಲ್ಲಾ ಶ್ರೇಯಸ್ಸುಗಳನ್ನು ಹಾಳುಮಾಡುತ್ತದೆ.

**ಆಲಸ್ಯಂ ಕುರು ಪಾಪಕರ್ಮಣಿ ಭವ ಕ್ರೂರಃ ಕ್ರುಧಸ್ತಾಡನೇ**
**ನೈಷ್ಠುರ್ಯಂ ಭಜ ಲೋಭಮೋಹವಿಷಯೇ ನಿದ್ರಾಂ ಸಮಾಧೌ ಹರೇಃ ।**
**ಜಾಡ್ಯಂ ಗಚ್ಛ ಪರಾಪವಾದಕಥನೇ ದ್ರೋಹಂ ವಿಧೇಹಿ ಸ್ಮರೇ**
**ದೋಷಾ ಏವ ಗುಣತ್ವಮೇವಮಖಿಲಾ ಯಾಸ್ಯಂತಿ ಚೇತಸ್ತವ ॥ ೭೧**

- (ಜನಾರ್ದನಭಟ್ಟನ) ವೈರಾಗ್ಯಶತಕ - ೨೧

ಎಲೈ ಮನಸ್ಸೆ, ನೀನು ಹೀಗೆ ಮಾಡಿದರೆ ನಿನ್ನ ದೋಷಗಳೆಲ್ಲವೂ ಒಳ್ಳೆಯ ಗುಣಗಳಾಗುತ್ತವೆ ! ಹೇಗೆಂದರೆ ಪಾಪಕರ್ಮದಲ್ಲಿ ಸೋಮಾರಿತನವನ್ನು ತೋರಿಸು. ಕೋಪವನ್ನು ಹೊಡೆದೋಡಿಸಲು ಕ್ರೂರನಾಗು. ಲೋಭಮೋಹಗಳ ವಿಷಯದಲ್ಲಿ ನಿಷ್ಠುರನಾಗು, ಹರಿಯ ಧ್ಯಾನದಲ್ಲಿ ಮುಳುಗಿ ನಿದ್ರೆಮಾಡು. ಪರರನ್ನು ನಿಂದಿಸುವಾಗ ಜಡನಾಗಿಬಿಡು. ಕಾಮನಿಗೆ ದ್ರೋಹಿಯಾಗು!

**ಆಲಸ್ಯಂ ಯದಿ ನ ಭವೇಜ್ಜಗತ್ಯನರ್ಥಃ**
**ಕೋ ನ ಸ್ಯಾದ್ ಬಹು ಧನಕೋ ಬಹುಶ್ರುತೋ ವಾ ।**
**ಆಲಸ್ಯಾದಿಯಮವನಿಃ ಸಸಾಗರಾಂತಾ**
**ಸಂಪೂರ್ಣಾ ನರಪಶುಭಿಶ್ಚ ನಿರ್ಧನೈಶ್ಚ ॥ ೭೨**

- ಯೋಗವಾಸಿಷ್ಠ

ಈ ಜಗತ್ತಿನಲ್ಲಿ ಸೋಮಾರಿತನವೆಂಬ ಅನರ್ಥವಿಲ್ಲದಿದ್ದಲ್ಲಿ ಯಾವನು ಶ್ರೀಮಂತನಾಗುವುದಿಲ್ಲ? ಯಾವನು ವಿದ್ಯಾವಂತನಾಗುವುದಿಲ್ಲ? ಸೋಮಾರಿತನ ವಿರುವುದರಿಂದಲೇ ಸಮುದ್ರಪರ್ಯಂತವಾಗಿ ಈ ಭೂಮಿ ನರಪಶುಗಳಿಂದಲೂ ದರಿದ್ರರಿಂದಲೂ ತುಂಬಿದೆ.

**ಆಸನ್ನಮೇವ ನೃಪತಿರ್ಭಜತೇ ಮನುಷ್ಯಂ**
**ವಿದ್ಯಾವಿಹೀನಮಕುಲೀನಮಸಂಸ್ಕೃತಂ ವಾ ।**
**ಪ್ರಾಯೇಣ ಭೂಮಿಪತಯಃ ಪ್ರಮದಾ ಲತಾಶ್ಚ**
**ಯತ್ಪಾರ್ಶ್ವತೋ ಭವತಿ ತತ್ಪರಿವೇಷ್ಟಯಂತಿ ॥ ೭೩**

- ಪಂಚತಂತ್ರ, ಮಿತ್ರಭೇದ - ೩೬

ವಿದ್ಯೆ ಇಲ್ಲದಿದ್ದರೂ ಸರಿ, ಸತ್ಕುಲದಲ್ಲಿ ಹುಟ್ಟದಿದ್ದರೂ ಸರಿ, ಒಳ್ಳೆಯ ಸಂಸ್ಕಾರವಿಲ್ಲದಿದ್ದರೂ ಸರಿ, ಯಾವ ಮನುಷ್ಯ ಹತ್ತಿರದಲ್ಲಿದ್ದಾನೆ. ಅವನನ್ನೇ ರಾಜನು ಆಶ್ರಯಿಸುತ್ತಾನೆ. ಪ್ರಾಯಶಃ ರಾಜರು, ಸ್ತ್ರೀಯರು ಮತ್ತು ಬಳ್ಳಿಗಳು ಪಕ್ಕದಲ್ಲಿರುವದನ್ನೇ ಸುತ್ತುವರಿಯುತ್ತಾರೆ.

ಆಹವೇ ವ್ಯಸನೇ ಚೈವ ದುರ್ಭಿಕ್ಷೇ ಶತ್ರುವಿಗ್ರಹೇ ।
ರಾಜದ್ವಾರೇ ಶ್ಮಶಾನೇ ಚ ಯಸ್ತಿಷ್ಠತಿ ಸ ಬಾಂಧವಃ ॥ ೭೪

- ಹಿತೋಪದೇಶ, ಸಂಧಿ - ೬೬

ಯುದ್ಧಕಾಲದಲ್ಲಿ, ದುಃಖದ ವೇಳೆಯಲ್ಲಿ, ದುರ್ಭಿಕ್ಷಸಮಯದಲ್ಲಿ ಶತ್ರುಗಳೊಡನೆ ಕಾದುವಲ್ಲಿ, ರಾಜಸಭೆಯಲ್ಲಿ, ಶ್ಮಶಾನದಲ್ಲಿ ಯಾರು ಜೊತೆಗೆ ನಿಲ್ಲುವನೋ ಅವನೇ ಬಂಧು.

ಇಕ್ಷ್ವಾಕುಶರ್ಯಾತಿಯಯಾತಿರಾಮ-
ಮಾಂಧಾತೃನಾಭಾಗನೃಗಾಂಬರೀಷಾಃ ।
ಏತೇ ಸಕೋಶಾಃ ಪುರುಷಾಃ ಸರಾಷ್ಟ್ರಾಃ
ನಷ್ಟಾಃ ಶರೀರೈಃ ಕ್ರತುಭಿರ್ಧರಂತೇ ॥ ೭೫

- ಪಂಚರಾತ್ರ, ೧-೨೩

ಇಕ್ಷ್ವಾಕು, ಶರ್ಯಾತಿ, ಯಯಾತಿ, ರಾಮ, ಮಾಂಧಾತಾ, ನಾಭಾಗ, ನೃಗ, ಅಂಬರೀಷ ಮೊದಲಾದ ಪ್ರಸಿದ್ಧ ರಾಜರು, ಅವರ ರಾಷ್ಟ್ರಗಳು, ಅವರ ಕೋಶಗಳು ಎಲ್ಲವೂ ಹಾಳಾದವು. ಆದರೆ ಅವರ ಕೀರ್ತಿ ಅಮರವಾಗಿದೆ. ಶರೀರವು ಅಳಿಸಿ ಹೋದರೂ ಯಜ್ಞಗಳಿಂದ, ಅಥವಾ ಲೋಕ ಕಲ್ಯಾಣರೂಪವಾದ ಕೆಲಸಗಳಿಂದ ಅಮರರಾಗಿರುತ್ತಾರೆ.

ಇತಃ ಸ್ವಪಿತಿ ಕೇಶವಃ ಕುಲಮಿತಸ್ತದೀಯದ್ವಿಷಾ-
ಮಿತಶ್ಚ ಶರಣಾರ್ಥಿನಃ ಶಿಖರಿಣಾಂ ಗಣಾಃ ಶೇರತೇ ।
ಇತೋಽಪಿ ಬಡವಾನಲಃ ಸಹ ಸಮಸ್ತ ಸಂವರ್ತಕೈಃ
ಅಹೋ ವಿತತಮೂರ್ಜಿತಂ ಭರಸಹಂ ಚ ಸಿಂಧೋರ್ವಪುಃ ॥ ೭೬

- ನೀತಿಶತಕ - ೭೪

ಈಕಡೆ ವಿಷ್ಣು ಮಲಗಿದ್ದಾನೆ. ಇನ್ನೊಂದು ಕಡೆ ಅವನ ವೈರಿಗಳ ಗುಂಪಿದೆ. ಇನ್ನೂ ಒಂದು ಕಡೆ ಮರೆಹೊಕ್ಕ ಬೆಟ್ಟಗಳ ಗುಂಪುಗಳಿವೆ. ಬೇರೊಂದು ಕಡೆ ಎಲ್ಲ ಪ್ರಳಯ ಕಾಲದ ಅಗ್ನಿಗಳೊಡನೆ ಬಡಬಾನಲವಿದೆ. ಸಮುದ್ರದ ಮೈ ಎಷ್ಟು ವಿಸ್ತಾರ! ಎಷ್ಟು ಬಲಿಷ್ಠ! ಎಷ್ಟು ಭಾರ ಸಹಿಸಬಲ್ಲದು!

ಇದಮಸ್ಖಲಿತಂ ಧಾರಯ ವಾರಯ ಪರುಷಾಕ್ಷರಾ ವಾಚಃ ।
ಏಕಃ ಸಕಲಜನಾನಾಂ ಜಗತಿ ರಿಪುಃ ಪರುಷವಾಕ್ಪುರುಷಃ ॥ ೭೭

- ಹರಿಹರಸುಭಾಷಿತ, ೩-೩೦

ಇದನ್ನು ಸ್ಪಷ್ಟವಾಗಿ ತಿಳಿದುಕೊ. ಕಠೋರವಾದ ಮಾತುಗಳನ್ನು ಆಡಬೇಡ. ಕಠೋರವಾಗಿ ನುಡಿಯತಕ್ಕವನು ಜಗತ್ತಿನಲ್ಲಿ ಸಕಲರಿಗೂ ವೈರಿ ಎನಿಸುವನು.

**ಇದಮೇವ ಹಿ ಪಾಂಡಿತ್ಯಂ ಚಾತುರ್ಯಮಿದಮೇವ ಹಿ ।**
**ಇದಮೇವ ಸುಬುದ್ಧಿತ್ವಮಾಯಾದಲ್ಪತರೋ ವ್ಯಯಃ ॥ ೭೮**

- ಸಮಯೋಚಿತಪದ್ಯಮಾಲಿಕಾ

ಪಾಂಡಿತ್ಯವೆಂದರೆ ಇದೇ, ಜಾಣ್ಮೆಯೆಂದರೆ ಇದೇ, ಬುದ್ಧಿಶಾಲಿತೆ ಎಂದರೆ ಇದೇ - ಆದಾಯಕ್ಕಿಂತ ಕಡಿಮೆಯಾಗಿ ವ್ಯಯ ಎಂಬುದು.

**ಇಹ ವಿರಚಯನ್ ಸಾಧ್ವೀಂ ಶಿಷ್ಯಃ ಕ್ರಿಯಾಂ ನ ನಿವಾರ್ಯತೇ**
**ತ್ಯಜತಿ ತು ಯದಾ ಮಾರ್ಗಂ ಮೋಹಾತ್ತದಾ ಗುರುರಂಕುಶಃ ।**
**ವಿನಯರುಚಯಸ್ತಸ್ಮಾತ್ಸಂತಃ ಸದೈವ ನಿರಂಕುಶಾಃ**
**ಪರತರಮತಃ ಸ್ವಾತಂತ್ರ್ಯೇಭ್ಯೋ ವಯಂ ಹಿ ಪರಾಙ್ಮುಖಾಃ ॥ ೭೯**

- ಮುದ್ರಾರಾಕ್ಷಸ, ೩-೬

ಶಿಷ್ಯನು ಒಳ್ಳೆಯ ಕೆಲಸವನ್ನು ಮಾಡುತ್ತಾ ಇದ್ದರೆ ಅವನನ್ನು ಯಾರೂ ತಡೆಯುವುದಿಲ್ಲ. ದಾರಿತಪ್ಪಿದರೆ ಗುರುವು ಅವನನ್ನು ಸ್ವಲ್ಪ ತಡೆಯಬೇಕಾಗುತ್ತದೆ. ಒಳ್ಳೆಯ ಮಾರ್ಗದಲ್ಲಿ ನಡೆಯುವವರರೆಲ್ಲಾ ಒಂದು ವಿಧದಲ್ಲಿ ಸ್ವತಂತ್ರರೇ. ಇದಕ್ಕಿಂತಲೂ ಹೆಚ್ಚು ಸ್ವಾತಂತ್ರ್ಯ ನಮಗೆ ಬೇಡ.

**ಈಶ್ವರಾಣಾಂ ವಚಃ ಸತ್ಯಂ ತಥೈವಾಚರಿತಂ ಕ್ವಚಿತ್ ।**
**ತೇಷಾಂ ಯತ್ ಸ್ವವಚೋಯುಕ್ತಂ ಬುದ್ಧಿಮಾಂಸ್ತತ್ ಸಮಾಚರೇತ್ ॥ ೮೦**

- ಭಾಗವತ, ೧೦-೩೩-೩೨

ಸರ್ವಸಾಮರ್ಥ್ಯವುಳ್ಳ ಮಹಾತ್ಮರ ಉಪದೇಶ ಸತ್ಯವಾದದ್ದು. ಅವರ ಆಚರಣೆ ಕೆಲವು ಸಂದರ್ಭಗಳಲ್ಲಿ ಮಾತ್ರ ಪ್ರಮಾಣವಾಗುತ್ತದೆ. ಅವರು ಉಪದೇಶಿಸಿದಂತೆ ಎಲ್ಲಿ ಆಚರಿಸುತ್ತಾರೋ ಅಂಥ ಆಚರಣೆಯನ್ನು ಮಾತ್ರ ಬುದ್ಧಿವಂತನು ನಡೆಸಬೇಕು.

**ಉಚ್ಚೈರ್ಗತಿರ್ಜಗತಿ ಸಿಧ್ಯತಿ ಧರ್ಮತಶ್ಚೇತ್**
**ತಸ್ಯ ಪ್ರಮಾ ಚ ವಚನೈಃ ಕೃತಕೇತರೈಶ್ಚೇತ್ ।**
**ತೇಷಾಂ ಪ್ರಕಾಶನದಶಾ ಚ ಮಹೀಸುರೈಶ್ಚೇತ್**
**ತಾನಂತರೇಣ ನಿಪತೇತ್ ಕ್ವ ನು ಮತ್ಪ್ರಣಾಮಃ ॥ ೮೧**

- ಚಂಪೂರಾಮಾಯಣ, ಬಾಲಕಾಂಡ - ೨

ಧರ್ಮದಿಂದ ಅತ್ಯುತ್ತಮವಾದ ಗತಿ ಲಭಿಸಿದರೆ, ವೇದವಾಕ್ಯಗಳಿಂದ ಆ ಧರ್ಮದ ನಿಜವಾದ ತಿಳಿವಳಿಕೆಯುಂಟಾದರೆ, ಆ ವಾಕ್ಯಗಳ ವಿವರಣೆ ಭೂಸುರರಿಂದಾದರೆ, ನನ್ನ ಪ್ರಣಾಮಗಳು ಅವರನ್ನು ಬಿಟ್ಟು ಇನ್ನು ಯಾರಿಗೆ ಸಲ್ಲಬೇಕು ?

**ಉಜ್ವಲಗುಣಮಭ್ಯುದಿತಂ**
**ಕ್ಷುದ್ರೋ ದ್ರಷ್ಟುಂ ನ ಕಥಮಪಿ ಕ್ಷಮತೇ ।**
**ದಗ್ಧ್ವಾ ತನುಮಪಿ ಶಲಭಃ**
**ದೀಪ್ತಂ ದೀಪಾರ್ಚಿಷಂ ಹರತಿ ॥** ೮೨

- ಪ್ರಬಂಧಚಿಂತಾಮಣಿ

ಒಳ್ಳೆಯ ಗುಣಗಳಿಂದ ಹೆಚ್ಚುತ್ತಿರುವವನನ್ನು ಕಂಡು ನೀಚನು ಯಾವರೀತಿಯಲ್ಲೂ ಸಹಿಸಲಾರ. ಪತಂಗವು ತನ್ನ ಶರೀರವನ್ನು ಸುಟ್ಟುಕೊಂಡಾದರೂ ಉರಿಯುವ ದೀಪವನ್ನಾರಿಸುತ್ತದೆ.

**ಉತ್ತಮೈರುತ್ತಮೈರ್ನಿತ್ಯಂ ಸಂಬಂಧಾನಾಚರೇತ್ಸಹ ।**
**ನಿನೀಷುಃ ಕುಲಮುತ್ಕರ್ಷಮಧಮಾನಧಮಾಂಸ್ತ್ಯಜೇತ್ ॥** ೮೩

- ಮನುಸ್ಮೃತಿ, ೪-೨೪೪

ಯಾವಾಗಲೂ ವಿದ್ಯೆ ಆಚಾರ ಇವುಗಳಲ್ಲಿ ಉತ್ತಮರಾದವರೊಡನೆ ಹೆಣ್ಣುಕೊಟ್ಟು ತರುವ ಸಂಬಂಧಗಳನ್ನು ಬೆಳೆಸಿ ತನ್ನ ಕುಲವನ್ನು ಉತ್ತಮಗೊಳಿಸಿಕೊಳ್ಳಬಹುದು. ಅಧಮರನ್ನು ಬಿಡಬೇಕು.

**ಉದ್ವೇಜನೀಯೋ ಭೂತಾನಾಂ ನೃಶಂಸಃ ಪಾಪಕರ್ಮಕೃತ್ ।**
**ತ್ರಯಾಣಾಮಪಿ ಲೋಕಾನಾಮೀಶ್ವರೋಽಪಿ ನ ತಿಷ್ಠತಿ ॥** ೮೪

- ರಾಮಾಯಣ, ಅರಣ್ಯ. ೨೯-೩

ಜನರಿಗೆ ಉದ್ವೇಗಕಾರಿಯಾಗಿ ದುಷ್ಕೃತ್ಯವನ್ನೆಸಗುವ ಘಾತುಕನು ಮೂರು ಲೋಕಗಳಿಗೆ ಒಡೆಯನಾಗಿದ್ದರೂ ಬಹುಕಾಲ ಬಾಳಲಾರ.

**ಉಪಕರ್ತುಂ ಯಥಾ ಸ್ವಲ್ಪಃ ಸಮರ್ಥೋ ನ ತಥಾ ಮಹಾನ್ ।**
**ಪ್ರಾಯಃ ಕೂಪಸ್ತೃಷಾಂ ಹಂತಿ ನ ಕದಾಪಿ ತು ವಾರಿಧಿಃ ॥** ೮೫

- ಸುಭಾಷಿತರತ್ನಸಮುಚ್ಚಯ

ಸಾಮಾನ್ಯನು ಉಪಕಾರ ಮಾಡುವಂತೆ ದೊಡ್ಡವನು ಉಪಕಾರ ಮಾಡಲು ಸಮರ್ಥನಲ್ಲ. ಬಾಯಾರಿಕೆಯನ್ನು ಬಾವಿ ಹೋಗಲಾಡಿಸಬಲ್ಲುದು, ಸಮುದ್ರವಲ್ಲ.

**ಉಷ್ಟ್ರಾಣಾಂ ಚ ವಿವಾಹೇಷು ಗೀತಂ ಗಾಯಂತಿ ಗರ್ದಭಾಃ ।**
**ಪರಸ್ಪರಂ ಪ್ರಶಂಸಂತಿ ಅಹೋ ರೂಪಮಹೋ ಧ್ವನಿಃ ॥ ೮೬**

- ಸಮಯೋಚಿತರಪದ್ಯಮಾಲಿಕಾ

ಒಂಟೆಗಳ ಮದುವೆಗಳಲ್ಲಿ ಕತ್ತೆಗಳು ಸಂಗೀತ ಹಾಡುತ್ತವೆ. ಪರಸ್ಪರ ಹೀಗೆ ಹೊಗಳಿಕೊಳ್ಳುತ್ತಾರೆ. 'ಆಹಾ ಏನು ರೂಪ! ಆಹಾ ಎಷ್ಟು ಇಂಪಾದ ಧ್ವನಿ !'

**ಋತಾಮೃತಾಭ್ಯಾಂ ಜೀವೇತ್ತು ಮೃತೇನ ಪ್ರಮೃತೇನ ವಾ ।**
**ಸತ್ಯಾನೃತಾಭ್ಯಾಂ ಅಪಿ ವಾ ನ ಶ್ವವೃತ್ತ್ಯಾ ಕದಾಚನ ॥ ೮೭**

- ಮನುಸ್ಮೃತಿ, ೩-೪

ಋತಂ=ಗದ್ದೆ ಹೊಲಗಳಲ್ಲಿ ಹಕ್ಕಲಾರಿಸಿ ಧಾನ್ಯವನ್ನು ಪಡೆದು ಊಟ ಮಾಡುವುದು. ಅಮೃತಂ = ಬೇಡದೆಯೇ ಇತರರು ಕೊಟ್ಟದ್ದು. ಮೃತ=ಬೇಡಿತಂದಿದ್ದು. ಪ್ರಮೃತ = ಬೇಸಾಯ : ಸತ್ಯಾನೃತ = ವ್ಯಾಪಾರ. ಶ್ವವೃತ್ತಿ = ಸೇವೆ. ಸೇವೆಯನ್ನು ಬಿಟ್ಟು ಉಳಿದ ಎಲ್ಲಾ ರೀತಿಗಳಿಂದಲೂ ಗೃಹಸ್ಥನು ಜೀವಿಕೆ ನಡೆಸಬಹುದು.

**ಋತ್ವಿಕ್ಪುರೋಹಿತಾಚಾರ್ಯೈರ್ಮಾತುಲಾತಿಥಿಸಂಶ್ರಿತೈಃ**
**ಬಾಲವೃದ್ಧಾತುರೈರ್ವೈದ್ಯೈರ್ಜ್ಞಾತಿಸಂಬಂಧಿಬಾಂಧವೈಃ ।**
**ಮಾತಾಪಿತೃಭ್ಯಾಂ ಜಾಮೀಭಿರ್ಭ್ರಾತ್ರಾ ಪುತ್ರೇಣ ಭಾರ್ಯಯಾ**
**ದುಹಿತ್ರಾ ದಾಸವರ್ಗೇಣ ವಿವಾದಂ ನ ಸಮಾಚರೇತ್ ॥ ೮೮**

- ಮನುಸ್ಮೃತಿ, ೪-೧೭೯, ೧೮೦

ಋತ್ವಿಕ್, ಪುರೋಹಿತ, ಆಚಾರ್ಯ, ಸೋದರಮಾವ, ಅತಿಥಿ, ತನ್ನ ಆಶ್ರಯದಲ್ಲಿರುವವರು, ಮಕ್ಕಳು, ಮುದುಕರು, ರೋಗಿಗಳು, ವೈದ್ಯರು, ತಂದೆಯ ಕಡೆ ನೆಂಟರು, ಅಳಿಯ ಮೊದಲಾದವರು, ತಾಯಿ ಕಡೆ ನೆಂಟರು, ತಾಯಿ, ತಂದೆ, ತಂಗಿ, ಸೊಸೆ ಮೊದಲಾದವರು, ಸಹೋದರ, ಮಗ, ಹೆಂಡತಿ, ಮಗಳು ಇವರೊಡ ತೀವ್ರವಾದ ವಿವಾದ ಮಾಡಬಾರದು.

**ಏಕಃ ಕ್ಷಮಾವತಾಂ ದೋಷೋ ದ್ವಿತೀಯೋ ನೋಪಪದ್ಯತೇ ।**
**ಯದೇನಂ ಕ್ಷಮಯಾ ಯುಕ್ತಮಶಕ್ತಂ ಮನ್ಯತೇ ಜನಃ ॥ ೮೯**

- ಆಪಸ್ತಂಬಸ್ಮೃತಿ, ೧೦-೫

ತಾಳ್ಮೆಯುಳ್ಳವರಲ್ಲಿ ಒಂದು ದೋಷವುಂಟು ಜನರು ಅವರನ್ನು ಕೈಲಾಗದವರೆಂದು ಭಾವಿಸುತ್ತಾರೆ. ಇದು ಬಿಟ್ಟರೆ ಅದರಲ್ಲಿ ಬೇರೆ ದೋಷವಿಲ್ಲ.

**ಏಕಃ ಪ್ರಸೂಯತೇ ಜಂತುರೇಕ ಏವ ಪ್ರಲೀಯತೇ ।**
**ಏಕೋಽನುಭುಂಕ್ತೇ ಸುಕೃತಮೇಕ ಏವ ಚ ದುಷ್ಕೃತಮ್ ॥ ೯೦**

- ಭಾಗವತ, ೧೦-೪೯-೨೧

ಪ್ರಾಣಿಯು ಈ ಲೋಕದಲ್ಲಿ ಏಕಾಕಿಯಾಗಿ ಹುಟ್ಟುತ್ತಾನೆ ; ಒಬ್ಬನೇ ಸಾಯುತ್ತಾನೆ. ಒಬ್ಬನೇ ತಾನು ಮಾಡಿದ ಪುಣ್ಯವನ್ನು ಅನುಭವಿಸುತ್ತಾನೆ. ಹಾಗೆಯೇ ಕೆಟ್ಟದ್ದನ್ನೂ ತಾನು ಅನುಭವಿಸುತ್ತಾನೆ.

**ಏಕಃ ಸಂಪನ್ನಮಶ್ನಾತಿ ವಸ್ತೇ ವಾಸಶ್ಚ ಶೋಭನಂ ।**
**ಯೋಽಸಂವಿಭಜ್ಯ ಭೃತ್ಯೇಭ್ಯಃ ಕೋ ನೃಶಂಸತರಸ್ತತಃ ॥ ೯೧**

- ಮಹಾಭಾರತ, ಉದ್ಯೋಗ. ೩-೪೧

ಯಾವನು ಆಶ್ರಿತರಿಗೆ ಏನನ್ನೂ ಕೊಡದೆ ತಾನೊಬ್ಬನೇ ಮಿಷ್ಟಾನ್ನವನ್ನು ತಿನ್ನುವನೋ, ಒಳ್ಳೆಯ ಬಟ್ಟೆಯನ್ನು ಉಡುವನೋ ಅವನಿಗಿಂತಲೂ ಪಾಪಿಯಾರು ?

**ಏಕಃ ಸ್ವಾದು ನ ಭುಂಜೀತ ಏಕಶ್ಚಾರ್ಥಾನ್ನ ಚಿಂತಯೇತ್ ।**
**ಏಕೋ ನ ಗಚ್ಛೇದಧ್ವಾನಂ ನೈಕಃ ಸುಪ್ತೇಷು ಜಾಗೃಯಾತ್ ॥ ೯೨**

- ಮಹಾಭಾರತ, ಉದ್ಯೋಗ. ೩೩-೪೬

ರುಚಿಕರವಾದ ಆಹಾರವನ್ನು ತಾನೊಬ್ಬನೇ ತಿನ್ನಬಾರದು, ಕಾರ್ಯಾಕಾರ್ಯಗಳನ್ನು ಪರ್ಯಾಲೋಚಿಸಬಾರದು. ಒಬ್ಬನೇ ಪ್ರಯಾಣಮಾಡಬಾರದು. ಇತರರು ನಿದ್ರಿಸುವಾಗ ಒಬ್ಬನೇ ನಿದ್ರಿಸದೇ ಕುಳಿತಿರಬಾರದು.

**ಏಕಂ ಹಿ ಚಕ್ಷುರಮಲಂ ಸಹಜೋ ವಿವೇಕಃ**
**ವಿದ್ವದ್ಭಿರೇವ ಸಹ ಸಂವಸನಂ ದ್ವಿತೀಯಂ ।**
**ಯಸ್ಯಾಸ್ತಿ ನ ದ್ವಯಮಿದಂ ಸ್ಫುಟಮೇವ ಸೋಽಧಃ**
**ತಸ್ಯಾಪಮಾರ್ಗಚಲನೇ ವದ ಕೋಽಪರಾಧಃ ॥ ೯೩**

- ಸುಭಾಷಿತಸುಧಾನಿಧಿ

ಸಹಜವಾದ ವಿವೇಕವು ಸ್ವಚ್ಛವಾದ ಒಂದು ಕಣ್ಣಷ್ಟೆ ? ವಿದ್ವಾಂಸರೊಡನೆಯೇ ವಾಸಿಸುವುದು ಎರಡನೆಯ ಕಣ್ಣು. ಯಾರಿಗೆ ಇವೆರಡೂ ಇಲ್ಲವೋ ಅವನು ಸ್ಪಷ್ಟವಾಗಿ ಕುರುಡನೇ. ಅವನು ಕೆಟ್ಟ ಮಾರ್ಗದಲ್ಲಿ ನಡೆದರೆ ಯಾರ ತಪ್ಪು ? ಹೇಳು.

**ಏಕೇನ ಶುಷ್ಕವೃಕ್ಷೇಣ ದಹ್ಯಮಾನೇನ ವಹ್ನಿನಾ ।**
**ದಹ್ಯತೇ ಕಾನನಂ ಸರ್ವಂ ದುಷ್ಪುತ್ರೇಣ ಕುಲಂ ಯಥಾ ॥ ೯೪**

- ಸುಭಾಷಿತರತ್ನಸಮುಚ್ಚಯ

ಅಡವಿಯಲ್ಲಿ ಒಂದು ಒಣಮರಕ್ಕೆ ಬೆಂಕಿ ಹತ್ತಿದರೆ ಅಡವಿಯೇ ಸುಟ್ಟು ಹೋಗುತ್ತದೆ. ಒಬ್ಬ ದುಷ್ಪುತ್ರನಿಂದ ಕುಲವೇ ಹಾಳಾಗುವಂತೆ.

**ಏಕೇನಾಪಿ ಸುಪುತ್ರೇಣ ಸಿಂಹೀ ಸ್ವಪಿತಿ ನಿರ್ಭಯಂ ।**
**ಸಹೈವ ದಶಭಿಃ ಪುತ್ರೈರ್ಭಾರಂ ವಹತಿ ಗರ್ದಭೀ ॥ ೯೫**

- ಸುಭಾಷಿತರತ್ನಸಮುಚ್ಚಯ

ಸಮರ್ಥನಾದ ಒಬ್ಬ ಮಗನಿದ್ದರೆ ಸಾಕು, ಹೆಣ್ಣು ಸಿಂಹವು ನಿರ್ಭಯವಾಗಿ ನಿದ್ರಿಸುತ್ತದೆ. ಕತ್ತೆಗೆ ಹತ್ತು ಮಕ್ಕಳಿದ್ದರೂ ಭಾರವನ್ನು ಹೊರುತ್ತದೆ.

**ಏಕೋ ದೇವಃ ಕೇಶವೋ ವಾ ಶಿವೋ ವಾ**
**ಹ್ಯೇಕಂ ಮಿತ್ರಂ ಭೂಪತಿರ್ವಾ ಯತಿರ್ವಾ ।**
**ಏಕೋ ವಾಸಃ ಪತ್ತನೇ ವಾ ವನೇ ವಾ**
**ಹ್ಯೇಕಾ ನಾರೀ ಸುಂದರೀ ವಾ ದರೀ ವಾ ॥ ೯೬**

- ನೀತಿಶತಕ - ೬೭

ಕೇಶವನೋ ಶಿವನೋ ಒಬ್ಬ ದೇವನನ್ನು ನಂಬಬೇಕು. ಸ್ನೇಹಿತವನಾದವನು ರಾಜನಾಗಿರಬೇಕು ಇಲ್ಲವೆ ಯತಿಯಾಗಿರಬೇಕು. ಪಟ್ಟಣದಲ್ಲಿ ವಾಸಮಾಡಬೇಕು. ಇಲ್ಲದಿದ್ದರೆ ಕಾಡಿನಲ್ಲಿರಬೇಕು. ಹೆಂಡತಿ ಇದ್ದರೆ ಸುಂದರಿಯಾಗಿರಬೇಕು. ಹಾಗಿಲ್ಲದಿದ್ದರೆ ಗುಹೆಯನ್ನು ಆಶ್ರಯಿಸಬೇಕು.

**ಏತಾವಜ್ಜನ್ಮಸಾಫಲ್ಯಂ ಯದನಾಯತ್ತವೃತ್ತಿತಾ ।**
**ಯೇ ಪರಾಧೀನತಾಂ ಯಾತಾಸ್ತೇ ವೈ ಜೀವಂತಿ ಕೇ ಮೃತಾಃ ॥ ೯೭**

- ಸುಭಾಷಿತರತ್ನಭಾಂಡಾಗಾರ

ಇನ್ನೊಬ್ಬರಿಗೆ ಅಧೀನವಲ್ಲದ ವೃತ್ತಿಯನ್ನು ಹೊಂದಿರುವಿಕೆಯೇ ಜನ್ಮಕ್ಕೆ ಸಾರ್ಥಕವಾದುದು. ಪರಾಧೀನವಾಗಿರುವರೂ ಬದುಕಿದ್ದರೆಂದು ಹೇಳುವುದಾದರೆ ಸತ್ತವರು ಯಾರು ?

**ಏತಾವಜ್ಜನ್ಮಸಾಫಲ್ಯಂ ದೇಹಿನಾಮಿಹ ದೇಹಿಷು ।**
**ಪ್ರಾಣೈರರ್ಥೈರ್ಧಿಯಾ ವಾಚಾ ಶ್ರೇಯ ಏವಾಚರೇತ್ಸದಾ ॥ ೯೮**

- ಭಾಗವತ, ೧೦-೨೨-೩೫

ಪ್ರಾಣ, ಧನ, ಬುದ್ಧಿ, ಮಾತು ಇವುಗಳ ವಿನಿಯೋಗದಿಂದ ಪರರ ಶ್ರೇಯಸ್ಸನ್ನು ಸಾಧಿಸುವುದೇ ಮನುಷ್ಯನಾಗಿ ಹುಟ್ಟಿದ್ದಕ್ಕೆ ಸಾಫಲ್ಯ.

**ಏತಾವಾನೇವ ಪುರುಷಃ ಕೃತಂ ಯಸ್ಮಿನ್ ನ ನಶ್ಯತಿ ।**
**ಯಾವಚ್ಚ ಕುರ್ಯಾದನ್ಯೋಽಸ್ಯ ಕುರ್ಯಾದ್ಬಹುಗುಣಂ ತತಃ ॥ ೯೯**

- ಮಹಾಭಾರತ, ಆದಿ. ೧೬೧-೧೪

ಯಾವಾತನಿಗೆ ಮಾಡಿದ ಉಪಕಾರವು ಅಲ್ಲಿಯೇ ಕ್ಷೀಣಿಸುವುದಿಲ್ಲವೋ ಆತನೇ ಪುರುಷ. ಇನ್ನೊಬ್ಬನು ಮಾಡಿದ ಉಪಕಾರಕ್ಕಿಂತ ಹೆಚ್ಚಿನ ಪ್ರತ್ಯುಪಕಾರವನ್ನು ಮಾಡಬೇಕು.

**ಏವಂ ಬಲಿಭ್ಯೋ ಬಲಿನಃ ಸಂತಿ ರಾಘವನಂದನ ।**
**ನಾವಜ್ಞಾ ಹಿ ಪರೇ ಕಾರ್ಯಾ ಯ ಇಚ್ಛೇತ್ ಪ್ರಿಯಮಾತ್ಮನಃ ॥ ೧೦೦**

- ರಾಮಾಯಣ, ಉತ್ತರ. ೩೪-೨೨

ರಾಘವ, ಹೀಗೆ ಬಲಶಾಲಿಗಳಿಗಿಂತ ಹೆಚ್ಚಿನ ಬಲಾಢ್ಯರಿರುತ್ತಾರೆ. ಆದ್ದರಿಂದ ತಮ್ಮ ಹಿತವನ್ನು ಬಯಸತಕ್ಕವನು ಬೇರೆಯವರನ್ನು ಉಪೇಕ್ಷೆ ದೃಷ್ಟಿಯಿಂದ ಕಾಣಬಾರದು. (ಅಗಸ್ತ್ಯರು ಶ್ರೀರಾಮನಿಗೆ ಹೇಳಿದ್ದು)

**ಐಶ್ವರ್ಯಸ್ಯ ವಿಭೂಷಣಂ ಸುಜನತಾ ಶೌರ್ಯಸ್ಯ ವಾಕ್ಸಂಯಮಃ**
**ಜ್ಞಾನಸ್ಯೋಪಶಮಃ ಶ್ರುತಸ್ಯ ವಿನಯೋ ವಿತ್ತಸ್ಯ ಪಾತ್ರೇ ವ್ಯಯಃ ।**
**ಅಕ್ರೋಧಸ್ತಪಸಃ ಕ್ಷಮಾ ಪ್ರಭವಿತುರ್ಧರ್ಮಸ್ಯ ನಿರ್ವ್ಯಾಜತಾ**
**ಸರ್ವೇಷಾಮಪಿ ಸರ್ವಕಾರಣಮಿದಂ ಶೀಲಂ ಪರಂ ಭೂಷಣಮ್ ॥೧೦೧**

- ನೀತಿಶತಕ - ೮೦

ಐಶ್ವರ್ಯಕ್ಕೆ ಸೌಜನ್ಯವೂ, ಪರಾಕ್ರಮಕ್ಕೆ ಮಿತ ಭಾಷಣವೂ, ಜ್ಞಾನಕ್ಕೆ ಉಪಶಮನವೂ, ವಿದ್ಯೆಗೆ ವಿನಯವೂ, ಹಣಕ್ಕೆ ಸತ್ಪಾತ್ರವ್ಯಯವೂ, ತಪಸ್ಸಿಗೆ ಕೋಪವಿಲ್ಲ ದಿರುವಿಕೆಯೂ, ಪ್ರಭುವಿಗೆ ಕ್ಷಮೆಯೂ, ಧರ್ಮಕ್ಕೆ ಫಲಾಪೇಕ್ಷೆ ಯಿಲ್ಲದಿರುವುದೂ ಭೂಷಣಗಳು. ಆದರೆ ಎಲ್ಲಕ್ಕೂ ಮುಖ್ಯ ಕಾರಣವಾದ ಶೀಲವೇ ಶ್ರೇಷ್ಠ ಭೂಷಣ.

**ಐಶ್ವರ್ಯಾದನಪೇತಮೀಶ್ವರಮಯಂ ಲೋಕೋಽರ್ಥತಃ ಸೇವತೇ**
**ತಂ ಗಚ್ಛಂತ್ಯನು ಯೇ ವಿಪತ್ತಿಷು ಪುನಸ್ತೇ ತತ್ಪ್ರತಿಷ್ಠಾಶಯಾ ।**
**ಭರ್ತುರ್ಯೇ ಪ್ರಲಯೇಽಪಿ ಪೂರ್ವಸುಕೃತಾಸಂಗೇನ ನಿಃಸಂಗಯಾ**
**ಭಕ್ತ್ಯಾ ಕಾರ್ಯಧುರಂ ವಹಂತಿ ಬಹವಸ್ತೇ ದುರ್ಲಭಾಸ್ತ್ವಾದೃಶಾಃ ॥ ೧೦೨**

- ಮುದ್ರಾರಾಕ್ಷಸ, ೧-೧೪

ಅಧಿಕಾರ, ಸಂಪತ್ತು ಇವುಗಳಿಂದ ಕೂಡಿದ ರಾಜನನ್ನು ಜನಗಳು ಹಣಕ್ಕಾಗಿ ಓಲೈಸುತ್ತಾರೆ. ಆಪತ್ತಿನಲ್ಲಿ ಅವನನ್ನು ಅನುಸರಿಸುವವರು ಮತ್ತೆ ಅವನು ಅರಸನಾದರೆ ತಮಗೆ ಲಾಭವಾಗುವುದೆಂದು ಆಸೆಯುಳ್ಳವರು. ಆದರೆ ಯಜಮಾನನು ಸತ್ತಮೇಲೆಯೂ ಸಹ ಅವನು ಹಿಂದೆ ಮಾಡಿದ ಒಳ್ಳೆಯ ಕೆಲಸಗಳನ್ನು ಸ್ಮರಿಸಿ ಭಕ್ತಿಯಿಂದ ಕಾರ್ಯವನ್ನು ನಿರ್ವಹಿಸುವರು ವಿರಳ.

**ಔತ್ಸುಕ್ಯಮಾತ್ರಮವಸಾಯಯತಿ ಪ್ರತಿಷ್ಠಾ**
**ಕ್ಲಿಶ್ನಾತಿ ಲಬ್ಧಪರಿಪಾಲನವೃತ್ತಿರೇವಂ ।**
**ನಾತಿಶ್ರಮಾಪನಯನಾಯ ನ ಚ ಶ್ರಮಾಯ**
**ರಾಜ್ಯಂ ಸ್ವಹಸ್ತಧೃತದಂಡಮಿವಾತಪತ್ರಮ್ ॥** ೧೦೩

- ಅಭಿಜ್ಞಾನಶಾಕುಂತಲ, ೫-೬

ರಾಜನಾಗುವವರೆಗೆ ರಾಜನಾಗಬೇಕೆಂಬ ಔತ್ಸುಕ್ಯ - ತೀರದ ಆಸೆ ಇರುತ್ತದೆ. ರಾಜನಾದಮೇಲೆ ಈ ಆಸೆಯು ತೀರುತ್ತದೆ. ಆದರೆ ಕೈಲಿರುವ ವಸ್ತುವನ್ನು ಕಾಪಾಡುವ ಹೊಣೆ ತುಂಬ ತೊಂದರೆ ಕೊಡುತ್ತದೆ. ಕೊಡೆಯನ್ನು ಹಿಡಿಯುವುದು ಹೆಚ್ಚು ಆಯಾಸವನ್ನುಂಟುಮಾಡುವುದಿಲ್ಲ ಮತ್ತು ಹೆಚ್ಚು ಆಯಾಸವನ್ನು ಹೋಗಲಾಡಿಸುವುದೂ ಅಲ್ಲ. ರಾಜ್ಯವು ಇದೇ ರೀತಿ ಇರುತ್ತದೆ.

**ಕರ್ತವ್ಯಮೇವ ಕರ್ತವ್ಯಂ ಪ್ರಾಣೈಃ ಕಂಠಗತೈರಪಿ ।**
**ಅಕರ್ತವ್ಯಂ ನ ಕರ್ತವ್ಯಂ ಪ್ರಾಣೈಃ ಕಂಠಗತೈರಪಿ ॥** ೧೦೪

- ಸುಭಾಷಿತರತ್ನಭಾಂಡಾಗಾರ

ಗಂಟಲಲ್ಲಿ ಪ್ರಾಣ ಹೋಗುತ್ತಿದ್ದರೂ ಸಹ ಬೇಕಾದದ್ದನ್ನೇ ಮಾಡಬೇಕು, ಮಾಡಬಾರದ್ದನ್ನು ಮಾಡಲೇಬಾರದು.

**ಕದರ್ಥಿತಸ್ಯಾಪಿ ಹಿ ಧೈರ್ಯವೃತ್ತೇಃ**
**ನ ಶಕ್ಯತೇ ಧೈರ್ಯಗುಣಃ ಪ್ರಮಾರ್ಷ್ಟುಮ್ ।**
**ಅಧೋಮುಖಸ್ಯಾಪಿ ಕೃತಸ್ಯ ವಹ್ನೇಃ**
**ನಾಧಃ ಶಿಖಾ ಯಾತಿ ಕದಾಚಿದೇವ ॥** ೧೦೫

- ನೀತಿಶತಕ - ೮೨

ಬಡತನ ಪ್ರಾಪ್ತವಾಗಿದ್ದರೂ ಧೈರ್ಯಸ್ವಭಾವದವನ ಧೈರ್ಯಗುಣವನ್ನು ತೊಡೆದು ಹಾಕಲು ಸಾಧ್ಯವಿಲ್ಲ. ಬೆಂಕಿಯನ್ನು ಕೆಳಮುಖ ಮಾಡಿದರೂ ಅದರ ಜ್ವಾಲೆ ಎಂದೂ ಕೆಳಮುಖವಾಗಿ ಹೊರಡುವುದಿಲ್ಲ.

**ಕ್ಷಂತವ್ಯೋ ಮಂದಬುದ್ಧೀನಾಮಪರಾಧೋ ಮನೀಷಿಣಾ ।**
**ನ ಹಿ ಸರ್ವತ್ರ ಪಾಂಡಿತ್ಯಂ ಸುಲಭಂ ಪುರುಷೇ ಕ್ವಚಿತ್ ॥೧೦೬**

- ಸುಭಾಷಿತರತ್ನಭಾಂಡಾಗಾರ

. ಬುದ್ಧಿವಂತನಾದವನು ದಡ್ಡನು ಮಾಡಿದ ತಪ್ಪನ್ನು ಕ್ಷಮಿಸಬೇಕು. ಎಲ್ಲೆಲ್ಲಿಯೂ ಪಾಂಡಿತ್ಯವಿರುವುದು ಸುಲಭವಲ್ಲ ; ಒಂದೊಂದು ಕಡೆ ಮಾತ್ರ ಅದು ಇದ್ದೀತು.

**ಕನ್ಯಾ ವರಯತೇ ರೂಪಂ ಮಾತಾ ವಿತ್ತಂ ಪಿತಾ ಶ್ರುತಂ ।**
**ಬಾಂಧವಾಃ ಕುಲಮಿಚ್ಛಂತಿ ಮಿಷ್ಟಾನ್ನಮಿತರೇ ಜನಾಃ ॥ ೧೦೭**

- ಸುಭಾಷಿತರತ್ನಸಮುಚ್ಚಯ

ವರನಲ್ಲಿ ರೂಪವಿರಬೇಕೆಂದು ಕನ್ಯೆ ಬಯಸುತ್ತಾಳೆ. ತಾಯಿ ಐಶ್ವರ್ಯವನ್ನು, ತಂದೆ ವಿದ್ಯೆಯನ್ನು, ಬಂಧುಗಳು ಉತ್ತಮ ಕುಲವನ್ನು ಬಯಸುತ್ತಾರೆ. ಇತರರು ಸೊಗಸಾದ ಊಟವನ್ನು ಬಯಸುತ್ತಾರೆ!

**ಕನ್ಯಾಯಾಶ್ಚ ವರಸ್ಯಾಪಿ ಯತ್ರೋಭಯೋರ್ಭವೇದ್ರತಿಃ ।**
**ತಥಾ ಕನ್ಯಾಂ ವರೋ ಧೀಮಾನ್ ವರಯೇದ್ವಂಶಶುದ್ಧಯೇ ॥ ೧೦೮**

- ಬೃಹತ್‌ಪರಾಶರಸ್ಮೃತಿ, ೬-೨೪

ಕನ್ಯೆಯೂ ವರನೂ ಪರಸ್ಪರ ಪ್ರೀತಿಸಿದ ಸಂದರ್ಭದಲ್ಲಿ ಬುದ್ಧಿವಂತನಾದ ವರನು ಅಂತಹ ಕನ್ಯೆಯನ್ನು ವಂಶದ ಶುದ್ಧಿಗೋಸ್ಕರ ವರಿಸಬೇಕು.

**ಕನ್ಯಾಯಾಃ ವರಸಂಪತ್ತಿಃ ಪಿತುಃ ಪ್ರಾಯಃ ಪ್ರಯತ್ನತಃ ।**
**ಭಾಗ್ಯೇಷು ಶೇಷಮಾಯತ್ತಂ ದೃಷ್ಟಪೂರ್ವಂ ನ ಚಾನ್ಯಥಾ ॥೧೦೯**

- ಪ್ರತಿಜ್ಞಾಯೌಗಂಧರಾಯಣ, ೨-೫

ಒಬ್ಬ ಹೆಣ್ಣಿಗೆ ಎಷ್ಟು ಉತ್ತಮನಾದ ವರನು ಸಿಕ್ಕುತ್ತಾನೆಂಬುದು ಆ ಹೆಣ್ಣಿನ ತಂದೆಯ ಪ್ರಯತ್ನವನ್ನು ಅವಲಂಬಿಸಿರುತ್ತದೆ. ಉಳಿದ ವಿಷಯಗಳು ಅದೃಷ್ಟದಂತೆ ನಡೆಯುತ್ತವೆ. ತಂದೆಯ ವಿಶೇಷ ಪ್ರಯತ್ನ, ಅದೃಷ್ಟ ಇವುಗಳಲ್ಲದೆ ಬೇರೆ ಯಾವುದೂ ಇದಕ್ಕೆ ಕಾರಣವಾಗಲಾರದೆಂದು ಹಿಂದಿನ ಅನುಭವದಿಂದ ತಿಳಿದಿದ್ದೇವೆ.

**ಕಪಿರಪಿ ಚ ಕಾಪಿಶಾಯನಮದಮತ್ತೋ ವೃಶ್ಚಿಕೇನ ಸಂದಷ್ಟಃ ।**
**ಅಪಿ ಚ ಪಿಶಾಚಗ್ರಸ್ತಃ ಕಿಂ ಬ್ರೂಮೋ ವೈಕೃತಂ ತಸ್ಯ ॥ ೧೧೦**

- ಕುವಲಯಾನಂದ

ಮೊದಲೇ ಕಪಿ ; ಮದ್ಯವನ್ನು ಬೇರೆ ಕುಡಿದು ಮತ್ತವಾಗಿದೆ ; ಅದರಮೇಲೆ ಚೇಳು ಕುಟುಕಿದೆ. ಇಷ್ಟು ಸಾಲದೆಂದು ಅದಕ್ಕೆ ಭೂತಾವೇಶವಾಗಿದೆ. ಆ ಕಪಿಯ ಕುಚೇಷ್ಟೆಯನ್ನು ಏನೆಂದು ಹೇಳೋಣ !

**ಕರ್ಪೂರ ಇವ ದಗ್ಧೋऽಪಿ ಶಕ್ತಿಮಾನ್ ಯೋ ದಿನೇ ದಿನೇ ।**
**ನಮೋಽಸ್ತ್ವವಾರ್ಯವೀರ್ಯಾಯ ತಸ್ಮೈ ಕುಸುಮಧನ್ವನೇ ॥ ೧೧೧**

- ಲೋಚನ-೧

ಕರ್ಪೂರದ ಹಾಗೆ (ಬೂದಿಯೂ ಉಳಿಯದಂತೆ) ಸುಟ್ಟು ಹೋಗಿದ್ದರೂ ಯಾವನು ದಿನೇ ದಿನೇ ಪ್ರಬಲನಾಗುತ್ತಲೇ ಇರುವನೋ, ಅಂಥ ಅನಿವಾರ್ಯ ಸಾಮರ್ಥ್ಯವಿರುವ ಆ ಮನ್ಮಥನಿಗೆ ನಮಸ್ಕಾರ !

**ಕ್ಷಮಯಾ ಜಯ ವಿಪ್ರೇಂದ್ರಾನ್**
**ದಯಯಾ ಜಯ ಸಂಶ್ರಿತಾನ್ ।**
**ತತ್ತ್ವಬುದ್ಧ್ಯಾ ಜಯಾತ್ಮಾನಂ**
**ತೇಜಸಾ ಜಯ ಪಾರ್ಥಿವಾನ್ ॥ ೧೧೨**

- ಅವಿಮಾರಕ, ೬-೧೭

ಶ್ರೇಷ್ಠರಾದ ಬ್ರಾಹ್ಮಣರನ್ನು ತಾಳ್ಮೆಯಿಂದ ಗೆಲ್ಲು. ಆಶ್ರಿತರನ್ನು ದಯೆಯಿಂದ ವಶಪಡಿಸಿಕೋ. ತತ್ವಜ್ಞಾನದಿಂದ ಆತ್ಮಸ್ವರೂಪವನ್ನು ತಿಳಿ. ಪರಾಕ್ರಮದಿಂದ ಅರಸರನ್ನು ಗೆಲ್ಲು.

**ಕ್ಷಮಯಾ ರೋಚತೇ ಲಕ್ಷ್ಮೀರ್ಬ್ರಾಹ್ಮೀ ಸೌರೀ ಯಥಾ ಪ್ರಭಾ ।**
**ಕ್ಷಮಿಣಾಮಾಶು ಭಗವಾಂಸ್ತುಷ್ಯತೇ ಹರಿರೀಶ್ವರಃ ॥ ೧೧೩**

- ಭಾಗವತ, ೯-೧೫-೪೦

ಕ್ಷಮೆಯಿಂದ ಮನುಷ್ಯನ ಮುಖಕಾಂತಿಯು ಸೂರ್ಯನ ಪ್ರಭೆಯಂತೆ ಬೆಳಗುತ್ತದೆ. ಸರ್ವೇಶ್ವರನಾದ ಪರಮಾತ್ಮನು ಕ್ಷಮೆಯುಳ್ಳವರಲ್ಲಿ ಬಹಳ ಬೇಗ ಸಂತೋಷ ಪಡುತ್ತಾನೆ.

**ಕ್ಷಮೀ ದಾತಾ ಗುಣಗ್ರಾಹೀ ಸ್ವಾಮೀ ದುಃಖೇನ ಲಭ್ಯತೇ ।**
**ಶುಚಿರ್ದಕ್ಷೋಽನುರಕ್ತಶ್ಚ ಜಾನೇ ಭೃತ್ಯೋಽಪಿ ದುರ್ಲಭಃ ॥ ೧೧೪**

- ಹಿತೋಪದೇಶ, ವಿಗ್ರಹ - ೧೩೭

ಕ್ಷಮಾಗುಣವುಳ್ಳವನೂ ಗುಣವನ್ನರಿಯುವರನೂ ದಾನಿಯಾದವನೂ ಆದ ಒಡೆಯನನ್ನು ಪಡೆಯುವುದು ಬಹಳ ಕಷ್ಟ. ಹಾಗೆಯೇ ಸಮರ್ಥನೂ, ಶುದ್ಧನೂ,

ಒಡೆಯನಲ್ಲಿ ಪ್ರೀತಿಯುಳ್ಳವನೂ ಆದ ಸೇವಕನೂ ಸಿಕ್ಕುವುದು ಕಷ್ಟವೆಂದು ನನ್ನ ತಿಳಿವಳಿಕೆ.

**ಕರೇ ಶ್ಲಾಘ್ಯಸ್ತ್ಯಾಗಃ ಶಿರಸಿ ಗುರುಪಾದಪ್ರಣಯಿತಾ**
**ಮುಖೇ ಸತ್ಯಾ ವಾಣೀ ವಿಜಯಿ ಭುಜಯೋರ್ವೀರ್ಯಮತುಲಂ ।**
**ಹೃದಿ ಸ್ವಚ್ಛಾ ವೃತ್ತಿಃ ಶ್ರುತಮಧಿಗತಂ ಚ ಶ್ರವಣಯೋಃ**
**ವಿನಾಪ್ಯೈಶ್ವರ್ಯೇಣ ಪ್ರಕೃತಿಮಹತಾಂ ಮಂಡನಮಿದಮ್ ॥ ೧೧೫**

- ನೀತಿಶತಕ - ೬೩

ಕೈಗಳಿಗೆ ಪ್ರಶಂಸನೀಯವಾದ ತ್ಯಾಗವೂ, ತಲೆಗೆ ಗುರುಹಿರಿಯರ ಪಾದಗಳಿಗೆರಗುವುದೂ, ಮುಖಕ್ಕೆ ಸತ್ಯವಾದ ನುಡಿಯೂ, ಅಸಮಾನವಾದ ಪರಾಕ್ರಮ ಗೆಲ್ಲತಕ್ಕ ತೋಳುಗಳಿಗೂ, ಮನಸ್ಸಿಗೆ ನಿರ್ಮಲವಾದ ವೃತ್ತಿಯೂ, ಎರಡು ಕಿವಿಗಳಿಗೆ ಕಲಿತ ವಿದ್ಯೆಯೂ, ಇವೆಲ್ಲವೂ ಸ್ವಾಭಾವಿಕವಾಗಿ ದೊಡ್ಡವರಾಗಿರುವವರಿಗೆ, ಐಶ್ವರ್ಯವಿಲ್ಲದಿದ್ದರೂ ಅಲಂಕಾರಗಳು.

**ಕಲ್ಯಾಣೀ ಬತ ಗಾಥೇಯಂ ಲೌಕಿಕೀ ಪ್ರತಿಭಾತಿ ಮೇ ।**
**ಏತಿ ಜೀವಂತಮಾನಂದೋ ನರಂ ವರ್ಷಶತಾದಪಿ ॥ ೧೧೬**

- ರಾಮಾಯಣ, ಸುಂದರ. ೩೪-೬
- ರಾಮಾಯಣ, ಯುದ್ಧ. ೧೨೬-೨

'ಮನುಷ್ಯನು ಬದುಕಿದ್ದರೆ ನೂರು ವರ್ಷಗಳ ಮೇಲಾದರೂ ಸುಖದ ದಿನವನ್ನು ಕಾಣುತ್ತಾನೆ' ಎಂಬ ಲೋಕದ ಹೇಳಿಕೆ ಸತ್ಯವಾಗಿ ತೋರುತ್ತದೆ. (ಹನುಮಂತನಿಂದ ಶ್ರೀರಾಮನ ಸುದ್ದಿಯನ್ನರಿತ ಸೀತೆ ಮತ್ತು ಭರತ ಹೇಳಿಕೊಂಡದ್ದು)

**ಕವಿತ್ವಸ್ಯ ಗಾಂಭೀರ್ಯಮೌದಾರ್ಯಮೃದ್ಧೇಃ**
**ಪ್ರಭುತ್ವಸ್ಯ ಶೌರ್ಯಂ ಗುರುತ್ವಸ್ಯ ವಿದ್ಯಾಂ ।**
**ಮಹಾವಂಶ್ಯತಾಯಾಃ ಸದಾಚಾರಪೂರ್ತಿಂ**
**ಮಹತ್ತ್ವಸ್ಯ ಸೌಲಭ್ಯಮಾಕಲ್ಪಮಾಹುಃ ॥ ೧೧೭**

- ವಿಶ್ವಗುಣಾದರ್ಶ - ೩೪೪

ಕವಿತೆಗೆ ಅರ್ಥಬಾಹುಳ್ಯ, ಸಂಪತ್ತಿಗೆ ಔದಾರ್ಯ, ಪ್ರಭುತ್ವಕ್ಕೆ ಪರಾಕ್ರಮ, ಗುರುತ್ವಕ್ಕೆ ವಿದ್ಯೆ, ದೊಡ್ಡ ವಂಶದಲ್ಲಿ ಹುಟ್ಟಿದುದಕ್ಕೆ ಸದಾಚಾರ, ಮಹತ್ವಕ್ಕೆ ಸೌಲಭ್ಯ ಅಲಂಕಾರವೆಂದು ಹೇಳುವರು.

**ಕಷ್ಟಂ ಖಲು ಮೂರ್ಖತ್ವಂ**
**ಕಷ್ಟಂ ಖಲು ಯೌವನೇಷು ದಾರಿದ್ರ್ಯಂ ।**

ಕಷ್ಟಾತ್ ಕಷ್ಟತರಂ ಕಿಂ
ಪರಗೃಹವಾಸಃ ಪರಾನ್ನಂ ಚ ॥ ೧೧೮

- ಸಮಯೋಚಿತಪದ್ಯಮಾಲಿಕಾ

ಮೂರ್ಖತೆಯೆಂಬುದು ಕಷ್ಟ. ಯೌವನ ಕಾಲದಲ್ಲಿ ಬಡತನವೂ ನಿಜವಾಗಿ ಕಷ್ಟವೇ. ಈ ಕಷ್ಟಕ್ಕಿಂತ ಹೆಚ್ಚಿನ ಕಷ್ಟಕರವಾದದ್ದು ಯಾವುದು ? ಪರಗೃಹವಾಸ ಮತ್ತು ಪರಾನ್ನ.

ಕಃ ಸಂಬಂಧೋ ಯದಭಿರಮತೇ ವೀಕ್ಷ್ಯ ಮೇಘಂ ಮಯೂರೀ
ಕೈವಾಸತ್ತಿರ್ಯದಮೃತರುಚೌ ಸಾನುಬಂಧಾ ಚಕೋರೀ ।
ಕೋ ವಾ ಹೇತುಃ ಪತತಿ ಪರಿತೋ ಯತ್ಕೃಶಾನೌ ಪತಂಗಃ
ಪ್ರಾಯೇಣೈವಂ ವಿಧಿಪರವಶಾ ಪ್ರಾಣಿನಾಂ ಚಿತ್ತವೃತ್ತಿಃ ॥ ೧೧೯

- ಅನ್ಯಾಪದೇಶಶತಕ - ೨೩

ಮೇಘವನ್ನು ನೋಡಿ ನವಿಲು ಕುಣಿಯುವುದಲ್ಲ, ಸಂಬಂಧವೇನು ? ಚಂದ್ರನಲ್ಲಿ ಚಕೋರವು ಪ್ರೀತಿಯನ್ನಿಟ್ಟಿರುವುದಲ್ಲ, ಬಾಂಧವ್ಯ ಯಾವುದು ? ಪತಂಗವು ಬೆಂಕಿಯ ಸುತ್ತಲೂ ಎರಗಿ ಬೀಳುವುದಿಲ್ಲ, ಕಾರಣವೇನು? ಹೀಗೆ ಸಾಮಾನ್ಯವಾಗಿ ಪ್ರಾಣಿಗಳ ಮನೋವೃತ್ತಿ ದೈವಾಧೀನವಾದದ್ದು.

ಕಸ್ಯ ನ ಶೋಕೋ ಯಃ ಸ್ಯಾತ್
ಅಕ್ರೋಧಃ ಕಿಂ ಸುಖಂ ತುಷ್ಟಿಃ ।
ಕೋ ರಾಜಾ ರಂಜನಕೃತ್
ಕಶ್ಚ ಶ್ವಾ ನೀಚಸೇವಕೋ ಯಃ ಸ್ಯಾತ್ ॥ ೧೨೦

- ಪ್ರಶ್ನೋತ್ತರರತ್ನಮಾಲಿಕಾ

ಶೋಕರಹಿತನು ಯಾರು ? ಕ್ರೋಧರಹಿತ. ಯಾವುದು ಸುಖ ? ಸಂತೃಪ್ತಿ. ಯಾವನು ರಾಜ ? ಪ್ರಜಾರಂಜನೆಯನ್ನು ಮಾಡತಕ್ಕವನು. ಯಾರು ನಾಯಿ ? ಯಾರ ನೀಚರ ಸೇವಕನೋ ಅವನು.

ಕಸ್ಮಾದಿಂದುರಸೌ ಧಿನೋತಿ ಜಗತೀಂ ಪೀಯೂಷಗರ್ಭೈಃ ಕರೈಃ
ಕಸ್ಮಾದ್ವಾ ಜಲಧಾರಯೈಷ ಧರಣೀಂ ಧಾರಾಧರಃ ಸಿಂಚತಿ ।
ಭ್ರಾಮಂ ಭ್ರಾಮಮಯಂ ಚ ನಂದಯತಿ ವಾ ಕಸ್ಮಾತ್ತ್ರಿಲೋಕೀಂ ರವಿಃ
ಸಾಧೂನಾಂ ಹಿ ಪರೋಪಕಾರಕರಣೇ ನೋಪಾದ್ಯಪೇಕ್ಷಂ ಮನಃ ॥ ೧೨೧

- ಭಾವವಿಲಾಸ

ಅಮೃತಮಯವಾದ ಕಿರಣಗಳಿಂದ ಚಂದ್ರನು ಜಗತ್ತನ್ನೇಕೆ ಆನಂದಪಡಿಸುತ್ತಾನೆ ? ಮೇಘವು ಜಲಧಾರೆಯಿಂದ ಭೂಮಿಯನ್ನೇಕೆ ತೋಯಿಸುತ್ತದೆ ? ಸೂರ್ಯನು ಸದಾ ಅಲೆಯುತ್ತ ಅಲೆಯುತ್ತ ಮೂರು ಲೋಕಗಳನ್ನು ಏಕೆ ಸಂತೋಷ ಪಡಿಸುತ್ತಾನೆ? ಪರೋಪಕಾರ ಮಾಡುವ ವಿಷಯದಲ್ಲಿ ಸಜ್ಜನರ ಮನಸ್ಸು ಯಾವ ಕಾರಣವನ್ನೂ ಅಪೇಕ್ಷಿಸುವುದಿಲ್ಲ.

**ಕಾಕ ಆಹ್ವಯತೇ ಕಾಕಾನ್ ಯಾಚಕೋ ನ ತು ಯಾಚಕಾನ್ ।**
**ಕಾಕಯಾಚಕಯೋರ್ಮಧ್ಯೇ ವರಂ ಕಾಕೋ ನ ಯಾಚಕಃ ॥ ೧೨೨**

- ಸುಭಾಷಿತರತ್ನಸಮುಚ್ಚಯ

ಕಾಗೆ ಕಾಗೆಗಳನ್ನು ಕರೆಯುತ್ತದೆ. ಭಿಕ್ಷುಕನು ಇತರ ಭಿಕ್ಷುಕರನ್ನು ಸೇರಿಸುವುದಿಲ್ಲ. ಕಾಗೆ ಭಿಕ್ಷುಕರಲ್ಲಿ ಕಾಗೆಯೇ ಉತ್ತಮ, ಭಿಕ್ಷುಕನಲ್ಲ.

**ಕಾಕಮಾಂಸಂ ಶುನೋಚ್ಛಿಷ್ಟಂ ಸ್ವಲ್ಪಂ ತದಪಿ ದುರ್ಲಭಂ ।**
**ಭಕ್ಷಿತೇನಾಪಿ ಕಿಂ ತೇನ ತೃಪ್ತಿರ್ಯೇನ ನ ಜಾಯತೇ ॥ ೧೨೩**

- ಪಂಚತಂತ್ರ, ಮಿತ್ರಭೇದ- ೩೧೭

ಮೊದಲೇ ಕಾಗೆ ಮಾಂಸ ; ಅದರಲ್ಲಿಯೂ ನಾಯಿ ತಿಂದು ಮಿಕ್ಕಿದ್ದು ; ಅದೂ ಇರುವುದು ಸ್ವಲ್ಪ ; ಅದೂ ಸಿಕ್ಕುವುದೂ ಕಷ್ಟ ! ಎಳ್ಳಷ್ಟೂ ತೃಪ್ತಿಯುಂಟಾಗದ ಅದನ್ನು ತಿಂದು ತಾನೇ ಏನು ?

**ಕಾಚಂ ಮಣಿಂ ಕಾಂಚನಮೇಕಸೂತ್ರೇ**
**ಗ್ರಥ್ನಾತಿ ಬಾಲಾ ನ ಹಿ ತದ್ವಿಚಿತ್ರಂ**
**ವಿಶೇಷವಿತ್ ಪಾಣಿನಿರೇಕಸೂತ್ರೇ**
**ಶ್ವಾನಂ ಯುವಾನಂ ಮಘವಾನಮಾಹ ॥ ೧೨೪**

ಒಂದು ಸೂತ್ರದಲ್ಲಿ (ದಾರದಲ್ಲಿ) ಗಾಜಿನ ಮಣಿ, ರತ್ನ, ಚಿನ್ನ - ಇವನ್ನು ಹುಡುಗಿ ಪೋಣಿಸುತ್ತಾಳೆ. ಇದೇನು ವಿಚಿತ್ರವಲ್ಲ. ವಿದ್ವಾಂಸನಾದ ಪಾಣಿನಿ ಒಂದು ಸೂತ್ರದಲ್ಲಿ ಶ್ವಾನ, ಯುವಕ, ದೇವೇಂದ್ರರನ್ನು ಸೇರಿಸಿಬಿಟ್ಟಿರುವನಲ್ಲ ! (ಶ್ವಯುವಮಘೋನಾಮತದ್ಧಿತೇ - ಪಾಣಿನಿಸೂತ್ರ)

**ಕಾಂತಾ ಕಟಾಕ್ಷವಿಶಿಖಾ ನ ಲುನಂತಿ ಯಸ್ಯ**
**ಚಿತ್ತಂ ನ ನಿರ್ದಹತಿ ಕೋಪಕೃಶಾನುತಾಪಃ ।**

**ಕರ್ಷಂತಿ ಭೂರಿವಿಷಯಾಶ್ಚ ನ ಲೋಭಪಾಶೈಃ**
**ಲೋಕತ್ರಯಂ ಜಯತಿ ಕೃತ್ಸ್ನಮಿದಂ ಸ ಧೀರಃ ॥ ೧೨೫**

- ನೀತಿಶತಕ - ೮೩

ಸುಂದರ ಯುವತಿಯರ ಕಡೆಗಣ್ಣೋಟದ ಬಾಣಗಳು ಯಾರೊಳಕ್ಕೆ ನಾಟುವುದಿಲ್ಲವೋ, ಕೋಪವೆಂಬ ಬೆಂಕಿಯ ಕಾವು ಯಾರ ಮನಸ್ಸನ್ನು ಸುಡುವುದಿಲ್ಲವೋ, ಆಶಾಪಾಶಗಳಿಂದ ವಿಷಯ ಸುಖಗಳು ಯಾರನ್ನು ಎಳೆಯುವುದಿಲ್ಲವೋ, ಅಂತಹ ಧೀರನು ಮೂರು ಲೋಕಗಳನ್ನೂ ಗೆಲ್ಲುತ್ತಾನೆ.

**ಕ್ಷಾಂತ್ಯಾ ಶುಧ್ಯಂತಿ ವಿದ್ವಾಂಸೋ ದಾನೇನಾಕಾರ್ಯಕಾರಿಣಃ ।**
**ಪ್ರಚ್ಛನ್ನಪಾಪಾ ಜಪ್ಯೇನ ತಪಸಾ ವೇದವಿತ್ತಮಾಃ ॥ ೧೨೬**

- ಮನುಸ್ಮೃತಿ, ೫-೧೦೭

ಪಂಡಿತರು ಸಹನೆಯಿಂದ ಶುದ್ಧರಾಗುತ್ತಾರೆ. ಮಾಡಬಾರದ ಕೆಲಸ ಮಾಡಿದವನು ದಾನದಿಂದ ಶುದ್ಧನಾಗುತ್ತಾನೆ. ಗೂಢಪಾಪಗಳನ್ನೆಸಗಿದವರು ಜಪದಿಂದಲೂ, ವೇದಬಲ್ಲವರು ತಪಸ್ಸಿನಿಂದಲೂ ಶುದ್ಧರಾಗುತ್ತಾರೆ.

**ಕಾಯಃ ಸನ್ನಿಹಿತಾಪಾಯಃ ಸಂಪದಃ ಪದಮಾಪದಾಂ ।**
**ಸಮಾಗಮಾಃ ಸಾಪಗಮಾಃ ಸರ್ವಮುತ್ಪಾದಿ ಭಂಗುರಮ್ ॥ ೧೨೭**

- ಸುಭಾಷಿತ ರತ್ನಭಾಂಡಾಗಾರ

ಶರೀರಕ್ಕೆ ಅಪಾಯ ಹತ್ತಿರದಲ್ಲೇ ಇದೆ ; ಐಶ್ವರ್ಯ ಆಪತ್ತುಗಳ ನೆಲೆ ; ಸಮಾಗಮಗಳಿಗೆಲ್ಲಾ ವಿಯೋಗ ಕಟ್ಟಿಟ್ಟಿದ್ದೇ ; ಹುಟ್ಟಿದುದೆಲ್ಲ ನಾಶವಾಗತಕ್ಕದ್ದೇ ಸರಿ.

**ಕಾಯೇನ ವಾಚಾ ಮನಸೇಂದ್ರಿಯೈರ್ವಾ**
**ಬುದ್ಧ್ಯಾತ್ಮನಾ ವಾ ಪ್ರಕೃತೇಃ ಸ್ವಭಾವಾತ್ ।**
**ಕರೋತಿ ಯದ್ಯತ್ಸಕಲಂ ಪರಸ್ಮೈ**
**ನಾರಾಯಣಾಯೇತಿ ಸಮರ್ಪಯೇತ್ತತ್ ॥ ೧೨೮**

- ಭಾಗವತ, ೧೧-೨-೩೬

ಈ ಜಗತ್ತಿನಲ್ಲಿ ಮನುಷ್ಯನು ಶರೀರದಿಂದ, ಮಾತಿನಿಂದ, ಮನಸ್ಸಿನಿಂದ ಅಥವಾ ಇಂದ್ರಿಯಗಳಿಂದ ಬುದ್ಧಿಯಿಂದ, ಅಥವಾ ಆತ್ಮದಿಂದ ಅಥವಾ ಅನುಸರಿಸಿಕೊಂಡು ಬಂದ ಸ್ವಭಾವದ ದೆಸೆಯಿಂದ ಯಾವ ಯಾವುದನ್ನು ಮಾಡುತ್ತಾನೋ ಅದೆಲ್ಲವನ್ನೂ ಪರಮಾತ್ಮನಿಗೆ ಸಮರ್ಪಿಸಬೇಕು.

**ಕಾಲಕರ್ಮಗುಣಾಧೀನೋ ದೇಹೋಽಯಂ ಪಾಂಚಭೌತಿಕಃ ।**
**ಕಥಾಮನ್ಯಾಂಸ್ತು ಗೋಪಯೇತ್ಸರ್ಪಗ್ರಸ್ತೋ ಯಥಾ ಪರಮ್ ॥ ೧೨೯**

- ಭಾಗವತ, ೧-೧೩-೪೫

ಪಂಚಭೂತಗಳ ಮಿಶ್ರಣದಿಂದಾದದ್ದು ಈ ಶರೀರ. ತಾನೇ ಕಾಲ, ಕರ್ಮ, ಗುಣಗಳಿಗೆ ಅಧೀನವಾದದ್ದು. ಇದು ಇನ್ನೊಬ್ಬರನ್ನು ಉದ್ಧರಿಸುತ್ತದೆ ಎಂದರೇನು ? ಸರ್ಪದ ಬಾಯಲ್ಲಿ ಸಿಕ್ಕಿಕೊಂಡ ಪ್ರಾಣಿ ಮತ್ತೊಬ್ಬರನ್ನು ರಕ್ಷಿಸೀತೆ?

**ಕಾಷ್ಠಾದಗ್ನಿರ್ಜಾಯತೇ ಮಥ್ಯಮಾನಾತ್**
**ಭೂಮಿಸ್ತೋಯಂ ಖನ್ಯಮಾನಾ ದದಾತಿ ।**
**ಸೋತ್ಸಾಹಾನಾಂ ನಾಸ್ತ್ಯಸಾಧ್ಯಂ ನರಾಣಾಂ**
**ಮಾರ್ಗಾರಬ್ಧಾಃ ಸರ್ವಯತ್ನಾಃ ಫಲಂತಿ ॥ ೧೩೦**

- ಪ್ರತಿಜ್ಞಾಯೌಗಂಧರಾಯಣ, ೧-೧೮

ಕಡೆದರೆ ಮರದ ತುಂಡುಗಳಿಂದ ಬೆಂಕಿ ಉಂಟಾಗುತ್ತದೆ. ಅಗೆದರೆ ನೆಲದ ಆಳದಲ್ಲಿ ನೀರು ಸಿಗುತ್ತದೆ. ಹುರುಪಿನಿಂದ ಕೆಲಸಮಾಡುವ ಮಾನವನಿಗೆ ಅಸಾಧ್ಯವೆಂಬುದೇ ಇಲ್ಲ. ಸರಿಯಾದ ಕ್ರಮದಲ್ಲಿ ಮಾಡಿದ ಎಲ್ಲ ಯತ್ನಗಳೂ ಫಲವನ್ನು ಕೊಡುತ್ತವೆ.

**ಕಿಂಚಿತ್ ಕಾಂತಾನ್ನಪಾನಾದಿಕಲಿಲಂ ಕೋಮಲಂ ಗೃಹೇ ।**
**ವ್ರಣೇ ಕೀಟ ಇವಾಸ್ವಾದ್ಯ ವಯಃ ಕಾರ್ಯಂ ನ ಭಸ್ಮಸಾತ್ ॥ ೧೩೧**

- ಯೋಗವಾಸಿಷ್ಠ

ಮಡದಿ, ಅನ್ನಪಾನಾದಿ ಮಿಷ್ಟ ಭೋಜನ - ಇವನ್ನು ಹುಣ್ಣಿನಲ್ಲಿರುವ ಹುಳುವಿನಂತೆ, ಮನೆಯಲ್ಲಿ ಆಸ್ವಾದಿಸುತ್ತ ಆಯುಸ್ಸನ್ನು ಕಳೆದು ಬೂದಿಮಾಡಬಾರದು.

**ಕಿಂ ದಾನೇನ ಮುಹುಃ ಕೃತೇನ ಕೃತಯಾ ಕಿಂ ವಾ ಹರೇಃ ಪೂಜಯಾ**
**ಕಿಂ ವಾ ಧೂರ್ತತಯಾ ಕೃತೈರನಿಯಮೈರ್ನಿತ್ಯೋಪವಾಸವ್ರತೈಃ ।**
**ಕಿಂ ಯಜ್ಞೈರ್ಬಹುದಕ್ಷಿಣೈರಪಿ ಕೃತೈಃ ಶ್ರದ್ಧಾವಿಹೀನೈಃ ಪುನಃ**
**ಸ್ವಾಂತಂ ಚೇಚ್ಛುಚಿ ನಾಸ್ತಿ ಪೂರುಷ ತದಾ ಕಿಂ ತೈರ್ವೃಥಾಡಂಬರೈಃ ॥ ೧೩೨**

- (ಜನಾರ್ದನಭಟ್ಟನ) ವೈರಾಗ್ಯಶತಕ - ೧೩

ಮತ್ತೆ ಮತ್ತೆ ದಾನಮಾಡುವುದರಿಂದ, ಹರಿಪೂಜೆಯಿಂದ, ಧೂರ್ತತನದಿಂದ ಮಾಡುವ ಕ್ರಮರಹಿತವಾದ ಉಪವಾಸವ್ರತಗಳಿಂದ ಏನು ಪ್ರಯೋಜನ ? ಶ್ರದ್ಧೆಯಿಲ್ಲದೆ

ಬೇಕಾದಷ್ಟು ದಕ್ಷಿಣೆಯನ್ನಿತ್ತು ಮಾಡುವ ಯಜ್ಞಗಳಿಂದ ಆಗುವುದೇನು ? ಎಲೈ ಮನುಷ್ಯನೆ, ನಿನ್ನ ಮನಸ್ಸು ಪರಿಶುದ್ಧವಾಗಿಲ್ಲದಿದ್ದರೆ ಇವೆಲ್ಲ ಆಡಂಬರಗಳಿಂದ ಯಾವ ಫಲವೂ ಇಲ್ಲ.

**ಕಿಂ ದುಃಸಹಂ ನು ಸಾಧೂನಾಂ ವಿದುಷಾಂ ಕಿಮಪೇಕ್ಷಿತಮ್ ।**
**ಕಿಮಕಾರ್ಯಂ ಕದರ್ಯಾಣಾಂ ದುಸ್ತ್ಯಜಂ ಕಿಂ ಧೃತಾತ್ಮನಾಮ್ ॥ ೧೩೩**

- ಭಾಗವತ, ೧೦-೧-೫೮

ಸಾಧುಗಳಿಗೆ ಯಾವುದು ಸಹಿಸಲು ಕಷ್ಟವಾದುದು ? ವಿದ್ವಾಂಸರಿಗೆ ಆಸೆಪಡುವುದೇನಿದೆ ? ನೀಚರಿಗೆ ಮಾಡಬಾರದ್ದು ಯಾವುದಿದೆ? ಆತ್ಮಜ್ಞಾನಿಗಳಿಗೆ ಬಿಡಲು ಅಸಾಧ್ಯವಾವುದು ?

**ಕಿಂ ಧನೇನ ಕುಬೇರಸ್ಯ ಸುಭಾಷಿತಗುಣೇನ ಕಿಂ ।**
**ವಾಚಸ್ಪತೇಶ್ಚ ದೀಪೇನ ರವೇಃ, ಸಿಂಧೋಶ್ಚ ಬಿಂದುನಾ ॥ ೧೩೪**

- ಸುಭಾಷಿತರತ್ನಭಾಂಡಾಗಾರ

ಕುಬೇರನಿಗೆ ಹಣದಿಂದೇನು ? ಬೃಹಸ್ಪತಿಗೆ ಸುಭಾಷಿತದ ಗುಣದಿಂದೇನು ? ಸೂರ್ಯನಿಗೆ ದೀಪದಿಂದೇನು ? ಸಮುದ್ರಕ್ಕೆ ಜಲದ ಬಿಂದುವಿನಿಂದೇನು?

**ಕಿಂ ನು ಮೇ ಸ್ಯಾದಿದಂ ಕೃತ್ವಾ ಕಿಂ ನು ಮೇ ಸ್ಯಾದಕುರ್ವತಃ ।**
**ಇತಿ ಸಂಚಿಂತ್ಯ ಮನಸಾ ಪ್ರಾಜ್ಞಃ ಕುರ್ವೀತ ವಾ ನವಾ ॥ ೧೩೫**

'ಇದನ್ನು ಮಾಡಿದರೆ ನನಗೇನಾಗುತ್ತದೆ', 'ಮಾಡದಿದ್ದರೇನಾಗುತ್ತದೆ' ಎಂದು ಮನಸ್ಸಿನಲ್ಲಿ ಯೋಚಿಸಿ ಜಾಣನು ಕೆಲಸ ಮಾಡಬೇಕು ಅಥವಾ ಮಾಡದೆ ಇರಬೇಕು.

**ಕಿಂ ಭೂಷಣಂ ರುಚಿರಮತ್ರ ಯಶೋ ನ ರತ್ನಂ**
**ಕಿಂ ಕಾರ್ಯಮಾರ್ಯಚರಿತಂ ಸುಕೃತಂ ನ ದೋಷಃ ।**
**ಕಿಂ ಚಕ್ಷುರಪ್ರತಿಹತಂ ಧಿಷಣಾ ನ ನೇತ್ರಂ**
**ಕಿಂ ತಾಪಹಾರಿ ಮಧುರಂ ವಚನಂ ನ ಪಾಥಃ ॥ ೧೩೬**

- ಅಭಿನವಪಾಠಾವಲಿ - ೧

ಸುಂದರವಾದ ಒಡವೆ ಯಾವುದು ? ಕೀರ್ತಿ, ರತ್ನವಲ್ಲ. ಆಚರಿಸಬೇಕಾದ್ದು ಯಾವುದು, ಶಿಷ್ಯರು ನಡೆಸುವ ಒಳ್ಳೆಯ ಕೆಲಸ, ಪಾಪ ಕಾರ್ಯವಲ್ಲ. ತಡೆಯೇ ಇಲ್ಲದ ಕಣ್ಣು ಯಾವುದು ? ಬುದ್ಧಿ, ನೇತ್ರವಲ್ಲ. ಪಾಪಹಾರಿ ಯಾವುದು ? ಒಳ್ಳೆಯ ಮಾತು. ನೀರಲ್ಲ.

**ಕಿಮತ್ರ ಚಿತ್ರಂ ಯತ್ಸಂತಃ ಪರಾನುಗ್ರಹತತ್ಪರಾಃ ।**
**ನ ಹಿ ಸ್ವದೇಹಸೌಖ್ಯಾಯ ಜಾಯಂತೇ ಚಂದನದ್ರುಮಾಃ ॥ ೧೩೭**

- ಸುಭಾಷಿತಸುಧಾನಿಧಿ

ಸಜ್ಜನರಾದವರು ಇತರರಿಗೆ ಉಪಕಾರ ಮಾಡುವುದರಲ್ಲೇ ತತ್ಪರರಾಗಿರುವುದರಲ್ಲಿ ಆಶ್ಚರ್ಯವೇನು ? ಗಂಧದ ಮರಗಳು ತಮ್ಮ ಶರೀರ ಸುಖಕ್ಕಾಗಿ ಹುಟ್ಟಿಕೊಳ್ಳುವುದಿಲ್ಲ.

**ಕಿಂ ಲಘುತಾಯಾ ಮೂಲಂ**
**ಪ್ರಾಕೃತಪುರುಷೇಷು ಯಾ ಯಾಚ್ಞಾ ।**
**ರಾಮಾದಪಿ ಕಃ ಶೂರಃ**
**ಸ್ಮರಶರನಿಹತೋ ನ ಯಶ್ಚಲತಿ ॥ ೧೩೮**

- ಪ್ರಶ್ನೋತ್ತರರತ್ನಮಾಲಿಕಾ

ಮನುಷ್ಯನು ಹಗುರವಾಗಲು ಯಾವುದು ನಿಮಿತ್ತ ? ಅಲ್ಪರಲ್ಲಿ ಮಾಡುವ ಯಾಚನೆ. ಶ್ರೀರಾಮನಿಗಿಂತ ಯಾವನು ಶೂರ ? ಮನ್ಮಥಬಾಣದ ಪ್ರಹಾರಕ್ಕೆ ಒಳಗಾದರೂ ಯಾವನು ಅಚಲನಾಗಿರುವನೋ ಅವನು.

**ಬಹುಮಾಯಾಸಮಾಕೀರ್ಣಃ ನಾನಾದೋಷಸಮಾಕುಲಃ ।**
**ಲುಪ್ತಧರ್ಮಕ್ರಿಯಾಚಾರಃ ಘೋರಃ ಕಾಲೋ ಭವಿಷ್ಯತಿ ॥ ೧೩೯**

- ಮಹಾಭಾರತ

ಮುಂದಿನ ಕಾಲವು ಮತ್ತಷ್ಟು ಭಯಂಕರವಾಗುತ್ತದೆ. ಅನೇಕ ರೀತಿಯ ಮೋಸಗಳಿಂದ ಕೂಡಿ, ನಾನಾ ವಿಧವಾದ ದೋಷಗಳು ಬೆಳೆದು, ಧರ್ಮವೂ ಆಚಾರವೂ ಲುಪ್ತವಾಗುವುದು.

**ಕ್ಲಿಷ್ಟೋ ಜನಃ ಕಿಲ ಜನೈರನುರಂಜನೀಯಃ**
**ತನ್ನೋ ಯದುಕ್ತಮಶುಭಂ ಚ ನ ತತ್ ಕ್ಷಮಂ ತೇ ।**
**ನೈಸರ್ಗಿಕೀ ಸುರಭಿಣಃ ಕುಸುಮಸ್ಯ ಸಿದ್ಧಾ**
**ಮೂರ್ಧ್ನಿ ಸ್ಥಿತಿರ್ನ ಚರಣೈರವತಾಡನಾನಿ ॥ ೧೪೦**

- ಉತ್ತರರಾಮಚರಿತ, ೧-೧೪

ಕಷ್ಟವನ್ನನುಭವಿಸಿದ ಜನರನ್ನು ಇತರರು ಸಮಾಧಾನಪಡಿಸಿ ಸಂತೋಷಗೊಳಿಸಬೇಕು. ಅನುಚಿತವಾದುದನ್ನು ಆಡಬಾರದು. ನಾವು ಆಡಿದ ಅಶುಭವಾದ

ಮಾತು ನಿನಗೆ ಯೋಗ್ಯವಲ್ಲ. ಪರಿಮಳದಿಂದ ಕೂಡಿದ ಹೂವನ್ನು ತಲೆಯಲ್ಲಿ ಮುಡಿಯುವುದು ಉಚಿತ. ಕಾಲಿನಲ್ಲಿ ತುಳಿಯಬಾರದು. (ಶ್ರೀರಾಮನು ಸೀತೆಗೆ ಹೇಳಿದ್ದು)

**ಕೀಟೋಽಪಿ ಸುಮನಃಸಂಗಾದಾರೋಹತಿ ಸತಾಂ ಶಿರಃ ।**
**ಅಶ್ಮಾಪಿ ಯಾತಿ ದೇವತ್ವಂ ಮಹದ್ಭಿಃ ಸುಪ್ರತಿಷ್ಠಿತಃ ॥ ೧೪೧**

- ಹಿತೋಪದೇಶ - ೩೦

ಹೂವಿನ ಸಹವಾಸದ ಕಾರಣ ಹುಳುವೂ ಸಹ ಸಜ್ಜನರ ಶಿರಸ್ಸನ್ನೇರುತ್ತದೆ. ಮಹಾತ್ಮರು ಪ್ರತಿಷ್ಠೆ ಮಾಡಿದ ಶಿಲೆಯೂ ಸಹ ದೇವತ್ವವನ್ನು ಹೊಂದುತ್ತದೆ.

**ಕುಗ್ರಾಮವಾಸಃ ಕುಜನಸ್ಯ ಸೇವಾ**
**ಕುಭೋಜನಂ ಕ್ರೋಧಮುಖೀ ಚ ಭಾರ್ಯಾ ।**
**ಮೂರ್ಖಶ್ಚ ಪುತ್ರೋ ವಿಧವಾ ಚ ಕನ್ಯಾ**
**ದಹಂತಿ ಚೈತಾನಿ ಜನಂ ವಿನಾಗ್ನಿಮ್ ॥ ೧೪೨**

- ಸುಭಾಷಿತರತ್ನಸಮುಚ್ಚಯ

ಕುಗ್ರಾಮದಲ್ಲಿ ವಾಸ, ದುರ್ಜನನ ಸೇವೆ, ತುಚ್ಛವಾದ ಊಟ, ಸಿಡಿ ಮೋರೆಯ ಹೆಂಡತಿ, ಮೂರ್ಖನಾದ ಮಗ, ವಿಧವೆಯಾದ ಮಗಳು, ಇವರು ಬೆಂಕಿಯಿಲ್ಲದೆಯೇ ಮನುಷ್ಯನನ್ನು ಸುಡತಕ್ಕವರು.

**ಕುತೋ ವಾ ನೂತನಂ ವಸ್ತು ವಯಮುತ್ಪ್ರೇಕ್ಷಿತುಂ ಕ್ಷಮಾಃ ।**
**ವಚೋ ವಿನ್ಯಾಸವೈಚಿತ್ರ್ಯಮಾತ್ರಮತ್ರ ವಿಚಾರ್ಯತಾಮ್ ॥ ೧೪೩**

- ನ್ಯಾಯಮಂಜರೀ, ೧-೮

ಹೊಸದಾಗಿ ಒಂದು ವಿಷಯರನ್ನು ಊಹೆ ಮಾಡಿ ಬರೆಯುವುದು ಸಾಧ್ಯವಿಲ್ಲ. ಆದರೆ ಹೇಳಬೇಕಾದ ವಿಷಯವನ್ನು ಹೇಳುವ ರೀತಿ ಮಾತ್ರ ಬೇರೆಯಾಗಿರುತ್ತದೆಂದು ತಿಳಿಯಿರಿ.

**ಕ್ಷುಣ್ಣೋಽಪಿ ರೋಹತಿ ತರುಃ**
**ಕ್ಷೀಣೋಽಪ್ಯುಪಚೀಯತೇ ಪುನಶ್ಚಂದ್ರಃ ।**
**ಇತಿ ವಿಮೃಶಂತಃ ಸಂತಃ**
**ಸಂತಪ್ಯಂತೇ ನ ವಿಧುರೇಷು ॥ ೧೪೪**

- ತಿಲಕಮಂಜರೀ

'ಮರವನ್ನು ಕತ್ತರಿಸಿದರೂ ಬೆಳೆಯುತ್ತದೆ. ಚಂದ್ರನು ಕ್ಷೀಣನಾದರೂ ಮತ್ತೆ ಹೆಚ್ಚುತ್ತಾನೆ' ಇದನ್ನು ಪರಿಶೀಲಿಸುವ ಸಜ್ಜನರು ಬಂಧುಗಳನ್ನಗಲಿದಾಗ ಸಂತಾಪ ಪಡುವುದಿಲ್ಲ.

**ಕ್ಷುತ್ ಕ್ಷಾಮೋಽಪಿ ಜರಾಕೃಶೋಽಪಿ ಶಿಥಿಲಪ್ರಾಯೋಽಪಿ ಕಷ್ಟಾಂ ದಶಾ-**
**ಮಾಪನ್ನೋಽಪಿ ವಿಪನ್ನದೀಧಿತಿರಪಿ ಪ್ರಾಣೇಷು ನಶ್ಯತ್ಸ್ವಪಿ ।**
**ಮತ್ತೇಭೇಂದ್ರವಿಭಿನ್ನಕುಂಭಪಿಶಿತಗ್ರಾಸೈಕಬದ್ಧಸ್ಪೃಹಃ**
**ಕಿಂ ಜೀರ್ಣಂ ತೃಣಮತ್ತಿ ಮಾನಮಹತಾಮಗ್ರೇಸರಃ ಕೇಸರೀ ॥ ೧೪೫**

- ನೀತಿಶತಕ - ೨೭

ಹಸಿವಿನಿಂದ ಬಳಲಿದ್ದರೂ, ಮುಪ್ಪಿನಿಂದ ಕೃಶನಾಗಿದ್ದರೂ, ಬಲಗುಂದಿದ್ದರೂ, ಕಷ್ಟದೆಶೆಗೀಡಾಗಿದ್ದರೂ ಆಪತ್ತಿನಲ್ಲಿ ಸಿಕ್ಕಿದ್ದರೂ ಪ್ರಾಣಗಳು ಹೋಗತ್ತಿದ್ದರೂ - ಕೊಬ್ಬಿದ ಸಲಗದ ಕುಂಭಸ್ಥಳವನ್ನು ಸೀಳಿ ಅಲ್ಲಿರುವ ಮಾಂಸವನ್ನೇ ತಿನ್ನಲಾಸೆಯಿರುವ, ಮಾನವಂತರಲ್ಲಿ ಮೊದಲನೆಯದಾದ ಸಿಂಹವು ಒಣಹುಲ್ಲನ್ನು ತಿಂದೀತೆ ?

**ಕುಲಂ ಚ ಶೀಲಂ ಚ ಸನಾಥತಾಂ ಚ**
**ವಿದ್ಯಾಂ ಚ ವಿತ್ತಂ ಚ ವಪುರ್ವಯಶ್ಚ ।**
**ಏತಾನ್ಗುಣಾನ್ಸಪ್ತ ವಿಚಿಂತ್ಯ ದೇಯಾ**
**ಕನ್ಯಾ ಬುದ್ಧೈಃ ಶೇಷಮಚಿಂತನೀಯಮ್ ॥ ೧೪೬**

- ಪಂಚತಂತ್ರ, ಕಾಕೋಲೂಕೀಯ - ೨೦೮

ಕುಲ, ನಡತೆ, ಒಡೆತನ, ವಿದ್ಯೆ, ಐಶ್ವರ್ಯ, ರೂಪ, ವಯಸ್ಸು ಈ ಏಳು ಗುಣಗಳನ್ನು ಪರಿಶೀಲಿಸಿ ತಿಳಿದವರು ಮಗಳನ್ನು ಮದುವೆ ಮಾಡಿಕೊಡಬೇಕು. ಉಳಿದುದು ಯೋಚಿಸತಕ್ಕದಲ್ಲ.

**ಕುಲೇ ಲಜ್ಜಾಯಾಂ ಚ ಸ್ವಯಶಸಿ ಚ ಮಾನೇ ಚ ವಿಮುಖಃ**
**ಶರೀರಂ ವಿಕ್ರೀಯ ಕ್ಷಣಿಕಮಪಿ ಲೋಭಾದ್ಧನವತಿ ।**
**ತದಾಜ್ಞಾಂ ಕುರ್ವಾಣೋ ಹಿತಮಹಿತಮಿತ್ಯೇತದಧುನಾ**
**ವಿಚಾರಾತಿಕ್ರಾಂತಃ ಕಿಮಿತಿ ಪರತಂತ್ರೋ ವಿಮೃಶತಿ ॥ ೧೪೭**

- ಮುದ್ರಾರಾಕ್ಷಸ, ೫-೪

ತಾನು ಹುಟ್ಟಿದ ವಂಶದ ಘನತೆ, ನಾಚಿಕೆ, ಕೀರ್ತಿ, ಅಭಿಮಾನ ಎಲ್ಲವನ್ನೂ ತೊರೆದು, ಕ್ಷಣಿಕವಾದ ಶರೀರವನ್ನು ಆಸೆಯಿಂದ ಹಣಗಾರನಿಗೆ ಮಾರಿಕೊಂಡು ಅವನ

ಅಪ್ಪಣೆಯನ್ನು ನಡೆಸುತ್ತಾ ಪರಾಧೀನನಾದವನು, ಹಿತವನ್ನೂ ಅಹಿತವನ್ನೂ ಆಲೋಚಿಸುವ ಶಕ್ತಿಯನ್ನೇ ಕಳೆದುಕೊಂಡಿರುತ್ತಾನೆ.

**ಕೃಪಣೇನ ಸಮೋ ದಾತಾ ನ ಭೂತೋ ನ ಭವಿಷ್ಯತಿ ।**
**ಅಸ್ಪೃಶನ್ನೇವ ವಿತ್ತಾನಿ ಯಃ ಪರೇಭ್ಯಃ ಪ್ರಯಚ್ಛತಿ ॥ ೧೪೮**

- ಸುಭಾಷಿತರತ್ನಭಾಂಡಾಗಾರ

ಜಿಪುಣನಿಗೆ ಸಮನಾದ ದಾತೃ ಹಿಂದೆ ಇರಲಿಲ್ಲ. ಮುಂದೆ ಇರುವುದಿಲ್ಲ. ಅವನು ಕೈಯಿಂದ ಮುಟ್ಟದೆಯೇ ಐಶ್ವರ್ಯವನ್ನು ಪರರಿಗೆ ಒಪ್ಪಿಸುತ್ತಾನೆ!

**ಕೋ ನ ಯಾತಿ ವಶಂ ಲೋಕೇ ಮುಖೇ ಪಿಂಡೇನ ಪೂರಿತಃ ।**
**ಮೃದಂಗೋ ಮುಖಲೇಪೇನ ಕರೋತಿ ಮಧುರಧ್ವನಿಮ್ ॥೧೪೯**

- ಸುಭಾಷಿತರತ್ನಸಮುಚ್ಚಯ

ಬಾಯಿಗೆ ಪಿಂಡವನ್ನು ತುಂಬಿದರೆ (ಲಂಚಕೊಟ್ಟರೆ) ಯಾವನು ತಾನೇ ವಶನಾಗುವುದಿಲ್ಲ! ಮೃದಂಗದ ಬಾಯಿಗೆ ಲೇಪನಮಾಡಿದರೆ ಮಧುರವಾದ ಧ್ವನಿಯನ್ನು ಕೊಡುತ್ತದೆ!

**ಖಗಾ ವೀತಫಲಂ ವೃಕ್ಷಂ ಭುಕ್ತ್ವಾ ಚಾತಿಥಯೋ ಗೃಹಂ ।**
**ದಗ್ಧಂ ಮೃಗಾಸ್ತಥಾರಣ್ಯಂ ಜಾರೋ ಭುಕ್ತ್ವಾ ರತಾಂ ಸ್ತ್ರಿಯಮ್ ॥ ೧೫೦**

- ಭಾಗವತ, ೧೦-೪೭-೮

ಹಕ್ಕಿಗಳು ಹಣ್ಣಿಲ್ಲದ ಮರವನ್ನೂ, ಊಟವಾದಮೇಲೆ ಅತಿಥಿಗಳು ಆ ಗೃಹವನ್ನೂ, ಮೃಗಗಳು ಸುಟ್ಟುಹೋದ ಕಾಡನ್ನೂ, ಜಾರನು ತಾನು ಅನುಭವಿಸಿದ ಸ್ತ್ರೀಯನ್ನೂ ಬಿಡುತ್ತಾನೆ.

**ಗರ್ಜತಿ ಶರದಿ ನ ವರ್ಷತಿ**
**ವರ್ಷತಿ ವರ್ಷಾಸು ನಿಃಸ್ವನೋ ಮೇಘಃ ।**
**ನೀಚೋ ವದತಿ ನ ಕುರುತೇ**
**ನ ವದತಿ ಸುಜನಃ ಕರೋತ್ಯೇವ ॥ ೧೫೧**

- ಸುಭಾಷಿತಸುಧಾನಿಧಿ

ಶರತ್ಕಾಲದಲ್ಲಿ ಮೋಡ ಗರ್ಜಿಸುತ್ತದೆ ; ಮಳೆ ಸುರಿಸುವುದಿಲ್ಲ. ವರ್ಷಾಕಾಲದಲ್ಲಿ ಶಬ್ದ ಮಾಡುವುದಿಲ್ಲ; ಮಳೆ ಸುರಿಸುತ್ತದೆ. ನೀಚನಾದವನು ಆಡುತ್ತಾನೆ ಮಾಡುವುದಿಲ್ಲ. ಒಳ್ಳೆಯವನು ಆಡುವುದಿಲ್ಲ; ಮಾಡಿಯೇ ಮಾಡುತ್ತಾನೆ.

**ಗತಾರ್ಥಾನ್ನಾನುಶೋಚಂತಿ ನಾರ್ಥಯಂತೇ ಮನೋರಥಾನ್ ।**
**ವರ್ತಮಾನೇನ ವರ್ತಂತೇ ತೇನ ಮೇ ಪಾಂಡವಾಃ ಪ್ರಿಯಾಃ ॥ ೧೫೨**

- ತ್ರಿಶತೀವ್ಯಾಖ್ಯಾ, ವೈರಾಗ್ಯ - ೬೧

ಕಳೆದುಹೋದುದಕ್ಕಾಗಿ ಶೋಕಿಸವುದಿಲ್ಲ. ಹೊಸ ಆಸೆಗಳನ್ನು ಕಲ್ಪಿಸಿಕೊಳ್ಳುವುದಿಲ್ಲ. ಯಾವುದು ಪ್ರಾಪ್ತವಾಗಿದೆಯೋ ಅದನ್ನು ಮಾತ್ರ ಅನುಸರಿಸಿ ತೃಪ್ತರಾಗಿದ್ದಾರೆ. ಆದ್ದರಿಂದ ಪಾಂಡವರು ನನಗೆ (ಶ್ರೀಕೃಷ್ಣನಿಗೆ) ಪ್ರಿಯರು.

**ಗಣೇಶಃ ಸ್ತೌತಿ ಮಾರ್ಜಾರಂ ಸ್ವವಾಹಸ್ಯಾಭಿರಕ್ಷಣೇ ।**
**ಮಹಾನಪಿ ಪ್ರಸಂಗೇನ ನೀಚಂ ಸೇವಿತುಮಿಚ್ಛತಿ ॥ ೧೫೩**

- ಸುಭಾಷಿತರತ್ನಭಾಂಡಾಗಾರ

ಗಣೇಶ ತನ್ನ ವಾಹನವಾದ ಇಲಿಯ ರಕ್ಷಣೆಗಾಗಿ ಬೆಕ್ಕನ್ನು ಸ್ತುತಿಸುತ್ತಾನೆ. ದೊಡ್ಡವನೂ ಸಹ ಸಂದರ್ಭವಶಾತ್ ನೀಚರನ್ನು ಸೇವಿಸುತ್ತಾನೆ.

**ಗಾತ್ರಂ ಸಂಕುಚಿತಂ ಗತಿರ್ವಿಗಲಿತಾ ಭ್ರಷ್ಟಾ ಚ ದಂತಾವಲಿಃ**
**ದೃಷ್ಟಿರ್ನಶ್ಯತಿ ವರ್ಧತೇ ಬಧಿರತಾ ವಕ್ತ್ರಂ ಚ ಲಾಲಾಯತೇ ।**
**ವಾಕ್ಯಂ ನಾದ್ರಿಯತೇ ಚ ಬಾಂಧವಜನೈರ್ಭಾರ್ಯಾ ನ ಶುಶ್ರೂಷತೇ**
**ಹಾ ಕಷ್ಟಂ ಪುರುಷಸ್ಯ ಜೀರ್ಣವಯಸಃ ಪುತ್ರೋಽಪ್ಯಮಿತ್ರಾಯತೇ ॥ ೧೫೪**

- ವೈರಾಗ್ಯಶತಕ - ೧೧೩

ಮುಪ್ಪನ್ನು ಹೊಂದಿದ ಮನುಷ್ಯನ ಬದುಕು ಬಹಳ ಕಷ್ಟ. ಏಕೆಂದರೆ ದೇಹವು ಸಣ್ಣಗಾಯಿತು ; ನಡೆ ನಿಂತಿತು ; ಹಲ್ಲುಗಳ ಸಾಲು ಬಿದ್ದಿತು ; ದೃಷ್ಟಿ ನಷ್ಟವಾಯಿತು ; ಕಿವಿ ಕೇಳಿಸದು ; ಬಾಯಲ್ಲಿ ಜೊಲ್ಲು ಸುರಿಯುತ್ತದೆ ; ಬಂಧುಗಳು ಮಾತು ಕೇಳರು ; ಹೆಂಡತಿ ಸೇವೆ ಮಾಡುವುದಿಲ್ಲ. ಮಗನೂ ಸಹ ಶತ್ರುವಾಗುತ್ತಾನೆ.

**ಗುಣಗಣಗಣನಾರಂಭೇ ಪತತಿ ನ ಕಠಿನೀ ಸುಸಂಭ್ರಮಾ ಯಸ್ಯ ।**
**ತೇನಾಂಬಾ ಯದಿ ಸುತಿನೀ ವದ ವಂಧ್ಯಾ ಕೀದೃಶೀ ಭವತಿ ॥ ೧೫೫**

- ಹಿತೋಪದೇಶ, ೧-೧೪

ಸದ್ಗುಣಗಳ ಸಮೂಹವನ್ನೆಣಿಸುವ ಸಂದರ್ಭದಲ್ಲಿ ಯಾರನ್ನು ಕುರಿತಂತೆ ಉತ್ಸಾಹದಿಂದ ಬೆರಳು ಮಡಿಸುವುದಿಲ್ಲವೋ ಅಂಥವನಿಂದ ತಾಯಿಯೊಬ್ಬಳು ಪುತ್ರವತಿ ಎಂದರೆ, ಬಂಜೆಯಾಗಿರುವವಳು ಮತ್ತೆ ಹೇಗಿರುವಳು, ಹೇಳು?

**ಗುಣೈಃ ಶರ್ವಕಲ್ಪೋಽಪಿ ಸೀದತ್ಯೇವ ನಿರಾಶ್ರಯಃ ।**
**ಅನರ್ಘಮಪಿ ಮಾಣಿಕ್ಯಂ ಹೇಮಾಶ್ರಯಮಪೇಕ್ಷತೇ ॥ ೧೫೬**

- ಸುಭಾಷಿತಸುಧಾನಿಧಿ

ಗುಣಗಳಿಂದ ಈಶ್ವರನಿಗೆ ಸಮಾನನೇ ಆಗಿದ್ದರೂ ಆಶ್ರಯವಿಲ್ಲದಿದ್ದರೆ ದುಃಖಕ್ಕೊಳಗಾಗುತ್ತಾನೆ. ಬಹಳ ಬೆಲೆ ಬಾಳುವ ರತ್ನಕ್ಕೂ ಸಹ ಚಿನ್ನದ ಆಶ್ರಯ ಬೇಕೇ ಬೇಕು.

**ಗುರುಂ ಪ್ರಯೋಜನೋದ್ದೇಶಾದರ್ಚಯಂತಿ ನ ಭಕ್ತಿತಃ ।**
**ದುಗ್ಧದಾತ್ರೀತಿ ಗೌರ್ಗೇಹೇ ಪೋಷ್ಯತೇ ನ ತು ಧರ್ಮತಃ ॥ ೧೫೭**

- ದೃಷ್ಟಾಂತಕಲಿಕಾ - ೯೩

ಪ್ರಯೋಜನವಿದೆಯಾದ್ದರಿಂದ ಗುರುವನ್ನು ಪೂಜಿಸುತ್ತಾರೆ, ಭಕ್ತಿಯಿಂದಲ್ಲ. ಹಾಲು ಕೊಡುತ್ತದೆಯೆಂದು ಹಸುವನ್ನು ಮನೆಯಲ್ಲಿ ಸಾಕುತ್ತಾರೆ, ಧರ್ಮಾಪೇಕ್ಷೆಯಿಂದಲ್ಲ.

**ಗೃಹಾರಂಭೋ ಹಿ ದುಃಖಾಯ ನ ಸುಖಾಯ ಕದಾಚನ ।**
**ಸರ್ಪಃ ಪರಕೃತಂ ವೇಶ್ಮ ಪ್ರವಿಶ್ಯ ಸುಖಮೇಧತೇ ॥ ೧೫೮**

- ಮಹಾಭಾರತ, ಶಾಂತಿ. ೧೭೮-೧೦

ಗೃಹದ ನಿರ್ಮಾಣ ದುಃಖಕ್ಕೇ ಸರಿ, ಎಂದಿಗೂ ಸುಖಕ್ಕಾಗಿ ಅಲ್ಲ. ಅನ್ಯರು ನಿರ್ಮಿಸಿದ ಮನೆಯನ್ನು ಸೇರಿ ಸರ್ಪವು ಸುಖವಾಗಿ ಬೆಳೆಯುತ್ತದೆ!

**ಗೌರವಂ ಪ್ರಾಪ್ಯತೇ ದಾನಾನ್ನ ತು ವಿತ್ತಸ್ಯ ಸಂಚಯಾತ್ ।**
**ಸ್ಥಿತಿರುಚ್ಚೈಃ ಪಯೋದಾನಾಂ ಪಯೋಧೀನಾಮಧಃ ಸ್ಥಿತಿಃ ॥ ೧೫೯**

- ಸುಭಾಷಿತರತ್ನಸಮುಚ್ಚಯ

ದಾನಮಾಡುವುದರಿಂದ ಗೌರವ ಬರುತ್ತದೆಯೋ ಹೊರತು ಹಣವನ್ನು ಸಂಗ್ರಹಿಸುವುದರಿಂದಲ್ಲ. ನೀರನ್ನು ಕೊಡುವ ಮೋಡ ಆಕಾಶವನ್ನೇರಿ ನಿಂತಿದೆ. ನೀರನ್ನು ಸಂಗ್ರಹಿಸುವ ಸಮುದ್ರ ಕೆಳಗಿದೆ.

**ಚತ್ವಾರೋ ಧನದಾಯಾದಾಃ ಧರ್ಮಾಗ್ನಿನೃಪತಸ್ಕರಾಃ ।**
**ತೇಷಾಂ ಜ್ಯೇಷ್ಠಾವಮಾನೇನ ತ್ರಯಃ ಕುಪ್ಯಂತಿ ಸೋದರಾಃ ॥ ೧೬೦**

- ತ್ರಿಶತೀವ್ಯಾಖ್ಯಾ, ನೀತಿ - ೩೪

ಧರ್ಮ, ಅಗ್ನಿ, ರಾಜ, ಕಳ್ಳ - ಎಂಬ ನಾಲ್ವರು ಹಣಕ್ಕೆ ದಾಯಾದಿಗಳಾದ

ಸೋದರರು. ಹಿರಿಯನಾದ ಧರ್ಮಕ್ಕೆ ಅವಮಾನ ಮಾಡಿದರೆ ಉಳಿದ ಮೂವರು ಸೋದರರು ಕೋಪಗೊಂಡು ಧನವನ್ನು ಕಿತ್ತುಕೊಳ್ಳುತ್ತಾರೆ !

ಚರಾಣಾಮನ್ನಮಚರಾಃ ದಂಷ್ಟ್ರಿಣಾಮಪ್ಯದಂಷ್ಟ್ರಿಣಃ ।
ಅಹಸ್ತಾಶ್ಚ ಸಹಸ್ತಾನಾಂ ಶೂರಾಣಾಂ ಚೈವ ಭೀರವಃ ॥ ೧೬೧

- ಮನುಸ್ಮೃತಿ, ೫-೨೯

ಚಲಿಸುವ ಜಿಂಕೆ ಮೊದಲಾದ ಪ್ರಾಣಿಗಳಿಗೆ ಚಲಿಸದ ಹುಲ್ಲು ಮೊದಲಾದುವುಗಳು ಆಹಾರ. ಕೋರೆಹಲ್ಲಿರುವ ಹುಲಿ ಮೊದಲಾದುವುಗಳಿಗೆ ಕೋರೆಹಲ್ಲು ಇಲ್ಲದ ಜಿಂಕೆ ಮೊದಲಾದುವುಗಳು ಆಹಾರ. ಕೈಯಿರುವ ಮನುಷ್ಯರಿಗೆ ಕೈಯಿಲ್ಲದ ಮೀನು ಮೊದಲಾದುವುಗಳು ಆಹಾರ. ಶೂರರಿಗೆ ಹೇಡಿಗಳು ಆಹಾರ.

ಚಿಂತಾಯಾಶ್ಚ ಚಿತಾಯಾಶ್ಚ ಬಿಂದುಮಾತ್ರಂ ವಿಶಿಷ್ಯತೇ ।
ಚಿತಾ ದಹತಿ ನಿರ್ಜೀವಂ ಚಿಂತಾ ದಹತಿ ಜೀವಿನಮ್ ॥ ೧೬೨

- ಸಮಯೋಚಿತಪದ್ಯಮಾಲಿಕಾ

ಚಿಂತೆಗೂ ಚಿತೆಗೂ ಒಂದು ಸೊನ್ನೆ ಮಾತ್ರ ವಿಶೇಷ. ಚಿತೆ ಜೀವವಿಲ್ಲದ ಹೆಣವನ್ನು ಸುಡುತ್ತದೆ. ಚಿಂತೆ ಜೀವವಿರತಕ್ಕವನನ್ನು ಸುಡುತ್ತದೆ.

ಧನ್ನಾ ಭವಂತಿ ಭುವಿ ಸತ್ಪುರುಷಾಃ ಕಥಂಚಿತ್
ಸ್ವೈಃ ಕಾರಣೈಃ ಗುರುಜನೈಶ್ಚ ನಿಯಮ್ಯಮಾನಾಃ ।
ಭೂಯಃ ಪರವ್ಯಸನಮೇತ್ಯ ವಿಮೋಕ್ತುಕಾಮಾಃ
ವಿಸ್ಮೃತ್ಯ ಪೂರ್ವನಿಯಮಂ ವಿವೃತಾ ಭವಂತಿ ॥ ೧೬೩

- ಅವಿಮಾರಕ, ೧-೬

ಮಹಿಮಾಶಾಲಿಗಳಾದ ದೊಡ್ಡ ಮನುಷ್ಯರು, ತಮ್ಮದೇ ಆದ ಯಾವುದೋ ಕಾರಣದಿಂದ, ಅಥವಾ ಹಿರಿಯರ ಆದೇಶದಿಂದ ಮರೆಮಾಚಿಕೊಂಡಿರುತ್ತಾರೆ. ಆದರೆ ಬೇರೆಯವರಿಗೆ ಅಪಾಯ ಒದಗಿದಾಗ, ಅವರನ್ನು ರಕ್ಷಿಸುವ ಆತುರದಲ್ಲಿ ತಮ್ಮ ನಿಯಮಗಳನ್ನು ಮರೆತು ಪ್ರಕಟವಾಗುತ್ತಾರೆ.

ಛಿನ್ನೋಽಪಿ ರೋಹತಿ ತರುಃ ಕ್ಷೀಣೋಽಪ್ಯುಪಚೀಯತೇ ಚಂದ್ರಃ ।
ಇತಿ ವಿಮೃಶಂತಃ ಸಂತಃ ಸಂತಪ್ಯಂತೇ ನ ವಿಪ್ಲುತಾ ಲೋಕೇ ॥ ೧೬೪

- ನೀತಿಶತಕ - ೮೪

ಕತ್ತರಿಸಿದರೂ ಮರ ಮತ್ತೆ ಬೆಳೆಯುತ್ತದೆ. ಚಂದ್ರನು ಕ್ಷೀಣನಾದರೂ ಮತ್ತೆ

ವೃದ್ಧಿಹೊಂದುತ್ತಾನೆ. ಹೀಗೆ ವಿಮರ್ಶಿಸುತ್ತಾ ಸತ್ಪುರುಷರು ವಿಪತ್ತಿನಿಂದ ಪೀಡಿತರಾಗಿದ್ದರೂ ದುಃಖಿಸುವುದಿಲ್ಲ.

ಜಟಿಲೋ ಮುಂಡೀ ಲುಂಚಿತಕೇಶಃ
ಕಾಷಾಯಾಂಬರಬಹುಕೃತವೇಷಃ ।
ಪಶ್ಯನ್ನಪಿ ಚ ನ ಪಶ್ಯತಿ ಮೂಢಃ
ಉದರನಿಮಿತ್ತಂ ಬಹುಕೃತವೇಷಃ ॥ ೧೬೫

- ಭಜಗೋವಿಂದಸ್ತೋತ್ರ

ಜಟೆಬಿಡಿಸಿದವನು, ತಲೆಬೋಳಿಸಿದವನು, ಕೇಶಲುಂಚನಮಾಡಿಕೊಂಡವನು, ಕಾವೀಬಟ್ಟೆಯಿಂದ ನಾನಾ ವೇಷ ಹಾಕಿದವನು, ಹೀಗೆ ಹೊಟ್ಟೆಪಾಡಿಗಾಗಿ ಬಹು ವಿಧ ವೇಷವನ್ನು ಧರಿಸುತ್ತಾನೆ. ಈ ಮೂಢನು ಕಂಡರೂ ಕಾಣದೆ ಇರತಕ್ಕವನು - ಅಜ್ಞಾನಿ.

ಜನೋ ವೈ ಲೋಕ ಏತಸ್ಮಿನ್ನ ವಿದ್ಯಾಕಾಮಕರ್ಮಭಿಃ ।
ಉಚ್ಚಾವಚಾಸು ಗತಿಷು ನ ವೇದ ಸ್ವಾಂಗತಿಂ ಭ್ರಮನ್ ॥ ೧೬೬

ಈ ಲೋಕದಲ್ಲಿ ಜನರು ಅಜ್ಞಾನ, ಆಸೆ, ಕರ್ಮಗಳಿಂದ ಉತ್ತಮ ಮತ್ತು ಅಧಮಗತಿಗಳಲ್ಲಿ ಅಲೆದಾಡುತ್ತಾ ಇರುತ್ತಾರೆ. ತಮ್ಮ ಮುಂದಿನ ಗತಿ ಏನೆಂಬುದನ್ನು ಅರಿಯರು.

ಜಾಗ್ರತಾಮಪಿ ನಿದ್ರಾ ಯಃ ಪಶ್ಯತಾಮಪಿ ಸೋಽಂಧತಾ ।
ಶ್ರುತೇ ಸತ್ಯಪಿ ಜಾಡ್ಯಂ ಯಃ ಪ್ರಕಾಶೇಽಪಿ ಚ ಯಸ್ತಮಃ ॥ ೧೬೭

- ನೈಷಧಚರಿತೆ, ೧೭-೩೩

ಮೋಹದ ಬಲೆಯಲ್ಲಿದ್ದಾಗ ಎಚ್ಚರವಾಗಿದ್ದರೂ ನಿದ್ರೆ ಮಾಡುತ್ತಿರುವಂತೆ, ನೋಡುತ್ತಿದ್ದರೂ ಕುರುಡರಂತೆ, ಓದಿದ್ದರೂ ಮೂರ್ಖರಂತೆ, ಬೆಳಕಿದ್ದರೂ ಕತ್ತಲಲ್ಲಿ ಹೇಗೋ ಹಾಗೆ ವರ್ತಿಸುತ್ತಾರೆ.

ಜಾಡ್ಯಂ ಹ್ರೀಮತಿ ಗಣ್ಯತೇ ವ್ರತರುಚೌ ದಂಭಃ ಶುಚೌ ಕೈತವಂ
ಶೂರೇ ನಿರ್ಘೃಣತಾ ಋಜೌ ವಿಮತಿತಾ ದೈನ್ಯಂ ಪ್ರಿಯಾಲಾಪಿನಿ ।
ತೇಜಸ್ವಿನ್ಯವಲಿಪ್ತತಾ ಮುಖರಿತಾ ವಕ್ತರ್ಯಶಕ್ತಿಃ ಸ್ಥಿರೇ
ತತ್ಕೋ ನಾಮ ಗುಣೋ ಭವೇತ್ಸ ಗುಣಿನಾಂ ಯೋ ದುರ್ಜನೈರ್ನಾಂಕಿತಃ ॥
೧೬೮

- ನೀತಿಶತಕ - ೫೨

ನಾಚಿಕೆಯುಳ್ಳವನಲ್ಲಿ ಜಡತ್ವವೂ, ವ್ರತಾನುಷ್ಠಾನನಿರತನಲ್ಲಿ ದಂಭವೂ, ಶುಚಿಯಾದವನಲ್ಲಿ ಧೂರ್ತತೆಯೂ, ಶೂರನಲ್ಲಿ ನಿರ್ದಯತೆಯೂ, ಸರಳ ಮಾನವನಲ್ಲಿ ಬುದ್ಧಿಯಿಲ್ಲದಿರುವಿಕೆಯೂ, ಪ್ರಿಯಭಾಷಿಯಲ್ಲಿ ದೈನ್ಯವೂ, ತೇಜಸ್ವಿಯಾದವನಲ್ಲಿ ಗರ್ವವೂ, ವಾಗ್ಮಿಯಲ್ಲಿ ಬಾಯಿ ಹಿಡಿತವಿಲ್ಲದಿರುವಿಕೆಯೂ, ಸ್ಥಿರಮನಸ್ಸುಳ್ಳವನಲ್ಲಿ ಶಕ್ತಿಯಿಲ್ಲದಿರುವಿಕೆಯೂ ದುಷ್ಟರಿಂದ ಆರೋಪವಾಗುತ್ತವೆ. ಹೀಗೆ ಸದ್ಗುಣಗಳ ಯಾವ ಗುಣಕ್ಕೆ ತಾನೇ ದುರ್ಜನರು ದೋಷ ಆರೋಪಿಸುವುದಿಲ್ಲ?

**ಜಾತಸ್ಯ ಮೃತ್ಯುರ್ಧ್ರುವ ಏಷ ಸರ್ವತಃ**
**ಪ್ರತಿಕ್ರಿಯಾ ಯಸ್ಯ ನ ಚೇಹ ಕ್ಲುಪ್ತಾ ।**
**ಲೋಕೋ ಯಶಶ್ಚಾಥ ತತೋ ಯದಿ ಹ್ಯಮುಂ**
**ಕೋ ನಾಮ ಮೃತ್ಯುಂ ನ ವೃಣೀತ ಯುಕ್ತಮ್ ॥** ೧೬೯

- ಭಾಗವತ, ೬-೧೦-೩೨

ಎಲ್ಲೆಡೆಗಳಲ್ಲಿಯೂ ಹುಟ್ಟಿದವನಿಗೆ ಸಾವು ಖಂಡಿತ. ಅದನ್ನು ತಪ್ಪಿಸುವ ಮಾರ್ಗ ಇಲ್ಲ. ಮನುಷ್ಯನಿಗೆ ಉತ್ತಮವಾದ ಲೋಕವೂ ಮತ್ತು ಕೀರ್ತಿಯೂ ಲಭಿಸುವಂತಿದ್ದರೆ, ಯಾರು ತಾನೇ ಒಳ್ಳೆಯ ಸಾವನ್ನು ಬಯಸುವುದಿಲ್ಲ.

**ಜಾಮಾತೃಸಂಪತ್ತಿಮಚಿಂತಯಿತ್ವಾ**
**ಪಿತ್ರಾ ತು ದತ್ತಾ ಸ್ವಮನೋಭಿಲಾಷಾತ್ ।**
**ಕುಲದ್ವಯಂ ಹಂತಿ ಮದೇನ ನಾರೀ**
**ಕೂಲದ್ವಯಂ ಕ್ಷುಬ್ಧಜಲಾ ನದೀವ ॥** ೧೭೦

- ಅವಿಮಾರಕ, ೧-೩

ವರನ ಅರ್ಹತೆಯನ್ನು ಯೋಚಿಸದೆ, ತನ್ನ ಮನಸ್ಸಿಗೆ ತೋರಿದಂತೆ ತಂದೆಯು ಮಗಳನ್ನು ಯಾರಿಗಾದರೂ ಕೊಟ್ಟು ಮದುವೆ ಮಾಡಿದರೆ, ಹೆಣ್ಣು ತನ್ನ ಸ್ವೇಚ್ಛಾ ವರ್ತನೆಯಿಂದ, ಹುಟ್ಟಿದ ಮತ್ತು ಸೇರಿದ ಮನೆಗಳನ್ನು ಹಾಳು ಮಾಡುತ್ತಾಳೆ. ವೇಗವಾಗಿ ಹರಿಯುತ್ತಿರುವ ಪ್ರವಾಹದ ನೀರು ನದಿಯ ಎರಡೂ ದಡಗಳನ್ನು ಬೀಳಿಸುವುದಿಲ್ಲವೇ.

**ಜಿತರೋಷರಯಾ ಮಹಾಧಿಯಃ**
**ಸಪದಿಕ್ರೋಧಜಿತೋ ಲಘುರ್ಜನಃ ।**
**ವಿಜಿತೇನ ಜಿತಸ್ಯ ದುರ್ಮತೇ**
**ರ್ಮತಿಮದ್ಭಿಃ ಸಹ ಕಾ ವಿರೋಧಿತಾ ॥** ೧೭೧

- ಶಿಶುಪಾಲವಧ, ೧೬-೨೬

ಬಹಳ ದೊಡ್ಡ ಜ್ಞಾನಿಗಳು ಕೋಪದ ವೇಗವನ್ನು ಗೆದ್ದಿರುವರು. ಸಾಮಾನ್ಯ

ಜನರು ಕೋಪಕ್ಕೆ ಒಳಗಾಗಿ ಸೋತವರು. ಗೆದ್ದವರಿಗೂ ಸೋತವರಿಗೂ ಜ್ಞಾನಿಗಳಿಗೂ ಅಜ್ಞಾನಿಗಳಿಗೂ ಸ್ಪರ್ಧೆ ಅಸಂಭವ.

**ಜಿತಾ ಧನವತಾ ದಾರಾ ಜಿತಾ ವಸ್ತ್ರವತಾ ಸಭಾ ।**
**ಜಿತೋ ಹ್ಯಭ್ಯಾಗತೋ ಗೋಭಿರ್ದಾರಿದ್ರ್ಯಂ ಕೃಷಿಭಿರ್ಜಿತಮ್ ॥೧೭೪**

- ಸಮಯೋಚಿತಪದ್ಯಮಾಲಿಕಾ

ಧನವಂತನು ಮಡದಿಯನ್ನು ವಶಪಡಿಸಿಕೊಳ್ಳಬಹುದು. ಒಳ್ಳೆಯ ವಸ್ತ್ರವನ್ನು ಧರಿಸಿದವನು ಸಭೆಯನ್ನು ವಶಪಡಿಸಿಕೊಳ್ಳಬಹುದು. ಹಸುಗಳಿಂದ ಅತಿಥಿಯನ್ನು ಸತ್ಕರಿಸಿ ಗೆಲ್ಲಬಹುದು. ಕೃಷಿಯಿಂದ ಬಡತನವನ್ನು ಜಯಿಸಬಹುದು.

**ಜಿತಾ ಸಭಾ ವಸ್ತ್ರವತಾ ಮಿಷ್ಟಾಶಾ ಗೋಮತಾ ಜಿತಾ ।**
**ಅಧ್ವಾ ಜಿತೋ ಯಾನವತಾ ಸರ್ವಂ ಶೀಲವತಾ ಜಿತಮ್ ॥೧೭೩**

- ಮಹಾಭಾರತ, ಉದ್ಯೋಗ. ೩೪-೪೭

ಉತ್ತಮ ವಸ್ತ್ರವನ್ನು ಧರಿಸಿದವನು ಸಭೆಯನ್ನು ವಶಪಡಿಸಿಕೊಳ್ಳುತ್ತಾನೆ. ಹಸು ಇರತಕ್ಕವನಿಗೆ ಮಿಷ್ಟಾನ್ನವು ವಶವಾದಂತೆಯೇ. ವಾಹನವಿರತಕ್ಕವನು ದಾರಿಯನ್ನು ಗೆದ್ದಂತೆ. ಶೀಲವಂತನು ಸರ್ವವನ್ನೂ ಗೆದ್ದಂತೆ.

**ಜಿಹ್ವಯಾತಿಪ್ರಮಾಥಿನ್ಯಾ ಜನೋ ರಸವಿಮೋಹಿತಃ ।**
**ಮೃತ್ಯುಮೃಚ್ಛತ್ಯಸದ್ ಬುದ್ಧಿರ್ಮೀನಸ್ತು ಬಡಿಶೈರ್ಯಥಾ ॥ ೧೭೪**

- ಭಾಗವತ, ೧೧-೮-೧೯

ನಾಲಿಗೆ ಬಹಳ ಪ್ರಮಾದಕಾರಿ. ರುಚಿಗಾಗಿ ವ್ಯಾಮೋಹಗೊಳ್ಳುವ ಬುದ್ಧಿಹೀನರು ನಾಶವನ್ನೈದುತ್ತಾರೆ, ಮೀನು ಗಾಳದಿಂದ ಸಾಯುವಂತೆ.

**ಜಿಹ್ವಾ ದಗ್ಧಾ ಪರಾನ್ನೇನ ಹಸ್ತೌ ದಗ್ಧೌ ಪ್ರತಿಗ್ರಹಾತ್ ।**
**ಪರಸ್ತ್ರೀಭಿರ್ಮನೋ ದಗ್ಧಂ ಕಥಂ ಸಿದ್ಧಿಃ ಕಲೌ ಯುಗೇ ॥ ೧೭೫**

- ವಿಚಾರದೀಪಿಕಾ

ಪರಾನ್ನದಿಂದ ನಾಲಿಗೆ ಸುಟ್ಟುಹೋಗಿದೆ. ಪರರ ಹಣವನ್ನು ತೆಗೆದುಕೊಂಡದ್ದರಿಂದ ಕೈಗಳು ಸುಟ್ಟುಹೋಗಿವೆ. ಪರಸ್ತ್ರೀಯರ ಧ್ಯಾನದಿಂದ ಮನಸ್ಸು ಸುಟ್ಟುಹೋಗಿದೆ. ಹೀಗಿರುವಾಗ ಕಲಿಯುಗದಲ್ಲಿ ಸಿದ್ಧಿದೊರೆಯುವುದು ಹೇಗೆ ?

ಜಿಹ್ವಾ ನ ವಕ್ತಿ ಭಗವದ್ಗುಣನಾಮಧೇಯಂ
ಚೇತಶ್ಚ ನ ಸ್ಮರತಿ ತಚ್ಚರಣಾರವಿಂದಂ ।
ಕೃಷ್ಣಾಯ ನೋ ನಮತಿ ಯಚ್ಛಿರ ಏಕದಾಪಿ
ತಾನಾನಯಧ್ವಮಸತೋಽಕೃತವಿಷ್ಣುಕೃತ್ಯಾನ್ ॥ ೧೭೬

- ಭಾಗವತ, ೬-೩-೨೯

ಯಾವ ಮಾನವನ ನಾಲಿಗೆ ಪರಮಾತ್ಮನ ಗುಣಗಳನ್ನು ಹೆಸರನ್ನು ಹೇಳುವುದಿಲ್ಲವೋ, ಮತ್ತು ಯಾರ ಮನಸ್ಸು ಅವನ ಪಾದಕಮಲಗಳನ್ನು ಸ್ಮರಿಸುವುದಿಲ್ಲವೋ, ಒಂದು ಸಲವಾದರೂ ಯಾರ ತಲೆಯು ಅವನಿಗೆ ನಮಸ್ಕರಿಸುವುದಿಲ್ಲವೋ, ಅಂತಹ ಪರಮಾತ್ಮನ ಕೆಲಸ ಮಾಡದ ಅಸತ್ಪುರುಷರನ್ನು ನನ್ನ (ಯಮನ) ಹತ್ತಿರಕ್ಕೆ ಕರೆದುಕೊಂಡು ಬನ್ನಿ.

ತತ್ವಮಾತ್ಮಸ್ಥಮಜ್ಞಾತ್ವಾ ಮೂಢಃ ಶಾಸ್ತ್ರೇಷು ಮುಹ್ಯತಿ ।
ಗೋಪಃ ಕಕ್ಷಗತೇ ಛಾಗೇ ಕೂಪೇ ಪಶ್ಯತಿ ದುರ್ಮತಿಃ ॥ ೧೭೭

- ಗರುಡಪುರಾಣ, ೧೬-೮೦

ಆತ್ಮನಲ್ಲಿರುವ ತತ್ತ್ವವನ್ನು ತಿಳಿಯದೆ ಶಾಸ್ತ್ರಗಳಲ್ಲಿ ಮೂಢನು ತತ್ತ್ವವನ್ನು ಹುಡುಕುತ್ತಾನೆ. ದನಕಾಯುವವನು ಕಂಕುಳಲ್ಲಿ ಮೇಕೆಯನ್ನು ಇಟ್ಟುಕೊಂಡು ಬಾವಿಯಲ್ಲಿ ಅದನ್ನು ನೋಡಲು ಯತ್ನಿಸುತ್ತಾನೆ.

ಅಕಾರಣಂ ರೂಪಮಕಾರಣಂ ಕುಲಂ ।
ಮಹತ್ಸು ನೀಚೇಷು ಚ ಕರ್ಮ ಶೋಭತೇ ॥ ೧೭೮

- ಪಂಚರಾತ್ರ, ೨-೩೩

ಕೆಲಸದ ಘನತೆಯೇ ಹೊಗಳಲು ಯೋಗ್ಯ. ಆಕೃತಿಯಾಗಲಿ, ಕುಲವಾಗಲಿ ಅಲ್ಲ. ಮಹಾತ್ಮನಾಗಲಿ ಸಾಮಾನ್ಯನಾಗಿರಲಿ ಮಾಡಿದ ಕೆಲಸದ ಘನತೆಯಿಂದ ಉತ್ತಮನೆನಿಸುತ್ತಾನೆ.

ತ್ವಮೇವ ಚಾತಕಾಧಾರೋಽಸೀತಿ ಕೇಷಾಂ ನ ಗೋಚರಃ ।
ಕಿಮಂಭೋದವರಾಸ್ಮಾಕಂ ಕಾರ್ಪಣ್ಯೋಕ್ತಿಂ ಪ್ರತೀಕ್ಷಸೇ ॥ ೧೭೯

- ನೀತಿಶತಕ - ೪೮

ಎಲೈ ಶ್ರೇಷ್ಠನಾದ ಮೇಘವೇ ! ನೀನೇ ಚಾತಕಪಕ್ಷಿಗಳಿಗೆ ಆಧಾರವೆಂದು ಯಾರಿಗೆ ಗೊತ್ತಿಲ್ಲ ? ನಮ್ಮ ದೈನ್ಯವಚನಗಳನ್ನು ಏಕೆ ಎದುರುನೋಡುತ್ತೀಯೆ ?

ತ್ವಂ ರಾಜಾ ವಯಮಪ್ಯುಪಾಸಿತಗುರುಪ್ರಜ್ಞಾಭಿಮಾನೋನ್ನತಾಃ
ಖ್ಯಾತಸ್ತ್ವಂ ವಿಭವೈರ್ಯಶಾಂಸಿ ಕವಯೋ ದಿಕ್ಷು ಪ್ರತನ್ವಂತಿ ನಃ ।

**ಇತ್ಥಂ ಮಾನದ ನಾತಿದೂರಮುಭಯೋರಪ್ಯಾವಯೋರಂತರಂ ।**
**ಯದ್ಯಸ್ಮಾಸು ಪರಾಙ್ಮುಖೋಽಸಿ ವಯಮಪ್ಯೇಕಾಂತತೋ ನಿಃಸ್ಪೃಹಾಃ ॥೧೮೦**

- ವೈರಾಗ್ಯಶತಕ - ೨೩

ನೀನು ದೊಡ್ಡ ರಾಜನಿರಬಹುದು. ನಾವೂ ಸಹ ಗುರುಸೇವೆಯಿಂದ ಗಳಿಸಿದ ಬುದ್ಧಿಶಕ್ತಿಯಿಂದ ದೊಡ್ಡವರೆನಿಸಿದ್ದೇವೆ. ಹಣದಿಂದ ನಿನಗೆ ಖ್ಯಾತಿ ಇದೆ. ನಮ್ಮ ಕೀರ್ತಿಯನ್ನು ಕವಿಗಳು ದಿಕ್ಕುದಿಕ್ಕುಗಳಲ್ಲಿ ಹರಡುತ್ತಿದ್ದಾರೆ. ಆದ್ದರಿಂದ, ಎಲೈ ಅಭಿಮಾನಶಾಲಿಯೆ, ನಮಗೂ ನಿನಗೂ ಹೆಚ್ಚಿನ ವ್ಯತ್ಯಾಸವೇನೂ ಇಲ್ಲ. ನಮ್ಮ ವಿಷಯದಲ್ಲಿ ನೀನು ಉದಾಸೀನನಾದರೆ, ನಿನ್ನಲ್ಲಿಯೂ ನಮಗೆ ಆಸಕ್ತಿ ಇಲ್ಲ !

**ತಸ್ಮಾತ್ಸರ್ವೇಷು ಭೂತೇಷು ದಯಾಂ ಕುರುತ ಸೌಹೃದಂ ।**
**ಆಸುರಂ ಭಾವಮುನ್ಮುಚ್ಯ ಯಯಾ ತುಷ್ಯತ್ಯಧೋಕ್ಷಜಃ ॥ ೧೮೧**

- ಭಾಗವತ, ೭-೬-೨೪

ಎಲ್ಲಾ ಪ್ರಾಣಿಗಳಲ್ಲಿಯೂ ದಯೆಯನ್ನೂ ಮೈತ್ರಿಯನ್ನೂ ಇಡಿರಿ. ರಾಕ್ಷಸ ಭಾವನೆಯನ್ನು ಬಿಟ್ಟರೆ, ಪರಮಾತ್ಮನು ಸಂತೋಷಪಡುತ್ತಾನೆ.

**ತಸ್ಮಾನ್ನ ಕಸ್ಯಚಿದ್ ದ್ರೋಹಮಾಚರೇತ್ ಸ ತಥಾವಿಧಃ ।**
**ಆತ್ಮನಃ ಕ್ಷೇಮಮನ್ವಿಚ್ಛನ್ ದ್ರೋಗ್ಧುರ್ವೈ ಪರತೋ ಭಯಮ್ ॥ ೧೮೨**

- ಭಾಗವತ, ೧೦-೧-೪೪

ಮನುಷ್ಯನು ಯಾರಿಗೂ ದ್ರೋಹವನ್ನಾಚರಿಸಬಾರದು. ಹೀಗೆ ಮಾಡಿದರೆ ತನ್ನ ಕ್ಷೇಮವನ್ನು ಇಚ್ಛಿಸಿದಂತೆಯೇ. ಮೋಸ ಅಥವಾ ದ್ರೋಹ ಮಾಡುವವನಿಗೆ ಬೇರೆಯವರ ದೆಸೆಯಿಂದ ಭಯವಿರುತ್ತದೆ.

**ತಾವದ್ಧರ್ಮಕಥಾ ಮನೋಭವರುಚಿರ್ಮೋಕ್ಷಸ್ಪೃಹಾ ಜಾಯತೇ**
**ಯಾವತ್ತೃಪ್ತಿಸುಖೋದಯೇನ ನ ಜನಃ ಕ್ಷುತ್ ಕ್ಷಾಮಕುಕ್ಷಿಃ ಕ್ಷಣಂ ।**
**ಪ್ರಾಪ್ತೇ ಭೋಜನಚಿಂತನಸ್ಯ ಸಮಯೇ ವಿತ್ತಂ ನಿಮಿತ್ತಂ ವಿನಾ**
**ಧರ್ಮೇ ಕಸ್ಯ ಧಿಯಃ ಸ್ಮರಂ ಸ್ಮರತಿ ಕಃ ಕೇನೇಕ್ಷ್ಯತೇ ಮೋಕ್ಷಭೂಃ ॥೧೮೩**

- ಚತುರ್ವರ್ಗಸಂಗ್ರಹ, ೨-೨೪

ಎಲ್ಲಿಯವರೆಗೆ ಜೀವನದಲ್ಲಿ ತೃಪ್ತಿ ಸುಖಗಳಿರುತ್ತವೆಯೋ ಅಲ್ಲಿಯವರೆಗೆ ಧರ್ಮದ ಕಥೆ, ಕಾಮದ ಅಪೇಕ್ಷೆ ಜನರಿಗಿರಬಹುದು. ಹಣವಿಲ್ಲದೆ ಹಸಿವಿನಿಂದ

ಹೊಟ್ಟೆ ಬಡವಾದಾಗ ಊಟದ ಸಮಯ ಬಂದಿರಲು, ಯಾರಿಗೆ ಧರ್ಮದ ಗೊಡವೆಯಿರುತ್ತದೆ ? ಕಾಮದ ಸ್ಮರಣೆ ಎಲ್ಲಿ ? ಮೋಕ್ಷದ ವಿಚಾರ ಯಾರಿಗೆ ಬೇಕು ?

ಮಿಥ್ಯಾಪ್ರಶಂಸಾ ಖಲು ನಾಮ ಕಷ್ಟಾ ।
ಯೇಷಾಂ ತು ಮಿಥ್ಯಾವಚನೇಷು ಭಕ್ತಿಃ ॥ ೧೮೪

- ಪಂಚರಾತ್ರ, ೨-೬೦

ಸುಳ್ಳು ಹೊಗಳಿಕೆಯನ್ನು ಸಹಿಸುವುದು ಕಷ್ಟ. ಆದರೂ ಕೆಲವರಿಗೆ ಸುಳ್ಳು ಮಾತಿನಲ್ಲಿ ಹೆಚ್ಚು ಆಸಕ್ತಿಯುಂಟು.

ತಾವದ್ಭಯಾದ್ಧಿ ಭೇತವ್ಯಂ ಯಾವದ್ಭಯಮನಾಗತಂ ।
ಆಗತಂ ತು ಭಯಂ ವೀಕ್ಷ್ಯ ಪ್ರಹರ್ತವ್ಯಮಭೀತವತ್ ॥ ೧೮೫

- ಸುಭಾಷಿತರತ್ನಭಾಂಡಾಗಾರ

ಭಯ ಎಲ್ಲಿಯವರೆಗೆ ಬಂದಿಲ್ಲವೋ ಅಲ್ಲಿಯವರೆಗೆ ಅದಕ್ಕೆ ಹೆದರಬೇಕು. ಅದು ಬಂದುಬಿಟ್ಟಿದೇ ಆದರೆ ನಿರ್ಭಯವಾಗಿ ಅದನ್ನು ಪ್ರಹರಿಸಬೇಕು.

ತಾವದ್ಭಯಂ ದ್ರವಿಣಗೇಹಸುಹೃನ್ನಿಮಿತ್ತಂ
ಶೋಕಃ ಸ್ಪೃಹಾ ಪರಿಭವೋ ವಿಪುಲಶ್ಚ ಲೋಭಃ ।
ತಾವನ್ಮಮೇತ್ಯಸದವಗ್ರಹ ಆರ್ತಿಮೂಲಂ
ಯಾವನ್ನ ತೇಽಂಘ್ರಿಮಭಯಂ ಪ್ರವೃಣೀತ ಲೋಕಃ ॥ ೧೮೬

- ಭಾಗವತ, ೩-೯-೬

ಎಲ್ಲಿಯವರೆಗೆ ಜನರು ನಿರ್ಭಯವಾದ ಭಗವಂತನ ಪಾದಗಳನ್ನಾಶ್ರಯಿಸುವುದಿಲ್ಲವೋ, ಅದುವರೆವಿಗೂ ಹಣ, ಮನೆ, ಸ್ನೇಹಿತರ ಕಾರಣಕ್ಕಾಗಿ ಭಯ, ಶೋಕ, ಆಸೆ, ಅವಮಾನ, ಹೆಚ್ಚಾದ ಲೋಭ, ಸಂಕಟಗಳಿಗೆ ಮೂಲವಾದ ಮಮತೆಯೆಂಬ ದುಷ್ಟ ಪೀಡೆ ಮುಂತಾದುವುಂಟಾಗುತ್ತವೆ.

ತೀಕ್ಷ್ಣಧಾರೇಣ ಖಡ್ಗೇನ ವರಂ ಜಿಹ್ವಾ ದ್ವಿಧಾ ಕೃತಾ ।
ನ ತು ಮಾನಂ ಪರಿತ್ಯಜ್ಯ ದೇಹಿ ದೇಹೀತಿ ಭಾಷಣಮ್ ॥ ೧೮೭

- ಸುಭಾಷಿತರತ್ನಸಮುಚ್ಚಯ

ಮರ್ಯಾದೆಯನ್ನು ಬಿಟ್ಟು 'ದೇಹಿ, ದೇಹಿ' ಎನ್ನುವುದಕ್ಕಿಂತ ಹರಿತವಾದ ಕತ್ತಿಯಿಂದ ನಾಲಗೆಯನ್ನು ಸೀಳಿಕೊಂಡುಬಿಡುವುದು ಉತ್ತಮ.

**ತೀರ್ಥಾನಿ ದೀರ್ಘಾಧ್ವಪರಿಶ್ರಮಾಣಿ**
**ಬಹುವ್ಯಯಾನಿ ಕ್ರತುಡಂಬರಾಣಿ ।**
**ತಪಾಂಸಿ ಮುಕ್ತ್ವಾ ತನುಶೋಷಣಾನಿ**
**ಹಿಂಸಾವಿರಾಮೇ ರಮತಾಂ ಮತಿರ್ವಃ ॥ ೧೮೮**

- ಚತುರ್ವರ್ಗಸಂಗ್ರಹ, ೧-೨೧

ತೀರ್ಥಕ್ಷೇತ್ರಗಳು ದೂರದ ಹಾದಿಯನ್ನು ತುಳಿದು ಆಯಾಸಪಟ್ಟು ಹೋಗಬೇಕಾದವು. ಯಜ್ಞಯಾಗಾದಿಗಳು ಬಹಳ ಖರ್ಚಿನವು. ತಪಸ್ಸು ಅತ್ಯಂತ ದೇಹ ಶೋಷಣೆಯುಳ್ಳದ್ದು. ಇವೆಲ್ಲ ಏಕೆ ? ನಿಮ್ಮ ಬುದ್ಧಿಯು ಅಹಿಂಸೆಯಲ್ಲಿ ನಿರತವಾಗಿರಲಿ.

**ಪುಣ್ಯಸ್ಯ ಫಲಮಿಚ್ಛಂತಿ ಪುಣ್ಯಂ ನೇಚ್ಛಂತಿ ಮಾನವಾಃ ।**
**ಪಾಪಸ್ಯ ತು ನ ಹೀಚ್ಛಂತಿ ಪಾಪಂ ಕುರ್ವಂತಿ ಯತ್ನತಃ ॥ ೧೮೯**

- ಮಹಾಭಾರತ

ಜನರು ಪುಣ್ಯ ಕೆಲಸಗಳನ್ನು ಮಾಡಲು ಇಷ್ಟಪಡುವುದಿಲ್ಲ. ಆದರೆ ಪುಣ್ಯದ ಫಲ ಸಿಕ್ಕುವಹಾಗಿದ್ದರೆ ತೆಗೆದುಕೊಳ್ಳಲು ಆಸೆ ಪಡುತ್ತಾರೆ. ಇವರಿಗೆ ಪಾಪದ ಫಲವು ಬೇಡ. ಆದರೆ ಪ್ರಯತ್ನಪೂರ್ವಕವಾಗಿ ಪಾಪದ ಕೆಲಸಗಳನ್ನು ಮಾಡುತ್ತಾರೆ.

**ದದಾತಿ ಪ್ರತಿಗೃಹ್ಣಾತಿ ಗುಹ್ಯಮಾಖ್ಯಾತಿ ಪೃಚ್ಛತಿ ।**
**ಭುಂಕ್ತೇ ಭೋಜಯತೇ ಚೈವ ಷಡ್ವಿಧಂ ಪ್ರೀತಿಲಕ್ಷಣಂ ॥ ೧೯೦**

- ಪಂಚತಂತ್ರ, ಮಿತ್ರಸಂಪ್ರಾಪ್ತಿ-೫೧

ಕೊಡುವುದು, ತೆಗೆದುಕೊಳ್ಳುವುದು, ಗುಟ್ಟನ್ನು ಹೇಳುವುದು ಮತ್ತೆ ಕೇಳುವುದು, ಊಟಮಾಡುವುದು, ಮಾಡಿಸುವುದು - ಇವು ಆರೂ ಪ್ರೀತಿಯ ಲಕ್ಷಣಗಳು.

**ದರಿದ್ರೋ ಯಸ್ತ್ವಸಂತುಷ್ಟಃ ಕೃಪಣೋ ಯೋಽಜಿತೇಂದ್ರಿಯಃ**
**ಗುಣೇಷ್ವಸಕ್ತಧೀರೀಶೋ ಗುಣಸಂಗೋ ವಿಪರ್ಯಯಃ ॥ ೧೯೧**

- ಭಾಗವತ, ೧೧-೧೯-೪೪

ಯಾರು ಸಂತೋಷ ಅಥವಾ ತೃಪ್ತಿಯನ್ನು ಹೊಂದಿಲ್ಲವೋ ಅವನೇ ದರಿದ್ರ. ಯಾರು ಇಂದ್ರಿಯಗಳನ್ನು ಗೆದ್ದಿಲ್ಲವೋ ಅವನೇ ಶೋಚನೀಯ. ಯಾರು ದುರ್ಗುಣಗಳಲ್ಲಿ ಅನಾಸಕ್ತನೋ ಅವನೇ ಪ್ರಭು ; ದುರ್ಗುಣಗಳಲ್ಲಿ ಆಸಕ್ತಿಯೇ ನಾಶ.

ಭ್ರಮನ್ ವನಾಂತೇ ಸುಮಮಂಜರೀಷು
ನೇಂದಿಂದಿರೋ ಗಂಧಫಲೀಂ ಚುಚುಂಬ ।
ಸಾ ಕಿಂ ನ ರಮ್ಯಾ ಸ ಚ ಕಿಂ ನ ರಂತಾ
ಬಲೀಯಸೀ ಕೇವಲಮೀಶ್ವರೇಚ್ಛಾ ॥ ೧೯೨

- ಸಮಯೋಚಿತಪದ್ಯಮಾಲಿಕಾ

ಕಾಡಿನಲ್ಲಿ ಹೂಗಳನ್ನು ಸೇವಿಸುತ್ತಾ ಹಾರುತ್ತಿದ್ದ ದುಂಬಿಯು ಸಂಪಿಗೆ ಹೂವನ್ನು ಮುಟ್ಟಲಿಲ್ಲ. ಸಂಪಿಗೆ ಸುಂದರವಾಗಿ ಸುವಾಸನೆಯಾಗಿಲ್ಲವೇ ? ದುಂಬಿಗೆ ಅದು ತಿಳಿದಿಲ್ಲವೇ! ದೈವೇಚ್ಛೆ ದೊಡ್ಡದು.

ದಾನೋಪಭೋಗರಹಿತಾ ದಿವಸಾ ಯಸ್ಯ ಯಾಂತಿ ವೈ ।
ಸ ಲೋಹಕಾರಭಸ್ತ್ರೇವ ಶ್ವಸನ್ನಪಿ ನ ಜೀವತಿ ॥ ೧೯೩

ಸುಭಾಷಿತರತ್ನಸಮುಚ್ಚಯ

ಯಾವನು ದಾನವನ್ನು ಮಾಡದೆ ತಾನೂ ಅನುಭವಿಸದೆ ದಿನಗಳನ್ನು ಕಳೆಯುತ್ತಾನೋ, ಅವನು ಕಮ್ಮಾರನ ತಿದಿಯಂತೆ ಉಸಿರಾಡತಕ್ಕವನೇ ಹೊರತು ಬದುಕಿದನವಲ್ಲ.

ದಾರೇಷು ಕಿಂಚಿತ್ಸ್ವಜನೇಷು ಕಿಂಚಿ-
ದ್ಗೋಪ್ಯಂ ವಯಸ್ಯೇಷು ಸುತೇಷು ಕಿಂಚಿತ್ ।
ಯುಕ್ತಂ ನ ವಾ ಯುಕ್ತಮಿದಂ ವಿಚಿಂತ್ಯ
ವದೇದ್ವಿಪಶ್ಚಿನ್ಮಹತೋಽನುರೋಧಾತ್ ॥ ೧೯೪

- ಪಂಚತಂತ್ರ, ಮಿತ್ರಭೇದ - ೧೦೯

ಹೆಂಡತಿಯಿಂದ ಸ್ವಲ್ಪ, ಸ್ವಜನರಿಂದ ಸ್ವಲ್ಪ, ಸ್ನೇಹಿತರಿಂದ ಸ್ವಲ್ಪ ಹಾಗೂ ಮಕ್ಕಳಿಂದ ಸ್ವಲ್ಪ ಮುಚ್ಚಿಡಬೇಕಾದದ್ದಿದೆ. ಮಹಾತ್ಮರ ವ್ಯವಹಾರಕ್ಕನುಸಾರವಾಗಿ ತಿಳಿದವನು 'ಇದು ಸರಿಯೇ ಅಲ್ಲವೇ' ಎಂದು ಯೋಚಿಸಿ ಯೋಚಿಸಿ ಮಾತಾಡಬೇಕು.

ದ್ವಾವಂಭಸಿ ನಿವೇಷ್ಟವ್ಯೌ ಗಲೇ ಬದ್ಧ್ವಾ ದೃಢಾಂ ಶಿಲಾಂ ।
ಧನವಂತಮದಾತಾರಂ ದರಿದ್ರಂ ಚಾತಪಸ್ವಿನಮ್ ॥ ೧೯೫

- ಮಹಾಭಾರತ, ಉದ್ಯೋಗ. ೩೩-೬೦

ಧನಿಕನಾದರೂ ಯಾವನು ದಾನಮಾಡುವುದಿಲ್ಲವೋ, ದರಿದ್ರನಾದರೂ ಯಾವನು ತಪಸ್ಸು ಮಾಡುವುದಿಲ್ಲವೋ - ಅವರಿಬ್ಬರ ಕೊರಳಿಗೆ ಬಲವಾದ ಕಲ್ಲನ್ನು ಕಟ್ಟಿ ಅವರನ್ನು ನೀರಲ್ಲಿ ಮುಳುಗಿಸಿಬಿಡಬೇಕು!

ದ್ವಾವಿಮೌ ಕಂಟಕೌ ತೀಕ್ಷ್ಣೌ ಶರೀರಪರಿಶೋಷಿಣೌ ।
ಯಶ್ಚಾಧನಃ ಕಾಮಯತೇ ಯಶ್ಚ ಕುಪ್ಯತ್ಯನೀಶ್ವರಃ ॥ ೧೯೬

- ಮಹಾಭಾರತ, ಉದ್ಯೋಗ. ೩೩-೫೬

ಇವೆರಡು ದೇಹಕ್ಕೆ ಪೀಡೆಯನ್ನು ಕೊಡುವ ಹರಿತವಾದ ಮುಳ್ಳುಗಳು. ಅವು ಯಾವುವೆಂದರೆ : ದರಿದ್ರನ ಬಯಕೆ, ಅಶಕ್ತನ ಕೋಪ.

ದುರ್ಮಂತ್ರಿಣಂ ಕಮುಪಯಾಂತಿ ನ ನೀತಿದೋಷಾಃ
ಸಂತಾಪಯಂತಿ ಕಮಪಥ್ಯಭುಜಂ ನ ರೋಗಾಃ ।
ಕಂ ಶ್ರೀರ್ನ ದರ್ಪಯತಿ ಕಂ ನ ನಿಹಂತಿ ಮೃತ್ಯುಃ
ಕಂ ಸ್ತ್ರೀಕೃತಾ ನ ವಿಷಯಾಃ ಪರಿತಾಪಯಂತಿ ॥ ೧೯೭

- ಹಿತೋಪದೇಶ, ವಿಗ್ರಹ - ೧೪೪

ರಾಜನೀತಿಯ ದೋಷಗಳು ಯಾವ ದುರ್ಮಂತ್ರಿಗೆ ತಾನೇ ಉಂಟಾಗುವುದಿಲ್ಲ? ಅಪಥ್ಯ ಮಾಡಿದ ಯಾವನನ್ನು ತಾನೇ ರೋಗಗಳು ಪೀಡಿಸುವುದಿಲ್ಲ ? ಐಶ್ವರ್ಯ ಯಾರಿಗೆ ದರ್ಪವನ್ನುಂಟುಮಾಡುವುದಿಲ್ಲ? ಮೃತ್ಯು ಯಾರನ್ನು ಕೊಲ್ಲುವುದಿಲ್ಲ? ಹೆಂಗಸಿನಿಂದಾದ ವಿಷಯಗಳು ಯಾರಿಗೆ ತಾನೇ ತಾಪವನ್ನುಂಟುಮಾಡುವುದಿಲ್ಲ ?

ದುರ್ಲಭೋ ಮಾನುಷೋ ದೇಹೋ ದೇಹಿನಾಂ ಕ್ಷಣಭಂಗುರಃ।
ತತ್ರಾಪಿ ದುರ್ಲಭಂ ಮನ್ಯೇ ವೈಕುಂಠಪ್ರಿಯದರ್ಶನಮ್ ॥ ೧೯೮

- ಭಾಗವತ, ೧೧-೨-೨೯

ಮನುಷ್ಯದೇಹವೇ ದುರ್ಲಭ. ಅದೂ ಸಹ ಕ್ಷಣಿಕವಾದದ್ದು. ಹೀಗಿರುವಾಗ ಈ ದೇಹದಲ್ಲಿ ಭಗವದ್ಭಕ್ತರ ದರ್ಶನವಾಗುವುದು ಅತ್ಯಂತ ವಿರಳ.

ದೂರಸ್ಥೋಽಪಿ ಸಮೀಪಸ್ಥೋ ಯೋ ಯಸ್ಯ ಹೃದಿ ವರ್ತತೇ ।
ಯೋ ಯಸ್ಯ ಹೃದಯೇ ನಾಸ್ತಿ ಸಮೀಪಸ್ಥೋಽಪಿ ದೂರಗಃ ॥ ೧೯೯

- ಸುಭಾಷಿತರತ್ನಭಾಂಡಾಗಾರ

ಯಾರ ಮನಸ್ಸಿನಲ್ಲಿ ಒಬ್ಬ ಇದ್ದಾನೆಯೋ ಅವನು ದೂರದಲ್ಲಿದ್ದರೂ ಹತ್ತಿರದಲ್ಲೇ ಇದ್ದಂತೆ ! ಯಾರು ಹಾಗೆ ಮನಸ್ಸಿನಲ್ಲಿಲ್ಲವೋ ಅವನು ಹತ್ತಿರದಲ್ಲಿದ್ದರೂ ದೂರದಲ್ಲಿದ್ದಂತೆಯೇ!

**ದೂರಾದುಚ್ಛ್ರಿತಪಾಣಿರಾರ್ದ್ರನಯನಃ ಪ್ರೋಚ್ಛ್ರಾಸಿತಾರ್ಧಾಸನೋ
ಗಾಢಾಲಿಂಗನತತ್ಪರಃ ಪ್ರಿಯಕಥಾಪ್ರಶ್ನೇಷು ದತ್ತಾದರಃ ।
ಅಂತರ್ಗೂಢವಿಷೋ ಬಹಿರ್ಮಧುಮಯಶ್ಚಾತೀವ ಮಾಯಾಪಟುಃ
ಕೋ ನಾಮಾಯಮಪೂರ್ವನಾಟಕವಿಧಿರ್ಯಃ ಶಿಕ್ಷಿತೋ ದುರ್ಜನೈಃ ॥ ೨೦೦**

- ಹಿತೋಪದೇಶ, ಸುಹೃದ್ಭೇದ - ೧೫೦

ದೂರದಿಂದ ಕೈಯೆತ್ತಿ ಮುಗಿದು, ಕಣ್ಣಲ್ಲಿ ಕಂಬನಿ ತುಂಬಿ ತನ್ನ ಆಸನದಲ್ಲಿ ಅರ್ಧವನ್ನು ನಿರ್ಬಂಧದಿಂದಿತ್ತು, ಗಾಢವಾಗಿ ಆಲಿಂಗನ ನೀಡಿ, ಪ್ರಿಯವಾದವರ ಬಗೆಗೆ ಪ್ರಶ್ನೆ ಕೇಳುವುದರಲ್ಲಿ ಆದರವುಳ್ಳವನಾಗಿ ; ಹೀಗೆ ಹೊರಗಡೆ ಜೇನು ತುಂಬಿ, ಆದರೆ ಒಳಗೆ ವಿಷವನ್ನು ಮುಚ್ಚಿಟ್ಟುಕೊಂಡಿರುವವನಾಗಿ ವಂಚನೆಯಲ್ಲಿ ಚತುರನಾಗಿರುವನು. ದುರ್ಜನರು ಕಲಿತ ಈ ಅತ್ಯಪೂರ್ವವಾದ ನಾಟಕ ಕ್ರಮದ ಹೆಸರಾದರೂ ಯಾವುದೋ ?

**ದೂರಾದತಿಥಯೋ ಯಸ್ಯ ಗೃಹಮಾಯಾಂತಿ ನಿರ್ವೃತಾಃ ।
ಗೃಹಸ್ಥಃ ಸ ತು ವಿಜ್ಞೇಯಃ ಶೇಷಾಸ್ತು ಗೃಹರಕ್ಷಿಣಃ ॥ ೨೦೧**

- ಸುಭಾಷಿತಸುಧಾನಿಧಿ

ಯಾರ ಮನೆಗೆ ದೂರದಿಂದ ಅತಿಥಿಗಳು ಸಂತೋಷದಿಂದ ಬರುತ್ತಾರೆಯೋ ಅವನನ್ನು ಗೃಹಸ್ಥನೆಂದು ತಿಳಿಯಬೇಕು. ಉಳಿದವರೆಲ್ಲ ಮನೆಯ ಕಾವಲಿನವರು.

**ದೂರಸ್ಥೋ ಜ್ಞಾಯತೇ ಸರ್ವಃ ಪರ್ವತೇ ಜ್ವಲನಾದಿವತ್ ।
ಚೂಡಾಮಣಿಃ ಶಿರಸ್ಥೋಽಪಿ ದೃಶ್ಯತೇ ನ ಸ್ವಚಕ್ಷುಷಾ ॥ ೨೦೨**

- ರಾಮಾಯಣಮಂಜರೀ, ಕಿಷ್ಕಿಂದಾ - ೪೭೮

ದೂರದಲ್ಲಿರತಕ್ಕವರೆಲ್ಲರೂ ಬೆಟ್ಟದಲ್ಲಿರುವ ಬೆಂಕಿಯಂತೆ ಕಂಡುಬರುತ್ತಾರೆ. ಚೂಡಾಮಣಿಯು ತಲೆಯಮೇಲಿದ್ದರೂ ತನ್ನ ಕಣ್ಣಿಗೆ ಕಾಣುವುದಿಲ್ಲ.

**ಕಾಲಕ್ರಮೇಣ ಜಗತಃ ಪರಿವರ್ತಮಾನಾ ।
ಚಕ್ರಾರಪಂಕ್ತಿರಿವ ಗಚ್ಛತಿ ಭಾಗ್ಯಪಂಕ್ತಿಃ ॥ ೨೦೩**

- ಸ್ವಪ್ನವಾಸವದತ್ತ, ೧-೪

ಕಾಲವು ಬದಲಾಯಿಸಿದಂತೆಲ್ಲಾ ಅದೃಷ್ಟವು ಚಕ್ರದ ಅರೆಕೋಲುಗಳಂತೆ ಮೇಲಕ್ಕೂ ಕೆಳಕ್ಕೂ ಉರುಳುತ್ತದೆ.

**ದೇಶೇ ದೇಶೇ ಕಲತ್ರಾಣಿ ದೇಶೇ ದೇಶೇ ಚ ಬಾಂಧವಾಃ ।**
**ತಂ ತು ದೇಶಂ ನ ಪಶ್ಯಾಮಿ ಯತ್ರ ಭ್ರಾತಾ ಸಹೋದರಃ ॥ ೨೦೪**

- ರಾಮಾಯಣ, ಯುದ್ಧ, ೧೦೨-೧೩

ಯಾವ ದೇಶದಲ್ಲಾದರೂ ಮಡದಿಯರು ದೊರಕಬಹುದು ; ಬಂಧುಗಳು ಲಭಿಸಬಹುದು. ಆದರೆ ಒಡಹುಟ್ಟಿದ ತಮ್ಮನು ದೊರಕುವ ಯಾವ ದೇಶವನ್ನೂ ನಾನು ಕಾಣೆ. (ಶ್ರೀರಾಮನ ನುಡಿ)

**ದೇಹದಂಡನಮಾತ್ರೇಣ ಕಾ ಮುಕ್ತಿರವಿವೇಕಿನಾಂ ।**
**ವಲ್ಮೀಕತಾಡನಾದೇವ ಮೃತಃ ಕುತ್ರ ಮಹೋರಗಃ ॥ ೨೦೫**

- ಗರುಡಪುರಾಣ, ೧೬-೬೨

ಶರೀರವನ್ನ ಉಪವಾಸ, ವ್ರತಗಳಿಂದ ದಂಡಿಸಿದ ಮಾತ್ರಕ್ಕೆ ಅಜ್ಞಾನಿಗಳಿಗೆ ಮೋಕ್ಷ ಬರುವುದೇ ? ಹುತ್ತವನ್ನು ಬಡಿದರೆ ಹಾವು ಸಾಯುತ್ತದೆಯೇ. ?

**ದೇಹವಾಗ್ಬುದ್ಧಿಜಂ ಧೀರಾ ಧರ್ಮಜ್ಞಾಃ ಶ್ರದ್ಧಯಾನ್ವಿತಾಃ ।**
**ಕ್ಷಿಪಂತ್ಯಘಂ ಮಹದಪಿ ವೇಣುಗುಲ್ಮಮಿವಾನಲಃ ॥ ೨೦೬**

- ಭಾಗವತ, ೬-೧-೧೪

ಈ ಲೋಕದಲ್ಲಿ ಧೀರರೂ, ಧರ್ಮವನ್ನು ತಿಳಿದವರೂ, ಶ್ರದ್ಧೆಯಿಂದ ಕೂಡಿದವರೂ, ಶರೀರದಿಂದ, ಮಾತಿನಿಂದ ಮನಸ್ಸಿನಿಂದುಂಟಾದ ಮಹಾ ಪಾಪವನ್ನು ಕೂಡ ಬಿದಿರಿನ ಪೊದೆಯನ್ನು ಬೆಂಕಿಯು ಸುಡುವಂತೆ, ಸುಟ್ಟು ಎಸೆಯುತ್ತಾರೆ.

**ದೇಹಾಪತ್ಯಕಳತ್ರಾದಿಷ್ವಾತ್ಮಸೈನ್ಯೇಷ್ವಸತ್ಸ್ವಪಿ ।**
**ತೇಷಾಂ ಪ್ರಮತ್ತೋ ನಿಧನಂ ಪಶ್ಯನ್ನಪಿ ನ ಪಶ್ಯತಿ ॥ ೨೦೭**

- ಭಾಗವತ, ೨-೧-೪

ಶರೀರ, ಮಕ್ಕಳು, ಹೆಂಡತಿ ಮೊದಲಾದ ತನ್ನ ಸೈನ್ಯಗಳು ಶಾಶ್ವತವಲ್ಲದಿದ್ದರೂ, ಅವುಗಳಲ್ಲಿ ಆಸಕ್ತಿಹೊಂದಿ ತಾನು ಪ್ರಮತ್ತನಾಗಿ, ಅವುಗಳ ನಾಶವನ್ನು ನೋಡುತ್ತಿದ್ದರೂ - ತಿಳಿಯಲಾರ.

**ದೇಹೇ ಪಾತಿನಿ ಕಾ ರಕ್ಷಾ ಯಶೋ ರಕ್ಷ್ಯಮಪಾತವತ್ ।**
**ನರಃ ಪಾತಿತಕಾಯೋಽಪಿ ಯಶಃಕಾಯೇನ ಜೀವತಿ ॥ ೨೦೮**

- ಸುಭಾಷಿತರತ್ನಭಾಂಡಾಗಾರ

ಬಿದ್ದುಹೋಗುವ ದೇಹಕ್ಕೆ ರಕ್ಷಣೆ ಎಲ್ಲಿಯದು ? ಎಂದೂ ಬೀಳದ ಯಶಸ್ಸನ್ನು

ಕಾಪಾಡಿಕೊಳ್ಳಬೇಕು ದೇಹ ಬಿದ್ದುಹೋದರೂ ಮನುಷ್ಯ ಯಶಶ್ಶರೀರದಿಂದ ಬಾಳುತ್ತಾನೆ.

ದೈವೇನ ತೇ ಹತಧಿಯೋ ಭವತಃ ಪ್ರಸಂಗಾತ್
ಸರ್ವಾಶುಭೋಪಶಮನಾದ್ವಿ ಮುಖೇಂದ್ರಿಯಾ ಯೇ ।
ಕುರ್ವಂತಿ ಕಾಮಸುಖಲೇಶಲವಾಯ ದೀನಾ
ಲೋಭಾಭಿಭೂತಮನಸೋಽಕುಶಲಾನಿ ಶಶ್ವತ್ ॥ ೨೦೯

ಯಾರು ವಿಧಿವಶದಿಂದ ದುರ್ಬುದ್ಧಿಗಳಾಗಿ, ಎಲ್ಲಾ ಅಮಂಗಳಗಳನ್ನು ದೂರ ಮಾಡುವ ಭಗವಂತನಿಂದ ವಿಮುಖರಾಗಿ, ಕಾಮದಿಂದುಂಟಾಗುವ ಸುಖಲೇಶಮಾತ್ರಕ್ಕಾಗಿ ಲೋಭದಿಂದ ಕೂಡಿದ ಮನಸ್ಸುಳ್ಳವರಾಗಿರುವರೋ, ಅವರು ಯಾವಾಗಲೂ ಅಶುಭವನ್ನೇ ಮಾಡುತ್ತಾರೆ. ಅವರು ದೀನರು.

ದೋಷಭೀತೇರನಾರಂಭಸ್ತತ್ಕಾಪುರುಷಲಕ್ಷಣಂ ।
ಕೈರಜೀರ್ಣಭಯಾದ್ಭ್ರಾತರ್ಭೋಜನಂ ಪರಿಹೀಯತೇ ॥ ೨೧೦

- ಸುಭಾಷಿತರತ್ನಭಾಂಡಾಗಾರ

ದೋಷವುಂಟಾಗುವುದೋ ಏನೋ ಎಂಬ ಭಯದಿಂದ ಕಾರ್ಯವನ್ನೇ ಆರಂಭ ಮಾಡದಿರುವುದು ಅಲ್ಪ ಮನುಷ್ಯನ ಲಕ್ಷಣ. ಅಜೀರ್ಣವಾಗಬಹುದೆಂದು ಹೆದರಿ ಯಾರಾದರೂ ಊಟಮಾಡುವುದನ್ನು ಬಿಟ್ಟಿದ್ದಾರೆಯೇ ?

ದೌರ್ಮಂತ್ರ್ಯಾನ್ನೃಪತಿರ್ವಿನಶ್ಯತಿ ಯತಿಃ ಸಂಗಾತ್ ಸುತೋ ಲಾಲನಾತ್
ವಿಪ್ರೋಽನಧ್ಯಯನಾತ್ ಕುಲಂ ಕುತನಯಾತ್ ಶೀಲಂ ಖಲೋಪಾಸನಾತ್ ।
ಹ್ರೀರ್ಮದ್ಯಾದನವೇಕ್ಷಣಾದಪಿ ಕೃಷಿಃ ಸ್ನೇಹಃ ಪ್ರವಾಸಾಶ್ರಯಾತ್
ಮೈತ್ರೀ ಚಾಪ್ರಣಯಾತ್ ಸಮೃದ್ಧಿರನಯಾತ್ ತ್ಯಾಗಾತ್ ಪ್ರಮಾದಾದ್ಧನಮ್ ॥
೨೧೧

ಕೆಟ್ಟ ಮಂತ್ರಾಲೋಚನೆಯಿಂದ ರಾಜನೂ, ಸಹವಾಸದಿಂದ ಸಂನ್ಯಾಸಿಯೂ, ಲಾಲನೆಯಿಂದ ಮಗನೂ, ವೇದಾಧ್ಯಯನ ಮಾಡದಿರುವುದರಿಂದ ವಿಪ್ರನೂ, ದುಷ್ಪುತ್ರನಿಂದ ಕುಲವೂ, ದುರ್ಜನ ಸಂಗದಿಂದ ನಡತೆಯೂ ಕೆಟ್ಟುಹೋಗುತ್ತವೆ. ಮದ್ಯಪಾನದಿಂದ ನಾಚಿಕೆಯೂ, ಉಪೇಕ್ಷೆಯಿಂದ ಕೃಷಿಯೂ, ಪರಸ್ಥಳ ಪ್ರವಾಸದಿಂದ ಪ್ರೀತಿಯೂ, ಪ್ರೀತಿಯಿಲ್ಲದಿದ್ದರಿಂದ ಸ್ನೇಹವೂ ಕ್ಷೀಣಿಸುತ್ತವೆ. ದುರ್ನೀತಿಯಿಂದ ಸಕಲ ಸಮೃದ್ಧಿಯೂ, ಪ್ರಮಾದವಶನಾಗಿ ಖರ್ಚುಮಾಡುವುದರಿಂದ ಹಣವೂ ನಾಶವನ್ನೈದುತ್ತವೆ.

ದ್ವೌ ಸಮ್ಮತಾವಿಹ ಮೃತ್ಯೂ ದುರಾಪೌ
ಯದ್ ಬ್ರಹ್ಮಸಂಧಾರಣಯಾ ಜಿತಾಸುಃ ।
ಕಲೇವರಂ ಯೋಗರತೋ ವಿಜಹ್ಯಾದ್
ಯದಗ್ರಣೀರ್ವೀರಶಯೇಽನಿವೃತ್ತಃ ॥ ೨೧೨

- ಭಾಗವತ, ೬-೧೦-೩೩

ಎರಡು ವಿಧವಾದ ಸಾವುಗಳು ಈ ಲೋಕದಲ್ಲಿ ಸಮ್ಮತವಾದುವು ಮತ್ತು ಕಷ್ಟದಿಂದ ಪಡೆಯಲು ಸಾಧ್ಯವಾದುವು. ಅವು ಯಾವುವೆಂದರೆ ಮೊದಲನೆಯದು ಬ್ರಹ್ಮ ಸಂಧಾರಣೆಯಿಂದ ಪ್ರಾಣಗಳನ್ನು ಗೆದ್ದು ಯೋಗಾಭ್ಯಾಸದಿಂದ ಶರೀರವನ್ನು ಬಿಡುವುದು, ಎರಡನೆಯದು ಯುದ್ಧಭೂಮಿಯಿಂದ ಹಿಂದಿರುಗದೇ ವೀರರಲ್ಲಿ ಮೊದಲನೆಯವನಾಗಿ ವೀರ ಮರಣವನ್ನು ಹೊಂದುವುದು.

ಧತ್ತೇ ಭರಂ ಕುಸುಮಪತ್ರಫಲಾವಲೀನಾಂ
ಘರ್ಮವ್ಯಥಾಂ ವಹತಿ ಶೀತಭವಾಂ ರುಜಂ ಚ ।
ಯೋ ದೇಹಮರ್ಪಯತಿ ಚಾನ್ಯಸುಖಸ್ಯ ಹೇತೋಃ
ತಸ್ಮೈವದಾನ್ಯಗುರವೇ ತರವೇ ನಮೋಽಸ್ತು ॥ ೨೧೩

- ಭಾಮಿನೀವಿಲಾಸ, ೧-೮೯

ಹೂ, ಎಲೆ, ಹಣ್ಣುಗಳ ಭಾರವನ್ನು ಹೊರುತ್ತದೆ. ಬೇಸಗೆಯ ಬೇಗೆಯನ್ನು ಚಳಿಯ ಬಾಧೆಯನ್ನೂ ಸಹಿಸುತ್ತದೆ. ಬೇರೆಯವರ ಸುಖಕ್ಕಾಗಿ ತನ್ನ ಶರೀರವನ್ನೂ ಅರ್ಪಿಸುತ್ತದೆ. ಇಂತಹ ದಾನವೀರನಾದ ವೃಕ್ಷಕ್ಕೆ ನಮಸ್ಕಾರ.

ಧನಮೇವ ಧರಣಿವಲಯೇ ಕಲಯತಿ ಸಫಲಾಯುಷಂ ಪುರುಷಂ ।
ಯದಿ ಜೀವತಿ ಧನರಹಿತಃ ಕಥಯ ಮೃತಃ ಕೀದೃಶೋ ಭವತಿ ॥ ೨೧೪

- ಹರಿಹರಸುಭಾಷಿತ, ೪-೧

ಈ ಜಗತ್ತಿನಲ್ಲಿ ಮನುಷ್ಯನ ಆಯುಸ್ಸನ್ನು ಸಫಲಗೊಳಿಸತಕ್ಕದ್ದು ಹಣವೇ ಸರಿ ! ಹಣವಿಲ್ಲದವನೂ ಜೀವಿಸುತ್ತಿದ್ದಾನೆ ಎನ್ನುವುದಾದರೆ, ಸತ್ತವನು ಹೇಗಿರುತ್ತಾನೆ, ಹೇಳು!

ಧನ್ಯಾ ಬಧಿರಾ ಅಂಧಾಸ್ತ ಏವ ಜೀವಂತಿ ಮಾನುಷೇ ಲೋಕೇ ।
ನ ಶೃಣ್ವಂತಿ ಪಿಶುನಜನಂ ಖಲಾನಾಂ ಋದ್ಧಿಂ ನ ಪ್ರೇಕ್ಷಂತೇ ॥ ೨೧೫

- ಸಪ್ತಶತೀ, ೭-೯೬

ಯಾರು ಕಿವುಡರೋ, ಕುರುಡರೋ, ಅವರೇ ಈ ಮನುಷ್ಯಲೋಕದಲ್ಲಿ ಧನ್ಯರು. ಏಕೆಂದರೆ ಚಾಡಿಗಳನ್ನು ಕೇಳಲಾರರು, ಮತ್ತು ದುಷ್ಟರ ಏಳಿಗೆಯನ್ನು ನೋಡಲಾರರು.

ಧನಿಕಃ ಶ್ರೋತ್ರಿಯೋ ರಾಜಾ ನದೀ ವೈದ್ಯಸ್ತು ಪಂಚಮಃ ।
ಪಂಚ ಯತ್ರ ನ ವಿದ್ಯಂತೇ ನ ಕುರ್ಯಾತ್ತತ್ರ ಸಂಸ್ಥಿತಿಮ್ ॥೨೧೬

- ಹಿತೋಪದೇಶ, ಮಿತ್ರಲಾಭ - ೭೮

ಶ್ರೀಮಂತ, ಶ್ರೋತ್ರಿಯ, ರಾಜ, ನದಿ, ವೈದ್ಯ ಇವು ಐದೂ ಎಲ್ಲಿ ಇರುವುದಿಲ್ಲವೋ ಅಲ್ಲಿ ವಾಸಮಾಡಬಾರದು.

ಧರ್ಮೋ ಜಿತೋ ಹ್ಯಧರ್ಮೇಣ ಜಿತಃ ಸತ್ಯೋಽನೃತೇನ ಚ ।
ಜಿತಾ ಭೃತ್ಯೈಸ್ತು ರಾಜಾನಃ ಸ್ತ್ರೀಭಿಶ್ಚ ಪುರುಷಾ ಜಿತಾಃ ॥ ೨೧೭

- ಪರಾಶರಸ್ಮೃತಿ, ೧-೩೧

ಕಲಿಯುಗದಲ್ಲಿ ಧರ್ಮವು ಅಧರ್ಮದಿಂದ ಸೋಲುತ್ತದೆ. ಸುಳ್ಳೇ ಸತ್ಯಕ್ಕಿಂತ ಬಲವಾಗುತ್ತದೆ. ಸೇವಕರು ಅರಸರನ್ನು ಮೀರುತ್ತಾರೆ. ಹೆಂಗಸರು ಗಂಡಸರನ್ನು ವಶದಲ್ಲಿಟ್ಟುಕೊಳ್ಳುತ್ತಾರೆ.

ಧವಲಾನ್ಯಾತಪತ್ರಾಣಿ ವಾಜಿನಶ್ಚ ಮನೋರಮಾಃ ।
ಸದಾ ಮತ್ತಾಶ್ಚ ಮಾತಂಗಾಃ ಪ್ರಸನ್ನೇ ಸತಿ ಭೂಪತೌ ॥ ೨೧೮

- ಪಂಚತಂತ್ರ, ಮಿತ್ರಭೇದ - ೪೩

ರಾಜನು ಪ್ರಸನ್ನನಾದನೆಂದರೆ ಆಯಿತು ಯಾವಾಗಲೂ ಶ್ವೇತಛತ್ರಗಳೇನು, ಕುದುರೆಗಳೇನು, ಸುಂದರಿಯರೇನು, ಮದ್ದಾನೆಗಳೇನು ಇವೆಲ್ಲಾ ಇರುವುವು.

ನ ಕುಲಂ ವೃತ್ತಹೀನಸ್ಯ ಪ್ರಮಾಣಮಿತಿ ಮೇ ಮತಿಃ ।
ಅಂತೇಷ್ವಪಿ ಹಿ ಜಾತಾನಾಂ ವೃತ್ತಮೇವ ವಿಶಿಷ್ಯತೇ ॥ ೨೧೯

- ಮಹಾಭಾರತ, ಉದ್ಯೋಗ. ೩೪-೪೧

ಒಳ್ಳೆಯ ನಡತೆಯಿಲ್ಲದವನ ಕುಲವು ಪ್ರಾಮಾಣಿಕವಾದ ಆಧಾರವಲ್ಲ. ಕುಲಹೀನರಾದರೂ ಅವರ ಒಳ್ಳೆ ನಡತೆ ಹೆಚ್ಚಿನದು.

ನ ಗಣಸ್ಯಾಗ್ರತೋ ಗಚ್ಛೇತ್ಸಿದ್ಧೇ ಕಾರ್ಯೇ ಸಮಂ ಫಲಮ್ ।
ಯದಿ ಕಾರ್ಯವಿಪತ್ತಿಃ ಸ್ಯಾತ್ ಮುಖರಸ್ತತ್ರ ಹನ್ಯತೇ ॥ ೨೨೦

- ಹಿತೋಪದೇಶ, ಮಿತ್ರಲಾಭ - ೨೧

ಗುಂಪಿನ ಮುಂದಾಳುವಾಗಿ ಹೋಗಬಾರದು. ಕಾರ್ಯ ಕೈಗೂಡಿದರೆ ಸಮಾನವಾದ ಪ್ರಯೋಜನ ಆಗುವುದು. ಒಂದುವೇಳೆ ಕೆಲಸ ಕೆಟ್ಟುಹೋದರೆ ಆಗ ಆ ಮುಂದಾಳನ್ನು ಕೊಲ್ಲುತ್ತಾರೆ.

ನ ಗೃಹಾಣಿ ನ ವಸ್ತ್ರಾಣಿ ನ ಪ್ರಾಕಾರಾಸ್ತಿರಸ್ಕ್ರಿಯಾಃ ।
ನೇದೃಶಾ ರಾಜಸತ್ಕಾರಾಃ ವೃತ್ತಮಾವರಣಂ ಸ್ತ್ರಿಯಾಃ ॥ ೨೨೧

- ರಾಮಾಯಣ, ಯುದ್ಧ. ೧೧೭-೨೬

ಮನೆಗಳಾಗಲಿ, ವಸ್ತ್ರಗಳಾಗಲಿ, ಸುತ್ತಲಿರುವ ಕೋಟೆಗಳಾಗಲಿ, ಮೇಲುಮುಸುಕುಗಳಾಗಲಿ ಸ್ತ್ರೀಯರ ಮರ್ಯಾದೆಯನ್ನು ರಕ್ಷಿಸಲಾರವು. ಈ ಬಗೆಯ ರಾಜಮರ್ಯಾದೆಗಳೂ ಅಲ್ಲ. ಸ್ತ್ರೀಯರಿಗೆ ಶೀಲವೇ ಮರ್ಯಾದೆಯನ್ನು ರಕ್ಷಿಸುವ ಆವರಣ.

ನ ಚಾತಿಪ್ರಣಯಃ ಕಾರ್ಯಃ ಕರ್ತವ್ಯೋ ಪ್ರಣಯಶ್ಚ ತೇ ।
ಉಭಯಂ ಹಿ ಮಹಾನ್ ದೋಷಸ್ತಸ್ಮಾದಂತರದೃಗ್ಭವ ॥ ೨೨೨

- ರಾಮಾಯಣ, ಕಿಷ್ಕಿಂಧಾ. ೨೨-೨೩

(ರಾಜರೊಡನೆ) ಅತಿಸ್ನೇಹ, ಸ್ನೇಹರಾಹಿತ್ಯ - ಇವು ಕೂಡದು. ಇವೆರಡೂ ಬಹಳ ಅನರ್ಥಕಾರಿ. ಆದ್ದರಿಂದ ಮಧ್ಯಸ್ಥನಾಗಿ ವರ್ತಿಸು.

ಆದಾಯ ವಾರಿ ಪರಿತಃ ಸರಿತಾಂ ಮುಖೇಭ್ಯಃ
ಕಿಂ ನಾಮ ಸಾಧಿತಮನೇನ ಮಹಾರ್ಣವೇನ ।
ಕ್ಷಾರೀಕೃತಂ ಚ ವಡವಾ ದಹನೇ ಹುತಂ ಚ
ಪಾತಾಳಮೂಲಕುಹರೇ ವಿನಿವೇಶಿತಂ ಚ ॥ ೨೨೩

- ಭಟ್ಟೇಂದುರಾಜ

ಈ ಅಗಾಧ ಸಮುದ್ರವು ಸುತ್ತಲೂ ಎಲ್ಲ ನದಿಗಳಿಂದಲೂ ನೀರನ್ನು ಗ್ರಹಿಸಿ ಏನನ್ನು ಸಾಧಿಸಿತು ? ಸಿಹಿ ನೀರನ್ನು ಉಪ್ಪುಮಾಡಿತು. ಬಡಬಾಗ್ನಿಯಲ್ಲಿ ತುಂಬಿತು. ಪಾತಾಳಕುಹರದಲ್ಲಿ ಎಲ್ಲವನ್ನೂ ತಳ್ಳಿತು.

ನ ಜಾನಪದಿಕಂ ದುಃಖಮೇಕಃ ಶೋಚಿತುಮರ್ಹತಿ ।
ಅಪ್ಯಭಾವೇನ ಯುಜ್ಯೇತ ತಚ್ಚಾಸ್ಯ ನ ನಿವರ್ತತೇ ॥ ೨೨೪

- ಮಹಾಭಾರತ, ಸ್ತ್ರೀ. ೨-೨೬

ರಾಷ್ಟ್ರಕ್ಕೆ ಬಂದ ದುಃಖವನ್ನು ಒಬ್ಬನೇ ಆಲೋಚಿಸಿ ಶೋಕಿಸುವುದು ತರವಲ್ಲ. ಸಕಲವನ್ನೂ ತ್ಯಾಗಮಾಡಿದರೂ ಸಹ ಆ ದುಃಖ ಹೋಗಲಾರದು.

**ಸರ್ವೇ ಸ್ವರ್ಗಸುಖಾರ್ಥಿನಃ ಕ್ರತುಶತೈಃ ಪ್ರಾಜ್ಯೈರ್ಯಜಂತೇ ಜಡಾಃ**
**ತೇಷಾಂ ನಾಕಪುರೇ ಪ್ರಯಾತಿ ವಿಪುಲಃ ಕಾಲಃ ಕ್ಷಣಾರ್ಧಂ ಯಥಾ ।**
**ಕ್ಷೀಣೇ ಪುಣ್ಯಧನೇ ಸ್ಥಿತಿರ್ನ ತು ಯಥಾ ವೇಶ್ಯಾಗೃಹೇ ಕಾಮಿನಾಂ**
**ತಸ್ಮಾನ್ಮೋಕ್ಷಸುಖಂ ಸಮಾಶ್ರಯತ ಭೋಃ ಸತ್ಯಂ ಚ ನಿತ್ಯಂ ಚ ಯುತ್ ॥ ೧೨೫**

- ಮುನಿಮತಮೀಮಾಂಸಾ

ಎಲ್ಲಾ ಮೂರ್ಖರು ಸ್ವರ್ಗದಲ್ಲಿ ಸುಖವನ್ನು ಅನುಭವಿಸಲು ನೂರಾರು ಯಜ್ಞಗಳನ್ನು ಮಾಡುತ್ತಾರೆ. ಅವರ ಕಾಲವು ಸ್ವರ್ಗದಲ್ಲಿ ಒಂದು ಕ್ಷಣದಂತೆ ಕಳೆದುಹೋಗುತ್ತದೆ. ಹಣವು ಕಳೆದುಹೋದಮೇಲೆ ಕಾಮಿಯು ಹೇಗೆ ಸೂಳೆಯ ಮನೆಯನ್ನು ಬಿಡ ಬೇಕೋ, ಹಾಗೆ ಪುಣ್ಯವು ಮುಗಿದ ಮೇಲೆ ಸ್ವರ್ಗವು ಮುಗಿಯಿತು. ಆದುದರಿಂದ ಸತ್ಯವೂ ನಿತ್ಯವೂ ಆದ ಮೋಕ್ಷಕ್ಕೋಸ್ಕರ ಯತ್ನಿಸಿರಿ.

**ನ ದಾನತುಲ್ಯಂ ಧನಮನ್ಯದಸ್ತಿ**
**ನ ಸತ್ಯತುಲ್ಯಂ ವ್ರತಮನ್ಯದಸ್ತಿ ।**
**ನ ಶೀಲತುಲ್ಯಂ ಶುಭಮನ್ಯದಸ್ತಿ**
**ನ ಕ್ಷಾಂತಿತುಲ್ಯಂ ಹಿತಮನ್ಯದಸ್ತಿ ॥ ೨೨೬**

- ಚತುರ್ವರ್ಗಸಂಗ್ರಹ, ೧-೧೦

ದಾನಕ್ಕೆ ಸಮವಾದ ಸಂಪತ್ತು ಇನ್ನೊಂದಿಲ್ಲ. ಸತ್ಯಕ್ಕೆ ಸಮವಾದ ವ್ರತವಿಲ್ಲ. ಶೀಲಕ್ಕೆ ಸಮವಾದ ಶುಭವಿಲ್ಲ. ತಾಳ್ಮೆಗೆ ಸಮವಾದ ಶ್ರೇಯಸ್ಸು ಇನ್ನೊಂದಿಲ್ಲ.

**ನ ದ್ವಿಷಂತಿ ನ ಯಾಚಂತೇ ಪರನಿಂದಾಂ ನ ಕುರ್ವತೇ ।**
**ಅನಾಹೂತಾ ನ ಚಾಯಾಂತಿ ತೇನಾಶ್ಮಾನೋಽಪಿ ದೇವತಾಃ ॥ ೨೨೭**

- ಸುಭಾಷಿತರತ್ನಭಾಂಡಾಗಾರ

ದ್ವೇಷಿಸುವುದಿಲ್ಲ ; ಯಾಚಿಸುವುದಿಲ್ಲ ; ಇನ್ನೊಬ್ಬರನ್ನು ನಿಂದಿಸುವುದಿಲ್ಲ ; ಕರೆಯದೆ ಇದ್ದರೆ ಬರುವುದಿಲ್ಲ. ಈ ಕಾರಣಗಳಿಂದ ಶಿಲೆಗಳೂ ಸಹ ದೇವತೆಗಳು.

**ನ ಧರ್ಮಶಾಸ್ತ್ರಂ ಪಠತೀತಿ ಕಾರಣಂ**
**ನ ಚಾಪಿ ವೇದಾಧ್ಯಯನಂ ದುರಾತ್ಮನಃ ।**
**ಸ್ವಭಾವ ಏವಾತ್ರ ತಥಾತಿರಿಚ್ಯತೇ**
**ಯಥಾ ಪ್ರಕೃತ್ಯಾ ಮಧುರಂ ಗವಾಂ ಪಯಃ ॥ ೨೨೮**

- ಹಿತೋಪದೇಶ, ಮಿತ್ರಲಾಭ - ೧೩

ಹೇಗೆ ಹಸುವಿನ ಹಾಲು ಸ್ವಭಾವತಃ ಮಧುರವಾಗಿದೆಯೋ ಹಾಗೆಯೇ ಕೆಟ್ಟವನ ಸ್ವಭಾವವೇ ಇಲ್ಲಿ ಎಲ್ಲಕ್ಕೂ ಹೆಚ್ಚಾಗಿರುತ್ತದೆ ; ಧರ್ಮಶಾಸ್ತ್ರವನ್ನು ಓದುವುದಾಗಲೀ, ಅಥವಾ ವೇದಾಧ್ಯಯನ ಮಾಡುವುದಾಗಲೀ ಅವನ ಸ್ವಭಾವದ ಬದಲಾವಣೆಗೆ ಕಾರಣವಾಗದು.

**ನ ಧೈರ್ಯೇಣ ವಿನಾ ಲಕ್ಷ್ಮೀರ್ನ ಶೌರ್ಯೇಣ ವಿನಾ ಜಯಃ ।**
**ನ ಜ್ಞಾನೇನ ವಿನಾ ಮೋಕ್ಷೋ ನ ದಾನೇನ ವಿನಾ ಯಶಃ ॥ ೨೨೯**

- ಸಭಾರಂಜನಶತಕ - ೪೨

ಧೈರ್ಯವಿಲ್ಲದೆ ಧನವಿಲ್ಲ, ಶೌರ್ಯವಿಲ್ಲದೆ ಜಯವಿಲ್ಲ. ಜ್ಞಾನವಿಲ್ಲದೆ ಮೋಕ್ಷ ದೊರೆಯದು. ದಾನಮಾಡದೆ ಕೀರ್ತಿ ದೊರೆಯದು.

**ನನು ದೀಪಃ ಸ್ವಮಾತ್ಮಾನಂ ಸ್ವಾತ್ಮನೈವಾವಭಾಸಯನ್ ।**
**ದೃಷ್ಟೋ ದೀಪಪ್ರಕಾಶಾರ್ಥಂ ನ ಹಿ ದೀಪಾಂತರಾಹೃತಿಃ ॥ ೨೩೦**

- ಬೃಹದಾರಣ್ಯಕವಾರ್ತಿಕ, ೪-೩-೫೦೧

ದೀಪವು ತನ್ನನ್ನು ತಾನೇ ಪ್ರಕಾಶಗೊಳಿಸುತ್ತದೆ. ದೀಪವನ್ನು ನೋಡಲು ಬೇರೆ ದೀಪ ಬೇಡ.

**ನ ಪರಃ ಪಾಪಮಾದತ್ತೇ ಪರೇಷಾಂ ಪಾಪಕರ್ಮಣಾಂ ।**
**ಸಮಯೋ ರಕ್ಷಿತವ್ಯಸ್ತು ಸಂತಶ್ಚಾರಿತ್ರಭೂಷಣಾಃ ॥ ೨೩೧**

- ರಾಮಾಯಣ, ಯುದ್ಧ. ೧೧೬-೪೩

ತನಗೆ ಅಪಕಾರವನ್ನು ಮಾಡಿದವನಿಗೆ ಪ್ರಾಜ್ಞನಾದವನು ತಿರುಗಿ ಅಪಕಾರವನ್ನು ಮಾಡುವುದಿಲ್ಲ. ಸದಾಚಾರವನ್ನು ಅವಶ್ಯವಾಗಿ ಪಾಲಿಸಬೇಕು. ಸಜ್ಜನರಿಗೆ ಒಳ್ಳೆಯ ನಡೆತೆಯೇ ಭೂಷಣ.

**ನ ಪಿತಾ ನಾತ್ಮಜೋ ನಾತ್ಮಾ ನ ಮಾತಾ ನ ಸಖೀಜನಃ ।**
**ಇಹ ಪ್ರೇತ್ಯ ಚ ನಾರೀಣಾಂ ಪತಿರೇಕೋ ಗತಿಃ ಸದಾ ॥ ೨೩೨**

- ರಾಮಾಯಣ, ಅಯೋಧ್ಯಾ. ೨೭-೫

ಸ್ತ್ರೀಯರಿಗೆ ಈ ಲೋಕದಲ್ಲಾಗಲಿ ಪರಲೋಕದಲ್ಲಾಗಲಿ ಪತಿಯೊಬ್ಬನೇ ಗತಿ. ತಂದೆಯೂ ಅಲ್ಲ, ಮಗನೂ ಅಲ್ಲ,ತಾನೂ ಅಲ್ಲ. ತಾಯಿ, ಗೆಳತಿಯರೂ ಗತಿಯಲ್ಲ. (ಸೀತೆಯ ಹೇಳಿಕೆ)

**ನ ಯಸ್ಯ ಚೇಷ್ಟಿತಂ ವಿದ್ಯಾನ್ನ ಕುಲಂ ನ ಪರಾಕ್ರಮಂ ।**
**ನ ತಸ್ಯ ವಿಶ್ವಸೇತ್ಪ್ರಾಜ್ಞಃ ಯದೀಚ್ಛೇಚ್ಛ್ರೇಯಮಾತ್ಮನಃ ॥ ೨೩೩**

- ಪಂಚತಂತ್ರ, ಮಿತ್ರಭೇದ - ೨೮೪

ತನಗೆ ಶ್ರೇಯಸ್ಸಾಗಬೇಕೆಂದು ಬಯಸುವ ಯಾವ ತಿಳಿದವನೇ ಆಗಲಿ ತಾನು ಯಾರ ನಡತೆಯನ್ನೂ ಕುಲವನ್ನೂ ಪರಾಕ್ರಮವನ್ನೂ ತಿಳಿದಿಲ್ಲವೋ ಅಂಥವನಲ್ಲಿ ನಂಬಿಕೆಯಿಡಬಾರದು.

**ನರಕಸ್ಥೋಽಪಿ ದೇಹಂ ವೈ ನ ಪುಮಾಂಸ್ತ್ಯಕ್ತುಮಿಚ್ಛತಿ ।**
**ನಾರಕ್ಯಾಂ ನಿರ್ವೃತೌ ಸತ್ಯಾಂ ದೇವಮಾಯಾವಿಮೋಹಿತಃ ॥ ೨೩೪**

- ಭಾಗವತ, ೩-೩೦-೫

ದೇವಮಾಯೆಯಿಂದ ವಿಮೋಹಿತನಾದ ಪುರುಷನು ನರಕದಲ್ಲಿದ್ದರೂ ಸುಖಲೇಶವಿದ್ದರೆ ತನ್ನ ದೇಹವನ್ನು ಬಿಡಲಿಚ್ಛಿಸುವುದಿಲ್ಲ.

**ನರಪತಿಹಿತಕರ್ತಾ ದ್ವೇಷ್ಯತಾಂ ಯಾತಿ ಲೋಕೇ**
**ಜನಪದಹಿತಕರ್ತಾ ತ್ಯಜ್ಯತೇ ಪಾರ್ಥಿವೇಂದ್ರೈಃ ।**
**ಇತಿ ಮಹತಿ ವಿರೋಧೇ ವರ್ತಮಾನೇ ಸಮಾನೇ**
**ನೃಪತಿ ಜನಪದಾನಾಂ ದುರ್ಲಭಃ ಕಾರ್ಯಕರ್ತಾ ॥ ೨೩೫**

- ಪಂಚತಂತ್ರ, ಮಿತ್ರಭೇದ - ೧೪೨

ರಾಜನಿಗೆ ಹಿತವನ್ನು ಮಾಡುವವನು ಲೋಕದಲ್ಲಿ ಜನರ ದ್ವೇಷಕ್ಕೊಳಗಾಗುವನು. ಜನಗಳಿಗೆ ಹಿತವನ್ನುಂಟುಮಾಡುವವನನ್ನು ರಾಜೇಂದ್ರರು ಪರಿತ್ಯಾಗ ಮಾಡುವರು. ಹೀಗೆ ಪರಸ್ಪರ ಸಮವಾದ ಮಹತ್ತರವಾದ ವಿರೋಧವಿರುವಾಗ ರಾಜನಿಗೂ ಜನಗಳಿಗೂ ಸಮನಾಗಿ ಹಿತವನ್ನಾಚರಿಸುವವನು ಬಹಳ ದುರ್ಲಭ.

**ನರಸ್ಯಾಭರಣಂ ರೂಪಂ ರೂಪಸ್ಯಾಭರಣಂ ಗುಣಃ ।**
**ಗುಣಸ್ಯಾಭರಣಂ ಜ್ಞಾನಂ ಜ್ಞಾನಸ್ಯಾಭರಣಂ ಕ್ಷಮಾ ॥ ೨೩೬**

- ಸುಭಾಷಿತರತ್ನಸಮುಚ್ಚಯ, ೧-೧೦

ಮನುಷ್ಯನಿಗೆ ರೂಪ ಭೂಷಣ. ರೂಪಕ್ಕೆ ಗುಣ ಭೂಷಣ. ಗುಣಕ್ಕೆ ಜ್ಞಾನವೂ ಜ್ಞಾನಕ್ಕೆ ಕ್ಷಮೆಯೂ ಭೂಷಣ.

**ನ ವಿನಾ ಪಾರ್ಥಿವೋ ಭೃತ್ಯೈರ್ನ ಭೃತ್ಯಾಃ ಪಾರ್ಥಿವಂ ವಿನಾ ।**
**ತೇಷಾಂ ಚ ವ್ಯವಹಾರೋಽಯಂ ಪರಸ್ಪರನಿಬಂಧನಃ ॥ ೨೩೭**

- ಪಂಚತಂತ್ರ, ಮಿತ್ರಭೇದ - ೮೭

ರಾಜನಿಲ್ಲದೆ ಸೇವಕರಿಲ್ಲ ; ಸೇವಕರಿಲ್ಲದೆ ರಾಜನಿಲ್ಲ. ಅವರ ಈ ವ್ಯವಹಾರ ಒಬ್ಬರಿಗೊಬ್ಬರಿಗೆ ಸಂಬಂಧಿಸಿಯೇ ಇರತಕ್ಕದ್ದು.

**ಗುರೋರಪ್ಯವಲಿಪ್ತಸ್ಯ ಕಾರ್ಯಾಕಾರ್ಯಮಜಾನತಃ ।**
**ಉತ್ಪಥಂ ಪ್ರತಿಪನ್ನಸ್ಯ ಕಾರ್ಯಂ ಭವತಿ ಶಾಸನಮ್ ॥ ೨೩೮**

- ಮಹಾಭಾರತ

ಹಿರಿಯನಾಗಿದ್ದರೂ, ಗುರುವಾಗಿದ್ದರೂ, ಗರ್ವದಿಂದ ಕರ್ತವ್ಯಾಕರ್ತವ್ಯ ಗಳನ್ನರಿಯದೆ ದಾರಿತಪ್ಪಿ ನಡೆದರೆ ಅದಕ್ಕೆ ಪರಿಹಾರ ಮಾಡಲು ಹಿಂದೆಗೆಯಬಾರದು.

**ಲಭೇತ ವಾ ಪ್ರಾರ್ಥಯಿತಾ ನ ವಾ ಶ್ರಿಯಂ ।**
**ಶ್ರಿಯಾ ದುರಾಪಃ ಕಥಮೀಪ್ಸಿತೋ ಜನಃ ॥ ೨೩೯**

- ಅಭಿಜ್ಞಾನಶಾಕುಂತಲ

ಬೇಕೆಂದು ಆಶೆಪಡುವವನಿಗೆ ಸಂಪತ್ತು ಸಿಗಬಹುದು ಅಥವಾ ಸಿಗದೇಹೋಗ ಬಹುದು. ಸಂಪತ್ತೇ ಬೇಕೆಂದಾಗ ಸಿಗದ ಜನರುಂಟೇ!

**ನ ಹ್ಯಮ್ಮಯಾನಿ ತೀರ್ಥಾನಿ ನ ದೇವಾ ಮೃಚ್ಛಿಲಾಮಯಾಃ ।**
**ತೇ ಪುನಂತ್ಯುರುಕಾಲೇನ ದರ್ಶನಾದೇವ ಸಾಧವಃ ॥ ೨೪೦**

- ಭಾಗವತ, ೧೦-೪೮-೩೧

ಜಲಮಯವಾಗಿರುವ ತೀರ್ಥಗಳಾಗಲೀ, ಮಣ್ಣು ಕಲ್ಲುಗಳಿಂದ ನಿರ್ಮಿತವಾದ ದೇವರುಗಳಾಗಲೀ ಬಹಳ ಕಾಲವಾದಮೇಲೆ, ಮನುಷ್ಯನನ್ನು ಶುದ್ಧಿಗೊಲಿಸುತ್ತವೆ. ಆದರೆ ಸಾಧುಗಳು ತಮ್ಮ ದರ್ಶನಮಾತ್ರದಿಂದಲೇ ಶುದ್ಧಿಗೊಳಿಸುವರು.

**ನಾತಂತ್ರೀ ವಾದ್ಯತೇ ವೀಣಾ ನಾಚಕ್ರೋ ವರ್ತತೇ ರಥಃ ।**
**ನಾಪತಿಃ ಸುಖಮೇಧೇತ ಯಾ ಸ್ಯಾದಪಿ ಶತಾತ್ಮಜಾ ॥ ೨೪೧**

- ರಾಮಾಯಣ, ಅಯೋಧ್ಯಾ. ೩೯-೩೦

ತಂತಿಯಿಲ್ಲದೆ ವೀಣೆ ನುಡಿಯದು. ಚಕ್ರವಿಲ್ಲದೆ ರಥವು ನಡೆಯದು. ಹಾಗೆ ನೂರು ಮಕ್ಕಳ ತಾಯಿಯಾದರೂ ಪತಿಯಿಲ್ಲದಿದ್ದರೆ ಸ್ತ್ರೀಯು ಸುಖವಾಗಿ ಇರಲಾರಳು.

**ನಾದ್ರವ್ಯೇ ನಿಹಿತಾ ಕಾಚಿತ್ಕ್ರಿಯಾ ಫಲವತೀ ಭವೇತ್ ।**
**ನ ವ್ಯಾಪಾರಶತೇನಾಪಿ ಶುಕವತ್ಪಾಠ್ಯತೇ ಬಕಃ ॥ ೨೪೨**

- ಹಿತೋಪದೇಶ, ೧-೨೮

ಅನರ್ಹವಾದುದರಲ್ಲಿ ಮಾಡಿದ ಕೆಲಸವಾವುದೂ ಫಲಕಾರಿಯಾಗುವುದಿಲ್ಲ. ನೂರಾರು ಪ್ರಯತ್ನಗಳಿಂದಲೂ ಬಕಕ್ಕೆ ಗಿಣಿಯಂತೆ ಕಲಿಸಲಾಗುವುದಿಲ್ಲ.

ನಾಪ್ರಾಪ್ಯಮಭಿವಾಂಛಂತಿ ನಷ್ಟಂ ನೇಚ್ಛಂತಿ ಶೋಚಿತುಂ ।
ಆಪತ್ಸ್ವಪಿ ನ ಮುಹ್ಯಂತಿ ನರಾಃ ಪಂಡಿತಬುದ್ಧಯಃ ॥ ೨೪೩

- ಸುಭಾಷಿತರತ್ನಭಾಂಡಾಗಾರ

ವಿವೇಚನೆಮಾಡುವ ಬುದ್ಧಿಯುಳ್ಳವರು ಪಡೆಯಬಾರದುದನ್ನು ಬಯಸುವುದಿಲ್ಲ ; ನಷ್ಟವಾದುದಕ್ಕೆ ದುಃಖಿಸುವುದಿಲ್ಲ ; ಕಷ್ಟಕಾಲದಲ್ಲಿಯೂ ಸಹ ಮನಕೆಡುವುದಿಲ್ಲ.

ನಾಪೃಷ್ಟಃ ಕಸ್ಯಚಿದ್ಬ್ರೂಯಾತ್ ನ ಚಾನ್ಯಾಯೇನ ಪೃಚ್ಛತಃ ।
ಜಾನನ್ನಪಿ ಹಿ ಮೇಧಾವೀ ಜಡವಲ್ಲೋಕ ಆಚರೇತ್ ॥ ೨೪೪

- ಮನುಸ್ಮೃತಿ, ೨-೧೧೦

ತನ್ನನ್ನು ಕೇಳದೆ ಇರುವಾಗ ಹೇಳಬಾರದು. ಅನ್ಯಾಯವಾಗಿ ಅಂದರೆ ಅಹಂಕಾರದಿಂದ ಕೇಳುವವನಿಗೆ ಉತ್ತರ ಕೊಡಬಾರದು. ವಿದ್ಯಾವಂತನು ಅನೇಕ ವಿಷಯಗಳನ್ನು ಬಲ್ಲವನಾಗಿದ್ದರೂ ಲೋಕದಲ್ಲಿ ದಡ್ಡರಂತೆ ಮೌನವಾಗಿರಬೇಕು.

ನಾಭ್ಯುತ್ಥಾನಕ್ರಿಯಾ ಯತ್ರ ನಾಲಾಪಾ ಮಧುರಾಕ್ಷರಾಃ ।
ಗುಣದೋಷಕಥಾ ನೈವ ತತ್ರ ಹರ್ಮ್ಯೇ ನ ಗಮ್ಯತೇ ॥ ೨೪೫

- ಪಂಚತಂತ್ರ, ಮಿತ್ರಸಂಪ್ರಾಪ್ತಿ - ೬೯

ಎಲ್ಲಿ ಎದುರ್ಗೊಳ್ಳುವ ಕೆಲಸವೇ ಇಲ್ಲವೋ ಎಲ್ಲಿ ಮಧುರವಾದ ಮಾತುಕಥೆಗಳಿಲ್ಲವೋ ಎಲ್ಲಿ ಗುಣದೋಷಗಳ ಮಾತೇ ಇಲ್ಲವೋ ಅಂಥ ಮನೆಗೆ ಹೋಗಲಾಗದು.

ನಾಸ್ತಿ ಕಾಮಸಮೋ ವ್ಯಾಧಿಃ ನಾಸ್ತಿ ಮೋಹಸಮೋ ರಿಪುಃ ।
ನಾಸ್ತಿ ಕ್ರೋಧಸಮೋ ವಹ್ನಿಃ ನಾಸ್ತಿ ಜ್ಞಾನಾತ್ಪರಂ ಸುಖಮ್ ॥ ೨೪೬

- ಸುಭಾಷಿತರತ್ನಭಾಂಡಾಗಾರ

ಕಾಮಕ್ಕೆ ಸಮನಾದ ರೋಗ, ಮೋಹಕ್ಕೆ ಸಮನಾದ ಶತ್ರು, ಕ್ರೋಧಕ್ಕೆ ಸಮನಾದ ಬೆಂಕಿ ಮತ್ತು ಜ್ಞಾನಕ್ಕಿಂತ ಹೆಚ್ಚಾದ ಸುಖ ಮತ್ತೊಂದಿಲ್ಲ.

ನಾರಿಕೇಲಸಮಾನಾ ಹಿ ದೃಶ್ಯಂತೇ ಖಲು ಸಜ್ಜನಾಃ ।
ಅನ್ಯೇ ಬದರಿಕಾತುಲ್ಯಾ ಬಹಿರೇವ ಮನೋಹರಾಃ ॥ ೨೪೭

- ಸುಭಾಷಿತರತ್ನಸಮುಚ್ಚಯ

ಒಳ್ಳೆಯವರು ತೆಂಗಿನಕಾಯಿಗಳಂತೆ ಕಂಡುಬರುತ್ತಾರೆ. (ಒಳಗೆ ಮಧುರ, ಹೊರಗೆ ಒರಟು). ಕೆಟ್ಟವರು ಬೋರೇ ಹಣ್ಣಿನಂತೆ ಹೊರಗೆ ಮಾತ್ರ ಚೆನ್ನಾಗಿ ಕಾಣುತ್ತಾರೆ. ಒಳಗೆ ಬೀಜವೇ ತುಂಬಿರುತ್ತದೆ.

ನಾಲಂಬತೇ ದೈಷ್ಟಿಕತಾಂ ನ ನಿಷೀದತಿ ಪೌರುಷೇ ।
ಶಬ್ದಾರ್ಥೌ ಸತ್ಕವಿರಿವ ದ್ವಯಂ ವಿದ್ವಾನಪೇಕ್ಷತೇ ॥ ೨೪೮

- ಶಿಶುಪಾಲವಧ, ೨-೮೬

ಉತ್ತಮನಾದ ಕವಿಯು ಶಬ್ದ ಮತ್ತು ಅರ್ಥ ಎರಡನ್ನೂ ಗಮನಿಸುತ್ತಾನೆ. ಅದೇ ರೀತಿ ಕೇವಲ ಅದೃಷ್ಟವನ್ನೇ ನಂಬದೆ, ಕೇವಲ ಪುರುಷಯತ್ನವೇ ಸಾಕೆಂದು ಬಗೆಯದೆ ವಿದ್ವಾಂಸನು ಎರಡನ್ನೂ ಆದರಿಸುತ್ತಾನೆ.

ನಿರ್ಗುಣಃ ಶೋಭತೇ ನೈವ ವಿಪುಲಾಡಂಬರೋಽಪಿ ನಾ ।
ಆಪಾತರಮ್ಯಪುಷ್ಪಶ್ರೀಶೋಭಿತಃ ಶಾಲ್ಮಲಿರ್ಯಥಾ ॥ ೨೪೯

- ರಸಗಂಗಾಧರ

ಗುಣಹೀನವಾದವನು ಆಡಂಬರದ ವೇಷವನ್ನು ಧರಿಸಿದ್ದರೂ ಎಂದಿಗೂ ಶೋಭಿಸುವುದಿಲ್ಲ. ಅವನು ನೋಡುವುದಕ್ಕೆ ಮಾತ್ರ ಸುಂದರವಾದ ಹೂಗಳ ಕಾಂತಿಯಿಂದೊಪ್ಪುವ ಬೂರುಗದ ಮರವಿದ್ದಂತೆ.

ನಿಜದೋಷಾವೃತಮನಸಾಮತಿಸುಂದರಮೇವ ಭಾತಿ ವಿಪರೀತಂ ।
ಪಶ್ಯತಿ ಪಿತ್ತೋಪಹತಃ ಶಶಿಶುಭ್ರಂ ಶಂಖಮಪಿ ಪೀತಮ್ ॥ ೨೫೦

- ಕಾವ್ಯಪ್ರಕಾಶ

ದೋಷಾವೃತವಾದ ಮನಸ್ಸುಳ್ಳವರಿಗೆ ಅತಿಸುಂದರವಾದುದೂ ವಿಕೃತವಾಗಿ ಕಾಣುತ್ತದೆ. ಚಂದ್ರನಂತೆ ಶುಭ್ರವಾದ ಶಂಖವನ್ನು ಹಳದಿಯೆಂದು ಪಿತ್ತರೋಗಿ ತಿಳಿಯುತ್ತಾನೆ.

ನಿತ್ಯಮಾಸ್ಯಂ ಶುಚಿ ಸ್ತ್ರೀಣಾಂ ಶಕುನ್ಯೈಃ ಫಲಪಾತನೇ ।
ಪ್ರಸ್ರವೇ ಚ ಶುಚಿರ್ವತ್ಸಃ ಶ್ವಾ ಮೃಗಗ್ರಹಣೇ ಶುಚಿಃ ॥ ೨೫೧

- ಮನುಸ್ಮೃತಿ, ೫-೧೩೦

ಹೆಂಗಸರ ಮುಖ ಯಾವಾಗಲೂ ಶುದ್ಧ. ಹಕ್ಕಿಗಳು ಬೀಳಿಸಿದ ಹಣ್ಣು, ಕರು ಚೀಪಿದ ಮೊಲೆ, ಬೇಟೆಯಲ್ಲಿ ನಾಯಿ ಕಚ್ಚಿದ ಮೃಗ ಎಂಜಲಲ್ಲ.

**ನಿಮಿತ್ತಮುದ್ದಿಶ್ಯ ಹಿ ಯಃ ಪ್ರಕುಪ್ಯತಿ**
**ಧ್ರುವಂ ಸ ತಸ್ಯಾಪಗಮೇ ಪ್ರಶಾಮ್ಯತಿ ।**
**ಅಕಾರಣದ್ವೇಷಪರೋಹಿ ಯೋ ಭವೇತ್**
**ಕಥಂ ನರಸ್ತಂ ಪರಿತೋಷಯಿಷ್ಯತಿ ॥** ೨೫೨

- ಪಂಚತಂತ್ರ, ಮಿತ್ರಭೇದ - ೩೦೬

ಒಂದು ಕಾರಣಕ್ಕಾಗಿ ಯಾವನಾದರೂ ಕೋಪಮಾಡಿದರೆ ಆ ಕಾರಣವಿಲ್ಲದಿದ್ದಾಗ ಅವನು ನಿಜವಾಗಿಯೂ ಶಾಂತನಾಗುತ್ತಾನೆ. ಆದರೆ ನಿಷ್ಕಾರಣವಾಗಿ ಒಬ್ಬ ದ್ವೇಷ ಮಾಡುವುದಾದರೆ ಅವನನ್ನು ಒಬ್ಬ ಮನುಷ್ಯ ಹೇಗೆ ಸಂತೋಷಪಡಿಸಬಹುದು ?

**ನಿಮಿತ್ತೇಭ್ಯಃ ಪ್ರವರ್ತಂತೇ ಸರ್ವ ಏವ ಸ್ವಭೂತಯೇ ।**
**ಅಭಿಪ್ರಾಯಾನುರೋಧೋಽಪಿ ಸ್ವಾರ್ಥಸ್ಯೈವ ಪ್ರಸಿದ್ಧಯೇ ॥** ೨೫೩

- ವಾಕ್ಯಪದೀಯ - ೨೫೫

ಎಲ್ಲರೂ ಸಹ ಯಾವುದಾದರೊಂದು ನಿಮಿತ್ತದಿಂದ ತಮ್ಮ ಸಮೃದ್ಧಿಗಾಗಿ ಕೆಲಸ ಮಾಡುತ್ತಾರೆ. ಒಂದು ಅಭಿಪ್ರಾಯವನ್ನು ಅನುಸರಿಸಿದರೂ ಸಹ ಸ್ವಾರ್ಥ ಇದ್ದೇ ಇದೆ.

**ನಿರ್ವಿಷೇಣಾಪಿ ಸರ್ಪೇಣ ಕರ್ತವ್ಯಾ ಮಹತೀ ಫಟಾ ।**
**ವಿಷಂ ಭವತು ವಾ ಮಾ ವಾ ಫಟಾಟೋಪೋ ಭಯಂಕರಃ ॥** ೨೫೪

- ಸುಭಾಷಿತರತ್ನಸಮುಚ್ಚಯ

ವಿಷವಿಲ್ಲದಿದ್ದರೂ ಸರ್ಪವೂ ದೊಡ್ಡದಾಗಿ ಹೆಡೆಯನ್ನು ಬಿಚ್ಚಬೇಕು. ವಿಷವಿರಲಿ ಇಲ್ಲದಿರಲಿ, ಹೆಡೆಯ ಆರ್ಭಟವೇ ಭಯವನ್ನು ಹುಟ್ಟಿಸುತ್ತದೆ.

**ನಿಸ್ಸರ್ಪೇ ಬದ್ಧಸರ್ಪೇ ವಾ ವಸ್ತುಂ ಹಿ ಭವನೇ ಸುಖಂ ।**
**ದೃಷ್ಟನಷ್ಟಭುಜಂಗೇ ತು ನಿದ್ರಾ ದುಃಖೇನ ಗಮ್ಯತೇ ॥** ೨೫೫

-ಸುಭಾಷಿತ ಸುಧಾನಿಧಿ

ಹಾವಿಲ್ಲದ ಮನೆಯಲ್ಲಿ ಅಥವಾ ಹಾವನ್ನು ಕಟ್ಟಿಹಾಕಿರುವ ಮನೆಯಲ್ಲಿ ವಾಸಮಾಡುವುದು ಸುಖ. ಆದರೆ ಹಾವು ಕಾಣಿಸಿಕೊಂಡು ಮರೆಯಾದಾಗ ನಿದ್ದೆ ಬರುವುದು ಬಹಳ ಕಷ್ಟ.

**ನಿಃಸಾರಸ್ಯ ಪದಾರ್ಥಸ್ಯ ಪ್ರಾಯೇಣಾಡಂಬರೋ ಮಹಾನ್ ।**
**ನ ಹಿ ಸ್ವರ್ಣೇ ಧ್ವನಿಸ್ತಾದೃಕ್ ಕಾಂಸ್ಯೇ ಯಾದೃಕ್ ಪ್ರಜಾಯತೇ ॥ ೨೫೬**

- ಯಶಸ್ತಿಲಕ, ೧-೩೫

ನಿಸ್ಸಾರವಾದ ವಸ್ತುವಿಗೆ ಸಾಮಾನ್ಯವಾಗಿ ಹೆಚ್ಚಿನ ಆಡಂಬರವಿರುತ್ತದೆ. ಕಂಚಿನಲ್ಲಾಗುವಷ್ಟು ಧ್ವನಿ ಚಿನ್ನದಲ್ಲಿ ಆಗುವುದಿಲ್ಲ.

**ನೀತಿಜ್ಞಾ ನಿಯತಿಜ್ಞಾ ವೇದಜ್ಞಾ ಅಪಿ ಭವಂತಿ ಶಾಸ್ತ್ರಜ್ಞಾಃ ।**
**ಬ್ರಹ್ಮಜ್ಞಾ ಅಪಿ ಲಭ್ಯಾಃ ಸ್ವಾಜ್ಞಾನಜ್ಞಾನಿನೋ ವಿರಲಾಃ ॥ ೨೫೭**

- (ಅಪ್ಪಯ್ಯದೀಕ್ಷಿತರ) ವೈರಾಗ್ಯಶತಕ - ೨೬

ನೀತಿ ಬಲ್ಲವರಿದ್ದಾರೆ, ನಿಯಮವನ್ನರಿತವರಿದ್ದಾರೆ. ವೇದಜ್ಞರೂ ಶಾಸ್ತ್ರಜ್ಞರೂ ದೊರಕುತ್ತಾರೆ. ಬ್ರಹ್ಮಜ್ಞರೂ ಸಿಗುತ್ತಾರೆ. ಆದರೆ ತಮ್ಮ ಅಜ್ಞಾನವನ್ನು ತಿಳಿದವರು ದುರ್ಲಭ !

**ನೇಹ ಯತ್ಕರ್ಮ ಧರ್ಮಾಯ ನ ವಿರಾಗಾಯ ಕಲ್ಪತೇ ।**
**ನ ತೀರ್ಥಪದಸೇವಾಯೈ ಜೀವನ್ನಪಿ ಮೃತೋ ಹಿ ಸಃ ॥ ೨೫೮**

- ಭಾಗವತ, ೩-೨೩-೫೬

ಈ ಲೋಕದಲ್ಲಿ ಯಾರ ಕೆಲಸವು ಧರ್ಮಸಾಧನೆಗೆ ಅಲ್ಲವೋ ವೈರಾಗ್ಯಕ್ಕಾಗಿ ಅಲ್ಲವೋ, ಅಥವಾ ಪೂಜ್ಯರ ಸೇವೆಗಾಗಿ ಅಲ್ಲವೋ, ಆ ಮನುಷ್ಯನು ಬದುಕಿದ್ದರೂ ಸತ್ತಂತೆಯೇ.

**ನೈತತ್ ಸಮಾಚರೇಜ್ಜಾತು ಮನಸಾಪಿ ಹ್ಯನೀಶ್ವರಃ ।**
**ವಿನಶ್ಯತ್ಯಾಚರನ್ ಮೌಢ್ಯಾದ್ ಯಥಾ ರುದ್ರೋಽಬ್ಧಿಜಂ ವಿಷಮ್ ॥೨೫೯**

- ಭಾಗವತ, ೧೦-೩೩-೩೧

ಸಮರ್ಥನಲ್ಲದವನು ಒಂದು ಸಲವಾದರೂ ಮನಸ್ಸಿನಿಂದಲಾದರೂ ಲೋಕ ಬಾಹ್ಯವಾದದ್ದನ್ನು ಆಚರಿಸಬಾರದು. ಈಶ್ವರನು ಸಮುದ್ರದಿಂದ ಹುಟ್ಟಿದ ವಿಷವನ್ನು ಕುಡಿದನೆಂದು ಇನ್ನೊಬ್ಬನೂ ಮೌಢ್ಯದಿಂದ ಕುಡಿದರೆ ಸಾಯುತ್ತಾನೆ.

**ನೋದನ್ವಾನರ್ಥಿತಾಮೇತಿ ಸದಾಂಭೋಭಿಃ ಪ್ರಪೂರ್ಯತೇ ।**
**ಆತ್ಮಾ ತು ಪಾತ್ರಾನಾಂ ನೇಯಃ ಪಾತ್ರಮಾಯಾಂತಿ ಸಂಪದಃ ॥ ೨೬೦**

- ಸುಭಾಷಿತರತ್ನಭಾಂಡಾಗಾರ

ಸಮುದ್ರ ಎಂದೂ ಬೇಡದು. ಆದರೆ ಯಾವಾಗಲೂ ಜಲದಿಂದ ತುಂಬಿರುತ್ತದೆ. ನಾವು ಯೋಗ್ಯತೆಯನ್ನು ಸಂಪಾದಿಸಿಕೊಳ್ಳಬೇಕು. ಸಂಪತ್ತು ಯೋಗ್ಯತೆಯಿರುವೆಡೆಯಲ್ಲಿ ಬರುತ್ತದೆ.

**ಪಕ್ಷಿಣಾಂ ಬಲಮಾಕಾಶಂ ಮತ್ಸ್ಯಾನಾಮುದಕಂ ಬಲಂ ।**
**ಬಲಂ ಮೂರ್ಖಸ್ಯ ಮೌನಿತ್ವಂ ತಸ್ಕರಸ್ಯಾನೃತಂ ಬಲಮ್ ॥ ೧೬೧**

- ಶಂಖಲಿಖಿತಸ್ಮೃತಿ, ೧-೨೯

ಹಕ್ಕಿಗಳಿಗೆ ಆಕಾಶವು ರಕ್ಷಕ, ಮೀನುಗಳಿಗೆ ನೀರು ರಕ್ಷಣೆ. ಮೂರ್ಖನಿಗೆ ಮೌನವೇ ಬಲ. ಕಳ್ಳನಿಗೆ ಸುಳ್ಳೇ ಬಲ.

**ಪ್ರತ್ಯಕ್ಷಕವಿಕಾವ್ಯಂ ಚ ರೂಪಂ ಚ ಕುಲಯೋಷಿತಃ ।**
**ಗೃಹವೈದ್ಯಸ್ಯ ವಿದ್ಯಾ ಚ ಕಸ್ಮೈಚಿದ್ಯದಿ ರೋಚತೇ ॥ ೨೬೨**

- ಕಾವ್ಯಮೀಮಾಂಸಾ

ಪ್ರತ್ಯಕ್ಷವಾಗಿರುವ (ಜೀವಿಸಿರುವ) ಕವಿಯ ಕಾವ್ಯ, ಕುಲಸ್ತ್ರೀಯ ರೂಪ, ಗೃಹವೈದ್ಯನ ವಿದ್ಯೆ - ಇವು ರುಚಿಸುವುದಾದರೆ ವಿರಳವಾಗಿ ಯಾರೋ ಒಬ್ಬನಿಗೆ ಮಾತ್ರ.

**ವಿಕಾರಹೇತೌ ಸತಿ ವಿಕ್ರಿಯಂತೇ ।**
**ಯೇಷಾಂ ನ ಚೇತಾಂಸಿ ತ ಏವ ಧೀರಾಃ ॥ ೨೬೩**

- ಕುಮಾರಸಂಭವ

ಮನ ಸೆಳೆಯುವ ಪ್ರಬಲ ಕಾರಣಗಳಿದ್ದರೂ ಯಾರ ಮನಸ್ಸು ಸೆಳೆತಕ್ಕೆ ಒಳಗಾಗುವುದಿಲ್ಲವೋ ಅವರೇ ಜಿತೇಂದ್ರಿಯರಾದ ಯೋಗಿಗಳು.

**ಕಸ್ಯೈಕಾಂತಂ ಸುಖಮುಪನತಂ ದುಃಖಮೇಕಾಂತತೋ ವಾ ।**
**ನೀಚೈರ್ಗಚ್ಛತ್ಯುಪರಿ ಚ ದಶಾ ಚಕ್ರನೇಮಿಕ್ರಮೇಣ ॥ ೨೬೪**

- ಮೇಘದೂತ

ಯಾರುತಾನೇ ಬರೀ ಸುಖವನ್ನೋ ಅಥವಾ ಕೇವಲ ದುಃಖವನ್ನೋ ಅನುಭವಿಸಲು ಸಾಧ್ಯ? ಚಕ್ರಗಳ ಪಟ್ಟಿಗಳಂತೆ ಮಾನವನ ಅವಸ್ಥೆಯು ಒಂದು ಸಲ ಮೇಲಕ್ಕೂ ಇನ್ನೊಂದು ಸಲ ಕೆಳಕ್ಕೂ ಹೋಗುತ್ತದೆ.

**ಪ್ರಥಮೇ ನಾರ್ಜಿತಾ ವಿದ್ಯಾ ದ್ವಿತೀಯೇ ನಾರ್ಜಿತಂ ಧನಂ ।**
**ತೃತೀಯೇ ನಾರ್ಜಿತಂ ಪುಣ್ಯಂ ಚತುರ್ಥೇ ಕಿಂ ಕರಿಷ್ಯಸಿ ॥ ೨೬೫**

- ಸುಭಾಷಿತರತ್ನಸಮುಚ್ಚಯ

ವಯಸ್ಸಿನ ಮೊದಲನೆಯ ಭಾಗದಲ್ಲಿ (ಬಾಲ್ಯದಲ್ಲಿ) ವಿದ್ಯೆಯನ್ನು ಕಲಿಯಲಿಲ್ಲ. ಎರಡನೆಯ ಭಾಗವಾದ ಯೌವನದಲ್ಲಿ ಹಣವನ್ನು ಸಂಪಾದಿಸಲಿಲ್ಲ. ಮೂರನೆಯದಾದ ಮುಪ್ಪಿನಲ್ಲಿ ಪುಣ್ಯಕಾರ್ಯವನ್ನು ಮಾಡಲಿಲ್ಲ. ನಾಲ್ಕನೆಯ ಭಾಗದಲ್ಲಿ ಮರಣ ಬಂದಾಗ ಏನು ಮಾಡುವೆ ?

**ಪಂಥಾ ದೇಯೋ ಬ್ರಾಹ್ಮಣಾಯ ಗವೇ ರಾಜ್ಞೇ ಹ್ಯಚಕ್ಷುಷೇ ।**
**ವೃದ್ಧಾಯ ಭಾರತಪ್ತಾಯ ಗರ್ಭಿಣ್ಯೈ ದುರ್ಬಲಾಯ ಚ ॥ ೨೬೬**

- ಬೋಧಾಯನ ಧರ್ಮಸೂತ್ರ, ೨-೩-೫೦

ದಾರಿಯಲ್ಲಿ ಹೋಗುವಾಗ ಎದುರಿಗೆ ಬ್ರಹ್ಮಜ್ಞಾನಿ, ಗೋವು, ರಾಜ, ಕುರುಡ, ಮುದುಕ, ಹೊರೆಹೊತ್ತವನು, ಗರ್ಭಿಣಿ, ಬಲಹೀನರು ಬಂದರೆ, ಅವರಿಗೆ ದಾರಿಯನ್ನು ಬಿಟ್ಟುಕೊಡಬೇಕು.

**ಪದಸ್ಥಾ ವಿಷಮಸ್ಥಾನಾಂ ಮಿತ್ರಾಣಾಂ ನ ಭವಂತಿ ಯೇ ।**
**ಆಯಾಸಿತಾ ತೈರ್ಜನನೀ ಗರ್ಭಭಾರೇಣ ಕೇವಲಮ್ ॥ ೨೬೭**

- ರಾಮಾಯಣಮಂಜರೀ, ಕಿಷ್ಕಿಂಧಾ - ೫೮

ಯಾವ ಉತ್ತಮ ಸ್ಥಾನದಲ್ಲಿರತಕ್ಕವರು ಕಷ್ಟದಲ್ಲಿರುವ ತಮ್ಮ ಗೆಳೆಯರಿಗೆ ಉಪಕಾರ ಮಾಡುವುದಿಲ್ಲವೋ, ಅವರು ಗರ್ಭದಲ್ಲಿದ್ದು ಹೊರೆಯಾಗಿ ತಮ್ಮ ತಾಯಿಯನ್ನು ಆಯಾಸಗೊಳಿಸಿದವರು ಅಷ್ಟೆ.

**ಪದ್ಮಾಕರಂ ದಿನಕರೋ ವಿಕಚೀಕರೋತಿ**
**ಚಂದ್ರೋ ವಿಕಾಸಯತಿ ಕೈರವಚಕ್ರವಾಲಂ ।**
**ನಾಭ್ಯರ್ಥಿತೋ ಜಲಧರೋऽಪಿ ಜಲಂ ದದಾತಿ**
**ಸಂತಃ ಸ್ವಯಂ ಪರಹಿತೇಷು ಕೃತಾಭಿಯೋಗಾಃ ॥ ೨೬೮**

- ನೀತಿಶತಕ - ೭೧

ಕಮಲಗಳ ಗುಂಪನ್ನು ಸೂರ್ಯನು ಅರಳಿಸುತ್ತಾನೆ. ಚಂದ್ರನು ಕನ್ನೈದಿಲೆಗಳ ಗುಂಪನ್ನು ಅರಳಿಸುತ್ತಾನೆ. ಯಾರೂ ಬೇಡದಿದ್ದರೂ ಮೋಡವು ನೀರನ್ನು ಕೊಡುತ್ತದೆ. ಸಜ್ಜನರು ತಾವಾಗಿಯೇ ಪರರ ಹಿತದಲ್ಲಿ ಆಸಕ್ತಿಯುಳ್ಳವರಾಗಿರುತ್ತಾರೆ.

**ಪ್ರದಾನಂ ಪ್ರಚ್ಛನ್ನಂ ಗೃಹಮುಪಗತೇ ಸಂಭ್ರಮವಿಧಿಃ**
**ಪ್ರಿಯಂ ಕೃತ್ವಾ ಮೌನಂ ಸದಸಿ ಕಥನಂ ಚಾಪ್ಯುಪಕೃತೇಃ ।**
**ಅನುತ್ಸೇಕೋ ಲಕ್ಷ್ಮ್ಯಾಂ ನಿರಭಿಭವಸಾರಾಃ ಪರಕಥಾಃ**
**ಸತಾಂ ಕೇನೋದ್ದಿಷ್ಟಂ ವಿಷಮಮಸಿಧಾರಾವ್ರತಮಿದಮ್ ॥ ೨೬೯**

- ನೀತಿಶತಕ - ೬೨

ಗುಟ್ಟಾಗಿ ದಾನಮಾಡುವುದು, ಮನಗೆ ಬಂದ ಅತಿಥಿಗಳಿಗೆ ಸಂಭ್ರಮದ ಸತ್ಕಾರ. ಒಳ್ಳೆಯದನ್ನು ಮಾಡಿಯೂ ಸುಮ್ಮನಿರುವುದು, ಇತರರು ಮಾಡಿದ ಉಪಕಾರವನ್ನು ಸಭೆಯಲ್ಲಿ ಹೇಳಿಕೊಳ್ಳುವುದು, ಐಶ್ವರ್ಯದಿಂದ ಗರ್ವಪಡಬೇ ಇರುವುದು, ಮುಖ್ಯವಾಗಿ ನಿಂದೆಯಿಲ್ಲದಂತೆ ಇತರರ ವಿಷಯವಾಗಿ ಮಾತನಾಡುವುದು, ಇಂತಹ ಕಠಿಣವಾದ ಕತ್ತಿಯ ಅಲಗಿನ ಮೇಲೆ ನಡೆಯುವಂತಿರುವ ಈ ವ್ರತವನ್ನು ಸತ್ಪುರುಷರಿಗೆ ಯಾರು ವಿಧಿಸಿರಬಹುದು?

**ಪ್ರಭೂತವಯಸಃ ಪುಂಸೋ ಧಿಯಃ ಪಾಕಃ ಪ್ರವರ್ತತೇ ।**
**ಜೀರ್ಣಸ್ಯ ಚಂದನತರೋರಾಮೋದ ಉಪಜಾಯತೇ ॥ ೨೭೦**

- ದೃಷ್ಟಾಂತಕಲಿಕಾ - ೨೩

ಮನುಷ್ಯನಿಗೆ ಹೆಚ್ಚು ವಯಸ್ಸಾದಾಗ ಮನಸ್ಸಿನಲ್ಲಿ ಒಂದು ಪರಿಪಾಕ ಉಂಟಾಗುತ್ತದೆ. ಹಳೆಯ ಶ್ರೀಗಂಧದ ಮರದಲ್ಲಿ ಒಳ್ಳೆಯ ಸುವಾಸನೆ ಉಂಟಾಗುತ್ತದೆ.

**ಪರಸ್ವಭಾವಕರ್ಮಾಣಿ ನ ಪ್ರಶಂಸೇನ್ನ ಗರ್ಹಯೇತ್ ।**
**ವಿಶ್ವಮೇಕಾತ್ಮಕಂ ಪಶ್ಯನ್ ಪ್ರಕೃತ್ಯಾ ಪುರುಷೇಣ ಚ ॥ ೨೭೧**

- ಭಾಗವತ, ೧೧-೨೮-೧

ಪರರ ಸ್ವಭಾವವನ್ನೂ ಕೆಲಸಗಳನ್ನೂ ಹೊಗಳಲೂಬಾರದು, ನಿಂದಿಸಲೂ ಬಾರದು. ವಿಶ್ವವೆಲ್ಲವೂ ಪ್ರಕೃತಿಪುರುಷರಿಂದ ಕೂಡಿದ್ದು, ಒಂದೇ ಬಗೆಯದು ಎಂದು ತಿಳಿಯಬೇಕು.

**ಪರತೋಷಯಿತಾ ನ ಕಶ್ಚನ**
**ಸ್ವಗತೋ ಯಸ್ಯ ಗುಣೋಽಸ್ತಿ ದೇಹಿನಃ ।**
**ಪರದೋಷಕಥಾಭಿರಲ್ಪಕಃ**
**ಸ್ವಜನಂ ತೋಷಯಿತುಂ ಕಿಲೇಚ್ಛತಿ ॥ ೨೭೨**

- ಶಿಶುಪಾಲವಧ, ೧೬-೨೮

ಯಾವ ಮನುಷ್ಯನಲ್ಲಿ ಇನ್ನೊಬ್ಬರನ್ನು ಸಂತೋಷಗೊಳಿಸಲು ತನ್ನ ಗುಣಗಳಿಲ್ಲವೋ

ಆ ಅಲ್ಪನು ಬೇರೆಯವರನ್ನು ನಿಂದಿಸುವ ವಾಕ್ಯಗಳಿಂದ ಇತರರನ್ನು ಸಂತೋಷಗೊಳಿಸಲು ಇಷ್ಟಪಡುತ್ತಾನೆ.

ಪರೋಽಪ್ಯಪತ್ಯಂ ಹಿತಕೃದ್ ಯಥೌಷಧಂ
ಸ್ವದೇಹಜೋಽಪ್ಯಾಮಯವತ್ ಸುತೋಽಹಿತಃ ।
ಛಿಂದ್ಯಾತ್ ತದಂಗಂ ಯದುತಾತ್ಮನೋಽಹಿತಂ
ಶೇಷಂ ಸುಖಂ ಜೀವತಿ ಯದ್ವಿಸರ್ಜನಾತ್ ॥ ೨೭೩

- ಭಾಗವತ, ೭-೫-೫೭

ಪರಕೀಯನಾದರೂ ಔಷಧದಂತೆ ಒಳ್ಳೆಯದನ್ನು ಮಾಡಿದರೆ ಅವನು ಮಗನೇ ಸರಿ ; ತನ್ನ ದೇಹದಲ್ಲಿ ಹುಟ್ಟಿದ ಮಗನಾದರೂ ಕೆಟ್ಟದ್ದನ್ನು ಮಾಡಿದರೆ ಅವನು ರೋಗದಂತೆ ಶತ್ರುವೇ. ಶರೀರದಲ್ಲಿ ಯಾವ ಅವಯವವು ಕೆಡುಕುಮಾಡುತ್ತದೆಯೋ ಅದನ್ನು ಕತ್ತರಿಸಲೇಬೇಕು. ಅದನ್ನು ತ್ಯಜಿಸುವುದರಿಂದ ಉಳಿದ ಅವಯವಗಳು ಸುಖದಿಂದ ಬಾಳುತ್ತವೆ.

ಪರೋಪಕಾರಶೂನ್ಯಸ್ಯ ಧಿಙ್ಮನುಷ್ಯಸ್ಯ ಜೀವಿತಂ ।
ಜೀವಂತು ಪಶವೋ ಯೇಷಾಂ ಚರ್ಮಾಪ್ಯುಪಕರಿಷ್ಯತಿ ॥ ೨೭೪

ಸುಭಾಷಿತರತ್ನಸಮುಚ್ಚಯ

ಪರೋಪಕಾರಮಾಡದ ಮನುಷ್ಯನ ಬಾಳಿಗೆ ಧಿಕ್ಕಾರ ! ಪಶುಗಳು ಜೀವಿಸಲಿ ! ಅವು ಸತ್ತಮೇಲೆ ಸಹ ಚರ್ಮವೂ ಉಪಕಾರಮಾಡುತ್ತದೆ.

ಪ್ರಶಮಶ್ಚ ಕ್ಷಮಾ ಚೈವ ಆರ್ಜವಂ ಪ್ರಿಯವಾದಿತಾ ।
ಅಸಾಮರ್ಥ್ಯಫಲಾ ಹ್ಯೇತೇ ನಿರ್ಗುಣೇಷು ಸತಾಂ ಗುಣಾಃ ॥ ೨೭೫

- ರಾಮಾಯಣ, ಯುದ್ಧ. ೨೧-೧೫

ಶಾಂತಿ, ತಾಳ್ಮೆ, ಋಜುಮಾರ್ಗ, ಪ್ರಿಯವಚನ - ಈ ಸದ್ಗುಣಗಳು ಅಸಾಮರ್ಥ್ಯದ ಲಕ್ಷಣಗಳೆಂದು ಗುಣಹೀನರು ತಿಳಿಯುತ್ತಾರೆ !

ಸುಭಾಷಿತಂ ಹಾರಿ ವಿಶತ್ಯಧೋ ಗಲಾತ್
ನ ದುರ್ಜನಸ್ಯಾರ್ಕರಿಪೋರಿವಾಮೃತಂ ।
ತದೇವ ಧತ್ತೇ ಹೃದಯೇನ ಸಜ್ಜನೋ
ಹರಿರ್ಮಹಾರತ್ನಮಿವಾತಿನಿರ್ಮಲಮ್ ॥ ೨೭೬

- ಕಾದಂಬರೀ

ರಾಹುವಿನ ಗಂಟಲಲ್ಲಿ ಅಮೃತವು ಹೇಗೆ ಇಳಿಯಲಿಲ್ಲವೋ ಅದೇ ರೀತಿ ಉತ್ತಮ

ಸುಭಾಷಿತವು ಕೆಟ್ಟವರ ಮನಸ್ಸಿಗೆ ಹಿಡಿಸುವುದಿಲ್ಲ. ವಿಷ್ಣುವು ಅತಿ ನಿರ್ಮಲವಾದ ಕೌಸ್ತುಭವನ್ನು ಧರಿಸಿದಂತೆ ಸಜ್ಜನರು ಹೃದಯದಲ್ಲಿ ಸುಭಾಷಿತವನ್ನು ಸ್ಮರಿಸುತ್ತಾರೆ.

**ಪಾತಂಜಲೇ ವಿಷ್ಣುಪದಾಪಗಾಯಾಃ**
**ಪಾತಂಜಲೇ ಚಾಪಿ ನಯೇಽವಗಾಹಂ ।**
**ಆಚಕ್ಷತೇ ಶುದ್ಧಿದಮಾಪ್ರಸೂತೇ-**
**ರಾಽಚಕ್ಷತೇ ರಾಗಮಧೋಕ್ಷಜೇ ಚ ॥** ೨೭೭

- ವಿಶ್ವಗುಣಾದರ್ಶ - ೫೭೨

ಗಂಗಾಜಲದ ಸ್ನಾನವೂ, ಪತಂಜಲಿಯು ರಚಿಸಿರುವ ಮಹಾಭಾಷ್ಯದ ಅಭ್ಯಾಸವೂ, ಭಗವಂತನಲ್ಲಿ ದೃಢವಾದ ಭಕ್ತಿಯೂ, ಹುಟ್ಟಿದ ವೇಳೆಯಿಂದ ಸಾಯುವವರೆವಿಗೂ ಮನುಷ್ಯನ ಮಾತನ್ನು, ದೇಹವನ್ನು ಮತ್ತು ಮನಸ್ಸನ್ನು ಶುದ್ಧಿಗೊಳಿಸುತ್ತದೆ.

**ಪ್ರಾಣಸ್ಯಾನ್ನಮಿದಂ ಸರ್ವಂ ಪ್ರಜಾಪತಿರಕಲ್ಪಯತ್ ।**
**ಸ್ಥಾವರಂ ಜಂಗಮಂ ಚೈವ ಸರ್ವಂ ಪ್ರಾಣಸ್ಯ ಭೋಜನಮ್ ॥** ೨೭೮

- ಮನುಸ್ಮೃತಿ, ೫-೨೫

ಸಸ್ಯ, ಪೈರು, ಪ್ರಾಣಿಗಳು ಎಲ್ಲವೂ ಪ್ರಾಣಿಗಳಿಗೆ ಆಹಾರವಾಗಿರಲೆಂದು ಬ್ರಹ್ಮನು ಸೃಷ್ಟಿಸಿದನು. ಎಲ್ಲವೂ ಪ್ರಾಣಿಗಳಿಗೆ ಆಹಾರ.

**ಪ್ರಾಮಾಣ್ಯಬುದ್ಧಿಃ ಸ್ತೋತ್ರೇಷು ದೇವತಾಬುದ್ಧಿರಾತ್ಮನಿ ।**
**ಕೀಟಬುದ್ಧಿರ್ಮನುಷ್ಯೇಷು ನೂತನಾಯಾಃ ಶ್ರಿಯಃ ಫಲಮ್ ॥** ೨೭೯

- ಕಲಿವಿಡಂಬನ - ೬೦

ತನ್ನ ಹೊಗಳಿಕೆಯಲ್ಲಿ ನಂಬಿಕೆ, ತನ್ನನ್ನು ದೇವತೆಯೆಂದು ತಿಳಿದುಕೊಳ್ಳುವುದು, ಮನುಷ್ಯರೆಲ್ಲರೂ ಹುಳುಗಳೆಂದು ಭಾವಿಸುವುದು - ಇದು ಹೊಸದಾಗಿ ಬಂದ ಐಶ್ವರ್ಯದ ಫಲ !

**ಪ್ರಾಯೋ ದುರಂತಪರ್ಯಂತಾಃ ಸಂಪದೋಽಪಿ ದುರಾತ್ಮನಾಂ ।**
**ಭವಂತಿ ಹಿ ಶುಭೋದರ್ಕಾ ವಿಪದೋಽಪಿ ಮಹಾತ್ಮನಾಮ್ ॥**೨೮೦

- ಪ್ರಸನ್ನರಾಘವ, ೫-೪೯

ಕೆಟ್ಟವರು ಶ್ರೀಮಂತರಾದರೂ ಕೊನೆಗೆ ಅವರು ದುರ್ಗತಿಯನ್ನು ಪಡೆಯಲೇಬೇಕು. ಒಳ್ಳೆಯವರಿಗೆ ಕಷ್ಟ ಒದಗಿದರೂ ಮುಂದೆ ಅವರಿಗೆ ಒಳ್ಳೆಯದಾಗುತ್ತದೆ.

**ಪ್ರಾಯಃ ಸರಲಚಿತ್ತಾನಾಂ ಜಾಯತೇ ವಿಪದಾಗಮಃ ।**
**ಋಜುರ್ಯಾತಿ ಯಥಾ ಛೇದಂ ನ ವಕ್ರಃ ಪಾದಪಸ್ತಥಾ ॥ ೨೮೧**

- ಯಶಸ್ತಿಲಕಚಂಪೂ. ೪-೧೪೪

ಸಾಮಾನ್ಯವಾಗಿ ಋಜು ಸ್ವಭಾವದವರಿಗೆ ವಿಪತ್ತು ಬರುತ್ತದೆ. ನೆಟ್ಟಗಿರುವ ಮರಕ್ಕೆ ಛೇದನ ಒದಗುವಂತೆ, ಸೊಟ್ಟನೆಯ ಮರಕ್ಕೆ ಒದಗುವುದಿಲ್ಲ.

**ಪ್ರಾಯೇಣ ಮನುಜಾ ಲೋಕೇ ಲೋಕತತ್ತ್ವ ವಿಚಕ್ಷಣಾಃ ।**
**ಸಮುದ್ಧರಂತಿ ಹ್ಯಾತ್ಮಾನಮಾತ್ಮನೈವಾಶುಭಾಶಯಾತ್ ॥ ೨೮೨**

- ಭಾಗವತ, ೧೧-೭-೧೯

ಬಹುಶಃ ಲೋಕದಲ್ಲಿ ಲೋಕತತ್ತ್ವವನ್ನು ಚೆನ್ನಾಗಿ ಅರಿತಿರುವ ಮನುಷ್ಯರು ಕೇಡುಗಳು ಬರದಂತೆ ತಮ್ಮನ್ನು ತಮ್ಮಿಂದಲೇ ಉದ್ಧಾರಮಾಡಿಕೊಳ್ಳುತ್ತಾರೆ.

**ಕಟು ಕ್ವಣಂತೋ ಮಲದಾಯಕಾಃ ಖಲಾಃ**
**ತುದಂತ್ಯಲಂ ಬಂಧನಶೃಂಖಲಾ ಇವ ।**
**ಮನಸ್ತು ಸಾಧುಧ್ವನಿಭಿಃ ಪದೇ ಪದೇ**
**ಹರಂತಿ ಸಂತೋ ಮಣಿನೂಪುರಾ ಇವ ॥ ೨೮೩**

- ಕಾದಂಬರೀ

ಕೆಟ್ಟವರು ಒರಟಾಗಿ ಮಾತನಾಡುತ್ತಾರೆ. ಕೊಳೆಯನ್ನುಂಟುಮಾಡಿ ಕಾಲಿಗೆ ಹಾಕಿದ ಸಂಕೋಲೆಗಳಂತೆ ಬಹಳ ತೊಂದರೆ ಕೊಡುತ್ತಾರೆ. ಸಂಕೋಲೆಗಳು ಒರಟಾಗಿ ಧ್ವನಿಮಾಡುತ್ತಾ ಕಾಲುಗಳನ್ನು ಕಪ್ಪಗೆ ಮಾಡುತ್ತವೆ. ಸಜ್ಜನರು ಗೆಜ್ಜೆಯುಳ್ಳ ಅಂದಿಗೆಯಂತೆ ಇಂಪಾದ ಮಾತಿನಿಂದ ಮನಸ್ಸನ್ನು ಸಂತೋಷಗೊಳಿಸುತ್ತಾರೆ.

**ಪ್ರಾರಭ್ಯತೇ ನ ಖಲು ವಿಘ್ನಭಯೇನ ನೀಚೈಃ**
**ಪ್ರಾರಭ್ಯ ವಿಘ್ನವಿಹತಾ ವಿರಮಂತಿ ಮಧ್ಯಾಃ ।**
**ವಿಘ್ನೈಃ ಪುನಃ ಪುನರಪಿ ಪ್ರತಿಹನ್ಯಮಾನಾಃ**
**ಪ್ರಾರಬ್ಧಮುತ್ತಮಗುಣಾ ನ ಪರಿತ್ಯಜಂತಿ ॥ ೨೮೪**

- ನೀತಿಶತಕ - ೭೨

ಕೆಳಮಟ್ಟದವರು ವಿಘ್ನಗಳ ಹೆದರಿಕೆಯಿಂದ ಕೆಲಸವನ್ನೇ ಕೈಗೊಳ್ಳುವುದಿಲ್ಲ. ಮಧ್ಯವರ್ಗದವರು ಅಡ್ಡಿಗಳು ಬಂದಾಗ ಹೆದರಿ ಕೈಗೊಂಡ ಕಾರ್ಯರನ್ನು ಅಲ್ಲಿಗೇ ಬಿಟ್ಟು ಬಿಡುತ್ತಾರೆ. ಉತ್ತಮರು ಮತ್ತೆ ಮತ್ತೆ ಅಡ್ಡಿಗಳು ಒದಗಿದರೂ ಕೈಗೊಂಡ ಕಾರ್ಯವನ್ನು ಮುಗಿಸದೇ ಬಿಡುವುದಿಲ್ಲ.

**ಪಾಷಾಣಾಃ ಸರ್ವ ಏವೈತೇ ಪದ್ಮರಾಗೇಷು ಕೋ ಗುಣಃ ।**
**ಪ್ರಕಾಶಃ ಕಶ್ಚಿದತ್ರಾಸ್ತೇಽಪರತ್ರ ಸ ನ ವಿದ್ಯತೇ ॥ ೨೮೫**

- ಸಭಾರಂಜನಶತಕ - ೫

ಪದ್ಮರಾಗಾದಿಗಳೆಲ್ಲವೂ ಕಲ್ಲುಗಳೇ. ಪದ್ಮರಾಗದಲ್ಲಿ ವಿಶೇಷವೇನು ? ಹೌದು, ಒಂದು ವಿಶೇಷ ಕಾಂತಿ ಪದ್ಮರಾಗದಲ್ಲಿದೆ, ಉಳಿದ ಕಲ್ಲುಗಳಲ್ಲಿ ಇಲ್ಲ!

**ಪಿತ್ರೋರ್ನಿತ್ಯಂ ಪ್ರಿಯಂ ಕುರ್ಯಾದಾಚಾರ್ಯಸ್ಯ ಚ ಸರ್ವದಾ ।**
**ತೇಷು ಹಿ ತ್ರಿಷು ತುಷ್ಟೇಷು ತಪಃ ಸರ್ವಂ ಸಮಾಪ್ಯತೇ ॥೨೮೬**

- ಸುಭಾಷಿತರತ್ನಭಾಂಡಾಗಾರ

ತಾಯಿತಂದೆಗಳಿಗೆ ಮತ್ತು ಗುರುವಿಗೆ ಯಾವಾಗಲೂ ಪ್ರಿಯವನ್ನು ಮಾಡಬೇಕು. ಈ ಮೂವರು ಸಂತುಷ್ಟರಾದರೆಂದರೆ ಎಲ್ಲ ತಪಸ್ಸೂ ಪೂರ್ಣವಾಗುತ್ತದೆ.

**ಪ್ರಿಯಪ್ರಾಯಾ ವೃತ್ತಿಃ ವಿನಯಮಧುರೋ ವಾಚಿ ನಿಯಮಃ**
**ಪ್ರಕೃತ್ಯಾ ಕಲ್ಯಾಣೀ ಮತಿರನವಗೀತಃ ಪರಿಚಯಃ ।**
**ಪುರೋ ವಾ ಪಶ್ಚಾದ್ವಾ ತದಿದಮವಿಪರ್ಯಾಸಿತರಸಂ**
**ರಹಸ್ಯಂ ಸಾಧೂನಾಮನುಪಧಿ ವಿಶುದ್ಧಂ ವಿಜಯತೇ ॥ ೨೮೭**

- ಉತ್ತರರಾಮಚರಿತ, ೨-೨

ಸಜ್ಜನರು ಪ್ರೀತಿಯಿಂದ ನಡೆದುಕೊಳ್ಳುತ್ತಾರೆ. ವಿನಯದಿಂದ ಹಿತವಾದ ಮಾತನ್ನಾಡುತ್ತಾರೆ. ಸ್ವಾಭಾವಿಕವಾಗಿ ಒಳ್ಳೆಯ ಭಾವವುಳ್ಳವರು. ಅವರೊಡನೆ ಬಳಕೆಯು ಯಾವ ರೀತಿಯಲ್ಲೂ ಕೆಡುವುದಿಲ್ಲ. ಹಿಂದೆ, ಅಥವಾ ಈಗ ಅವರ ಸ್ವಭಾವದಲ್ಲಿ ಬದಲಾವಣೆ ಇಲ್ಲ. ದೋಷರಹಿತವಾದ ನಿರ್ಮಲ ಜೀವನವೇ ಸತ್ಪುರುಷರ ಜೀವನದ ರಹಸ್ಯ.

**ಪ್ರಿಯವಾಕ್ಯಪ್ರದಾನೇನ ಸರ್ವೇ ತುಷ್ಯಂತಿ ಜಂತವಃ ।**
**ತಸ್ಮಾತ್ತದೇವ ವಕ್ತವ್ಯಂ ವಚನೇ ಕಾ ದರಿದ್ರತಾ ॥ ೨೮೮**

ಸುಭಾಷಿತರತ್ನಭಾಂಡಾಗಾರ

ಪ್ರಿಯವಾದ ಮಾತುಗಳನ್ನಾಡುವುದರಿಂದ ಎಲ್ಲ ಪ್ರಾಣಿಗಳೂ ಸಂತೋಷ ಪಡುತ್ತಾರೆ. ಆದ್ದರಿಂದ ಅದನ್ನೇ ಹೇಳಬೇಕು. ಮಾತಿಗೇನು ಬಡತನ?

**ಪ್ರೀಣಾತಿ ಯಃ ಸುಚರಿತ್ರೈಃ ಪಿತರೌ ಸ ಪುತ್ರಃ**
**ಯದ್ಭರ್ತುರೇವ ಹಿತಮಿಚ್ಛತಿ ತತ್ಕಲತ್ರಮ್ ।**

ತನ್ಮಿತ್ರಮಾಪದಿಸುಖೇ ಚ ಸಮಕ್ರಿಯಂ ಯತ್
ಏತತ್ತ್ರಯಂ ಜಗತಿ ಪುಣ್ಯಕೃತೋ ಲಭಂತೇ ॥ ೨೮೯

- ನೀತಿಶತಕ - ೬೬

ಒಳ್ಳೆಯ ನಡತೆಯಿಂದ ತಾಯಿ ತಂದೆಗಳನ್ನು ಸಂತೋಷಪಡಿಸುವ ಮಗ ; ಹಿತವನ್ನೇ ಬಯಸುವ ಹೆಂಡತಿ ; ಕಷ್ಟದಲ್ಲಿಯೂ ಸುಖದಲ್ಲಿಯೂ ಒಂದೇ ರೀತಿಯಾಗಿರುವ ಸ್ನೇಹಿತ ಈ ಮೂವರನ್ನೂ ಪ್ರಪಂಚದಲ್ಲಿ ಪುಣ್ಯವಂತರು ಪಡೆಯುತ್ತಾರೆ.

ಪುತ್ರೀತಿ ಜಾತಾ ಮಹತೀಹ ಚಿಂತಾ
ಕಸ್ಮೈ ಪ್ರದೇಯೇತಿ ಮಹಾನ್ವಿತರ್ಕಃ ।
ದತ್ವಾ ಸುಖಂ ಪ್ರಾಪ್ಸ್ಯತಿ ವಾ ನ ವೇತಿ
ಕನ್ಯಾಪಿತೃತ್ವಂ ಖಲು ನಾಮ ಕಷ್ಟಮ್ ॥ ೨೯೦

- ಪಂಚತಂತ್ರ, ಮಿತ್ರಭೇದ - ೨೨೨

ಮಗಳು ಹುಟ್ಟಿದಳೆಂಬುದೇ ಹೆಚ್ಚು ಚಿಂತೆಗಳಿಗೆ ಕಾರಣ. ಇವಳನ್ನು ಯಾರಿಗೆ ಮದುವೆ ಮಾಡಿಕೊಡುವುದು, ಹಾಗೆ ಕೊಟ್ಟಾಗ ಸುಖಪಡೆಯುವಳೋ ಇಲ್ಲವೋ ಎಂದು ಬಹಳವಾಗಿ ಯೋಚಿಸಬೇಕಾಗುವುದು ನಿಜವಾಗಿಯೂ ಹೆಣ್ಣಿನ ತಂದೆಯಾಗಿರುವುದು ಬಹಳ ಕಷ್ಟ!

ಪುರಾಣಮಿತ್ಯೇವ ನ ಸಾಧು ಸರ್ವಂ
ನ ಚಾಪಿ ಕಾವ್ಯಂ ನವಮಿತ್ಯವದ್ಯಂ ।
ಸಂತಃ ಪರೀಕ್ಷ್ಯಾನ್ಯತರದ್ಭಜಂತೇ
ಮೂಢಃ ಪರಪ್ರತ್ಯಯನೇಯಬುದ್ಧಿಃ ॥ ೨೯೧

- ಮಾಲವಿಕಾಗ್ನಿಮಿತ್ರ, ೧-೨

ಹಳೆಯದೆಂದ ಮಾತ್ರಕ್ಕೆ ಎಲ್ಲವೂ ಶ್ರೇಷ್ಠವಲ್ಲ. ಹೊಸದೆಂದ ಮಾತ್ರಕ್ಕೆ ಯಾವುದೂ ಕೆಟ್ಟದಲ್ಲ. ವಿಮರ್ಶಕರು ಪರೀಕ್ಷಿಸಿ ಒಳ್ಳೆಯದನ್ನು ಸ್ವೀಕರಿಸುತ್ತಾರೆ. ಮೂರ್ಖರು ಇತರರು ಹೇಳಿದ್ದನ್ನೇ ನಂಬಿ ನಡೆಯುತ್ತಾರೆ.

ಅಕಾರಣಾವಿಷ್ಕೃತವೈರದಾರುಣಾತ್
ಅಸಜ್ಜನಾತ್ಕಸ್ಯ ಭಯಂ ನ ಜಾಯತೇ ।
ವಿಷಂ ಮಹಾಹೇರಿವ ಯಸ್ಯ ದುರ್ವಚಃ
ಸುದುಃಸಹಂ ಸನ್ನಿಹಿತಂ ಸದಾ ಮುಖೇ ॥ ೨೯೨

- ಕಾದಂಬರೀ

ಕಾರಣವೇ ಇಲ್ಲದೆ ಹಗೆತನವನ್ನು ತೋರುವ ದುಷ್ಟರನ್ನು ಕಂಡರೆ ಯಾರಿಗೆ ತಾನೇ ಹೆದರಿಕೆಯಾಗುವುದಿಲ್ಲ! ಯಾವಾಗಲೂ ಬಾಯಲ್ಲಿ ಸಹಿಸಲಾಗದ ದುಷ್ಟಮಾತುಗಳನ್ನು ಸರ್ಪದ ಬಾಯಲ್ಲಿ ವಿಷವಿರುವಂತೆ ಇಟ್ಟುಕೊಂಡಿರುತ್ತಾರೆ.

**ಪುಸ್ತಕಸ್ಥಾ ಹಿ ಯಾ ವಿದ್ಯಾ ಧನಂ ಯದ್ ವಾನ್ಯಹಸ್ತಗಂ ।**
**ನೋಪಕುರ್ಯಾಜ್ಜನಸ್ಯೇಹ ಕಾರ್ಯಕಾಲೇ ಸಮುಪಸ್ಥಿತೇ ॥ ೨೯೩**

- ಸುಭಾಷಿತರತ್ನಸಮುಚ್ಚಯ

ಪುಸ್ತಕದಲ್ಲಿರುವ ವಿದ್ಯೆಯೂ ಪರರ ಕೈಯಲ್ಲಿರುವ ಹಣವೂ ನಮ್ಮ ಸಮಯಕ್ಕೆ ಒದಗಿ ಉಪಕರಿಸುವುದಿಲ್ಲ.

**ಪೌರೋಹಿತ್ಯಂ ರಜನಿಚರಿತಂ ಗ್ರಾಮಣೀತ್ವಂ ನಿಯೋಗೋ**
**ಮಾಠಾಪತ್ಯಂ ಹ್ಯನೃತವಚನಂ ಸಾಕ್ಷಿವಾದಃ ಪರಾನ್ನಂ ।**
**ಬ್ರಹ್ಮದ್ವೇಷಃ ಖಲಜನರತಿಃ ಪ್ರಾಣಿನಾಂ ನಿರ್ದಯತ್ವಂ**
**ಮಾ ಭೂದೇವಂ ಮಮ ಪಶುಪತೇ ಜನ್ಮಜನ್ಮಾಂತರೇಽಪಿ ॥ ೨೯೪**

- ಶಿವಾಪರಾದಕ್ಷಮಾಪಣಸ್ತೋತ್ರ - ೧೪

ಪೌರೋಹಿತ್ಯ, ರಾತ್ರಿಸಂಚಾರ, ಗ್ರಾಮಾಧಿಕಾರ, ಪರಸೇವೆ, ಮಠಾಧಿಪತಿಯ ಕೆಲಸ, ಸುಳ್ಳುಹೇಳುವುದು, ಸಾಕ್ಷಿಯಾಗಿ ನುಡಿಯುವುದು, ಪರಾನ್ನ, ಬ್ರಾಹ್ಮಣ ದ್ವೇಷ, ದುಷ್ಟರ ಸ್ನೇಹ, ಪ್ರಾಣಿಗಳಲ್ಲಿ ನಿರ್ದಯೆ ಇವುಗಳು, ಹೇ ಪರಮೇಶ್ವರ, ನನಗೆ ಜನ್ಮಜನ್ಮಾಂತರದಲ್ಲಿಯೂ ಪ್ರಾಪ್ತವಾಗದಿರಲಿ.

**ಫಲಂ ಕತಕವೃಕ್ಷಸ್ಯ ಯದ್ಯಪ್ಯಂಬುಪ್ರಸಾದಕಂ ।**
**ನ ನಾಮ ಗ್ರಹಣಾದೇವ ತಸ್ಯ ವಾರಿ ಪ್ರಸೀದತಿ ॥ ೨೯೫**

- ಮನುಸ್ಮೃತಿ, ೬-೬೭

ಚಿಲ್ಲದ ಮರದ ಬೀಜವು ಸ್ವಾಭಾವಿಕವಾಗಿ ನೀರನ್ನು ತಿಳಿಮಾಡುತ್ತದೆ. ಆದರೆ ಅದರ ಹೆಸರನ್ನು ಹೇಳಿದ ಮಾತ್ರಕ್ಕೆ ನೀರು ತಿಳಿಯಾಗುವುದಿಲ್ಲ. (ಅದೇ ರೀತಿ ಬರೀ ಶಾಸ್ತ್ರ ಓದಿದರೆ ಫಲವಿಲ್ಲ. ಆಚರಣೆ ಇರಬೇಕು.)

**ಫೇತ್ಕುರ್ವಂತ್ಯಪಿ ಫೇರವೋಽತಿಪರುಷಂ ಚೇತ್ ಪಾರ್ಶ್ವಯೋರಾಶ್ರಿತಾಃ**
**ಕಾಕಾಶ್ಚೇದುಪರಿ ಸ್ಥಿತಾಃ ಪ್ರತಿದಿಶಂ ಕುರ್ವಂತಿ ಕೋಲಾಹಲಂ ।**
**ಮಂದಂ ಮಂದಮುಪಾಂತಮೀಲಿತದೃಶೋ ಮಾರ್ಗೇ ಪದಂ ನ್ಯಸ್ಯತಃ**
**ಕಿಂ ಭೇದಂ ಸಮುಪೈತಿ ಕುಂಜರಪತೇರ್ಮಾನೋನ್ನತಾ ಭ್ರೂಲತಾ ॥೨೯೬**

- ಅನ್ಯಾಪದೇಶಶತಕ - ೨೮

ಆನೆಯ ಎರಡು ಪಕ್ಕಗಳಲ್ಲಿಯೂ ನರಿಗಳು ಕಠೋರವಾಗಿ ಊಳುತ್ತಿರಲಿ, ಕಾಗೆಗಳು ಮೇಲ್ಗಡೆ ದಿಕ್ಕುದಿಕ್ಕಿಗೂ ಹರಡುವಂತೆ ಕೋಲಾಹಲವನ್ನು ಮಾಡುತ್ತಿರಲಿ, ಆನೆ ಅರೆಗಣ್ಣಿನಿಂದ ದಾರಿಯಲ್ಲಿ ಮೆಲ್ಲಮೆಲ್ಲನೆ ಹೆಜ್ಜೆಯನ್ನಿಡುತ್ತ ಹೋಗುತ್ತಿರುವುದು. ಅಭಿಮಾನದಿಂದ ಉನ್ನತವಾದ ಹೆಜ್ಜೆಯನ್ನಿಡುತ್ತ ಹೋಗುತ್ತಿರುವುದು. ಅಭಿಮಾನದಿಂದ ಉನ್ನತವಾಗಿರುವ ಆ ಗಜರಾಜನ ಹುಬ್ಬು ಕೂಡ ಕೊಂಕುವುದಿಲ್ಲ.

**ಬಂಧುಃ ಕೋ ನಾಮ ದುಷ್ಟಾನಾಂ ಕುಪ್ಯೇತ್ಕೋ ನಾತಿಯಾಚಿತಃ ।**
**ಕೋ ನ ತೃಪ್ಯತಿ ವಿತ್ತೇನ ಕುಕೃತೇ ಕೋ ನ ಪಂಡಿತಃ ॥೨೯೭**

- ಸುಭಾಷಿತರತ್ನಭಾಂಡಾಗಾರ

ದುಷ್ಟರಿಗೆ ನೆಂಟರಾರು? ಅತಿಯಾಗಿ ಬೇಡಿದರೆ ಯಾರು ತಾನೇ ಕೋಪಗೊಳ್ಳು ವುದಿಲ್ಲ? ಹಣದಿಂದ ಯಾರಿಗೆ ತೃಪ್ತಿ ಇಲ್ಲ? ಕೆಟ್ಟ ಕೆಲಸದಲ್ಲಿ ನಿಷ್ಣಾತನಲ್ಲದವನಾರು?

**ಬಹ್ವಪಿ ಸ್ವೇಚ್ಛಯಾ ಕಾಮಂ ಪ್ರಕೀರ್ಣಮಭಿಧೀಯತೇ ।**
**ಅನುಜ್ಝಿತಾರ್ಥಸಂಬಂಧಃ ಪ್ರಬಂಧೋ ದುರುದಾಹರಃ ॥ ೨೯೮**

- ಶಿಶುಪಾಲವಧ, ೨-೭೩

ಅಸಂಗತವಾದ ಮಾತುಗಳನ್ನು ಸ್ವೇಚ್ಛೆಯಿಂದ ಬೇಕಾದಷ್ಟು ಆಡುವುದು ಸುಲಭ. ಆದರೆ ಒಂದೇ ವಿಷಯವನ್ನು ಕುರಿತು ಸಂಗತವಾದ ರೀತಿಯಲ್ಲಿ ವ್ಯವಸ್ಥೆಯಿಂದ ಮಾತನಾಡುವುದು ಕಷ್ಟ.

**ಬಹುಧಾಪ್ಯಾಗಮೈರ್ಭಿನ್ನಾಃ ಪಂಥಾನಃ ಸಿದ್ಧಿಹೇತವಃ ।**
**ತ್ವಯ್ಯೇವ ನಿಪತಂತ್ಯೋಘಾ ಜಾಹ್ನವೀಯಾ ಇವಾರ್ಣವೇ ॥೨೯೯**

- ರಘುವಂಶ, ೧೦-೨೬

ಭಗವಂತನ ಸಾಕ್ಷಾತ್ಕಾರ ಪಡೆಯಲು ಅಥವಾ ಮೋಕ್ಷ ಹೊಂದಲು ಶಾಸ್ತ್ರಗಳಲ್ಲಿ ಬೇರೆ ಬೇರೆ ದಾರಿಗಳು ತೋರಿಸಲ್ಪಟ್ಟಿವೆ. ಆದರೆ ಗಂಗೆಯ ಕವಲೊಡೆದ ಎಲ್ಲ ಪ್ರವಾಹಗಳೂ ಸಮುದ್ರದಲ್ಲಿಯೇ ಬೀಳುವಂತೆ ಆ ಎಲ್ಲ ಮಾರ್ಗಗಳಿಗೂ ಪರಮಾತ್ಮನೇ ಗುರಿ.

**ಬಲಿನೋ ಬಲಿನಃ ಸ್ನಿಹ್ಯಂತ್ಯಬಲಂ ತು ನ ಗೃಹ್ಣತೇ ।**
**ದಾವಂ ದೀಪಯತೇ ಚಂಡೋ ದೀಪಂ ವ್ಯಾಹಂತಿ ಮಾರುತಃ ॥ ೩೦೦**

- ಸಭಾರಂಜನಶತಕ - ೪೫

ಬಲಶಾಲಿಗಳು ಬಲಶಾಲಿಗಳಲ್ಲಿ ಸ್ನೇಹವನ್ನು ತೋರಿಸುತ್ತಾರೆ. ಬಲಹೀನನನ್ನು

ಅವರು ಬೆಂಬಲಿಸುವುದಿಲ್ಲ ಚಂಡಮಾರುತವು ಕಾಳ್ಗಿಚ್ಚನ್ನು ಪ್ರಜ್ವಲಿಸುವಂತೆ ಮಾಡುತ್ತದೆ. ದೀಪವನ್ನು ಆರಿಸಿಬಿಡುತ್ತದೆ.

**ಬಹಿರ್ಜಾತವಿರಾಗಾಯ, ಶಾಂತಚಿತ್ತಾಯ ದೀಯತಾಮ್ ।**
**ನಿರ್ಮತ್ಸರಾಯ ಶುಚಯೇ ಯಸ್ಯಾಹಂ ಪ್ರೇಯಸಾಂ ಪ್ರಿಯಃ ॥ ೩೦೧**

- ಭಾಗವತ, ೩-೩೨-೪೨

ಹೊರಗಿನ ವಸ್ತುಗಳಲ್ಲಿ ವೈರಾಗ್ಯವನ್ನು ಹೊಂದಿದವನಿಗೆ, ಪ್ರಶಾಂತವಾದ ಮನಸ್ಸುಳ್ಳವನಿಗೆ, ಮಾತ್ಸರ್ಯವಿಲ್ಲದವನಿಗೆ, ನಿರ್ಮಲಾಂತಃಕರಣವುಳ್ಳವನಿಗೆ ಮತ್ತು ನಾನು (ಭಗವಂತನು) ಯಾರಿಗೆ ಬಹಳ ಬೇಕಾದವನೋ ಅಂಥವನಿಗೆ ಜ್ಞಾನೋಪದೇಶ ಮಾಡಬೇಕು.

**ಪದ್ಯಂ ಯದ್ಯಪಿ ವಿದ್ಯತೇ ಬಹು ಸತಾಂ ಹೃದ್ಯಂ ವಿಗದ್ಯಂ ನ ತತ್**
**ಗದ್ಯಂ ಚ ಪ್ರತಿಪದ್ಯತೇ ನ ವಿಜಹತ್ಪದ್ಯಂ ಬುಧಾಸ್ವಾದ್ಯತಾಂ ।**
**ಆದತ್ತೇ ಹಿ ತಯೋಃ ಪ್ರಯೋಗ ಉಭಯೋರಾಮೋದಭೂಮೋದಯಂ**
**ಸಂಗಃ ಕಸ್ಯ ಹಿ ನ ಸ್ವದೇತ ಮನಸೇ ಮಾಧ್ವೀಕಮೃದ್ವೀಕಯೋಃ ॥ ೩೦೨**

- ವಿಶ್ವಗುಣಾದರ್ಶ

ಪದ್ಯವು ಬೇಕಾದಷ್ಟು ಇದೆ. ಗದ್ಯವಿಲ್ಲದ ಪದ್ಯ ರಸಿಕರಿಗೆ ಅಷ್ಟು ಸೊಗಸಿಲ್ಲ. ಗದ್ಯವೂ ಪದ್ಯವಿಲ್ಲದೆ ಪಂಡಿತರಿಗೆ ಹಿಡಸಲಾರದು. ಎರಡೂ ಬೆರೆತರೆ ಹೆಚ್ಚಿನ ಆನಂದವಾಗುವುದು. ದ್ರಾಕ್ಷೆ ಜೇನು ಕಲೆತರೆ ಯಾರಿಗೆ ತಾನೆ ಹಿಡಿಸುವುದಿಲ್ಲ?

**ಭಕ್ತಂ ಶಕ್ತಂ ಕುಲೀನಂ ಚ ನ ಭೃತ್ಯಮುಪಮಾನಯೇತ್ ।**
**ಪುತ್ರವಲ್ಲಾಲಯೇನ್ನಿತ್ಯಂ ಯ ಇಚ್ಛೇಚ್ಛ್ರಿಯಮಾತ್ಮನಃ ॥ ೩೦೩**

- ಪಂಚತಂತ್ರ, ಮಿತ್ರಭೇದ - ೩೮೨

ಒಳ್ಳೆಯ ವಂಶದವನೂ ಸಮರ್ಥನೂ ಅನುರಕ್ತನೂ ಆದ ಸೇವಕನನ್ನು ಅಪಮಾನಗೊಳಿಸಬಾರದು. ತನಗೆ ಒಳ್ಳೆಯದಾಗಬೇಕೆಂದು ಬಯಸುವವನು ಅಂಥವನನ್ನು ಮಗನನ್ನು ಹೇಗೋ ಹಾಗೆ ಲಾಲಿಸಬೇಕು.

**ಭೂಮಿಂ ಛಾದಯಿತುಂ ಸರ್ವಾಂ ಕುತಶ್ಚರ್ಮ ಭವಿಷ್ಯತಿ ।**
**ಉಪಾನಚ್ಚರ್ಮಮಾತ್ರೇಣ ಛನ್ನಾ ಭವತಿ ಮೇದಿನೀ ॥ ೩೦೪**

- ಬೋಧಿಚರ್ಯಾವತಾರ - ೧೦೨

ಇಡೀ ನೆಲವನ್ನು ಮುಚ್ಚುವಷ್ಟು ಚರ್ಮವೆಲ್ಲಿದೆ ? ಆದುದರಿಂದ ಪಾದರಕ್ಷೆಗಳನ್ನು ಹಾಕಿಕೊಂಡರೆ ಭೂಮಿಯಲ್ಲಿ ಎಲ್ಲಾಕಡೆಯೂ ಚರ್ಮವಿದ್ದಂತಾಗುತ್ತದೆ.

ಭೇತವ್ಯಂ ನೃಪತೇಸ್ತತಃ ಸಚಿವತೋ ರಾಜ್ಞಸ್ತತೋ ವಲ್ಲಭಾತ್
ಅನ್ಯೇಭ್ಯಶ್ಚ ವಸಂತಿ ಯೇಽಸ್ಯ ಭವನೇ ಲಬ್ಧ ಪ್ರಸಾದಾ ವಿಟಾಃ ।
ದೈನ್ಯಾದುನ್ಮುಖದರ್ಶನಾಪಲಪನೈಃ ಪಿಂಡಾರ್ಥಮಾಯಸ್ಯತಃ
ಸೇವಾಂ ಲಾಘವಕಾರಿಣೀಂ ಕೃತಧಿಯಃ ಸ್ಥಾನೇ ಶ್ವವೃತ್ತಿಂ ವಿದುಃ ॥ ೩೦೫

- ಮುದ್ರಾರಾಕ್ಷಸ, ೩-೧೪

ಅರಸನಿಗೆ ಹೆದರಬೇಕು. ಮಂತ್ರಿಗಳಿಗೆ ಹೆದರಬೇಕು. ಅರಸರ ಪ್ರೀತಿ ಪಾತ್ರರಾದವರು, ಅರಮನೆಯಲ್ಲಿಯೇ ರಾಜನ ಮೆಚ್ಚಿನ ವಿಟರು ಮತ್ತು ಇತರರಿಗೂ ಹೆದರಬೇಕು. ಕೇವಲ ಹಿಡಿ ಅನ್ನಕ್ಕಾಗಿ ದೀನತೆಯಿಂದ ಮುಖವನ್ನು ನೋಡುವುದು, ಸುಳ್ಳು ಹೇಳುವುದು ಹೀಗೆ ಶ್ರಮಪಡಬೇಕು. ಅನುಭವಿಗಳು ಸೇವೆಯನ್ನು ನಾಯಿಯ ವೃತ್ತಿ, ಅವಮಾನಕರ ಎಂದು ಹೇಳಿರುವುದು ನ್ಯಾಯವಾಗಿಯೇ ಇದೆ.

ಭೋಗಾ ನ ಭುಕ್ತಾ ವಯಮೇವ ಭುಕ್ತಾ
ತಪೋ ನ ತಪ್ತಂ ಮಯಮೇವ ತಪ್ತಾಃ ।
ಕಾಲೋ ನ ಯಾತೋ ವಯಮೇವ ಯಾತಾಃ
ತೃಷ್ಣಾ ನ ಜೀರ್ಣಾ ವಯಮೇವ ಜೀರ್ಣಾಃ ॥ ೩೦೬

- ವೈರಾಗ್ಯಶತಕ - ೧೨

ಸುಖಗಳನ್ನು ಅನುಭವಿಸಿ ಮುಗಿಸಲಿಲ್ಲ. ನಾವೇ ಮುಗಿದು ಹೋದೆವು! ತಪಸ್ಸನ್ನು ಆಚರಿಸಲಿಲ್ಲ. ನಾವೇ ಕಷ್ಟ ಪಟ್ಟೆವು! ಕಾಲವು ಕಳೆಯಲಿಲ್ಲ. ನಾವೇ ಸಾಗಿದೆವು. ಆಸೆ ಜೀರ್ಣವಾಗಲಿಲ್ಲ. ನಾವೇ ಜೀರ್ಣರಾದೆವು!

ಭೋಗಾಯ ಪಾಮರಾಣಾಂ ಯೋಗಾಯ ವಿವೇಕಿನಾಂ ಶರೀರಮಿದಂ ।
ಭೋಗಾಯ ಚ ಯೋಗಾಯ ಚ ನ ಕಲ್ಪತೇ ದುರ್ವಿದಗ್ಧಾನಾಮ್ ॥ ೩೦೭

- (ಅಪ್ಪಯ್ಯದೀಕ್ಷಿತರ) ವೈರಾಗ್ಯಶತಕ

ಈ ಶರೀರವು ಪಾಮರರಿಗೆ ಭೋಗಕ್ಕಾಗಿ; ವಿವೇಕಿಗಳಿಗೆ ಯೋಗಕ್ಕಾಗಿ. ವಿಚಾರ ಹೀನರಾದ ದುರಹಂಕಾರಿಗಳಿಗೆ ಭೋಗಕ್ಕೂ ಆಗುವುದಿಲ್ಲ, ಯೋಗಕ್ಕೂ ಆಗುವುದಿಲ್ಲ.

ಮಣಿರ್ಲುಠತಿ ಪಾದೇಷು ಕಾಚಃ ಶಿರಸಿ ಧಾರ್ಯತೇ ।
ಯಥೈವಾಸ್ತು ತಥೈವಾಸ್ತು ಕಾಚಃ ಕಾಚೋ ಮಣಿರ್ಮಣಿಃ ॥ ೩೦೮

- ಹಿತೋಪದೇಶ, ಸುಹೃದ್ಭೇದ - ೬೦

ವಜ್ರ ಕಾಲಿನ ಮೇಲೆ ಹೊರಳಾಡುತ್ತದೆ ; ಗಾಜನ್ನು ಶಿರಸ್ಸಿನಲ್ಲಿ ಧರಿಸಬಹುದು; ಹೀಗಾದರೂ ಸರಿ ಹಾಗಾದರೂ ಸರಿ ಗಾಜು ಗಾಜೇ, ವಜ್ರ ವಜ್ರವೇ.

**ಮನಸ್ವೀ ಮ್ರಿಯತೇ ಕಾಮಂ ಕಾರ್ಪಣ್ಯಂ ನ ತು ಗಚ್ಛತಿ ।**
**ಅಪಿ ನಿರ್ವಾಣಮಾಯಾತಿ ನಾನಲೋ ಯಾತಿ ಶೀತತಾಮ್ ॥೩೦೯**

- ಹಿತೋಪದೇಶ, ಮಿತ್ರಲಾಭ - ೧೦೦

ಅಭಿಮಾನಶಾಲಿಯಾದವನು ಪ್ರಾಣ ಬಿಡುವನೇ ಹೊರತು ಕಾರ್ಪಣ್ಯವನ್ನು ತೋರುವುದಿಲ್ಲ. ಬೆಂಕಿ ಆರಿಹೋಗುವುದೇ ವಿನಾ ತಣ್ಣಗಾಗುವುದಿಲ್ಲ.

**ಮನೋ ಧಾವತಿ ಸರ್ವತ್ರ ಮದೋನ್ಮತ್ತಗಜೇಂದ್ರವತ್ ।**
**ಜ್ಞಾನಾಂಕುಶಸಮಾ ಬುದ್ಧಿಃ ತಸ್ಯ ನಿಶ್ಚಲತೇ ಮನಃ ॥ ೩೧೦**

- ಸುಭಾಷಿತರತ್ನಭಾಂಡಾಗಾರ

ಮನಸ್ಸು ಮದವೇರಿದ ಆನೆಯಂತೆ ಎತ್ತೆತ್ತಲೂ ಓಡುವುದು. ಬುದ್ಧಿ ಜ್ಞಾನದ ಅಂಕುಶವಿದ್ದಂತೆ. ಅದರಿಂದ ಮನಸ್ಸು ಸ್ತಿಮಿತಕ್ಕೆ ಬರುತ್ತದೆ.

**ಮಸ್ತಕನ್ಯಸ್ತಭಾರಾದೇರ್ದುಃಖಮನ್ಯೈರ್ನಿವಾರ್ಯತೇ ।**
**ಕ್ಷುಧಾದಿಕೃತದುಃಖಂ ತು ವಿನಾ ಸ್ವೇನ ನ ಕೇನಚಿತ್ ॥ ೩೧೧**

- ವಿವೇಕ ಚೂಡಾಮಣಿ - ೫೨

ತಲೆಯ ಮೇಲೆ ಹೊರೆ ಹೊತ್ತವನ ದುಃಖವನ್ನು ಇನ್ನೊಬ್ಬನು ಪರಿಹರಿಸಿಯಾನು. ಹಸಿವು ಮುಂತಾದ್ದರಿಂದಾಗುವ ದುಃಖವನ್ನು ತಾನೇ (ಊಟಮಾಡಿ) ಪರಿಹರಿಸಿ ಕೊಳ್ಳಬೇಕು. ಅದು ಇನ್ನೊಬ್ಬನಿಂದ ಎಂದಿಗೂ ಆಗತಕ್ಕದ್ದಲ್ಲ.

**ಮಹಾಜನಸ್ಯ ಸಂಪರ್ಕಃ ಕಸ್ಯ ನೋನ್ನತಿಕಾರಕಃ ।**
**ಪದ್ಮಪತ್ರಸ್ಥಿತಂ ತೋಯಂ ಧತ್ತೇ ಮುಕ್ತಾಫಲಶ್ರಿಯಮ್ ॥ ೩೧೨**

- ಪಂಚತಂತ್ರ, ಕಾಕೋಲೂಕೀಯ - ೫೯

ಮಹಾಜನರ ಸಂಪರ್ಕವು ಯಾರಿಗೆ ತಾನೇ ಉನ್ನತಿಯನ್ನುಂಟುಮಾಡು ವುದಿಲ್ಲ? ತಾವರೆ ಎಲೆಯ ಮೇಲೆ ಇರುವ ನೀರಿನ ಹನಿ ಮುತ್ತುಗಳ ಕಾಂತಿಯನ್ನು ಹೊಂದುತ್ತದೆ.

**ಮಾತಾ ಗುರುತರಾ ಭೂಮೇಃ ಖಾತ್ ಪಿತೋಚ್ಚತರಸ್ತಥಾ ।**
**ಮನಃ ಶೀಘ್ರತರಂ ವಾತಾಚ್ಚಿಂತಾ ಬಹುತರೀ ತೃಣಾತ್ ॥ ೩೧೩**

- ಮಹಾಭಾರತ, ವನ. ೩೧೩-೬೦

ಭೂಮಿಗಿಂತಲೂ ತಾಯಿ ಹೆಚ್ಚು ತೂಕದವಳು. ಆಕಾಶಕ್ಕಿಂತಲೂ ತಂದೆ ಹೆಚ್ಚು ಉನ್ನತನಾದವನು. ಗಾಳಿಗಿಂತ ಮನಸ್ಸು ಹೆಚ್ಚು ವೇಗವುಳ್ಳದ್ದು. ಹುಲ್ಲಿಗಿಂತ ಚಿಂತೆ ಹೆಚ್ಚಿನದು.

ಮಾತೃವತ್ ಪರದಾರಾಂಶ್ಚ ಪರದ್ರವ್ಯಾಣಿ ಲೋಷ್ಟವತ್ ।
ಆತ್ಮವತ್ ಸರ್ವಭೂತಾನಿ ಯಃ ಪಶ್ಯತಿ ಸ ಪಶ್ಯತಿ ॥ ೩೧೪

- ಸಮಯೋಚಿತಪದ್ಯಮಾಲಿಕಾ

ಪರಸ್ತ್ರೀಯರನ್ನು ತಾಯಿಯಂತೆ, ಪರಧನವನ್ನು ಮಣ್ಣಿನ ಹೆಂಟೆಯಂತೆ, ಸಕಲ ಪ್ರಾಣಿಗಳನ್ನು ತನ್ನಂತೆ ಯಾವನು ನೋಡುತ್ತಾನೋ ಅವನೇ ನಿಜವಾಗಿ ನೋಡತಕ್ಕವನು (ಜ್ಞಾನಿ).

ಮಾತ್ರಾ ಸಮಂ ನಾಸ್ತಿ ಶರೀರಪೋಷಣಂ
ವಿದ್ಯಾಸಮಂ ನಾಸ್ತಿ ಶರೀರ ಭೂಷಣಂ ।
ಭಾರ್ಯಾಸಮಂ ನಾಸ್ತಿ ಶರೀರತೋಷಣಂ
ಚಿಂತಾಸಮಂ ನಾಸ್ತಿ ಶರೀರಶೋಷಣಂ ॥ ೩೧೫

- ಸಮಯೋಚಿತಪದ್ಯಮಾಲಿಕಾ

ತಾಯಿಗೆ ಸಮವಾದ ಶರೀರದ ಪೋಷಣವಿಲ್ಲ. ವಿದ್ಯೆಗೆ ಸಮವಾದ ಶರೀರದ ಭೂಷಣವಿಲ್ಲ. ಮಡದಿಗೆ ಸಮವಾದ ಶರೀರದ ತೋಷಣವಿಲ್ಲ. ಚಿಂತೆಗೆ ಸಮಾನವಾದ ಶರೀರದ ಶೋಷಣವಿಲ್ಲ.

ಮಿತ್ರಾಣಿ ಶತ್ರುತ್ವಮುಪಾನಯಂತೀ
ಮಿತ್ರತ್ವಮರ್ಥಸ್ಯ ವಶಾಚ್ಚ ಶತ್ರೂನ್ ।
ನೀತಿರ್ನಯತ್ಯಸ್ಮೃತ ಪೂರ್ವವೃತ್ತಂ
ಜನ್ಮಾಂತರಂ ಜೀವತ ಏವ ಪುಂಸಃ ॥ ೩೧೬

- ಮುದ್ರಾರಾಕ್ಷಸ, ೫-೮

ಪ್ರಯೋಜನವೇ ಮುಖ್ಯವಾದಾಗ ಶತ್ರುಗಳೂ ಮಿತ್ರರಾಗುತ್ತಾರೆ ; ಮಿತ್ರರೂ ಶತ್ರುಗಳಾಗುತ್ತಾರೆ. ಹೀಗೆ ರಾಜನೀತಿಯು ಹಿಂದಿನ ಘಟನೆಗಳನ್ನು ಮರೆಯಿಸಿ ಬದುಕಿರುವಾಗಲೇ ಬೇರೆ ಜನ್ಮ ಉಂಟಾದಂತೆ ಮಾಡುತ್ತದೆ.

ಮುನೇರಪಿ ವನಸ್ಥಸ್ಯ ಸ್ವಾನಿ ಕರ್ಮಾಣಿ ಕುರ್ವತಃ ।
ಉತ್ಪದ್ಯಂತೇ ತ್ರಯಃ ಪಕ್ಷಾ ಮಿತ್ರೋದಾಸೀನಶತ್ರವಃ ॥ ೩೧೭

- ಮಹಾಭಾರತ, ಶಾಂತಿ. ೧೧೧-೬೦

ತನ್ನ ಕೆಲಸಗಳನ್ನು ತಾನು ಮಾಡಿಕೊಂಡು ಕಾಡಿನಲ್ಲಿರುವ ಮುನಿಗೂ ಸಹ, ಮಿತ್ರ, ಉದಾಸೀನ, ಶತ್ರು - ಮೂರು ಪಕ್ಷಗಳು ಹುಟ್ಟುತ್ತವೆ.

**ಮುಹೂರ್ತಮಪಿ ಜೀವೇತ ನರಃ ಶುಕ್ಲೇನ ಕರ್ಮಣಾ ।**
**ನ ಕಲ್ಪಮಪಿ ಕೃಷ್ಣೇನ ಲೋಕದ್ವಯವಿರೋಧಿನಾ ॥ ೩೧೮**

- ಸುಭಾಷಿತರತ್ನಭಾಂಡಾಗರ

(ಒಂದು ಮುಹೂರ್ತವಾದರೂ) ಪರಿಶುದ್ಧವಾದ ಕಾರ್ಯಮಾಡಿ ಬಾಳಬೇಕು. ಎರಡು ಲೋಕಗಳಿಗೂ ವಿರೋಧಿಯಾದ ಕೆಟ್ಟ ಕೆಲಸದಿಂದ ಒಂದು ಕಲ್ಪ ಬಾಳುವುದೂ ಸಲ್ಲದು.

**ಮೃಗಮೀನಸಜ್ಜನಾನಾಂ ತೃಣಜಲಸಂತೋಷವಿಹಿತವೃತ್ತೀನಾಂ ।**
**ಲುಬ್ಧಕಧೀವರಪಿಶುನಾ ನಿಷ್ಕಾರಣವೈರಿಣೋ ಜಗತಿ ॥ ೩೧೯**

- ನಿತಶತಕ - ೫೯

ಹುಲ್ಲು, ನೀರು, ಸಂತೋಷಗಳಿಂದಲೇ ಜೀವನ ಸಾಗಿಸುತ್ತಿರುವ ಜಿಂಕೆ, ಮೀನು ಮತ್ತು ಸಜ್ಜನರಿಗೆ ಈ ಲೋಕದಲ್ಲಿ ಕ್ರಮವಾಗಿ ಬೇಡನೂ, ಬೆಸ್ತನೂ, ದುರ್ಜನನೂ ನಿಷ್ಕಾರಣ ವೈರಿಗಳು.

**ಮೃತಾನಾಂ ಸ್ವಾಮಿನಃ ಕಾರ್ಯೇ ಭೃತ್ಯಾನಾಮನುವರ್ತಿನಾಂ ।**
**ಭವೇತ್ಸ್ವರ್ಗೇಽಕ್ಷಯೋ ವಾಸಃ ಕೀರ್ತಿಶ್ಚ ಧರಣೀತಲೇ ॥ ೩೨೦**

- ಪಂಚತಂತ್ರ, ಮಿತ್ರಭೇದ - ೩.೨೧

ಪ್ರಭುವಿನ ಕೆಲಸವನ್ನು ನಡೆಸುವುದರಲ್ಲಿ ಅವನನ್ನು ಹಿಂಬಾಲಿಸಿ ಮೃತರಾದ ಸೇವಕರಿಗೆ ಸ್ವರ್ಗದಲ್ಲಿ ಶಾಶ್ವತವಾದ ವಾಸವೂ ಭೂಲೋಕದಲ್ಲಿ ಯಶಸ್ಸೂ ಉಂಟಾಗುವುವು.

**ಮೃತ್ಯುರ್ಜನ್ಮವತಾಂ ವೀರ ದೇಹೇನ ಸಹ ಜಾಯತೇ ।**
**ಅದ್ಯವಾಬ್ದಶತಾಂತೇ ವಾ ಮೃತ್ಯುರ್ವೈ ಪ್ರಾಣಿನಾಂ ಧ್ರುವಃ ॥ ೩೨೧**

- ಭಾಗವತ, ೧೦-೧-೩೮

ಎಲೈ ಪರಾಕ್ರಮಿಯೇ, ಈ ಲೋಕದಲ್ಲಿ ಹುಟ್ಟಿದವರಿಗೆ ಸಾವೂ ಕೂಡ ದೇಹದೊಡನೆ ಹುಟ್ಟುತ್ತದೆ. ಈಗಲೋ ಅಥವಾ ನೂರು ವರ್ಷಗಳ ಕೊನೆಯಲ್ಲಿಯೋ ಪ್ರಾಣಿಗಳಿಗೆ ಸಾವು ಖಂಡಿತ.

**ಮೃತ್ಯೋರ್ಬಿಭೇಷಿ ಕಿಂ ಬಾಲ ನ ಸ ಭೀತಂ ವಿಮುಂಚತಿ ।**
**ಅದ್ಯ ವಾಬ್ದಶತಾಂತೇ ವಾ ಮೃತ್ಯುರ್ವೈ ಪ್ರಾಣಿನಾಂ ಧ್ರುವಃ ॥ ೩೨೨**

- ಪಂಚತಂತ್ರ, ಮಿತ್ರಭೇದ - ೪೫೨

ಎಲೈ ಅವಿವೇಕಿಯೇ, ಸಾವಿಗೆ ಏಕೆ ಅಂಜುತ್ತೀಯೆ ? ಹೆದರಿದವನನ್ನು ಅದು ಬಿಡುವುದಿಲ್ಲ. ಇಂದೋ ಅಥವಾ ನೂರು ವರ್ಷದ ಕೊನೆಯಲ್ಲಿಯೋ ಪ್ರಾಣಿಗಳಿಗೆ ಸಾವು ನಿಶ್ಚಿತವಾದದ್ದೇ.

**ಮೌನಾನ್ಮೂಕಃ ಪ್ರವಚನಪಟುರ್ವಾತುಲೋ ಜಲ್ಪಕೋ ವಾ**
**ಧೃಷ್ಟಃ ಪಾರ್ಶ್ವೇ ವಸತಿ ಚ ತದಾ ದೂರತಶ್ಚಾಪ್ರಗಲ್ಭಃ ।**
**ಕ್ಷಾಂತ್ಯಾ ಭೀರುರ್ಯದಿ ನ ಸಹತೇ ಪ್ರಾಯಶೋ ನಾಭಿಜಾತಃ**
**ಸೇವಾಧರ್ಮಃ ಪರಮಗಹನೋ ಯೋಗಿನಾಮಪ್ಯಗಮ್ಯಃ ॥ ೩೨೩**

- ನೀತಿಶತಕ - ೫೬

ಸೇವಾವೃತ್ತಿ ಕಠಿಣವಾದದ್ದು. ಯೋಗಿಗಳಿಗೂ ನಡೆಸಲು ಶಕ್ಯವಿಲ್ಲದ್ದು. ಏಕೆಂದರೆ, ಸೇವಕನು ಮೌನ ಸ್ವಭಾವದವನಾದರೆ ಮೂಕನೆಂದು ಹಂಗಿಸುತ್ತಾರೆ. ವಾಚಾಳಿಯಾದರೆ ಹುಚ್ಚ ಅಥವಾ ಹರಟೆಮಲ್ಲ. ಹತ್ತಿರದಲ್ಲಿದ್ದರೆ ಅವಿನೀತ. ದೂರದಲ್ಲಿದ್ದರೆ ಅಸಮರ್ಥ. ತಾಳ್ಮೆ ಇದ್ದರೆ ಹೇಡಿ. ತಾಳ್ಮೆಯಿಲ್ಲದವನಾದರೆ ಕುಲಹೀನ ಎನ್ನುತ್ತಾರೆ.

**ಯ ಉದ್ಯತಮನಾದೃತ್ಯ ಕೀನಾಶಮಭಿಯಾಚತೇ ।**
**ಕ್ಷೀಯತೇ ತದ್ಯಶಃ ಸ್ಫೀತಂ ಮಾನಶ್ಚಾವಜ್ಞಯಾ ಹತಃ ॥ ೩೨೪**

- ಭಾಗವತ, ೩-೨೨-೧೩

ಯಾರು ಅಭಿವೃದ್ಧಿಯನ್ನು ಅನಾದರಿಸಿ ನೀಚನನ್ನು ಯಾಚಿಸುತ್ತಾನೋ ಅವನ ವಿಪುಲವಾದ ಕೀರ್ತಿಯು ನಶಿಸುತ್ತದೆ. ಮತ್ತು ಅವಮಾನಕ್ಕೊಳಗಾಗಿ ಗೌರವ ನಶಿಸುತ್ತದೆ.

**ಯತ್ಕರ್ಮ ಕುರ್ವತೋಽಸ್ಯ ಸ್ಯಾತ್ಪರಿತೋಷೋಽಂತರಾತ್ಮನಃ ।**
**ತತ್ಪ್ರಯತ್ನೇನ ಕುರ್ವೀತ ವಿಪರೀತಂ ತು ವರ್ಜಯೇತ್ ॥ ೩೨೫**

- ಸುಭಾಷಿತರತ್ನಭಾಂಡಾಗಾರ

ಯಾವ ಕೆಲಸ ಮಾಡಿದರೆ ಅಂತರಾತ್ಮನಿಗೆ ಸಂತೋಷವಾಗುವುದೋ ಅದನ್ನು ಪ್ರಯತ್ನಪೂರ್ವಕ ಮಾಡಬೇಕು. ಅದಕ್ಕೆ ವಿಪರೀತವಾದುದನ್ನು ತ್ಯಜಿಸಬೇಕು.

**ಯತ್ರ ಭಾರ್ಯಾಗಿರೋ ವೇದಾ ಯತ್ರ ಧರ್ಮೋಽರ್ಥಸಾಧನಂ ।**
**ಯತ್ರ ಸ್ವಪ್ರತಿಭಾ ಮಾನಂ ತಸ್ಮೈ ಶ್ರೀಕಲಯೇ ನಮಃ ॥ ೩೨೬**

- ಕಲಿವಿಡಂಬನ - ೧೦೦

ಯಾವ ಕಲಿಯುಗದಲ್ಲಿ ಹೆಂಡತಿಯ ಮಾತೇ ವೇದವಾಗಿದೆಯೋ ಧರ್ಮವು ಹಣವನ್ನು ಗಳಿಸುವ ಉಪಾಯವಾಗಿದೆಯೋ, ತನ್ನ ಬುದ್ಧಿಯೇ ಅಳತೆಗೋಲಾಗಿದೆಯೋ ಆ ಕಲಿಪುರುಷನಿಗೆ ನಮಸ್ಕಾರ!

**ಯಥಾಮಯೋಽಂಗೇ ಸಮುಪೇಕ್ಷಿತೋ ನೃಭಿ-**
**ರ್ನ ಶಕ್ಯತೇ ರೂಢಪದಶ್ಚಿಕಿತ್ಸಿತುಮ್ ।**
**ಯಥೇಂದ್ರಿಯಗ್ರಾಮ ಉಪೇಕ್ಷಿತಸ್ತಥಾ**
**ರಿಪುರ್ಮಹಾನ್ ಬದ್ಧಬಲೋ ನ ಚಾಲ್ಯತೇ ॥ ೩೨೭**

- ಭಾಗವತ, ೧೦-೪-೩೮

ಹೇಗೆ ಮನುಷ್ಯರು ತಮ್ಮ ಉಪೇಕ್ಷಿಸಿದ ರೋಗವು ದೇಹದಲ್ಲಿ ಬೇರೂರಿ ಚಿಕಿತ್ಸೆಗೆ ಸಾಧ್ಯವಾಗುದಿಲ್ಲವೋ, ಹೇಗೆ ಉಪೇಕ್ಷಿಸಲ್ಪಟ್ಟ ಇಂದ್ರಿಯಗಳ ಗುಂಪು ಹತೋಟಿ ಯಲ್ಲಿರುವುದಿಲ್ಲವೋ, ಹಾಗೆಯೇ ಶತ್ರುವು ಉಪೇಕ್ಷಿಸಲ್ಪಟ್ಟರೆ, ಮಹಾಬಲಿಷ್ಠನಾಗಿ ಗೆಲ್ಲಲು ಅಸಾಧ್ಯನಾಗುವನು.

**ಯಥಾಗದಂ ವೀರ್ಯತಮಮುಪಯುಕ್ತಂ ಯದೃಚ್ಛಯಾ ।**
**ಅಜಾನತೋಽಪ್ಯಾತ್ಮಗುಣಂ ಕುರ್ಯಾನ್ಮಂತ್ರೋಽಪ್ಯುದಾಹೃತಃ ॥ ೩೨೮**

- ಭಾಗವತ, ೬-೨-೧೯

ಹೇಗೆ ಬಹಳ ಶಕ್ತಿಯುಳ್ಳ ಔಷಧವು ಆಕಸ್ಮಿಕವಾಗಿ ಉಪಯೋಗಿಸಲ್ಪಟ್ಟರೂ ಒಳ್ಳೆಯದನ್ನು ಮಾಡುತ್ತದೆಯೋ, ಹಾಗೆಯೇ ಅದರ ಗುಣವನ್ನು ತಿಳಿಯದೇ ಇರುವವನಿಗೂ, ಜಪಿಸಿದ ಮಂತ್ರವು ಒಳ್ಳೆಯದನ್ನು ಮಾಡುತ್ತದೆ.

**ಯಥಾನ್ನಂ ಮಧುಸಂಯುಕ್ತಂ ಮಧುವಾನ್ಯೇನ ಸಂಯುತಂ ।**
**ಏವಂ ತಪಶ್ಚ ವಿದ್ಯಾ ಚ ಸಂಯುಕ್ತಂ ಭೇಷಜಂ ಮಹತ್ ॥ ೩೨೯**

- ಅತ್ರಿಸ್ಮೃತಿ, ೨-೧೫

ಆಹಾರಕ್ಕೆ ಜೇನುತುಪ್ಪ ಸೇರಿರಲಿ ಅಥವಾ ಜೇನುತುಪ್ಪವೇ ಇನ್ನೊಂದರೊಡನೆ ಸೇರಿರಲಿ, ಅದು ಔಷಧವಾಗುವಂತೆ, ವಿದ್ಯೆಯೂ ತಪಸ್ಸೂ ಒಟ್ಟಿಗೆ ಸೇರಿದರೆ ಎಲ್ಲ ದೋಷಗಳನ್ನೂ ಹೋಗಲಾಡಿಸುತ್ತದೆ.

**ಯಥಾಶ್ವಾ ರಥಹೀನಾಸ್ತು ರಥೋ ವಾಶ್ವೈರ್ಯಥಾ ವಿನಾ ।**
**ಏವಂ ತಪೋಽಪ್ಯವಿದ್ಯಸ್ಯ ವಿದ್ಯಾವಾಽಪ್ಯತಪಸ್ವಿನಃ ॥ ೩೩೦**

- ಅತ್ರಿಸ್ಮೃತಿ, ೨-೧೪

ರಥವಿಲ್ಲದ ಕುದುರೆಗಳಂತೆ, ಕುದುರೆಗಳಿಲ್ಲದ ರಥದಂತೆ ವಿದ್ಯೆಯಿಲ್ಲದವನ ತಪಸ್ಸು, ತಪಸ್ಸಿಲ್ಲದವನ ವಿದ್ಯೆ ವ್ಯರ್ಥ.

**ಯಥಾಸ್ತ್ರರಹಿತೇ ಪುಂಸಿ ವೃಥಾ ಶೌರ್ಯಪರಿಗ್ರಹಃ ।**
**ತಥೋಪನ್ಯಾಸಹೀನಸ್ಯ ವೃಥಾ ಶಾಸ್ತ್ರಪರಿಗ್ರಹಃ ॥ ೩೩೧**

- ಯಶಸ್ತಿಲಕ, ೩-೨೭೬

ಶಸ್ತ್ರಾಸ್ತ್ರಗಳಿಲ್ಲದವನಿಗೆ ಶೌರ್ಯವಿದ್ದರೂ ವ್ಯರ್ಥ. ಹಾಗೆಯೇ ಭಾಷಣ ಶಕ್ತಿ ಇಲ್ಲದವನಿಗೆ ಶಾಸ್ತ್ರಜ್ಞಾನ ವ್ಯರ್ಥ.

**ಯದಚೇತನೋಽಪಿ ಪಾದೈಃ ಸ್ಪೃಷ್ಟಃಪ್ರಜ್ವಲತಿ ಸವಿತುರಿನಕಾಂತಃ ।**
**ತತ್ತೇಜಸ್ವೀ ಪುರುಷಃ ಪರಕೃತವಿಕೃತಿಂ ಕಥಂ ಸಹತೇ ॥ ೩೩೨**

- ನೀತಿಶತಕ - ೨೫

ಸೂರ್ಯಕಾಂತಮಣಿಯು ಜೀವವಿಲ್ಲದ ವಸ್ತುವಾದರೂ ಸೂರ್ಯನ ಕಿರಣ (ಪಾದ) ತಗುಲಿದೊಡನೆ ಪ್ರಜ್ವಲಿಸುತ್ತದೆ. ಹಾಗೆಯೇ ತೇಜಸ್ವಿಯಾದ ಪುರುಷನು ಇತರರಿಂದುಂಟಾದ ಅವಮಾನವನ್ನು ಹೇಗೆ ತಾನೇ ಸಹಿಸಿಯಾನು?

**ಯದಶಕ್ಯಂ ನ ತಚ್ಛಕ್ಯಂ ಯಚ್ಛಕ್ಯಂ ಶಕ್ಯಮೇವ ತತ್ ।**
**ನೋದಕೇ ಶಕಟಂ ಯಾತಿ ನ ನೌಕಾ ಗಚ್ಛತಿ ಸ್ಥಲೇ ॥ ೩೩೩**

- ಹಿತೋಪದೇಶ, ಮಿತ್ರಲಾಭ - ೬೬

ಯಾವುದು ಅಸಾಧ್ಯವೋ ಅದು ಎಂದೂ ಸಾಧಿಸುವುದಕ್ಕಾಗದು. ಯಾವುದು ಶಕ್ಯವೋ ಅದು ಎಂದೂ ಶಕ್ಯವೇ. ನೀರಿನ ಮೇಲೆ ಗಾಡಿ ಹೋಗಲಾರದು. ನೆಲದಮೇಲೆ ಹಡಗು ಚಲಿಸದು.

**ಯದಾ ದೇವೇಷು ವೇದೇಷು ಗೋಷು ವಿಪ್ರೇಷು ಸಾಧುಷು ।**
**ಧರ್ಮೇ ಮಯಿ ಚ ವಿದ್ವೇಷಃ ಸ ವಾ ಆಶು ವಿನಶ್ಯತಿ ॥ ೩೩೪**

- ಭಾಗವತ, ೭-೪-೨೭

ಯಾವಾಗ ದೇವತೆಗಳಲ್ಲಿ, ವೇದಗಳಲ್ಲಿ, ಹಸುಗಳಲ್ಲಿ, ಬ್ರಾಹ್ಮಣರಲ್ಲಿ, ಸಾಧು

ಗಳಲ್ಲಿ, ಧರ್ಮದಲ್ಲಿ ಮತ್ತು ನನ್ನಲ್ಲಿ (ಪರಮಾತ್ಮನಲ್ಲಿ) ಮನುಷ್ಯನಿಗೆ ದ್ವೇಷವುಂಟಾಗುತ್ತದೆಯೋ ಆಗ ಮನುಷ್ಯನು ಬೇಗ ಹಾಳಾಗುತ್ತಾನೆ.

**ಯದ್ವಾಂಛತಿ ದಿವಾ ಮರ್ತ್ಯೋ ವೀಕ್ಷತೇ ವಾ ಕರೋತಿ ವಾ ।**
**ತತ್ಸ್ವಪ್ನೇಽಪಿ ತದಭ್ಯಾಸಾದ್ಬ್ರೂತೇ ಽಥ ಕರೋತಿ ವಾ ॥ ೩೩೫**

- ಪಂಚತಂತ್ರ, ಮಿತ್ರಭೇದ - ೧೪೪

ಹಗಲಿನಲ್ಲಿ ಮನುಷ್ಯನು ಏನನ್ನು ಇಚ್ಛಿಸುತ್ತಾನೋ, ನೋಡುತ್ತಾನೋ ಅಥವಾ ಮಾಡುತ್ತಾನೋ ಅದನ್ನೇ ಅಭ್ಯಾಸ ಬಲದಿಂದ ಕನಸಿನಲ್ಲಿಯೂ ಹೇಳುತ್ತಾನೆ ಅಥವಾ ಮಾಡುತ್ತಾನೆ.

**ಯದಿ ನ ಸ್ಯಾದ್ ಗೃಹೇ ಮಾತಾ ಪತ್ನೀ ವಾ ಪತಿದೇವತಾ ।**
**ವ್ಯಂಗೇ ರಥ ಇವ ಪ್ರಾಜ್ಞಃ ಕೋ ನಾಮಾಸೀತ ದೀನವತ್ ॥೩೩೬**

- ಭಾಗವತ, ೪-೨೬-೧೫

ಮನೆಯಲ್ಲಿ ತಾಯಿಯಾಗಲೀ ಅಥವಾ ಪತಿವ್ರತೆಯಾದ ಹೆಂಡತಿಯಾಗಲೀ ಇಲ್ಲದಿದ್ದರೆ ಬುದ್ಧಿವಂತನಾದ ಯಾರು ತಾನೇ ಚಕ್ರವಿಲ್ಲದ ರಥದಲ್ಲಿ ಕುಳಿತಂತೆ, ದೈನ್ಯದಿಂದ ಮನೆಯಲ್ಲಿದ್ದಾನು ?

**ಯದಿ ನ ಕ್ವಾಪಿ ವಿದ್ಯಾಯಾಂ ಸರ್ವಥಾ ಕ್ರಮತೇ ಮತಿಃ ।**
**ಮಾಂತ್ರಿಕಾಸ್ತು ಭವಿಷ್ಯಾಮೋ ಯೋಗಿನೋ ಯತಯೋಽಪಿ ವಾ ॥ ೩೩೭**

- ಕಲಿವಿಡಂಬನ - ೧೦

ನಮಗೆ ಯಾವುದಾದರೂ ವಿದ್ಯೆಯನ್ನು ಕಲಿಯಲು ಬುದ್ಧಿ ಓಡುವುದಿಲ್ಲವಾದರೆ, ಮಾಂತ್ರಿಕರಾಗುತ್ತೇವೆ! ಅಥವಾ ಯೋಗಿಗಳೋ ಸಂನ್ಯಾಸಿಗಳೋ ಆಗಿಬಿಡುತ್ತೇವೆ!

**ಯದಿ ಸತ್ಸಂಗನಿರತೋ ಭವಿಷ್ಯಸಿ ಭವಿಷ್ಯಸಿ ।**
**ತಥಾ ಸಜ್ಜನಗೋಷ್ಠೀಷು ಪತಿಷ್ಯಸಿ ಪತಿಷ್ಯಸಿ ॥ ೩೩೮**

- ಹಿತೋಪದೇಶ, ಮಿತ್ರಲಾಭ - ೧೬೩

ಸಜ್ಜನರ ಸಹವಾಸದಲ್ಲಿ ನೀನು ನಿರತನಾದರೆ ಖಂಡಿತವಾಗಿ ಬದುಕುವೆ. ಹಾಗೆಯೇ ಕೆಟ್ಟವರ ಗುಂಪಿನಲ್ಲಿ ಬಿದ್ದರೆ ಖಂಡಿತವಾಗಿ ಬೀಳುತ್ತೀಯೆ.

**ಯದೀಚ್ಛಸಿ ವಶೀಕರ್ತುಂ ಜಗದೇಕೇನ ಕರ್ಮಣಾ ।**
**ಪರಾಪವಾದಸಸ್ಯೇಭ್ಯೋ ಗಾಂ ಚರಂತೀಂ ನಿವಾರಯ ॥ ೩೩೯**

- ಸುಭಾಷಿತರತ್ನಭಾಂಡಾಗಾರ

ಒಂದೇ ಒಂದು ಕೆಲಸದಿಂದ ಲೋಕವನ್ನು ವಶಪಡಿಸಿಕೊಳ್ಳಲು ನೀನು ಬಯಸುವಿಯಾದರೆ ಪರನಿಂದೆ ಎಂಬ ಹುಲ್ಲನ್ನು ಮೇಯಲು ಹೋಗುವ ಹಸುವನ್ನು ಹಿಂತಿರುಗಿಸು.

**ಯದ್ಯುಚ್ಚೈರಪಿ ನ ಪರಾನುಪಕುರುಷೇ ತನ್ಮೃಷೈವ ತೇ ಜನ್ಮ ।**
**ಯದಿ ನೃಪ ಜನಿತವರ್ಷಃ ಕೋ ನಾಮ ಪಯೋಧರೋತ್ಕರ್ಷಃ ॥ ೩೪೦**

- ಹರಿಹರಸುಭಾಷಿತ, ೩-೩೯

ನೀನು ಗಣ್ಯನೆನಿಸಿ ಉನ್ನತನಾಗಿದ್ದರೂ ಅನ್ಯರಿಗೆ ಉಪಕಾರ ಮಾಡದಿದ್ದರೆ, ನಿನ್ನ ಜನ್ಮ ವ್ಯರ್ಥ. ಮಳೆ ಸುರಿಸದಿದ್ದರೆ, ಮೇಲಕ್ಕೇರಿರುವ ಮೋಡದ ಹೆಚ್ಚುಗಾರಿಕೆಯಾದರೂ ಏನು?

**ಯದೃಚ್ಛಯೋಪಲಬ್ಧೇನ ಸಂತುಷ್ಟೋ ಮಿತಭುಜ್ ಮುನಿಃ ।**
**ವಿವಿಕ್ತಶರಣಃ ಶಾಂತೋ ಮೈತ್ರಃ ಕರುಣ ಆತ್ಮವಾನ್ ॥ ೩೪೧**

- ಭಾಗವತ, ೩-೨೭-೮

ಅಕಸ್ಮಾತ್ತಾಗಿ ಬಂದ ಹಣದಿಂದ ಸಂತೋಷಪಡುತ್ತಾ, ಮಿತವಾಗಿ ಊಟ ಮಾಡುತ್ತಾ, ಮುನಿಜೀವನವನ್ನು ನಡೆಸುತ್ತಾ, ಏಕಾಂತವನ್ನಾಶ್ರಯಿಸುತ್ತಾ, ಶಾಂತನಾಗಿ, ಮಿತ್ರಭಾವದಿಂದಲೂ, ದಯೆಯಿಂದಲೂ ಕೂಡಿರುವವನೇ ಆತ್ಮಜ್ಞಾನಿ.

**ಯದ್ಧಾತ್ರಾ ನಿಜಭಾಲಪಟ್ಟಲಿಖಿತಂ ಸ್ತೋಕಂ ಮಹದ್ವಾ ಧನಂ**
**ತತ್ಪ್ರಾಪ್ನೋತಿ ಮರುಸ್ಥಲೇಽಪಿ ನಿತರಾಂ ಮೇರೌ ತತೋ ನಾಧಿಕಮ್ ।**
**ತದ್ಧೀರೋ ಭವ ವಿತ್ತವತ್ಸು ಕೃಪಣಾಂ ವೃತ್ತಿಂ ವೃಥಾ ಮಾ ಕೃಥಾಃ**
**ಕೂಪೇ ಪಶ್ಯ ಪಯೋನಿಧಾವಪಿ ಘಟೋ ಗೃಹ್ಣಾತಿ ತುಲ್ಯಂ ಜಲಮ್ ॥೩೪೨**

- ನೀತಿಶತಕ - ೪೭

ಸ್ವಲ್ಪವೋ ಬಹಳವೋ ಎಷ್ಟು ಹಣ ಬ್ರಹ್ಮನಿಂದ ಹಣೆಯಲ್ಲಿ ಬರೆಯಲ್ಪಟ್ಟಿದೆಯೋ ಅಷ್ಟನ್ನು ಮರುಭೂಮಿಯಲ್ಲಿದ್ದರೂ ಮಾನವನು ಪಡೆಯುತ್ತಾನೆ. ಚಿನ್ನದ ಬೆಟ್ಟವಾದ ಮೇರುಪರ್ವತದಲ್ಲಿದ್ದರೂ ಅದಕ್ಕಿಂತ ಹೆಚ್ಚಾಗಿ ಹೊಂದಲಾರ. ಆದ್ದರಿಂದ ಧೀರನಾಗಿರು. ಹಣವುಳ್ಳರಲ್ಲಿ ದೈನ್ಯವೃತ್ತಿಯನ್ನು ವ್ಯರ್ಥವಾಗಿ ಅವಲಂಬಿಸಬೇಡ. ಬಾವಿಯಲ್ಲಾಗಲಿ ಸಮುದ್ರದಲ್ಲಾಗಲಿ ಕೊಡವು ಅದು ಹಿಡಿಯುವಷ್ಟು ನೀರನ್ನು ಮಾತ್ರ ತೆಗೆದುಕೊಳ್ಳುತ್ತದೆ.

ಯಂ ಮಾತಾಪಿತರೌ ಕ್ಲೇಶಂ ಸಹೇತೇ ಸಂಭವೇ ನೃಣಾಂ ।
ನ ತಸ್ಯ ನಿಷ್ಕೃತಿಃ ಶಕ್ಯಾ ಕರ್ತುಂ ವರ್ಷಶತೈರಪಿ ॥ ೩೪೩

- ಮನುಸ್ಮೃತಿ, ೨-೨೨೭

ಮಕ್ಕಳು ಹುಟ್ಟುವಾಗ ತಾಯಿ ತಂದೆಗಳು ಯಾವ ಕಷ್ಟಗಳನ್ನು ಅನುಭವಿಸುತ್ತಾರೆಯೋ, ಆ ಋಣವನ್ನು ತೀರಿಸಿಕೊಳ್ಳಲು ನೂರು ವರ್ಷ ದುಡಿದರೂ ಸಾಲದು.

ಯಮಾಜೀವಂತಿ ಪುರುಷಂ ಸರ್ವಭೂತಾನಿ ಸಂಜಯ ।
ಪಕ್ವಂ ದ್ರುಮಮಿವಾಸಾದ್ಯ ತಸ್ಯ ಜೀವಿತಮರ್ಥವತ್ ॥ ೩೪೪

- ಮಹಾಭಾರತ, ಉದ್ಯೋಗ. ೧೩೩-೪೩

ಸಂಜಯ, ಹಣ್ಣುಗಳಿಂದ ತುಂಬಿದ ಮರದಂತೆ ಯಾವನನ್ನು ಸಕಲ ಜೀವಿಗಳು ಆಶ್ರಯಿಸಿ ಬದುಕುತ್ತವೆಯೋ ಅಂಥ ಪುರುಷನ ಜೀವನ ಸಾರ್ಥಕ.

- (ವಿದುಲೆ ತನ್ನ ಮಗನಿಗೆ ಹೇಳಿದ್ದು)

ಯಸ್ಯ ನ ವಿಪದಿ ವಿಷಾದಃ ಸಂಪದಿ ಹರ್ಷೋ ರಣೇ ನ ಭೀರುತ್ವಂ ।
ತಂ ಭುವನತ್ರಯತಿಲಕಂ ಜನಯತಿ ಜನನೀ ಸುತಂ ವಿರಲಮ್ ॥೩೪೫

- ಪಂಚತಂತ್ರ, ಮಿತ್ರಭೇದ - ೧೧೪

ಕಷ್ಟದಲ್ಲಿ ಯಾರಿಗೆ ಖಿನ್ನತೆ ಇರುವುದಿಲ್ಲವೋ, ಸಂಪತ್ತೊದಗಿದಾಗ ಯಾರಿಗೆ ಸಂತೋಷ ಇರುವುದಿಲ್ಲವೋ, ಯುದ್ಧದಲ್ಲಿ ಯಾರಿಗೆ ಭಯವಿರುವುದಿಲ್ಲವೋ, ಮೂರು ಲೋಕಕ್ಕೂ ತಿಲಕಪ್ರಾಯನಾದ ಅಂಥ ಮಗನನ್ನು ತಾಯಿ ಪಡೆಯುವುದು ಅಪರೂಪ.

ಯಸ್ಯ ವಾಙ್ಮನಸೀ ಶುದ್ಧೇ ಸಮ್ಯಗ್ಗುಪ್ತೇ ಚ ಸರ್ವದಾ ।
ಸ ವೈ ಸರ್ವಮವಾಪ್ನೋತಿ ವೇದಾಂತೋಪಗತಂ ಫಲಮ್ ॥೩೪೬

- ಮನುಸ್ಮೃತಿ, ೨-೧೬೦

ಯಾರ ಮಾತು, ಮನಸ್ಸು ಶುದ್ಧವಾಗಿಯೋ, ಚೆನ್ನಾಗಿ ಹತೋಟಿಯಲ್ಲಿವೆಯೋ ಅವನು ವೇದಾಂತದ ಎಲ್ಲ ಫಲವನ್ನೂ ಪಡೆಯುತ್ತಾನೆ.

ಯಸ್ಯಾಸ್ತಿ ಸರ್ವತ್ರ ಗತಿಃ ಸ ಕಸ್ಮಾತ್
ಸ್ವದೇಶರಾಗೇಣ ಹಿ ಯಾತಿ ನಾಶಂ ।

**ತಾತಸ್ಯ ಕೂಪೋಽಯಮಿತಿ ಬ್ರುವಾಣಾಃ**
**ಕ್ಷಾರಂ ಜಲಂ ಕಾಪುರುಷಾಃ ಪಿಬಂತಿ ॥ ೩೪೭**

- ಪಂಚತಂತ್ರ, ಮಿತ್ರಭೇದ-೩೫೧

ಯಾರಿಗೆ ಎಲ್ಲ ಕಡೆಯಲ್ಲಿಯೂ ಅವಕಾಶವಿರುವುದೋ ಅಂಥವನು ಏಕೆ ತನ್ನ ದೇಶದ ಮೇಲಿನ ಆಶೆಯ ಕಾರಣ ನಾಶ ಹೊಂದುತ್ತಾನೆ ? ಕೈಲಾಗದವರೀಗ 'ತಂದೆ ತೋಡಿಸಿದ ಬಾವಿ' ಎಂದು ಹೇಳುತ್ತಾ ಉಪ್ಪು ನೀರನ್ನು ಕುಡಿಯುತ್ತಾರೆ.

**ಯಸ್ಮಿನ್ ದೇಶೇ ನ ಸಂಮಾನೋ ನ ಮಿತ್ರಾಣಿ ನ ಬಾಂಧವಾಃ ।**
**ನ ಚ ವಿದ್ಯಾಗಮಃ ಕಶ್ಚಿತ್ತಂ ದೇಶಂ ಪರಿವರ್ಜಯೇತ್ ॥ ೩೪೮**

- ಹಿತೋಪದೇಶ, ಮಿತ್ರಲಾಭ - ೭೭

ಯಾವ ದೇಶದಲ್ಲಿ ಗೌರವ, ಸ್ನೇಹಿತರು, ಬಂಧುಗಳು, ವಿದ್ಯಾಲಾಭ ಇವು ಇಲ್ಲವೋ ಆ ದೇಶವನ್ನು ತ್ಯಾಗಮಾಡಬೇಕು.

**ಯಾವತ್ಸ್ವಸ್ಥಮಿದಂ ದೇಹಂ ಯಾವನ್ಮೃತ್ಯುಶ್ಚ ದೂರತಃ ।**
**ತಾವದಾತ್ಮಹಿತಂ ಕುರ್ಯಾತ್ ಪ್ರಾಣಾಂತೇ ಕಿಂ ಕರಿಷ್ಯಸಿ ॥ ೩೪೯**

- ಸುಭಾಷಿತರತ್ನಭಾಂಡಾಗಾರ

ದೇಹ ಚೆನ್ನಾಗಿ ಆರೋಗ್ಯವಾಗಿರುವಾಗ, ಸಾವು ಇನ್ನೂ ದೂರದಲ್ಲಿರುವಾಗ ಆತ್ಮಹಿತವಾದುದನ್ನು ಮಾಡಬೇಕು. ಪ್ರಾಣ ಹೋದಮೇಲೆ ಏನನ್ನು ಮಾಬಲ್ಲೆ?

**ಯಾವದ್ ಭ್ರಿಯೇತ ಜಠರಂ ತಾವತ್ ಸ್ವತ್ವಂ ಹಿ ದೇಹಿನಾಮ್ ।**
**ಅಧಿಕಂ ಯೋಽಭಿಮನ್ಯೇತ ಸ ಸ್ತೇನೋ ದಂಡಮರ್ಹತಿ ॥ ೩೫೦**

- ಭಾಗವತ, ೭-೧೪-೮

ಮನುಷ್ಯರಿಗೆ ಎಲ್ಲಿಯವರೆಗೂ ಹೊಟ್ಟೆಯನ್ನು ತುಂಬಬೇಕಾಗಿದೆಯೋ ಅಲ್ಲಿಯವರೆಗೂ ಅದು ತನ್ನದು; ಯಾರು ಇದಕ್ಕಿಂತ ಹೆಚ್ಚಾಗಿ ಬೇಕೆನ್ನುತ್ತಾನೋ ಅವನು ಕಳ್ಳನು; ಶಿಕ್ಷೆಗೆ ಅರ್ಹನು.

**ಯೇನ ಕೇನ ಪ್ರಕಾರೇಣ ಯಸ್ಯ ಕಸ್ಯಾಪಿ ದೇಹಿನಃ ।**
**ಸಂತೋಷಂ ಜನಯೇತ್ ಪ್ರಾಜ್ಞಸ್ತದೇವೇಶ್ವರಪೂಜನಮ್ ॥ ೩೫೧**

- ಸಮಯೋಚಿತಪದ್ಯಮಾಲಿಕಾ

ಬುದ್ಧಿಶಾಲಿಯು ಯಾವುದೇ ಪ್ರಕಾರದಿಂದ ಯಾವ ಒಬ್ಬ ಮನುಷ್ಯನಿಗಾದರೂ

ಸಂತೋಷವನ್ನುಂಟುಮಾಡಬೇಕು. ಹೀಗೆ ಸಂತೋಷಗೊಳಿಸುವುದೇ ಈಶ್ವರ ಪೂಜೆ.

**ಯೇನಾಸ್ಯ ಪಿತರೋ ಯಾತಾ ಯೇನ ಯಾತಾ ಪಿತಾಮಹಾಃ ।**
**ತೇನ ಯಾಯಾತ್ಸತಾಂ ಮಾರ್ಗಂ ತೇನ ಗಚ್ಛನ್ ನ ರಿಷ್ಯತೇ ॥ ೩೫೨**

- ಮನುಸ್ಮೃತಿ, ೪-೧೭೮

ತಂದೆ ತಾತಂದಿರು ನಡೆದ ಸನ್ಮಾರ್ಗದಲ್ಲಿ ನಡೆದರೆ ಅಧರ್ಮಕ್ಕೆ ಅವಕಾಶ ವಿರುವುದಿಲ್ಲ.

**ಯೋ ಧ್ರುವಾಣಿ ಪರಿತ್ಯಜ್ಯ ಅಧ್ರುವಾಣಿ ನಿಷೇವತೇ ।**
**ಧ್ರುವಾಣಿ ತಸ್ಯ ನಶ್ಯಂತಿ ಅಧ್ರುವಂ ನಷ್ಟಮೇವ ಚ ॥ ೩೫೩**

- ಪಂಚತಂತ್ರ, ಮಿತ್ರಸಂಪ್ರಾಪ್ತಿ - ೧೪೪

ಯಾರು ಸ್ಥಿರವಾದವುಗಳನ್ನು ಬಿಟ್ಟು ಅಸ್ಥಿರವಾದುದನ್ನು ಆಶ್ರಯಿಸುವನೋ ಅಂಥವನಿಗೆ ಸ್ಥಿರವಾದವು ತಪ್ಪುತ್ತವೆ. ಅಸ್ಥಿರವಾದವಂತೂ ನಷ್ಟವಾದಂತೆಯೇ.

**ಯೋ ಹಿ ದತ್ವಾ ಗಜಶ್ರೇಷ್ಠಂ ಕಕ್ಷ್ಯಾಯಾಂ ಕುರುತೇ ಮನಃ ।**
**ರಜ್ಜುಸ್ನೇಹೇನ ಕಿಂ ತಸ್ಯ ತ್ಯಜತಃ ಕುಂಜರೋತ್ತಮಮ್ ॥ ೩೫೪**

- ರಾಮಾಯಣ, ಅಯೋಧ್ಯಾ. ೩೭-೩

ಆನೆಯನ್ನು ಬಿಟ್ಟುಕೊಟ್ಟು ಅದನ್ನು ಕಟ್ಟುವ ಹಗ್ಗದಲ್ಲಿ ಮನಸ್ಸಿಡುವಂತೆ! ಮಹಾಗಜವನ್ನೇ ತ್ಯಜಿಸತಕ್ಕವನಿಗೆ ಅದರ ಹಗ್ಗದ ಮೇಲೆ ಅಭಿಮಾನವೇಕೆ?

**ರಜೋಭಿಃ ಸಮಸಂಖ್ಯಾಕಾಃ ಪಾರ್ಥಿವೈರಿಹ ಜಂತವಃ ।**
**ತೇಷಾಂ ಯೇ ಕೇಚನೇಹಂತೇ ಶ್ರೇಯೋ ವೈ ಮನುಜಾದಯಃ ॥ ೩೫೫**

- ಭಾಗವತ, ೬-೧೪-೩

ಈ ಲೋಕದಲ್ಲಿ ಭೂಮಿಯ ಧೂಳಿನ ಕಣಗಳಂತೆ ಲೆಕ್ಕವಿಲ್ಲದಷ್ಟು ಪ್ರಾಣಿಗಳಿವೆ. ಅವುಗಳಲ್ಲಿ ಶ್ರೇಯಸ್ಸನ್ನು ಬಯಸುವ ಮನುಷ್ಯನೇ ಮೊದಲಾದವರು ಯಾವುದೋ ಒಂದಂಶ.

**ರತ್ನೈರ್ಮಹಾರ್ಹೈಸ್ತುತುಷುರ್ನ ದೇವಾ**
**ನ ಭೇಜಿರೇ ಭೀಮವಿಷೇಣ ಭೀತಿಮ್ ।**
**ಸುಧಾಂ ವಿನಾ ನ ಪ್ರಯಯುರ್ವಿರಾಮಂ**
**ನ ನಿಶ್ಚಿತಾರ್ಥಾದ್ವಿರಮಂತಿ ಧೀರಾಃ ॥ ೩೫೬**

- ನೀತಿಶತಕ - ೭೮

**ತಾತಸ್ಯ ಕೂಪೋऽಯಮಿತಿ ಬ್ರುವಾಣಾಃ**
**ಕ್ಷಾರಂ ಜಲಂ ಕಾಪುರುಷಾಃ ಪಿಬಂತಿ ॥ ೩೪೭**

- ಪಂಚತಂತ್ರ, ಮಿತ್ರಭೇದ-೩೫೧

ಯಾರಿಗೆ ಎಲ್ಲ ಕಡೆಯಲ್ಲಿಯೂ ಅವಕಾಶವಿರುವುದೋ ಅಂಥವನು ಏಕೆ ತನ್ನ ದೇಶದ ಮೇಲಿನ ಆಶೆಯ ಕಾರಣ ನಾಶ ಹೊಂದುತ್ತಾನೆ ? ಕೈಲಾಗದವರೀಗ 'ತಂದೆ ತೋಡಿಸಿದ ಬಾವಿ' ಎಂದು ಹೇಳುತ್ತಾ ಉಪ್ಪು ನೀರನ್ನು ಕುಡಿಯುತ್ತಾರೆ.

**ಯಸ್ಮಿನ್ ದೇಶೇ ನ ಸಂಮಾನೋ ನ ಮಿತ್ರಾಣಿ ನ ಬಾಂಧವಾಃ ।**
**ನ ಚ ವಿದ್ಯಾಗಮಃ ಕಶ್ಚಿತ್ತಂ ದೇಶಂ ಪರಿವರ್ಜಯೇತ್ ॥ ೩೪೮**

- ಹಿತೋಪದೇಶ, ಮಿತ್ರಲಾಭ - ೭೭

ಯಾವ ದೇಶದಲ್ಲಿ ಗೌರವ, ಸ್ನೇಹಿತರು, ಬಂಧುಗಳು, ವಿದ್ಯಾಲಾಭ ಇವು ಇಲ್ಲವೋ ಆ ದೇಶವನ್ನು ತ್ಯಾಗಮಾಡಬೇಕು.

**ಯಾವತ್ಸ್ವಸ್ಥಮಿದಂ ದೇಹಂ ಯಾವನ್ಮೃತ್ಯುಶ್ಚ ದೂರತಃ ।**
**ತಾವದಾತ್ಮಹಿತಂ ಕುರ್ಯಾತ್ ಪ್ರಾಣಾಂತೇ ಕಿಂ ಕರಿಷ್ಯಸಿ ॥ ೩೪೯**

- ಸುಭಾಷಿತರತ್ನಭಾಂಡಾಗಾರ

ದೇಹ ಚೆನ್ನಾಗಿ ಆರೋಗ್ಯವಾಗಿರುವಾಗ, ಸಾವು ಇನ್ನೂ ದೂರದಲ್ಲಿರುವಾಗ ಆತ್ಮಹಿತವಾದುದನ್ನು ಮಾಡಬೇಕು. ಪ್ರಾಣ ಹೋದಮೇಲೆ ಏನನ್ನು ಮಾಬಲ್ಲೆ?

**ಯಾವದ್ ಭ್ರಿಯೇತ ಜಠರಂ ತಾವತ್ ಸ್ವತ್ವಂ ಹಿ ದೇಹಿನಾಮ್ ।**
**ಅಧಿಕಂ ಯೋऽಭಿಮನ್ಯೇತ ಸ ಸ್ತೇನೋ ದಂಡಮರ್ಹತಿ ॥ ೩೫೦**

- ಭಾಗವತ, ೭-೧೪-೮

ಮನುಷ್ಯರಿಗೆ ಎಲ್ಲಿಯವರೆಗೂ ಹೊಟ್ಟೆಯನ್ನು ತುಂಬಬೇಕಾಗಿದೆಯೋ ಅಲ್ಲಿಯವರೆಗೂ ಅದು ತನ್ನದು; ಯಾರು ಇದಕ್ಕಿಂತ ಹೆಚ್ಚಾಗಿ ಬೇಕೆನ್ನುತ್ತಾನೋ ಅವನು ಕಳ್ಳನು; ಶಿಕ್ಷೆಗೆ ಅರ್ಹನು.

**ಯೇನ ಕೇನ ಪ್ರಕಾರೇಣ ಯಸ್ಯ ಕಸ್ಯಾಪಿ ದೇಹಿನಃ ।**
**ಸಂತೋಷಂ ಜನಯೇತ್ ಪ್ರಾಜ್ಞಸ್ತದೇವೇಶ್ವರಪೂಜನಮ್ ॥ ೩೫೧**

- ಸಮಯೋಚಿತಪದ್ಯಮಾಲಿಕಾ

ಬುದ್ಧಿಶಾಲಿಯು ಯಾವುದೇ ಪ್ರಕಾರದಿಂದ ಯಾವ ಒಬ್ಬ ಮನುಷ್ಯನಿಗಾದರೂ

ಸಂತೋಷವನ್ನುಂಟುಮಾಡಬೇಕು. ಹೀಗೆ ಸಂತೋಷಗೊಳಿಸುವುದೇ ಈಶ್ವರ ಪೂಜೆ.

**ಯೇನಾಸ್ಯ ಪಿತರೋ ಯಾತಾ ಯೇನ ಯಾತಾ ಪಿತಾಮಹಾಃ ।**
**ತೇನ ಯಾಯಾತ್ಸತಾಂ ಮಾರ್ಗಂ ತೇನ ಗಚ್ಛನ್ ನ ರಿಷ್ಯತೇ ॥ ೩೫೨**

- ಮನುಸ್ಮೃತಿ, ೪-೧೭೮

ತಂದೆ ತಾತಂದಿರು ನಡೆದ ಸನ್ಮಾರ್ಗದಲ್ಲಿ ನಡೆದರೆ ಅಧರ್ಮಕ್ಕೆ ಅವಕಾಶವಿರುವುದಿಲ್ಲ.

**ಯೋ ಧ್ರುವಾಣಿ ಪರಿತ್ಯಜ್ಯ ಅಧ್ರುವಾಣಿ ನಿಷೇವತೇ ।**
**ಧ್ರುವಾಣಿ ತಸ್ಯ ನಶ್ಯಂತಿ ಅಧ್ರುವಂ ನಷ್ಟಮೇವ ಚ ॥ ೩೫೩**

- ಪಂಚತಂತ್ರ, ಮಿತ್ರಸಂಪ್ರಾಪ್ತಿ - ೧೪೪

ಯಾರು ಸ್ಥಿರವಾದವುಗಳನ್ನು ಬಿಟ್ಟು ಅಸ್ಥಿರವಾದುದನ್ನು ಆಶ್ರಯಿಸುವನೋ ಅಂಥವನಿಗೆ ಸ್ಥಿರವಾದವು ತಪ್ಪುತ್ತವೆ. ಅಸ್ಥಿರವಾದವಂತೂ ನಷ್ಟವಾದಂತೆಯೇ.

**ಯೋ ಹಿ ದತ್ವಾ ಗಜಶ್ರೇಷ್ಠಂ ಕಕ್ಷ್ಯಾಯಾಂ ಕುರುತೇ ಮನಃ ।**
**ರಜ್ಜುಸ್ನೇಹೇನ ಕಿಂ ತಸ್ಯ ತ್ಯಜತಃ ಕುಂಜರೋತ್ತಮಮ್ ॥ ೩೫೪**

- ರಾಮಾಯಣ, ಅಯೋಧ್ಯಾ. ೩೭-೩

ಆನೆಯನ್ನು ಬಿಟ್ಟುಕೊಟ್ಟು ಅದನ್ನು ಕಟ್ಟುವ ಹಗ್ಗದಲ್ಲಿ ಮನಸ್ಸಿಡುವಂತೆ! ಮಹಾಗಜವನ್ನೇ ತ್ಯಜಿಸತಕ್ಕವನಿಗೆ ಅದರ ಹಗ್ಗದ ಮೇಲೆ ಅಭಿಮಾನವೇಕೆ?

**ರಜೋಭಿಃ ಸಮಸಂಖ್ಯಾಕಾಃ ಪಾರ್ಥಿವೈರಿಹ ಜಂತವಃ ।**
**ತೇಷಾಂ ಯೇ ಕೇಚನೇಹಂತೇ ಶ್ರೇಯೋ ವೈ ಮನುಜಾದಯಃ ॥ ೩೫೫**

- ಭಾಗವತ, ೬-೧೪-೩

ಈ ಲೋಕದಲ್ಲಿ ಭೂಮಿಯ ಧೂಳಿನ ಕಣಗಳಂತೆ ಲೆಕ್ಕವಿಲ್ಲದಷ್ಟು ಪ್ರಾಣಿಗಳಿವೆ. ಅವುಗಳಲ್ಲಿ ಶ್ರೇಯಸ್ಸನ್ನು ಬಯಸುವ ಮನುಷ್ಯನೇ ಮೊದಲಾದವರು ಯಾವುದೋ ಒಂದಂಶ.

**ರತ್ನೈರ್ಮಹಾರ್ಹೈಸ್ತುತುಷುರ್ನ ದೇವಾ**
**ನ ಭೇಜಿರೇ ಭೀಮವಿಷೇಣ ಭೀತಿಮ್ ।**
**ಸುಧಾಂ ವಿನಾ ನ ಪ್ರಯಯುರ್ವಿರಾಮಂ**
**ನ ನಿಶ್ಚಿತಾರ್ಥಾದ್ವಿರಮಂತಿ ಧೀರಾಃ ॥ ೩೫೬**

- ನೀತಿಶತಕ - ೭೮

ಬಹಳ ಬೆಲೆಬಾಳುವ ರತ್ನಗಳಿಂದ ದೇವತೆಗಳು ತೃಪ್ತಿಯನ್ನು ಹೊಂದಲಿಲ್ಲ. ಭಯಂಕರವಾದ ವಿಷದಿಂದ ಹೆದರಲೂ ಇಲ್ಲ. ಅಮೃತ ಸಿಗುವವರೆಗೂ ವಿಶ್ರಾಂತಿಯನ್ನು ತೆಗೆದುಕೊಳ್ಳಲಿಲ್ಲ ಆದುದರಿಂದ ಧೀರರು ತಾವು ನಿಶ್ಚಯಿಸಿದ ಕೆಲಸ ಪೂರೈಸುವವರೆಗೂ ಸುಮ್ಮನಾಗುವುದೇ ಇಲ್ಲ.

**ರಾಜಾ ತುಷ್ಟೋ ಹಿ ಭೃತ್ಯಾನಾಮರ್ಥಮಾತ್ರಂ ಪ್ರಯಚ್ಛತಿ ।**
**ತೇ ತು ಸಂಮಾನಮಾತ್ರೇಣ ಪ್ರಾಣೈರಪ್ಯುಪಕುರ್ವತೇ ॥** ೩೫೭

- ಪಂಚತಂತ್ರ, ಮಿತ್ರಭೇದ - ೬೧

ಸಂತೋಷಪಟ್ಟ ರಾಜನು ಸೇವಕರಿಗೆ ಹಣವನ್ನು ಮಾತ್ರ ಕೊಡುತ್ತಾನೆ. ಆದರೆ ಆ ಸೇವಕರು ಕೇವಲವಾದ ಸನ್ಮಾನಕ್ಕೆ ತಮ್ಮ ಪ್ರಾಣಗಳನ್ನೇ ಅರ್ಪಿಸಿ ಉಪಕಾರ ಮಾಡುತ್ತಾರೆ.

**ರಾಯಃ ಕಳತ್ರಂ ಪಶವಃ ಸುತಾದಯೋ**
**ಗೃಹಾ ಮಹೀ ಕುಂಜರಕೋಶಭೂತಯಃ ।**
**ಸರ್ವೇಽರ್ಥಕಾಮಾಃ ಕ್ಷಣಭಂಗುರಾಯುಷಃ**
**ಕುರ್ವಂತಿ ಮರ್ತ್ಯಸ್ಯ ಕಿಯತ್ಪ್ರಿಯಂ ಚಲಾಃ ॥** ೩೫೮

- ಭಾಗವತ, ೭-೭-೩೯

ಒಂದು ಕ್ಷಣಕಾಲ ಆಯುಸ್ಸುಳ್ಳ ಮನಷ್ಯನಿಗೆ ಚಂಚಲವಾದ ಹಣ, ಹೆಂಡತಿ, ಪಶುಗಳು, ಮಕ್ಕಳು, ಮನೆ, ಭೂಮಿ, ಆನೆ, ಬೊಕ್ಕಸ, ಸಂಪತ್ತು ಮೊದಲಾದ ಎಲ್ಲಾ ಅರ್ಥಕಾಮಗಳೂ, ಎಷ್ಟು ಸಂತೋಷವನ್ನು ಮಾಡಿಯಾವು?

**ರೇ ರೇ ಚಾತಕ ಸಾವಧಾನಮನಸಾ ಮಿತ್ರ ಕ್ಷಣಂ ಶ್ರೂಯತಾಂ**
**ಅಂಭೋದಾ ಬಹವೋ ಹಿ ಸಂತಿ ಗಗನೇ ಸರ್ವೇ ತು ನೈತಾದೃಶಾಃ ।**
**ಕೇಚಿದ್ವೃಷ್ಟಿಭಿರಾರ್ದ್ರಯಂತಿ ವಸುಧಾಂ ಗರ್ಜಂತಿ ಕೇಚಿದ್ವೃಥಾ**
**ಯಂ ಯಂ ಪಶ್ಯತಿ ತಸ್ಯ ತಸ್ಯ ಪುರತೋ ಮಾ ಬ್ರೂಹಿ ದೀನಂ ವಚಃ ॥** ೩೫೯

- ನೀತಿಶತಕ - ೪೯

ಎಲೈ, ಸ್ನೇಹಿತನಾದ ಚಾತಕಪಕ್ಷಿಯೇ, ಸಾವಧಾನವಾದ ಮನಸ್ಸಿನಿಂದ ಒಂದು ಕ್ಷಣಕಾಲ ಕೇಳು. ಆಕಾಶದಲ್ಲಿ ಬೇಕಾದಷ್ಟು ಮೋಡಗಳಿವೆ. ಆದರೆ ಎಲ್ಲವೂ ಒಂದೇ ರೀತಿಯಲ್ಲಿಲ್ಲ. ಕೆಲವು ಮಳೆಯಿಂದ ಭೂಮಿಯನ್ನು ನೆನೆಸುತ್ತವೆ. ಕೆಲವು ವ್ಯರ್ಥವಾಗಿ ಗರ್ಜಿಸುತ್ತವೆ. ಆದ್ದರಿಂದ ಕಂಡಕಂಡವನ ಮುಂದೆಲ್ಲಾ ದೈನ್ಯದ ನುಡಿ ನುಡಿಯಬೇಡ.

**ರೋಹತೇ ಸಾಯಕೈರ್ವಿದ್ಧಂ ವನಂ ಪರಶುನಾ ಹತಂ ।**
**ವಾಚಾ ದುರುಕ್ತಂ ಭೀಭತ್ಸಂ ನ ಸಂರೋಹತಿ ವಾಕ್‌ಕ್ಷತಮ್ ॥ ३६०**

- ಮಹಾಭಾರತ, ಉದ್ಯೋಗ. ३४-೭೮

ಬಾಣಗಳಿಂದಾದ ಗಾಯ ಗುಣಹೊಂದುತ್ತದೆ. ಕೊಡಲಿಯಿಂದ ಕಡಿದ ವನವು ಚಿಗುರುತ್ತದೆ. ಆದರೆ ಕೆಟ್ಟಮಾತಿನಿಂದಾದ ಗಾಯ ತೀವ್ರವಾದದ್ದು. ಅದು ಗುಣ ಹೊಂದುವುದಿಲ್ಲ.

**ಲಕ್ಷ್ಮೀರ್ವಸತಿ ಜಿಹ್ವಾಗ್ರೇ ಜಿಹ್ವಾಗ್ರೇ ಮಿತ್ರಬಾಂಧವಾಃ ।**
**ಜಿಹ್ವಾಗ್ರೇ ಬಂಧನಂ ಪ್ರಾಪ್ತಂ ಜಿಹ್ವಾಗ್ರೇ ಮರಣಂ ಧ್ರುವಮ್ ॥ ३೬೧**

- ಸುಭಾಷಿತರತ್ನಭಾಂಡಾಗಾರ

ನಾಲಗೆಯ ತುದಿಯಲ್ಲಿ ಲಕ್ಷ್ಮಿ ನೆಲಸಿದ್ದಾಳೆ; ಮಿತ್ರರೂ ಬಾಂಧವರೂ ನಾಲಗೆಯ ತುದಿಯಲ್ಲಿಯೇ ; ಬಂಧನವೂ ಅದರಿಂದಲೇ ; ನಿಜವಾಗಿ ಮರಣವೂ ಅದರಿಂದಲೇ.

**ಲಾಂಗೂಲಚಾಲನಮಧಶ್ಚರಣಾವಪಾತಂ**
**ಭೂಮೌ ನಿಪತ್ಯ ವದನೋದರದರ್ಶನಂ ಚ ।**
**ಶ್ವಾ ಪಿಂಡದಸ್ಯ ಕುರುತೇ ಗಜಪುಂಗವಸ್ತು**
**ಧೀರಂ ವಿಲೋಕಯತಿ ಚಾಟುಶತೈಶ್ಚ ಭುಂಕ್ತೇ ॥ ३೬೨**

- ನೀತಿಶತಕ - ३೯

ನಾಯಿಯು ತನಗೆ ಅನ್ನ ಹಾಕುವವನ ಎದುರಿನಲ್ಲಿ ಬಾಲ ಅಲ್ಲಾಡಿಸುತ್ತದೆ. ಕಾಲನ್ನು ಬಡಿಯುತ್ತದೆ. ಭೂಮಿಯ ಮೇಲೆ ಬಿದ್ದು ಬಾಯಿ, ಹೊಟ್ಟೆಗಳನ್ನು ತೋರಿಸುತ್ತದೆ. ಆದರೆ ಸಲಗವು ಗಂಭೀರವಾಗಿ ನೋಡುತ್ತದೆ ಮತ್ತು ಉಪಚಾರದ ಮಾತುಗಳಿಂದ ಊಟ ಮಾಡುತ್ತದೆ.

**ಲೋಕೇ ಪ್ರಕೃತಿಭಿನ್ನೇಽಸ್ಮಿನ್ನ ಕಶ್ಚಿತ್ ಕಸ್ಯಚಿತ್ ಪ್ರಿಯಃ ।**
**ಕಾರ್ಯಕಾರಣಸಂಬದ್ಧಂ ವಾಲುಕಾಮುಷ್ಟಿವಜ್ಜಗತ್ ॥ ३೬३**

- ಸೌಂದರನಂದ, ೧೫-३೫

ಭಿನ್ನ ಸ್ವಾಭಾವವುಳ್ಳ ಈ ಲೋಕದಲ್ಲಿ ಯಾರಿಗೆ ಯಾವನು ಪ್ರಿಯನಲ್ಲ. ಕಾರ್ಯಾರ್ಥವಾಗಿ ಒಂದಾನೊಂದು ಕಾರಣವಿರುವುದರಿಂದ ಜಗತ್ತಿನ ಜನರು ಮುಷ್ಟಿಯಲ್ಲಿ ಹಿಡಿದ ಮರಳಿನಂತೆ ಸೇರಿಕೊಂಡಿದ್ದಾರೆ.

**ವಚಸ್ತತ್ರ ಪ್ರಯೋಕ್ತವ್ಯಂ ಯತ್ರೋಕ್ತಂ ಲಭತೇ ಫಲಂ ।**
**ಸ್ಥಾಯೀಭವತಿ ಚಾತ್ಯಂತಂ ರಾಗಃ ಶುಕ್ಲಪಟೇ ಯಥಾ ॥ ೩೬೪**

- ಪಂಚತಂತ್ರ, ಮಿತ್ರಭೇದ- ೩೪

ಬಿಳಿಯ ಬಟ್ಟೆಯ ಮೇಲೆ ಹಾಕಿದ ಬಣ್ಣವು ಸ್ಥಿರವಾಗಿ ನಿಲ್ಲುವುದು. ಹಾಗೆ ಎಲ್ಲಿ ಹೇಳಿದ ಮಾತು ಸ್ಥಿರವಾಗಿ ನಿಂತು ಪ್ರಯೋಜನಕಾರಿಯಾಗುವುದೋ ಅಲ್ಲಿ ಮಾತು ಹೇಳಬೇಕು.

**ವರ್ಧತ್ಯಧರ್ಮೇಣ ನರಸ್ತತೋ ಭದ್ರಾಣಿ ಪಶ್ಯತಿ ।**
**ತತಃ ಸಪತ್ನಾನ್ ಜಯತಿ ಸಮೂಲಸ್ತು ವಿನಶ್ಯತಿ ॥ ೩೬೫**

- ಮಹಾಭಾರತ, ವನ. ೯೪-೪

ಅಧರ್ಮದಿಂದ ಮನುಷ್ಯನು ಮೇಲಕ್ಕೆ ಏರುತ್ತಾನೆ. ಒಳ್ಳೆಯದನ್ನು ಕಾಣುತ್ತಾನೆ. ವೈರಿಗಳನ್ನು ಜಯಿಸುತ್ತಾನೆ. ಕಡೆಗೆ ಬುಡಸಹಿತ ನಾಶವಾಗುತ್ತಾನೆ!

**ವನೇऽಪಿ ಸಿಂಹಾ ಮೃಗಮಾಂಸಭಕ್ಷ್ಯಾ**
**ಬುಭುಕ್ಷಿತಾ ನೈವ ತೃಣಂ ಚರಂತಿ ।**
**ಏವಂ ಕುಲೀನಾ ವ್ಯಸನಾಭಿಭೂತಾ**
**ನ ನೀತಿಮಾರ್ಗಂ ಪರಿಲಂಘಯಂತಿ ॥ ೩೬೬**

- ಪಂಚತಂತ್ರ, ಲಬ್ಧಪ್ರಣಾಶ - ೭೧

ಪ್ರಾಣಿಗಳ ಮಾಂಸವನ್ನು ತಿನ್ನುವ ಅಭ್ಯಾಸವುಳ್ಳ ಸಿಂಹಗಳು ಕಾಡಿನಲ್ಲಿ ಹಸಿವಾದಾಗಲೂ ಹುಲ್ಲು ತಿನ್ನುವುದಿಲ್ಲ. ಹಾಗೆಯೇ ಒಳ್ಳೆಯ ವಂಶದಲ್ಲಿ ಹುಟ್ಟಿದವರು ಕಷ್ಟಗಳಿಗೋಸ್ಕರವಾದರೂ ನೀತಿಯ ಮಾರ್ಗವನ್ನು ಎಂದೂ ಮೀರುವುದಿಲ್ಲ.

**ವಂಶಭವೋ ಗುಣವಾನಪಿ**
**ಸಂಗವಿಶೇಷೇಣ ಪೂಜ್ಯತೇ ಪುರುಷಃ ।**
**ನ ಹಿ ತುಂಬೀಫಲವಿಕಲೋ**
**ವೀಣಾದಂಡಃ ಪ್ರಯಾತಿ ಮಹಿಮಾನಮ್ ॥ ೩೬೭**

- ರಸಗಂಗಾಧರ

ಉತ್ತಮ ವಂಶದಲ್ಲಿ ಹುಟ್ಟಿರಲಿ, ಗುಣವಂತನಾಗಿರಲಿ, ಸತ್ಸಂಗ ವಿಶೇಷದಿಂದ ಪುರುಷನು ಪೂಜ್ಯನಾಗುತ್ತಾನೆ. ಸೋರೆಬುರುಡೆಯಿಲ್ಲದಿದ್ದಲ್ಲಿ ವೀಣಾದಂಡಕ್ಕೆ ಯಾವ ಮಹಿಮೆಯೂ ದೊರೆಯದು (ವೀಣಾದಂಡವೂ ವಂಶಭವ = ಬಿದಿರಿನಿಂದ ಆದದ್ದು ; ಗುಣವಾನ್ = ತಂತಿಗಳಿಂದ ಯುಕ್ತವಾದದ್ದು).

ವ್ಯಸನೇ ಕ್ಲಿಶ್ಯಮಾನಂ ಹಿ ಯೋ ಮಿತ್ರಂ ನಾಭಿಪದ್ಯತೇ ।
ಅನುನೀಯ ಯಥಾಶಕ್ತಿ ತಂ ನೃಶಂಸಂ ವಿದುರ್ಬುಧಾಃ ॥ ೩೬೮

- ಮಹಾಭಾರತ, ಉದ್ಯೋಗ. ೯೩-೧೦

ಕಷ್ಟದಲ್ಲಿ ಸಿಕ್ಕಿಕೊಂಡಿರುವ ಮಿತ್ರನಿಗೆ ಸಮಾಧಾನ ಹೇಳಿ ಯಥಾಶಕ್ತಿಯಾಗಿ ಯಾವನು ನೆರವನ್ನು ನೀಡುವುದಿಲ್ಲವೋ, ಅವನನ್ನು ಕ್ರೂರಿಯೆಂದು ವಿದ್ವಾಂಸರು ತಿಳಿಯುತ್ತಾರೆ.

ವ್ಯಾಘ್ರೀವ ತಿಷ್ಠತಿ ಜರಾ ಪರಿತರ್ಜಯಂತೀ
ರೋಗಾಶ್ಚ ಶತ್ರವ ಇವ ಪ್ರಹರಂತಿ ದೇಹೇ ।
ಆಯುಃ ಪರಿಸ್ರವತಿ ಭಿನ್ನಘಟಾದಿವಾಂಭಃ
ಲೋಕಸ್ತಥಾಪ್ಯಹಿತಮಾಚರತೀತಿ ಚಿತ್ರಮ್ ॥ ೩೬೯

- ವೈರಾಗ್ಯಶತಕ - ೧೦೮

ಮುಪ್ಪು ಹೆಣ್ಣು ಹುಲಿಯಂತೆ ಹಿಂದೆ ನಿಂತು ಹೆದರಿಸುತ್ತಿದೆ. ರೋಗಗಳು ಶತ್ರುಗಳಂತೆ ದೇಹವನ್ನು ನೋಯಿಸುತ್ತವೆ. ಒಡೆದ ಮಡಕೆಯಿಂದ ನೀರು ಸೋರುವಂತೆ ಆಯಸ್ಸು ಕಳೆದುಹೋಗುತ್ತಿದೆ. ಆದರೂ ಮನುಷ್ಯರು ಕೆಡುಕು ಮಾಡುತ್ತಾರೆ ಎಂಬುದೇ ವಿಚಿತ್ರ.

ವಾಣೀ ರಸವತೀ ಯಸ್ಯ ಭಾರ್ಯಾ ಪ್ರೇಮವತೀ ಸತೀ ।
ಲಕ್ಷ್ಮೀರ್ದಾನವತೀ ಯಸ್ಯ ಸಫಲಂ ತಸ್ಯ ಜೀವಿತಮ್ ॥ ೩೭೦

- ಸುಭಾಷಿತರತ್ನಸಮುಚ್ಚಯ

ಯಾರ ಮಾತು ರುಚಿಯಾಗಿದೆಯೋ, ಪತ್ನಿ ಪ್ರೇಮಮಯಿಯಾಗಿರುವಳೋ ಹಣವು ದಾನಕ್ಕೆ ಉಪಯೋಗವಾಗುತ್ತದೆಯೋ, ಅವನ ಬದುಕು ಸಫಲ.

ವ್ಯಾಧೇರನಿಷ್ಟಸಂಸ್ಪರ್ಶಾತ್ ಶ್ರಮಾದಿಷ್ಟವಿವರ್ಜನಾತ್ ।
ದುಃಖಂ ಚತುರ್ಭಿಃ ಶಾರೀರಂ ಕಾರಣೈಃ ಸಂಪ್ರವರ್ತತೇ ॥ ೩೭೧

- ಮಹಾಭಾರತ, ಅರಣ್ಯ. ೨-೨೨

ರೋಗದಿಂದ, ಅನಿಷ್ಟ ಪ್ರಾಪ್ತಿಯಿಂದ, ಆಯಾಸದಿಂದ ಮತ್ತು ಇಷ್ಟ ವಿಯೋಗದಿಂದ - ಹೀಗೆ ನಾಲ್ಕು ಕಾರಣಗಳಿಂದ ದೈಹಿಕದುಃಖವು ಪ್ರಾಪ್ತವಾಗುತ್ತದೆ.

**ವಾಯುರ್ಯಥಾ ಘನಾನೀಕಂ ತೃಣಂ ತೂಲಂ ರಜಾಂಸಿ ಚ ।**
**ಸಂಯೋಜ್ಯಾಕ್ಷಿಪತೇ ಭೂಯಸ್ತಥಾ ಭೂತಾನಿ ಭೂತಕೃತ್ ।।೩೭೨**

- ಭಾಗವತ, ೧೦-೮೨-೪೪

ಹೇಗೆ ಗಾಳಿಯು ಮೋಡಗಳ ಸೈನ್ಯವನ್ನೂ, ಹುಲ್ಲನ್ನೂ, ಹತ್ತಿಯನ್ನೂ ಮತ್ತು ಧೂಳುಗಳನ್ನೂ ಒಟ್ಟಿಗೆ ಸೇರಿಸಿ ಎಸೆಯುತ್ತದೆಯೋ ಹಾಗೆಯೇ ಪರಮಾತ್ಮನು ಪ್ರಾಣಿಗಳನ್ನು ಅತ್ತಿಂದಿತ್ತ ಎಸೆಯುತ್ತಾನೆ.

**ವಿಜ್ಞಾನಗುಣಮಹಾರ್ಘೇ ಪುರುಷೇ ದ್ವೇಷ್ಯತ್ವಮಪಿ ರಮಣೀಯಂ ।**
**ಜನನಿಂದಿತೇ ಪುನರ್ಜನೇ ಪ್ರಿಯತ್ವೇನಾಪಿ ಲಜ್ಜಾಮಹೇ ।। ೩೭೩**

- ಹಾಲನಸಪ್ತಶತೀ, ೩-೬೭

ಉತ್ತಮವಾದ ವಿದ್ಯೆ, ಗುಣ ಇವುಗಳಿಂದ ಶ್ರೇಷ್ಠನಾದವನೊಡನೆ ಹಗೆತನವೂ ಸುಂದರವಾಗಿರುತ್ತದೆ. ಆದರೆ ಎಲ್ಲರಿಂದಲೂ ನಿಂದಿತನಾದವನೊಡನೆ ಗೆಳೆತನವು ನಾಚಿಗೆಗೇಡು.

**ವಿದ್ವತ್ಸು ವಿಮಲಜ್ಞಾನಾ ವಿರಕ್ತಾ ಯತಿಷು ಸ್ಥಿತಾಃ ।**
**ಸ್ವೀಯೇಷು ಚ ಗರೋದ್ಗಾರಾ ನಾನಾಕಾರಾಃ ಕ್ಷಿತೌ ಖಲಾಃ ।।೩೭೪**

- ರಸಗಂಗಾಧರ

ಈ ಭೂಮಿಯಲ್ಲಿ ದುರ್ಜನರು ನಾನಾಕಾರದಲ್ಲಿ ಕಾಣಿಸಿಕೊಳ್ಳುತ್ತಾರೆ. ವಿದ್ವಾಂಸರೆದುರಿಗೆ ಶುದ್ಧವಾದ ಜ್ಞಾನವುಳ್ಳವರಾಗಿ, ಯತಿಗಳೆದುರಿಗೆ ವಿರಕ್ತರಾಗಿ ಕಾಣಿಸುತ್ತಾರೆ. ತಮ್ಮವರ (ದಾಯಾದರ) ವಿಷಯದಲ್ಲಿ ವಿಷವನ್ನೇ ಕಾರುತ್ತಾರೆ.

**ವಿದ್ಯಾತಪೋಽಧಿಕಾನಾಂ ಚ ಪ್ರಥಮಾಸನಮುಚ್ಯತೇ ।**
**ಪಂಕ್ತೌ ಸಹ ಸ್ಥಿತಾನಾಂ ತು ಭೋಜನಾದಿ ಸಮಂ ಸ್ಮೃತಮ್ ।। ೩೭೫**

- ಹಾರೀತ

ವಿದ್ಯೆ ಮತ್ತು ತಪಸ್ಸಿನಿಂದ ಅಧಿಕರಾದವರಿಗೆ ಅಗ್ರಾಸನವನ್ನು ನೀಡಬೇಕು. ಪಂಕ್ತಿಯಲ್ಲಿ ಕುಳಿತವರೆಲ್ಲರಿಗೂ ಭೋಜನವೇ ಮೊದಲಾದ್ದು ಸಮನಾಗಿರಬೇಕು.

**ವಿದುಷಾಂ ವದನಾದ್ವಾಚಃ ಸಹಸಾ ಯಾಂತಿ ನೋ ಬಹಿಃ ।**
**ಯಾತಾಶ್ಚೇನ್ನ ಪರಾಂಚಂತಿ ದ್ವಿರದಾನಾಂ ರದಾ ಇವ ।। ೩೭೬**

- ಭಾಮಿನೀವಿಲಾಸ, ೧-೬೩

ಪಂಡಿತರ ಬಾಯಿಂದ ಮಾತುಗಳು ಫಕ್ಕನೆ ಹೊರಗೆ ಬರುವುದಿಲ್ಲ. ಚೆನ್ನಾಗಿ ಯೋಚಿಸದೆ ಪಂಡಿತರು ಮಾತನಾಡುವುದಿಲ್ಲ. ಹಾಗೆ ಒಂದು ವೇಳೆ ಯಾವುದಾದರೂ ಮಾತು ಹೊರಬಿದ್ದರೆ ಅವು ಹಿಂತಿರುಗುವುದಿಲ್ಲ. ಆನೆಗಳಿಗೆ ದಂತಗಳು ಬರುವುದು ನಿಧಾನ. ಬಂದರೆ ಅವು ಹಿಂದಕ್ಕೆ ಹೋಗುವುದಿಲ್ಲ.

**ವಿದ್ವೈವಜ್ಞಂ ಗ್ರಾಮಂ ವಿಬುಧವಿಧುರಾಂ ಭೂಪತಿಸಭಾಂ**
**ಮುಖಂ ಶ್ರುತ್ಯಾ ಹೀನಂ ಮನುಜಪತಿಶೂನ್ಯಂ ಚ ವಿಷಯಂ ।**
**ಅನಾಚಾರಾನ್ ದಾರಾನಪಹರಿಕಥಂ ಕಾವ್ಯಮಪಿ ಚ**
**ಪ್ರವಕ್ತೃತ್ವಾಪೇತಂ ಗುರುಮಪಿ ಸುಬುದ್ಧಿಃ ಪರಿಹರೇತ್ ॥ ೩೭೭**

- ವಿಶ್ವಗುಣಾದರ್ಶ - ೫೫೫

ಬುದ್ಧಿವಂತನಾದ ಮನುಷ್ಯನು ಜ್ಯೋತಿಶ್ಶಾಸ್ತ್ರಜ್ಞರಿಲ್ಲದಿರುವ ಹಳ್ಳಿಯನ್ನೂ, ಪಂಡಿತರಿಲ್ಲದ ರಾಜಸಭೆಯನ್ನೂ, ವೇದಹೀನವಾದ ಮುಖವನ್ನೂ, ರಾಜನಿಲ್ಲದ ದೇಶವನ್ನೂ, ಆಚಾರವಿಲ್ಲದ ಹೆಂಡತಿಯನ್ನೂ, ಭಗವಂತನ ಗುಣಗಾನವಿಲ್ಲದ ಕಾವ್ಯವನ್ನೂ, ಚೆನ್ನಾಗಿ ಪಾಠಹೇಳದ ಗುರುವನ್ನು ಬಿಟ್ಟುಬಿಡಬೇಕು.

**ವಿನಾ ಶೀಲೇನ ವನಿತಾ ವಾಗ್ಮಿತಾ ವಿದ್ಯಯಾ ವಿನಾ ।**
**ವಿನಿಯೋಗೈರ್ವಿನಾ ವಿತ್ತಂ ಮಾಸ್ತು ಕಸ್ಯಾಪಿ ಜೀವಿನಃ ॥ ೩೭೮**

- ಹರಿಹರಸುಭಾಷಿತ, ೨-೩೨

ಶೀಲವಿಲ್ಲದ ಮಡದಿ, ವಿದ್ಯೆಯಿಲ್ಲದ ಮಾತಿನ ಝರಿ, ದಾನವಿಲ್ಲದ ಧನ ಇವು ಯಾರಿಗೂ ಬೇಡ.

**ವಿಭೂತಿಸ್ತ್ಯಾಗಹೀನೇವ ಸತ್ಯಹೀನೇವ ಭಾರತೀ ।**
**ವಿದ್ಯಾ ಪ್ರಶಮಹೀನೇವ ನ ಭಾತಿ ಸ್ತ್ರೀ ಪತಿಂ ವಿನಾ ॥ ೨೭೯**

- ರಾಮಾಯಣಮಂಜರೀ, ಅಯೋಧ್ಯಾ - ೮೭೬

ತ್ಯಾಗವಿಲ್ಲದ ಐಶ್ವರ್ಯದಂತೆ, ಸತ್ಯವಿಲ್ಲದ ವಾಕ್ಕಿನಂತೆ, ಶಾಂತಿಯಿಲ್ಲದ ವಿದ್ಯೆಯಂತೆ, ಪತಿಯಿಲ್ಲದ ಸ್ತ್ರೀ ಶೋಭಿಸುವುದಿಲ್ಲ.

**ವಿರೂಪೋ ಯಾವದಾದರ್ಶೇ ನಾತ್ಮನಃ ಪಶ್ಯತೇ ಮುಖಂ ।**
**ಮನ್ಯತೇ ತಾವದಾತ್ಮಾನಮನ್ಯೇಭ್ಯೋ ರೂಪವತ್ತರಮ್ ॥ ೩೮೦**

- ಮಹಾಭಾರತ, ಆದಿ. ೭೪-೮೭

ಕುರೂಪಿಯು ಕನ್ನಡಿಯಲ್ಲಿ ತನ್ನ ಮುಖವನ್ನು ನೋಡಿಕೊಳ್ಳುವವರೆಗೆ, ತಾನು ಎಲ್ಲರಿಗಿಂತಲೂ ರೂಪಶಾಲಿಯೆಂದು ತಿಳಿದುಕೊಂಡಿರುತ್ತಾನೆ.

**ವಿವಾಹಕಾಲೇ ರತಿಸಂಪ್ರಯೋಗೇ**
**ಪ್ರಾಣಾತ್ಯಯೇ ಸರ್ವಧನಾಪಹಾರೇ ।**
**ವಿಪ್ರಸ್ಯ ಚಾರ್ಥೇ ಹ್ಯನೃತಂ ವದೇತ**
**ಪಂಚಾನೃತಾನ್ಯಾಹುರಪಾತಕಾನಿ ॥** ೩೮೧

- ಮಹಾಭಾರತ, ಕರ್ಣ. ೬೯-೩೩

ವಿವಾಹ, ಪ್ರಣಯ, ಪ್ರಾಣನಾಶ, ಸರ್ವಧನಾಪಹಾರ - ಈ ಪ್ರಸಂಗಗಳಲ್ಲಿಯೂ, ವಿಪ್ರನ ಹಿತಕ್ಕಾಗಿಯೂ ಸುಳ್ಳನ್ನು ಹೇಳಬಹುದು. ಈ ಐದು ಸಂದರ್ಭದ ಸುಳ್ಳು ಪಾಪಜನಕವಲ್ಲವೆಂದು ಬಲ್ಲವರು ಹೇಳುತ್ತಾರೆ.

**ವಿವೇಕಾಲಂಕೃತಂ ಚೇತೋ ರೂಪಂ ಗುಣವಿವರ್ಧಿತಂ ।**
**ಸುಹೃದ್ಬಂಧುವೃತಾ ಲಕ್ಷ್ಮೀರ್ಲಕ್ಷಣಂ ಪುಣ್ಯಕರ್ಮಣಾಮ್ ॥** ೩೮೨

- ಭಾರತಮಂಜರೀ, ಉದ್ಯೋಗ. ೩-೫೩

ವಿವೇಕದಿಂದ ಭೂಷಿತವಾದ ಮನಸ್ಸು, ಗುಣಗಳಿಂದ ಸಮೃದ್ಧವಾದ ರೂಪ, ಮಿತ್ರರಿಂದಲೂ ಬಾಂಧವರಿಂದಲೂ ಸಹಿತವಾದ ಸಂಪತ್ತು ಇವು ಪುಣ್ಯವಂತರ ಲಕ್ಷಣ.

**ವಿಷಂ ವಿಷೇಣ ವ್ಯಥತೇ ವಜ್ರಂ ವಜ್ರೇಣ ಭಿದ್ಯತೇ ।**
**ಗಜೇಂದ್ರೋ ದೃಪ್ತಸಾರೇಣ ಗಜೇಂದ್ರೇಣೈವ ಬಧ್ಯತೇ ॥** ೩೮೩

- ನೀತಿಸಾರ, ೮-೬೭

ವಿಷವನ್ನು ವಿಷದಿಂದಲೇ ಪರಿಹರಿಸಬೇಕು. ವಜ್ರವನ್ನು ವಜ್ರದಿಂದಲೇ ಸೀಳಬೇಕು. ಬಲಿಷ್ಠವಾದ ಆನೆಯಿಂದಲೇ ಆನೆಯನ್ನು ಹಿಡಿಯಲು ಸಾಧ್ಯ.

**ವಿಷಾದಪ್ಯಮೃತಂ ಗ್ರಾಹ್ಯಂ ಬಾಲಾದಪಿ ಸುಭಾಷಿತಂ ।**
**ಅಮಿತ್ರಾದಪಿ ಸದ್ವೃತ್ತಂ ಅಮೇಧ್ಯಾದಪಿ ಕಾಂಚನಮ್ ॥** ೩೮೪

- ಮನುಸ್ಮೃತಿ, ೨-೨೩೯

ವಿಷದಿಂದಲೂ ಅಮೃತವನ್ನು ತೆಗೆದುಕೊಳ್ಳಬಹುದು. ಒಳ್ಳೆಯ ಮಾತನ್ನು ಚಿಕ್ಕವರಿಂದಲೂ ಗ್ರಹಿಸಬೇಕು. ಶತ್ರುಗಳಿಂದಲೂ ಒಳ್ಳೆಯ ನಡತೆಯನ್ನು ತಿಳಿಯಬೇಕು. ಕೊಳೆಯಲ್ಲಿದ್ದರೂ ಚಿನ್ನವನ್ನು ತೆಗೆದುಕೊಳ್ಳಬಹುದು.

**ವೀಣೇವ ಶ್ರೋತ್ರಹೀನಸ್ಯ ಲೋಲಾಕ್ಷೀವ ವಿಚಕ್ಷುಷಃ ।**
**ವ್ಯಸೋಃ ಕುಸುಮಮಾಲೇವ ಶ್ರೀಃ ಕದರ್ಯಸ್ಯ ನಿಷ್ಫಲಾ ॥** ೩೮೫

- ಸುಭಾಷಿತರತ್ನಭಾಂಡಾಗಾರ

ಕಿವುಡನಿಗೆ ವೀಣೆಯಂತೆ, ಕುರುಡನಿಗೆ ಸುಂದರಿಯಂತೆ, ಸತ್ತವನಿಗೆ ಹೂಮಾಲಿಕೆಯಂತೆ ಜಿಪುಣನ ಹಣವು ವ್ಯರ್ಥ.

**ವೃಥಾ ವೃಷ್ಟಿಃ ಸಮುದ್ರೇಷು ವೃಥಾ ತೃಪ್ತಸ್ಯ ಭೋಜನಂ।**
**ವೃಥಾ ದಾನಂ ಸಮರ್ಥೇಭ್ಯೋ ವೃಥಾ ದೀಪೋ ದಿವಾऽಪಿ ಚ ॥ ೩೮೬**

- ಸುಭಾಷಿತರತ್ನಸಮುಚ್ಚಯ, ೧-೪

ಸಮುದ್ರದಲ್ಲಿ ಮಳೆಯೂ, ಹೊಟ್ಟೆ ತುಂಬಿದವನಿಗೆ ಊಟವೂ ವ್ಯರ್ಥ. ಸಮರ್ಥರಿಗೆ ದಾನಮಾಡುವುದು ವ್ಯರ್ಥ. ಹಗಲು ದೀಪ ವ್ಯರ್ಥ.

**ವೈಕಲ್ಯಂ ಧರಣೀಪಾತಮಯಥೋಚಿತಜಲ್ಪನಂ ।**
**ಸಂನಿಪಾತಸ್ಯ ಚಿಹ್ನಾನಿ ಮದ್ಯಂ ಸರ್ವಾಣಿ ದರ್ಶಯೇತ್ ॥ ೩೮೭**

- ಸುಭಾಷಿತರತ್ನಸಮುಚ್ಚಯ

ತತ್ತರಿಸುವುದು, ನೆಲದ ಮೇಲೆ ಬೀಳುವುದು, ಮನಸ್ಸಿಗೆ ಬಂದಂತೆ ಮಾತಾಡುವುದು ಇವೆಲ್ಲವೂ ಸಂನಿಪಾತ ರೋಗದ ಮತ್ತು ಸದ್ಯದಲ್ಲಿ ಹಾಳಾಗುವ ಚಿಹ್ನೆಗಳು. ಇವನ್ನು ಮದ್ಯಪಾನ ತೋರಿಸಿಕೊಡುತ್ತದೆ.

**ಶತ್ರೌ ಸಾಂತ್ವಂ ಪ್ರತೀಕಾರಃ ಸರ್ವರೋಗೇಷು ಭೇಷಜಂ ।**
**ಮೃತ್ಯೋರ್ಮೃತ್ಯುಂಜಯಧ್ಯಾನಂ ದಾರಿದ್ರ್ಯೇ ತು ನ ಕಿಂಚನ ॥ ೩೮೮**

- ಕಲಿವಿಡಂಬನ - ೫೩

ಶತ್ರುವನ್ನು ಸಾಮದಿಂದ ಸಂತೈಸಬಹುದು. ಎಲ್ಲ ರೋಗಗಳಿಗೂ ಔಷಧ ಉಂಟು. ಮೃತ್ಯುವಿಗೆ ಮೃತ್ಯುಂಜಯನ ಧ್ಯಾನ ಫಲಕಾರಿಯಾಗಬಹುದು. ಬಡತನಕ್ಕೆ ಮಾತ್ರ ಯಾವ ಪರಿಹಾರವೂ ಇಲ್ಲ.

**ಶ್ರದ್ಧಧಾನಾಯ ಭಕ್ತಾಯಾ ವಿನೀತಾಯಾನಸೂಯವೇ ।**
**ಭೂತೇಷು ಕೃತಮೈತ್ರಾಯ ಶುಶ್ರೂಷಾಭಿರತಾಯ ಚ ॥ ೩೮೯**

- ಭಾಗವತ, ೩-೩೨-೪೧

ಶ್ರದ್ಧೆಯಿಂದ ಕೂಡಿರುವವನಿಗೆ, ಭಕ್ತನಿಗೆ, ವಿನೀತನಿಗೆ, ಹೊಟ್ಟೆಕಿಚ್ಚಿಲ್ಲದವನಿಗೆ, ಎಲ್ಲಾ ಪ್ರಾಣಿಗಳಲ್ಲಿಯೂ ಸ್ನೇಹದಿಂದಿರುವವನಿಗೆ, ಸೇವೆಯಲ್ಲಿ ಅಥವಾ ಕೇಳುವುದರಲ್ಲಿ ಇಚ್ಛೆಯುಳ್ಳವನಿಗೆ ಜ್ಞಾನಾಮೃತದ ಉಪದೇಶವನ್ನು ನೀಡಬೇಕು.

**ಶತ್ರೋರಪಿ ಗುಣಾ ವಾಚ್ಯಾ ದೋಷಾ ವಾಚ್ಯಾ ಗುರೋರಪಿ ।**
**ಸರ್ವದಾ ಸರ್ವಯತ್ನೇನ ಪುತ್ರೇ ಶಿಷ್ಯವದಾಚರೇತ್ ॥ ೩೯೦**

- ಸುಭಾಷಿತರತ್ನಭಾಂಡಾಗಾರ

ಶತ್ರುವಿನ ಗುಣಗಳನ್ನು ಹೇಳಬೇಕು. ಗುರುವಾದರೂ ಅವನ ದೋಷಗಳನ್ನು ಹೇಳಬೇಕು. ಯಾವಾಗಲೂ ಸರ್ವಪ್ರಯತ್ನದಿಂದ ಪುತ್ರನಲ್ಲಿ, ಶಿಷ್ಯನಲ್ಲಿ ಹೇಗೋ ಹಾಗೆ ನಡೆದುಕೊಳ್ಳಬೇಕು.

**ಶಯ್ಯಾ ಶೈಲಶಿಲಾ ಗೃಹಂ ಗಿರಿಗುಹಾ ವಸ್ತ್ರಂ ತರೂಣಾಂ ತ್ವಚಃ**
**ಸಾರಂಗಾಃ ಸುಹೃದೋ ನನು ಕ್ಷಿತಿರುಹಾಂ ವೃತ್ತಿಃ ಫಲೈಃ ಕೋಮಲೈಃ ।**
**ಯೇಷಾಂ ನೈರ್ಝರಮಂಬುಪಾನಮುಚಿತಂ ರತ್ಯೈ ಚ ವಿದ್ಯಾಂಗನಾ**
**ಮನ್ಯೇ ತೇ ಪರಮೇಶ್ವರಾಃ ಶಿರಸಿ ಯೈರ್ಬದ್ಧೋ ನ ಸೇವಾಂಜಲಿಃ ॥ ೩೯೧**

- ವೈರಾಗ್ಯಶತಕ - ೯೩

ಯಾರಿಗೆ ಬೆಟ್ಟದ ಕಲ್ಲೇ ಹಾಸಿಗೆಯೋ, ಬೆಟ್ಟದ ಗುಹೆಯೇ ಮನೆಯೋ, ಮರಗಳ ತೊಗಟೆಯೋ ಉಡಿಗೆಯೋ, ಜಿಂಕೆಗಳೇ ಸ್ನೇಹಿತರೋ, ಮರಗಳ ಮೃದುವಾದ ಹಣ್ಣುಗಳಿಂದ ಜೀವನವೋ, ಪ್ರವಾಹಗಳ ನೀರೇ ಪಾನವೋ, ವಿದ್ಯಾಂಗನೆಯೇ ಪ್ರಿಯಳೋ ಮತ್ತು ಯಾರು ಇತರರ ಸೇವೆ ಮಾಡಲಿಲ್ಲವೋ ಅವರೇ ಪರಮೇಶ್ವರರೆಂದು ಭಾವಿಸುತ್ತೇನೆ.

**ಶುಕವದ್ ಭಾಷಣಂ ಕುರ್ಯಾದ್ ಬಕವದ್ಧ್ಯಾನಮಾಚರೇತ್ ।**
**ಅಜವಚ್ಚರ್ವಣಂ ಕುರ್ಯಾದ್ ಗಜವತ್ ಸ್ನಾನಮಾಚರೇತ್ ॥ ೩೯೨**

- ಸಮಯೋಚಿತಪದ್ಯಮಾಲಿಕಾ

ಗಿಳಿಯಂತೆ ಮಾತಾಡಬೇಕು. ಬಕದಂತೆ ಧ್ಯಾನಮಾಡಬೇಕು. ಮೇಕೆಯಂತೆ ಅಗಿಯಬೇಕು. ಆನೆಯಂತೆ ಸ್ನಾನಮಾಡಬೇಕು.

**ಶೈಲೇ ಶೈಲೇ ನ ಮಾಣಿಕ್ಯಂ ಮೌಕ್ತಿಕಂ ನ ಗಜೇ ಗಜೇ ।**
**ಸಾಧವೋ ನ ಹಿ ಸರ್ವತ್ರ ಚಂದನಂ ನ ವನೇ ವನೇ ॥ ೩೯೩**

- ಸುಭಾಷಿತಸುಧಾನಿಧಿ

ಪ್ರತಿಯೊಂದು ಬೆಟ್ಟದಲ್ಲಿಯೂ ಮಾಣಿಕ್ಯವಿಲ್ಲ. ಪ್ರತಿಯೊಂದು ಆನೆಯಲ್ಲಿಯೂ ಮುತ್ತುಗಳಿಲ್ಲ. ಸಾಧುಗಳು ಎಲ್ಲೆಲ್ಲಿಯೂ ಇಲ್ಲ. ಪ್ರತಿಯೊಂದು ಕಾಡಿನಲ್ಲಿಯೂ ಗಂಧದ ಮರವಿಲ್ಲ.

ಶ್ವೈತ್ಯಂ ಕಲ್ಪಯ ಕಜ್ಜಲೇ ಕಪಿಕುಲೇಷ್ವಾರೋಪಯಾಚಾಪಲಂ
ಕೋದಂಡೇ ಜನಯಾರ್ಜವಂ ವಿರಚಯ ಗ್ರಾವ್ಣಾಂ ಗಣೇ ಮಾರ್ದವಂ ।
ನಿಂಬೇ ಸಾಧಯ ಮಾಧುರೀಂ ಸುರಭಿತಾಮಾದೌ ರಸೋನೇ ಕುರು
ಪ್ರೇಮಾಣಂ ಗಣಿಕಾಜನೇಽಪಿ ಚತುರಃ ಪಶ್ಚಾತ್ ಸಖೇ ದ್ರಕ್ಷ್ಯಸಿ ॥ ೩೯೪

- ಮುಗ್ಧೋಪದೇಶ - ೬

ಓ ಮಿತ್ರನೆ, ನೀನು ಚತುರನಾದರೆ ಕಾಡಿಗೆಯನ್ನು ಬಿಳಿದುಮಾಡು. ಕಪಿಗಳಲ್ಲಿ ಚಂಚಲ ಬುದ್ಧಿಯನ್ನು ತಪ್ಪಿಸು. ಬಿಲ್ಲು ನೆಟ್ಟಗಿರುವಂತೆ ನೋಡಿಕೋ. ಕಲ್ಲನ್ನು ಮೆತ್ತಗೆ ಮಾಡು. ಬೇವನ್ನು ಸಿಹಿಯಾಗಿಸು. ಬೆಳ್ಳುಳ್ಳಿಯಲ್ಲಿ ಸುಗಂಧವನ್ನು ಹುಟ್ಟಿಸು. ಆಗ ನೀನು ವೇಶ್ಯೆಯರಲ್ಲಿ ಪ್ರೇಮವಿದೆಯೆ ಎಂಬುದನ್ನು ಕಾಣುವೆ.

ಶೋಕೋ ನಾಶಯತೇ ಧೈರ್ಯಂ ಶೋಕೋ ನಾಶಯತೇ ಶ್ರುತಂ ।
ಶೋಕೋ ನಾಶಯತೇ ಸರ್ವಂ ನಾಸ್ತಿ ಶೋಕಸಮೋ ರಿಪುಃ ॥ ೩೯೫

- ರಾಮಾಯಣ, ಅಯೋಧ್ಯಾ. ೬೨-೧೫

ಶೋಕವು ಧೈರ್ಯವನ್ನು ಕೆಡಿಸುವುದು. ವಿವೇಕವನ್ನು ಕೆಡಿಸುವುದು. ಶೋಕವು ಸಮಸ್ತವನ್ನು ಹಾಳುಮಾಡುವುದು. ಶೋಕದಂಥ ಶತ್ರು ಇನ್ನೊಂದಿಲ್ಲ.

ಶ್ರೋತ್ರಂ ಶ್ರುತೇನೈವ ನ ಕುಂಡಲೇನ
ದಾನೇನ ಪಾಣಿರ್ನ ತು ಕಂಕಣೇನ ।
ವಿಭಾತಿ ಕಾಯಃ ಕರುಣಾಪರಾಣಾಂ
ಪರೋಪಕಾರೈರ್ನ ತು ಚಂದನೇನ ॥ ೩೯೬

- ನೀತಿಶತಕ - ೬೯

ಕಿವಿ ಶೋಭಿಸುವುದು ಶಾಸ್ತ್ರ ಶ್ರವಣದಿಂದಲೇ, ಓಲೆಗಳಿಂದಲ್ಲ. ಕೈಗಳು ದಾನದಿಂದ, ಬಳೆಗಳಿಂದಲ್ಲ. ಕರುಣೆಯಿಂದ ಕೂಡಿದವರ ಶರೀರ ಶೋಭಿಸುವುದು ಪರೋಪಕಾರಗಳಿಂದ, ಚಂದನಲೇಪದಿಂದಲ್ಲ.

ಷಡೇತೇ ಹ್ಯವಮನ್ಯಂತೇ ನಿತ್ಯಂ ಪೂರ್ವೋಪಕಾರಿಣಂ
ಆಚಾರ್ಯಂ ಶಿಕ್ಷಿತಾಃ ಶಿಷ್ಯಾಃ ಕೃತದಾರಾಶ್ಚ ಮಾತರಮ್ ।
ನಾರೀಂ ವಿಗತಕಾಮಾಸ್ತು ಕೃತಾರ್ಥಾಶ್ಚ ಪ್ರಯೋಜಕಂ
ನಾವಂ ನಿಸ್ತೀರ್ಣಕಾಂತಾರಾ ಆತುರಾಶ್ಚ ಚಿಕಿತ್ಸಕಮ್ ॥ ೩೯೭

- ಮಹಾಭಾರತ, ಉದ್ಯೋಗ. ೩೩-೮೭, ೮೮

ವಿದ್ಯೆಯನ್ನು ಕಲಿತು ಮುಗಿಸಿದ ಶಿಷ್ಯರು ಗುರುವನ್ನೂ, ಮದುವೆಯಾದ ಮಕ್ಕಳು

ತಾಯಿಯನ್ನೂ, ಕಾಮರಹಿತರು ಸ್ತ್ರೀಯನ್ನೂ, ಉಪಕಾರ ಪಡೆದು ಕೃತಾರ್ಥರಾದವರು ಉಪಕಾರಿಯನ್ನೂ ಕ್ಲಿಷ್ಟ ಪ್ರದೇಶವನ್ನು ದಾಟಿದವರು ದೋಣಿಯನ್ನೂ (ಗುಣ ಹೊಂದಿದ) ರೋಗಿಗಳು ವೈದ್ಯರನ್ನೂ ಉಪೇಕ್ಷಿಸುತ್ತಾರೆ. ಈ ಆರು ಬಗೆಯ ಜನರು ಮೊದಲು ಸಹಾಯ ಮಾಡಿದವನನ್ನು ಅಲಕ್ಷಿಸುತ್ತಾರೆ.

**ಸ ಕಿಂಸಖಾ ಸಾಧು ನ ಶಾಸ್ತಿ ಯೋಽಧಿಪಂ**
**ಹಿತಾನ್ನ ಯಃ ಸಂಶೃಣುತೇ ಸ ಕಿಂಪ್ರಭುಃ ।**
**ಸದಾನುಕೂಲೇಷು ಹಿ ಕುರ್ವತೇ ರತಿಂ**
**ನೃಪೇಷ್ವಮಾತ್ಯೇಷು ಚ ಸರ್ವಸಂಪದಃ ॥ ೩೯೮**

- ಕಿರಾತಾರ್ಜುನೀಯ, ೧-೫

ಯಾರು ರಾಜನಿಗೆ ಸರಿಯಾಗಿ ಸಲಹೆ ಕೊಡುವುದಿಲ್ಲವೋ ಅವನು 'ಕಿಂಸಖಾ', ಅಂದರೆ ಕೆಟ್ಟ ಗೆಳೆಯನು. ಹೇಳಿದ ಒಳ್ಳೆಯ ಮಾತುಗಳನ್ನು ಯಾರು ಕಿವಿಗೊಟ್ಟು ಕೇಳುವುದಿಲ್ಲವೋ ಅವನು ಒಳ್ಳೆಯ ರಾಜನಲ್ಲ. ರಾಜರೂ ಮಂತ್ರಿಗಳೂ ಏಕಾಭಿಪ್ರಾಯ ಉಳ್ಳವರಾದರೆ ಎಲ್ಲ ಸಂಪತ್ತುಗಳೂ ಸೇರುತ್ತವೆ.

**ಸ್ವಚ್ಛಂದವನಜಾತೇನ ಶಾಕೇನಾಪಿ ಪ್ರಪೂರ್ಯತೇ ।**
**ಅಸ್ಯ ದಗ್ಧೋದರಸ್ಯಾರ್ಥೇ ಕಃ ಕುರ್ಯಾತ್ಪಾತಕಂ ಮಹತ್ ॥ ೩೯೯**

- ಸುಭಾಷಿತರತ್ನಭಾಂಡಾಗಾರ

ಕಾಡಿನಲ್ಲಿ ತಾನಾಗಿ ಬೆಳೆದ ಗೆಡ್ಡೆ ಗೆಣಸುಗಳಿಂದಲೂ ಈ ಹೊಟ್ಟೆ ತುಂಬುತ್ತದೆ. ಈ ಸುಟ್ಟ ಹೊಟ್ಟೆಗಾಗಿ ಮಹತ್ತರವಾದ ಪಾಪವನ್ನು ಯಾರು ತಾನೇ ಮಾಡಿಯಾರು ?

**ಸ ಜಾತೋ ಯೇನ ಜಾತೇನ ಯಾತಿ ವಂಶಃ ಸಮುನ್ನತಿಂ ।**
**ಪರಿವರ್ತಿನಿ ಸಂಸಾರೇ ಮೃತಃ ಕೋ ವಾ ನ ಜಾಯತೇ ॥ ೪೦೦**

- ಹಿತೋಪದೇಶ, ೧-೧೩

ಯಾವಾತನ ಜನ್ಮದಿಂದ ವಂಶವು ಅಭಿವೃದ್ಧಿ ಹೊಂದುವುದೋ ಅವನೀಗ ಹುಟ್ಟಿದುದೇ ಸಾರ್ಥಕ. ಬದಲಾಗುತ್ತಿರುವ ಸಂಸಾರದಲ್ಲಿ ಸತ್ತವನು ಯಾವನು ತಾನೇ ಹುಟ್ಟುವುದಿಲ್ಲ?

**ಸ ಜೀವತಿ ಗುಣಾ ಯಸ್ಯ ಧರ್ಮೋ ಯಸ್ಯ ಸ ಜೀವತಿ ।**
**ಗುಣಧರ್ಮವಿಹೀನೋ ಯೋ ನಿಷ್ಫಲಂ ತಸ್ಯ ಜೀವಿತಮ್ ॥ ೪೦೧**

- ಸುಭಾಷಿತರತ್ನಭಾಂಡಾಗಾರ

ಯಾರಲ್ಲಿ ಸದ್ಗುಣಗಳಿವೆಯೋ ಯಾರಲ್ಲಿ ಧರ್ಮವುಂಟೋ ಅವನು ನಿಜವಾಗಿ ಬದುಕಿದ್ದಾನೆ! ಗುಣಧರ್ಮಗಳಿಲ್ಲದವನ ಜೀವನ ನಿಷ್ಫಲ.

**ಸತ್ಯಶ್ಚಾದ್ಯ ಪ್ರವಾದೋಽಯಂ ಲೌಕಿಕಃ ಪ್ರತಿಭಾತಿ ಮಾ ।**
**ಪಿತೃನ್ ಸಮನುಜಾಯಂತೇ ನರಾ ಮಾತಾರಮಂಗನಾಃ ॥ ೪೦೨**

- ರಾಮಾಯಣ, ಅಯೋಧ್ಯಾ. ೩೫-೨೬

ಗಂಡುಮಕ್ಕಳು ತಂದೆಯಂತೆಯೂ, ಹೆಣ್ಣುಮಕ್ಕಳು ತಾಯಿಯಂತೆಯೂ ಹುಟ್ಟುತ್ತಾರೆಂದು ನಾಣ್ಣುಡಿಯಿದೆ. ಅದು ಸರಿಯೆಂದು ಈಗ ನನಗೆ ತೋರುತ್ತದೆ. (ಸುಮಂತ್ರನು ಕೈಕೇಯಿಗೆ ಹೇಳುವುದು.)

**ಸತಾಮದೈನ್ಯಂ ವದನಸ್ಯ ಶೋಭಾ**
**ನಿರ್ಲೋಭತಾಂತರ್ವಚಸಾಮಯಾಚ್ಞಾ ।**
**ಕಾಯಸ್ಯ ಸತ್ಸೇವ್ಯಮಸೇವಕತ್ವಂ**
**ಪಾಣೇರನುತ್ತಾನತಲತ್ವಮೇವ ॥ ೪೦೩**

- ಚತುರ್ವರ್ಗಸಂಗ್ರಹ, ೧-೨೫

ದೈನ್ಯವನ್ನು ತೋರಿಸದಿರುವುದೇ ಸಜ್ಜನರ ಮುಖಕ್ಕೆ ಭೂಷಣ. ಆಸೆಯಿಲ್ಲದಿರುವುದು ಮನಸ್ಸಿಗೂ, ಯಾಚಿಸದಿರುವುದು ಮಾತಿಗೂ ಭೂಷಣ. ಪರಸೇವೆ ಮಾಡದಿರುವುದು ದೇಹಕ್ಕೆ ಸಜ್ಜನಸಂಮತವಾದ ಭೂಷಣ. ಮೇಲ್ಮುಖವಾಗಿ ಕೈಯನ್ನು ನೀಡದಿರುವುದೇ (ಬೇಡದಿರುವುದು) ಕೈಗೆ ಭೂಷಣ.

**ಸತ್ಯಧರ್ಮವಿಹೀನೇನ ನ ಸಂದಧ್ಯಾತ್ಕಥಂಚನ ।**
**ಸುಸಂಧಿತೋಽಪ್ಯಸಾಧುತ್ವಾದಚಿರಾದ್ಯಾತಿ ವಿಕ್ರಿಯಾಮ್ ॥ ೪೦೪**

- ಪಂಚತಂತ್ರ, ಕಾಕೋಲೂಕೀಯ - ೨೪

ಸತ್ಯ, ಧರ್ಮ ಇವುಗಳನ್ನು ಹೊಂದಿರದವನ ಜೊತೆಗೆ ಹೇಗಾದರೂ ಸಂಧಿಮಾಡಿಕೊಳ್ಳಕೂಡದು. ಒಳ್ಳೆಯ ರೀತಿಯಲ್ಲಿ ಸಂದಿಮಾಡಿಕೊಂಡಿದ್ದರೂ ಅವನು ಅಸಾಧುವಾದ ಕಾರಣ ಬಹಳ ಬೇಗ ವಿರೋಧಿಯಾಗುತ್ತಾನೆ.

**ಸತ್ಯವಂತೋ ಜಿತಕ್ರೋಧಾಃ ಬಲವಂತೋ ರಣಪ್ರಿಯಾಃ ।**
**ಕ್ಷಾಂತಿಶೀಲಗುಣೋಪೇತಾಃ ಸಂಧೇಯಾಃ ಪುರುಷೋತ್ತಮಾಃ ॥ ೪೦೫**

- ಸುಭಾಷಿತಸುಧಾನಿಧಿ (ಭಾರತ)

ಸತ್ಯವನ್ನಾಡುವವರೂ, ಕೋಪವನ್ನು ಗೆದ್ದವರೂ, ಬಲವುಳ್ಳವರೂ, ಯುದ್ಧದಲ್ಲಿ

ಪ್ರೀತಿಯುಳ್ಳವರೂ, ಸಹನೆಯ ಗುಣವುಳ್ಳವರೂ ಆದ ಉತ್ತಮ ಪುರುಷರೊಡನೆ ಸಂಧಿಮಾಡಿಕೊಳ್ಳಬೇಕು.

**ಸತ್ಯಾನೃತಾ ಚ ಪರುಷಾ ಪ್ರಿಯವಾದಿನೀ ಚ**
**ಹಿಂಸ್ರಾ ದಯಾಳುರಪಿ ಚಾರ್ಥಪರಾ ವದಾನ್ಯಾ ।**
**ನಿತ್ಯವ್ಯಯಾ ಪ್ರಚುರನಿತ್ಯಧನಾಗಮಾ ಚ**
**ವೇಶ್ಯಾಂಗನೇವ ನೃಪನೀತಿರನೇಕರೂಪಾ ॥ ೪೦೬**

- ನೀತಿಶತಕ- ೪೫

ರಾಜನೀತಿಯು ವೇಶ್ಯಾಂಗನೆ ಇದ್ದಂತೆ. ಸತ್ಯ-ಸುಳ್ಳು, ಕ್ರೌರ್ಯ-ಪ್ರಿಯ ವಚನ, ಹಿಂಸೆ-ಕಾರುಣ್ಯ, ಧನಾಪೇಕ್ಷೆ-ಔದಾರ್ಯ, ಸದಾ ಖರ್ಚು - ಬೇಕಾದಷ್ಟು ಆದಾಯ ಇವು ತುಂಬಿಕೊಂಡು ವೇಶ್ಯೆಯಂತೆ ಬಹುರೂಪವುಳ್ಳದ್ದು.

**ಸಂತಿ ಹ್ಯಸಾಧವೋ ಲೋಕೇ ದುರ್ಮೈತ್ರಾಶ್ಛದ್ಮವೇಷಿಣಃ ।**
**ತೇಷಾಮುದೇತ್ಯಘಂ ಕಾಲೇ ರೋಗಃ ಪಾತಕಿನಾಮಿವ ॥ ೪೦೭**

- ಭಾಗವತ, ೭-೫-೨೭

ಲೋಕದಲ್ಲಿ ವೇಷಧಾರಿಗಳಾದ, ಕೆಟ್ಟ ಸಹವಾಸಿಗಳಾದ ಅಸಾಧುಗಳಿದ್ದಾರೆ. ಅವರಿಗೆ ಸಕಾಲದಲ್ಲಿ ಪಾಪದ ಫಲವು ಪಾಪಿಗಳಿಗೆ ರೋಗವು ಹುಟ್ಟುವಂತೆ, ಉಂಟಾಗುತ್ತದೆ.

**ಸಂತುಷ್ಯತ್ಯುತ್ತಮಃ ಸ್ತುತ್ಯಾ ಧನೇನ ಮಹತಾಽಧಮಃ ।**
**ಪ್ರಸೀದಂತಿ ಜಪೈರ್ದೇವಾ ಬಲಿಭಿರ್ಭೂತವಿಗ್ರಹಾಃ ॥ ೪೦೮**

- ದೃಷ್ಟಾಂತಕಲಿಕಾ - ೯೧

ಉತ್ತಮನಾದವನು ಸ್ತುತಿಯಿಂದಲೇ ಸಂತುಷ್ಟನಾಗುತ್ತಾನೆ. ಅಧಮನು ಬಹಳ ಹಣವನ್ನು ಕೊಟ್ಟರೆ ಮಾತ್ರ ತೃಪ್ತನಾಗುತ್ತಾನೆ. ಜಪಗಳಿಂದ ದೇವತೆಗಳು ಪ್ರಸನ್ನರಾದರೆ, ಬಲಿಹಾಕಿದರೆ ಮಾತ್ರ ಭೂತಗಳು ಪ್ರಸನ್ನವಾಗುತ್ತವೆ!

**ಸದ್ಭಾವೇನ ಜಯೇನ್ಮಿತ್ರಂ ಸದ್ಭಾವೇನ ಚ ಬಾಂಧವಾನ್ ।**
**ಸ್ತ್ರೀಭೃತ್ಯಾನ್ ದಾನಮಾನಾಭ್ಯಾಂ ದಾಕ್ಷಿಣ್ಯೇನೇತರಂ ಜನಮ್ ॥ ೪೦೯**

- ಸುಭಾಷಿತರತ್ನಭಾಂಡಾಗಾರ

ಒಳ್ಳೆಯತನದಿಂದ ಸ್ನೇಹಿತರನ್ನೂ ಬಂಧುಗಳನ್ನೂ ಒಲಿಸಿಕೊಳ್ಳಬೇಕು. ಸ್ತ್ರೀಯರನ್ನೂ ಸೇವಕರನ್ನೂ ದಾನ ಮತ್ತು ಗೌರವ ಕೊಟ್ಟು ಗೆಲ್ಲಬೇಕು. ಇತರರನ್ನು ದಾಕ್ಷಿಣ್ಯ ತೋರಿ ವಶಮಾಡಿಕೊಳ್ಳಬೇಕು.

**ಸಧ್ರೀಚೀನೋ ಹ್ಯಯಂ ಲೋಕೇ ಪಂಥಾಃ ಕ್ಷೇಮೋಽಕುತೋಭಯಃ ।**
**ಸುಶೀಲಾಃ ಸಾಧವೋ ಯತ್ರ ನಾರಾಯಣಪರಾಯಣಾಃ ॥ ೪೧೦**

- ಭಾಗವತ, ೬-೧-೧೭

ಒಳ್ಳೆಯ ನಡತೆಯುಳ್ಳವರೂ, ಸಾಧುಗಳೂ, ಭಗವದ್ಭಕ್ತರೂ ಯಾವ ಮಾರ್ಗದಲ್ಲಿ ಇರುತ್ತಾರೋ ಅದೇ ಮಾರ್ಗವು, ಯಾವ ಹೆದರಿಕೆ ಇಲ್ಲದೆ ಕ್ಷೇಮದಿಂದ ಕೂಡಿರುತ್ತದೆ.

**ಸಂಪನ್ನತರಮೇವಾನ್ನಂ ದರಿದ್ರಾ ಭುಂಜತೇ ಸದಾ ।**
**ಕ್ಷುತ್ ಸ್ವಾದುತಾಂ ಜನಯತಿ ಸಾ ಚಾಢ್ಯೇಷು ಸುದುರ್ಲಭಾ ॥ ೪೧೧**

- ಮಹಾಭಾರತ, ಉದ್ಯೋಗ. ೩೪-೫೦

ಬಡವರು ರುಚಿಕರವಾದ ಅನ್ನವನ್ನೇ ಸದಾ ಉಣ್ಣುತ್ತಾರೆ. ಏಕೆಂದರೆ, ಹಸಿವು ಅನ್ನದಲ್ಲಿ ರುಚಿಯನ್ನು ಹುಟ್ಟಿಸುತ್ತದೆ. ಹಣವಂತರಿಗೆ ಹಸಿವು ದುರ್ಲಭ !

**ಸ ಬಂಧುರ್ಯೋ ವಿಪನ್ನಾನಾಂ ಆಪದುದ್ಧರಣಕ್ಷಮಃ ।**
**ನ ತು ದುರ್ವಿಹಿತಾತೀತವಸ್ತೂಪಾಲಂಭಪಂಡಿತಃ ॥ ೪೧೨**

- ಹಿತೋಪದೇಶ, ಮಿತ್ರಲಾಭ - ೨೩

ಕಷ್ಟದಲ್ಲಿ ಸಿಕ್ಕಿಬಿದ್ದವರನ್ನು ಆಪತ್ತಿನಿಂದ ಉದ್ಧರಿಸಲು ಸಮರ್ಥನು ಯಾರೋ ಅವನು ಬಂಧು. ಸರಿಯಾಗಿ ನಿರ್ವಹಿಸದ ಅಥವಾ ಹಿಂದೆ ಸಂಭವಿಸಿದ ವಿಷಯವನ್ನು ಕುರಿತು ನಿಂದಿಸುವವನು ಬಂಧುವಲ್ಲ.

**ಸ್ವಭಾವಸುಂದರಂ ವಸ್ತು ನ ಸಂಸ್ಕಾರಮಪೇಕ್ಷತೇ ।**
**ಮುಕ್ತಾರತ್ನಸ್ಯ ಶಾಣಾಶ್ಮಘರ್ಷಣಂ ನೋಪಯುಜ್ಯತೇ ॥ ೪೧೩**

- ದುಷ್ಟಾಂತಕಲಿಕಾ - ೪೯

ಸಹಜಸುಂದರವಾದ ವಸ್ತುವಿಗೆ ಮತ್ತೆ ಸಂಸ್ಕಾರವೇನೂ ಬೇಕಾಗುವುದಿಲ್ಲ. ಮುತ್ತನ್ನು ಸಾಣೆಕಲ್ಲಿನಲ್ಲಿ ಉಜ್ಜುವುದು ಅನಾವಶ್ಯಕ.

**ಸಂಭೋಜನಂ ಸಂಕಥನಂ ಸಂಪ್ರಶ್ನೋಽಥ ಸಮಾಗಮಃ ।**
**ಜ್ಞಾತಿಭಿಃ ಸಹ ಕಾರ್ಯಾಣಿ ನ ವಿರೋಧಃ ಕದಾಚನ ॥ ೪೧೪**

- ಸುಭಾಷಿತರತ್ನಭಾಂಡಾಗಾರ

ನೆಂಟರೊಡನೆ ಊಟಮಾಡಬೇಕು, ಮಾತಾಡಬೇಕು. ಕುಶಲಪ್ರಶ್ನೆ ಮಾಡ

ಬೇಕು, ಆಗಾಗ ಅವರ ಮನೆಗೆ ಹೋಗಿ ಭೇಟಿ ಮಾಡಬೇಕು. ಎಂದಿಗೂ ಹಗೆತನ ಮಾಡಬಾರದು.

**ಸಂಮಾರ್ಜನೋಪಾಂಜನೇನ ಸೇಕೇನೋಲ್ಲೇಖನೇನ ಚ ।**
**ಗವಾಂ ಚ ಪರಿವಾಸೇನ ಭೂಮಿಃ ಶುಧ್ಯತಿ ಪಂಚಭಿಃ ॥ ೪೧೫**

- ಮನುಸ್ಮೃತಿ, ೫-೧೨೪

ಗುಡಿಸುವುದು, ಸಾರಿಸುವುದು, ನೀರು ಚಿಮುಕಿಸುವುದು, ಮೇಲಿನ ಮಣ್ಣನ್ನು ಕೆರೆದು ತೆಗೆದು ಹಾಕುವುದು, ಹಸುಗಳನ್ನು ನಿಲ್ಲಿಸುವುದು ಇವುಗಳಿಂದ ಭೂಮಿಯು ಶುದ್ಧವಾಗುವುದು.

**ಸಮಾಜೇಭ್ಯಃ ಸುಮನಸಾಂ ಸುಭಾಷಿತಮಯಂ ಮಧು ।**
**ಯಾವಜ್ಜೀವಂ ವಿಚಿನ್ವಂತಿ ಸಾಧವೋ ಮಧುಪಾ ಇವ ॥ ೪೧೬**

- ಹರಿಹರಸುಭಾಷಿತ, ೨-೩

ದುಂಬಿಗಳು ಹೂಗಳಿಂದ ಮಕರಂದವನ್ನು ಸಂಗ್ರಹಿಸುವಂತೆ, ಸಜ್ಜನರು ವಿದ್ವಾಂಸರಿಂದ ಸುಭಾಷಿತವನ್ನು ಬದುಕಿರುವರೆಗೂ ಸಂಗ್ರಹಿಸುತ್ತಾರೆ.

**ಸಮಾಶ್ರಯಬಲಾದೇವ ಗರುಡಂ ಯಾಂತಮಧ್ವನಿ ।**
**ಪಿನಾಕಪಾಣಿಪಾಣಿಸ್ಥಃ ಕುಶಲಂ ಪೃಷ್ಟವಾನಹಿಃ ॥ ೪೧೭**

- ಸುಭಾಷಿತಸುಧಾನಿಧಿ

ತಾನು ಹೊಂದಿರುವ ಆಶ್ರಯದ ಬಲದಿಂದಲೇ ಈಶ್ವರನ ಕೈಯಲ್ಲಿರುವ ಹಾವು ದಾರಿಯಲ್ಲಿ ಹೋಗುತ್ತಿರುವ ಗರುಡನ ಕುಶಲವನ್ನು ಕೇಳುತ್ತದೆ.

**ಸ್ವಯಮಾಹೃತ್ಯ ಭುಂಜಾನಾಃ ಬಲಿನೋಽಪಿ ಸ್ವಭಾವತಃ ।**
**ಗಜೇಂದ್ರಾಶ್ಚ ನರೇಂದ್ರಾಶ್ಚ ಪ್ರಾಯಃ ಸೀದಂತಿ ದುಃಖಿತಾಃ ॥ ೪೧೮**

- ಮುದ್ರಾರಾಕ್ಷಸ, ೧-೧೬

ಆನೆಗಳಾಗಲೀ, ಅರಸರಾಗಲೀ, ಎಷ್ಟೇ ಬಲಿಷ್ಠರಾಗಿದ್ದರೂ, ತಮ್ಮ ಶಕ್ತಿಯಿಂದಲೇ ಸಂಪಾದಿಸಿ ಅನುಭವಿಸುವವರಾಗಿದ್ದು, ಕಷ್ಟ ಬಂದಾಗ ಬಹಳ ಕುಗ್ಗುತ್ತಾರೆ.

**ಸ್ವಲ್ಪಸ್ನಾಯುವಸಾವಶೇಷಮಲಿನಂ ನಿರ್ಮಾಂಸಮಪ್ಯಸ್ಥಿ ಗೋಃ**
**ಶ್ವಾ ಲಬ್ಧ್ವಾ ಪರಿತೋಷಮೇತಿ ನ ತು ತತ್ತಸ್ಯಕ್ಷುಧಾಶಾಂತಯೇ ।**

**ಸಿಂಹೋ ಜಂಬುಕಮಂಕಮಾಗತಮಪಿ ತ್ಯಕ್ತ್ವಾ ನಿಹಂತಿ ದ್ವಿಪಂ**
**ಸರ್ವಃ ಕೃಚ್ಛ್ರಗತೋಽಪಿ ವಾಂಛತಿ ಜನಃ ಸತ್ತ್ವಾನುರೂಪಂ ಫಲಮ್ ॥೪೧೯**

- ನೀತಿಶತಕ-೨೮

ಕೊಂಚ ನರ ಮತ್ತು ಮೇದಸ್ಸುಗಳ ಅವಶೇಷಗಳಿಂದ ಮಲಿನವಾಗಿಯೂ, ಮಾಂಸವಿಲ್ಲದೆಯೂ ಇರುವ ಹಸುವಿನ ಮೂಳೆಯನ್ನು ನಾಯಿಯು ಹೊಂದಿ ಸಂತೋಷಪಡುತ್ತದೆ. ಆದರೆ ಅದರ ಹಸಿವನ್ನು ಅದು ಹೋಗಲಾಡಿಸಲಾರದು. ಸಿಂಹವಾದರೋ ತನ್ನ ತೊಡೆಯ ಮೇಲೇರಿ ಬಂದ ನರಿಯನ್ನು ಬಿಟ್ಟು ಆನೆಯನ್ನೇ ಕೊಲ್ಲುತ್ತದೆ. ಕಷ್ಟದಲ್ಲಿ ಸಿಕ್ಕಿದ್ದರೂ ಕೂಡ ಒಬ್ಬೊಬ್ಬರೂ ತಮ್ಮ ತಮ್ಮ ಸಾಮರ್ಥ್ಯಕ್ಕೆ ಸರಿಯಾದ ಫಲವನ್ನೇ ಅಪೇಕ್ಷಿಸುತ್ತಾರೆ.

**ಸ್ವಲ್ಪಾಪಿ ಸಾಧುಸಂಪದ್ ಭೋಜ್ಯಾ**
**ಮಹತಾಂ ನ ಪೃಥ್ವ್ಯಪಿ ಖಲಶ್ರೀಃ ।**
**ಸಾರಸಮೇವ ಪಯಸ್ತೃಷಮಪನಯತಿ**
**ನ ಯಾದಸಾಂ ಪತ್ಯುಃ ॥ ೪೨೦**

- ಸುಭಾಷಿತಸುಧಾನಿಧಿ

ಸಜ್ಜನರ ಸಂಪತ್ತು ಸ್ವಲ್ಪವೇ ಇದ್ದರೂ, ಮಹಾತ್ಮರು ಅನುಭವಿಸಲು ಅರ್ಹ ವಾದುದು. ದುಷ್ಟರ ಐಶ್ವರ್ಯವು ಅಪಾರವಾಗಿದ್ದರೂ ಹಾಗೆ ಅರ್ಹವಲ್ಲ. ಸರೋವರದ ನೀರು ಬಾಯಾರಿಕೆಯನ್ನು ಕಳೆಯುತ್ತದೆ. ಆದರೆ ಸಮುದ್ರದ ನೀರು ಕಳೆಯದು.

**ಸರ್ವಹಿಂಸಾನಿವೃತ್ತಾ ಯೇ ನರಾಃ ಸರ್ವಂಸಹಾಶ್ಚ ಯೇ ।**
**ಸರ್ವಸ್ಯಾಶ್ರಯಭೂತಾಶ್ಚ ತೇ ನರಾಃ ಸ್ವರ್ಗಗಾಮಿನಃ ॥ ೪೨೧**

- ಹಿತೋಪದೇಶ, ಮಿತ್ರಲಾಭ- ೪೮

ಯಾರು ಎಲ್ಲ ಬಗೆಯ ಹಿಂಸೆಯಿಂದ ದೂರವಾಗಿರುವರೋ, ಯಾರು ಎಲ್ಲ ಕಷ್ಟವನ್ನೂ ಸಹಿಸಿಕೊಳ್ಳುತ್ತಾರೋ, ಯಾರು ಎಲ್ಲರಿಗೂ ಆಶ್ರಯ ನೀಡಿರುವವೋ ಅಂಥ ಮನುಷ್ಯರು ಸ್ವರ್ಗಗಾಮಿಗಳಾಗುತ್ತಾರೆ.

**ಸರ್ವೇಷಾಮಪಿ ಜಂತೂನಾಮಿಹ ಸ್ವಾತ್ಮೈವ ವಲ್ಲಭಃ ।**
**ಇತರೇಽಪತ್ಯವಿತ್ತಾದ್ಯಾಸ್ತದ್ವಲ್ಲಭತಯೈವ ಹಿ ॥ ೪೨೨**

- ಭಾಗವತ, ೧೦-೧೪-೫೦

ಈ ಲೋಕದಲ್ಲಿ ಎಲ್ಲಾ ಪ್ರಾಣಿಗಳಿಗೂ ತಮ್ಮ ಮೇಲೆಯೇ ಪ್ರೀತಿ ಹೆಚ್ಚು.

ಉಳಿದವುಗಳು ಅಂದರೆ ಮಕ್ಕಳು, ಹಣ, ಮೊದಲಾದುವು ಆ ಪ್ರೀತಿಯಿಂದಲೇ ಪ್ರಿಯವಾಗಿವೆ.

**ಸರ್ವೋ ದಂಡಜಿತೋ ಲೋಕೋ ದುರ್ಲಭೋ ಹಿ ಶುಚಿರ್ನರಃ ।**
**ದಂಡಸ್ಯ ಹಿ ಭಯಾತ್ಸರ್ವಂ ಜಗದ್ಭೋಗಾಯ ಕಲ್ಪತೇ ॥ ೪೨೩**

- ಮನುಸ್ಮೃತಿ, ೭-೨೨

ಸರ್ವ ಜನರನ್ನು ದಂಡದಿಂದಲೇ ವಶಪಡಿಸಿಕೊಳ್ಳಬೇಕು. ಏಕೆಂದರೆ, ಮಾನವರಲ್ಲಿ ಪ್ರಾಮಾಣಿಕನೂ ಶುದ್ಧನೂ ವಿರಳ. ದಂಡಭಯವಿದ್ದರೆ ಜಗತ್ತಿನಲ್ಲಿ ಸುಖವನ್ನು ಅನುಭವಿಸಬಹುದು.

**ಸ್ಥಾನೇಷ್ವೇವ ನಿಯೋಕ್ತವ್ಯಾ ಭೃತ್ಯಾಶ್ಚಾಭರಣಾನಿ ಚ ।**
**ನ ಹಿ ಚೂಡಾಮಣಿಃ ಪಾದೇ ಪ್ರಭವಾಮೀತಿ ಬಧ್ಯತೇ ॥ ೪೨೪**

- ಪಂಚತಂತ್ರ, ಮಿತ್ರಭೇದ- ೭೮

ಸೇವಕರನ್ನೂ, ಆಭರಣಗಳನ್ನೂ ಅವರವರಿಗೆ ತಕ್ಕ ಜಾಗದಲ್ಲಿ ಇಡಬೇಕು. ನನಗೆ ಸಾಮರ್ಥ್ಯವಿದೆಯೆಂದು ಯಾರೂ ಚೂಡಾಮಣಿಯನ್ನು ಕಾಲಿಗೆ ಕಟ್ಟಿಕೊಳ್ಳುವುದಿಲ್ಲವಷ್ಟೇ?

**ಸ್ಥಿತ್ಯತಿಕ್ರಾಂತಿಭೀರೂಣಿ ಸ್ವಚ್ಛಾನ್ಯಾಕುಲಿತಾನ್ಯಪಿ ।**
**ತೋಯಾನಿ ತೋಯರಾಶೀನಾಂ ಮನಾಂಸಿ ಚ ಮನಸ್ವಿನಾಮ್ ॥ ೪೨೫**

- ಕಿರಾತಾರ್ಜುನೀಯ, ೧೧-೫೪

ಗಂಭೀರವಾಗಿರುವ ದೊಡ್ಡವರ ಮನಸ್ಸು ಎಲ್ಲೆಯನ್ನು ಮೀರುವುದಕ್ಕೆ ಹೆದರುತ್ತದೆ. ತೊಂದರೆಗಳುಂಟಾದರೂ ನಿಷ್ಕಲ್ಮಷವಾಗಿರುತ್ತದೆ. ಅಂತೆಯೇ ಸಮುದ್ರಗಳ ನೀರು ತೀರವನ್ನು ಮೀರುವುದಿಲ್ಲ. ಕಲಕಿದರೂ ಕೊಳೆಯಾಗುವುದಿಲ್ಲ.

**ಸ್ಥಿತಾಸನಸ್ಥಾ ಶಯಿತಾ ಪರಾಙ್ಮುಖೀ**
**ಸ್ವಲಂಕೃತಾ ವಾಪ್ಯ ನಲಂಕೃತಾ ವಾ ।**
**ನಿರೀಕ್ಷ್ಯಮಾಣಾ ಪ್ರಮದಾ ಸುದುರ್ಬಲಂ**
**ಮನುಷ್ಯಮಾಲೇಖ್ಯಗತಾಽಪಿ ಕರ್ಷತಿ ॥ ೪೨೬**

ನಿಂತಿರಲಿ, ಕುಳಿತಿರಲಿ, ಹಾಸಿಗೆಯಲ್ಲಿ ಮೊಗದಿರುಹಿ ಮಲಗಿರಲಿ, ಅಲಂಕರಿಸಿ ಕೊಂಡಿರಲಿ, ಇಲ್ಲದಿರಲಿ ಹೆಂಗಸು ಚಿತ್ರದಲ್ಲಿದ್ದರೂ ಸಹ ದುರ್ಬಲನಾದ ಮನುಷ್ಯನನ್ನು ಸೆಳೆಯುವಳು.

**ಸ್ತಿಮಿತೋನ್ನತಸಂಚಾರಾ ಜನಸಂತಾಪಹಾರಿಣಃ ।**
**ಜಾಯಂತೇ ವಿರಲಾ ಲೋಕೇ ಜಲದಾ ಇವ ಸಜ್ಜನಾಃ ॥ ೪೨೭**

- ಪಂಚತಂತ್ರ, ಮಿತ್ರಭೇದ-೩೦

ಸ್ಥಿರವಾಗಿ ಬಹಳ ಎತ್ತರದಲ್ಲಿ ಸಂಚರಿಸುವುವೂ ಜನರ ಸಂತಾಪವನ್ನು ಕಳೆಯುವುವೂ ಆದ ಮೋಡಗಳಂತೆ ಲೋಕದಲ್ಲಿ ಉನ್ನತವಾದ ನಡತೆಯುಳ್ಳವರೂ ಜನರ ಕಷ್ಟವನ್ನು ಪರಿಹರಿಸುವವರೂ ಆದ ಸಜ್ಜನರು ಬಹಳ ವಿರಳರು.

**ಸ್ತ್ರಿಯೋ ರತ್ನಾನ್ಯಥೋ ವಿದ್ಯಾ ಧರ್ಮಂ ಶೌಚಂ ಸುಭಾಷಿತಂ ।**
**ವಿವಿಧಾನಿ ಚ ಶಿಲ್ಪಾನಿ ಸಮಾದೇಯಾನಿ ಸರ್ವತಃ ॥ ೪೨೮**

- ಮನುಸ್ಮೃತಿ, ೨-೨೪೦

ಸುಂದರಿಯಾದ ಹೆಣ್ಣು, ಶ್ರೇಷ್ಠವಸ್ತುಗಳು, ವಿದ್ಯೆ, ಧರ್ಮ, ನೈರ್ಮಲ್ಯ, ಒಳ್ಳೆಯ ಮಾತು, ಚಿತ್ರಶಿಲ್ಪ, ಮೊದಲಾದುವುಗಳನ್ನು ಯಾರಿಂದ, ಎಲ್ಲಿಂದ ಬೇಕಾದರೂ ಸಂಗ್ರಹ ಮಾಡಬಹುದು.

**ಸ್ತ್ರಿಯೋ ನರಪತಿರ್ವಹ್ನಿರ್ವಿಷಂ ಯುಕ್ತ್ಯಾ ನಿಷೇವಿತಂ ।**
**ಸ್ವಾರ್ಥಾಯ ಯದಿ ವಾ ದುಃಖಸಂಭಾರಾಯೈವ ಕೇವಲಮ್ ॥ ೪೨೯**

- ಲೋಚನ - ೩

ಸ್ತ್ರೀಯರು, ರಾಜ, ಬೆಂಕಿ, ವಿಷ ಇವನ್ನು ಉಪಾಯದಿಂದ ಸೇವಿಸಿದರೆ ಇಷ್ಟವು ಸಿದ್ಧಿಸುತ್ತದೆ. ಇಲ್ಲದಿದ್ದಲ್ಲಿ ಕೇವಲ ದುಃಖಕ್ಕೇ ಕಾರಣವಾಗುತ್ತವೆ.

**ಸಿಂಹಃ ಶಿಶುರಪಿ ನಿಪತತಿ ಮದಮಲಿನಕಪೋಲಭಿತ್ತಿಷು ಗಜೇಷು ।**
**ಪ್ರಕೃತಿರಿಯಂ ಸತ್ತ್ವವತಾಂ ನ ಖಲು ವಯಸ್ತೇಜಸೋ ಹೇತುಃ ॥ ೪೩೦**

- ನೀತಿಶತಕ - ೩೬

ಸಿಂಹವು ಮರಿಯಾದರೂ ಮದೋದಕದಿಂದ ಕಲುಷಿತವಾದ ಕೆನ್ನೆಗಳುಳ್ಳ ಆನೆಗಳ ಮೇಲೆಯೇ ಬೀಳುತ್ತದೆ. ಸತ್ತ್ವಶಾಲಿಗಳ ಸ್ವಭಾವವೇ ಇದು. ತೇಜಸ್ಸಿಗೆ ವಯಸ್ಸು ಕಾರಣವಲ್ಲವೇ ಅಲ್ಲ.

**ಸುಕ್ಷೇತ್ರಂ ತವ ಜನ್ಮಭೂರಿತಿ ಪುನಃ ಪರ್ವಾನುಬಂಧಾದಿಯಂ**
**ಮೇಧ್ಯಾ ಮೂರ್ತಿರಿತಿ ಪ್ರಭೂತಗರಿಮಗ್ರಾಮಾ ನ ಕೇ ಕೇ ಗುಣಾಃ ।**
**ಮಾಧುರ್ಯಂ ಪರಪೀಡಿತೋಽಪಿ ಧರಸಿ ಕ್ರಾಂತೋ ಗುರುಗ್ರಂಥಿಭಿಃ**
**ಸಾಂಗಂ ಸಜ್ಜನಚೇಷ್ಟಿತಂ ಕ್ವ ಭವತಾ ಸಂಪ್ರಾಪ್ತಮಿಕ್ಷೋ ವದ ॥ ೪೩೧**

- ಅನ್ಯೋಕ್ತಿಸ್ತಬಕ - ೮೩

ಉಳಿದವುಗಳು ಅಂದರೆ ಮಕ್ಕಳು, ಹಣ, ಮೊದಲಾದುವು ಆ ಪ್ರೀತಿಯಿಂದಲೇ ಪ್ರಿಯವಾಗಿವೆ.

**ಸರ್ವೋ ದಂಡಜಿತೋ ಲೋಕೋ ದುರ್ಲಭೋ ಹಿ ಶುಚಿರ್ನರಃ ।**
**ದಂಡಸ್ಯ ಹಿ ಭಯಾತ್ಸರ್ವಂ ಜಗದ್ಭೋಗಾಯ ಕಲ್ಪತೇ ॥ ೪೨೩**

- ಮನುಸ್ಮೃತಿ, ೭-೨೨

ಸರ್ವ ಜನರನ್ನು ದಂಡದಿಂದಲೇ ವಶಪಡಿಸಿಕೊಳ್ಳಬೇಕು. ಏಕೆಂದರೆ, ಮಾನವರಲ್ಲಿ ಪ್ರಾಮಾಣಿಕನೂ ಶುದ್ಧನೂ ವಿರಳ. ದಂಡಭಯವಿದ್ದರೆ ಜಗತ್ತಿನಲ್ಲಿ ಸುಖವನ್ನು ಅನುಭವಿಸಬಹುದು.

**ಸ್ಥಾನೇಷ್ವೇವ ನಿಯೋಕ್ತವ್ಯಾ ಭೃತ್ಯಾಶ್ಚಾಭರಣಾನಿ ಚ ।**
**ನ ಹಿ ಚೂಡಾಮಣಿಃ ಪಾದೇ ಪ್ರಭವಾಮೀತಿ ಬಧ್ಯತೇ ॥ ೪೨೪**

- ಪಂಚತಂತ್ರ, ಮಿತ್ರಭೇದ- ೭೮

ಸೇವಕರನ್ನೂ, ಆಭರಣಗಳನ್ನೂ ಅವರವರಿಗೆ ತಕ್ಕ ಜಾಗದಲ್ಲಿ ಇಡಬೇಕು. ನನಗೆ ಸಾಮರ್ಥ್ಯವಿದೆಯೆಂದು ಯಾರೂ ಚೂಡಾಮಣಿಯನ್ನು ಕಾಲಿಗೆ ಕಟ್ಟಿಕೊಳ್ಳುವುದಿಲ್ಲವಷ್ಟೇ?

**ಸ್ಥಿತ್ಯತಿಕ್ರಾಂತಿಭೀರೂಣಿ ಸ್ವಚ್ಛಾನ್ಯಾಕುಲಿತಾನ್ಯಪಿ ।**
**ತೋಯಾನಿ ತೋಯರಾಶೀನಾಂ ಮನಾಂಸಿ ಚ ಮನಸ್ವಿನಾಮ್ ॥ ೪೨೫**

- ಕಿರಾತಾರ್ಜುನೀಯ, ೧೧-೫೪

ಗಂಭೀರವಾಗಿರುವ ದೊಡ್ಡವರ ಮನಸ್ಸು ಎಲ್ಲೆಯನ್ನು ಮೀರುವುದಕ್ಕೆ ಹೆದರುತ್ತದೆ. ತೊಂದರೆಗಳುಂಟಾದರೂ ನಿಷ್ಕಲ್ಮಷವಾಗಿರುತ್ತದೆ. ಅಂತೆಯೇ ಸಮುದ್ರಗಳ ನೀರು ತೀರವನ್ನು ಮೀರುವುದಿಲ್ಲ. ಕಲಕಿದರೂ ಕೊಳೆಯಾಗುವುದಿಲ್ಲ.

**ಸ್ಥಿತಾಸನಸ್ಥಾ ಶಯಿತಾ ಪರಾಙ್ಮುಖೀ**
**ಸ್ವಲಂಕೃತಾ ವಾಪ್ಯ ನಲಂಕೃತಾ ವಾ ।**
**ನಿರೀಕ್ಷ್ಯಮಾಣಾ ಪ್ರಮದಾ ಸುದುರ್ಬಲಂ**
**ಮನುಷ್ಯಮಾಲೇಖ್ಯಗತಾಽಪಿ ಕರ್ಷತಿ ॥ ೪೨೬**

ನಿಂತಿರಲಿ, ಕುಳಿತಿರಲಿ, ಹಾಸಿಗೆಯಲ್ಲಿ ಮೊಗದಿರುಹಿ ಮಲಗಿರಲಿ, ಅಲಂಕರಿಸಿ ಕೊಂಡಿರಲಿ, ಇಲ್ಲದಿರಲಿ ಹೆಂಗಸು ಚಿತ್ರದಲ್ಲಿದ್ದರೂ ಸಹ ದುರ್ಬಲನಾದ ಮನುಷ್ಯನನ್ನು ಸೆಳೆಯುವಳು.

**ಸ್ತಿಮಿತೋನ್ನತಸಂಚಾರಾ ಜನಸಂತಾಪಹಾರಿಣಃ ।**
**ಜಾಯಂತೇ ವಿರಲಾ ಲೋಕೇ ಜಲದಾ ಇವ ಸಜ್ಜನಾಃ ॥ ೪೨೭**

- ಪಂಚತಂತ್ರ, ಮಿತ್ರಭೇದ-೩೦

ಸ್ಥಿರವಾಗಿ ಬಹಳ ಎತ್ತರದಲ್ಲಿ ಸಂಚರಿಸುವುವೂ ಜನರ ಸಂತಾಪವನ್ನು ಕಳೆಯುವುವೂ ಆದ ಮೋಡಗಳಂತೆ ಲೋಕದಲ್ಲಿ ಉನ್ನತವಾದ ನಡತೆಯುಳ್ಳವರೂ ಜನರ ಕಷ್ಟವನ್ನು ಪರಿಹರಿಸುವವರೂ ಆದ ಸಜ್ಜನರು ಬಹಳ ವಿರಳರು.

**ಸ್ತ್ರಿಯೋ ರತ್ನಾನ್ಯಥೋ ವಿದ್ಯಾ ಧರ್ಮಂ ಶೌಚಂ ಸುಭಾಷಿತಂ ।**
**ವಿವಿಧಾನಿ ಚ ಶಿಲ್ಪಾನಿ ಸಮಾದೇಯಾನಿ ಸರ್ವತಃ ॥ ೪೨೮**

- ಮನುಸ್ಮೃತಿ, ೨-೨೪೦

ಸುಂದರಿಯಾದ ಹೆಣ್ಣು, ಶ್ರೇಷ್ಠವಸ್ತುಗಳು, ವಿದ್ಯೆ, ಧರ್ಮ, ನೈರ್ಮಲ್ಯ, ಒಳ್ಳೆಯ ಮಾತು, ಚಿತ್ರಶಿಲ್ಪ, ಮೊದಲಾದುವುಗಳನ್ನು ಯಾರಿಂದ, ಎಲ್ಲಿಂದ ಬೇಕಾದರೂ ಸಂಗ್ರಹ ಮಾಡಬಹುದು.

**ಸ್ತ್ರಿಯೋ ನರಪತಿರ್ವಹ್ನಿರ್ವಿಷಂ ಯುಕ್ತ್ಯಾ ನಿಷೇವಿತಂ ।**
**ಸ್ವಾರ್ಥಾಯ ಯದಿ ವಾ ದುಃಖಸಂಭಾರಾಯೈವ ಕೇವಲಮ್ ॥ ೪೨೯**

- ಲೋಚನ - ೩

ಸ್ತ್ರೀಯರು, ರಾಜ, ಬೆಂಕಿ, ವಿಷ ಇವನ್ನು ಉಪಾಯದಿಂದ ಸೇವಿಸಿದರೆ ಇಷ್ಟವು ಸಿದ್ಧಿಸುತ್ತದೆ. ಇಲ್ಲದಿದ್ದಲ್ಲಿ ಕೇವಲ ದುಃಖಕ್ಕೇ ಕಾರಣವಾಗುತ್ತವೆ.

**ಸಿಂಹಃ ಶಿಶುರಪಿ ನಿಪತತಿ ಮದಮಲಿನಕಪೋಲಭಿತ್ತಿಷು ಗಜೇಷು ।**
**ಪ್ರಕೃತಿರಿಯಂ ಸತ್ತ್ವವತಾಂ ನ ಖಲು ವಯಸ್ತೇಜಸೋ ಹೇತುಃ ॥ ೪೩೦**

- ನೀತಿಶತಕ - ೩೬

ಸಿಂಹವು ಮರಿಯಾದರೂ ಮದೋದಕದಿಂದ ಕಲುಷಿತವಾದ ಕೆನ್ನೆಗಳುಳ್ಳ ಆನೆಗಳ ಮೇಲೆಯೇ ಬೀಳುತ್ತದೆ. ಸತ್ತ್ವಶಾಲಿಗಳ ಸ್ವಭಾವವೇ ಇದು. ತೇಜಸ್ಸಿಗೆ ವಯಸ್ಸು ಕಾರಣವಲ್ಲವೇ ಅಲ್ಲ.

**ಸುಕ್ಷೇತ್ರಂ ತವ ಜನ್ಮಭೂರಿತಿ ಪುನಃ ಪರ್ವಾನುಬಂಧಾದಿಯಂ**
**ಮೇಧ್ಯಾ ಮೂರ್ತಿರಿತಿ ಪ್ರಭೂತಗರಿಮಗ್ರಾಮಾ ನ ಕೇ ಕೇ ಗುಣಾಃ ।**
**ಮಾಧುರ್ಯಂ ಪರಪೀಡಿತೋಽಪಿ ಧರಸಿ ಕ್ರಾಂತೋ ಗುರುಗ್ರಂಥಿಭಿಃ**
**ಸಾಂಗಂ ಸಜ್ಜನಚೇಷ್ಟಿತಂ ಕ್ವ ಭವತಾ ಸಂಪ್ರಾಪ್ತಮಿಕ್ಷೋ ವದ ॥ ೪೩೧**

- ಅನ್ಯೋಕ್ತಿಸ್ತಬಕ - ೮೩

ಫಲವತ್ತಾದ ಭೂಮಿ ನೀನು ಹುಟ್ಟುವ ಸ್ಥಳ. ನಿನ್ನ ಆಕಾರದಲ್ಲಿ ಪರ್ವಗಳು (ಅಂದರೆ ಗೆಣ್ಣುಗಳು ಅಥವಾ ಪ್ರಗತಿಯ ಹಾದಿಯಲ್ಲಿ ಮೈಲಿಗಲ್ಲುಗಳು) ಇವೆ. ನಿನ್ನ ಆಕೃತಿ ಪವಿತ್ರ. ನಿನ್ನಲ್ಲಿ ಅನೇಕ ಒಳ್ಳೆಯ ಗುಣಗಳಿವೆ. ತೊಂದರೆ ಕೊಟ್ಟರೂ (ಅಂದರೆ ಹಿಂಡಿದಾಗಲೂ) ಸಿಹಿಯಾದ ರಸವನ್ನು ಕೊಡುತ್ತೀಯೇ. ಎಲೈ ಕಬ್ಬೇ! ಮೈಯೆಲ್ಲಾ ಗಂಟುಗಳಿದ್ದರೂ ಸತ್ಪುರುಷರ ಎಲ್ಲ ಗುಣಗಳನ್ನೂ ನೀನು ಹೇಗೆ ಪಡೆದೆ, ಹೇಳು.

**ಸುಖದುಃಖೇ ಸಮೇ ಸ್ಯಾತಾಂ ಜಂತೂನಾಂ ಕರ್ಮಹೇತುಕೇ ।**
**ಮೂರ್ಧ್ನಿ ಸ್ಥಿತಾನಾಂ ಕೇಶಾನಾಂ ಭವೇತಾಂ ಸ್ನೇಹಛೇದನೇ ॥ ೪೩೨**

- ದೃಷ್ಟಾಂತಕಲಿಕಾ - ೪೭

ಕರ್ಮಜನ್ಯವಾದ ಸುಖದುಃಖಗಳು ಎಲ್ಲ ಪ್ರಾಣಿಗಳಿಗೂ ಸಮವಾಗಿ ಇದ್ದೇ ಇರುತ್ತವೆ. ತಲೆಯಮೇಲಿರುವ ಕೇಶಗಳಿಗೆ ಎಣ್ಣೆ ಹಚ್ಚುವುದೂ ಇದೆ, ಕತ್ತರಿಸುವುದೂ ಇದೆ!

**ಸುಭಿಕ್ಷಂ ಕೃಷಕೇ ನಿತ್ಯಂ ನಿತ್ಯಂ ಸುಖಮರೋಗಿಣಿ ।**
**ಭಾರ್ಯಾ ಭರ್ತುಃ ಪ್ರಿಯಾ ಯಸ್ಯ ತಸ್ಯ ನಿತ್ಯೋತ್ಸವಂ ಗೃಹಮ್ ॥೪೩೩**

- ಸುಭಾಷಿತರತ್ನಭಾಂಡಾಗಾರ

ವ್ಯವಸಾಯಗಾರನಿಗೆ ನಿತ್ಯವೂ ಸುಭಿಕ್ಷವೇ ; ರೋಗವಿಲ್ಲದಿರುವವನಿಗೆ ನಿತ್ಯ ಸುಖ. ಪ್ರಿಯೆಯಾದ ಪತ್ನಿಯುಳ್ಳವನ ಮನೆಯಲ್ಲಿ ನಿತ್ಯೋತ್ಸವ.

**ಸುಲಭಾಃ ಪುರುಷಾ ರಾಜನ್ ಸತತಂ ಪ್ರಿಯವಾದಿನಃ ।**
**ಅಪ್ರಿಯಸ್ಯ ತು ಪಥ್ಯಸ್ಯ ವಕ್ತಾ ಶ್ರೋತಾ ಚ ದುರ್ಲಭಃ ॥ ೪೩೪**

- ರಾಮಾಯಣ, ಯುದ್ಧ ೧೬-೨೧

ಪ್ರಿಯವಾದ ಮಾತುಗಳನ್ನಾಡತಕ್ಕವರು ಯಾವಾಗಲು ಸಿಗುತ್ತಾರೆ. ಆದರೆ ಅಪ್ರಿಯವಾದರೂ ಹಿತವಾದ ನುಡಿಯನ್ನು ಹೇಳತಕ್ಕವರು ದುರ್ಲಭ.

**ಸೇವಿತವ್ಯೋ ಮಹಾವೃಕ್ಷಃ ಫಲಚ್ಛಾಯಾಸಮನ್ವಿತಃ ।**
**ಯದಿ ದೈವಾತ್ಫಲಂ ನಾಸ್ತಿ ಛಾಯಾ ಕೇನ ನಿವಾರ್ಯತೇ ॥ ೪೩೫**

- ಹಿತೋಪದೇಶ, ವಿಗ್ರಹ - ೧೦

ಹಣ್ಣು, ನೆರಳು ಇವುಗಲಿಂದ ಕೂಡಿದ ದೊಡ್ಡ ಮರವನ್ನೇ ಆಶ್ರಯಿಸಬೇಕು. ದುರದೃಷ್ಟವಶಾತ್ ಹಣ್ಣು ಇಲ್ಲದಿದ್ದರೆ ನೆರಳನ್ನು ಯಾರೂ ತಪ್ಪಿಸುವುದಿಲ್ಲವಷ್ಟೆ ?

**ಸ್ನೇಹಾದ್ವಾ ಯದಿ ವಾ ಲೋಭಾತ್ ಭಯಾದಜ್ಞಾನತೋऽಪಿ ವಾ ।**
**ಕುರ್ವಂತ್ಯನುಗ್ರಹಂ ಯೇ ತು ತತ್ಪಾಪಂ ತೇಷು ಗಚ್ಛತಿ ॥ ೪೩೬**

- ಲಘುಶಂಖಸ್ಮೃತಿ, ೧-೬೨

ಪ್ರೀತಿಯಿಂದಾಗಲೀ, ದುರಾಸೆಯಿಂದಾಗಲೀ, ಹೆದರಿಕೆಯಿಂದಾಗಲೀ, ತಿಳಿವಳಿಕೆ ಇಲ್ಲದಾಗಲೀ ಅನರ್ಹನಾದವನಿಗೆ ದಾನ ಅಥವಾ ಸಹಾಯ ಮಾಡಿದರೆ, ತೆಗೆದುಕೊಂಡವನು ಮಾಡಿದ ಪಾಪ ಕೊಟ್ಟವನಿಗೆ ಬರುತ್ತದೆ.

**ಸೋऽರ್ಥೋ ಯೋ ಹಸ್ತೇ ತನ್ಮಿತ್ರಂ ಯನ್ನಿರಂತರಂ ವ್ಯಸನೇ ।**
**ತದ್ರೂಪಂ ಯತ್ರ ಗುಣಾಃ ತದ್ವಿಜ್ಞಾನಂ ಯತ್ರ ಧರ್ಮಃ ॥ ೪೩೭**

- ಹಾಲಸಪ್ತಶತೀ, ೩-೫೧

ಯಾವುದು ಕೈಯಲ್ಲಿ ಸಿದ್ಧವಾಗಿದೆಯೋ ಅದೇ ಹಣ. ಕಷ್ಟದಲ್ಲಿ ಎಡೆಬಿಡದೆ ಇರುವವನೇ ಮಿತ್ರ. ಒಳ್ಳೆಯ ಗುಣಗಳಿದ್ದರೆ ಅದು ರೂಪ, ಧರ್ಮವಿದ್ದರೆ ಅದೇ ಉತ್ತಮ ತಿಳಿವಳಿಕೆ.

**ಸೌವರ್ಣಾನಿ ಸರೋಜಾನಿ ನಿರ್ಮಾತುಂ ಸಂತಿ ಶಿಲ್ಪಿನಃ ।**
**ತತ್ರ ಸೌರಭನಿರ್ಮಾಣೇ ಚತುರಶ್ಚತುರಾನನಃ ॥ ೪೩೮**

- ಸುಭಾಷಿತರತ್ನಸಮುಚ್ಚಯ, ೧-೬

ಚಿನ್ನದ ಕಮಲಗಳನ್ನು ನಿರ್ಮಿಸತಕ್ಕ ಶಿಲ್ಪಿಗಳು ಇದ್ದಾರೆ. ಆದರೆ ಅವುಗಳಲ್ಲಿ ಸುಗಂಧವನ್ನು ನಿರ್ಮಿಸಲು ಬ್ರಹ್ಮನೊಬ್ಬನೇ ಸಮರ್ಥ.

**ಹಸ್ತಸ್ಪರ್ಶಾದಿವಾಂಧೇನ ವಿಷಮೇ ಪಥಿ ಧಾವತಾ ।**
**ಅನುಮಾನಪ್ರಧಾನೇನ ವಿನಿಪಾತೋ ನ ದುರ್ಲಭಃ ॥ ೪೩೯**

- ವಾಕ್ಯಪದೀಯ - ೧೪೨

ಏರುತಗ್ಗುಗಳಿರುವ ದಾರಿಯಲ್ಲಿ ಕುರುಡನು ಕೈಮುಟ್ಟಿ ನೋಡುತ್ತ ಓಡುತ್ತಿದ್ದರೆ ಹೇಗೋ ಹಾಗೆ, ಊಹೆಯನ್ನೇ ಮುಖ್ಯವಾಗಿಟ್ಟುಕೊಂಡವನು ಮುಗ್ಗರಿಸಿ ಬೀಳುವುದು ನಿಶ್ಚಯ.

**ಹಾಲಾಹಲೋ ನೈವ ವಿಷಂ ವಿಷಂ ರಮಾ**
**ಜನಾಃ ಪರಂ ವ್ಯತ್ಯಯಮತ್ರ ಮನ್ವತೇ ।**
**ನಿಪೀಯ ಜಾಗರ್ತಿ ಸುಖೇನ ತಂ ಶಿವಃ**
**ಸ್ಪೃಶನ್ನಿಮಾಂ ಮುಹ್ಯತಿ ನಿದ್ರಯಾ ಹರಿಃ ॥ ೪೪೦**

- ಕುಲವಲಯಾನಂದ

ಫಲವತ್ತಾದ ಭೂಮಿ ನೀನು ಹುಟ್ಟುವ ಸ್ಥಳ. ನಿನ್ನ ಆಕಾರದಲ್ಲಿ ಪರ್ವಗಳು (ಅಂದರೆ ಗೆಣ್ಣುಗಳು ಅಥವಾ ಪ್ರಗತಿಯ ಹಾದಿಯಲ್ಲಿ ಮೈಲಿಗಲ್ಲುಗಳು) ಇವೆ. ನಿನ್ನ ಆಕೃತಿ ಪವಿತ್ರ. ನಿನ್ನಲ್ಲಿ ಅನೇಕ ಒಳ್ಳೆಯ ಗುಣಗಳಿವೆ. ತೊಂದರೆ ಕೊಟ್ಟರೂ (ಅಂದರೆ ಹಿಂಡಿದಾಗಲೂ) ಸಿಹಿಯಾದ ರಸವನ್ನು ಕೊಡುತ್ತೀಯೇ. ಎಲೈ ಕಬ್ಬೇ! ಮೈಯೆಲ್ಲಾ ಗಂಟುಗಳಿದ್ದರೂ ಸತ್ಪುರುಷರ ಎಲ್ಲ ಗುಣಗಳನ್ನೂ ನೀನು ಹೇಗೆ ಪಡೆದೆ, ಹೇಳು.

**ಸುಖದುಃಖೇ ಸಮೇ ಸ್ಯಾತಾಂ ಜಂತೂನಾಂ ಕರ್ಮಹೇತುಕೇ ।**
**ಮೂರ್ಧ್ನಿ ಸ್ಥಿತಾನಾಂ ಕೇಶಾನಾಂ ಭವೇತಾಂ ಸ್ನೇಹಭೇದನೇ ॥ ೪೩೨**

- ದೃಷ್ಟಾಂತಕಲಿಕಾ - ೪೭

ಕರ್ಮಜನ್ಯವಾದ ಸುಖದುಃಖಗಳು ಎಲ್ಲ ಪ್ರಾಣಿಗಳಿಗೂ ಸಮವಾಗಿ ಇದ್ದೇ ಇರುತ್ತವೆ. ತಲೆಯಮೇಲಿರುವ ಕೇಶಗಳಿಗೆ ಎಣ್ಣೆ ಹಚ್ಚುವುದೂ ಇದೆ, ಕತ್ತರಿಸುವುದೂ ಇದೆ!

**ಸುಭಿಕ್ಷಂ ಕೃಷಕೇ ನಿತ್ಯಂ ನಿತ್ಯಂ ಸುಖಮರೋಗಿಣಿ ।**
**ಭಾರ್ಯಾ ಭರ್ತುಃ ಪ್ರಿಯಾ ಯಸ್ಯ ತಸ್ಯ ನಿತ್ಯೋತ್ಸವಂ ಗೃಹಮ್ ॥೪೩೩**

- ಸುಭಾಷಿತರತ್ನಭಾಂಡಾಗಾರ

ವ್ಯವಸಾಯಗಾರನಿಗೆ ನಿತ್ಯವೂ ಸುಭಿಕ್ಷವೇ ; ರೋಗವಿಲ್ಲದಿರುವವನಿಗೆ ನಿತ್ಯ ಸುಖ. ಪ್ರಿಯೆಯಾದ ಪತ್ನಿಯುಳ್ಳವನ ಮನೆಯಲ್ಲಿ ನಿತ್ಯೋತ್ಸವ.

**ಸುಲಭಾಃ ಪುರುಷಾ ರಾಜನ್ ಸತತಂ ಪ್ರಿಯವಾದಿನಃ ।**
**ಅಪ್ರಿಯಸ್ಯ ತು ಪಥ್ಯಸ್ಯ ವಕ್ತಾ ಶ್ರೋತಾ ಚ ದುರ್ಲಭಃ ॥ ೪೩೪**

- ರಾಮಾಯಣ, ಯುದ್ಧ ೧೬-೨೧

ಪ್ರಿಯವಾದ ಮಾತುಗಳನ್ನಾಡತಕ್ಕವರು ಯಾವಾಗಲು ಸಿಗುತ್ತಾರೆ. ಆದರೆ ಅಪ್ರಿಯವಾದರೂ ಹಿತವಾದ ನುಡಿಯನ್ನು ಹೇಳತಕ್ಕವರು ದುರ್ಲಭ.

**ಸೇವಿತವ್ಯೋ ಮಹಾವೃಕ್ಷಃ ಫಲಚ್ಛಾಯಾಸಮನ್ವಿತಃ ।**
**ಯದಿ ದೈವಾತ್ಫಲಂ ನಾಸ್ತಿ ಛಾಯಾ ಕೇನ ನಿವಾರ್ಯತೇ ॥ ೪೩೫**

- ಹಿತೋಪದೇಶ, ವಿಗ್ರಹ - ೧೦

ಹಣ್ಣು, ನೆರಳು ಇವುಗಲಿಂದ ಕೂಡಿದ ದೊಡ್ಡ ಮರವನ್ನೇ ಆಶ್ರಯಿಸಬೇಕು. ದುರದೃಷ್ಟವಶಾತ್ ಹಣ್ಣು ಇಲ್ಲದಿದ್ದರೆ ನೆರಳನ್ನು ಯಾರೂ ತಪ್ಪಿಸುವುದಿಲ್ಲವಷ್ಟೆ ?

ಸ್ನೇಹಾದ್ವಾ ಯದಿ ವಾ ಲೋಭಾತ್ ಭಯಾದಜ್ಞಾನತೋಽಪಿ ವಾ ।
ಕುರ್ವಂತ್ಯನುಗ್ರಹಂ ಯೇ ತು ತತ್ಪಾಪಂ ತೇಷು ಗಚ್ಛತಿ ॥ ೪೩೬

- ಲಘುಶಂಖಸ್ಮೃತಿ, ೧-೬೨

ಪ್ರೀತಿಯಿಂದಾಗಲೀ, ದುರಾಸೆಯಿಂದಾಗಲೀ, ಹೆದರಿಕೆಯಿಂದಾಗಲೀ, ತಿಳಿವಳಿಕೆ ಇಲ್ಲದಾಗಲೀ ಅನರ್ಹನಾದವನಿಗೆ ದಾನ ಅಥವಾ ಸಹಾಯ ಮಾಡಿದರೆ, ತೆಗೆದುಕೊಂಡವನು ಮಾಡಿದ ಪಾಪ ಕೊಟ್ಟವನಿಗೆ ಬರುತ್ತದೆ.

ಸೋಽರ್ಥೋ ಯೋ ಹಸ್ತೇ ತನ್ಮಿತ್ರಂ ಯನ್ನಿರಂತರಂ ವ್ಯಸನೇ ।
ತದ್ರೂಪಂ ಯತ್ರ ಗುಣಾಃ ತದ್ವಿಜ್ಞಾನಂ ಯತ್ರ ಧರ್ಮಃ ॥ ೪೩೭

- ಹಾಲಸಪ್ತಶತೀ, ೩-೫೧

ಯಾವುದು ಕೈಯಲ್ಲಿ ಸಿದ್ಧವಾಗಿದೆಯೋ ಅದೇ ಹಣ. ಕಷ್ಟದಲ್ಲಿ ಎಡೆಬಿಡದೆ ಇರುವವನೇ ಮಿತ್ರ. ಒಳ್ಳೆಯ ಗುಣಗಳಿದ್ದರೆ ಅದು ರೂಪ, ಧರ್ಮವಿದ್ದರೆ ಅದೇ ಉತ್ತಮ ತಿಳಿವಳಿಕೆ.

ಸೌವರ್ಣಾನಿ ಸರೋಜಾನಿ ನಿರ್ಮಾತುಂ ಸಂತಿ ಶಿಲ್ಪಿನಃ ।
ತತ್ರ ಸೌರಭನಿರ್ಮಾಣೇ ಚತುರಶ್ಚತುರಾನನಃ ॥ ೪೩೮

- ಸುಭಾಷಿತರತ್ನಸಮುಚ್ಚಯ, ೧-೬

ಚಿನ್ನದ ಕಮಲಗಳನ್ನು ನಿರ್ಮಿಸತಕ್ಕ ಶಿಲ್ಪಿಗಳು ಇದ್ದಾರೆ. ಆದರೆ ಅವುಗಳಲ್ಲಿ ಸುಗಂಧವನ್ನು ನಿರ್ಮಿಸಲು ಬ್ರಹ್ಮನೊಬ್ಬನೇ ಸಮರ್ಥ.

ಹಸ್ತಸ್ಪರ್ಶಾದಿವಾಂಧೇನ ವಿಷಮೇ ಪಥಿ ಧಾವತಾ ।
ಅನುಮಾನಪ್ರಧಾನೇನ ವಿನಿಪಾತೋ ನ ದುರ್ಲಭಃ ॥ ೪೩೯

- ವಾಕ್ಯಪದೀಯ - ೧೪೨

ಏರುತಗ್ಗುಗಳಿರುವ ದಾರಿಯಲ್ಲಿ ಕುರುಡನು ಕೈಮುಟ್ಟಿ ನೋಡುತ್ತ ಓಡುತ್ತಿದ್ದರೆ ಹೇಗೋ ಹಾಗೆ, ಊಹೆಯನ್ನೇ ಮುಖ್ಯವಾಗಿಟ್ಟುಕೊಂಡವನು ಮುಗ್ಗರಿಸಿ ಬೀಳುವುದು ನಿಶ್ಚಯ.

ಹಾಲಾಹಲೋ ನೈವ ವಿಷಂ ವಿಷಂ ರಮಾ
ಜನಾಃ ಪರಂ ವ್ಯತ್ಯಯಮತ್ರ ಮನ್ವತೇ ।
ನಿಪೀಯ ಜಾಗರ್ತಿ ಸುಖೇನ ತಂ ಶಿವಃ
ಸ್ಪೃಶನ್ನಿಮಾಂ ಮುಹ್ಯತಿ ನಿದ್ರಯಾ ಹರಿಃ ॥ ೪೪೦

- ಕುವಲಯಾನಂದ

ಹಾಲಾಹಲವು ವಿಷವಲ್ಲ ; ವಿಷವು ಲಕ್ಷ್ಮಿ. ಜನರು ವ್ಯತ್ಯಾಸವಾಗಿ ತಿಳಿದುಕೊಂಡಿದ್ದಾರೆ. ಶಿವನು ಹಾಲಾಹಲವನ್ನು ಕುಡಿದರೂ ಸುಖವಾಗಿ ಬದುಕಿದ್ದಾನೆ! ಲಕ್ಷ್ಮಿಯನ್ನು ಮುಟ್ಟುತ್ತಲೇ ವಿಷ್ಣುವಿಗೆ ನಿದ್ರೆ ಬಂದು ಎಚ್ಚರದಪ್ಪಿದ್ದಾನೆ!

**ಹಾಲಾಹಲಂ ಖಲು ಪಿಪಾಸತಿ ಕೌತುಕೇನ**
**ಕಾಲಾನಲಂ ಪರಿಚುಚುಂಬಿಷತಿ ಪ್ರಕಾಮಂ ।**
**ವ್ಯಾಲಾಧಿಪಂ ಚ ಯತತೇ ಪರಿರಬ್ಧುಮದ್ಧಾ**
**ಯೋ ದುರ್ಜನಂ ವಶಯಿತುಂ ತನುತೇ ಮನೀಷಾಮ್ ॥ ೪೪೧**

- ಭಾಮಿನೀವಿಲಾಸ, ೧-೯೦

ಯಾರು ಕೆಟ್ಟವರನ್ನು ವಶಪಡಿಸಿಕೊಳ್ಳಬೇಕೆಂದು ಮನಸ್ಸು ಮಾಡುತ್ತಾರೆಯೋ ಅವರು ಕುತೂಹಲದಿಂದ ವಿಷವನ್ನು ಕುಡಿಯಲಿಷ್ಟಪಡುವರು. ಭಯಂಕರವಾದ ಅಗ್ನಿಯನ್ನು ಬೇಕಾದ ಹಾಗೆ ಮುಟ್ಟಲು ಇಷ್ಟಪಡುತ್ತಾರೆ. ಹಾವುಗಳ ಅರಸನಾದ ತಕ್ಷಕನನ್ನೂ ಅಪ್ಪಿಕೊಳ್ಳಲೂ ಇಷ್ಟಪಡುತ್ತಾರೆ. (ಕೆಟ್ಟವರನ್ನು ವಶಪಡಿಸಿಕೊಳ್ಳಲು ಮಾಡುವ ಪ್ರಯತ್ನ ಪ್ರಾಣಾಂತಕವಾದುದು).

**ಹಿತ್ವಾ ಧರ್ಮಂ ತಥಾರ್ಥಂ ಚ ಕಾಮಂ ಯಸ್ತು ನಿಷೇವತೇ ।**
**ಸ ವೃಕ್ಷಾಗ್ರೇ ಯಥಾ ಸುಪ್ತಃ ಪತಿತಃ ಪ್ರತಿಬುಧ್ಯತೇ ॥ ೪೪೨**

- ರಾಮಾಯಣ, ಕಿಷ್ಕಿಂಧಾ. ೩೮-೨೨

ಧರ್ಮಾರ್ಥಗಳನ್ನು ತ್ಯಜಿಸಿ ಕಾಮದಲ್ಲಿ ಮುಳುಗಿದವನಿಗೆ ಕೆಟ್ಟ ಮೇಲೆ ಬುದ್ಧಿಬರುತ್ತದೆ. ಮರದಮೇಲೆ ಮಲಗಿದವನಿಗೆ ಬಿದ್ದಮೇಲೆ ಎಚ್ಚರವಾಗುತ್ತದೆ!

**ಅರ್ಥ ಏವಾಭಿಜನಹೇತುಃ ।**
**ಬಲಮೇವಾಶೇಷಧರ್ಮಹೇತುಃ ।**
**ಅಭಿರುಚಿರೇವ ದಾಂಪತ್ಯಸಂಬಂಧಹೇತುಃ ।**
**ಅನೃತಮೇವ ವ್ಯವಹಾರಜಯಹೇತುಃ ।**
**ಬ್ರಹ್ಮಸೂತ್ರಮೇವ ವಿಪ್ರತ್ವಹೇತುಃ ।**
**ಲಿಂಗಧಾರಣಮೇವಾಶ್ರಮಹೇತುಃ ।**
**ಅನ್ಯಾಯ ಏವ ವೃತ್ತಿಹೇತುಃ**
**ದೌರ್ಬಲ್ಯ ಮವೃತ್ತಿಹೇತುಃ ।**
**ಅಭಯಪ್ರಗಲ್ಭೋಚ್ಚಾರಣಮೇವ ಪಾಂಡಿತ್ಯಹೇತುಃ ।**

**ಅನಾಢ್ಯತೈವ ಸಾಧುತ್ವಹೇತುಃ ।**
**ಸದ್ವೇಷಧಾರ್ಯೇವ ಪಾತ್ರಂ ।**
**ದೂರಾಯತನೋದಕಮೇವ ತೀರ್ಥಹೇತುಃ ।**
**ಕಪಟವೇಷಧಾರಣಮೇವ ಮಹತ್ತ್ವಹೇತುಃ ॥** ೪೪೩

- ವಿಷ್ಣುಪುರಾಣ, ೪-೨೪-೭೪

ಕಲಿಯುಗದಲ್ಲಿ ಹಣದಿಂದಲೇ ಕುಲ. ಶಕ್ತಿಯೇ ಎಲ್ಲಾ ಧರ್ಮಗಳಿಗೂ ಕಾರಣ. ಅಭಿರುಚಿಯೇ ಗಂಡು ಹೆಣ್ಣುಗಳ ಸಂಬಂಧಕ್ಕೆ ಕಾರಣ. ವ್ಯವಹಾರವನ್ನು ಸುಳ್ಳಿನಿಂದಲೇ ಗೆಲ್ಲಬಹುದು. ಬ್ರಾಹ್ಮಣನೆನಿಸಲು ಯಜ್ಞೋಪವೀತ ಸಾಕು. ಕಾಷಾಯ ಧರಿಸಿದ್ದರಿಂದಲೇ ಸಂನ್ಯಾಸ. ಅನ್ಯಾಯದಿಂದಲೇ ಜೀವನ ಸಾಧ್ಯ. ಅನ್ಯಾಯ ಮಾಡಲಾರದೇ ಹೋದರೆ ಬಡನತವೇ ಗತಿ. ಹೆದರಿಕೆಯಿಲ್ಲದೆ ಜೋರಾಗಿ ಮಾತನಾಡುವುದೇ ಪಾಂಡಿತ್ಯ. ಹಣ ಅಧಿಕಾರವಿಲ್ಲದಿದ್ದರೆ ಸಾಧುತ್ವ ತಾನಾಗಿ ಬರುತ್ತದೆ. ಅರ್ಹತೆಯು ವೇಷವನ್ನು ಅವಲಂಬಿಸಿರುತ್ತದೆ. ದೇವಾಲಯವಾಗಲೀ ನದಿಯಾಗಲಿ ದೂರದಲ್ಲಿದ್ದರೆ ತೀರ್ಥವೆನಿಸುತ್ತದೆ. ಕಪಟವೇಷದಿಂದಲೇ ಒಬ್ಬನು ದೊಡ್ಡವನೆನಿಸುತ್ತಾನೆ.

**ಅನಂತರತ್ನಪ್ರಭವಸ್ಯ ಯಸ್ಯ**
**ಹಿಮಂ ನ ಸೌಭಾಗ್ಯವಿಲೋಪಿ ಜಾತಂ ।**
**ಏಕೋ ಹಿ ದೋಷೋ ಗುಣಸನ್ನಿಪಾತೇ ।**
**ನಿಮಜ್ಜತೀಂದೋಃ ಕಿರಣೇಷ್ವಿವಾಂಕಃ ॥** ೪೪೪

- ಕುಮಾರಸಂಭವ

ಹಿಮಾಲಯದಲ್ಲಿ ಬೇಕಾದಷ್ಟು ಶ್ರೇಷ್ಠವಸ್ತುಗಳಿವೆ. ಆದುದರಿಂದ ಎಲ್ಲೆಡೆಯಲ್ಲಿಯೂ ಹಿಮವಿದ್ದರೂ ಅದರ ಹೆಚ್ಚಿಕೆಯನ್ನು ಹೋಗಲಾಡಿಸಲಿಲ್ಲ. ಚಂದ್ರನ ಕಾಂತಿಯಲ್ಲಿ ಅವನ ಕಳಂಕವು ಮರೆಯಾದಂತೆ ಅನೇಕ ಗುಣಗಳಿಂದ ಒಂದು ದೋಷವು ಮರೆಯಾಗುತ್ತದೆ.

**ದಿವಾಕರಾದ್ರಕ್ಷತಿಯೋ ಗುಹಾಸು**
**ಲೀನಂ ದಿವಾಭೀತಮಿವಾಂಧಕಾರಂ ।**
**ಕ್ಷುದ್ರೇಽಪಿ ನೂನಂ ಶರಣಂ ಪ್ರಪನ್ನೇ**
**ಮಮತ್ವಮುಚ್ಚೈಃಶಿರಸಾಮತೀವ ॥** ೪೪೫

- ಕುಮಾರಸಂಭವ

ಹಿಮಾಲಯವು ತನ್ನ ಗುಹೆಯಲ್ಲಿ ಅಡಗಿರುವ, ಹಗಲಿನ ಬೆಳಕಿಗೆ ಹೆದರಿದ,

ಕತ್ತಲೆಯನ್ನು, ಗೂಬೆಯನ್ನು ರಕ್ಷಿಸುವಂತೆ, ಕಾಪಾಡುತ್ತದೆ. ಮಹಾತ್ಮರು (ಉನ್ನತ ಶಿಖರವುಳ್ಳದ್ದು) ತನ್ನ ಆಶ್ರಯವನ್ನು ಅಪೇಕ್ಷಿಸಿ ಬಂದ ನೀಚರಿಗೂ ಸಹ ಹೆಚ್ಚು ಮಮತೆಯನ್ನು ತೋರಿಸುತ್ತಾರೆ.

ವರ್ಣಪ್ರಕರ್ಷೇ ಸತಿ ಕರ್ಣಿಕಾರಂ
ದುನೋತಿ ನಿರ್ಗಂಧತಯಾ ಸ್ಮ ಚೇತಃ ।
ಪ್ರಾಯೇಣ ಸಾಮಗ್ರ್ಯವಿಧೌ ಗುಣಾನಾಂ
ಪರಾಙ್ಮುಖೀ ವಿಶ್ವಸೃಜಃ ಪ್ರವೃತ್ತಿಃ ॥ ೪೪೬

- ಕುಮಾರಸಂಭವ

ಬೆಟ್ಟದಾವರೆಯು ಬಣ್ಣಬಣ್ಣವಾಗಿ ಸುಂದರವಾಗಿ ಕಾಣಿಸಿದರೂ ಸುವಾಸನೆ ಯಿಲ್ಲವಾದುದರಿಂದ ಮನಸ್ಸಿಗೆ ಮನಸ್ಸಿಗೆ ಬೇಸರವನ್ನುಂಟುಮಾಡುತ್ತದೆ. ತನ್ನ ಸೃಷ್ಟಿಯಲ್ಲಿ ಬ್ರಹ್ಮನು ಎಲ್ಲಾ ಪದಾರ್ಥಗಳಲ್ಲಿಯೂ ಯಾವುದಾದರೂ ನ್ಯೂನತೆಯನ್ನು ಇಟ್ಟಿರುತ್ತಾನೆ. ಪೂರ್ಣವಾಗಿ ಯಾವುದನ್ನೂ ಮಾಡುವ ಅಭ್ಯಾಸ ಇಲ್ಲ.

ಭಿಂತ್ತೇ ಮೋಹಂ ಚಿತ್ತಕರ್ಷಂ ಪ್ರಯುಂಕ್ತೇ
ಸೂತೇ ಸೂಕ್ತಿಂ ಸೂಯತೇ ಯಾ ಪುಮರ್ಥಾನ್ ।
ಪ್ರೀತಿಂ ಕೀರ್ತಿಂ ಪ್ರಾಪ್ತುಕಾಮೇನ ಸೈಷಾ
ಶಾಬ್ದೀ ಶುದ್ಧಿಃ ಶಾರದೇವಾಸ್ತು ಸೇವ್ಯಾ ॥ ೪೪೭

- ಗೋಪೇಂದ್ರತಿಪ್ಪಭೂಪಾಲ

ವ್ಯಾಕರಣ ಶುದ್ಧವಾದ ಶಬ್ದಪ್ರಯೋಗವು ಸರಸ್ವತಿಯಷ್ಟೇ ಪವಿತ್ರವಾದುದು. ಇದಕ್ಕೆ ಹೆಚ್ಚು ಗಮನ ಕೊಡಬೇಕು. ಅಜ್ಞಾನವನ್ನು ಕತ್ತರಿಸುತ್ತದೆ. ಜ್ಞಾನವನ್ನು ಹೆಚ್ಚಿಸುತ್ತದೆ. ಒಳ್ಳೆಯ ಮಾತುಗಳನ್ನು ಹೇಳಿಸುತ್ತದೆ. ಧರ್ಮಾರ್ಥಕಾಮಮೋಕ್ಷಗಳನ್ನು ಕೊಡುತ್ತದೆ. ಕೀರ್ತಿಯನ್ನೂ ಸಂತೋಷವನ್ನೂ ಬಯಸುವುದಾದರೆ ಶಬ್ದ ಶುದ್ಧಿ ಅಗತ್ಯ.

ನಿರ್ವೃಷ್ಟೇಽಪಿ ಬಹಿರ್ಘನೇ ವಿರಮಂತ್ಯಂತರ್ಜರದ್ವೇಶ್ಮನಃ
ಲೂತಾತಂತುತಪತಿಚ್ಛಿದೋ ಮಧುಪೃಷತ್ಪಿಂಗಾಃ ಪಯೋಬಿಂದವಃ ।
ಚೂಡಾಬರ್ಬರಕೇನಿಪತ್ಯಕಣಿಕಾಭಾವೇನ ಜಾತಾಃ ಶಿಶೋಃ
ಹಸ್ತಾಸ್ಫಾಲನಭಗ್ನನಿದ್ರಗೃಹಿಣೀಚಿತ್ತವ್ಯಥಾದಾಯಿನಃ ॥ ೪೪೮

ಹೊರಗೆ ಮಳೆ ನಿಂತುಹೋಗಿದ್ದರೂ, ಹಳೆಯ ಮನೆಯೊಳಗೆ ಸೋರುವುದು ನಿಂತಿಲ್ಲ. ಜೇಡರಬಲೆಯನ್ನು ಕತ್ತರಿಸಿಕೊಂಡು ಜೇನಿನ ತೊಟ್ಟಿನಂತೆ ಕಂದುಬಣ್ಣದ ನೀರಿನ ತೊಟ್ಟುಗಳು ಮಲಗಿದ ಮಗುವಿನ ಕೂದಲಿನಲ್ಲಿ ಬಿದ್ದು, ಹನಿಯಾಗಿ ನಿಂತು, ಅದರ

ನಿದ್ರೆಯನ್ನು ಕೆಡಿಸಿ, ಅದನ್ನು ತಟ್ಟಿ ಮಲಗಿಸಲು ನಿದ್ರಾಭಂಗವಾಗಿ ಎದ್ದ ತಾಯಿಯ ಮನಸ್ಸಿಗೆ ನೋವನ್ನುಂಟುಮಾಡುತ್ತಿವೆ.

**ಅತ್ಯುಚ್ಚಪದಾಧ್ಯಾಸಃ ಪತನಾಯೇತ್ಯರ್ಥಶಾಲಿನಾಂ ಶಂಸತ್ ।**
**ಆಪಾಂಡುಪತತಿಪತ್ರಂ ತರೋರಿದಂ ಬಂಧನಗ್ರಂಥೇಃ ॥ ೪೪೯**

ಮರದ ಬಿಳುಪಾದ ಎಲೆಯು ಮೇಲಿನಿಂದ ಕಳಚಿ ಬೀಳುತ್ತದೆ. ಉನ್ನತವಾದ ಪದವಿಗೆ ಹೋದವರೆಲ್ಲರೂ ನನ್ನಂತೆಯೇ ಒಂದು ದಿನ ಬೀಳುವರು ಎಂಬ ನೀತಿಯನ್ನು ತಿಳಿಸುತ್ತಿದೆ.

**ಕುಸುಮಶಯನಂ ಪಾಷಾಣೋ ವಾ ಪ್ರಿಯಂ ಭವನಂ ವನಂ**
**ಪ್ರತನುಮಸೃಣಸ್ಪರ್ಶಂ ವಾಸಸ್ತ್ವಗಪ್ಯಥ ತಾರವೀ ।**
**ಸರಸಮಶನಂ ಕುಲ್ಮಾಷೋ ವಾ ಧನಾನಿ ತೃಣಾನಿ ವಾ**
**ಶಮಸುಖಸುಧಾಪಾನಕ್ಷೈಬ್ಯೇ ಸಮಂ ಹಿ ಮಹಾತ್ಮನಾಮ್ ॥ ೪೫೦**

- ಮುನಿಮತಮೀಮಾಂಸಾ

ಶಾಂತಿಸುಖವೆಂಬ ಮಧುವನ್ನು ಕುಡಿದು ತನ್ನನ್ನೇ ಮರೆತ ಮಹಾತ್ಮರಿಗೆ ಹೂವಿನ ಹಾಸಿಗೆಯಾಗಲೀ ಕಲ್ಲುಚಪ್ಪಡಿಯಾಗಲೀ ಒಂದೇ. ದೊಡ್ಡ ಮನೆಯಾಗಲೀ ಕಾಡಾಗಲೀ; ನುಣುಪಾದ ಬಟ್ಟೆಗಳಾಗಲೀ ನಾರುಮಡಿಯಾಗಲೀ, ರುಚಿಯಾದ ಊಟವಾಗಲೀ ಹುರುಳಿಯಾಗಲೀ ; ಹಣವಾಗಲೀ ಹುಲ್ಲಾಗಲೀ ಒಂದೇ.

**ಹೃದಯಂ ಸದಯಂ ಯಸ್ಯ ಭಾಷಿತಂ ಸತ್ಯಭೂಷಿತಂ ।**
**ಕಾಯಃ ಪರಹಿತೋಪಾಯಃ ಕಲಿಃ ಕುರ್ವೀತ ತಸ್ಯ ಕಿಮ್ ॥ ೪೫೧**

- (ಪದ್ಮನಂದನ) ವೈರಾಗ್ಯಶತಕ - ೨೬

ಯಾರ ಹೃದಯವು ದಯೆಯಿಂದ ಕೂಡಿದೆಯೋ ಮಾತು ಸತ್ಯದಿಂದ ಭೂಷಿತವಾಗಿದೆಯೋ ದೇಹವು ಪರಹಿತಕ್ಕೆ ಸಾಧನವಾಗಿದೆಯೋ ಅವನಿಗೆ ಕಲಿಪುರುಷನು ಏನು ಮಾಡಿಯಾನು?

**ಸ್ತ್ರೀಣಾಮಾರ್ಯಸ್ವಭಾವಾನಾಂ ಪರಮಂ ದೈವತಂ ಪತಿಃ ।**
**ನಾತೋ ವಿಶಿಷ್ಟಂ ಪಶ್ಯಾಮಿ ಬಾಂಧವಂ ವಿಮೃಶಂತ್ಯಹಮ್ ॥ ೪೫೨**

- ರಾಮಾಯಣ, ಅಯೋಧ್ಯಾ. ೧೧೭-೨೪

ಉತ್ತಮ ಸ್ವಭಾವದ ಸ್ತ್ರೀಯರು ಪತಿಯನ್ನು ದೈವವೆಂದು ತಿಳಿಯುತ್ತಾರೆ. ನಾನು

ಎಷ್ಟೋ ರೀತಿಯಲ್ಲಿ ಆಲೋಚಿಸಿ ನೋಡಿದ್ದೇನೆ. ಪತಿಗಿಂತ ಹೆಚ್ಚಿನ ಆಪ್ತನಿಲ್ಲವೆಂದು ನನ್ನ ನಿಶ್ಚಯ.

**ಸುಕೃತೇನ ಕುಲೇ ಜನ್ಮ ಸುಕೃತೇನ ಸುಭಾಷಿತಂ ।**
**ಸುಕೃತೇನ ಸತೀ ಭಾರ್ಯಾ ಸುಕೃತೇನ ಕೃತೀ ಸುತಃ ॥ ೪೫೩**

- ಹರಿಹರಸುಭಾಷಿತ, ೨-೨೮

ಸತ್ಕುಲದಲ್ಲಿ ಜನ್ಮವೂ ಸುಭಾಷಿತ ಸಂಗ್ರಹವೂ ಸಾಧ್ವಿಯಾದ ಪತ್ನಿಯೂ ಪಂಡಿತನಾದ ಮಗನೂ ಪುಣ್ಯದಿಂದ ಲಭಿಸುತ್ತಾರೆ.

**ಅನರ್ಘ್ಯಮಪಿ ಮಾಣಿಕ್ಯಂ ಹೇಮಾಶ್ರಯಮಪೇಕ್ಷತೇ ।**
**ಅನಾಶ್ರಯಾನ ಶೋಭಂತೇ ಪಂಡಿತಾ ವನಿತಾ ಲತಾಃ ॥ ೪೫೪**

ಮಾಣಿಕ್ಯವು (ರತ್ನವು) ಎಷ್ಟೇ ಅಮೂಲ್ಯವೇ ಆದರೂ ಅದಕ್ಕೆ ಚಿನ್ನದ ಆಶ್ರಯ ಬೇಕೇ ಬೇಕು. ಹಾಗೆಯೇ ಪಂಡಿತರು, ವನಿತೆಯರು ಮತ್ತು ಲತೆಗಳು ಆಶ್ರಯವಿಲ್ಲದಿದ್ದರೆ ಶೋಭಿಸುವುದಿಲ್ಲ.

**ಅನಾದಾಯೀ ವ್ಯಯಂ ಕುರ್ಯಾದಸಹಾಯೀ ರಣಪ್ರಿಯಃ ।**
**ಆತುರಃ ಸರ್ವಭಕ್ಷೀ ಚ ನರಃ ಶೀಘ್ರಂ ವಿನಶ್ಯತಿ ॥ ೪೫೫**

- ಸುಭಾಷಿತರತ್ನಭಾಂಡಾಗಾರ

ಸಂಪಾದನೆ ಮಾಡದೆ ವೆಚ್ಚ ಮಾಡುವುದು, ಸಹಾಯವಿಲ್ಲದಿದ್ದರೂ ಯುದ್ಧಾಸಕ್ತಿ ಹೊಂದಿರುವುದು, ರೋಗಿಯಾಗಿಯೂ ಪಥ್ಯ ಅಪಥ್ಯವೆನ್ನದೆ ಎಲ್ಲವನ್ನೂ ತಿನ್ನುವುದು– ಹೀಗೆ ಮಾಡುವ ಮನುಷ್ಯ ಬೇಗ ನಾಶವಾಗುತ್ತಾನೆ.

**ಅಂಜನಸ್ಯ ಕ್ಷಯಂ ದೃಷ್ಟ್ವಾ ವಲ್ಮೀಕಸ್ಯ ಚ ಸಂಚಯಂ ।**
**ಅವಂಧ್ಯಂ ದಿವಸಂ ಕುರ್ಯಾತ್ ದಾನಾಧ್ಯಯನಕರ್ಮಸು ॥ ೪೫೬**

- ಸುಭಾಷಿತರತ್ನಭಾಂಡಾಗಾರ

ಕಾಡಿಗೆಯು ಕರಗಿಹೋಗುವುದನ್ನೂ ಹುತ್ತ ಬೆಳೆಯುವುದನ್ನೂ ಕಂಡು ಮನುಷ್ಯನಾದವನು ದಾನ, ಅಧ್ಯಯನ ಮೊದಲಾದ ಕೆಲಸಗಳಲ್ಲಿ ದಿನವನ್ನು ಸಾರ್ಥಕವಾಗಿ ಕಳೆಯಬೇಕು.

**ಅಗ್ನೌ ದಗ್ಧಂ ಜಲೇ ಮಗ್ನಂ ಹೃತಂ ತಸ್ಕರಪಾರ್ಥಿವೈಃ ।**
**ತತ್ಸರ್ವಂ ದಾನಮಿತ್ಯಾಹುರ್ಯದಿ ಕ್ಲೈಬ್ಯಂ ನ ಭಾಷತೇ ॥ ೪೫೭**

- ಸುಭಾಷಿತರತ್ನಭಾಂಡಾಗಾರ

ಬೆಂಕಿಯಲ್ಲಿ ಸುಟ್ಟುಹೋದುದು, ನೀರಿನಲ್ಲಿ ಮುಳುಗಿದ್ದು, ಕಳ್ಳರು ಮತ್ತು ರಾಜರುಗಳಿಂದ ಅಪಹರಿಸಲ್ಪಟ್ಟುದು- ಇವೆಲ್ಲವನ್ನೂ ದಾನವೆಂದೇ ಹೇಳುತ್ತಾರೆ, ಒಂದು ವೇಳೆ ಅವುಗಳ ನಷ್ಟಕ್ಕಾಗಿ ದೀನನಾಗಿ ವಿಲಪಿಸದಿದ್ದರೆ.

**ಅನೇಕೇ ಫಣಿನಃ ಸಂತಿ ಭೇಕಭಕ್ಷಣತತ್ಪರಾಃ ।**
**ಏಕ ಏವ ಹಿ ಶೇಷೋऽಯಂ ಧರಣೀಧರಣಕ್ಷಮಃ ॥ ೪೫೮**

- ಭೋಜಪ್ರಬಂಧ

ಕಪ್ಪೆಗಳನ್ನು ನುಂಗುವುದರಲ್ಲೇ ನಿರತರಾದ ಸರ್ಪಗಳು ಬೇಕಾದಷ್ಟಿವೆ. ಆದರೆ ಭೂಭಾರವನ್ನು ಹೊರಬಲ್ಲ ಆದಿಶೇಷನು ಒಬ್ಬನೇ.

**ಅರ್ಥಾರ್ಥೀ ಜೀವಲೋಕೋऽಯಂ ಶ್ಮಶಾನಮಪಿ ಸೇವತೇ ।**
**ತ್ಯಕ್ತ್ವಾ ಜನಯಿತಾರಂ ಸ್ವಂ ನಿಃಸ್ವಂ ಗಚ್ಛತಿ ದೂರತಃ ॥ ೪೫೯**

- ಪಂಚತಂತ್ರ

ಹಣದ ಆಸೆ ಹಿಡಿದ ಜನರು ಬಡವನಾದ ತಮ್ಮ ತಂದೆಯನ್ನೇ ತ್ಯಜಿಸಿ ಮಸಣದಲ್ಲಿ ನೆಲೆಸಲೂ ಸಿದ್ಧರಾಗಿರುತ್ತಾರೆ.

**ಅಸತಾಂ ಸಂಗದೋಷೇಣ ಸಾಧವೋ ಯಾಂತಿ ವಿಕ್ರಿಯಾಂ ।**
**ದುರ್ಯೋಧನಪ್ರಸಂಗೇನ ಭೀಷ್ಮೋ ಗೋಹರಣೇ ಗತಃ ॥ ೪೬೦**

- ಪಂಚತಂತ್ರ

ದುರ್ಜನರ ಸಹವಾಸದೋಷದಿಂದ ಸಜ್ಜನರು ಮನೋವಿಕಾರಕ್ಕೆ ಒಳಗಾಗುತ್ತಾರೆ. ದುರ್ಯೋಧನನ ಸಹವಾಸದಿಂದ ಭೀಷ್ಮನು ಗೋಗ್ರಹಣ ಮಾಡಲು ಹೋದನು.

**ಅಪತ್ಯದರ್ಶನಸ್ಯಾರ್ಥೇ ಪ್ರಾಣಾನಪಿ ಚ ಯಾ ತ್ಯಜೇತ್ ।**
**ತ್ಯಜಂತಿ ತಾಮಪಿ ಕ್ರೂರಾ ಮಾತರಂ ದಾರಹೇತವೇ ॥ ೪೬೦**

- ಸುಭಾಷಿತರತ್ನಭಾಂಡಾಗಾರ

ತನಗೆ ಸಂತಾನವಾಗುವುದನ್ನು ಕಾಣುವುದಕ್ಕಾಗಿ (ಮಗನನ್ನು ಕಾಣುವುದಕ್ಕಾಗಿ) ಪ್ರಾಣವನ್ನೂ ಯಾವಳು ತ್ಯಾಗಮಾಡಿಯಾಳೋ ಅಂಥ ತಾಯಿಯನ್ನೂ ಸಹ ಕ್ರೂರರಾದವರು ತಮ್ಮ ಹೆಂಡತಿಯರಿಗಾಗಿ ತ್ಯಾಗಮಾಡುತ್ತಾರೆ!

**ಅಫಲಾನಿ ದುರಂತಾನಿ ಸಮವ್ಯಯಫಲಾನಿ ಚ ।**
**ಅಶಕ್ಯಾನಿ ಚ ವಸ್ತೂನಿ ನಾರಭೇತ ವಿಚಕ್ಷಣಃ ॥ ೪೬೨**

- ಸುಭಾಷಿತರತ್ನಭಾಂಡಾಗಾರ

ಫಲವನ್ನೇ ಕೊಡದ ಅಥವಾ ವಿಪರೀತವಾದ ಫಲ ಕೊಡುವ ಅಥವಾ ವೆಚ್ಚ ಮಾಡಿದ್ದಕ್ಕೆ ಸಮನಾದ ಫಲ ಕೊಡುವ ಅಥವಾ ಮಾಡಲು ಸಾಧ್ಯವಿಲ್ಲದ ಕೆಲಸಗಳನ್ನು ಬುದ್ಧಿವಂತನು ಆರಂಭಿಸಬಾರದು.

**ಅಪೂರ್ವಃ ಕೋಽಪಿ ಕೋಶೋಽಯಂ ವಿದ್ಯತೇ ತವ ಭಾರತಿ ।**
**ವ್ಯಯತೋ ವೃದ್ಧಿಮಾಯಾತಿ ಕ್ಷಯಮಾಯಾತಿ ಸಂಚಯಾತ್ ॥ ೪೬೩**

- ಸುಭಾಷಿತರತ್ನಭಾಂಡಾಗಾರ

ಅಮ್ಮಾ ಸರಸ್ವತೀದೇವಿ, ನಿನ್ನ ಈ ಜ್ಞಾನಭಂಡಾರ ಅಪೂರ್ವವಾದುದು. ಇದನ್ನು ವೆಚ್ಚಮಾಡಿದಷ್ಟೂ ಇದು ಬೆಳೆಯುತ್ತದೆ. ಕೂಡಿಟ್ಟಷ್ಟೂ ಕ್ಷಯಿಸುತ್ತದೆ.

**ಅಸದ್ಭಿಃ ಶಪಥೇನೋಕ್ತಂ ಜಲೇ ಲಿಖಿತಮಕ್ಷರಂ ।**
**ಸದ್ಭಿಸ್ತು ಲೀಲಯಾ ಪ್ರೋಕ್ತಂ ಶಿಲಾಲಿಖಿತಮಕ್ಷರಂ ॥ ೪೬೪**

- ಸುಭಾಷಿತರತ್ನಭಾಂಡಾಗಾರ

ಸಜ್ಜನರಲ್ಲದವರು ಆಣೆಯಿಟ್ಟು ಹೇಳಿದರೂ ಅದು ನೀರಿನ ಮೇಲೆ ಬರೆದ ಅಕ್ಷರದಂತೆ ನಿಲ್ಲತಕ್ಕದ್ದಲ್ಲ. ಸಜ್ಜನರು ವಿನೋದಕ್ಕೆ ಹೇಳಿದುದೂ ಶಿಲಾಲೇಖದಂತೆ ಸ್ಥಿರವಾದದ್ದೇ!

**ಅಸಾರೇ ಖಲು ಸಂಸಾರೇ ಸಾರಮೇತಚ್ಚತುಷ್ಟಯಂ ।**
**ಕಾಶ್ಯಾಂ ವಾಸಃ ಸತಾಂ ಸಂಗೋ ಗಂಗಾಂಭಃ ಶಂಭುಸೇವನಂ ॥ ೪೬೫**

- ಸುಭಾಷಿತರತ್ನಭಾಂಡಾಗಾರ

ಅಸಾರವಾದ ಈ ಸಂಸಾರದಲ್ಲಿ ಸಾರವಾದವು ಈ ನಾಲ್ಕು - ಕಾಶಿಯಲ್ಲಿ ವಾಸ, ಸಜ್ಜನರ ಸಹವಾಸ, ಗಂಗಾನದಿಯ ತೀರ್ಥ ಮತ್ತು ಶಂಭುವಿನ ಸೇವೆ.

**ಅವಿದಿತಪರಮಾನಂದೋ ವದತಿ ಜನೋ ವಿಷಯಮೇವ ರಮಣೀಯಂ ।**
**ತಿಲತೈಲಮೇವ ಮೃಷ್ಟಂ ಯೇನ ನ ದೃಷ್ಟಂ ಘೃತಂ ಕ್ವಾಪಿ ॥ ೪೬೬**

- ಸುಭಾಷಿತರತ್ನಭಾಂಡಾಗರ

ಬ್ರಹ್ಮಾನಂದವೇನೆಂಬುದನ್ನು ತಿಳಿಯದ ಜನ ವಿಷಯಾನಂದವೇ ರಮಣೀಯ ವೆನ್ನುತ್ತಾರೆ. ತುಪ್ಪವನ್ನೇ ಎಂದೂ ಕಾಣದವನು ಎಳ್ಳೆಣ್ಣೆಯನ್ನೇ ಶ್ರೇಷ್ಠವೆಂದು ತಿಳಿಯುತ್ತಾನೆ.

**ಅಹೋ ಸಾಹಜಿಕಂ ಪ್ರೇಮ ದೂರಾದಪಿ ವಿರಾಜತೇ ।**
**ಚಕೋರನಯನದ್ವಂದ್ವಮಾಹ್ಲಾದಯತಿ ಚಂದ್ರಮಾಃ ॥ ೪೬೭**

- ಸುಭಾಷಿತರತ್ನಭಾಂಡಾಗಾರ

ಸಹಜವಾದ ಪ್ರೇಮ ದೂರದಿಂದಲೂ ವಿರಾಜಿಸುವುದು. (ಹೇಗೆಂದರೆ) ಚಂದ್ರನು ಚಕೋರಪಕ್ಷಿಯ ನೇತ್ರಗಳೆರಡನ್ನೂ ಸಂತೋಷಗೊಳಿಸುತ್ತಾನೆ.

**ಅಭ್ರಚ್ಛಾಯಾ ತೃಣಾಗ್ನಿಶ್ಚ ಖಲೇ ಪ್ರೀತಿಃ ಸ್ಥಲೇ ಜಲಂ ।**
**ವೇಶ್ಯಾಸಕ್ತಿಃ ಕುಮಿತ್ರಂ ಚ ಷಡೇತೇ ಬುದ್ಬುದೋಪಮಾಃ ॥ ೪೬೮**

- ಸುಭಾಷಿತರತ್ನಭಾಂಡಾಗಾರ

ಮೋಡದ ನೆರಳು, ಹುಲ್ಲಿನ ಬೆಂಕಿ, ದುಷ್ಟನಲ್ಲಿ ಪ್ರೀತಿ, ನೆಲದ ಮೇಲಿನ ನೀರು, ವೇಶ್ಯಾಸಕ್ತಿ, ಕೆಟ್ಟ ಗೆಳೆಯ - ಇವು ಆರೂ ನೀರ್ಗುಳ್ಳೆಗಳೋಪಾದಿ ಇರುವುವು.

**ಅಬಲಸ್ಯ ಬಲಂ ರಾಜಾ ಬಾಲಸ್ಯ ರುದಿತಂ ಬಲಂ ।**
**ಬಲಂ ಮೂರ್ಖಸ್ಯ ಮೌನಿತ್ವಂ ತಸ್ಕರಸ್ಯಾನೃತಂ ಬಲಂ ॥ ೪೬೯**

- ಗರುಡಪುರಾಣ, ೧-೧೧೫-೪೧

ದುರ್ಬಲನಿಗೆ ರಾಜನೇ ಬಲ. ಬಾಲಕನಿಗೆ ಅಳುವುದೇ ಬಲ. ಮೂರ್ಖನಿಗೆ ಮಾತನಾಡದಿರುವುದೇ ಬಲ. ಕಳ್ಳನಿಗೆ ಸುಳ್ಳೇ ಬಲ !

**ಅರ್ಥೈರರ್ಥಾಃ ನಿಬಧ್ಯಂತೇ ಗಜೈರ್ವನಗಜಾ ಇವ ।**
**ನ ಚ ಕಶ್ಚಿತ್ ಕೃತೇ ಕಾರ್ಯೇ ಕರ್ತಾರಂ ಸಮವೇಕ್ಷತೇ ॥ ೪೭೦**

- ಮಹಾಭಾರತ, ಶಾಂತಿ ೧೧೧-೬೫

ಆನೆಗಳಿಂದ ಕಾಡಾನೆಗಳನ್ನು ವಶಪಡಿಸಿಕೊಳ್ಳುವಂತೆ, ಹಣದಿಂದಲೇ ಹಣವನ್ನು (ಪ್ರಯೋಜನವನ್ನು ತೋರಿಸಿಯೇ ಇನ್ನೊಂದು ಪ್ರಯೋಜನವನ್ನು) ವಶಪಡಿಸಿ ಕೊಳ್ಳಲು ಸಾಧ್ಯ. ಕೆಲಸವಾದ ಮೇಲೆ ಯಾರೂ ಉಪಕಾರಿಯನ್ನು ಕಣ್ಣೆತ್ತಿ ನೋಡು ವುದಿಲ್ಲ.

**ಆರೋಗ್ಯಂ ವಿದ್ವತ್ತಾ ಸಜ್ಜನಮೈತ್ರೀ ಮಹಾಕುಲೇ ಜನ್ಮ ।**
**ಸ್ವಾಧೀನತಾ ಚ ಪುಂಸಾಂ ಮಹದೈಶ್ವರ್ಯಂ ವಿನಾಪ್ಯರ್ಥೈಃ ॥ ೪೭೧**

- ಮಹಾಭಾರತ, ಶಾಂತಿ. ೧೩೮-೧೧೧

ಆರೋಗ್ಯ, ವಿದ್ವತ್ತು, ಸಜ್ಜನರ ಸ್ನೇಹ, ಶ್ರೇಷ್ಠವಾದ ವಂಶದಲ್ಲಿ ಜನ್ಮ, ಇತರರಿಗೆ ಅಧೀನರಾಗಿಲ್ಲದೆ ಇರುವುದು - ಇವುಗಳು ಹಣವಿಲ್ಲದೆಯೇ ಬರುವ ಮಹೈಶ್ವರ್ಯಗಳು.

**ಆಶ್ರಮಾಂಸ್ತುಲಯಾ ಸರ್ವಾನ್ ಧೃತಾನಾಹುರ್ಮನೀಷಿಣಃ ।**
**ಏಕತಶ್ಚ ತ್ರಯೋ ರಾಜನ್ ಗೃಹಸ್ಥಾಶ್ರಮ ಏಕತಃ ॥ ೪೭೨**

- ಸುಭಾಷಿತರತ್ನಭಾಂಡಾಗಾರ

ಆಶ್ರಮಗಳನ್ನು ತಕ್ಕಡಿಯಲ್ಲಿ ತೂಗಲಾಗಿದೆಯೆಂದು ವಿದ್ವಾಂಸರು ಹೇಳುತ್ತಾರೆ. ಹೇ ಧರ್ಮರಾಜ, ಒಂದು ಕಡೆ ಮೂರು ಆಶ್ರಮಗಳು (ಬ್ರಹ್ಮಚರ್ಯ, ವಾನಪ್ರಸ್ಥ, ಸಂನ್ಯಾಸ). ಇನ್ನೊಂದು ಕಡೆ ಗೃಹಸ್ಥಾಶ್ರಮ. (ಗೃಹಸ್ಥಾಶ್ರಮವು ಉಳಿದ ಮೂರು ಆಶ್ರಮಗಳಿಗೆ ಸಮತೂಕವಾಗಿದೆ).

**ಆತ್ಮಾ ಜೇಯಃ ಸದಾ ರಾಜ್ಞಾ ತತೋ ಜೇಯಾಶ್ಚ ಶತ್ರವಃ ।**
**ಅಜಿತಾತ್ಮಾ ನರಪತಿರ್ವಿಜಯೇತ ಕಥಂ ರಿಪೂನ್ ॥ ೪೭೩**

- ಮಹಾಭಾರತ, ಶಾಂತಿ. ೧೨-೧೨

ರಾಜನು ಮೊದಲು ತನ್ನನ್ನು ಗೆದ್ದುಕೊಳ್ಳಬೇಕು. ಆಮೇಲೆ ವೈರಿಗಳನ್ನು ಗೆಲ್ಲಬೇಕು. ತನ್ನನ್ನೇ ಗೆದ್ದುಕೊಳ್ಳದ ಅಜಿತೇಂದ್ರಿಯನಾದ ರಾಜನು ವೈರಿಗಳನ್ನು ಹೇಗೆ ಗೆದ್ದಾನು ?

**ಇದಂ ಲಬ್ಧಮಿದಂ ನಷ್ಟಮಿದಂ ಲಪ್ಸ್ಯೇ ಪುನರ್ಧಿಯಾ ।**
**ಇತಿ ಚಿಂತಯತಾಮೇವ ಜೀರ್ಣಮಾಯುಃ ಶರೀರಿಣಾಂ ॥ ೩೭೪**

- ಮಹಾಭಾರತ, ಶಾಂತಿ. ೬೯-೪

ಇದು ಕೈ ಸೇರಿತು, ಇದು ಕಳೆದುಹೋಯಿತು, ಇದನ್ನು ಮತ್ತೆ ಪಡೆಯುವೆನು ಎಂದು ಮನಸ್ಸಿನಲ್ಲಿ ಆಲೋಚಿಸುತ್ತಲೇ ಜನರ ಆಯುಸ್ಸು ಕಳೆದುಹೋಗುತ್ತದೆ.

**ಈಹಂತೇ ಸರ್ವಭೂತಾನಿ ತದಿದಂ ಕರ್ಮಸಂಜ್ಞಿತಂ ।**
**ಸಿದ್ಧಿಕ್ಷೇತ್ರಮಿದಂ ಪುಣ್ಯಮಯಮೇವಾಶ್ರಮೋ ಮಹಾನ್ ॥ ೪೭೫**

- ಭಾರತಮಂಜರೀ, ೧೩-೨೪೧

ಸಕಲ ಪ್ರಾಣಿಗಳೂ ಕರ್ಮಪ್ರಧಾನವಾದ ಗೃಹಸ್ಥಾಶ್ರಮವನ್ನು ಆಶ್ರಯಿಸಿಕೊಂಡಿವೆ. ಇದು ಪುಣ್ಯಕರವಾದ ಸಿದ್ಧಿಕ್ಷೇತ್ರ. ಈ ಗೃಹಸ್ಥಾಶ್ರಮವೇ ದೊಡ್ಡದು.

**ಉತ್ತಮಂ ಸ್ವಾರ್ಜಿತಂ ಭುಕ್ತಂ ಮಧ್ಯಮಂ ಪಿತುರಾರ್ಜಿತಂ ।**
**ಕನಿಷ್ಠಂ ಭ್ರಾತೃವಿತ್ತಂ ಚ ಸ್ತ್ರೀವಿತ್ತಮಧಮಾಧಮಂ ॥ ೩೭೬**

- ಮಹಾಭಾರತ, ಶಾಂತಿ. ೧೧-೧೫

ತಾನೇ ಸಂಪಾದಿಸಿ ಸುಖಿಸುವುದು ಉತ್ತಮ. ತಂದೆಯ ಸಂಪಾದನೆ ಮಧ್ಯಮ; ಸೋದರನ ಹಣ ಕನಿಷ್ಠ. ಆದರೆ ಹೆಂಗಸಿಗೆ ಸೇರಿದ ಹಣದಿಂದ ಸುಖಿಸುವುದು ಅಧಮಾಧಮ.

**ಉತ್ತಮೋಽಪ್ಯಧಮಸ್ಯ ಸ್ಯಾದ್ಯಾಚ್ಞಾನಮ್ರಕರಃ ಕ್ವಚಿತ್ ।**
**ಕೌಸ್ತುಭಾದೀನಿ ರತ್ನಾನಿ ಯಯಾಚೇ ಹರಿರಂಭುಧಿಂ ॥ ೩೭೭**

- ಸುಭಾಷಿತರತ್ನಭಾಂಡಾಗಾರ

ಒಮ್ಮೊಮ್ಮೆ ಅಧಮನ ಮುಂದೆ ಉತ್ತಮನೂ ಸಹ ಬೇಡಿ ಕೈಯೊಡ್ಡುತ್ತಾನೆ. ಶ್ರೀಹರಿಯು ಕೌಸ್ತುಭವೇ ಮೊದಲಾದ ರತ್ನಗಳಿಗಾಗಿ ಸಮುದ್ರವನ್ನು ಬೇಡಿದನಷ್ಟೆ?

**ಉದಯತಿ ಯದಿ ಭಾನುಃ ಪಶ್ಚಿಮೇ ದಿಗ್ವಿಭಾಗೇ**
**ಪ್ರಚಲತಿ ಯದಿ ಮೇರುಃ ಶೀತತಾಂ ಯಾತಿ ವಹ್ನಿಃ ।**
**ವಿಕಸತಿ ಯದಿ ಪದ್ಮಂ ಪರ್ವತಾಗ್ರೇ ಶಿಲಾಯಾಂ**
**ನ ಭವತಿ ಪುನರುಕ್ತಂ ಭಾಷಿತಂ ಸಜ್ಜನಾನಾಂ ॥ ೪೭೮**

- ಸಮಯೋಚಿತಪದ್ಯರತ್ನಮಾಲಿಕಾ

ಸೂರ್ಯನು ಪಶ್ಚಿಮದಿಕ್ಕಿನಲ್ಲಿ ಒಂದೇ ವೇಳೆ ಹುಟ್ಟಿದರೂ, ಮೇರುಪರ್ವತ ಅಲ್ಲಾಡಿದರೂ, ಬೆಂಕಿ ತಣ್ಣಗಾದರೂ, ಬೆಟ್ಟದ ಮೇಲೆ ಕಲ್ಲಿನಲ್ಲಿ ತಾವರೆ ಅರಳಿದರೂ ಸಹ ಸಜ್ಜನರ ನುಡಿ ಪುನರುಕ್ತವಾಗದು - ಬದಲಾಯಿಸದು.

**ಉದ್ಯೋಗೇನ ವಿನಾ ನೈವ ಕಾರ್ಯಂ ಕಿಮಪಿ ಸಿಧ್ಯತಿ ।**
**ನ ಹಿ ಸುಪ್ತಸ್ಯ ಸಿಂಹಸ್ಯ ಪ್ರವಿಶಂತಿ ಮುಖೇ ಮೃಗಾಃ ॥ ೩೭೯**

- ಸುಭಾಷಿತರತ್ನಭಾಂಡಾಗಾರ

ಪ್ರಯತ್ನವೇ ಇಲ್ಲದೆ ಯಾವ ಕಾರ್ಯವೂ ಸಿದ್ಧಿಸುವುದಿಲ್ಲ. ನಿದ್ರಿಸುವ ಸಿಂಹದ ಬಾಯೊಳಕ್ಕೆ ಮೃಗಗಳು ತಾವಾಗಿ ಪ್ರವೇಶಿಸುವುದಿಲ್ಲ!

**ಉಪಕಾರಿಷು ಯಃ ಸಾಧುಃ ಸಾಧುತ್ವೇ ತಸ್ಯ ಕೋ ಗುಣಃ ।**
**ಅಪಕಾರಿಷು ಯಃ ಸಾಧುಃ ಸ ಸಾಧುಃ ಸದ್ಭಿರುಚ್ಯತೇ ॥ ೪೮೦**

- ಪಂಚತಂತ್ರ

ಉಪಕಾರಿಗಳಲ್ಲಿ ಸಾಧುವಾಗಿದ್ದರೆ ಅವನ ಸಾಧುತನದಲ್ಲಿ ಹೆಚ್ಚುಗಾರಿಕೆ ಏನು? ಅಪಕಾರಿಗಳಲ್ಲಿ ಯಾವನು ಸಾಧುವೋ ಅವನು ಸಾಧುವೆಂದು ಸಜ್ಜನರು ಹೇಳುತ್ತಾರೆ.

**ಉಪದೇಶೋ ಹಿ ಮೂರ್ಖಾಣಾಂ ಪ್ರಕೋಪಾಯ ನ ಶಾಂತಯೇ ।**
**ಪಯಃಪಾನಂ ಭುಜಂಗಾನಾಂ ಕೇವಲಂ ವಿಷವರ್ಧನಂ ॥. ೪೮೧**

- ಪಂಚತಂತ್ರ

ಮೂರ್ಖರಿಗೆ ಉಪದೇಶಮಾಡುವುದು ಅವರನ್ನು ರೇಗಿಸಲು ಕಾರಣವಾಗುತ್ತದೆಯೇ ಹೊರತು ಸಮಾಧಾನಪಡಿಸುವುದಕ್ಕಲ್ಲ. ಸರ್ಪಗಳಿಗೆ ಹಾಲನ್ನು ಕುಡಿಸುವುದು, ಕೇವಲ ಅವುಗಳ ವಿಷವನ್ನು ಹೆಚ್ಚಿಸುವುದು.

**ಉಶನಾ ವೇದ ಯಚ್ಛಾಸ್ತ್ರಂ ಯಚ್ಚ ವೇದ ಬೃಹಸ್ಪತಿಃ ।**
**ಸ್ವಭಾವೇನೈವ ತಚ್ಛಾಸ್ತ್ರಂ ಸ್ತ್ರೀಬುದ್ಧೌ ಸುಪ್ರತಿಷ್ಠಿತಂ ॥ ೪೮೨**

- ಸಮಯೋಚಿತಪದ್ಯರತ್ನಮಾಲಿಕಾ

ಶುಕ್ರಾಚಾರ್ಯನು ಯಾವ ಶಾಸ್ತ್ರವನ್ನು ಬಲ್ಲನೋ ಬೃಹಸ್ಪತಿ ಯಾವುದನ್ನು ಬಲ್ಲನೋ ಆ ಎಲ್ಲ ಶಾಸ್ತ್ರವೂ ಸ್ತ್ರೀಯರ ಬುದ್ಧಿಯಲ್ಲಿ ಸಹಜವಾಗಿಯೇ ಸ್ಥಿರವಾಗಿ ನೆಲೆಸಿರುತ್ತದೆ !

**ಏಕೇನ ರಾಜಹಂಸೇನ ಯಾ ಶೋಭಾ ಸರಸೋಽಭವತ್ ।**
**ನ ಸಾ ಬಕಸಹಸ್ರೇಣ ಪರಿತಸ್ತೀರವಾಸಿನಾ ॥ ೪೮೩**

- ಭೋಜಪ್ರಬಂಧ

ಒಂದೇ ರಾಜಹಂಸದಿಂದ ಸರೋವರಕ್ಕೆ ಯಾವ ಶೋಭೆಯುಂಟಾಯಿತೋ ಅದು, ಸುತ್ತಲೂ ತೀರದಲ್ಲಿ ನೆಲೆಸಿದ ಸಾವಿರ ಕೊಕ್ಕರೆಗಳಿಂದಲೂ ಆಗದು.

**ಏಕೋಽಹಮಸ್ಮೀತಿ ಚ ಮನ್ಯಸೇ ತ್ವಂ**
**ನ ಹೃಚ್ಛಯಂ ವೇತ್ಸಿ ಮುನಿಂ ಪುರಾಣಂ ।**
**ಯೋ ವೇದಿತಾ ಕರ್ಮಣಃ ಪಾಪಕಸ್ಯ**
**ತಸ್ಯಾಂತಿಕೇ ತ್ವಂ ವೃಜಿನಂ ಕರೋಷಿ ॥ ೪೮೪**

- ಮಹಾಭಾರತ, ಆದಿ. ೭೪-೨೮

ನಾನು ಒಬ್ಬನೇ ಇದ್ದೇನೆಂದು ತಿಳಿದುಕೊಂಡಿದ್ದೀಯೆ. ನಿನ್ನ ಹೃದಯದಲ್ಲಿಯೇ ಪುರಾಣ ಮುನಿ (ಭಗವಂತನು) ಇದ್ದಾನೆಂಬುದು ನಿನಗೆ ಗೊತ್ತಿಲ್ಲ ! ಅವನು ನಿನ್ನ ಪಾಪಕರ್ಮವೆಲ್ಲವನ್ನೂ ತಿಳಿದುಕೊಳ್ಳುತ್ತಾನೆ. ಅವನ ಬಳಿಯೇ ನೀನು ಪಾಪಕಾರ್ಯವನ್ನು ಮಾಡುತ್ತಿದ್ದೀಯೆ !

**ಏಹಿ ಗಚ್ಛ ಪತೋತ್ತಿಷ್ಠ ವದ ಮೌನಂ ಸಮಾಚರ ।**
**ಏವಮಾಶಾಗ್ರಹಗ್ರಸ್ತೈಃ ಕ್ರೀಡಂತಿ ಧನಿನೋಽರ್ಥಿಭಿಃ ॥ ೪೮೫**

- ಸಮಯೋಚಿತಪದ್ಯರತ್ನಮಾಲಿಕಾ

ಬಾ, ಹೋಗು; ಬೀಳು, ಏಳು; ಮಾತಾಡು, ತೆಪ್ಪಗಿರು - ಈ ರೀತಿಯ ಮಾತುಗಳಿಂದ ಧನಿಕರು ಆಶಾಗ್ರಹಕ್ಕೆ ಬಲಿಯಾದ ಯಾಚಕಜನರೊಡನೆ ಕ್ರೀಡಿಸುತ್ತಾರೆ.

**ಔಷಧಾರ್ಥಸುಮಂತ್ರಾಣಾಂ ಬುದ್ಧೇಶ್ಚೈವ ಮಹಾತ್ಮನಾಂ ।**
**ಅಸಾಧ್ಯಂ ನಾಸ್ತಿ ಲೋಕೇಽತ್ರ ಯದ್‌ಬ್ರಹ್ಮಾಂಡಸ್ಯ ಮಧ್ಯಗಂ ॥ ೪೮೬**

- ಪಂಚತಂತ್ರ

ಔಷಧ, ಹಣ, ಮಂತ್ರಾಲೋಚನೆ, ಮಹಾತ್ಮರ ಬುದ್ಧಿಶಕ್ತಿ - ಇವುಗಳಿಗೆ ಲೋಕದಲ್ಲಿ ಅಸಾಧ್ಯವಾದದ್ದು ಈ ಬ್ರಹ್ಮಾಂಡದ ನಡುವೆ ಇಲ್ಲ.

**ಕಶ್ಚಿತ್ ಕಸ್ಯಚಿದೇವ ಸ್ಯಾತ್ಸುಹೃದ್ವಿಸಂಭಭಾಜನಂ ।**
**ಪದ್ಮಂ ವಿಕಾಸಯತ್ಯರ್ಕಃ ಸಂಕೋಚಯತಿ ಕೈರವಂ ॥ ೪೮೭**

- ಸುಭಾಷಿತರತ್ನಭಾಂಡಾಗಾರ

ಯಾವನೋ ಒಬ್ಬ ಸ್ನೇಹಿತ ಯಾವನೋ ಒಬ್ಬನಿಗೆ ಮಾತ್ರ ವಿಶ್ವಾಸಪಾತ್ರನಾಗುತ್ತಾನೆ. ಸೂರ್ಯ ತಾವರೆಯನ್ನು ಅರಳಿಸುತ್ತಾನೆ ; ಆದರೆ ನೈದಿಲೆಯನ್ನು ಮುಚ್ಚಿಕೊಳ್ಳುವಂತೆ ಮಾಡುತ್ತಾನೆ.

**ಕ್ಷಂತವ್ಯೋ ಮಂದಬುದ್ಧೀನಾಮಪರಾಧೋ ಮನೀಷಿಣಾ ।**
**ನ ಹಿ ಸರ್ವತ್ರಪಾಂಡಿತ್ಯಂ ಸುಲಭಂ ಪುರುಷೇ ಕ್ವಚಿತ್ ॥ ೪೮೮**

- ಸುಭಾಷಿತರತ್ನಭಾಂಡಾಗಾರ

ಬುದ್ಧಿವಂತನಾದವನು ಅವಿವೇಕಿಗಳ ತಪ್ಪನ್ನು ಕ್ಷಮಿಸಬೇಕು. ಎಲ್ಲ ಪುರುಷರಲ್ಲಿಯೂ ಪಾಂಡಿತ್ಯ ಸುಲಭವಾಗಿ ದೊರೆಯುವುದಿಲ್ಲ.

**ಕ್ಷಣಶಃ ಕಣಶಶ್ಚೈವ ವಿದ್ಯಾಮರ್ಥಂ ಚ ಸಾಧಯೇತ್ ।**
**ಕ್ಷಣತ್ಯಾಗೇ ಕುತೋ ವಿದ್ಯಾ ಕಣತ್ಯಾಗೇ ಕುತೋ ಧನಂ ॥ ೪೮೯**

- ಸಮಯೋಚಿತಪದ್ಯಮಾಲಿಕಾ

ಒಂದು ಕ್ಷಣವನ್ನೂ ಉಪೇಕ್ಷಿಸದೆ ವಿದ್ಯೆಯನ್ನೂ, ಬಿಡಿಗಾಸನ್ನೂ ಅಸಡ್ಡೆ ಮಾಡದೆ ಹಣವನ್ನೂ ಸಂಪಾದಿಸಬೇಕು. ಕ್ಷಣವನ್ನು ವ್ಯರ್ಥಮಾಡಿದರೆ ವಿದ್ಯೆ ಇಲ್ಲ. ಬಿಡಿಗಾಸನ್ನು ಉಪೇಕ್ಷಿಸಿದರೆ ಹಣವಿಲ್ಲ.

**ಕ್ಷತೇ ಪ್ರಹಾರಾ ನಿಪತಂತ್ಯಭೀಕ್ಷ್ಣಂ**
**ಧನಕ್ಷಯೇ ದೀಪ್ಯತಿ ಜಾಠರಾಗ್ನಿಃ ।**

ಆಪತ್ಸು ವೈರಾಣಿ ಸಮುಲ್ಲಸಂತಿ ।
ಛಿದ್ರೇಷ್ವನರ್ಥಾ ಬಹುಲೀಭವಂತಿ ॥ ೪೯೦

- ಪಂಚತಂತ್ರ

ಗಾಯಕ್ಕೆ ಮತ್ತೆ ಮತ್ತೆ ಪೆಟ್ಟುಗಳು ತಗಲುತ್ತವೆ. ಹಣವು ಖರ್ಚಾಗಿ ಬಡತನ ಬಂದಾಗ ಹಸಿವು ಹೆಚ್ಚುತ್ತದೆ. ಆಪತ್ಕಾಲದಲ್ಲಿ ಇಲ್ಲದ ವೈರಗಳು ಹುಟ್ಟಿಕೊಳ್ಳುತ್ತವೆ. ಒಡಕುತನ ಹುಟ್ಟಿದಾಗ ಅನರ್ಥಗಳು ಅಧಿಕವಾಗುತ್ತವೆ.

ಕ್ಷಾಂತಿತುಲ್ಯಂ ತಪೋ ನಾಸ್ತಿ ಸಂತೋಷಾನ್ನ ಸುಖಂ ಪರಂ ।
ನಾಸ್ತಿ ತೃಷ್ಣಾಸಮೋ ವ್ಯಾಧಿರ್ನ ಚ ಧರ್ಮೋ ದಯಾಪರಃ ॥ ೪೯೧

- ಸಮಯೋಚಿತಪದ್ಯಮಾಲಿಕಾ

ತಾಳ್ಮೆಗೆ ಸಮಾನವಾದ ತಪಸ್ಸಿಲ್ಲ. ತೃಪ್ತಿಗಿಂತ ಹೆಚ್ಚಿನ ಸುಖವಿಲ್ಲ. ಆಸೆಗೆ ಸಮಾನವಾದ ರೋಗವಿಲ್ಲ. ದಯೆಗಿಂತ ಹೆಚ್ಚಿನ ಧರ್ಮವಿಲ್ಲ.

ಕಿಂ ತೇನ ಜಾತು ಜಾತೇನ ಮಾತುರ್ಯೌವನಹಾರಿಣಾ ।
ಆರೋಹತಿ ನ ಯಃ ಸ್ವಸ್ಯ ವಂಶಸ್ಯಾಗ್ರೇ ಧ್ವಜೋ ಯಥಾ ॥ ೪೯೨

- ಪಂಚತಂತ್ರ

ಧ್ವಜಸ್ತಂಭದ ಮೇಲಕ್ಕೆ ಪತಾಕೆ ಏರುವಂತೆ, ಯಾವಾತನು ತನ್ನ ವಂಶದ ಮೇಲೇರಿ ಉನ್ನತಿಗೆ ಬರುವುದಿಲ್ಲವೋ ಅವನು ಹುಟ್ಟಿದ್ದರಿಂದ ಏನು ಫಲ ? ತಾಯಿಯ ಯೌವನ ವನ್ನು ಅಪಹರಿಸಿದವನು ಆತ.

ಕುಲೀನೈಃ ಸಹ ಸಂಪರ್ಕಂ ಪಂಡಿತೈಃ ಸಹ ಮಿತ್ರತಾಂ ।
ಜ್ಞಾತಿಭಿಶ್ಚ ಸಮಂ ಮೇಲಂ ಕುರ್ವಾಣೋ ನ ವಿನಶ್ಯತಿ ॥ ೪೯೩

- ಸುಭಾಷಿತರತ್ನಭಾಂಡಾಗಾರ

ಒಳ್ಳೆಯ ಕುಲದಲ್ಲಿ ಹುಟ್ಟಿದವರೊಡನೆ ಸಂಪರ್ಕ, ಪಂಡಿತರೊಡನೆ ಸ್ನೇಹ, ಜ್ಞಾತಿಗಳ ಜೊತೆಗೆ ಬೆರೆಯುವುದು - ಇವುಗಳನ್ನು ಮಾಡುವವನು ನಾಶವಾಗುವುದಿಲ್ಲ.

ಕೇಚಿದಜ್ಞಾನತೋ ನಷ್ಟಾಃ ಕೇಚಿನ್ನಷ್ಟಾಃ ಪ್ರಮಾದತಃ ।
ಕೇಚಿತ್ ಜ್ಞಾನಾವಲೇಪೇನ ಕೇಚಿನ್ನಷ್ಟೈಸ್ತು ನಾಶಿತಾಃ ॥ ೪೯೪

- ಸುಭಾಷಿತರತ್ನಭಾಂಡಾಗಾರ

ತಿಳಿವಳಿಕೆ ಇಲ್ಲದೆ ಕೆಲವರು ನಷ್ಟರಾದರೆ ಮತ್ತೆ ಕೆಲವರು ಎಚ್ಚರಿಕೆ ಇಲ್ಲದೆ ಇದ್ದುದರಿಂದ ನಷ್ಟರಾದರು. ಮತ್ತೆ ಕೆಲವರು ತಮ್ಮ ತಿಳಿವಳಿಕೆಯ ಗರ್ವದಿಂದ ನಾಶವಾದರು. ಇನ್ನು ಕೆಲವರು ನಷ್ಟ ಹೊಂದಿದವರಿಂದ ನಾಶಕ್ಕೊಳಗಾದರು.

**ಕ್ಷಿಪೇದ್ವಾಕ್ಯಶರಾನ್ಘೋರಾನ್ನ ಪಾರುಷ್ಯವಿಷಪ್ಲುತಾನ್ ।**
**ವಾಕ್ಪಾರುಷ್ಯರುಷಾ ಚಕ್ರೇ ಭೀಮಃ ಕುರುಕುಲಕ್ಷಯಂ ॥ ೪೯೫**

- ಸುಭಾಷಿತರತ್ನಭಾಂಡಾಗಾರ

ನಿಷ್ಠುರತೆ ಎಂಬ ವಿಷದಲ್ಲಿ ಅದ್ದಿದ ಘೋರವಾದ ಮಾತಿನ ಬಾಣಗಳನ್ನು ಎಸೆಯಬಾರದು. (ಕೌರವರು) ಕಠಿಣವಾದ ಮಾತುಗಳನ್ನಾಡಿದುದರಿಂದ ಉಂಟಾದ ಕೋಪದಿಂದ ಭೀಮನು ಕುರುಕುಲವನ್ನೇ ನಾಶಪಡಿಸಿದನು.

**ಕುರ್ವನ್ನಪಿ ವ್ಯಲೀಕಾನಿ ಯಃ ಪ್ರಿಯಃ ಪ್ರಿಯ ಏವ ಸಃ ।**
**ಅಶೇಷದೋಷದುಷ್ಟೋಽಪಿ ಕಾಯಃ ಕಸ್ಯ ನ ವಲ್ಲಭಃ ॥ ೪೯೬**

- ಸಮಯೋಚಿತಪದ್ಯರತ್ನಮಾಲಿಕಾ

ಪ್ರೀತಿಪಾತ್ರನಾದವನು ತಪ್ಪುಕೆಲಸಗಳನ್ನು ಮಾಡುತ್ತಲೇ ಇದ್ದರೂ ಪ್ರೀತಿ ಪಾತ್ರನಾಗಿಯೇ ಇರುತ್ತಾನೆ. ದೇಹವು ಸಮಸ್ತದೋಷಗಳಿಂದ ದುಷ್ಟವಾಗಿದ್ದರೂ ಯಾರಿಗೆ ಪ್ರಿಯವಲ್ಲ ?

**ಕಾಂತಾವಿಯೋಗಃ ಸ್ವಜನಾಪಮಾನೋ**
**ರಣಸ್ಯ ಶೇಷಃ ಕುನೃಪಸ್ಯ ಸೇವಾ ।**
**ದರಿದ್ರಭಾವೋ ವಿಷಮಾ ಸಭಾ ಚ**
**ವಿನಾಗ್ನಿಮೇತೇ ಪ್ರದಹಂತಿ ಕಾಯಂ ॥ ೪೯೭**

- ಸಮಯೋಚಿತಪದ್ಯರತ್ನಮಾಲಿಕಾ

ಕಾಂತೆಯ ವಿಯೋಗ, ಸ್ವಜನರಿಂದ ಅವಮಾನ, ಯುದ್ಧಶೇಷ, ಕೆಟ್ಟ ರಾಜನ ಸೇವೆ, ಬಡತನ, (ನ್ಯಾಯನಿರ್ಣಯ ಮಾಡಲು ಸಮರ್ಥರಿಲ್ಲದ) ದುರವಸ್ಥೆಯ ಸಭೆ - ಇವು ಬೆಂಕಿಯಿಲ್ಲದೆಯೇ ದೇಹವನ್ನು ಸುಡುತ್ತವೆ.

**ಕುತ್ರ ವಿಧೇಯೋ ಯತ್ನಃ**
**ವಿದ್ಯಾಭ್ಯಾಸೇ ಸದೌಷಧೇ ದಾನೇ ।**
**ಅವಧೀರಣಾ ಕ್ವ ಕಾರ್ಯಾ**
**ಖಲಪರಯೋಷಿತ್ಪರಧನೇಷು ॥ ೪೯೮**

- ಪ್ರಶ್ನೋತ್ತರರತ್ನಮಾಲಿಕಾ

ಯಾವ ವಿಷಯದಲ್ಲಿ ಪ್ರಯತ್ನ ಮಾಡಬೇಕು ? ವಿದ್ಯಾಭ್ಯಾಸ, ಒಳ್ಳೆಯ ಔಷಧ ಎಂದರೆ ಪಥ್ಯ ಸೇವನೆ ಮತ್ತು ದಾನ ಇವುಗಳಲ್ಲಿ. ಯಾವ ವಿಷಯದಲ್ಲಿ ಉಪೇಕ್ಷೆಯನ್ನಿಡಬೇಕು ? ದುಷ್ಟ, ಪರಸ್ತ್ರೀ ಮತ್ತು ಪರಧನ - ಇವುಗಳಲ್ಲಿ.

**ಕೋಽಂಧೋ ಯೋಽಕಾರ್ಯರತಃ**
**ಕೋ ಬಧಿರೋ ಯೋ ಹಿತಾನಿ ನ ಶೃಣೋತಿ ।**
**ಕೋ ಮೂಕೋ ಯಃ ಕಾಲೇ**
**ಪ್ರಿಯಾಣಿ ವಕ್ತುಂ ನ ಜಾನಾತಿ ॥ ೪೯೯**

- ಪ್ರಶ್ನೋತ್ತರರತ್ನಮಾಲಿಕಾ

ಕುರುಡನು ಯಾರು ? ಕೆಟ್ಟ ಕೆಲಸದಲ್ಲಿ ನಿರತನಾದವನು. ಕಿವುಡನು ಯಾರು? ಹಿತೋಪದೇಶವನ್ನು ಕೇಳದವನು. ಮೂಕನು ಯಾರು ? ಯೋಗ್ಯಸಮಯದಲ್ಲಿ ಪ್ರಿಯವಾದ ಮಾತನ್ನಾಡಲು ಯಾರಿಗೆ ಗೊತ್ತಿಲ್ಲವೋ ಅವನು.

**ಕೋಽರ್ಥಾನ್ ಪ್ರಾಪ್ಯ ನ ಗರ್ವಿತೋ ವಿಷಯಿಣಃ ಕಸ್ಯಾಪದೋಽಸ್ತಂ ಗತಾಃ**
**ಸ್ತ್ರೀಭಿಃ ಕಸ್ಯ ನ ಖಂಡಿತಂ ಭುವಿ ಮನಃ ಕೋ ನಾಮ ರಾಜಪ್ರಿಯಃ ।**
**ಕಃ ಕಾಲಸ್ಯ ನ ಗೋಚರತ್ವಮಗಮತ್ ಕೋಽರ್ಥೀ ಗತೋ ಗೌರವಂ**
**ಕೋ ವಾ ದುರ್ಜಯದುರ್ಗುಣೇಷು ಪತಿತಃ ಕ್ಷೇಮೇಣ ಜಾತಃ ಪಥಿ ॥ ೫೦೦**

- ಸಮಯೋಚಿತಪದ್ಯರತ್ನಮಾಲಿಕಾ

ಹಣವನ್ನು ಪಡೆದು ಗರ್ವಿತನಾಗದೆ ಇರತಕ್ಕವನು ಯಾರು? ಯಾರಿಗೆ ಕಷ್ಟಗಳೆಲ್ಲವೂ ನೀಗಿವೆ? ಸ್ತ್ರೀಯರಿಂದ ಯಾರ ಮನಸ್ಸು ಛಿನ್ನವಾಗಿಲ್ಲ? ಲೋಕದಲ್ಲಿ ರಾಜನಿಗೆ ಸದಾ ಪ್ರಿಯನಾದವನು ಯಾರು? ಯಾವನು ಯಮನಿಗೆ ವಶನಾಗಲಿಲ್ಲ? ಯಾವ ಯಾಚಕನು ಗೌರವವನ್ನು ಪಡೆದಿದ್ದಾನೆ? ದುರ್ಜಯವಾದ ದುರ್ಗುಣಗಳಲ್ಲಿ ಮುಗ್ಗರಿಸಿದ ಯಾವನು ಕ್ಷೇಮವಾಗಿ ಎದ್ದು ದಾರಿ ಕೂಡಿದ್ದಾನೆ?

**ಕೀರ್ತಿರ್ಹಿ ಪುರುಷಂ ಲೋಕೇ ಸಂಜೀವಯತಿ ಮಾತೃವತ್ ।**
**ಅಕೀರ್ತಿರ್ಜೀವಿತಂ ಹಂತಿ ಜೀವತೋಽಪಿ ಶರೀರಿಣಃ ॥ ೫೦೧**

- ಮಹಾಭಾರತ, ವನ ೩೦೦-೩೨

ಲೋಕದಲ್ಲಿ ಕೀರ್ತಿಯು ಮನುಷ್ಯನನ್ನು ತಾಯಿಯಂತೆ ಸಂಜೀವನಗೊಳಿಸುತ್ತದೆ. ಮನುಷ್ಯನು ಬದುಕಿದ್ದರೂ ಅಪಕೀರ್ತಿಯು ಅವನ ಜೀವಿತವನ್ನು ಅಂತ್ಯಗೊಳಿಸುತ್ತದೆ. (ಅಪಕೀರ್ತಿಯನ್ನು ಪಡೆದವನು ಬದುಕಿದ್ದರೂ ಸತ್ತಂತೆಯೇ).

**ಗತೇऽಪಿ ವಯಸಿ ಗ್ರಾಹ್ಯಾ ವಿದ್ಯಾ ಸರ್ವಾತ್ಮನಾ ಬುಧೈಃ ।**
**ಯದ್ಯಪಿ ಸ್ಯಾನ್ನ ಫಲದಾ ಸುಲಭಾ ಸಾನ್ಯಜನ್ಮನಿ ॥** ೫೦೨

- ಸುಭಾಷಿತರತ್ನಭಾಂಡಾಗಾರ

ವಯಸ್ಸು ಕಳೆದಿದ್ದರೂ ವಿವೇಕಿಗಳು ವಿದ್ಯೆಯನ್ನು ಸರ್ವಾತ್ಮನಾಗ್ರಹಿಸಬೇಕು. ಈ ಜನ್ಮದಲ್ಲಿ ಅದು ಫಲ ಕೊಡಿದಿದ್ದರೂ ಮತ್ತೊಂದು ಜನ್ಮದಲ್ಲಿ ಸುಲಭವಾಗಿ ಬರುತ್ತದೆ.

**ಗುಣಾಗುಣಜ್ಞೇಷು ಗುಣಾ ಭವಂತಿ**
**ತೇ ನಿರ್ಗುಣಂ ಪ್ರಾಪ್ಯ ಭವಂತಿ ದೋಷಾಃ ।**
**ಆಸ್ವಾದ್ಯತೋಯಾಃ ಪ್ರಭವಂತಿ ನದ್ಯಃ**
**ಸಮುದ್ರಮಾಸಾದ್ಯ ಭವಂತ್ಯಪೇಯಾಃ ॥** ೫೦೩

- ಸಮಯೋಚಿತಪದ್ಯರತ್ನಮಾಲಿಕಾ

ಗುಣದ ಯೋಗ್ಯತೆಯನ್ನು ಬಲ್ಲವರಲ್ಲಿ ಗುಣಗಳು ಗುಣಗಳಾಗಿ ಇರುತ್ತವೆ. ಗುಣಹೀನನ ಬಳಿಯಲ್ಲಿ ಗುಣಗಳು ದೋಷಗಳಾಗಿಬಿಡುತ್ತವೆ. ನದಿಗಳ ನೀರು ರುಚಿಕರವಾಗಿ ಕುಡಿಯಲು ಯೋಗ್ಯವಾಗಿರುತ್ತದೆ. ಆ ನದಿಗಳೇ ಸಮುದ್ರವನ್ನು ಸೇರಿದಾಗ ನೀರು ಕುಡಿಯಲು ಅನರ್ಹವಾಗುತ್ತದೆ.

**ಗೋಶತಾದಪಿ ಗೋಕ್ಷೀರಂ ಪ್ರಸ್ಥಂ ಧಾನ್ಯಶತಾದಪಿ ।**
**ಪ್ರಾಸಾದಾದಪಿ ಖಟ್ವಾರ್ಧಂ ಶೇಷಾಃ ಪರವಿಭೂತಯಃ ॥** ೫೦೪

- ಮಹಾಭಾರತ

ನೂರು ಹಸುಗಳಿದ್ದರೂ ತನಗೆ ಬೇಕಾದದ್ದು ಒಂದು ಹಸುವಿನ ಹಾಲು ಮಾತ್ರ. ನೂರಾರು ಸೇರು ಧಾನ್ಯವಿದ್ದರೂ ತನಗೆ ಬೇಕಾದದ್ದು ಒಂದು ಪಾವಿನಷ್ಟು. ದೊಡ್ಡ ಬಂಗಲೆಯೇ ಇದ್ದರೂ ಮಲಗಲು ಬೇಕಾದದ್ದು ಮಂಚದ ಅರ್ಧಭಾಗದಷ್ಟು. ಉಳಿದುದೆಲ್ಲವೂ ಪರರಿಗೆ ಸೇರಿದ್ದು.

**ಘೃತಕುಂಭಸಮಾ ನಾರೀ ತಪ್ತಾಂಗಾರಸಮಃ ಪುಮಾನ್ ।**
**ತಸ್ಮಾದ್ಘೃತಂ ಚ ವಹ್ನಿಂ ಚ ನೈಕತ್ರ ಸ್ಥಾಪಯೇದ್ಬುಧಃ ॥** ೫೦೫

- ಸಮಯೋಚಿತಪದ್ಯರತ್ನಮಾಲಿಕಾ

ಹೆಂಗಸು ತುಪ್ಪದ ಗಡಿಗೆ ಇದ್ದಂತೆ. ಗಂಡಸು ಕಾಯಿಸಿದ ಕೆಂಡ ಇದ್ದಂತೆ. ಆದ್ದರಿಂದ ತುಪ್ಪವನ್ನೂ ಬೆಂಕಿಯನ್ನೂ ವಿದ್ವಾಂಸನು ಒಂದೆಡೆಯಲ್ಲಿ ಒಟ್ಟಿಗೆ ಇರಿಸಬಾರದು.

**ಘಟಂ ಭಿಂದ್ಯಾತ್ ಪಟಂ ಛಿಂಧ್ಯಾತ್ ಕುರ್ಯಾದ್ವಾ ಗಾರ್ದಭಸ್ವನಂ ।**
**ಯೇನ ಕೇನ ಪ್ರಕಾರೇಣ ಪ್ರಸಿದ್ಧಪುರುಷೋ ಭವೇತ್ ॥ ೫೦೭**

- ಸಮಯೋಚಿತಪದ್ಯಮಾಲಿಕಾ

ಗಡಿಗೆಯನ್ನಾದರೂ ಒಡೆಯಬೇಕು, ಬಟ್ಟೆಯನ್ನಾದರೂ ಹರಿಯಬೇಕು, ಕತ್ತೆಯಂತಾದರೂ ಕಿರಿಚಬೇಕು! ಯಾವುದಾದರೊಂದು ರೀತಿಯಿಂದ ಪ್ರಸಿದ್ಧಿಗೆ ಬರಬೇಕು!

**ಚತ್ವಾರಿ ಯಸ್ಯ ದ್ವಾರಾಣಿ ಸುಗುಪ್ತಾನ್ಯಮರೋತ್ತಮಾಃ ।**
**ಉಪಸ್ಥಮುದರಂ ಹಸ್ತೌ ವಾಕ್ಚತುರ್ಥೀ ಸ ಧರ್ಮವಿತ್ ॥ ೫೦೭**

- ಮಹಾಭಾರತ

ಎಲೈ ದೇವತೆಗಳೆ, ಜನನೇಂದ್ರಿಯ, ಹೊಟ್ಟೆ, ಕೈ, ಮಾತು - ಇವು ನಾಲ್ಕು ಅಧರ್ಮದ ದ್ವಾರಗಳು. ಯಾವನು ಈ ನಾಲ್ಕನ್ನು ಸರಿಯಾಗಿ ರಕ್ಷಿಸಿಕೊಳ್ಳುತ್ತಾನೋ ಅವನೇ ಧರ್ಮಜ್ಞ.

**ಜಾನೀಯಾತ್ಸಂಗರೇ ಭೃತ್ಯಾನ್ ಬಾಂಧವಾನ್ ವ್ಯಸನಾಗಮೇ ।**
**ಆಪತ್ಕಾಲೇಷು ಮಿತ್ರಾಣಿ ಭಾರ್ಯಾಂ ಚ ವಿಭವಕ್ಷಯೇ ॥ ೫೦೮**

- ಸುಭಾಷಿತರತ್ನಭಾಂಡಾಗಾರ

ಸೇವಕರ ಗುಣವನ್ನು ಯುದ್ಧದಲ್ಲಿಯೂ, ಬಂಧುಗಳ ಗುಣವನ್ನು ದುಃಖಕಾಲದಲ್ಲಿಯೂ, ಮಿತ್ರರ ಗುಣವನ್ನು ಕಷ್ಟಕಾಲದಲ್ಲಿಯೂ, ಹೆಂಡತಿಯ ಗುಣವನ್ನು ಐಶ್ವರ್ಯ ಹಾಳಾಗಿ ಹೋದಾಗಲೂ ಅರಿಯಬೇಕು.

**ತುಲ್ಯವರ್ಣಚ್ಛದಃ ಕೃಷ್ಣಃ ಕೋಕಿಲೈಃ ಸಹ ಸಂಗತಃ ।**
**ಕೇನ ವ್ಯಾಖ್ಯಾಯತೇ ಕಾಕಃ ಸ್ವಯಂ ಯದಿ ನ ಭಾಷತೇ ॥ ೫೦೯**

- ಭೋಜಪ್ರಬಂಧ

ಒಂದೇ ಬಗೆಯ ಬಣ್ಣದ ರೆಕ್ಕೆಗಳುಳ್ಳ ಕರಿಯ ಕಾಗೆ, ಕೋಗಿಲೆಗಳ ಜೊತೆಗೆ ಸೇರಿದಾಗ, ಅದು ತಾನಾಗಿ ಕರ್ರೆಂದು ಕೂಗದಿದ್ದರೆ, ಕಾಗೆಯೆಂದು ಯಾರು ಗೊತ್ತು ಮಾಡಬಲ್ಲರು?

**ದರಿದ್ರತಾ ಧೀರತಯಾ ವಿರಾಜತೇ**
**ಕುರೂಪತಾ ಶೀಲತಯಾ ವಿರಾಜತೇ ।**

ಕುಭೋಜನಂ ಚೋಷ್ಣತಯಾ ವಿರಾಜತೇ
ಕುವಸ್ತ್ರತಾ ಶುಭ್ರತಯಾ ವಿರಾಜತೇ ॥ ೫೧೦

- ಸುಭಾಷಿತರತ್ನಭಾಂಡಾಗಾರ

ಬಡತನ ಧೈರ್ಯದಿಂದಲೂ, ರೂಪಹೀನತೆ ಒಳ್ಳೆಯ ನಡತೆಯಿಂದಲೂ, ಚೆನ್ನಾಗಿಲ್ಲದ ಊಟ ಬಿಸಿಯಾಗಿರುವುದರಿಂದಲೂ, ಉತ್ತಮವಲ್ಲದ ಬಟ್ಟೆ ಶುಭ್ರವಾಗಿರುವುದರಿಂದಲೂ ಶೋಭಿಸುತ್ತವೆ.

ದ್ಯೂತಂ ಪುಸ್ತಕವಾದ್ಯೇ ಚ ನಾಟಕೇಷು ಚ ಸಕ್ತತಾ ।
ಸ್ತ್ರೀಯಸ್ತಂದ್ರೀ ಚ ನಿದ್ರಾ ಚ ವಿದ್ಯಾವಿಘ್ನಕರಾಣಿ ಷಟ್ ॥ ೫೧೧

- ಸುಭಾಷಿತರತ್ನಭಾಂಡಾಗಾರ

ಜೂಜು, ಬಣ್ಣ ಹಚ್ಚುವುದು ಹಾಗೂ ವಾದ್ಯ, ನಾಟಕದಲ್ಲಿ ಆಸಕ್ತಿ, ಹೆಂಗಸರು, ಆಲಸ್ಯ, ನಿದ್ರೆ – ಇವು ಆರೂ ವಿದ್ಯೆಗೆ ವಿಘ್ನವನ್ನುಂಟುಮಾಡುವುವು.

ದೋಷೋಽಪಿ ಗುಣತಾಂ ಯಾತಿ ಪ್ರಭೋರ್ಭವತಿ ಚೇತ್ಕೃಪಾ ।
ಅಂಗಹೀನೋಽಪಿ ಸೂರ್ಯೇಣ ಸಾರಥ್ಯೇಯೋಜಿತೋಽರುಣಃ ॥ ೫೧೨

- ಸುಭಾಷಿತರತ್ನಭಾಂಡಾಗಾರ

ಪ್ರಭುವಿನ ಕೃಪೆ ಒಂದು ಉಂಟಾದರೆ ದೋಷವೂ ಸಹ ಗುಣವೇ ಆಗುತ್ತದೆ. ಸೂರ್ಯನು ಅಂಗಹೀನನಾದ ಅರುಣನನ್ನೂ ಸಾರಥಿಯನ್ನಾಗಿ ನೇಮಿಸಿಕೊಂಡಿದ್ದಾನೆ.

ದುಷ್ಟಾ ಭಾರ್ಯಾ ಶಠಂ ಮಿತ್ರಂ ಭೃತ್ಯಶ್ಚೋತ್ತರದಾಯಕಃ ।
ಸಸರ್ಪೇ ಚ ಗೃಹೇ ವಾಸೋ ಮೃತ್ಯುರೇವ ನ ಸಂಶಯಃ ॥ ೫೧೩

- ಗರುಡಪುರಾಣ, ೧-೧೦೮-೨೫

ಕೆಟ್ಟ ಹೆಂಡತಿ, ವಂಚಕನಾದ ಸ್ನೇಹಿತ, ಮಾತಿಗೆ ಪ್ರತ್ಯುತ್ತರ ಹೇಳುವ ಸೇವಕ, ಹಾವಿರುವ ಮನೆಯಲ್ಲಿ ವಾಸ– ಇದು ಸಾಕ್ಷಾತ್ ಮರಣವೇ ಸರಿ. ಸಂದೇಹವಿಲ್ಲ.

ದ್ರೋಗ್ಧವ್ಯಂ ನ ಚ ಮಿತ್ರೇಷು ನ ವಿಶ್ವಸ್ತೇಷು ಕರ್ಹಿಚಿತ್ ।
ಯೇಷಾಂ ಚಾನ್ನಾನಿ ಭುಂಜೀತ ಯತ್ರ ಚ ಸ್ಯಾತ್ ಪ್ರತಿಶ್ರಯಃ ॥ ೫೧೪

- ಮಹಾಭಾರತ, ವನ. ೧೫೭-೨೧

ಮಿತ್ರರ ವಿಷಯದಲ್ಲಿ, ನಂಬಿಕೆ ಇಟ್ಟುಕೊಂಡವರಲ್ಲಿ, ಯಾರ ಅನ್ನವನ್ನು ತಿನ್ನುವನೋ ಅವರಲ್ಲಿ, ತನಗೆ ಆಶ್ರಯವನ್ನು ಕೊಟ್ಟವರಲ್ಲಿ ಎಂದಿಗೂ ದ್ರೋಹ ಮಾಡಬಾರದು.

**ದಾಂತಸ್ಯ ಕಿಮರಣ್ಯೇನ ತಥಾಽದಾಂತಸ್ಯ ಭಾರತ ।**
**ಯತ್ರೈವ ನಿವಸೇದ್ದಾಂತಸ್ತದರಣ್ಯಂ ಸ ಚಾಶ್ರಮಃ ॥ ೫೧೫**

- ಮಹಾಭಾರತ, ಶಾಂತಿ. ೧೬೦-೩೬

ಯಾರ ಮನಸ್ಸು ಹತೋಟಿಯಲ್ಲಿದೆಯೋ ಆ ದಾಂತನಿಗೆ ಅರಣ್ಯದಿಂದೇನು? ದಾಂತನಾಗದಿದ್ದರೆ ಅವನಿಗೂ ಅರಣ್ಯದಿಂದೇನಾಗುತ್ತದೆ? ದಾಂತನು ಎಲ್ಲಿರುವನೋ ಅದೇ ಅವನಿಗೆ ಅರಣ್ಯ. ಅದೇ ಅವನಿಗೆ ಶ್ರೇಯಸ್ಸನ್ನು ಕೊಡುವ ಆಶ್ರಮ.

**ದುರ್ಜನಸ್ಯ ಚ ಸರ್ಪಸ್ಯ ವರಂ ಸರ್ಪೋ ನ ದುರ್ಜನಃ ।**
**ಸರ್ಪೋ ದಶತಿ ಕಾಲೇ ತು ದುರ್ಜನಸ್ತು ಪದೇ ಪದೇ ॥ ೫೧೬**

- ಸಮಯೋಚಿತಪದ್ಯರತ್ನಮಾಲಿಕಾ

ದುರ್ಜನ, ಸರ್ಪ– ಇವರಲ್ಲಿ ಸರ್ಪ ಉತ್ತಮ; ದುರ್ಜನನಲ್ಲ. ಏಕೆಂದರೆ, ಕಾಲ ಬಂದಾಗ ಸರ್ಪವು ಒಂದು ಸಲ ಕಚ್ಚೀತು. ದುರ್ಜನನಾದರೋ ಹೆಜ್ಜೆ ಹೆಜ್ಜೆಗೂ ಕಚ್ಚುತ್ತಾನೆ.

**ದ್ವಿವಿಧೋ ಜಾಯತೇ ವ್ಯಾಧಿಃ ಶಾರೀರೋ ಮಾನಸಸ್ತಥಾ ।**
**ಪರಸ್ಪರಂ ತಯೋರ್ಜನ್ಮ ನಿರ್ದ್ವಂದ್ವಂ ನೋಪಲಭ್ಯತೇ ॥ ೫೧೭**

- ಮಹಾಭಾರತ, ಶಾಂತಿ. ೧೬-೮

ಶಾರೀರಿಕ, ಮಾನಸಿಕ - ಎಂದು ಎರಡು ಬಗೆಯ ರೋಗ ಹುಟ್ಟುತ್ತದೆ. ಅದು ಒಂದನ್ನೊಂದು ಆಶ್ರಯಿಸಿಕೊಂಡು ಹುಟ್ಟುತ್ತದೆ. ಶಾರೀರಿಕವಿಲ್ಲದೆ ಮಾನಸಿಕ ರೋಗವಿಲ್ಲ. ಮಾನಸಿಕವಿಲ್ಲದೆ ಶಾರೀರಿಕ ರೋಗವಿಲ್ಲ.

**ದುಃಖೋಪಘಾತೇ ಶಾರೀರೇ ಮಾನಸೇ ಚಾಪ್ಯುಪಸ್ಥಿತೇ ।**
**ಯಸ್ಮಿನ್ನ ಶಕ್ಯತೇ ಕರ್ತುಂ ಯತ್ನಸ್ತಂ ನಾನುಚಿಂತಯೇತ್ ॥ ೫೧೮**

- ಮಹಾಭಾರತ

ಶರೀರಕ್ಕೆ ಅಪಘಾತವಾಗಲಿ, ಮನಸ್ಸಿಗೆ ದುಃಖಪ್ರಸಂಗವಾಗಲಿ, ಒದಗಿದಾಗ, ಅದಕ್ಕೆ ಪರಿಹಾರೋಪಾಯವೇ ಇಲ್ಲವಾದರೆ ಚಿಂತೆಯನ್ನೇ ಬಿಟ್ಟುಬಿಡಬೇಕು. (ಅದೊಂದೇ ದುಃಖವನ್ನು ನೀಗುವ ಉಪಾಯ).

**ಧನ್ಯಾನಾಮುತ್ತಮಂ ದಾಕ್ಷ್ಯಂ ಧನಾನಾಮುತ್ತಮಂ ಶ್ರುತಂ ।**
**ಲಾಭಾನಾಂ ಶ್ರೇಯ ಆರೋಗ್ಯಂ ಸುಖಾನಾಂ ತುಷ್ಟಿರುತ್ತಮಾ ॥ ೫೧೯**

- ಮಹಾಭಾರತ, ವನ, ೩೧೩-೭೪

ಉತ್ತಮ ಗುಣಗಳಲ್ಲಿ ದಕ್ಷತೆಯು ಶ್ರೇಷ್ಠವಾದದ್ದು. ಧನಗಳಲ್ಲಿ ವಿದ್ಯಾಧನ ಶ್ರೇಷ್ಠ. ಲಾಭಗಳಲ್ಲಿ ಆರೋಗ್ಯಲಾಭವೂ, ಸುಖಗಳಲ್ಲಿ ತೃಪ್ತಿಸುಖವೂ ಉತ್ತಮ.

**ಧರ್ಮಾಖ್ಯಾನೇ ಶ್ಮಶಾನೇ ಚ ರೋಗಿಣಾಂ ಯಾ ಮತಿರ್ಭವೇತ್ ।**
**ಸಾ ಸರ್ವದೈವ ತಿಷ್ಠೇಚ್ಚೇತ್ ಕೋ ನ ಮುಚ್ಯೇತ ಬಂಧನಾತ್ ॥ ೫೨೦**

- ಸಮಯೋಚಿತಪದ್ಯರತ್ನಮಾಲಿಕಾ

ಧರ್ಮಪ್ರವಚನ ಕಾಲದಲ್ಲಿ, ಶ್ಮಶಾನದಲ್ಲಿ ಮತ್ತು ರೋಗಿಗಳಲ್ಲಿ ಯಾವ (ವೈರಾಗ್ಯ) ಬುದ್ಧಿ ಇರುತ್ತದೆಯೋ ಅದು ಯಾವಾಗಲೂ ಉಳಿದಿದ್ದರೆ ಸಂಸಾರ ಬಂಧನದಿಂದ ಯಾರಿಗೆ ಬಿಡುಗಡೆಯಾಗದು?

**ಧರ್ಮಾರ್ಥಕಾಮಮೋಕ್ಷಾಣಾಂ ಯಸ್ಯೈಕೋಽಪಿ ನ ವಿದ್ಯತೇ ।**
**ಅಜಾಗಲಸ್ತನಸ್ಯೇವ ತಸ್ಯ ಜನ್ಮ ನಿರರ್ಥಕಂ ॥ ೫೨೧**

- ಸಮಯೋಚಿತಪದ್ಯರತ್ನಮಾಲಿಕಾ

ಧರ್ಮ, ಅರ್ಥ, ಕಾಮ, ಮೋಕ್ಷ – ಇವುಗಳಲ್ಲಿ ಒಂದೂ ಯಾರಿಗೆ ಇಲ್ಲವೋ ಅವನ ಜನ್ಮ ಮೇಕೆಯ ಕತ್ತಿನಲ್ಲಿರುವ ಮೊಲೆಯಂತೆ ನಿರರ್ಥಕ.

**ನ ಗುಹ್ಯಗೋಪನೇ ಶಕ್ತಂ ನ ಚ ದಂಶನಿವಾರಣೇ ।**
**ಶುನಃ ಪುಚ್ಛಮಿವ ವ್ಯರ್ಥಂ ಲೋಭಿಹಸ್ತಗತಂ ಧನಂ ॥ ೫೨೨**

- ಸುಭಾಷಿತಾವಳಿ

ಜಿಪುಣನ ಕೈಯಲ್ಲಿರುವ ಹಣ ನಾಯಿಯ ಬಾಲವಿದ್ದಂತೆ ವ್ಯರ್ಥ. ನಾಯಿಯ ಬಾಲ ಅದರ ಗುಪ್ತಾಂಗವನ್ನು ಮುಚ್ಚಲೂ ಆರದು ; ನೊಣ ಸೊಳ್ಳೆಗಳನ್ನು ಓಡಿಸಲೂ ಆರದು!

**ನ ದೇವಾಯ ನ ವಿಪ್ರಾಯ ನ ಬಂಧುಭ್ಯೋ ನ ಚಾತ್ಮನೇ ।**
**ಕೃಪಣಸ್ಯ ಧನಂ ಯಾತಿ ವಹ್ನಿತಸ್ಕರಪಾರ್ಥಿವೈಃ ॥ ೫೨೩**

- ಸಮಯೋಚಿತಪದ್ಯರತ್ನಮಾಲಿಕಾ

ಜಿಪುಣನ ಹಣ ದೇವಕಾರ್ಯಕ್ಕಾಗಲಿ, ಬ್ರಾಹ್ಮಣನಿಗಾಗಲಿ, ಬಂಧುಗಳಿಗಾಗಲಿ ವಿನಿಯೋಗವಾಗುವುದಿಲ್ಲ; ತನಗೂ ಉಪಯೋಗಿಯಾಗದು. ಬೆಂಕಿ, ಕಳ್ಳ, ರಾಜ– ಇವರೊಡನೆ ಆ ಹಣ ಹೊರಟುಹೋಗುವುದು!

**ನವೇ ವಯಸಿ ಯಃ ಶಾಂತಃ ಸ ಶಾಂತ ಇತಿ ಮೇ ಮತಿಃ ।**
**ಧಾತುಷು ಕ್ಷೀಯಮಾಣೇಷು ಶಾಂತಿಃ ಕಸ್ಯ ನ ಜಾಯತೇ ॥ ೫೨೪**

- ಸುಭಾಷಿತರತ್ನಭಾಂಡಾಗಾರ

ಎಳೆಯ ವಯಸ್ಸಿನಲ್ಲಿ ಯಾರು ಶಾಂತನಾಗಿದ್ದಾನೆಯೋ ಅವನೀಗ ಶಾಂತನೆಂದು ನನ್ನ ಭಾವನೆ. ಶರೀರದ ಧಾತುಗಳೆಲ್ಲಾ ಕುಗ್ಗಿ ಹೋದ ಮೇಲೆ ಯಾರಿಗೆ ತಾನೇ ಶಾಂತಿಯುಂಟಾಗದು?

**ನ ದೇವೋ ವಿದ್ಯತೇ ಕಾಷ್ಠೇ ನ ಪಾಷಾಣೇ ನ ಮೃಣ್ಮಯೇ ।**
**ಭಾವೇ ಹಿ ವಿದ್ಯತೇ ದೇವಸ್ತಸ್ಮಾದ್‌ಭಾವೋ ಹಿ ಕಾರಣಂ ॥ ೫೨೫**

- ಸಮಯೋಚಿತಪದ್ಯರತ್ನಮಾಲಿಕಾ

ಕಟ್ಟಿಗೆಯಲ್ಲಿ, ಕಲ್ಲಿನಲ್ಲಿ ಅಥವಾ ಮಣ್ಣಿನ ವಿಗ್ರಹದಲ್ಲಿ ದೇವರಿಲ್ಲ, ದೇವರಿರುವುದು ಮನುಷ್ಯನ ಭಾವನೆಯಲ್ಲಿ. ಆದ್ದರಿಂದ ಭಾವನೆ ಎಲ್ಲದಕ್ಕೂ ಕಾರಣ.

**ನ ಭಾರ್ಯಯಾ ಸಮಂ ಮಿತ್ರಂ ನ ಚ ಧರ್ಮೋ ದಯಾಸಮಃ ।**
**ನ ಸ್ವಾತಂತ್ರ್ಯಸಮಂ ಸೌಖ್ಯಂ ಗಾರ್ಹಸ್ಥ್ಯಾನ್ನಾಶ್ರಮೋ ವರಃ ॥ ೫೨೬**

- ಪದ್ಮಪುರಾಣ, ೪-೮೮-೫೦

ಮಡದಿಗೆ ಸಮನಾದ ಮಿತ್ರನಿಲ್ಲ. ದಯೆಗೆ ಸಮವಾದ ಧರ್ಮವಿಲ್ಲ. ಸ್ವಾತಂತ್ರ್ಯಕ್ಕೆ ಸರಿಯಾದ ಸೌಖ್ಯವಿಲ್ಲ. ಗೃಹಸ್ಥಾಶ್ರಮಕ್ಕಿಂತ ಉತ್ತಮವಾದ ಆಶ್ರಮವಿಲ್ಲ.

**ನ ಹಾಯನೈರ್ನ ಪಲಿತೈಃ ನ ವಿತ್ತೇನ ನ ಬಂಧುಭಿಃ ।**
**ಋಷಯಶ್ಚಕ್ರಿರೇ ಧರ್ಮಂ ಯೋಽನೂಚಾನಃ ಸ ನೋ ಮಹಾನ್ ॥ ೫೨೭**

- ಮಹಾಭಾರತ, ಶಲ್ಯ. ೫೧-೪೯

ವರ್ಷಗಳು ಕಳೆದದ್ದರಿಂದ, ಕೂದಲು ನರೆತದ್ದರಿಂದ, ಹಣ ಅಥವಾ ಬಂಧುಗಳ ನಿಮಿತ್ತದಿಂದ ಋಷಿಗಳು ಧರ್ಮವೇನೆಂಬುದನ್ನು ಗೊತ್ತುಮಾಡಲಿಲ್ಲ. ಪರಂಪರೆಯಿಂದ ಧರ್ಮವೇನೆಂಬುದು ನಿರ್ಣೀತವಾಗಿದೆ. ನಮಗೆ ಅದು ದೊಡ್ಡದು.

**ನ ವ್ಯಾಧಯೋ ನಾಪಿ ಯಮಃ ಪ್ರಾಪ್ತುಂ ಶ್ರೇಯಃ ಪ್ರತೀಕ್ಷತೇ ।**
**ಯಾವದೇವ ಭವೇತ್ ಕಲ್ಪಸ್ತಾವಚ್ಛ್ರೇಯಃ ಸಮಾಚರೇತ್ ॥ ೫೨೮**

- ಮಹಾಭಾರತ, ಸಭಾ. ೫೬-೧೦

ಮನುಷ್ಯನು ಒಳ್ಳೆಯ ಕೆಲಸವನ್ನು ಮಾಡಿ ಮುಗಿಸಲೆಂದು, ರೋಗಗಳಾಗಲಿ ಯಮನಾಗಲಿ ಅಲ್ಲಿಯವರೆಗೆ ಕಾಯುತ್ತ ಕುಳಿತುಕೊಳ್ಳುವುದಿಲ್ಲ! ಯಾವಾಗ ಅವಕಾಶ ಅಥವಾ ಸಾಮರ್ಥ್ಯ ಇರುವುದೋ ಆಗಲೇ ಒಳ್ಳೆಯ ಕೆಲಸವನ್ನು ಮಾಡಿ ಬಿಡಬೇಕು.

**ನ ಹಿ ಪಾಪಾನಿ ಕರ್ಮಾಣಿ ಶುಧ್ಯಂತ್ಯನಶನಾದಿಭಿಃ ।**
**ಸೀದತ್ಯನಶನಾದೇವ ಮಾಂಸಶೋಣಿತಲೇಪನಃ ॥ ೫೨೯**

- ಮಹಾಭಾರತ, ವನ. ೨೦೦-೧೦೨

ಉಪವಾಸ ಮೊದಲಾದುವುಗಳಿಂದ, ಮಾಡಿದ ಕರ್ಮಗಳು ಶುದ್ಧವಾಗುವುದಿಲ್ಲ. ಉಪವಾಸದಿಂದ ಮಾಂಸ, ರಕ್ತಪೂರ್ಣವಾದ ದೇಹ ಒಣಗುತ್ತದೆ. ಅಷ್ಟೆ !

**ನ ಚಾಗಮಾದೃತೇ ಧರ್ಮಸ್ತರ್ಕೇಣ ವ್ಯವತಿಷ್ಠತೇ ।**
**ಋಷೀಣಾಮಪಿ ಯಜ್ಞಾನಂ ತದಪ್ಯಾಗಮಪೂರ್ವಕಂ ॥ ೫೩೦**

- ವಾಕ್ಯಪದೀಯ ೧-೩೦

ವೇದ ಶಾಸ್ತ್ರಗಳಿಂದಲ್ಲದೆ ಬರಿಯ ತರ್ಕದಿಂದ ಧರ್ಮದ ಸ್ವರೂಪ ವ್ಯವಸ್ಥಿತ ವಾಗುವುದಿಲ್ಲ. ಋಷಿಗಳ ಜ್ಞಾನವೂ ಸಹ ವೇದಶಾಸ್ತ್ರಗಳ ಮೂಲಕ ಬಂದದ್ದೇ ಸರಿ.

**ನ ಕೂಪಖನನಂ ಯುಕ್ತಂ ಪ್ರದೀಪ್ತೇ ವಹ್ನಿನಾ ಗೃಹೇ ।**
**ಚಿಂತನೀಯಾ ಹಿ ವಿಪದಾಮಾದಾವೇವ ಪ್ರತಿಕ್ರಿಯಾ ॥ ೫೩೧**

- ಸಮಯೋಚಿತಪದ್ಯಮಾಲಿಕಾ

ಮನೆಗೆ ಬೆಂಕಿ ಬಿದ್ದಾಗ ಬಾವಿ ತೆಗೆಸಲು ಹೊರಡುವುದು ಸರಿಯಲ್ಲ. ಮುಂದಾಗ ಬಹುದಾದ ವಿಪತ್ತುಗಳಿಗೆ ಮೊದಲೇ ಪರಿಹಾರವನ್ನು ಆಲೋಚಿಸಿಕೊಂಡಿರಬೇಕು.

**ನ ಸತ್ಯಂ ಕೇವಲಂ ಸತ್ಯಮನೃತಂ ನ ತಥಾನೃತಂ ।**
**ಹಿತಂ ಯತ್ ಸರ್ವಲೋಕಸ್ಯ ತತ್ಸತ್ಯಂ ಶೇಷಮನ್ಯಥಾ ॥ ೫೩೨**

- ಭಾರತಮಂಜರೀ, ೧೭-೪೦೨

ಇರುವುದನ್ನು ಇರುವ ಹಾಗೆ ನುಡಿದ ಮಾತ್ರದಿಂದ ಅದು ಸತ್ಯವಾಗದು. ಹಾಗೆ ಸತ್ಯವಲ್ಲದ್ದು ಸುಳ್ಳೆ ಅಲ್ಲ. ಯಾವುದು ಸರ್ವಲೋಕಕ್ಕೂ ಹಿತಕರವೋ ಅದು ಸತ್ಯ. ಹಿತಕರವಲ್ಲದ್ದು ಅಸತ್ಯ.

**ನಾನ್ಯಷಿಃ ಕುರುತೇ ಕಾವ್ಯಂ ನಾರುದ್ರಃ ಕ್ರಮಪಾಠಕಃ ।**
**ನಾದೇವಾಂಶೋ. ದದಾತ್ಯನ್ನಂ ನಾವಿಷ್ಣುಃ ಪೃಥಿವೀಪತಿಃ ॥ ೫೩೩**

- ಸುಭಾಷಿತರತ್ನಭಾಂಡಾಗರ

ಋಷಿಯಲ್ಲದವನು ಕಾವ್ಯ ರಚಿಸಲಾರ. ರುದ್ರಾಂಶವಿಲ್ಲದವನು ವೇದದ ಕ್ರಮಪಾಠ ಹೇಳಲಾರ. ದೇವರ ಅಂಶವಿಲ್ಲದವನು ಅನ್ನದಾನ ಮಾಡಲಾರ. ವಿಷ್ಣುವಿನ ಅಂಶವನ್ನು ಹೊಂದದವನು ರಾಜನಾಗಲಾರ.

**ನಾಕಾಲೇ ಮ್ರಿಯತೇ ಜಂತುಃ ವಿದ್ಧಃ ಶರಶತೈರಪಿ ।**
**ಕುಶಕಂಟಕವಿದ್ಧೋಽಪಿ ಪ್ರಾಪ್ತಕಾಲೋ ನ ಜೀವತಿ ॥ ೫೩೪**

- ಸುಭಾಷಿತರತ್ನಭಾಂಡಾಗಾರ

ನೂರಾರು ಬಾಣಗಳಿಂದ ಹೊಡೆಯಲ್ಪಟ್ಟರೂ ಅಕಾಲದಲ್ಲಿ ಒಬ್ಬನು ಸಾಯುವುದಿಲ್ಲ. ಮರಣಕಾಲ ಬಂದುಬಿಟ್ಟಾಗ ಒಂದು ದರ್ಭೆಯ ಹುಲ್ಲೋ ಅಥವಾ ಮುಳ್ಳೋ ತಗಲಿದರೂ ಬದುಕುವುದಿಲ್ಲ.

**ನ ಮಾತಾ ಶಪತೇ ಪುತ್ರಂ ನ ದೋಷಂ ಲಭತೇ ಮಹೀ ।**
**ನ ಹಿಂಸಾಂ ಕುರುತೇ ಸಾಧುರ್ನ ದೇವಃ ಸೃಷ್ಟಿನಾಶಕಃ ॥ ೫೩೫**

- ಸುಭಾಷಿತರತ್ನಭಾಂಡಾಗರ

ತಾಯಿ ಎಂದೂ ಮಗನನ್ನು ಶಪಿಸುವುದಿಲ್ಲ. ಭೂಮಿಗೆ ಯಾವ ದೋಷವೂ ಅಂಟುವುದಿಲ್ಲ. ಸಾಧುವಾದವನು ಎಂದೂ ಹಿಂಸೆ ಮಾಡುವುದಿಲ್ಲ. ದೇವನು ತಾನು ಸೃಜಿಸಿದುದನ್ನು ನಾಶಪಡಿಸುವುದಿಲ್ಲ.

**ನಿಕಟಸ್ಥಂ ಗರೀಯಾಂಸಮಪಿ ಲೋಕೋ ನ ಮನ್ಯತೇ ।**
**ಪವಿತ್ರಮಪಿ ಯನ್ಮರ್ತ್ಯಾ ನ ನಮಸ್ಯಂತಿ ಜಾಹ್ನವೀಂ ॥ ೫೩೬**

- ಸುಭಾಷಿತರತ್ನಭಾಂಡಾಗಾರ

ತಮಗೆ ಬಹಳ ಹತ್ತಿರದಲ್ಲೇ ಇದ್ದರೂ ಮಹಿಮಾಶಾಲಿಯನ್ನು ಸಾಮಾನ್ಯ ಜನ ಅರಿಯುವುದಿಲ್ಲ. ಪವಿತ್ರವೇ ಆಗಿದ್ದಾಗ್ಯೂ ಗಂಗಾನದಿಯನ್ನು ಹತ್ತಿರದಲ್ಲಿರುವ ಜನ ನಮಿಸುವುದಿಲ್ಲ.

**ಪ್ರಯತ್ನೇ ಸಮಕೇ ಕೇಚಿದೇವ ಸ್ಯುಃ ಫಲಭಾಗಿನಃ ।**
**ಕ್ಷೀರೋದಮಥನಾದ್ದೇವೈರಮೃತಂ ಪ್ರಾಪಿ ನಾಸುರೈಃ ॥ ೫೩೭**

- ಸುಭಾಷಿತರತ್ನಭಾಂಡಾಗಾರ

ಸಮಸಮವಾಗಿಯೇ ಪ್ರಯತ್ನ ಮಾಡಿದರೂ ಕೆಲವರಿಗೆ ಮಾತ್ರ ಫಲ ಲಭಿಸುತ್ತದೆ. ಕ್ಷೀರಸಮುದ್ರವನ್ನು ಕಡೆದಾಗ ದೇವತೆಗಳಿಗೇ ಅಮೃತ ದೊರಕಿತು. ರಾಕ್ಷಸರಿಗೆ ದೊರಕಲೇ ಇಲ್ಲ.

**ಪ್ರಾಪ್ಯ ಚಲಾನಧಿಕಾರಾನ್ ಶತ್ರುಷು ಮಿತ್ರೇಷು ಬಂಧುವರ್ಗೇಷು ।**
**ನಾಪಕೃತಂ ನೋಪಕೃತಂ ನ ಸತ್ಕೃತಂ ಕಿಂ ಕೃತಂ ತೇನ ॥ ೫೩೮**

- ಸುಭಾಷಿತರತ್ನಭಾಂಡಾಗಾರ

ಚಂಚಲವಾದ ಅಧಿಕಾರ ಬಂದಾಗ ಶತ್ರುಗಳಿಗೆ ಅಪಕಾರವನ್ನೂ ಸ್ನೇಹಿತರಿಗೆ ಉಪಕಾರವನ್ನೂ, ಬಾಂಧವರಿಗೆ ಸತ್ಕಾರವನ್ನೂ ಮಾಡದೆ ಹೋದವನು ಏನನ್ನು ತಾನೇ ಮಾಡಿದಂತಾಯಿತು?

**ಪಠತೋ ನಾಸ್ತಿ ಮೂರ್ಖತ್ವಂ ಜಪತೋ ನಾಸ್ತಿ ಪಾತಕಂ ।**
**ಮೌನಿನಃ ಕಲಹೋ ನಾಸ್ತಿ ನ ಭಯಂ ಚಾಸ್ತಿ ಜಾಗ್ರತಃ ॥ ೫೩೯**

- ಸುಭಾಷಿತ ರತ್ನಭಾಂಡಾಗಾರ

ಅಧ್ಯಯನಮಾಡುತ್ತಿರುವವನಿಗೆ ಮೂರ್ಖತ್ವವಿಲ್ಲ. ಜಪಮಾಡುತ್ತಿರುವವನಿಗೆ ಪಾಪವಿರದು. ಮೌನವಾಗಿರುವವನಿಗೆ ಜಗಳವಿಲ್ಲ. ಎಚ್ಚರಿಕೆಯಿಂದಿರುವವನಿಗೆ ಭಯವೇ ಇರದು.

**ಪಶ್ಯ ಕರ್ಮವಶಾತ್ ಪ್ರಾಪ್ತಂ ಭೋಜ್ಯಕಾಲೇಽಪಿ ಭೋಜನಂ ।**
**ಹಸ್ತೋದ್ಯಮಂ ವಿನಾ ವಕ್ತ್ರೇ ಪ್ರವಿಶೇನ್ನ ಕಥಂಚನ ॥ ೫೪೦**

- ಪಂಚತಂತ್ರ

ಪ್ರತಿಯೊಂದು ವಿಷಯವೂ ನಮ್ಮ ಕ್ರಿಯೆಯಿಂದಲೇ ನಡೆಯುತ್ತದೆ. (ಸುಮ್ಮನಿದ್ದರೆ ನಡೆಯದು). ಊಟದ ಹೊತ್ತಿನಲ್ಲಿ ಒದಗಿದ ಆಹಾರವೂ ಸಹ ಕೈಯ ಪ್ರಯತ್ನವಿಲ್ಲದೆ ಬಾಯೊಳಗೆ ಹೋಗದು, ನೋಡು!

**ಪ್ರತ್ಯಹಂ ಪ್ರತ್ಯವೇಕ್ಷೇತ ನರಶ್ಚರಿತಮಾತ್ಮನಃ ।**
**ಕಿಂ ನು ಮೇ ಪಶುಭಿಸ್ತುಲ್ಯಂ ಕಿಂ ನು ಸತ್ಪುರುಷೈರಿತಿ ॥ ೫೪೧**

- ಸುಭಾಷಿತರತ್ನಭಾಂಡಾಗಾರ

ನಾನು ಪಶುಗಳಿಗೆ ಸಮನಾಗಿದ್ದೇನೆಯೋ? ಅಥವಾ ಸಜ್ಜನರಿಗೆ ಸಮ ನಾಗಿದ್ದೇನೆಯೋ?– ಎಂದು ಪ್ರತಿದಿನವೂ ಮನುಷ್ಯನು ತನ್ನ ನಡತೆಯನ್ನು ತಾನೇ ಪರೀಕ್ಷಿಸಿಕೊಳ್ಳಬೇಕು.

**ಪಿಪೀಲಿಕಾರ್ಜಿತಂ ಧಾನ್ಯಂ ಮಕ್ಷಿಕಾಸಂಚಿತಂ ಮಧು ।**
**ಲುಬ್ಧೇನ ಸಂಚಿತಂ ದ್ರವ್ಯಂ ಸಮೂಲಂ ಚ ವಿನಶ್ಯತಿ ॥ ೫೪೨**

- ಸುಭಾಷಿತರತ್ನಭಾಂಡಾಗಾರ

ಇರುವೆಗಳು ಕೂಡಿಟ್ಟ ಧಾನ್ಯ, ಜೇನ್ನೊಣಗಳು ಕೂಡಿಟ್ಟ ಜೇನುತುಪ್ಪ, ಜಿಪುಣನು ಕೂಡಿಟ್ಟ ಹಣ - ಇವೆಲ್ಲ ಬುಡಸಹಿತ ನಾಶವಾಗುತ್ತವೆ.

**ಪಾತ್ರಾಪಾತ್ರವಿವೇಕೋಽಸ್ತಿ ಧೇನುಪನ್ನಗಯೋರಿವ ।**
**ತೃಣಾತ್ಸಂಜಾಯತೇ ಕ್ಷೀರಂ ಕ್ಷೀರಾತ್ಸಂಜಾಯತೇ ವಿಷಂ ॥ ೫೪೩**

- ಸುಭಾಷಿತರತ್ನಭಾಂಡಾಗಾರ

ಪಾತ್ರರಾದವರಿಗೂ ಅಪಾತ್ರರಾದವರಿಗೂ ವೈಲಕ್ಷಣ್ಯ ಇದ್ದೇ ಇದೆ. ಹೇಗೆಂದರೆ ಹಸು ಮತ್ತು ಹಾವಿನ ನಡುವೆ ಇರುವಂತೆ. ಹಸುವಿನಲ್ಲಿ ಹುಲ್ಲಿನಿಂದ ಹಾಲುಂಟಾಗುತ್ತದೆ. ಆದರೆ ಹಾವಿನಲ್ಲಿ ಹಾಲಿನಿಂದ ವಿಷವುಂಟಾಗುತ್ತದೆ.

**ಪಠಕಾಃ ಪಾಠಕಾಶ್ಚೈವ ಯೇ ಚಾನ್ಯೇ ಶಾಸ್ತ್ರಚಿಂತಕಾಃ ।**
**ಸರ್ವೇ ವ್ಯಸನಿನೋ ಮೂರ್ಖಾಃ ಯಃ ಕ್ರಿಯಾವಾನ್ ಸ ಪಂಡಿತಃ ॥ ೫೪೪**

- ಮಹಾಭಾರತ, ವನ. ೩೧೩-೧೧೦

ಓದುವವರು, ಓದಿಸುವವರು ಮತ್ತು ಶಾಸ್ತ್ರವಿಷಯವನ್ನು ಚಿಂತಿಸುವ ಇತರರು ಇವರೆಲ್ಲರೂ ಕೇವಲ ಗ್ರಂಥವ್ಯಸನವನ್ನು ಹಚ್ಚಿಕೊಂಡಿದ್ದರೆ ಮೂರ್ಖರೇ ಸರಿ. ಯಾವನು ಶಾಸ್ತ್ರೋಕ್ತವಾಗಿ ನಡೆಯುತ್ತಾನೋ ಅವನೇ ಪಂಡಿತ.

**ಪ್ರಿಯೇ ನಾತಿಭೃಶಂ ಹೃಷ್ಯೇತ್ ಅಪ್ರಿಯೇ ನ ಚ ಸಂಜ್ವರೇತ್ ॥**
**ನ ಮುಹ್ಯೇದರ್ಥಕೃಚ್ಛ್ರೇಷು ನ ಚ ಧರ್ಮಂ ಪರಿತ್ಯಜೇತ್ ॥ ೫೪೫**

- ಮಹಾಭಾರತ, ವನ. ೨೦೭-೪೩

ಪ್ರಿಯವಾದದ್ದು ಘಟಿಸಿದಾಗ ಅತಿಯಾಗಿ ಸಂತೋಷಪಡಬಾರದು. ಅಪ್ರಿಯವು ಒದಗಿದಾಗ ಬಹಳ ಖಿನ್ನನಾಗಬಾರದು. ಹಣದ ಮುಗ್ಗಟ್ಟು ಒದಗಿದಾಗ ಬುದ್ಧಿಯನ್ನು ಕೆಡಿಸಿಕೊಳ್ಳಬಾರದು. ಯಾವಾಗಲೂ ಧರ್ಮವನ್ನು ತ್ಯಜಿಸಬಾರದು.

**ಪರಾನ್ನಂ ಚ ಪರಸ್ವಂ ಚ ಪರಶಯ್ಯಾಃ ಪರಸ್ತ್ರಿಯಃ ।**
**ಪರವೇಶ್ಮನಿ ವಾಸಶ್ಚ ಶಕ್ರಸ್ಯಾಪಿ ಶ್ರಿಯಂ ಹರೇತ್ ॥ ೫೪೬**

- ಗರುಡಪುರಾಣ, ೧-೧೧೫-೫

ಪರಾನ್ನ, ಪರಧನ, ಪರರ ಹಾಸಿಗೆ, ಪರಸ್ತ್ರೀ, ಪರಗೃಹವಾಸ - ಇವು ದೇವೇಂದ್ರನ ಸಂಪತ್ತನ್ನೂ ಸಹ ನಾಶಮಾಡಬಲ್ಲವು.

**ಪುಣ್ಯಸ್ಯ ಫಲಮಿಚ್ಛಂತಿ ಪುಣ್ಯಂ ನೇಚ್ಛಂತಿ ಮಾನವಾಃ ।**
**ಪಾಪಸ್ಯ ತು ನಹೀಚ್ಛಂತಿ ಪಾಪಂ ಕುರ್ವಂತಿ ಯತ್ನತಃ ॥ ೫೪೭**

- ಮಹಾಭಾರತ

ಜನರು ಪುಣ್ಯಕೆಲಸವನ್ನು ಮಾಡಲು ಇಷ್ಟಪಡುವುದಿಲ್ಲ. ಆದರೆ ಪುಣ್ಯದ ಫಲವನ್ನು ಬಯಸುತ್ತಾರೆ. ಇವರಿಗೆ ಪಾಪದ ಫಲವು ಬೇಡ. ಆದರೆ ಪ್ರಯತ್ನಪೂರ್ವಕವಾಗಿ ಪಾಪವನ್ನು ಮಾಡುತ್ತಾರೆ.

**ಬಲವಾನಪ್ಯ ಶಕ್ತೋಽಸೌ ಧನವಾನಪಿ ನಿರ್ಧನಃ ।**
**ಶ್ರುತವಾನಪಿ ಮೂರ್ಖಶ್ಚ ಯೋ ಧರ್ಮವಿಮುಖೋ ಜನಃ ॥ ೫೪೮**

- ಭೋಜಪ್ರಬಂಧ

ಯಾವನು ಧರ್ಮಬಾಹಿರನೋ ಅವನು ಬಲಶಾಲಿಯಾದರೂ ದುರ್ಬಲನೇ, ಹಣವಂತನಾದರೂ ಬಡವನೇ, ವಿದ್ಯಾವಂತನಾದರೂ ಮೂರ್ಖನೇ.

**ಬುಧಾಗ್ರೇ ನ ಗುಣಾನ್ ಬ್ರೂಯಾತ್ ಸಾಧು ವೇತ್ತಿ ಯತಃ ಸ್ವಯಂ**
**ಮೂರ್ಖಾಗ್ರೇಽಪಿ ಚ ನ ಬ್ರೂಯಾತ್ ಬುಧಪ್ರೋಕ್ತಂ ನ ವೇತ್ತಿ ಸಃ ॥ ೫೪೯**

- ಭೋಜಪ್ರಬಂಧ

ಪಂಡಿತನೆದುರಿಗೆ ಗುಣಗಳನ್ನು ವಿವರಿಸಬೇಕಾಗಿಲ್ಲ. ಏಕೆಂದರೆ ಅವನ್ನು ಅವನು ಚೆನ್ನಾಗಿ ಬಲ್ಲ. ಮೂರ್ಖನೆದುರಿಗೂ ಅವನ್ನು ಹೇಳಬೇಕಾಗಿಲ್ಲ. ಏಕೆಂದರೆ, ಪಂಡಿತನು ಹೇಳಿದ್ದನ್ನು ಅವನು ತಿಳಿದುಕೊಳ್ಳಲಾರ.

**ಭವತ್ಯೇಕಸಲೇ ಜನ್ಮ ಗಂಧಸ್ತೇಷಾಂ ಪೃಥಕ್ ಪೃಥಕ್ ।**
**ಉತ್ಪಲಸ್ಯ ಮೃಣಾಲಸ್ಯ ಮತ್ಸ್ಯಸ್ಯ ಕುಮುದಸ್ಯ ಚ ॥ ೫೫೦**

- ಸುಭಾಷಿತರತ್ನಭಾಂಡಾಗಾರ

ಒಂದೇ ಜಾಗದಲ್ಲಿ ಜನ್ಮವನ್ನು ಹೊಂದಿದರೂ ಅವರವರ ಗುಣಗಳು ಬೇರೆ ಬೇರೆಯಾಗಿರುತ್ತವೆ. ಹೇಗೆಂದರೆ ಒಂದೇ ಜಲದಲ್ಲಿ ಹುಟ್ಟಿದ ಉತ್ಪಲ, ಮೃಣಾಲ, ಮತ್ಸ್ಯ, ಕುಮುದ – ಇವುಗಳ ಗಂಧವು ಬೇರೆ ಬೇರೆ ಇರುವಂತೆ.

**ಮರ್ಕಟಸ್ಯ ಸುರಾಪಾನಂ ಮಧ್ಯೇ ವೃಶ್ಚಿಕದಂಶನಂ ।**
**ತನ್ಮಧ್ಯೇ ಭೂತಸಂಚಾರೋ ಯದ್ವಾ ತದ್ವಾ ಭವಿಷ್ಯತಿ ॥ ೫೫೧**

- ಸಮಯೋಚಿತಪದ್ಯಮಾಲಿಕಾ

ಮೊದಲೇ ಮಂಗ ! ಅದು ಹೆಂಡವನ್ನು ಕುಡಿಯಿತು. ಆಮೇಲೆ ಚೇಳು ಕುಟಿಕಿತು. ತರುವಾಯ ದೆವ್ವ ಹಿಡಿದುಕೊಂಡಿತು ! ಇನ್ನು ಹೇಳುವುದೇನು ? ಹುಚ್ಚಾಬಟ್ಟೆ ಹಾರಾಟ ನಡೆಯುವುದು !

**ಮನಸ್ಯೇಕಂ ವಚಸ್ಯೇಕಂ ಕರ್ಮಣ್ಯೇಕಂ ಮಹಾತ್ಮನಾಂ ।**
**ಮನಸ್ಯೇಕಂ ವಚಸ್ಯೇಕಂ ಕರ್ಮಣ್ಯೇಕಂ ದುರಾತ್ಮನಾಂ ॥ ೫೫೨**

- ಸಮಯೋಚಿತಪದ್ಯಮಾಲಿಕಾ

ಮಹಾತ್ಮರಿಗೆ ಮನಸ್ಸಿನಲ್ಲಿಯೂ ಒಂದೇ, ಮಾತಿನಲ್ಲಿಯೂ ಒಂದೇ, ಕಾರ್ಯದಲ್ಲಿಯೂ ಒಂದೇ. (ಮನಸ್ಸಿನಲ್ಲಿದ್ದುದನ್ನೇ ಹೇಳುತ್ತಾರೆ, ಹೇಳಿದ್ದನ್ನು ಮಾಡುತ್ತಾರೆ). ದುರಾತ್ಮರಿಗೆ ಮನಸ್ಸಿನಲ್ಲೊಂದು, ಮಾತಿನಲ್ಲಿ ಇನ್ನೊಂದು, ಕಾರ್ಯದಲ್ಲಿ ಮತ್ತೊಂದು.

**ಮಹಾನಪ್ಯಲ್ಪತಾಂ ಯಾತಿ ನಿರ್ಗುಣೇ ಗುಣವಿಸ್ತರಃ ।**
**ಆಧಾರಾಧೇಯಭಾವೇನ ಗಜೇಂದ್ರ ಇವ ದರ್ಪಣೇ ॥ ೫೫೩**

- ಸಮಯೋಚಿತಪದ್ಯರತ್ನಮಾಲಿಕಾ

ಗುಣದ ವಿಸ್ತಾರವು ದೊಡ್ಡದಾಗಿದ್ದರೂ ಗುಣಹೀನನ ದೃಷ್ಟಿಯಲ್ಲಿ ಚಿಕ್ಕದಾಗಿ ಬಿಡುತ್ತದೆ. ಆಧಾರದ ಭೇದದಿಂದ ಆಧೇಯವು ಬೇರೆಯಾಗಿ ತೋರುತ್ತದೆ, ಸಲಗವು ಕನ್ನಡಿಯಲ್ಲಿ ಕಾಣುವಂತೆ.

**ಮಾತೇವ ರಕ್ಷತಿ ಪಿತೇವ ಹಿತೇ ನಿಯುಙ್ಕ್ತೇ**
**ಕಾಂತೇವ ಚಾಭಿರಮಯತ್ಯಪನೀಯ ಖೇದಂ ।**
**ಕೀರ್ತಿಂ ಚ ದಿಕ್ಷು ವಿಮಲಾಂ ವಿತನೋತಿ ಲಕ್ಷ್ಮೀಂ**
**ಕಿಂ ಕಿಂ ನ ಸಾಧಯತಿ ಕಲ್ಪಲತೇವ ವಿದ್ಯಾ ॥ ೫೫೪**

- ಸಮಯೋಚಿತಪದ್ಯರತ್ನಮಾಲಿಕಾ

ವಿದ್ಯೆಯು ತಾಯಿಯಂತೆ ಪಾಲಿಸುತ್ತದೆ. ತಂದೆಯಂತೆ ಒಳ್ಳೆಯ ದಾರಿಯಲ್ಲಿ ನಿಯೋಜಿಸುತ್ತದೆ. ಮಡದಿಯಂತೆ ಆಯಾಸವನ್ನು ಪರಿಹರಿಸಿ ಆನಂದಪಡಿಸುತ್ತದೆ. ದಿಕ್ಕುದಿಕ್ಕುಗಳಲ್ಲಿ ಕೀರ್ತಿಯನ್ನು ಹರಡಿ ಐಶ್ವರ್ಯವನ್ನು ಸಂಪಾದಿಸಿಕೊಡುತ್ತದೆ. ವಿದ್ಯೆ ಕಲ್ಪಲತೆ ಇದ್ದಂತೆ. ಅದು ಏನನ್ನು ತಾನೆ ಸಾಧಿಸದು ?

**ಮನೀಷಿಣಃ ಸಂತಿ ನ ತೇ ಹಿತೈಷಿಣೋ**
**ಹಿತೈಷಿಣಃ ಸಂತಿ ನ ತೇ ಮನೀಷಿಣಃ ।**
**ಸುಹೃಚ್ಚ ವಿದ್ವಾನಪಿ ದುರ್ಲಭೋ ನೃಣಾಂ**
**ಯಥೌಷಧಂ ಸ್ವಾದು ಹಿತಂ ಚ ದುರ್ಲಭಂ ॥ ೫೫೫**

- ಸುಭಾಷಿತರತ್ನಭಾಂಡಾಗಾರ

ಬುದ್ಧಿವಂತರನೇಕರಿದ್ದಾರೆ ; ಆದರೆ ಅವರೆಲ್ಲ ಹಿತೈಷಿಗಳಲ್ಲ. ಹಿತೈಷಿಗಳನೇಕ ರಿದ್ದಾರೆ ; ಆದರೆ ಅವರೆಲ್ಲ ಬುದ್ಧಿವಂತರಲ್ಲ. ಸಿಹಿಯಾಗಿಯೂ ಇದ್ದು ಹಿತಕರವಾಗಿಯೂ

ಇರುವ ಔಷಧಿ ಹೇಗೆ ದುರ್ಲಭವೋ ಹಾಗೆ ಎಲ್ಲವನ್ನೂ ತಿಳಿದವನೂ ಆಗಿ ಸಜ್ಜನಿಕೆಯನ್ನೂ ಹೊಂದಿರುವ ಮನುಷ್ಯ ದುರ್ಲಭ !

**ಮೂರ್ಖೇಣ ಸಹ ಸಂಯೋಗೋ ವಿಷಾದಪಿ ಸುದುರ್ಜರಃ ।**
**ವಿಜ್ಞೇನ ಸಹ ಸಂಯೋಗಃ ಸುಧಾರಸಸಮಃ ಸ್ಮೃತಃ ॥ ೫೫೬**

- ದೇವೀಭಾಗವತ, ೧-೬-೫

ಮೂರ್ಖನ ಸಹವಾಸ ವಿಷಕ್ಕಿಂತ ವಿಷಮವಾದದ್ದು. ವಿದ್ವಾಂಸನ ಸಹವಾಸ ಅಮೃತರಸಕ್ಕೆ ಸಮಾನವಾದದ್ದು.

**ಮೃಗಾ ಮೃಗೈಃ ಸಂಗಮನುವ್ರಜಂತಿ**
**ಗಾವಶ್ಚಗೋಭಿಸ್ತುರಗಾಸ್ತುರಂಗೈಃ ।**
**ಮೂರ್ಖಾಶ್ಚ ಮೂರ್ಖೈಃ ಸುಧಿಯಃ ಸುಧೀಭಿಃ**
**ಸಮಾನಶೀಲವ್ಯಸನೇಷು ಸಖ್ಯಂ ॥ ೫೫೭**

- ಪಂಚತಂತ್ರ

ಮೃಗಗಳು ಮೃಗಗಳೊಡನೆ, ಹಸುಗಳು ಹಸುಗಳೊಡನೆ, ಕುದುರೆಗಳು ಕುದುರೆಗಳೊಡನೆ, ಮೂರ್ಖರು ಮೂರ್ಖರೊಡನೆ, ವಿದ್ವಾಂಸರು ವಿದ್ವಾಂಸರೊಡನೆ ಸೇರುತ್ತಾರೆ. ಗುಣಶೀಲಾಭ್ಯಾಸಗಳು ಸಮಾನವಾಗಿದ್ದವರೊಡನೆ ಸ್ನೇಹ ಬೆಳೆಯುತ್ತದೆ.

**ಮೃದುಮಪ್ಯವಮನ್ಯಂತೇ ತೀಕ್ಷ್ಣಾದುದ್ವಿಜತೇ ಜನಃ ।**
**ಮಾ ತೀಕ್ಷ್ಣೋ ಮಾ ಮೃದುರ್ಭೂಸ್ತ್ವಂ ತೀಕ್ಷ್ಣೋ ಭವ ಮೃದುರ್ಭವ ॥ ೫೫೮**

- ಮಹಾಭಾರತ, ಶಾಂತಿ. ೧೦೩-೩೪

ಮೃದುವಾಗಿದ್ದರೂ ಜನರು ಅವಮಾನಗೊಳಿಸುತ್ತಾರೆ. ಉಗ್ರನಾಗಿದ್ದರೆ ಉದ್ವೇಗಪಡುತ್ತಾರೆ. ಆದ್ದರಿಂದ ಕೇವಲ ಮೃದುವಾಗಿರಲೂ ಬೇಡ. ಉಗ್ರನಾಗಿರಲೂ ಬೇಡ. ಯಥೋಚಿತವಾಗಿ ಉಗ್ರನೂ ಆಗಿರು, ಮೃದುವೂ ಆಗಿರು.

**ಯಃ ಪಠತಿ ಲಿಖತಿ ಪಶ್ಯತಿ ಪರಿಪೃಚ್ಛತಿ ಪಂಡಿತಾನುಪಾಶ್ರಯತಿ ।**
**ತಸ್ಯ ದಿವಾಕರಕಿರಣೈರ್ನಲಿನೀದಲಮಿವ ವಿಕಾಸ್ಯತೇ ಬುದ್ಧಿಃ ॥ ೫೫೯**

- ಸುಭಾಷಿತರತ್ನಭಾಂಡಾಗಾರ

ಯಾವನು ಓದಿ, ಬರೆದು, ನೋಡಿ, ಬಗೆ ಬಗೆಯಾಗಿ ಪ್ರಶ್ನೆಮಾಡಿ, ಪಂಡಿತರನ್ನು ಆಸ್ರಯಿಸುವನೋ ಅವನ ಬುದ್ಧಿಯು ಸೂರ್ಯಕಿರಣಗಳಿಂದ ತಾವರೆಯ ದಳ ಅರಳುವಂತೆ ವಿಕಾಸಗೊಳ್ಳುವುದು.

**ಯಥಾ ಚತುರ್ಭಿಃ ಕನಕಂ ಪರೀಕ್ಷ್ಯತೇ**
**ನಿಘರ್ಷಣಚ್ಛೇದನ ತಾಪತಾಡನೈಃ ।**
**ತಥಾ ಚತುರ್ಭಿಃ ಪುರುಷಃ ಪರೀಕ್ಷ್ಯತೇ**
**ಶ್ರುತೇನ ಶೀಲೇನ ಕುಲೇನ ಕರ್ಮಣಾ ॥ ೫೬೦**

- ಸುಭಾಷಿತ ರತ್ನಭಾಂಡಾಗಾರ

(ಒರೆ) ಉಜ್ಜುವುದು, ಕತ್ತರಿಸುವುದು, ಕಾಯಿಸುವುದು ಮತ್ತು ಬಡಿಯುವುದು ಎಂಬ ಈ ನಾಲ್ಕರಿಂದ ಹೇಗೆ ಚಿನ್ನವನ್ನು ಪರೀಕ್ಷಿಸುತ್ತಾರೆಯೋ ಹಾಗೆ ವಿದ್ಯೆ, ನಡತೆ, ಕುಲ ಮತ್ತು ಕ್ರಿಯೆ ಈ ನಾಲ್ಕರಿಂದ ಪುರುಷನನ್ನು ಪರೀಕ್ಷಿಸುತ್ತಾರೆ.

**ಯುಕ್ತಿ ಯುಕ್ತಂ ಪ್ರಗೃಹ್ಣೀಯಾತ್ ಬಾಲಾದಪಿ ವಿಚಕ್ಷಣಃ ।**
**ರವೇರವಿಷಯಂ ವಸ್ತು ಕಿಂ ನ ದೀಪಃ ಪ್ರಕಾಶಯೇತ್ ॥ ೫೬೧**

- ಸುಭಾಷಿತ ರತ್ನಭಾಂಡಾಗಾರ

ಯುಕ್ತಿಯುಕ್ತವಾದ ಮಾತನ್ನು ಬಾಲಕನು ಹೇಳಿದರೂ ಸಹ ಬುದ್ಧಿವಂತನಾದವನು ಗ್ರಹಿಸಬೇಕು. ಸೂರ್ಯನು ಬೆಳಗಲಾರದ ಪದಾರ್ಥವನ್ನು ದೀಪ ಬೆಳಗಲಾರದೇ?

**ಯಸ್ಮಿನ್ ರುಷ್ಟೇ ಭಯಂ ನಾಸ್ತಿ ತುಷ್ಟೇ ನೈವ ಧನಾಗಮಃ ।**
**ನಿಗ್ರಹಾನುಗ್ರಹೌ ನ ಸ್ತಃ ಸ ರುಷ್ಟಃ ಕಿಂ ಕರಿಷ್ಯತಿ ॥ ೫೬೨**

- ಸುಭಾಷಿತ ರತ್ನಭಾಂಡಾಗಾರ

ಯಾವಾತನು ಕೋಪಗೊಂಡರೆ ಭಯವಿಲ್ಲವೋ, ಯಾವಾತನು ಸಂತುಷ್ಟನಾದರೆ ಧನಪ್ರಾಪ್ತಿಯಾಗುವುದಿಲ್ಲವೋ, ಯಾರಿಂದ ನಿಗ್ರಹವಾಗಲೀ ಅನುಗ್ರಹವಾಗಲೀ ಆಗುವುದಿಲ್ಲವೋ ಅಂಥವನು ಕೋಪಗೊಂಡು ಮಾಡುವುದು ತಾನೇ ಏನು?

**ಯಃ ಸ್ವಭಾವೋ ಹಿ ಯಸ್ಯಾಸ್ತಿ ಸ ನಿತ್ಯಂ ದುರತಿಕ್ರಮಃ ।**
**ಶ್ವಾ ಯದಿ ಕ್ರಿಯತೇ ರಾಜಾ ಸ ಕಿಂ ನಾಶ್ನಾತ್ಯುಪಾನಹಂ ॥ ೫೬೩**

- ಸಮಯೋಚಿತಪದ್ಯರತ್ನಮಾಲಿಕಾ

ಯಾವುದು ಯಾರಿಗೆ ಸ್ವಭಾವವಾಗಿದೆಯೋ ಅದನ್ನು ಅವರು ಎಂದಿಗೂ ಮೀರಿ ನಡೆಯಲಾರರು. ನಾಯಿಯನ್ನು ರಾಜನನ್ನಾಗಿ ಮಾಡಿದರೆ, ಅದು ಚಪ್ಪಲಿಯನ್ನು ತಿನ್ನದೆ ಇದ್ದೀತೆ!

**ಯಥಾ ಖರಶ್ಚಂದನಭಾರವಾಹೀ**
**ಭಾರಸ್ಯ ವೇತ್ತಾ ನ ತು ಚಂದನಸ್ಯ ।**

**ತಥೈವ ಲೋಕಾ ಬಹುಶಾಸ್ತ್ರಯುಕ್ತಾಃ**
**ಧರ್ಮೇಣ ಹೀನಾಃ ಪಶುಭಿಃ ಸಮಾನಾಃ ॥** ೫೬೪

- ಸಮಯೋಚಿತಪದ್ಯರತ್ನಮಾಲಿಕಾ

ಶ್ರೀಗಂಧದ ಹೊರೆಯನ್ನು ಹೊತ್ತ ಕತ್ತೆಗೆ ಅದರ ಭಾರ ತಿಳಿಯುವುದೇ ಹೊರತು ಅದರ ಪರಿಮಳ ಗೊತ್ತಾಗುವುದಿಲ್ಲ. ಹಾಗೆಯೇ ಜನರು ಬಹಳಶಾಸ್ತ್ರಗಳನ್ನು ಕಲಿತಿದ್ದರೂ ಧರ್ಮಮಾರ್ಗದಿಂದ ಚ್ಯುತರಾಗಿದ್ದರೆ ಪಶುಗಳಿಗೆ ಸಮಾನರೇ ಸರಿ.

**ಯತ್ರ ಸ್ತ್ರೀ ಯತ್ರ ಕಿತವೋ ಬಾಲೋ ಯತ್ರಾನುಶಾಸಿತಾ ।**
**ಮಜ್ಜಂತಿ ತೇಽವಶಾ ರಾಜನ್ ನದ್ಯಾಮಶ್ಮಪ್ಲವಾ ಇವ ॥** ೫೬೫

- ಮಹಾಭಾರತ, ಉದ್ಯೋಗ. ೩೮-೪೩

ಧರ್ಮರಾಯ, ಎಲ್ಲಿ ಹೆಂಗಸು ಅಥವಾ ಜಾಡಿಕೋರ ಅಥವಾ ಬಾಲಕನು ಅಧಿಪತಿಯಾಗಿ ಆಜ್ಞೆ ಹೊರಡಿಸುವರೋ ಅಲ್ಲಿರುವ ಜನರು ಪರಾಧೀನರಾಗಿ ಕಲ್ಲು ದೋಣಿಗಳು ಮುಳುಗುವಂತೆ ಮುಳುಗಿಹೋಗುತ್ತಾರೆ! (ಭೀಷ್ಮನು ಹೇಳಿದ್ದು)

**ಯಥಾ ಹಿ ರಶ್ಮಯೋಽಶ್ವಸ್ಯ ದ್ವಿರದಸ್ಯಾಂಕುಶೋ ಯಥಾ ।**
**ನರೇಂದ್ರಧರ್ಮೋ ಲೋಕಸ್ಯ ತಥಾ ಪ್ರಗ್ರಹಣಂ ಸ್ಮೃತಂ ॥** ೫೬೬

- ಮಹಾಭಾರತ, ಶಾಂತಿ. ೫೬-೫

ಕುದುರೆಗೆ ಕಡಿವಾಣ ಹೇಗೋ, ಆನೆಗೆ ಅಂಕುಶ ಹೇಗೋ ಹಾಗೆ ರಾಜಧರ್ಮವು ಲೋಕಕ್ಕೆ ಅದನ್ನು ಹತೋಟಿಗೊಳಿಸುವ ಹಗ್ಗವಾಗಿದೆ.

**ಯಃ ಪ್ರೀಣಯೇತ್ ಸುಚರಿತೈಃ ಪಿತರಂ ಸ ಪುತ್ರಃ**
**ಯದ್ ಭರ್ತುರೇವ ಹಿತಮಿಚ್ಛತಿ ತತ್‌ಕಲತ್ರಂ ।**
**ತನ್ಮಿತ್ರಮಾಪದಿ ಸುಖೇ ಚ ಸಮಕ್ರಿಯಂ ಯತ್**
**ಏತತ್ತ್ರಯಂ ಜಗತಿ ಪುಣ್ಯಕೃತೋ ಲಭಂತೇ ॥** ೫೬೭

- ಸುಭಾಷಿತತ್ರಿಶತೀ, ೧-೫೯

ಒಳ್ಳೆಯ ನಡತೆಯಿಂದ ತಂದೆಗೆ ಸಂತೋಷವನ್ನುಂಟುಮಾಡತಕ್ಕವನೇ ಮಗ. ಗಂಡನ ಹಿತವನ್ನೇ ಕೋರತಕ್ಕವಳು ಹೆಂಡತಿ. ಆಪತ್ಕಾಲದಲ್ಲಿಯೂ ಸುಖಕಾಲದಲ್ಲಿಯೂ ಒಂದೇ ರೀತಿಯಾಗಿ ಪ್ರೀತಿಯನ್ನಿಟ್ಟುಕೊಂಡಿರುವವನೇ ಸ್ನೇಹಿತ. ಈ ಬಗೆಯಲ್ಲಿರುವ ಪುತ್ರ, ಪತ್ನಿ, ಮಿತ್ರರು ಜಗತ್ತಿನಲ್ಲಿ ಪುಣ್ಯವಂತರಿಗೆ ದೊರಕುತ್ತಾರೆ.

**ಯತ್ನೇನಾನುಮಿತೋಽಪ್ಯರ್ಥಃ ಕುಶಲೈರನುಮಾತೃಭಿಃ ।**
**ಅಭಿಯುಕ್ತತರೈರನ್ಯೈರನ್ಯಥೈವೋಪಪಾದ್ಯತೇ ॥** ೫೬೮

- ವಾಕ್ಯಪದೀಯ, ೧-೩೪

ತರ್ಕ ಮಾಡತಕ್ಕವರು ಎಷ್ಟು ಜಾಣರಾಗಿದ್ದರೂ, ಅವರು ಬಹು ಪ್ರಯಾಸದಿಂದ ಗೊತ್ತು ಮಾಡಿದ ವಿಚಾರವು ಸಿದ್ಧಾಂತವಾಗಿ ನಿಲ್ಲುವುದಿಲ್ಲ. ಅವರಿಗಿಂತ ಹೆಚ್ಚು ಬುದ್ಧಿಶಾಲಿಗಳು ಆ ವಿಚಾರವನ್ನು ಖಂಡಿಸಿ ಇನ್ನೊಂದು ಬಗೆಯಾಗಿ ತಮ್ಮ ಸಿದ್ಧಾಂತವನ್ನು ಸ್ಥಾಪಿಸುತ್ತಾರೆ. (ಆದ್ದರಿಂದ ಧಾರ್ಮಿಕ ವಿಷಯದಲ್ಲಿ ಶಾಸ್ತ್ರವೇ ಪ್ರಮಾಣ).

**ಲೋಕಯಾತ್ರಾರ್ಥಮೇವೇಹ ಧರ್ಮಸ್ಯ ನಿಯಮಃ ಕೃತಃ ।**
**ಉಭಯತ್ರ ಸುಖೋದರ್ಕಃ ಇಹ ಚೈವ ಪರತ್ರ ಚ ॥ ೫೭೯**

- ಮಹಾಭಾರತ

ಧರ್ಮದ ನಿಯಮವನ್ನು ಗೊತ್ತು ಮಾಡಿರುವುದು ಲೋಕಯಾತ್ರೆ ಚೆನ್ನಾಗಿ ನಡೆಯಲೆಂದೇ. ಅದರಿಂದ ಇಹದಲ್ಲಿಯೂ ಪರದಲ್ಲಿಯೂ ಸುಖ ಉಂಟು.

**ವರಮೇಕೋ ಗುಣೀ ಪುತ್ರಃ ನ ಚ ಮೂರ್ಖಶತಾನ್ಯಪಿ ।**
**ಏಕಶ್ಚಂದ್ರಸ್ತಮೋ ಹಂತಿ ನ ಚತಾರಾಗಣೋಽಪಿ ಚ ॥ ೫೨೦**

- ಸುಭಾಷಿತರತ್ನಭಾಂಡಾಗಾರ

ಅವಿವೇಕಿಗಳಾದ ನೂರು ಮಂದಿ ಮಕ್ಕಳಾಗುವುದಕ್ಕಿಂತ ಗುಣಶಾಲಿಯಾದ ಒಬ್ಬ ಪುತ್ರ ಇರುವುದೇ ಮೇಲು. ಒಬ್ಬ ಚಂದ್ರ ಕತ್ತಲೆಯನ್ನೆಲ್ಲಾ ಹೋಗಲಾಡಿಸುತ್ತಾನೆ. ಆದರೆ ನಕ್ಷತ್ರಗಳ ಸಮೂಹ ಹಾಗೆ ಮಾಡದು.

**ವ್ಯವಸ್ಥಿತಃ ಪ್ರಶಾಂತಾತ್ಮಾ ಕುಪಿತೋಽಪ್ಯಭಯಂಕರಃ ।**
**ಅವ್ಯವಸ್ಥಿತಚಿತ್ತಸ್ಯ ಪ್ರಸಾದೋಽಪಿ ಭಯಂಕರಃ ॥ ೫೨೧**

- ಸಮಯೋಚಿತಪದ್ಯಮಾಲಿಕಾ

ವ್ಯವಸ್ಥಿತವಾದ ಬುದ್ಧಿಯಿಂದ ಕೆಲಸ ಮಾಡತಕ್ಕ ಶಾಂತಸ್ವಭಾವದವನು ಒಂದು ವೇಳೆ ಕೋಪಗೊಂಡರೂ ಅವನಿಂದ ಭಯವಿಲ್ಲ. ಆದರೆ ಯಾವನ ಬುದ್ಧಿ ಅವ್ಯವಸ್ಥಿತವಾಗಿರುವುದೋ ಅವನ ಅನುಗ್ರಹವೂ ಭಯಂಕರವೇ !

**ವ್ಯಸನಾನಂತರಂ ಸೌಖ್ಯಂ ಸ್ವಲ್ಪಮಪ್ಯಧಿಕಂ ಭವೇತ್ ।**
**ಕಾಷಾಯರಸಮಾಸ್ವಾದ್ಯ ಸ್ವಾದ್ವತೀವಾಂಬು ವಿಂದತೇ ॥ ೫೨೨**

- ಸುಭಾಷಿತರತ್ನಭಾಂಡಾಗಾರ

ದುಃಖವನ್ನನುಭವಿಸಿದ ನಂತರ ಬರುವ ಸ್ವಲ್ಪ ಸೌಖ್ಯವೂ ಸಹ ಅತಿಶಯವಾಗಿ ಸುಖಕರವಾಗಿರುತ್ತದೆ. ಕಹಿಯಾದ ಔಷಧಿಯನ್ನು ಸೇವಿಸಿದವನಿಗೆ ನೀರೂ ಕೂಡ ಬಹಳ ರುಚಿಕರವಾಗಿ ಕಂಡುಬರುತ್ತದೆ.

**ವ್ಯಾಕುಲೋಽಪಿ ವಿಪತ್ಪಾಶೈಃ ಸ್ಮರೇದ್ವಿಷ್ಣುಂ ಸದಾ ಹೃದಿ ।**
**ಶರತಲ್ಪಗತೋ ಭೀಷ್ಮಃ ಸಸ್ಮಾರ ಗರುಡಧ್ವಜಂ ॥ ೫೭೩**

- ಸುಭಾಷಿತ ರತ್ನಭಾಂಡಾಗಾರ

ವಿಪತ್ತುಗಳ ಪರಂಪರೆಯಿಂದ ವ್ಯಾಕುಲನಾಗಿದ್ದರೂ ಯಾವಾಗಲೂ ಮನಸ್ಸಿನಲ್ಲಿ ಭಗವಂತನನ್ನು ಸ್ಮರಿಸಬೇಕು. ಶರತಲ್ಪದಲ್ಲಿ ಮಲಗಿದ್ದ ಭೀಷ್ಮನು ಗರುಡಧ್ವಜನಾದ ವಿಷ್ಣುವನ್ನು ಸ್ಮರಿಸುತ್ತಲೇ ಇದ್ದನಷ್ಟೇ?

**ವ್ಯಾಧೇಸ್ತತ್ತ್ವಪರಿಜ್ಞಾನಂ ವೇದನಾಯಾಶ್ಚ ನಿಗ್ರಹಃ ।**
**ಏತದ್ವೈದ್ಯಸ್ಯ ವೈದ್ಯತ್ವಂ ನ ವೈದ್ಯಃ ಪ್ರಭುರಾಯುಷಃ ॥ ೫೭೪**

- ಸಮಯೋಚಿತಪದ್ಯಮಾಲಿಕಾ

ವ್ಯಾಧಿಯ ಸ್ವರೂಪವನ್ನು ಗೊತ್ತುಮಾಡುವುದು, ಆಗುವ ಯಾತನೆಯನ್ನು ತಡೆಯುವುದು - ಇದಿಷ್ಟು ವೈದ್ಯನ ವೈದ್ಯತ್ವ - ಅವನ ಕರ್ತವ್ಯ. ಆಯುಸ್ಸಿಗೆ ವೈದ್ಯನು ಸ್ವಾಮಿಯಲ್ಲ - ಹೊಣೆಯಲ್ಲ.

**ವಿವಾದೋ ಧನಸಂಬಂಧೋ ಯಾಚನಂ ಸ್ತ್ರೀಷು ಸಂಗತಿಃ ।**
**ಆದಾನಾಮಗ್ರತಃ ಸ್ಥಾನಂ ಮೈತ್ರೀಭಂಗಸ್ಯ ಹೇತವಃ ॥ ೫೭೫**

- ಸುಭಾಷಿತರತ್ನಭಾಂಡಾಗಾರ

ಜಗಳ, ಹಣಕಾಸಿನ ಸಂಬಂಧ, ಬೇಡಿಕೆ, ಹೆಂಗಸರ ಸಂಬಂಧ, ಸಾಲ ತೆಗೆದು ಕೊಳ್ಳುವುದು, ಮೇಲಿನ ಪದವಿಗೆ ಹೋಗುವುದು - ಇವು ಸ್ನೇಹ ಮುರಿದು ಬೀಳುವುದಕ್ಕೆ ಕಾರಣಗಳು.

**ಶನೈಃ ಪಂಥಾಃ ಶನೈಃ ಕಂಥಾ ಶನೈಃ ಪರ್ವತಮಸ್ತಕೇ ।**
**ಶನೈರ್ವಿದ್ಯಾ ಶನೈರ್ವಿತ್ತಂ ಪಂಚೈತಾನಿ ಶನೈಃ ಶನೈಃ ॥ ೫೭೬**

- ಸುಭಾಷಿತರತ್ನಭಾಂಡಾಗಾರ

ನಿಧಾನವಾಗಿ ದಾರಿ ನಡೆಯಬೇಕು. ಮೆಲ್ಲಮೆಲ್ಲಗೆ ಚಿಂದಿ ಹೊದೆಯ ಬೇಕು. ಮೆತ್ತಮೆತ್ತಗೆ ಬೆಟ್ಟ ಹತ್ತಬೇಕು. ಸ್ವಲ್ಪಸ್ವಲ್ಪವಾಗಿ ವಿದ್ಯೆಯನ್ನು ಸಂಪಾದಿಸಬೇಕು. ಇವೈದನ್ನೂ ಹೀಗೆ ಸ್ವಲ್ಪಸ್ವಲ್ಪವಾಗಿ ಮಾಡಬೇಕು.

**ಶುಭಂ ವಾಪ್ಯಶುಭಂ ಕರ್ಮ ಫಲಕಾಲಮಪೇಕ್ಷತೇ ।**
**ಶರದ್ಯೇವ ಫಲತ್ಯಾಶು ಶಾಲಿರ್ನ ಸುರಭೌ ಕ್ವಚಿತ್ ॥ ೫೭೭**

- ಸುಭಾಷಿತರತ್ನಭಾಂಡಾಗಾರ

ಒಳ್ಳೆಯ ಕರ್ಮವಾಗಲೀ ಕೆಟ್ಟ ಕರ್ಮವಾಗಲೀ ಫಲ ಕೊಡುವ ಕಾಲಕ್ಕಾಗಿ ಕಾಯುತ್ತದೆ. ಭತ್ತ ಶರತ್ಕಾಲದಲ್ಲಿ ಬೇಗ ಫಲಿಸುತ್ತದೆ. ಎಂದಿಗೂ ವಸಂತ ಕಾಲದಲ್ಲಲ್ಲ.

**ಶುಭಂ ವಾ ಯದಿ ವಾ ಪಾಪಂ ಯನ್ನೃಣಾಂ ಹೃದಿ ಸಂಸ್ಥಿತಂ ।**
**ಸುಗೂಢಮಪಿ ತಜ್ಞೇಯಂ ಸ್ವಪ್ನವಾಕ್ಯಾತ್ತಥಾ ಮದಾತ್ ॥ ೫೭೮**

- ಪಂಚತಂತ್ರ

ಮನುಷ್ಯರ ಮನಸ್ಸಿನಲ್ಲಿ ಒಳ್ಳೆಯದಾಗಲಿ ಕೆಟ್ಟದಾಗಲಿ ನೆಲಸಿದ್ದರೆ, ಅದು ಎಷ್ಟೋ ಗೂಢವಾಗಿರಲಿ, ಸ್ವಪ್ನದಲ್ಲಿ ಅಥವಾ ಮದವೇರಿದಾಗ ಮಾತಿನಿಂದ ಗೊತ್ತಾಗಿಬಿಡುತ್ತದೆ.

**ಶ್ವಃ ಕಾರ್ಯಮದ್ಯ ಕುರ್ವೀತ ಪೂರ್ವಾಹ್ಣೇ ಚಾಪರಾಹ್ಣಿಕಂ ।**
**ನ ಹಿ ಪ್ರತೀಕ್ಷತೇ ಮೃತ್ಯುಃ ಕೃತಮಸ್ಯ ನ ವಾ ಕೃತಂ ॥ ೫೭೯**

- ಮಹಾಭಾರತ

ನಾಳೆ ಮಾಡುವುದನ್ನು ಇಂದು ಮಾಡಬೇಕು. ಮಧ್ಯಾಹ್ನದ ಮೇಲೆ ಮಾಡಬೇಕೆಂದಿರುವುದನ್ನು ಪ್ರಾತಃಕಾಲವೇ ನಡೆಸಿಬಿಡಬೇಕು. ಇವನು ಕಾರ್ಯವನ್ನು ಮಾಡಿ ಮುಗಿಸಿದನೇ ಇಲ್ಲವೇ ಎಂಬುದನ್ನು ಮೃತ್ಯು ಕಾಯುತ್ತಿರುವುದಿಲ್ಲ.

**ಶೌರ್ಯೇ ತಪಸಿ ದಾನೇ ಚ ಯಸ್ಯ ನ ಪ್ರಥಿತಂ ಯಶಃ ।**
**ವಿದ್ಯಾಯಾಮರ್ಥಲಾಭೇ ವಾ ಮಾತುರುಚ್ಚಾರ ಏವ ಸಃ ॥ ೫೮೦**

- ಗರುಡಪುರಾಣ, ೧-೧೧೫-೩೨

ಶೌರ್ಯ, ತಪಸ್ಸು, ದಾನ, ವಿದ್ಯೆ ಅಥವಾ ಧನಸಂಪಾದನೆ - ಇವುಗಳಲ್ಲಿ ಒಂದಲ್ಲಾದರೂ ಯಾವನ ಕೀರ್ತಿ ಹರಡಿಲ್ಲವೋ ಅವನು ತಾಯಿಯ ಮಲವೇ ಸರಿ.

**ಸಂಗತಿಃ ಶ್ರೇಯಸೀ ಪುಂಸಾಂ ಸ್ವಪಕ್ಷೇ ಚ ವಿಶೇಷತಃ ।**
**ತುಷೈರಪಿ ಪರಿಭ್ರಷ್ಟಾ ನ ಪ್ರರೋಹಂತಿ ತಂಡುಲಾಃ ॥ ೫೮೧**

- ಪಂಚತಂತ್ರ

ಜನರೊಡನೆ ಸೇರಿಕೊಳ್ಳುವುದು ಒಳ್ಳೆಯದು. ಅದರಲ್ಲಿಯೂ ಸ್ವೀಯರೊಡನೆ ಬೆರೆಯುವುದು ಉತ್ತಮ. ಹೊಟ್ಟುಗಳಿಲ್ಲದಿದ್ದರೆ ಅಕ್ಕಿಕಾಳು ಮೊಳೆಯುವುದಿಲ್ಲ.

**ಸಂಗ್ರಹೈಕಪರಃ ಪ್ರಾಯಃ ಸಮುದ್ರೋಽಪಿ ರಸಾತಲೇ ।**
**ದಾತಾರಂ ಜಲದಂ ಪಶ್ಯ ಗರ್ಜಂತಂ ಭುವನೋಪರಿ ॥ ೫೮೨**

- ಭೋಜಪ್ರಬಂಧ

ಕೇವಲ ಕೂಡಿಹಾಕತಕ್ಕವನು ಸಮುದ್ರನಾದರೂ ಪಾತಾಳದಲ್ಲಿರುತ್ತಾನೆ. ನೀರನ್ನು ಕೊಡುವ ದಾತೃವಾದ ಮೋಡವನ್ನು ನೋಡು, ಲೋಕದ ಮೇಲ್ಗಡೆ ಗರ್ಜಿಸುತ್ತಿದೆ!

**ಸಕೃತ್‌ಕಂದುಕಪಾತೇನ ಪತತ್ಯಾರ್ಯಃ ಪತನ್ನಪಿ ।**
**ತಥಾ ಪತತಿ ಮೂರ್ಖಸ್ತು ಮೃತ್ಪಿಂಡಪತನಂ ಯಥಾ ॥ ೫೮೩**

- ಪಂಚತಂತ್ರ

ಮಹಾಪುರುಷನು ಒಂದು ಸಲ ಅಕಸ್ಮಾತ್ ಬಿದ್ದರೂ ಚೆಂಡಿನಂತೆ ಬೀಳುತ್ತಾನೆ. (ಮತ್ತೆ ಚೇತರಿಸಿಕೊಂಡು ಮೊದಲಿಗಿಂತ ಉನ್ನತ ರೀತಿಯಲ್ಲಿ ನಡೆಯುತ್ತಾನೆ). ಮೂರ್ಖನಾದರೋ ಮಣ್ಣಿನ ಮುದ್ದೆ ಬೀಳುವಂತೆ ಬೀಳುತ್ತಾನೆ!

**ಸತ್ಯಪಿ ಚ ಸುಕೃತಕರ್ಮಣಿ ದುರ್ನೀತಿಶ್ಚೇತ್ ಶ್ರಿಯಂ ಹರತ್ಯೇವ ।**
**ತೈಲೈಃ ಸದೋಪಯುಕ್ತಾಂ ದೀಪಶಿಖಾಂ ವಿದಲಯತಿ ಹಿ ವಾತಾಲಿಃ ॥ ೫೮೪**

- ಭೋಜಪ್ರಬಂಧ

ಪುಣ್ಯಬಲವಿದ್ದರೂ ಸಹ ಪಾಪಕರ್ಮವನ್ನು ಮಾಡಿದರೆ ಅದು ಸಂಪತ್ತನ್ನು ಹೋಗಲಾಡಿಸುತ್ತದೆ. ದೀಪದ ಜ್ವಾಲೆ ಎಣ್ಣೆಯನ್ನು ಬಳಸಿಕೊಳ್ಳುತ್ತಿದ್ದರೂ ಬಿರುಗಾಳಿ ದೀಪವನ್ನು ಆರಿಸಿಬಿಡುತ್ತದೆ.

**ಸಂಪೂರ್ಣಕುಂಭೋ ನ ಕರೋತಿ ಶಬ್ದಂ**
**ಅರ್ಧೋಘಟೋ ಘೋಷಮುಪೈತಿ ನೂನಂ ।**
**ವಿದ್ವಾನ್ಕುಲೀನೋ ನ ಕರೋತಿ ಗರ್ವಂ**
**ಜಲ್ಪಂತಿ ಮೂಢಾಸ್ತು ಗುಣೈರ್ವಿಹೀನಾಃ ॥ ೫೮೫**

- ಸುಭಾಷಿತರತ್ನಭಾಂಡಾಗಾರ

ತುಂಬಿದ ಕೊಡ ಶಬ್ದಮಾಡುವುದಿಲ್ಲ. ಅರ್ಧ ತುಂಬಿದ ಕೊಡ ನಿಜವಾಗಿ ಸದ್ದು ಮಾಡುತ್ತದೆ. ಹಾಗೆಯೇ ಕುಲೀನನಾದ ವಿದ್ವಾಂಸನು ಗರ್ವಪಡುವುದಿಲ್ಲ. ಆದರೆ ಗುಣರಹಿತರಾದ ಮೂಢರು ಬಾಯಿಗೆ ಬಂದಂತೆ ಹರಟುತ್ತಾರೆ.

**ಸಂತೋಷಕ್ಷತಯೇ ಪುಂಸಾಮಾಕಸ್ಮಿಕಧನಾಗಮಃ ।**
**ಸರಸಾಂ ಸೇತುಭೇದಾಯ ವರ್ಷೌಘಃ ಸ ಚ ನ ಸ್ಥಿರಃ ॥ ೫೮೬**

- ಸುಭಾಷಿತರತ್ನಭಾಂಡಾಗಾರ

ಮನುಷ್ಯರಿಗೆ ಅಕಸ್ಮಿಕವಾಗಿ ಹಣ ಬಂದುಬಿಟ್ಟರೆ ಸಂತೋಷ ಹೋಗಿಬಿಡುತ್ತದೆ. ಅನಿರೀಕ್ಷಿತವಾಗಿ ಬಂದ ಬಾರಿ ಮಳೆಯ ಪ್ರವಾಹ ಕೆರೆಗಳ ಕಟ್ಟೆಯನ್ನೊಡೆದು ಹಾಕುತ್ತದೆ. ಅದು ಸ್ಥಿರವೂ ಆಗಿರುವುದಿಲ್ಲ.

**ಸತ್ಯಂ ಸತ್ಯಂ ಮುನೇರ್ವಾಕ್ಯಂ ನಾದತ್ತಮುಪತಿಷ್ಠತೇ ।**
**ಅಂಬುಭಿಃ ಪೂರಿತಾ ಪೃಥ್ವೀ ಚಾತಕಸ್ಯ ಮರುಸ್ಥಲೀ ॥ ೫೮೭**

- ಸುಭಾಷಿತರತ್ನಭಾಂಡಾಗಾರ

'ದೈವ ಕೊಡದೆ ಇರುವುದು ದಕ್ಕುವುದಿಲ್ಲ' ಎಂದು ಋಷಿಗಳು ಹೇಳಿದುದು ನಿಜವಾಗಿಯೂ ಸತ್ಯವೇ ಸರಿ. ನೆಲದಲ್ಲೆಲ್ಲಾ ನೀರು ತುಂಬಿದ್ದರೂ ಚಾತಕಪಕ್ಷಿಯ ಪಾಲಿಗೆ ಅದು ಮರುಭೂಮಿಯೇ ಆಗಿದೆ.

**ಸ್ಥಾನಸ್ಥಿತಾನಿ ಪೂಜ್ಯಂತೇ ಪೂಜ್ಯಂತೇ ಚ ಪದೇ ಸ್ಥಿತಾಃ ।**
**ಸ್ಥಾನಭ್ರಷ್ಟಾ ನ ಪೂಜ್ಯಂತೇ ಕುಶಾ ದಂತಾ ನಖಾ ನರಾಃ ॥ ೫೮೮**

- ಗರುಡಪುರಾಣ, ೧-೧೧೫-೭೩

ತಮ್ಮ ಸ್ಥಳದಲ್ಲಿರತಕ್ಕವರೂ, ಅಧಿಕಾರದಲ್ಲಿರತಕ್ಕವರೂ ಗೌರವವನ್ನು ಪಡೆಯುತ್ತಾರೆ. ಸ್ಥಾನಭ್ರಷ್ಟರಾದ ಜನರಿಗೆ ಗೌರವವಿಲ್ಲ. ದರ್ಭೆ, ಹುಲ್ಲು, ಉಗುರು ಇವು ಸ್ಥಾನಭ್ರಷ್ಟವಾದರೆ ಗೌರವವಿಲ್ಲ. (ದರ್ಭೆಗೆ ಶಾಸ್ತ್ರೀಯ ಕಾರ್ಯದಲ್ಲಿ ಪೂಜೆ. ಉಳಿದೆಡೆ ಅದು ಬರಿಯ ಹುಲ್ಲು).

**ಸ್ವಕರ್ಮಧರ್ಮಾರ್ಜಿತಜೀವಿತಾನಾಂ**
**ಶಾಸ್ತ್ರೇಷು ದಾರೇಷು ಸದಾ ರತಾನಾಂ ।**
**ಜಿತೇಂದ್ರಿಯಾಣಾಮತಿಥಿಪ್ರಿಯಾಣಾಂ**
**ಗೃಹೇಽಪಿ ಮೋಕ್ಷಃ ಪುರುಷೋತ್ತಮಾನಾಂ ॥ ೫೮೯**

- ಗರುಡಪುರಾಣ, ೧-೧೦೯-೪೩

ಯಾರು ವಿಹಿತಕರ್ಮಾನುಗುಣವಾಗಿ ಧರ್ಮದಿಂದ ಜೀವನವನ್ನು ನಡೆಸುತ್ತಾರೋ, ಶಾಸ್ತ್ರಗಳಲ್ಲಿಯೂ ತಮ್ಮ ಪತ್ನಿಯರಲ್ಲಿಯೂ ಮಾತ್ರವೇ ಆಸಕ್ತರಾಗಿರುತ್ತಾರೋ, ಜಿತೇಂದ್ರಿಯರಾಗಿ ಅತಿಥಿಗಳನ್ನು ಪ್ರೀತಿಸುತ್ತಾರೋ ಅಂತಹ ಪುರುಷಶ್ರೇಷ್ಠರಿಗೆ ಮನೆಯಲ್ಲಿಯೇ ಮೋಕ್ಷ ದೊರೆಯುತ್ತದೆ.

**ಸಹಸ್ವ ಶ್ರಿಯಮನ್ಯೇಷಾಂ ಯದ್ಯಪಿ ತ್ವಯಿ ನಾಸ್ತಿ ಸಾ ।**
**ಅನ್ಯತ್ರಾಪಿ ಸತೀಂ ಲಕ್ಷ್ಮೀಂ ಕುಶಲಾ ಭುಂಜತೇ ಸದಾ ॥ ೫೯೦**

- ಮಹಾಭಾರತ, ಶಾಂತಿ. ೧೦೪-೩೩

ನಿನ್ನಲ್ಲಿ ಇಲ್ಲದಿದ್ದರೂ ಇತರರಲ್ಲಿರುವ ಐಶ್ವರ್ಯವನ್ನು ನೋಡಿ ಸಹಿಸಿಕೊ. (ಅಸೂಯೆ ಪಡಬೇಡ). ಅಲ್ಲಿ ಇರುವ ಐಶ್ವರ್ಯವನ್ನೂ ಪುಣ್ಯವಂತರು ಸದಾ ಅನುಭವಿಸುತ್ತಾರಲ್ಲವೆ?

**ಸಂತೋಷಸ್ತ್ರಿಷು ಕರ್ತವ್ಯಃ ಕಲತ್ರೇ ಭೋಜನೇ ಧನೇ ।**
**ತ್ರಿಷು ಚೈವ ನ ಕರ್ತವ್ಯೋಽಧ್ಯಯನೇ ಜಪದಾನಯೋಃ ॥ ೫೯೧**

- ಸಮಯೋಚಿತಪದ್ಯರತ್ನಮಾಲಿಕಾ

ಮಡದಿ, ಭೋಜನ, ಹಣ - ಈ ಮೂರರಲ್ಲಿ ತೃಪ್ತಿ ಇರಬೇಕು. ಅಧ್ಯಯನ, ಜಪ, ದಾನ - ಈ ಮೂರರಲ್ಲಿ ತೃಪ್ತಿ ಇರಬಾರದು.

**ಸುಖಮಧ್ಯೇ ಸ್ಥಿತಂ ದುಃಖಂ ದುಃಖಮಧ್ಯೇ ಸ್ಥಿತಂ ಸುಖಂ ।**
**ದ್ವಯಮನ್ಯೋನ್ಯಸಂಯುಕ್ತಂ ಪ್ರೋಚ್ಯತೇ ಜಲಪಂಕವತ್ ॥ ೫೯೨**

- ಸಮಯೋಚಿತಪದ್ಯಮಾಲಿಕಾ

ಸುಖದ ನಡುವೆ ದುಃಖವೂ ದುಃಖದ ನಡುವೆ ಸುಖವೂ ಇವೆ. ನೀರು ಕೆಸರುಗಳಂತೆ ಒಂದನ್ನೊಂದು ಸೇರಿಕೊಂಡೇ ಇರುತ್ತವೆ.

**ಸಾ ಭಾರ್ಯಾ ಯಾ ಪ್ರಿಯಂ ಬ್ರೂತೇ ಸ ಪುತ್ರೋ ಯತ್ರ ನಿರ್ವೃತಿಃ ।**
**ತನ್ಮಿತ್ರಂ ಯತ್ರ ವಿಶ್ವಾಸಃ ಸ ದೇಶೋ ಯತ್ರ ಜೀವ್ಯತೇ ॥ ೫೯೩**

- ಸುಭಾಷಿತರತ್ನಭಾಂಡಾಗಾರ

ಪ್ರಿಯವಾದ ಮಾತಾಡುವವಳೇ ಭಾರ್ಯೆ. ಯಾರಿಂದ ಸಂತೋಷವೋ ಅವನು ಪುತ್ರ. ಯಾರಲ್ಲಿ ನಂಬಿಕೆ ಇಡಬಹುದೋ ಅವನು ಮಿತ್ರ. ಎಲ್ಲಿ ಜೀವನ ನಡೆಯುವುದೋ ಅದು ದೇಶ.

**ಸಾ ಶ್ರೀರ್ಯಾ ನ ಮದಂ ಕುರ್ಯಾತ್ಸ ಸುಖೀ ತೃಷ್ಣಯೋಜ್ಝಿತಃ ।**
**ತನ್ಮಿತ್ರಂ ಯತ್ರ ವಿಶ್ವಾಸಃ ಪುರುಷಃ ಸ ಜಿತೇಂದ್ರಿಯಃ ॥ ೫೯೪**

- ಸುಭಾಷಿತರತ್ನಭಾಂಡಾಗಾರ

ಯಾವುದು ಮದವನ್ನುಂಟುಮಾಡುವುದಿಲ್ಲವೋ ಅದು ಸಂಪತ್ತು. ಯಾವನು ಆಸೆಯನ್ನು ಬಿಟ್ಟಿದ್ದಾನೋ ಅವನು ಸುಖಿ. ಯಾರನ್ನು ನಂಬಬಹುದೋ ಅವನು ಮಿತ್ರ. ಯಾವನು ಜಿತೇಂದ್ರಿಯನೋ ಅವನು ಪುರುಷ!

**ಸಾಕ್ಷರಾ ವಿಪರೀತಾಶ್ಚೇದ್ರಾಕ್ಷಸಾ ಏವ ಕೇವಲಂ ।**
**ಸರಸೋ ವಿಪರೀತಶ್ಚೇತ್ ಸರಸತ್ವಂ ನ ಮುಂಚತಿ ॥ ೫೯೫**

- ಸುಭಾಷಿತರತ್ನಭಾಂಡಾಗಾರ

ಅಕ್ಷರವನ್ನರಿತ 'ಸಾಕ್ಷರರು' ವಿಪರೀತಸ್ವಭಾವದವರಾದರೆ ಕೇವಲ ರಾಕ್ಷಸರೇ ಆಗುತ್ತಾರೆ. ಆದರೆ 'ಸರಸ' ಸ್ವಭಾವದವನು ವಿಪರೀತನಾದರೂ 'ಸರಸತ್ವ'ವನ್ನು ಬಿಡುವುದಿಲ್ಲ.

**ಸುಂದರೋಽಪಿ ಸುಶೀಲೋಽಪಿ ಕುಲೀನೋಽಪಿ ಮಹಾಧನಃ ।**
**ಶೋಭತೇ ನ ವಿನಾ ವಿದ್ಯಾಂ, ವಿದ್ಯಾ ಸರ್ವಸ್ಯ ಭೂಷಣಂ ॥೫೯೬**

- ಸುಭಾಷಿತರತ್ನಭಾಂಡಾಗಾರ

ಸುಂದರನಾದರೂ, ಒಳ್ಳೆಯ ನಡತೆಯವನಾದರೂ, ಸದ್ವಂಶದಲ್ಲಿ ಹುಟ್ಟಿದವನಾದರೂ, ಬಹಳ ಐಶ್ವರ್ಯವನ್ನುಳ್ಳವನಾದರೂ ವಿದ್ಯೆ ಇಲ್ಲದೆ ಮನುಷ್ಯ ಶೋಭಿಸುವುದಿಲ್ಲ. ಎಲ್ಲಕ್ಕೂ ವಿದ್ಯೆಯೇ ಭೂಷಣ.

**ಸುಮಂತ್ರಿತೇ ಸುವಿಕ್ರಾಂತೇ ಸುಕೃತೌ ಸುವಿಚಾರಿತೇ ।**
**ಪ್ರಾರಂಭೇ ಕೃತಬುದ್ಧೀನಾಂ ಸಿದ್ಧಿರವ್ಯಭಿಚಾರಿಣೀ ॥ ೫೯೭**

- ಸುಭಾಷಿತರತ್ನಭಾಂಡಾಗಾರ

ಇತರರೊಡನೆ ಚೆನ್ನಾಗಿ ಸಮಾಲೋಚನೆ ಮಾಡಿ, ಚೆನ್ನಾಗಿ ಆಲೋಚಿಸಿ, ಒಳ್ಳೆಯ ದೂರದರ್ಶಿತ್ವದೊಡನೆ ಬುದ್ಧಿವಂತರು ಕೈಕೊಳ್ಳುವ ಕಾರ್ಯಾರಂಭಕ್ಕೆ ಫಲಸಿದ್ಧಿ ಎಂದೂ ಇಲ್ಲದೆ ಇರುವುದಿಲ್ಲ.

**ಹಿತೋಪದೇಶಂ ಶೃಣುಯಾತ್ ಕುರ್ವೀತ ಚ ಯಥೋದಿತಂ ।**
**ವಿದುರೋಕ್ತಮಕೃತ್ವಾಭೂತ್ಕೌರವಃ ಶೋಕಶಲ್ಯಭಾಕ್ ॥ ೫೯೮**

- ಸುಭಾಷಿತರತ್ನಭಾಂಡಾಗಾರ

ಹಿತೋಪದೇಶವನ್ನು ಕೇಳಬೇಕು. ಅಲ್ಲಿ ಹೇಳಿರುವಂತೆ ನಡೆಯಬೇಕು. ವಿದುರ ಹೇಳಿದುದನ್ನು ಕೇಳಿ ಅದರಂತೆ ನಡೆದುಕೊಳ್ಳದೆ ಕೌರವನು ದುಃಖದ ಶೂಲಕ್ಕೆ ತುತ್ತಾದನು.



# ಶ್ಲೋಕಾನುಕ್ರಮಣಿಕಾ

| ಶ್ಲೋಕ | ಪುಟ |
|---|---|


ದ

### ಷ



### ಸ



**ಪ್ರಿಯ** ಕನ್ನಡ ಬಂಧುಗಳೆ, ೧೯೧೫ರಲ್ಲಿ ಸ್ಥಾಪನೆಗೊಂಡ ಕನ್ನಡ ಸಾಹಿತ್ಯ ಪರಿಷತ್ತು ೧೫ನೇ ವರ್ಷದ ಹೊಸ್ತಿಲಲ್ಲಿದೆ. ಸ್ಥಾಪನೆಗೊಂಡಂದಿನಿಂದ ಇಂದಿನವರೆಗೂ ಕನ್ನಡ–ಕನ್ನಡಿಗ–ಕರ್ನಾಟಕದ **ಒಳಿತಿಗೆ** ಶ್ರಮಿಸುತ್ತಾ, ಕನ್ನಡಿಗರಲ್ಲಿ ಸಾಹಿತ್ಯ **ಮತ್ತು** ಸಾಂಸ್ಕೃತಿಕ ಎಚ್ಚರ ಮೂಡಿಸುವಲ್ಲಿ ಪರಿಷತ್ತಿನ ಪ್ರಕಟಣೆಗಳು ಮಹತ್ವದ ಪಾತ್ರ ವಹಿಸುತ್ತಾ **ಬಂದಿವೆ.** **ನಮ್ಮ** ಪ್ರಕಟಣೆಗಳು ಓದುಗರ ಜೇಬಿಗೆ ಭಾರವೆನಿಸುವಂಥವಲ್ಲ, ಆದಷ್ಟೂ ಕಡಿಮೆ **ಬೆಲೆಯಲ್ಲಿ** **ಮೌಲಿಕ** ಕೃತಿಗಳನ್ನು ಸಹೃದಯರಿಗೆ ಕೊಡಬೇಕೆನ್ನುವ ನೀತಿಗೆ ಪರಿಷತ್ತು ಈಗಲೂ ಬದ್ಧವಾಗಿದೆ. ಕನ್ನಡಿಗರನ್ನು ಪ್ರಜ್ಞಾವಂತರಾಗಿ, ಅಭಿಮಾನಧನರಾಗಿ, ವಿಶ್ವಮಾನವರಾಗಿ **ರೂಪಿಸಲು** ಪರಿಷತ್ತು ಪ್ರಕಟಿಸುವ ಸಾಹಿತ್ಯವು ಪೂರಕವಾಗಿರಬೇಕೆನ್ನುವ ಆಶಯ ನನ್ನದು.

ಪರಿಷತ್ತು ಈಗಾಗಲೇ ಪ್ರಕಟಿಸಿ **ಅತ್ಯಂತ** ಜನಪ್ರಿಯವಾಗಿರುವ ಹಾಗೂ ಹೊಸ ಪುಸ್ತಕಗಳನ್ನು ಗದಗದಲ್ಲಿ ನಡೆಯುತ್ತಲಿರುವ ಅಖಿಲ ಭಾರತ **೬೬ನೆಯ** ಕನ್ನಡ ಸಾಹಿತ್ಯ ಸಮ್ಮೇಳನದ ಸಂದರ್ಭದಲ್ಲಿ ಮುದ್ರಣಗೊಳಿಸಿ ಕನ್ನಡಿಗರ ಕೈಗೊಪ್ಪಿಸುವುದಕ್ಕೆ ನಮಗೆ ಹೆಮ್ಮೆಯೆನಿಸುತ್ತದೆ. ಸಹೃದಯರು ಈ ಪುಸ್ತಕಗಳನ್ನು ಎಂದಿನ ಪ್ರೀತ್ಯಾದರಗಳಿಂದ ಬರಮಾಡಿಕೊಳ್ಳುವರೆಂಬ **ಭರವಸೆ** ನನಗಿದೆ.

ಡಾ. ನಲ್ಲೂರು **ಪ್ರಸಾದ್.** ಆರ್.ಕೆ.
ಅಧ್ಯಕ್ಷರು
ಕನ್ನಡ ಸಾಹಿತ್ಯ ಪರಿಷತ್ತು



**ಕನ್ನಡ ಸಾಹಿತ್ಯ ಪರಿಷತ್ತು**
**ಪಂಪಮಹಾಕವಿ ರಸ್ತೆ, ಚಾಮರಾಜಪೇಟೆ**
**ಬೆಂಗಳೂರು-೫೬೦ ೦೧೮**